
ಋಗ್ವೇದಸಂಹಿತಾ
ಭಾಗ—೧೦
ದ್ವಿತೀಯಾಷ್ಟಕದಲ್ಲಿ ಒಂದನೆಯ ಅಧ್ಯಾಯವು
ಪ್ರಥಮ ಮಂಡಲದ ಸೂಕ್ತಗಳು ೧೨೨—೧೩೬

7·12·66

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೧೦

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೧೦

ದ್ವಿತೀಯಾಷ್ಟಕದಲ್ಲಿ ಮೊದಲನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು ೧೨೨-೧೩೬

*Translated with Exhaustive Critical Notes*

*by*

**Asthana Mahavidwan**

**H. P. VENKATA RAO,**

*Editor.*

*Printed at*

SREE SHARADA PRESS

MYSORE.

1950

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಿಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

—o—

Translator & Editor :

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

Associate :

ಶ್ರೀ. G. N. ಚಕ್ರವರ್ತಿ M. A.

Professor of Sanskrit, St. Philomina's College, Mysore.

---

**ಸಹಾಯಕ ವಿದ್ವನ್ಮಂಡಲಿ**

1. **ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು,** ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. **ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
4. **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತ ವಿದ್ವಾನ್.
5. **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು.
6. **ಬ್ರ॥ ಶ್ರೀ॥ ವೆಂಕಟರಮಣಾಚಾರ್,** M. A., B. T., ಸಾಹಿತ್ಯವಿದ್ವಾನ್.
7. **ಬ್ರ॥ ಶ್ರೀ॥ S. ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
8. **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್, Govt. Oriental Research Institute. Mysore.
9. **ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು. Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಪೀಠಿಕೆ



ಋಕ್ಸಂಹಿತೆಯ ಈ ಭಾಗದಲ್ಲಿ ಪ್ರಥಮಮಂಡಲದ ೧೨೨-೧೩೬ ಸೂಕ್ತಗಳಿವೆ. ಇವುಗಳಲ್ಲಿ ೧೨೨-೧೨೬ ಸೂಕ್ತಗಳಿಗೆ ಕಕ್ಷೀವಾನ್ ದೈರ್ಘತಮಸ ಔಶಿಜಃ ಎಂಬವನೂ, ೧೨೭-೧೩೬ ಸೂಕ್ತಗಳಿಗೆ ಪರುಚ್ಛೇಪೋ ದೈವೋದಾಸಿಃ ಎಂಬುವನೂ ಋಷಿಗಳು.

ಕಕ್ಷೀವಾನ್ ಎಂಬ ಋಷಿಯ ವಿಷಯವಾಗಿ ಬೃಹದ್ದೇವತಾ ಮೊದಲಾದ ಗ್ರಂಥಗಳಲ್ಲಿ ಈ ರೀತಿ ಹೇಳಿದೆ— ಕಳಿಂಗನೆಂಬ ರಾಜನಿಗೆ ಮಕ್ಕಳಿರಲಿಲ್ಲ. ಅವನು ವೃದ್ಧನಾಗಿದ್ದು ಪುತ್ರೋತ್ಪಾದನೆಮಾಡಲು ಅಶಕ್ತನಾಗಿದ್ದನು. ಹೀಗಿರುವಾಗ ಉಚಥ್ಯಪುತ್ರನಾದ ದೀರ್ಘತಮಾಃ ಎಂಬ ಋಷಿಯು ರಾಜನ ಸಮೀಪಕ್ಕೆ ಬರಲು ರಾಜನು ತನಗೆ ಮಕ್ಕಳಿಲ್ಲದ್ದರಿಂದ ರಾಜಮಹಿಷಿಯಲ್ಲಿ ಓರ್ವ ಪುತ್ರನನ್ನು ಉತ್ಪಾದನೆಮಾಡಬೇಕೆಂದು ಪ್ರಾರ್ಥಿಸಿದನು. ಹಿಂದಿನ ಕಾಲದಲ್ಲಿ ಕಾರಣಾಂತರಗಳಿಂದ ಮಕ್ಕಳಿಲ್ಲದವರು ಯೋಗ್ಯರಾದ ಬ್ರಾಹ್ಮಣರಿಂದ ಸಂತಾನಾಭಿವೃದ್ಧಿಗಾಗಿ ಮಕ್ಕಳನ್ನು ಪಡೆಯುವ ಪದ್ಧತಿ ಇದ್ದಿತು. ಈ ವಿಷಯವು ಪುರಾಣಾದಿಗಳಲ್ಲಿಯೂ, ಮಹಾಭಾರತದಲ್ಲಿಯೂ ಸ್ಪಷ್ಟವಾಗಿ ವರ್ಣಿತವಾಗಿದೆ. ಋಷಿಯು ರಾಜನ ಪ್ರಾರ್ಥನೆಯನ್ನಂಗೀಕರಿಸಲು ರಾಜನು ತನ್ನ ಪಟ್ಟಮಹಿಷಿಯನ್ನು ಋಷಿಯ ಬಳಿಗೆ ಹೋಗುವಂತೆ ಹೇಳಿದನು. ರಾಜಪತ್ನಿಯು ವೃದ್ಧನಾಗಿಯೂ, ಕುರೂಪಿಯಾಗಿಯೂ ಇದ್ದ ಋಷಿಯೊಡನೆ ಸಂಭೋಗಿಸಲು ಲಜ್ಜೆಯಿಂದ ಇಷ್ಟಪಡದೆ ತನಗೆ ಬದಲಾಗಿ ತನ್ನ ದಾಸಿಯಾದ ಉಶಿಕ್ ಎಂಬ ಸ್ತ್ರೀಯನ್ನು ತನ್ನ ವಸ್ತ್ರಾಭರಣಗಳಿಂದ ಚೆನ್ನಾಗಿ ಅಲಂಕರಿಸಿ ಋಷಿಯ ಸಮೀಪಕ್ಕೆ ಕಳುಹಿಸಿದಳು. ತನ್ನ ಬಳಿಗೆ ಬಂದ ಉಶಿಕ್ ಎಂಬ ಸ್ತ್ರೀಯನ್ನು ರಾಜಪತ್ನಿಯಲ್ಲವೆಂದೂ ಅವಳ ದಾಸಿಯೆಂದೂ ತಿಳಿದು ಋಷಿಯು ಅವಳನ್ನು ಮಂತ್ರಪೂತವಾದ ಜಲದಿಂದ ಪ್ರೋಕ್ಷಿಸಿ ಋಷಿಪುತ್ರಿಯಂತೆ ಶುದ್ಧಳನ್ನಾಗಿ ಮಾಡಿ ಬಳಿಕ ಅವಳೊಡನೆ ರಮಿಸಿದನು. ಆ ಋಷಿಯಿಂದ ಉಶಿಕ್ ಎಂಬ ಸ್ತ್ರೀಯಲ್ಲಿ ಉತ್ಪನ್ನನಾದ ಪುತ್ರನೇ ಕಕ್ಷೀವಾನ್ ಎಂಬ ಋಷಿಯು. ಈ ಋಷಿಯು ಯಜ್ಞಾನುಷ್ಠಾನ ಕರ್ಮಗಳನ್ನು ಮಾಡುವವರಲ್ಲಿ ಅತ್ಯಂತ ಪ್ರಸಿದ್ಧನೆಂದು—

**ಏವಂ ವೈ ಪರ ಆಟ್ಣಾರಃ ಕಕ್ಷೀವಾಁ ಔಶಿಜೋ ವೀತಹವ್ಯಃ ಶ್ರಾಯಸಸ್ತ್ರಸದಸ್ಯುಃ ಪೌರುಕುತ್ಸಃ ಪ್ರಜಾಕಾಮಾ ಅಚಿನ್ವತ ॥**

(ತೈ. ಸಂ. ೫-೬-೫-೩)

ಎಂದು ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಹೇಳಿರುವುದು. ಆದುದರಿಂದ ಈ ಋಷಿಯು ಮಂತ್ರರಚನೆಯಲ್ಲಿಯೂ ಯಜ್ಞಾನುಷ್ಠಾನಕರ್ಮಗಳನ್ನು ಮಾಡುವುದರಲ್ಲಿಯೂ ಅತ್ಯಂತ ಪ್ರಸಿದ್ಧನು. ಈ ಋಷಿಯು ಋಗ್ವೇದದ ಪ್ರಥಮಮಂಡಲದ ೧೧೬-೧೨೫ನೆಯ ಸೂಕ್ತಗಳಿಗೂ (ಒಟ್ಟು ೧೪೬ ಋಕ್ಕುಗಳು) ೧೨೬ನೆಯ ಸೂಕ್ತದಲ್ಲಿ ೧-೫ ಋಕ್ಕುಗಳಿಗೂ (೫ ಋಕ್ಕು) ಒಂಭತ್ತನೆಯ ಮಂಡಲದಲ್ಲಿ ೭೪ನೆಯ ಸೂಕ್ತಕ್ಕೂ (೯ ಋಕ್ಕುಗಳು) ಒಟ್ಟು ೧೬೦ ಋಕ್ಕುಗಳಿಗೆ ಋಷಿಯಾಗಿರುವನು. ಈ ಋಷಿಯ ಹೆಸರು ಋ. ಸಂ. ೧-೧೨೬-೨; ೧-೧೨೬-೩; ೬-೨೬-೧; ೮-೯-೧೦; ೧೧-೨೫-೧೦; ೧-೧೧೭-೬; ೧-೫೧-೧೩; ೧-೧೧೭; ೯-೭೪-೮; ೧-೧೨೬-೪; ೧-೧೮-೧; ೧-೧೧೨-೧೧; ೧೦-೬೧-೧೬; ೧೦-೧೪೩-೧ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

ಪ್ರಥಮ ಮಂಡಲದ ಹತ್ತೊಂಭತ್ತನೆಯ ಅನುವಾಕದಲ್ಲಿ ೧೨೭ರಿಂದ ೧೩೩ರ ವರೆಗಿನ ೭ ಸೂಕ್ತಗಳಿರುವುವು. ಇದರ ಮುಂದಿನ ಅನುವಾಕ ಎಂದರೆ ಇಪ್ಪತ್ತನೆಯ ಅನುವಾಕದಲ್ಲಿ ೧೩೪ ರಿಂದ ೧೩೯ರ ವರೆಗಿನ ೬ ಸೂಕ್ತಗಳಿರುವವು. ಈ ಎರಡು ಅನುವಾಕಗಳಿಂದಾಗುವ ೧೩ ಸೂಕ್ತಗಳಿಗೂ ಪರುಚ್ಛೇಪೋ ದೈವೋದಾಸಿಃ ಎಂದರೆ ದಿವೋದಾಸನ ಮಗನಾದ ಪರುಚ್ಛೇಪನೆಂಬುವನು ಋಷಿಯು. ದಿವೋದಾಸನ ವಿಷಯವನ್ನು ನಾವು ಹಿಂದೆಯೇ ತಿಳಿಸಿದೇವೆ. ದಿವೋದಾಸ ಅಥವಾ ದಿವೋದಾಸ ಅತಿಥಿಗ್ವನೆಂಬುವನು ಬಹುಪ್ರಾಚೀನಕಾಲದ (ವೇದದಕಾಲದಲ್ಲಿ) ಹೆಸರುವಾಸಿಯಾದ ಒಬ್ಬ ರಾಜನು. ಇವನು ವಧ್ರ್ಯಶ್ವನೆಂಬುವನ ಮಗನು ಮತ್ತು ಸುದಾಸನೆಂಬುವನಿಗೆ ತಂದೆಯು. ಇವನ ಹೆಸರು ಋಗ್ವೇದದಲ್ಲಿ ಅನೇಕಕಡೆ ಬಂದಿದೆ. ಈ ದಿವೋದಾಸನಿಗೆ ಶಂಬರ ಅಥವಾ ದಾಸನೆಂಬ ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತಿದ್ದ ಕಾಡುಜನರ ನಾಯಕನು ಮುಖ್ಯಶತ್ರುವೆಂದು ಅಲ್ಲಲ್ಲಿ ಹೇಳಿದೆ. ಈ ದಿವೋದಾಸದೃಷ್ಟವಾದ ಸೂಕ್ತಗಳು ಋಗ್ವೇದದಲ್ಲಿ ಎಲ್ಲಿಯೂ ಇರುವುದಿಲ್ಲ. ಆದುದರಿಂದ ಇವನ ಮಗನಾದ ಪರುಚ್ಛೇಪಋಷಿಯೇ ಈ ಸೂಕ್ತಗಳಿಗೆ ದ್ರಷ್ಟೃವೇ ಎಂಬ ವಿಷಯದಲ್ಲಿ ಆಧುನಿಕ ವಿದ್ವಾಂಸರ ಅಭಿಪ್ರಾಯ ಭೇದವಿದೆ. ಅದು ಹೇಗಾದರೂ ಇರಲಿ. ಅನುಕ್ರಮಣಿಕೆಯ ಪ್ರಕಾರ ಎಂದರೆ— **ಅಗ್ನಿಮೇಕಾದಶ ಪರುಚ್ಛೇಪೋ ದೈವೋದಾಸಿರಾಗ್ನೇಯಂ ತು ಪಾರುಚ್ಛೇಪಂ ಸರ್ವಮಾತ್ಯಷ್ಟಂ ತೆತ್ರಾತಿಧೃತಿಶ್ಚಷ್ಟೀತಿ** ಎಂಬ ವಾಕ್ಯಾನುಸಾರವಾಗಿ ಮೇಲೆ ಹೇಳಿದ ೧೩ ಸೂಕ್ತಗಳಿಗೂ (೧೨೭-೧೩೯) ಪರುಚ್ಛೇಪನೇ ಋಷಿಯೆಂದು ನಿರ್ದಿಷ್ಟವಾಗಿರುವುದು. ಯಾಸ್ಕರು ತಮ್ಮ ನಿರುಕ್ತದಲ್ಲಿ—

**ಪರುಚ್ಛೇಪ ಋಷಿಃ । ಪರ್ವವಚ್ಛೇಪಃ ಪರುಷಿಪರುಷಿ ಶೇಪೋಽಸ್ಯೇತಿ ವಾ ।**

(ನಿ. ೧೦-೪೨)

ಎಂದು ಹೇಳಿರುವರು. ಸುಖಾಧಿಕ್ಯದಿಂದ ಬೆಳೆದವನಾದುದರಿಂದ ಸರ್ವಾಂಗ ಸಂಧಿಗಳಲ್ಲಿಯೂ ಚೆನ್ನಾಗಿ ಪುಷ್ಟಿಯಿಂದ ಕೂಡಿರುವ ಎಂದು ಮುಖ್ಯಾಭಿಪ್ರಾಯವು. ಇಲ್ಲಿ ಪರುಚ್ಛೇಪಶಬ್ದದ ಅವಯವಾರ್ಥವು ಅಷ್ಟು ಮುಖ್ಯವೇನಲ್ಲ. ಈ ಋಷಿಯ ವಿಚಾರವು ಐತರೇಯ ಬ್ರಾಹ್ಮಣದಲ್ಲಿಯೂ (ಅಧ್ಯಾಯ ೨೨, ಖಂಡದ ೫-೬)ಕೌಷೀತಕೀ ಬ್ರಾಹ್ಮಣ (೧೩-೪-೫) ದಲ್ಲಿಯೂ ಉಕ್ತವಾಗಿರುವುದು. ಈ ಪರುಚ್ಛೇಪಋಷಿದೃಷ್ಟವಾದ ೧೩ ಸೂಕ್ತಗಳಲ್ಲಿ ಒಟ್ಟು ೧೦೦ ಋಕ್ಕುಗಳಿರುವವು. ಈ ಋಷಿಯ ಪುತ್ರನಾದ ಅನಾನತಃ ಪಾರುಚ್ಛೇಪಿಃ ಎಂಬುವನು ೯ ನೇ ಮಂಡಲದ ೧೧೧ನೇ ಸೂಕ್ತದಲ್ಲಿರುವ ೩ ಋಕ್ಕುಗಳಿಗೆ ದ್ರಷ್ಟೃವಾಗಿರುವನು. ಈ ಋಕ್ಕುಗಳಿಗೆಲ್ಲಾ ಒಂದು ಪ್ರತ್ಯೇಕವಾದ ವೈಶಿಷ್ಟ್ಯವಿರುವುದು. ಇವುಗಳು ಅತ್ಯಷ್ಟಿಃ, ಅತಿಶಕ್ವರೀ, ಅತಿಧೃತಿಃ ಎಂಬ ಹೆಸರಿನ ಛಂದಸ್ಸಿನ ರೂಪದಲ್ಲಿರುವವು. ೧೩೭ ನೇ ಸೂಕ್ತವು ಅತಿಶಕ್ವರೀ ಎಂಬ ಛಂದಸ್ಕವು. ಉಳಿದ ಸೂಕ್ತಗಳು (ಕೆಲವು ಋಕ್ಕುಗಳು ಹೊರತಾಗಿ) ಅತ್ಯಷ್ಟಿ ಎಂಬ ಛಂದಸ್ಸಿನಿಂದ ರಚಿತವಾಗಿರುವವು. ಈ ವಿಧವಾದ ಛಂದಸ್ಸಿಗೆ ೭ ಪಾದಗಳೂ ಒಟ್ಟು ೬೮ ಅಕ್ಷರಗಳೂ ಇರುವವು. ಕೆಲವು ಸಂದರ್ಭಗಳಲ್ಲಿ ಒಂದೆರಡು ಅಕ್ಷರಗಳು ಹೆಚ್ಚು ಕಡಿಮೆ ಇರುವುದೂ ಉಂಟು. ಈ ಛಂದಸ್ಸುಗಳ ಲಕ್ಷಣಾದಿಗಳನ್ನು ನಾವು ಉದಾಹರಣೆಗಳೊಡನೆ ಋ. ಸಂ. ಭಾಗ ೧ ಪೇಜು 221-231 ಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಪರುಚ್ಛೇಪ ಋಷಿದೃಷ್ಟವಾದ ಋಕ್ಕುಗಳ ಮತ್ತೊಂದು ವೈಶಿಷ್ಟ್ಯವನ್ನು ಯಾಸ್ಕರು—

**ಅಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯೇತಿ ।**
**ತತ್ಪರುಚ್ಛೇಪಸ್ಯ ಶೀಲಂ ॥**

(ನಿ. ೧೦-೪೨)

ಎಂದರೆ ಈ ಋಷಿದೃಷ್ಟವಾದ ಋಕ್ಕುಗಳಲ್ಲಿ ಅಭ್ಯಾಸ ಎಂದರೆ ದ್ವಿರುಕ್ತಿಯು ವಿಶೇಷವಾಗಿ ಕಂಡುಬರುವುದು. ಸಾಧಾರಣವಾಗಿ ಗಾಯತ್ರೀ ತ್ರಿಷ್ಟುಪ್ ಜಗತೀ ಮೊದಲಾದ ಛಂದಸ್ಸಿನ ಋಕ್ಕುಗಳಲ್ಲಿ ಪೂರ್ವಾರ್ಧ, ಉತ್ತರಾರ್ಧವೆಂದು ಎರಡು ಭಾಗಗಳು ಮಾತ್ರ ಇರುವವು. ಆದರೆ ಅತ್ಯಷ್ಟಿ ಮೊದಲಾದ ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳಲ್ಲಿ ಮೂರು ಅರ್ಧಗಳಿರುವವು. ಆ ಮೂರು ಅರ್ಧಗಳಲ್ಲಿ ಮೊದಲನೆಯ ಮತ್ತು ಮೂರನೆಯ ಅರ್ಧಗಳ ಅಂತ್ಯಭಾಗದಲ್ಲಿ ಒಂದೆರಡು ಶಬ್ದಗಳು ಪಲ್ಲವಿಯಂತೆ ಪುನಃ ಪುನಃ ಪಠಿತವಾಗಿರುವುದು. ಉದಾ—

> **ಅಗ್ನಿಂ ಹೋತಾರಂ ಮನ್ಯೇ ದಾಸ್ವಂತಂ ವಸುಂ ಸೂನುಂ ಸಹಸೋ ಜಾತವೇದಸಂ ವಿಪ್ರಂ ನ ಜಾತವೇದಸಂ ।**

ಎಂಬ ಋಕ್ಕಿನಲ್ಲಿ **ಜಾತವೇದಸಂ** ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದು ಈ ಪುನರುಕ್ತಿಯ ಮಧ್ಯದಲ್ಲಿ **ವಿಪ್ರಂ ನ** ಎಂಬ ಶಬ್ದಗಳು ಇರುವವು. ಈ ಅಭ್ಯಾಸಶಬ್ದವು ಯಾವಾಗಲೂ ವಾಕ್ಯದ ಕೊನೆಯಲ್ಲಿಯೇ ಇರುವುದು.

> **ನಿಷ್ಷಹಮಾಣೋ ಯಮತೇ ನಾಯತೇ ಧನ್ವಾಸಹಾ ನಾಯತೇ ।**

ಈ ಋಕ್ಕಿನಲ್ಲಿ **ನ ಅಯತೇ** ಎಂಬ ಶಬ್ದಗಳು ಎರಡಾವರ್ತಿ ಪಠಿತವಾಗಿ ಅವುಗಳ ಮಧ್ಯದಲ್ಲಿ **ಧನ್ವಾಸಹ** ಎಂಬ ಶಬ್ದವು ಇರುವುದು. ಈ ಅಭ್ಯಾಸ ವಿಷಯವನ್ನು ಯಾಸ್ಕರು **ಅಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯೇತಿ ।** ಎಂದು ಹೇಳಿ ಇದರ ಅರ್ಥವನ್ನು ವಿವರಿಸುವರು. ಈ ವಾಕ್ಯಕ್ಕೆ ನಿರುಕ್ತವ್ಯಾಖ್ಯಾಕಾರರು—

> **ಅಭ್ಯಾಸೇ ಭೂಯಾಂಸಂ ಅರ್ಥಂ ಮನ್ಯಂತೇ । ಶಬ್ದಾಭ್ಯಾಸೇ ಯತ್ರಾನ್ಯೋ ವಿಶೇಷೋ ನಾಸ್ತಿ ತತ್ರೈವಂ ವಿಶೇಷಮಾಚಾರ್ಯಾ ಮಂತ್ರಾರ್ಥಸತತ್ತ್ವವಿದೋ ಮನ್ಯಂತೇ-ಯದುತಾರ್ಥ-ಭೂಯಸ್ತ್ವಮಿತಿ । ನಹ್ಯಕಸ್ಮಾತ್ ಸ ಏವ ಶಬ್ದಃ ಪುನರಭ್ಯಸ್ಯತೇ । ಲೋಕೇऽಪಿ ಹ್ಯೇತತ್ ದೃಷ್ಟಂ-ಶಬ್ದಾಭ್ಯಾಸೇऽರ್ಥಭೂಯಸ್ತ್ವಮಿತಿ । ಯಥಾ-ಅಹೋ ದರ್ಶನೀಯಃ! ಅಹೋ ದರ್ಶನೀಯ! ಇತಿ । ಗುಣಾತಿಶಯೇ ಹಿ ಪ್ರಿಯಃ ಶಬ್ದಾಭ್ಯಾಸಃ ತಸ್ಮಾನ್ಮಂತ್ರೇಷ್ವಪಿ ತದ್ವದೇವೇತಿ ನ್ಯಾಯ್ಯಂ ॥**

ಎಂದರೆ ಒಂದು ಶಬ್ದವನ್ನು ವಾಕ್ಯದಲ್ಲಿ ಎರಡಾವರ್ತಿ ಉಚ್ಚರಿಸುವಾಗ ಆ ಶಬ್ದಕ್ಕೆ ಬೇರೆ ಬೇರೆ ಎರಡರ್ಥಗಳಿಲ್ಲದ ಪಕ್ಷದಲ್ಲಿ, ಶಬ್ದದ ಪುನರುಕ್ತಿಯು ಅರ್ಥಾತಿಶಯವನ್ನು ಸೂಚಿಸುವುದು, ಎಂದರೆ ಹೇಳಿದ ವಿಷಯಕ್ಕೆ ಪ್ರಾಮುಖ್ಯತೆಯನ್ನು ಕೊಡುವುದಕ್ಕಾಗಿ ಅಥವಾ ವಿಷಯವು ಮನಸ್ಸಿಗೆ ಚೆನ್ನಾಗಿ ನಾಟುವಂತೆ ಹೇಳುವುದಕ್ಕಾಗಿ, ಉಪಯೋಗಿಸಲ್ಪಡುವುದು. ಉದಾ—ಸ್ತ್ರೀಯರ ಸೌಂದರ್ಯವನ್ನು ವರ್ಣನೆ ಮಾಡುವಾಗ ಅಹೋ ದರ್ಶನೀಯ ಅಹೋ ದರ್ಶನೀಯ ಎಂದು ಹೇಳುವುದುಂಟು. ಆಗ ದ್ವಿರುಕ್ತಿಗೆ ಆಹಾ ಎಂತಹ ಸೌಂದರ್ಯ, ಎಂತಹ ಸೌಂದರ್ಯವೆಂದು ಸೌಂದರ್ಯಾತಿಶಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಲೋಕವ್ಯವಹಾರದಲ್ಲಿ ಹೇಳುವ ರೂಢಿ ಇರುವುದು. ಅದರಂತೆ ಇಲ್ಲಿಯೂ ಇರುವುದೆಂದು ಭಾವಿಸಬೇಕು, ಎಂದು ಹೇಳಿರುವರು. ಆದರೆ ಸಾಯಣರು ಸಾಧಾರಣವಾಗಿ ಈ ಋಕ್ಕುಗಳಲ್ಲಿರುವ ಅಭ್ಯಾಸಶಬ್ದಗಳಿಗೆ ಬೇರೆ ಬೇರೆ ಅರ್ಥಗಳನ್ನು ಹೊಂದಿಸಿ ಅರ್ಥವಿವರಣೆ ಮಾಡಿರುವರು.

ಈ ವಿಧವಾದ ದ್ವಿರುಕ್ತಿಗೆ ಮತ್ತೊಂದು ಪ್ರಯೋಜನವುಂಟು. ಋಗ್ವೇದದ ಅನೇಕ ಋಕ್ಕುಗಳು ಗಾನ ಮಾಡುವುದಕ್ಕೆ ಯೋಗ್ಯವಾಗಿರುವಂತೆಯೇ ರಚಿಸಲ್ಪಟ್ಟಿರುವುವು. ರಾಗಾದಿಗಳಿಂದ ಯುಕ್ತವಾದ ಕೃತಿಗಳನ್ನು

ಹಾಡುವಾಗ ಪಲ್ಲವಿಯನ್ನೂ ಅನುಪಲ್ಲವಿಯನ್ನೂ ಮತ್ತೆ ಮತ್ತೆ ಹಾಡುವುದು ಲೋಕದಲ್ಲಿ ಎಲ್ಲರಿಗೂ ತಿಳಿದ ವಿಷಯವಾಗಿದೆ. ಆದುದರಿಂದ ಈ ಋಕ್ಕುಗಳೂ ಇನ್ನೂ ಅನೇಕ ಋಕ್ಕುಗಳೂ ಶ್ರಾವ್ಯವಾಗಿರುವಂತೆ ಗಾನಮಾಡುವ ಉದ್ದೇಶದಿಂದ ರಚಿಸಲ್ಪಟ್ಟಿರಬೇಕು. ಆದುದರಿಂದಲೇ ಶಸ್ತ್ರಮಂತ್ರಪಠನಕ್ಕಾಗಿ ಈ ಪಾರುಚ್ಛೇಪ ಮಂತ್ರಗಳ ವಿನಿಯೋಗವಿರುವುದೆಂದು ಐತರೇಯ ಬ್ರಾಹ್ಮಣದಲ್ಲಿಯೂ ಹೇಳಲ್ಪಟ್ಟಿರುವುದು ಈ ದೃಷ್ಟಿಯಿಂದಲೇ ಸಾಮವೇದದ ಬಹು ಭಾಗವು ಋಗ್ವೇದದ ಋಕ್ಕುಗಳೇ ಆಗಿರುವುವು.

ವೇದಮಂತ್ರಗಳನ್ನು ಅರ್ಥವತ್ತಾಗಿ ತಿಳಿದುಕೊಂಡು ಅವುಗಳನ್ನು ಭಕ್ತಿಶ್ರದ್ಧೆಗಳಿಂದ ಸ್ವರಸಹಿತವಾಗಿ ಪಠನ ಅಥವಾ ಗಾನವನ್ನು ಮಾಡುವಾಗ ವೇದಮಂತ್ರ ಪಠನಮಾಡುವವರಿಗೂ, ಅಂತಹ ವೇದಘೋಷವನ್ನು ಕೇಳುವ ಶ್ರೋತೃವೃಂದಕ್ಕೂ ಒಂದು ಅನಿರ್ವಚನೀಯವಾದ ಆನಂದವುಟಾಗುವುದೆಂಬ ವಿಷಯವು ಅನೇಕರ ಅನುಭವಕ್ಕೆ ಬಂದಿರುವುದು. ಪಾಶ್ಚಾತ್ಯರೇ ಮೊದಲಾದ ಕೆಲವು ಆಧುನಿಕ ವಿದ್ವಾಂಸರು ವೇದಮಂತ್ರಗಳನ್ನು ಅರ್ಥಪ್ರಾಧಾನ್ಯ ದೃಷ್ಟಿಯಿಂದ ಮಾತ್ರವೇ ನೋಡುವುದರಿಂದ ಅವರಿಗೆ ವೇದಮಂತ್ರಗಳ ಸಂಪೂರ್ಣ ಸ್ವಾರಸ್ಯವು ತಿಳಿಯಲು ಅವಕಾಶವಿಲ್ಲ. ಅದಕ್ಕಾಗಿ ಅವರು ಪ್ರಯತ್ನ ಪಡುವುದೂ ಇಲ್ಲ. ಕೆಲವರು ಈ ಋಕ್ಕುಗಳು ಛಂದೋಬದ್ಧವಾಗಿದ್ದರೂ ಅನೇಕ ಲೋಪದೋಷಗಳೂ ವ್ಯಾಕರಣನಿಯಮೋಲ್ಲಂಘನೆಗಳೂ ಇರುವುದೆಂದೂ, ಪ್ರೌಢಕವಿತೆಗೆ ಸೇರಿದ್ದಲ್ಲವೆಂದೂ ಅಭಿಪ್ರಾಯಪಡುವರು. ಆದರೆ ಅವರ ಅಭಿಪ್ರಾಯವು ಸಾಧುವಾದುದಲ್ಲ. ಏಕೆಂದರೆ ಆ ಕಾಲದಲ್ಲಿ ಲಿಖಿತಭಾಷೆ ಇರಲಿಲ್ಲ. ಎಲ್ಲವನ್ನೂ ಕಂಠಪಾಠವಾಗಿಯೇ ಅಭ್ಯಾಸಮಾಡಬೇಕಾಗಿತ್ತು. ಆದುದರಿಂದ ಶಬ್ದೋಚ್ಚಾರಣೆಗೂ ಶ್ರಾವ್ಯತ್ವಕ್ಕೂ ಹೆಚ್ಚು ಗಮನ ಕೊಡುವುದು ಸ್ವಾಭಾವಿಕವು. ಮತ್ತು ಲಿಖಿತಭಾಷೆಯೂ ಇಲ್ಲದೆ ವ್ಯಾಕರಣವೂ ಇಲ್ಲದಿರುವಾಗ ಆ ಕಾಲದಲ್ಲಿ ಬಳಕೆಯಲ್ಲಿದ್ದ ಶಬ್ದಗಳನ್ನೂ ಭಾಷಾಶೈಲಿಯನ್ನೂ ಉಪಯೋಗಿಸುವುದು ಸಹಜವೇ ಆಗಿರುವುದು. ಮತ್ತು ಈಚೆಗೆ ಪಾಣಿನಿಯೇ ಮೊದಲಾದವರಿಂದ ರಚಿತವಾದ ವ್ಯಾಕರಣಶಾಸ್ತ್ರಗಳು ವೇದಶಬ್ದಗಳ ಆಧಾರದಿಂದಲೇ ರಚಿಸಿಲ್ಪಟ್ಟಿರುವುವೆಂಬುದನ್ನು ಮರೆಯಬಾರದು. ಭಾಷೆಯಿಂದ ವ್ಯಾಕರಣವೇ ಹೊರತು ವ್ಯಾಕರಣದಿಂದ ಭಾಷೆಯಲ್ಲ. ಭಾಷೆಯೇ ಮೂಲ. ಅದನ್ನನುಸರಿಸಿ ವ್ಯಾಕರಣವಿರುವುದು. ಆದುದರಿಂದ ವೇದಮಂತ್ರಗಳಲ್ಲಿ ಕಂಡು ಬರುವ ಶಬ್ದಾದಿಗಳ ರೂಪಗಳ ವಿಷಯದಲ್ಲಿ **ಈಗಿನ** ವ್ಯಾಕರಣನಿಯಮಗಳನ್ನು ಅದಕ್ಕೆ ಕಟ್ಟುಸಿಟ್ಟಾಗಿ ಅನ್ವಯಿಸುವುದು ಸಮಂಜಸವಾಗಲಾರದು.

ಗಾನ ದೃಷ್ಟಿಯಿಂದ ಅನೇಕ ಋಕ್ಕುಗಳ ರಚನೆಯಾಗಿರಬಹುದೆಂದು ಹಿಂದೆಯೇ ಹೇಳಿರುವುದಷ್ಟೆ. ಆ ಕಾರಣದಿಂದ ಅನೇಕ ಸಂದರ್ಭಗಳಲ್ಲಿ ಹ್ರಸ್ವಾಕ್ಷರಗಳು ದೀರ್ಘಾಕ್ಷರಗಳಾಗಿಯೂ ದೀರ್ಘಾಕ್ಷರಗಳು ಹ್ರಸ್ವಾಕ್ಷರಗಳಾಗಿಯೂ ಉಪಯೋಗಿಸಿರುವುದು ಅಲ್ಲಲ್ಲಿ ಕಂಡುಬರುವುದು. ಉದಾ :— **ಅಧ ಘ ಸ್ಮ** ಮೊದಲಾದ ಶಬ್ದಗಳು ಸಂಹಿತಾಪಾಠದಲ್ಲಿ ದೀರ್ಘಾಕ್ಷರಗಳಾಗಿರುವುವು. ಇದರಂತೆ **ಋತವೃಧಾ** ಎಂಬುದು **ಋತಾವೃಧಾ** ಎಂದು ಉಚ್ಚರಿಸಲ್ಪಡುವುದು. ಇತ್ಯಾದಿ. ಅನೇಕ ಸಂದರ್ಭಗಳಲ್ಲಿ ಶಬ್ದಗಳ ಒಂದೆರಡು ಅಕ್ಷರಗಳು ಲೋಪವಾಗಿರುವುವು. ಉದಾ; — **ಆತ್ಮನಾ** ಎನ್ನುವುದಕ್ಕೆ ಬದಲಾಗಿ **ತ್ಮನಾ** ಎಂದೂ **ಭಾವಯವ್ಯಸ್ಯ** ಎನ್ನುವುದಕ್ಕೆಬದಲಾಗಿ **ಭಾವ್ಯಸ್ಯ** ಎಂದೂ ಇರುವುದು. ಈ ರೀತಿಯಾದ ಲೋಪದೋಷಗಳು ಆಧುನಿಕ ಭಾಷೆಗೂ ಹೊಸದೇನಲ್ಲ. ಉದಾ :— ಕೃತಿಗಳನ್ನು ಹಾಡುವಾಗ ಗಾನಮಾಡುವವರು **ಕೃಷ್ಣಮೂರ್ತಿ** ಎಂಬ ಕಡೆ **ಕೃಷ್ಣಾ ಮೂರತಿ** ಎಂದೂ, **ಕೀರ್ತಿ** ಎಂಬಕಡೆ **ಕೀರುತಿ** ಎಂದೂ ಹಾಡುವುದುಂಟು. ಇಂತಹ ಲೋಪದೋಷಗಳು ಬಹಳವಾಗಿವೆ ವೇದಮಂತ್ರಗಳು ಕೇವಲ ಉಚ್ಚಾರಣೆಯಿಂದ ಪರಂಪರೆಯಾಗಿ ಉಪದೇಶ ಮಾಡಲ್ಪಟ್ಟು ನಡೆದು ಬಂದಿರುವುದರಿಂದ ಇಂತಹ ಅಲ್ಪದೋಷ (ಅವು ದೋಷಗಳೇ ಅಲ್ಲ) ಇರುವುದು ಅಸ್ವಾಭಾವಿಕವಲ್ಲ.

ಪರುಚ್ಛೇಪ ಋಷಿದೃಷ್ಟವಾದ ಸೂಕ್ತಗಳು ಬಹು ಪ್ರಾಚೀನವಾದ ಮಂತ್ರಗಳಲ್ಲಿ ಸೇರಿರುವುವು ಎಂಬ ವಿಷಯದಲ್ಲಿ ಸಂಶಯವಿಲ್ಲ. ಈ ಋಕ್ಕುಗಳಲ್ಲಿರುವ ಕೆಲವು ಶಬ್ದಗಳ ಮತ್ತು ವಾಕ್ಯಗಳ ಅರ್ಥವು ಬಹು ಕ್ಲಿಷ್ಟವಾಗಿಯೂ, ಅಸ್ಪಷ್ಟವಾಗಿಯೂ ಇರುವುದರಿಂದ ಅರ್ಥವು ಅನೇಕ ಸಂದರ್ಭಗಳಲ್ಲಿ ಸಮಂಜಸವಾಗಿ ಹೊಂದುವುದಿಲ್ಲ. ಈ ಮಂತ್ರಗಳಲ್ಲಿ ಬಹುಭಾಗವು ಶಸ್ತ್ರಮಂತ್ರಗಳಲ್ಲಿ ಸೇರಿಸಲ್ಪಟ್ಟಿರುವುವು. ಅವುಗಳ ವಿವರಣೆಯು ಐತರೇಯ ಬ್ರಾಹ್ಮಣದಲ್ಲಿ ಈ ರೀತಿಯಾಗಿರುವುದು.

**ದೇವಾಸುರಾ ವಾ ಏಷು ಲೋಕೇಷು ಸಮಯತಂತ ತೇ ವೈ ದೇವಾಃ ಷಷ್ಠೇನೈವಾಹ್ನೇಭ್ಯೋ ಲೋಕೇಭ್ಯೋಽಸುರಾನ್ ಪ್ರಾಣುದಂತ ತೇಷಾಂ ಯಾನ್ಯಂತರ್ಹಸ್ತೀನಾನಿ ವಸೂನ್ಯಾಸಂಸ್ತಾನ್ಯಾದಾಯ ಸಮುದ್ರಂ ಪ್ರಾಸ್ಯಂತ ತೆ ಏತೇನೈವ ಛಂದಸಾನುಹಾಯಾಂತರ್ಹಸ್ತೀನಾನಿ ವಸೂನ್ಯಾದದತ ತದ್ಯದೇತತ್ಪದಂ ಪುನಃಪದಂ ಸ ಏವಾಂಕುಶ ಆಸಂಜನಾಯ । ಆ ದ್ವಿಷತೋ ವಸು ದತ್ತೇ ನಿರೇನಮೇಭ್ಯಃ ಸರ್ವೇಭ್ಯೋ ಲೋಕೇಭ್ಯೋ ನುದತೇ ಯ ಏವಂ ವೇದ ॥**

(ಐ. ಬ್ರಾ. ೨೨-೬)

ದೇವತೆಗಳಿಗೂ ಅಸುರರಿಗೂ ಒಂದು ಸಲ ಈ ಲೋಕದಲ್ಲಿ ದೊಡ್ಡ ಯುದ್ಧವಾಯಿತು. ಆಗ ದೇವತೆಗಳು (ದ್ವಾದಶಾಹವೆಂಬ ಯಾಗದ) ಆರನೆಯ ದಿವಸ ಯಜ್ಞಾನುಷ್ಠಾನಮಾಡಿ ಅಸುರರನ್ನು ಜಯಿಸಿ ಈ ಲೋಕದಿಂದ ಓಡಿಸಿದರು. ಆಗ ಅಸುರರು ಸೋತುಹೋಗಿ ತಮ್ಮ ಕೈಗೆ ಸಿಕ್ಕಿದ ಧನಕನಕಾದಿ ವಸ್ತುಗಳನ್ನು ರಣರಂಗದಿಂದ ಹೊತ್ತುಕೊಂಡು ಹೋಗಿ ಸಮುದ್ರದಲ್ಲಿ ಬಿಸಾಡಿದರು. ಬಳಿಕ ದೇವತೆಗಳು ಅಸುರರನ್ನು ಅಟ್ಟಿಸಿಕೊಂಡುಹೋಗಿ ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳ ಪಠನಸಾಮರ್ಥ್ಯದಿಂದ ಅಸುರರು ಸಮುದ್ರದಲ್ಲಿ ಹಾಕಿದ್ದ ಧನವನ್ನು ಹಿಂದಕ್ಕೆ ಪಡೆದರು. ಹೀಗೆ ಪಡೆಯುವಾಗ ಪರುಚ್ಛೇಪ ಋಷಿದೃಷ್ಟವಾದ ಋಕ್ಕುಗಳಲ್ಲಿರುವ ಏಳನೆಯ ಪಾದವು (ಪುನಃ ಪಠಿತವಾದ ಪಾದವು) ಇವರಿಗೆ ಸಹಾಯಕವಾಯಿತು. ಲೋಕದಲ್ಲಿ ಜನರು ತಮಗೆ ಸಿಲುಕದ ವಸ್ತುವನ್ನು ಕೊಕ್ಕೆ (hook) ಯಿಂದ ಕೂಡಿದ ಉದ್ದವಾದ ಕೋಲಿನಿಂದ ಎಳೆದುಕೊಳ್ಳುವುದು ಸ್ವಾಭಾವಿಕವು. ಅದರಂತೆ ಈ ಋಷಿದೃಷ್ಟವಾದ ಋಕ್ಕುಗಳಲ್ಲಿನ ಪುನಃ ಪಠಿತವಾಗುವ ಏಳನೆಯ ಪಾದವು (**ಸುಮ್ನ್ಯಲೀಕೋ ನ ಅಗಹಿ** ಎಂಬ ಪಾದದಂತಿರುವ ಏಳನೆಯ ಪಾದವು) ಸಮುದ್ರಮಧ್ಯದಲ್ಲಿದ್ದ ಧನಾದಿ ವಸ್ತುಗಳನ್ನು ಆಕರ್ಷಿಸಿ ದೇವತೆಗಳಿಗೆ ಸೇರುವಂತೆ ಮಾಡಿತು ಎಂದಭಿಪ್ರಾಯವು. ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡು ಅದರಂತೆ ಮಂತ್ರೋಚ್ಚಾರಣೆಮಾಡಿ ಕಾರ್ಯವನ್ನು ನೆರವೇರಿಸುವ ಪುರುಷನು ಶತ್ರುಗಳನ್ನು ಜಯಿಸಿ, ಈ ಲೋಕದಿಂದ ಅವನನ್ನು ಓಡಿಸಿ ಅವನ ಸಂಪತ್ತನ್ನು ತಾನೇ ಪಡೆಯುವನು.

ಪರುಚ್ಛೇಪ ಋಷಿದೃಷ್ಟವಾದ ಋಕ್ಕುಗಳ ವಿನಿಯೋಗ ಮತ್ತು ಅವುಗಳ ಅಂತರಾರ್ಥವಿವರಣೆಯು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ಉಕ್ತವಾಗಿರುವುದು. (ಐ. ಬ್ರಾ. ೨೨-೫)—

**ಪಾರುಚ್ಛೇಪೀರುಪದಧತಿ ಪೂರ್ವಯೋಃ ಸವನಯೋಃ ಪುರಸ್ತಾತ್ಪ್ರಸ್ಥಿತಯಾಜ್ಯಾನಾಂ ರೋಹಿತಂ ವೈ ನಾಮೈತಚ್ಛಂದೋ ಯತ್ಪಾರುಚ್ಛೇಪಮೇತೇನ ವಾ ಇಂದ್ರಃ ಸಪ್ತ ಸ್ವರ್ಗಾಂಲ್ಲೋಕಾನರೋಹತ್ । ರೋಹತಿ ಸಪ್ತ ಸ್ವರ್ಗಾಂಲ್ಲೋಕಾನ್ಯ ಏವಂ ವೇದ । ತದಾಹುರ್ಯತ್ಪಂಚಪದಾ ಏವ ಪಂಚಮಸ್ಯಾಹ್ನೋ ರೂಪಂ ಷಟ್ಪದಾಃ ಷಷ್ಠಸ್ಯಾಥ ಕಸ್ಮಾತ್ಸಪ್ತಪದಾಃ ಷಷ್ಠೇಽಹಞ್ಛಸ್ಯಂತ ಇತಿ । ಷಡ್ಭಿರೇವ ಪದೈಃ ಷಷ್ಠಮಹರಾಪ್ನುವಂತ್ಯವಚ್ಛಿದ್ಯೈವೈತದಹರ್ಯತ್ಸಪ್ತಮಂ ತದೇವ ಸಪ್ತಮೇನ ಪದೇನಾಭ್ಯಾರಭ್ಯ ವಸಂತಿ ವಾಚಮೇವ ತತ್ಪುನರುಪಯಂತಿ ಸಂತತ್ಯೈ ॥**

ದ್ವಾದಶಾಹ ಅಥವಾ ದಶರಾತ್ರ ಎಂಬ ಯಜ್ಞದ ಆರನೆಯ ದಿವಸ ನಡೆಯುವ ಪ್ರಾತಸ್ಸವನ ಮಾಧ್ಯಂದಿನಸವನಗಳಲ್ಲಿ (ಸವನವೆಂದರೆ ಸೋಮವನ್ನು ಲತೆಯಿಂದ ಜಜ್ಜಿ ತೆಗೆದು ಹಿಂಡುವ ಕರ್ಮ) ಹೋತೃವರ್ಗಕ್ಕೆ ಸೇರಿದ ಏಳು ಜನ ಋತ್ವಿಕ್ಕುಗಳು ಪ್ರಸ್ಥಿತಯಾಜ್ಯಾಮಂತ್ರಗಳನ್ನು ಪಠಿಸುವರು. ಎಂದರೆ ಮೊದಲು ಒಂದೊಂದು ಪಾರುಚ್ಛೇಪ ಋಕ್ಕನ್ನು ಪಠಿಸಿ ಅನಂತರ ಒಂದೊಂದು ಪ್ರಸ್ಥಿತಯಾಜ್ಯಾಮಂತ್ರವನ್ನು ಪಠಿಸಬೇಕು. ಈ ಸಂದರ್ಭದಲ್ಲಿ ಪಠಿಸಬೇಕಾದ ಪಾರುಚ್ಛೇಪ ಮಂತ್ರಗಳು ಯಾವವೆಂದರೆ—

> **ವೃಷನ್ನಿಂದ್ರ ವೃಷಪಾಣಾಸ ಇಂದವಃ** (ಋ. ಸಂ. ೧-೧೩೯-೬) ಎಂಬ ಋಕ್ಕಿನಿಂದ ಈ ಸೂಕ್ತದ ಕೊನೆಯ ಋಕ್ಕಿನವರಿಗೂ (೧-೧೩೯-೧೧) ಮತ್ತೂ,
>
> **ಪಿಬಾ ಸೋಮಮಿಂದ್ರ ಸುವಾನಮದ್ರಿಭಿಃ** (ಋ. ಸಂ. ೧-೧೩೦-೨) ಎಂಬ ಋಕ್ಕಿನಿಂದ ಈ ಸೂಕ್ತದ ಕೊನೆಯವರಿಗೂ (ಋ. ಸಂ. ೧-೧೩೦-೧೦)

ಇರುವ ಋಕ್ಕುಗಳನ್ನು ಒಂದೊಂದಾಗಿ ಪಠಿಸಬೇಕು. ಈ ಪರುಚ್ಛೇಪ ಋಷಿದೃಷ್ಟವಾದ ಋಕ್ಕುಗಳಿಗೆ ರೋಹಿತ (ಹತ್ತುವುದು)ವೆಂದು ಹೆಸರು. ಏಕೆಂದರೆ ಈ ಋಕ್ಕುಗಳ ಪಠನದಿಂದ ಇಂದ್ರನು ಒಂದಾನೊಂದು ಕಾಲದಲ್ಲಿ ಏಳನೆಯ ಸ್ವರ್ಗಲೋಕವನ್ನು ಏರಿದನು. ಇಲ್ಲಿ ಏಳು ಸ್ವರ್ಗಗಳೆಂದರೆ ಸ್ವರ್ಗಲೋಕದಲ್ಲಿ ಉತ್ತಮಾಧಮಭೇದಗಳಿಂದ ಇರುವ ಏಳ ಸ್ವರ್ಗವಿಭಾಗಗಳು. ಯಾವ ಪುರುಷನು ಈ ರೀತಿ ಈ ಮಂತ್ರಗಳನ್ನು ಪಠಿಸಿ ಯಜ್ಞಾನುಷ್ಠಾನಮಾಡುವನೋ ಅವನೂ ಸಪ್ತಸ್ವರ್ಗವನ್ನು ಹೊಂದುವನು

ಇಲ್ಲಿ ಒಂದು ವಿಶೇಷ ವಿಷಯವಿರುವುದು. ಈ ಯಾಗದ ಐದನೆಯ ದಿವಸದಲ್ಲಿ ಸವನಕಾಲದಲ್ಲಿ ಐದು ಪಾದಸಂಖ್ಯೆಯ (ಪಂಕ್ತಿಛಂದಸ್ಸು) ಋಕ್ಕುಗಳನ್ನು ಪಠಿಸುವುದು ರೂಢಿಯು. ಅದರಂತೆ ಆರನೆಯ ದಿವಸದಲ್ಲಿ ಆರು ಪಾದಗಳ ಋಕ್ಕನ್ನು ಪಠಿಸಬೇಕಾಗಿರುವುದು. ಆದರೂ ಏಳು ಪಾದಗಳುಳ್ಳ ಪಾರುಚ್ಛೇಪ ಋಕ್ಕುಗಳನ್ನು ಆ ದಿವಸ ಏತಕ್ಕೆ ಪಠಿಸುವರೆಂದರೆ ಆರು ದಿವಸಗಳಲ್ಲಿಯೂ ಋಕ್ಕಿನ ಆರು ಪಾದಗಳಿಂದ ಆರು ಸ್ವರ್ಗಲೋಕಗಳನ್ನು ದಾಟಿ ಏಳನೆಯ ಪಾದದಿಂದ ಸಪ್ತಮ ಸ್ವರ್ಗವನ್ನು ಏರುವರು ಎಂದು ಹೇಳಿರುವುದು. ಏಕೆಂದರೆ ಏಳನೆಯ ಪಾದವು ಪುನರುಕ್ತಿಯಾಗಿರುವುದರಿಂದ ಋಕ್ಕಿನಲ್ಲಿ ಆರು ಪಾದಗಳಿರುವವು ಎಂದೇ ಗಣನೆ. ಏಳನೆಯ ಪಾದಕ್ಕೆ ಶ್ರೇಷ್ಠವಾದ ಪ್ರಶಸ್ತಿ ಇರುವುದರಿಂದ ಅದನ್ನು ಪಠಿಸಿ ಉತ್ತಮವಾದ ಸಪ್ತಮಸ್ವರ್ಗವನ್ನು ಪಡೆಯಬಹುದೆಂದು ಹೇಳಿದೆ ಎಂದು ಮುಖ್ಯಾಭಿಪ್ರಾಯವು.

ಪರುಚ್ಛೇಪ ಋಷಿದೃಷ್ಟವಾದ ಸೂಕ್ತಗಳು ಶಸ್ತ್ರಮಂತ್ರಗಳಲ್ಲಿ ಉಪಯೋಗಿಸಲ್ಪಡುವ ವಿಷಯದಲ್ಲಿ ಐತರೇಯ ಬ್ರಾಹ್ಮಣದಲ್ಲಿ ಹೇಳಿರುವುದನ್ನು ಇಲ್ಲಿ ವಿವರಿಸಲಾಗಿದೆ—

> **ದ್ಯೌರ್ವೈ ದೇವತಾ ಷಷ್ಠಮಹರ್ವಹತಿ ತ್ರಯಸ್ತ್ರಿಂಶಸ್ತೋಮೋ ರೈವತಂ ಸಾಮಾತಿಚ್ಛಂದಾ-ಶ್ಛಂದೋ ಯಥಾದೇವತಮೇತೇನ ಯಥಾಸ್ತೋಮಂ ಯಥಾಸಾಮ ಯಥಾಚ್ಛಂದಸಂ ರಾಧ್ನೋತಿ ಯ ಏವಂ ವೇದ ||**
>
> (ಐ. ಬ್ರಾ ೨೨-೭)

ಹಿಂದೆ ಹೇಳಿದ ದಶರಾತ್ರಯಾಗದ ಆರನೆಯ ದಿವಸದ ಕಾರ್ಯಕ್ರಮದಲ್ಲಿ ದೇವತಾದಿ ವಿವರಗಳು ಈ ರೀತಿ ಇರುವವು. ಆರನೆಯ ದಿವಸ ದ್ಯೌಃ ಎಂಬುದು ದೇವತೆಯು, ತ್ರಯಸ್ತ್ರಿಂಶವೆಂಬ ಸ್ತೋಮವಿಶೇಷವನ್ನು ಆದಿನ ಪಠಿಸಬೇಕು.

ತ್ರಯಸ್ತ್ರಿಂಶಸ್ತೋಮದ ವಿವರಣೆಯನ್ನು ನಾವು ಹಿಂದೆಯೇ ವಿವರಿಸಿದ್ದೇವೆ. ಆದರೂ ತಾಂಡ್ಯಬ್ರಾಹ್ಮಣದಲ್ಲಿರುವ ಈ ಸ್ತೋಮದ ವಿವರವು— **ಏಕಾದಶಭ್ಯೋ ಹಿಂಕರೋತಿ ಸ ತಿಸೃಭಿಃ ಸ ಸಪ್ತಭಿಃ ಸ ಏಕಯಾ । ಏಕಾದಶಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ಸಪ್ತಭಿಃ । ಏಕಾದಶಭ್ಯೋ ಹಿಂಕರೋತಿ ಸ ಸಪ್ತಭಿಃಸ ಏಕಯಾ ಸ ತಿಸೃಭಿರಂತೋ ವೈ ತ್ರಯಸ್ತ್ರಿಂಶಃ ॥** ಎಂದಿದೆ. ಪಠಿಸಬೇಕಾದ ತೃಚವನ್ನು (ಮೂರು ಋಕ್ಕುಗಳನ್ನು) ಪ್ರಥಮ ಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನು ಮೂರಾವರ್ತಿಯೂ ಎರಡನೆಯ ಋಕ್ಕನ್ನು ಏಳಾವರ್ತಿಯೂ ಮೂರನೆಯ ಋಕ್ಕನ್ನು ಒಂದಾವರ್ತಿಯೂ ಪಠಿಸಬೇಕು (ಇದರಿಂದ ಹನ್ನೊಂದು ಋಕ್ಕುಗಳನ್ನು ಪಠಿಸಿದಂತಾಗುವುದು.) ದ್ವಿತೀಯ ಪರ್ಯಾಯದಲ್ಲಿ ತೃಚದ ಮೊದಲನೆಯ ಋಕ್ಕನ್ನು ಒಂದು ಸಲವೂ ಎರಡನೆಯ ಋಕ್ಕನ್ನು ಮೂರು ಸಲವೂ ಮೂರನೆಯ ಋಕ್ಕನ್ನು ಏಳು ಸಲವೂ ಪಠಿಸಬೇಕು. (ಒಟ್ಟು ೧೧ ಋಕ್ಕುಗಳು) ತೃತೀಯಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನು ಏಳಾವರ್ತಿಯೂ ಎರಡನೆಯ ಋಕ್ಕನ್ನು ಒಂದಾವರ್ತಿಯೂ ಮೂರನೆಯ ಋಕ್ಕನ್ನು ಮೂರಾವರ್ತಿಯೂ ಪಠಿಸಬೇಕು. (ಒಟ್ಟು ೧೧ ಋಕ್ಕುಗಳು) ಈ ರೀತಿ ಮೂರು ಪರ್ಯಾಯಗಳಲ್ಲಿ ಪಠಿಸುವ ಋಕ್ಕುಗಳ ಸಂಖ್ಯೆಯು ಮೂರಾವರ್ತಿ ಹನ್ನೊಂದು ಅಥವಾ ಮೂವತ್ತಮೂರು ಆಗುವುದರಿಂದ ಈ ಸ್ತೋಮಕ್ಕೆ ತ್ರಯಸ್ತ್ರಿಂಶಸ್ತೋಮವೆಂದು ಹೆಸರು. **ರೇವತೀರ್ನ ಸಧಮಾದೇ** (ಋ. ಸಂ. ೧-೩೦-೧೩) ಎಂಬ ಋಕ್ಕಿನಿಂದ ಉತ್ಪನ್ನವಾಗುವ ಸಾಮಮಂತ್ರಕ್ಕೆ ರೈವತವೆಂದು ಹೆಸರು. ಗಾಯತ್ರೀ ಛಂದಸ್ಸಿಗಿಂತ ಹೆಚ್ಚಾಗಿ ಅಕ್ಷರಸಂಖ್ಯೆಯುಳ್ಳ ಛಂದಸ್ಸುಗಳಿಗೆ ಅತಿಚ್ಛಂದಾಃ ಎಂದು ಹೆಸರು ಈ ಆರನೆಯ ದಿವಸದಲ್ಲಿ ವಾಕ್, ಗೌಃ ದ್ಯೌಃ ಎಂಬಿವು ದೇವತೆಗಳು. ತ್ರಯಸ್ತ್ರಿಂಶಸ್ತೋಮದಿಂದ ಸ್ತುತಿಸಬೇಕು. ರೈವತವೆಂಬ ಸಾಮದಿಂದ ಗಾನಮಾಡಬೇಕು. ಅತಿಚ್ಛಂದಛಂದಸ್ಕವಾದ ಋಕ್ಕುಗಳನ್ನು (ಶಸ್ತ್ರಮಂತ್ರಗಳಿಗಾಗಿ) ಪಠಿಸಬೇಕು. ಇವೇ ಆರನೆಯ ದಿವಸದ ವಿಶೇಷವಾದ ಕಾರ್ಯಕ್ರಮಗಳು.

> **ಯದ್ವೈ ಸಮಾನೋದರ್ಕಂ ತತ್ಷಷ್ಠಸ್ಯಾಹ್ನೋ ರೂಪಂ ಯದ್ಧ್ಯೇವ ತೃತೀಯಮಹಸ್ತದೇತತ್ಪುನರ್ಯತ್ಷಷ್ಠಂ ಯದಶ್ವವದ್ಯದಂತವದ್ಯತ್ಪುನರಾವೃತ್ತಂ ಯತ್ಪುನರ್ನಿನೃತ್ತಂ ಯದ್ರತವದ್ಯತ್ಪರ್ಯಸ್ತವದ್ಯತ್ರಿವದ್ಯದಂತರೂಪಂ ಯದುತ್ತಮೇ ಪದೇ ದೇವತಾ ನಿರುಚ್ಯತೇ ಯದಸೌ ಲೋಕೋಽಭ್ಯುದಿತಃ ॥**
>
> (ಐ. ಬ್ರಾ. ೨೨-೭)

ಈ ಯಾಗದ ಮೂರನೆಯ ದಿವಸದಲ್ಲಿ ಯಾವ ಕಾರ್ಯಕ್ರಮಗಳುಂಟೋ ಆ ಕಾರ್ಯಕ್ರಮಗಳೇ ಆರನೆಯ ದಿವಸದಲ್ಲಿಯೂ ಆಚರಿಸಲ್ಪಡಬೇಕು. ಮೂರನೆಯ ದಿವಸದಲ್ಲಿ ಮಂತ್ರಗಳನ್ನು ಪಠಿಸುವಾಗ ಉಚ್ಚರಿಸಿದ ಅಶ್ವವತ್ ಅಂತವತ್ ಎಂದು ಮೊದಲಾಗಿ ಹೇಳಿದ್ದನ್ನೇ ಆರನೆಯ ದಿವಸದಲ್ಲಿಯೂ ಪುನಃ ಪಠಿಸಬೇಕು. ಆದರೆ ಆರನೆಯ ದಿವಸದಲ್ಲಿ ಒಂದು ವಿಶೇಷ ಕ್ರಮವಿರುವುದು.

> **ಯತ್ಪಾರುಚ್ಛೇಪಂ ಯತ್ಸಪ್ತಪದಂ ಯನ್ನಾರಾಶಂಸಂ ಯನ್ನಾಭಾನೇದಿಷ್ಠಂ ಯದ್ರೈವತಂ ಯದತಿಚ್ಛಂದಾ ಯತ್ಕೃತಂ ಯತ್ತೃತೀಯಸ್ಯಾಹ್ನೋ ರೂಪಮೇತಾನಿ ವೈ ಷಷ್ಠಸ್ಯಾಹ್ನೋ ರೂಪಾಣಿ ।**

ಆ ದಿವಸ ಏಳು ಪಾದಗಳಿಂದ ಸಹಿತವಾದ ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳನ್ನೂ ನಾಭಾನೇದಿಷ್ಠದೃಷ್ಟವಾದ ಋಕ್ಕುಗಳನ್ನೂ ನರಾಶಂಸದೇವತೆಯನ್ನು ಸ್ತುತಿಸುವ ಋಕ್ಕುಗಳನ್ನೂ ಪಠಿಸಬೇಕು. ರೈವತವೆಂಬ ಸಾಮದಿಂದ ಗಾನ

ಮಾಡಬೇಕು. ಅತಿಚ್ಛಂದಛಂದಸ್ಸಿನ (ಗಾಯತ್ರಿಛಂದಸ್ಸಿಗಿಂತ ಹೆಚ್ಚು ಅಕ್ಷರಗಳುಳ್ಳ ಛಂದಸ್ಸುಗಳ) ಋಕ್ಕುಗಳನ್ನೇ ಉಪಯೋಗಿಸಬೇಕು. ಭೂತಕಾಲದ ಪ್ರಯೋಗವಿರಬೇಕು. ಈ ವಿಶೇಷ ಕ್ರಮಗಳನ್ನು ಮೂರನೆಯ ದಿವಸ ಮಾಡಬೇಕೆಂದು ಹೇಳಿರುವ ಅಥವಾ ಹೇಳದಿರುವ ಕ್ರಮಗಳನ್ನೆಲ್ಲಾ ಆರನೆಯ ದಿವಸವೂ ಆಚರಿಸಬೇಕು ಈ ರೀತಿ ಮಾಡುವುದೇ ಎಂದರೆ ಪರುಚ್ಛೇಪಋಷಿದೃಷ್ಟಮಂತ್ರಪಠನವೇ ಆರನೆಯ ದಿವಸದ ಕಾರ್ಯಕ್ರಮಗಳಲ್ಲಿ ವಿಶೇಷವು.

**ಅಯಂ ಜಾಯತ ಮನುಷೋ ಧರೀಮಣೀತಿ ಷಷ್ಠಸ್ಯಾಹ್ನ ಆಜ್ಯಂ ಭವತಿ ಪಾರುಚ್ಛೇಪಮತಿ-ಚ್ಛಂದಾಃ ಸಪ್ತಪದಂ ಷಷ್ಠೇऽಹನಿ ಷಷ್ಠಸ್ಯಾಹ್ನೋ ರೂಪಂ ।**

ಆರನೆಯ ದಿವಸ ಪಠಿಸುವ ಆಜ್ಯಶಸ್ತ್ರವೆಂಬ ಮಂತ್ರವು ಪರುಚ್ಛೇಪಋಷಿದೃಷ್ಟವಾದ **ಅಯಂ ಜಾಯತ ಮನುಷೋ ಧರೀಮಣಿ** ಎಂಬ ಸೂಕ್ತದ ಋಕ್ಕುಗಳಾಗಿರಬೇಕು. ಇವುಗಳ ಛಂದಸ್ಸು ಅತಿಚ್ಛಂದವು. ಎಂದರೆ ಸಾಧಾರಣ ಛಂದಸ್ಸಿನಲ್ಲಿರುವುದಕ್ಕಿಂತ ಹೆಚ್ಚು ಅಕ್ಷರಗಳು ಇವುಗಳಲ್ಲಿರುವುವು. ಮತ್ತು ಈ ಋಕ್ಕುಗಳಲ್ಲಿ ಏಳು ಪಾದಗಳಿರುವುವು. (ಪೂರ್ವಾರ್ಧದಲ್ಲಿ ೩ ಪಾದಗಳೂ ಮಧ್ಯಮಾರ್ಧದಲ್ಲಿ ೨ ಪಾದಗಳೂ ಉತ್ತರಾರ್ಧದಲ್ಲಿ ೨ ಪಾದಗಳೂ ಒಟ್ಟು ೭ ಪಾದಗಳು). ಇವೆಲ್ಲವೂ ಆರನೆಯ ದಿವಸದಲ್ಲಿನ ವಿಶೇಷಕ್ರಮಗಳು.

**ಸ್ತೀರ್ಣಂ ಬರ್ಹಿರುಪ ನೋ ಯಾಹಿ ವೀತಯ ಆ ವಾಂ ರಥೋ ನಿಯುತ್ವಾನ್ವಕ್ಷದವಸೇ ಸುಷುಮಾಯಾತಮದ್ರಿಭಿರ್ಯುವಾಂ ಸ್ತೋಮೇಭಿರ್ದೇವಯಂತೋ ಅಶ್ವಿನಾವವರ್ಧಹ ಇಂದ್ರ ವೃಷನ್ನಿಂದ್ರಾಸ್ತು ಶ್ರೌಷಳೋಷೂಣೋ ಅಗ್ನೇ ಶೃಣುಹಿ ತ್ವಮೀಳಿತೋ ಯೇ ದೇವಾಸೋ ದಿವ್ಯೇಕಾದಶಸ್ಥೇಯಮದದಾದ್ರಭಸಮೃಣಚ್ಯುತಮಿತಿ ಪ್ರಉಗಂ ಪಾರುಚ್ಛೇಪಮತಿಚ್ಛಂದಾಃ ಸಪ್ತಪದಂ ಷಷ್ಠೇऽಹನಿ ಷಷ್ಠಸ್ಯಾಹ್ನೋ ರೂಪಂ ॥**

(ಐ. ಬ್ರಾ. ೨೨-೭)

ಪ್ರಉಗ ಶಸ್ತ್ರಮಂತ್ರಗಳಲ್ಲಿ ಈ ಕೆಳಗಿನ ಋಕ್ಕುಗಳಿರುವುವು. ಇವುಗಳು ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳು; ಹೆಚ್ಚು ಅಕ್ಷರಸಂಖ್ಯೆಯಿರುವ ಅತಿಚ್ಛಂದ ಛಂದಸ್ಕವು; ಏಳು ಪಾದಗಳಿರುವುವು. ಅವುಗಳ ಕ್ರಮವು—

**ಸ್ತೀರ್ಣಂ ಬರ್ಹಿರುಪ ನೋ ಯಾಹಿ ವೀತಯೇ** (ಋ. ಸಂ. ೧-೧೩೫-೧ ರಿಂದ ೩ ಋಕ್ಕುಗಳು)

**ಆ ವಾಂ ರಥೋ ನಿಯುತ್ವಾನ್ವಕ್ಷದವಸೇ** (ಋ. ಸಂ. ೧-೧೩೫-೪ ರಿಂದ ೬ರ ವರೆಗಿನ ಋಕ್ಕುಗಳು)

**ಸುಷುಮಾ ಯಾತಮದ್ರಿಭಿಃ** (ಋ. ಸಂ. ೧-೧೩೭-೧ ರಿಂದ ೩ ಋಕ್ಕುಗಳು)

**ಯುವಾಂ ಸ್ತೋಮೇಭಿರ್ದೇವಯಂತೋ ಅಶ್ವಿನಾ** (ಋ. ಸಂ. ೧-೧೩೯-೩ ರಿಂದ ೬ರ ವರೆಗಿನ ಋಕ್ಕುಗಳು).

**ಅವರ್ಧಹ ಇಂದ್ರ ದಾದೃಹಿ ಶ್ರುಧೀ ನಃ** (ಋ. ಸಂ. ೧-೧೩೩-೬ ಮತ್ತು ೭ ನೆಯ ಋಕ್ಕುಗಳು)

**ಅಸ್ತು ಶ್ರೌಷಟ್ ಪುರೋ ಅಗ್ನಿಂ ಧಿಯಾ ದಧೇ** (ಋ. ಸಂ ೧-೧೩೯-೧)

**ಓ ಷೂ ಣೋ ಅಗ್ನೇ ಶೃಣುಹಿ ತ್ವಮೀಳಿತಃ** (ಋ. ಸಂ. ೧-೧೩೯-೭)

**ಯೇ ದೇವಾಸೋ ದಿವ್ಯೇಕಾದಶಸ್ಥ** (ಋ. ಸಂ. ೧-೧೩೯-೧೧)

**ಇಯಮದದಾದ್ರಭಸಮೃಣಚ್ಯುತಂ** (ಋ. ಸಂ. ೬-೬೧-೧ ರಿಂದ ೩ ಋಕ್ಕುಗಳು)

ಮೇಲೆ ಹೇಳಿರುವ ಋಕ್ಕುಗಳು ಸೇರಿ ಪ್ರಉಗಶಸ್ತ್ರಮಂತ್ರಗಳಾಗಿರುವುವು. ಇವುಗಳಲ್ಲಿ ಕೊನೆಯಲ್ಲಿ ಹೇಳಿರುವ **ಇಯಮದದಾತ್** ಎಂಬ ಋಕ್ಕುಗಳುಮಾತ್ರ ಭರದ್ವಾಜಋಷಿದೃಷ್ಟಗಳು. ಉಳಿದ ಋಕ್ಕುಗಳೆಲ್ಲಾ ಪರುಚ್ಛೇಪಋಷಿ ದೃಷ್ಟಗಳು.

**ಸ ಪೂರ್ವ್ಯೋ ಮಹಾನಾಂ** (ಋ. ಸಂ. ೮-೬೩-೧) ಎಂಬ ಋಕ್ಕಿನಿಂದ ಪ್ರಾರಂಭವಾಗುವ ಮರುತ್ವತೀಯ ಶಸ್ತ್ರಮಂತ್ರಗಳಲ್ಲಿಯೂ ಪರುಚ್ಛೇಪಋಷಿದೃಷ್ಟವಾದ —

**ಯಂ ತ್ವಂ ರಥಮಿಂದ್ರ ಮೇಧಸಾತಯೇ** (ಋ. ಸಂ. ೧-೧೨೯-೧)

ಎಂಬ ಒಂದು ಋಕ್ಕು ಮಾತ್ರ ಸೇರಿರುವುದು. ಉಳಿದ ಋಕ್ಕುಗಳು ಬೇರೆ ಋಷಿದೃಷ್ಟವಾದವುಗಳಾದುದರಿಂದ ಅವುಗಳನ್ನು ಇಲ್ಲಿ ವಿವರಿಸಿಲ್ಲ.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ **ಗಾಯತ್ರೀ** ಎಂಬ ಮಂತ್ರ ನಾಮಾಂಕಿತರಾದ) ರಾಜಕುಮಾರಿಗೂ ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ವಿಕೃತಿನಾಮ ಸಂ॥ ಆ. ಆಷಾಡ. ಬ. ದಶಮೀ ಭಾನುವಾರ
9—7—1950

ಅನುವಾದಕ :
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್.

# ವಿಷಯಾನುಕ್ರಮಣಿಕೆ



ಪುಟಸಂಖ್ಯೆ

## ಸಂಕೇತಾಕ್ಷರಗಳ ವಿವರಣೆಯು.

---

ಅಥ. ಸಂ.— ಅಥರ್ವವೇದಸಂಹಿತಾ
ಆಪ. ಸೂ.— ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬ ಧರ್ಮ ಸೂತ್ರ
ಆಪ. ಪ. ಸೂ—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ. ಆಶ್ವಲಾಯನ ಶ್ರೌತಸೂತ್ರ
ಉ. ಸೂ.— ಉಣಾದಿ ಸೂತ್ರ
ಋ. ಸಂ.— ಋಗ್ವೇದ ಸಂಹಿತಾ
ಐ. ಆ.— ಐತರೇಯಾರಣ್ಯಕ
ಐ. ಉ.— ಐತರೋಯೋಪನಿಷತ್
ಐ ಬ್ರಾ.— ಐತರೇಯ ಬ್ರಾಹ್ಮಣ
ಛಾ. ಉ.— ಛಾಂದೋಗ್ಯೋಪನಿಷತ್
ಜೈ. ಪೂ. ಸೂ — ಜೈಮಿನೀಯ ಪೂರ್ವಮೀಮಾಂಸಾ ಸೂತ್ರ
ಜೈ. ನ್ಯಾ. ವಿ.— ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.— ತಾಂಡ್ಯಮಹಾ ಬ್ರಾಹ್ಮಣ
ತೈ. ಆ.— ತೈತ್ತಿರೀಯ ಆರಣ್ಯಕ
ತೈ. ಬ್ರಾ — ತೈತ್ತಿರೀಯ ಬ್ರಾಹ್ಮಣ
ತೈ. ಸಂ.— ತೈತ್ತಿರೀಯ ಸಂಹಿತಾ
ನಿ.— ನಿರುಕ್ತ, ನಿಘಂಟು
ಪಾ. ಸೂ.— ಪಾಣಿನೀಯ ಸೂತ್ರ
ಪಾ. ಶಿ — ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ — ಫಿಟ್ ಸೂತ್ರ
ಬ್ರ. ಸೂ— ಬ್ರಹ್ಮ ಸೂತ್ರ
ಮ. ಭಾ.— ಮಹಾಭಾರತ
ಮ. ಸ್ಮೃ.— ಮನು ಸ್ಮೃತಿ
ಮೈ. ಸಂ.— ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.— ಯಾಜ್ಞವಲ್ಕ್ಯ ಸ್ಮೃತಿ
ವಾ. ಸಂ.— ವಾಜಸನೇಯ ಸಂಹಿತಾ
ವಾ. ಪು.— ವಾಯುಪುರಾಣ
ವಿ. ಪು — ವಿಷ್ಣುಪುರಾಣ
ವೇ. ಸೂ.— ವೇದಾಂತ ಸೂತ್ರ
ಶ. ಬ್ರಾ.— ಶತಪಥಬ್ರಾಹ್ಮಣ
ಸಾ. ಸಂ.— ಸಾಮವೇದ ಸಂಹಿತಾ ಇತ್ಯಾದಿ.

---



॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ಪ್ರಕ್ರಿಯಾ ಪ್ರಥಮೇ ಕಾಂಡೇ ಸಾಕಲ್ಯೇನೋಪವರ್ಣಿತಾ ।
ಅತ ಊರ್ಧ್ವಂ ತನೀ ಜ್ಞೇಯಾ ಸ್ಮರ್ಯತೇ ಚ ಕ್ವಚಿತ್ಕ್ವಚಿತ್ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಭಾಗ—೧೦

## ॥ ದ್ವಿತೀಯಾಷ್ಟಕೇ ಪ್ರಥಮೋಽಧ್ಯಾಯಃ ॥

### ಎರಡನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು

## ಪ್ರಥಮಮಂಡಲದಲ್ಲಿ ನೂರ ಇಪ್ಪತ್ತೆರಡನೆಯ ಸೂಕ್ತವು

ಎರಡನೆಯ ಅಷ್ಟಕದ ಮೊದಲನೆಯ ಅಧ್ಯಾಯದಲ್ಲಿ ಪ್ರಾರಂಭವಾಗುವ ಪ್ರ ವಃ ಪಾಂತಂ ಎಂಬ ಸೂಕ್ತವೂ ಅದರ ಮುಂದಿನ ನಾಲ್ಕು ಸೂಕ್ತಗಳೂ (ಸೂ. ೧೨೩–೧೨೬) ದೀರ್ಘತಮಸ್ ಎಂಬ ಋಷಿಗೆ ಉಶಿಕ್ ಎಂಬ ಸ್ತ್ರೀಯಲ್ಲಿ ಉತ್ಪನ್ನನಾದ ಕಕ್ಷೀವಾನ್ ಎಂಬ ಋಷಿದೃಷ್ಟವಾದವುಗಳು. ಉಶಿಕ್ ಎಂಬ ಸ್ತ್ರೀಯು ಕಳಿಂಗರಾಜನ ರಾಣಿಯ ಪರಿಚಾರಿಕೆಯಾಗಿದ್ದಳೆಂದೂ, ಕಳಿಂಗರಾಜನು ತನಗೆ ಪುತ್ರನಾಗಬೇಕೆಂಬ ಅಪೇಕ್ಷೆಯಿಂದ ತನ್ನ ಪತ್ನಿಯನ್ನು ದೀರ್ಘತಮಸ್ ಎಂಬ ಋಷಿಯ ಸಂಗಕ್ಕೋಸ್ಕರ ಕಳುಹಿಸಿದನೆಂದೂ, ಆಗ ರಾಜನ ಪತ್ನಿಯು ಅದಕ್ಕೆ ಇಷ್ಟಪಡದೆ

ಗೂಢವಾಗಿ ತನ್ನ ದಾಸಿಯಾದ ಉಶಿಕ್ ಎಂಬುವಳನ್ನು ಋಷಿಯ ಬಳಿಗೆ ಕಳುಹಿಸಲು ಅವಳಿಗೆ ದೀರ್ಘತಮ ಋಷಿಯಿಂದ ಈ ಕಕ್ಷೀವಾನ್ ಎಂಬ ಪುತ್ರನು ಜನಿಸಿದನೆಂದೂ ಪುರಾಣಾದಿಗಳಲ್ಲಿ ಹೇಳಿದೆ. ಈ ಕಕ್ಷೀವಾನ್ ಋಷಿಯು ಕ್ಷತ್ರಿಯ ಸ್ತ್ರೀಯಲ್ಲಿ ಜನಿಸಿದರೂ ಬ್ರಾಹ್ಮಣಸಂಪರ್ಕದಿಂದ ಬ್ರಾಹ್ಮಣನೆಂದೇ ಪ್ರಸಿದ್ಧನಾಗಿರುವನು. ಈ ಋಷಿಯ ಉತ್ಪತ್ತಿಯ ವಿಚಾರವಾಗಿ ಸಾಯಣರು ಋ. ಸಂ. ೧–೫೧–೧೩ ನೆಯ ಋಕ್ಕಿನ ಭಾಷ್ಯದಲ್ಲಿ ಒಂದು ಇತಿಹಾಸವನ್ನು ಹೇಳಿರುವರು.

ಕಕ್ಷೀವಾನ್ ಎಂಬ ಹೆಸರಿನವನು ಒಬ್ಬ ರಾಜನು. ಇವನ ಉತ್ಪತ್ತಿಯ ಇತಿಹಾಸವು ಹೀಗಿದೆ—ಹಿಂದೆ ಅಂಗದೇಶದ ರಾಜನು ಒಂದುಸಾರಿ ಪತ್ನೀದಾಸೀಯರೊಡನೆ ಜಲಕ್ರೀಡಾರ್ಥವಾಗಿ ಗಂಗಾನದಿಗೆ ಹೋಗಿದ್ದನು. ಆ ಸಮಯಕ್ಕೆ ಸರಿಯಾಗಿ ದೀರ್ಘತಮನೆಂಬ ಋಷಿಯು ಒಂದು ದೋಣಿಯಲ್ಲಿ ತೇಲಿಕೊಂಡು ಬರುತ್ತಿದ್ದನು. ಆ ಋಷಿಯು ಅತ್ಯಂತ ದುರ್ಬಲನಾಗಿದ್ದುದರಿಂದ ಆ ಋಷಿಯ ಪತ್ನೀಪುತ್ರಾದಿಗಳು, ಇಂತಹ ದುರ್ಬಲನು ತಮಗೆ ಬೇಡವೆಂದು ಅವನನ್ನು ಒಂದು ದೋಣಿಯಲ್ಲಿಟ್ಟು ಗಂಗಾನದಿಗೆ ಎಸೆದಿದ್ದರು. ಅಂಗರಾಜನು ಅಕಸ್ಮಾತ್ತಾಗಿ ತಾನಿದ-ಸ್ಥಳಕ್ಕೆ ದೋಣಿಯಲ್ಲಿ ಬಂದ ದೀರ್ಘತಮ ಋಷಿಯನ್ನು ನೋಡಿ, ಅತ್ಯಂತ ಸಂತೋಷದಿಂದ ವಂದಿಸಿ, ಅವನನ್ನು ದೋಣಿಯಿಂದಿಳಿಸಿ ಪೂಜಿಸಿ, "ಸ್ವಾಮಿ, ನನಗೆ ಬಹುಕಾಲದಿಂದ ಮಕ್ಕಳಿಲ್ಲ. ಇದೋ ನನ್ನ ಪತ್ನಿಯು ಇಲ್ಲಿಯೇ ಇರುವಳು. ಇವಳಲ್ಲಿ ಒಬ್ಬ ಪುತ್ರನನ್ನು ಉತ್ಪಾದನೆ ಮಾಡಿ" ಎಂದು ಪ್ರಾರ್ಥಿಸಿಕೊಂಡನು. ಆಗ ರಾಣಿಯು ಅತ್ಯಂತ ವೃದ್ಧನಾಗಿರುವ ಈ ಋಷಿಯನ್ನು ನೋಡಿ ಅವನೊಡನೆ ಕೂಡಲು ಇಷ್ಟಪಡದೆ ಉಶಿಕ್ ಎಂಬ ಹೆಸರಿನ ತನ್ನ ದಾಸಿಯೊಬ್ಬಳನ್ನು ಕಳುಹಿಸಿಕೊಟ್ಟಳು. ಸರ್ವಜ್ಞನಾದ ಆ ಮಹರ್ಷಿಯು ಆಕೆಯ ಮೇಲೆ ಮಂತ್ರಪೂತವಾದ ಜಲವನ್ನು ಪ್ರೋಕ್ಷಿಸಲು ಆ ದಾಸಿಯು ಋಷಿಪತ್ನಿಯಂತೆ ಕಂಗೊಳಿಸಿದಳು. ಆಕೆಯಲ್ಲಿ ಜನಿಸಿದ ಮಗನೇ ಕಕ್ಷೀವಾನ್ ಎಂಬ ಋಷಿಯು. ಈತನು ರಾಜಸೂಯವೇ ಮೊದಲಾದ ಅನೇಕ ಯಾಗಗಳನ್ನು ಮಾಡಿದನು. ಆ ಯಾಗಗಳಿಂದ ತೃಪ್ತನಾದ ಇಂದ್ರನು ಕಕ್ಷೀವಂತನಿಗೆ ವೃಚಯಾ ಎಂಬ ಹೆಸರಿನ ತರುಣಿಯೊಬ್ಬಳನ್ನು ಅನುಗ್ರಹಿಸಿಕೊಟ್ಟನು. ಕಕ್ಷ್ಯಾ ಶಬ್ದಕ್ಕೆ ಕುದುರೆಯನ್ನು ಕಟ್ಟುವ ಹಗ್ಗ ಎಂದೂ ಅರ್ಥವಿದೆ. **ಕಕ್ಷೀವಾನ್ ಕಕ್ಷ್ಯಾವಾನ್** (ನಿರು. ೬–೧೦), ಎಂದು ನಿರುಕ್ತವಚನವಿರುವುದು.

ಈ ಕಕ್ಷೀವಾನನ ಹೆಸರು ಋಗ್ವೇದ ಸಂ. ೧–೧೮–೧; ೧–೫೧–೧೩; ೧-೧೧೨-೧೧; ೧-೧೧೬-೭; ೧-೧೧೭-೬; ೧-೧೨೬-೩; ೪-೨೬-೧; ೮-೯-೧೦; ೯-೭೪-೮; ೧೦-೨೫-೧೦; ೧೦-೬೧-೧೬ ಎಂಬ ಋಕ್ಕುಗಳಲ್ಲಿಯೂ ಅಥರ್ವವೇದ ೪–೨೯–೫ ರಲ್ಲಿಯೂ ಪಠಿತವಾಗಿದೆ, ಇವನ ವಂಶದ ಹೆಸರು ಪಜ್ರ ಎಂದಿರಬೇಕು. ಏಕೆಂದರೆ ಇವನನ್ನು ಪಜ್ರಿಯ ಎಂದು ಋ. ಸಂ. ೧-೧೧೬-೭; ೧-೧೧೭-೬ ರಲ್ಲಿ ಕರೆಯಲಾಗಿದೆ ಮತ್ತು ಋ. ಸಂ. ೧-೧೨೬-೪ ರಲ್ಲಿ ಇವನ ಸಂತತಿಯವರನ್ನು ಪಜ್ರಾಃ ಎಂದೂ ಕರೆದಿದಾರೆ. ಋ. ಸಂ. ೧–೧೨೬ ನೇ ಸೂಕ್ತದಲ್ಲಿ ಈ ಋಷಿಯು ಸ್ವನಯಭಾವ್ಯ ಎಂಬ ರಾಜನು ತನಗೆ ಕೊಟ್ಟ ದಾನವಸ್ತುಗಳ ವಿಷಯವಾಗಿ ಪ್ರಶಂಸೆಮಾಡಿದಾನೆ ಮತ್ತು ಸಾಂಖ್ಯಾಯನ ಶ್ರೌತಸೂತ್ರ. ೧೬-೪-೫ ರಲ್ಲಿ ನಾರಾಶಂಸಸೂಕ್ತಗಳೆಂಬ ವೀರರನ್ನು ಪ್ರಶಂಸೆಮಾಡುವ ಮಂತ್ರಗಳ ಸಮುದಾಯದಲ್ಲಿ ಉಶಿಜ ಪುತ್ರನಾದ ಕಕ್ಷೀವಾನ್ ಎಂಬುವನು ಮಾಡಿದ ಸ್ವನಯಭಾವಯವ್ಯ ಎಂಬ ರಾಜನ ದಾನಪ್ರ-ಶಂಸೆಯ ಮಂತ್ರವೂ ಸೇರಿರುವುದು. ಇವನು ವಯಸ್ಸಾದ ಮೇಲೆ ವೃಚಯಾ ಎಂಬ ಕನ್ಯೆಯನ್ನು ಮದುವೆಯಾದ ವಿಷಯವು (ಋ.ಸಂ. ೧-೫೧-೧೩) ಎಂಬ ಋಕ್ಕಿನಲ್ಲಿ ವರ್ಣಿತವಾಗಿದೆ. ಇವನು ಒಂದುನೂರು ವರ್ಷಗಳವರೆಗೆ ಜೀವಿಸಿದ್ದನೆಂದು

ಋ. ಸಂ. ೯-೭೪-೮ ಋಕ್ಕಿನಿಂದ ತಿಳಿದುಬರುವುದು. ಋ. ಸಂ. ೪-೨೬-೧ ರಲ್ಲಿ ಇವನ ಹೆಸರು ಕುತ್ಸ ಮತ್ತು ಕವಿ ಉಶನಸ್ ಎಂಬುವರೊಡನೆ ಸೂಚಿತವಾಗಿದೆ. ಋ. ಸಂ. ೮-೯-೧೦ ಎಂಬ ಒಂದು ಋಕ್ಕಿನಲ್ಲಲ್ಲದೆ ಮತ್ತೆಲ್ಲಿಯೂ ದೀರ್ಘತಮಸ್ ಎಂಬ ಋಷಿಯೊಡನೆ ಸಂಬಂಧವಿರುವ ವಿಷಯವು ಕಂಡುಬರುವುದಿಲ್ಲ. ಆದರೆ ಬೃಹದ್ದೇವತಾ ಎಂಬ ಶೌನಕೋಕ್ತಗ್ರಂಥದಲ್ಲಿ ಈ ಕಕ್ಷೀವಾನ್ ಎಂಬುವನು ದೀರ್ಘತಮಸ್ಸೆಂಬ ಋಷಿಗೆ ಉಶಿಜೆ ಎಂಬ ದಾಸಿಯಲ್ಲಿ ಜನಿಸಿದ ಪುತ್ರನೆಂದು ಹೇಳಿರುವುದು. (ಬೃ. ದೇ. ೪-೧೧).

Weber ಎಂಬ ಪಾಶ್ಚಾತ್ಯಪಂಡಿತನು ತೈ. ಸಂ. ೫-೬-೫-೩; ಕಾಠಕಸಂಹಿತಾ ೧೩-೩; ಪಂಚವಿಂಶ ಬ್ರಾಹ್ಮಣ ೨೫-೧೬-೩ ಎಂಬ ಮಂತ್ರಗಳ ಆಧಾರದ ಮೇಲೆ ಈ ಕಕ್ಷೀವಾನ್ ಎಂಬುವನು ಮೊದಲು ಕ್ಷತ್ರಿಯನಾಗಿದ್ದನೆಂದೂ ಆದುದರಿಂದಲೇ ಇವನ ಹೆಸರು ಮೇಲೆ ಕೊಟ್ಟಿರುವ ಮಂತ್ರಗಳಲ್ಲಿ ಪರ ಆತ್ಣಾರ, ವೀತಹವ್ಯ, ಶ್ರಾಯಸ, ತ್ರಸದಸ್ಯು, ಪೌರುಕುತ್ಸ ಎಂಬ ರಾಜರ ಜತೆಯಲ್ಲಿ ಪಠಿತವಾಗಿರುವುದೆಂದೂ ಅಭಿಪ್ರಾಯಪಡುವನು. ಈ ಋಷಿಯು ಋಗ್ವೇದದ ಪ್ರಥಮಮಂಡಲದಲ್ಲಿ ೧೧೬ ರಿಂದ ೧೨೫ ವರೆಗಿನ ಸೂಕ್ತಗಳಲ್ಲಿರುವ ೧೪೬ ಋಕ್ಕುಗಳಿಗೂ ೧೨೬ ನೆಯ ಸೂಕ್ತದಲ್ಲಿ ೧-೫ ಋಕ್ಕುಗಳಿಗೂ ಒಟ್ಟು ೧೫೧ ಋಕ್ಕುಗಳಿಗೆ ದ್ರಷ್ಟೃವಾಗಿರುವನು. ಇದಲ್ಲದೆ ಒಂಭತ್ತನೆಯ ಮಂಡಲದ ೭೪ ನೆಯ ಸೂಕ್ತದಲ್ಲಿರುವ ೯ ಋಕ್ಕುಗಳಿಗೆ **ಕಕ್ಷೀವಾನ್ ದೈರ್ಘತಮಸಃ**—ದೀರ್ಘತಮಸ್ಸೆಂಬ ಋಷಿಯ ಪುತ್ರನಾದ ಕಕ್ಷೀವಾನ್ ಎಂಬುವನು ಋಷಿಯೆಂದು ಹೇಳಲ್ಪಟ್ಟಿರುವುದರಿಂದ ಅಲ್ಲಿ ಔಶಿಜನೆಂಬ ವಿಶೇಷಣ ವಿಲ್ಲದಿದ್ದರೂ ಪ್ರಸಕ್ತವಾದ ಸೂಕ್ತದ ಋಷಿಯೂ ಅದಕ್ಕೂ ಋಷಿಯೆಂದು ಹೇಳಬಹುದು.

॥ ಸಾಯಣಭಾಷ್ಯಂ ॥

**ಅಥ ದ್ವಿತೀಯೇಽಷ್ಟಕೇ ಪ್ರಥಮೋಽಧ್ಯಾಯ ಆರಭ್ಯತೇ । ಶತರ್ಚಿನಾಮಾದ್ಯೇ ಮಂಡಲೇ ಚತುರ್ವಿಂಶತ್ಯನುವಾಕಾಃ। ತೇಷು ಕದಿತ್ಥೇತ್ಯಷ್ಟಾದಶಾನುವಾಕೇ ಷಟ್ ಸೂಕ್ತಾನಿ । ತತ್ರ ಪ್ರ ವಃ ಪಾಂತಮಿತಿ ದ್ವಿತೀಯಂ ಸೂಕ್ತಂ । ಪಂಚೋನೇತ್ಯನುವರ್ತಮಾನಾತ್ಪಂಚದಶರ್ಚಂ । ಋಷಿಶ್ಚಾನ್ಯಸ್ಮಾದೃಷೇರಿತಿ ಪರಿಭಾಷಯಾ ಕಕ್ಷೀವಾನೃಷಿಃ । ಅನಾದೇಶಪರಿಭಾಷಯಾ ತ್ರಿಷ್ಟುಪ್ । ವಿಶ್ವೇ ದೇವಾ ದೇವತಾ । ಪ್ರ ವೋ ವೈಶ್ವದೇವಮಿತ್ಯನುಕ್ರಮಣಿಕಾ । ಅಸ್ಯ ವಿಶೇಷವಿನಿಯೋಗೋ ಲೈಂಗಿಕಃ ॥**

ಅನುವಾದವು—ಋಗ್ವೇದ ಮೊದಲನೆಯ ಅಷ್ಟಕವು ಮುಗಿದಿರುವುದರಿಂದ ಈಗ ಎರಡನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯದ ಅರ್ಥಾನುವಾದ ವಿವರಣೆಗಳನ್ನು ಬರೆಯುವುದಕ್ಕೆ ಪ್ರಾರಂಭಿಸುವೆವು. ಪ್ರಥಮಾಷ್ಟಕದ ಎಂಟು ಅಧ್ಯಾಯಗಳಲ್ಲಿ ಪ್ರತಿಋಕ್ಕಿನಲ್ಲಿಯೂ ಹೇಳಬೇಕಾದ ವ್ಯಾಕರಣಪ್ರಕ್ರಿಯೆಯನ್ನು ಇದುವರೆಗೂ ಆಯಾ ಋಕ್ಕಿನ ಭಾಷ್ಯದ ಕೊನೆಯಲ್ಲಿ ಒಂದೇಸ್ಥಳದಲ್ಲಿ ಹೇಳಿರುವೆವು. ಈಗ ಆ ಭಾಗವನ್ನು ಸಂದರ್ಭಾನುಸಾರ ಅಲ್ಲಲ್ಲಿ ಹೇಳುವೆವು. ಶತರ್ಚಿನ ಋಷಿಗಳ ಸಂಬಂಧವಾದ ಮೊದಲನೆಯ ಮಂಡಲದಲ್ಲಿ ಇಪ್ಪತ್ತುನಾಲ್ಕು ಅನುವಾಕಗಳಿರುವುವೆಂದು ಹಿಂದೆಯೇ ಹೇಳಿದೆಯಷ್ಟೆ. ಆ ಅನುವಾಕಗಳಲ್ಲಿ ಹದಿನೆಂಟನೆಯ ಅನುವಾಕದಲ್ಲಿ **ಕದಿತ್ಥಾ** ಎಂದು ಮೊದಲಾದ ಆರು ಸೂಕ್ತಗಳಿರುವವು. ಹಿಂದಿನ ಅಧ್ಯಾಯದಲ್ಲಿ ಮೊದಲನೆಯ ಸೂಕ್ತವು ಮುಗಿದಿರುವುದರಿಂದ ಈಗ ನಾವು ವ್ಯಾಖ್ಯಾನಮಾಡುವ **ಪ್ರ ವಃ ಪಾಂತಂ** ಎಂಬ ಸೂಕ್ತವು, ಹದಿನೆಂಟನೆಯ ಅನುವಾಕದಲ್ಲಿ ಎರಡನೆಯದು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಹಿಂದೆ ಹೇಳಿದಂತೆ ಈ ಸೂಕ್ತಕ್ಕೂ ಕಕ್ಷೀವಾನ್ ಎಂಬುವನೇ ಋಷಿಯು.

ತ್ರಿಷ್ಟುಪ್ ಛಂದಸ್ಸು, ವಿಶ್ವೇದೇವತೆಗಳೇ ದೇವತೆಯು. ಅನುಕ್ರಮಣಿಕೆಯಲ್ಲಿ ಪ್ರ ವೋ ವೈಶ್ವದೇವಂ ಎಂದು ಮೊದಲಾಗಿ ಹೇಳಿರುವುದು ಈ ಸೂಕ್ತದ ವಿನಿಯೋಗವು ಲೈಂಗಿಕವು, ಎಂದರೆ ಆಯಾ ಋಕ್ಕುಗಳಲ್ಲಿ ಪ್ರತಿಪಾದಿತವಾದ ದೇವತೆಗಳನ್ನು ಸ್ತೋತ್ರಮಾಡುವಾಗ ಆಯಾ ಋಕ್ಕುಗಳ ವಿನಿಯೋಗವಿರುವುದೆಂದು ತಿಳಿಯಬೇಕು.

## ಸೂಕ್ತ—೧೨೨

ಮಂಡಲ—೧ ॥ ಅನುವಾಕ—೧೮ ॥ ಸೂಕ್ತ—೧೨೨ ॥
ಅಷ್ಟಕ—೨ ॥ ಅಧ್ಯಾಯ—೧ ॥ ವರ್ಗ—೧, ೨, ೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
॥ ಋಷಿಃ—ಕಕ್ಷೀವಾನ್ ದೈರ್ಘತಮಸ ಔಶಿಜಃ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ವಃ ಪಾಂತಂ ರಘುಮನ್ಯವೋಽಂಧೋ ಯಜ್ಞಂ ರುದ್ರಾಯ ಮೀಳ್ಹುಷೇ ಭರಧ್ವಂ ।
ದಿವೋ ಅಸ್ತೋಷ್ಯಸುರಸ್ಯ ವೀರೈರಿಷುಧ್ಯೇವ ಮರುತೋ ರೋದಸ್ಯೋಃ ॥ ೧ ॥

॥ ಪದಪಾಠಃ ॥

ಪ್ರ । ವಃ । ಪಾಂತಂ । ರಘುಽಮನ್ಯವಃ । ಅಂಧಃ । ಯಜ್ಞಂ । ರುದ್ರಾಯ । ಮೀಳ್ಹುಷೇ । ಭರಧ್ವಂ ॥
ದಿವಃ । ಅಸ್ತೋಷಿ । ಅಸುರಸ್ಯ । ವೀರೈಃ । ಇಷುಧ್ಯಾಽಇವ । ಮರುತಃ । ರೋದಸ್ಯೋಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ರಘುಮನ್ಯವೋ ಲಘುಕ್ರೋಧಾ ಅಕ್ರೋಧಿನ ಋತ್ವಿಜೋ ವೋ ಯುಷ್ಮಾಕಂ ಪಾಂತಂ ಪಾಲನಶೀಲಂ ಪಾತವ್ಯಂ ವಾ ಯಜ್ಞಂ ಯೋಗಸಾಧನಮಂಧೋಽನ್ನಮಾಜ್ಯಸೋಮಾದಿಲಕ್ಷಣಂ ರುದ್ರಾಯ । ರುದ್ದುಃಖಂ ತದ್ಧೇತುಭೂತಂ ದುರಿತಂ ವಾ । ತಸ್ಯ ದ್ರಾವಯಿತ್ರೇ । ಏತನ್ನಾಮಕಾಯ ದೇವಾಯ ಮೀಳ್ಹುಷೇ ಫಲಸ್ಯ ವರ್ಷಿತ್ರೇ ತದರ್ಥಂ ಪ್ರ ಭರಧ್ವಂ । ಪ್ರಕರ್ಷೇಣ ಸಂಪಾದಯತ ।

ಅಹಂ ಚೇಷುಧ್ಯೇವ ಇಷುಧ್ಯಾ ಶತ್ರೂನ್ಯಥಾ ನಿರಸ್ಯತಿ ತಥಾ ವೀರೈರಮಿತ್ರಾಣಾಂ ವಿವಿಧಮಾರಕೈರ್ನಿಯೋಗೋಪೇತೈರ್ವಾ ತದನುಚರೈರ್ಮರುದಾದಿಭಿಃ ಸಹ ದಿವೋ ದ್ಯುಲೋಕಸಕಾಶಾತ್ ! ಉಪಲಕ್ಷಣಮೇತತ್ । ಲೋಕತ್ರಯಾದಪ್ಯಸುರಸ್ಯ ನಿರಸಿತವ್ಯಾನಾಮಸುರಾಣಾಂ ನಿರಸಿತುಃ । ಕರ್ಮಣಿ ಷಷ್ಠೀ । ನಿರಸಿತಾರಂ ತಮೇವ ದೇವಂ ರೋದಸ್ಯೋರ್ನಿರೋಧನವತ್ಯೋರ್ದ್ಯಾವಾಪೃಥಿವ್ಯೋರ್ಮಧ್ಯೇ ವರ್ತಮಾನಾನ್ಮರುತಶ್ಚಾಸ್ತೋಷಿ । ಸ್ತೌಮಿ ॥ ಪಾಂತಂ । ಪಾಂತಮಿತ್ಯತ್ರ ಪಾತೇಃ ಶತೃ ಪಿಬತೇರ್ವೌಣಾದಿಕೋ ರ್ಝುಃ । ಮೀಳ್ಹುಷೇ । ದಾಶ್ವಾನ್ಸಾಹ್ವಾನಿತಿ ಕ್ವಸುಪ್ರತ್ಯಯಾಂತೋ ನಿಪಾತಃ । ಚತುರ್ಥ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸೀತ್ಯಾದಿನಾ ಷತ್ವಂ । ದಿವಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಅಸ್ತೋಷಿ । ಸ್ತೌತೇಶ್ಛಾಂದಸೋ ಲುಙ್ । ಇಷುಧ್ಯೇವ । ಇಷವೋ ಧೀಯಂತೇಽತ್ರೇತೀಷುಧಿಃ । ಕರ್ಮಣ್ಯಧಿಕರಣೇ ಚೇತಿ ದಧಾತೇಃ ಕಿಃ । ಕೃತ್ಸ್ವರೇಣಾಂತೋದಾತ್ತಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ರಘುಮನ್ಯವಃ**—ಅಲ್ಪಕ್ರೋಧರಾದ (ಅಕ್ರೋಧರಾದ) ಎಲೈ ಋತ್ವಿಜರೇ । **ವಃ**—ನಿಮ್ಮನ್ನು (ನಿಮ್ಮಿಂದ) **ಪಾಂತಂ**—ರಕ್ಷಿಸುವ (ರಕ್ಷಿಸಲ್ಪಡಬೇಕಾದ) । **ಯಜ್ಞಂ**—ಯಜ್ಞಸಾಧನವಾದ । **ಅಂಧಃ**—ಆಜ್ಯಾದಿರೂಪವಾದ ಅನ್ನವನ್ನು । **ರುದ್ರಾಯ**—ದುಃಖಕಾರಣವಾದ ಪಾಪವನ್ನು ನಾಶಮಾಡುವ ರುದ್ರನಿಗೆ । **ಮೀಳ್ಹುಷೇ**—ಫಲಗಳನ್ನು ವರ್ಷಿಸುವುದಕ್ಕೋಸ್ಕರ । **ಪ್ರ ಭರಧ್ವಂ**—ಹೆಚ್ಚಾಗಿ ಅರ್ಪಿಸಿ । (**ಅಹಂ ಚ**—ನಾನೂ) **ಇಷುಧ್ಯಾ ಇವ**—ಬತ್ತಳಿಕೆಯಲ್ಲಿರುವ ಬಾಣಗಳಿಂದ ಶತ್ರುನಾಶ ಮಾಡುವ ಹಾಗೆ । **ವೀರೈಃ**—ಶತ್ರುಗಳನ್ನು ಹಿಂಸಿಸುವ ವೀರರಿಂದ (ಅನುಚರರಾದ ಮರುತ್ತುಗಳಿಂದ) ಯುಕ್ತನಾಗಿ । **ದಿವಃ**—ಅಂತರಿಕ್ಷಲೋಕದಿಂದ (ಮೂರು ಲೋಕಗಳಿಂದಲೂ) । **ಅಸುರಸ್ಯ**—ರಾಕ್ಷಸರನ್ನು (ಓಡಿಸುವ ಆ ರುದ್ರನನ್ನೂ) । **ರೋದಸ್ಯೋಃ**—ಭೂವ್ಯಾಕಾಶಗಳ (ನಡುವೆ ಇರುವ) । **ಮರುತಃ**—ಮರುದ್ದೇವತೆಗಳನ್ನೂ । **ಅಸ್ತೋಷಿ**—ಸ್ತುತಿಸುತ್ತೇನೆ.

॥ ಭಾವಾರ್ಥ ॥

ಅಕ್ರೋಧನರಾದ ಎಲೈ ಋತ್ವಿಜರೇ, ನಿಮಗೆ ರಕ್ಷಕವೂ, ಯಜ್ಞಸಾಧನವೂ ಆದ ಆಜ್ಯಾದಿರೂಪ ಹವಿಸ್ಸನ್ನು, ಫಲಗಳನ್ನೂ (ಮಳೆ ರೂಪದಲ್ಲಿ) ಕರೆಯುವವನೂ, ದುಃಖಕಾರಕವಾದ (ಪಾಪ) ಪರಿಹರ್ತೃವೂ ಆದ ರುದ್ರನಿಗೆ ಹೆಚ್ಚಾಗಿ ಅರ್ಪಿಸಿ. ಬತ್ತಳಿಕೆಯಲ್ಲಿರುವ (ಬಾಣಗಳಿಂದ ಶತ್ರುಗಳನ್ನು ನಾಶಮಾಡುವ ಹಾಗೆ) ವೀರರಾದ (ತನ್ನ ಅನುಚರರಿಂದ ಯುಕ್ತನಾಗಿ) ಅಂತರಿಕ್ಷಲೋಕದಲ್ಲಿರುವ ರಾಕ್ಷಸರನ್ನು (ಅಲ್ಲಿಂದ ಓಡಿಸುವ ಆ ರುದ್ರದೇವನನ್ನೂ) ಭೂವ್ಯಾಕಾಶ (ಮಧ್ಯಗತರಾದ) ಮರುದ್ದೇವತೆಗಳನ್ನೂ ಸ್ತುತಿಸುತ್ತೇನೆ.

## English Translation

Present, mild-tempered (priests), the sacrificial viands which you have prepared, to the reward-showering Rudra. I praise him who, with his heroic (followers), as (with shafts) from a quiver, expelled (the Asuras) from heaven : and (I praise) the Maruts, (who abide) between heaven and earth.

॥ ವಿಶೇಷವಿಷಯಗಳು ॥

**ರಘುಮನ್ಯವಃ—** ಇಲ್ಲಿ ರಘು ಎಂದರೆ ಲಘು ಎಂದರ್ಥವು. ಋಗ್ವೇದದಲ್ಲಿ ಲಕಾರಕ್ಕೆ ಬದಲಾಗಿ ರಕಾರವು ಅನೇಕಕಡೆ ಉಪಯೋಗಿಸಲ್ಪಟ್ಟಿರುವುದು. ಉದಾ—

**ಅಶ್ವಂ ನ ತ್ವಾ ವಾರವಂತಂ ವಂದಧ್ಯಾ ಅಗ್ನಿಂ ನಮೋಭಿಃ । ಸಂರಾಜಂತಮಧ್ವರಾಣಾಂ ॥**

(ಋ. ಸಂ. ೧-೨೭-೧)

ಎಂಬ ಋಕ್ಕಿನಲ್ಲಿ **ವಾರವಂತಂ** ಎಂದರೆ **ವಾಲವಂತಂ**—ಬಾಲವುಳ್ಳ ಕುದುರೆ ಎಂದರ್ಥವು. ಆದುದರಿಂದ ಇಲ್ಲಿ **ರಘುಮನ್ಯವಃ— ಲಘುಮನ್ಯವಃ** ಲಘುಕ್ರೋಧಾಃ ಅಕ್ರೋಧಿನಃ । ಸ್ವಲ್ಪಕೋಪವುಳ್ಳವರು (light or little anger) ಎಂದರೆ ಕೋಪವಿಲ್ಲದವರು ಎಂದಭಿಪ್ರಾಯವು.

**ಲಘುಕ್ರೋಧಾಃ ಅಕ್ರೋಧಿನಃ ಋತ್ವಿಜಃ** ಎಂದು ಸಾಯಣರು ವಿವರಿಸಿದ್ದಾರೆ. ಈ ಪದಕ್ಕೆ ಸರಿಯಾಗಿ ಅರ್ಥವನ್ನು ಹೇಳುವುದು ಕಷ್ಟವೆಂದು ಅವರೂ ತೋರಿಸಿದ್ದಾರೆ. ಸಾಧಾರಣವಾಗಿ **ರಘು** (ಲಘು) ಶಬ್ದಕ್ಕೆ **ಶೀಘ್ರ** ವೆಂಬರ್ಥವಾಗುತ್ತದೆ. **ಮನ್ಯು** ಪದವು **ಕ್ರೋಧ** ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ಆದುದರಿಂದ **ಶೀಘ್ರ ಕೋಪಿಗಳು** ಎಂದು ನ್ಯಾಯವಾಗಿ ಅರ್ಥವಾಗಬೇಕು. ಈ ಅರ್ಥವು ಅಷ್ಟು ಸಮಂಜಸವಾಗುವುದಿಲ್ಲ. ಸಾಯಣರು **ಅಲ್ಪಕ್ರೋಧಿನಃ, ಅಕ್ರೋಧಿನಃ** ಎಂದು ಅರ್ಥಮಾಡಿದ್ದಾರೆ. ಆದರೂ ಅದು ಋತ್ವಿಕ್ಕುಗಳ ಸರಿಯಾದ ಸ್ವರೂಪವನ್ನು ತಿಳಿಸುವುದಿಲ್ಲ. ಈ ಪದವು ಯಾರಿಗೆ ವಿಶೇಷಣವಾಗಿದೆ, ಇದರ ಸರಿಯಾದ ಅರ್ಥವೇನು ಎಂದು ಹೇಳುವುದು ಸುಲಭ ವಲ್ಲ ಎಂಬ ವಿಷಯವನ್ನು Wilson ಎಂಬ ಪಂಡಿತನು ತನ್ನ The Rig-veda, Translation and Notes ಎಂಬ ಗ್ರಂಥದ ಮುನ್ನುಡಿಯಲ್ಲಿ ಈರೀತಿ ಹೇಳಿದ್ದಾನೆ.

It may not be always possible to devise unexceptionable and felicitous equivalents for such expressions, but they may be so rendered as to convey with some degree of accuracy the substance of the text: the more unmanageable difficulties are those which are utterly insuperable except by guess.....................thus, as already observed, the substantive is vety often omitted and the adjective does double duty : the first Verse of the second Ashtaka offers an example: it begins—Raghu-manyavah (ರಘು ಮನ್ಯವಃ)—"oh ye of little wrath" ; " ye who are gentle, mild-tempered" ;but who they are that are so addressed does not appear. The scholiast says, mild-tempered priests, and it would not be easy to suggest a preferable application of the epithet, although, if not traditional. it is only conjectural.

(Vol II Introduction. P. XVII)

ಇದರಿಂದ ಋತ್ವಿಕ್ಕುಗಳಿಗೆ ಅಕ್ರೋಧಿಗಳು ಎಂಬ ವಿಶೇಷಣವು ಅವರ ನಿಜವಾದ ಸ್ವರೂಪವನ್ನು ಯಾವ ರೀತಿ ತಿಳಿಸುತ್ತದೆ ಎಂದು ಹೇಳುವುದೂ ಕಷ್ಟ. ಈ ಪದಕ್ಕೆ **ಅಕ್ರೋಧಿನಃ** ಎಂಬರ್ಥದೊಡನೆ **ಶೀಘ್ರಸ್ತುತಯಃ**

ಎಂಬ ಇನ್ನೊಂದರ್ಥದ ಪಾಠಾಂತರವೂ ಇದೆ. **ಮನ್ಯತಿರರ್ಚಾಕರ್ಮಾ ।** **ಮನ್ಯತೇ** ಎಂಬ ಪದವು **ಅರ್ಚತಿ** ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ **ಶೀಘ್ರಸ್ತುತಯಃ** ಎಂದೂ ಆಗಬಹುದೆಂದು ಹೇಳಿದೆ. ಆದರೆ ಇಲ್ಲಿ **ಮನ್ಯು** ಶಬ್ದವು **ಕ್ರೋಧ**ವೆಂಬ ನಿರ್ದಿಷ್ಟವಾದ ಅರ್ಥವನ್ನೇ ತೋರಿಸುವುದರಿಂದ ಈ ಪಾಠಾಂತರವು ಅಷ್ಟು ಸಾಧುವಾಗಿ ಕಾಣುವುದಿಲ್ಲ. **ಶೀಘ್ರಕೋಪಿಗಳು** ಎನ್ನುವುದೂ ಸರಿಯಲ್ಲ. ಆದುದರಿಂದ ಅಕ್ರೋಧಿಗಳು ಎನ್ನುವುದೇ ಸರಿಯಾಗಿದೆ.

**ಮೀಳ್ಹುಷೇ—ಫಲಸ್ಯ ವರ್ಷಿತ್ರೇ ರುದ್ರಾಯ ।** ಇಷ್ಟಾರ್ಥಗಳನ್ನು ಸುರಿಸಿಕೊಡುವ **ರುದ್ರನಿಗೆ** ಎಂದು **ರುದ್ರನ** ದಾತೃತ್ವವಾದ ಅಂಶವನ್ನು ಹೇಳಿದೆ; ಪುನಃ **ರುದ್ರಾಯ** ಎಂಬ ಪದದ ನಿರ್ವಚನವನ್ನು ಮಾಡುವಾಗ **ರುದ್ರನ** ಇನ್ನೊಂದಂಶವನ್ನೂ ವಿವರಿಸಿದೆ. **ರುತ್ ದುಃಖಂ, ತದ್ಧೇತುಭೂತಂ ದುರಿತಂ ವಾ । ತಸ್ಯ ದ್ರಾವಯಿತ್ರೇ ಏತನ್ನಾಮಕಾಯ ದೇವಾಯ ।** **ರುತ್** ಎಂದರೆ ದುಃಖ ಅಥವಾ ಅದಕ್ಕೆ ಕಾರಣವಾದ ಪಾಪ. ಇದನ್ನು ನಾಶಮಾಡುವವನಾದ್ದರಿಂದ **ರುದ್ರ**ನೆಂಬ ಹೆಸರು **ರುದ್ರನ** ಸ್ವರೂಪದ ಎಲ್ಲಾ ಅಂಶಗಳನ್ನೂ ಈ ದೇವತೆಯನ್ನುದ್ದೇಶಿಸಿದ ಸೂಕ್ತದಲ್ಲಿ ವಿವರಿಸಲಾಗುವುದು.

**ವೀರೈಃ—ಅಮಿತ್ರಾಣಾಂ ವಿವಿಧಮೀರಕೈಃ ವೀರ್ಯೋಪೇತೈಃ ।** ಶತ್ರುಗಳನ್ನು ನಾನಾವಿಧವಾಗಿ ಹಿಂಸಿಸುವ ವೀರ್ಯದಿಂದ ಕೂಡಿದ ಮರುತ್ತುಗಳೊಡನೆ ಎಂದರ್ಥ. **ಮರುತ್ತುಗಳು ರುದ್ರಪುತ್ರ**ರಾದುದರಿಂದ ಯಾವಾಗಲೂ ಅವರು ರುದ್ರನ ಅನುಚರರಾಗಿದ್ದಾರೆ.

**ರೋದಸ್ಯೋಃ ಮರುತಃ—ದ್ಯಾವಾಪೃಥಿವ್ಯೋರ್ಮಧ್ಯೇ ವರ್ತಮಾನಾನ್ ಮರುತಃ ।** ದ್ಯಾವಾಪೃಥಿವಿಗಳ ನಡುವೆ ಇರತಕ್ಕ ಮರುತ್ತುಗಳನ್ನು ಎಂದು ಸಾಯಣರು ವಿವರಿಸಿದ್ದಾರೆ.

**ಆ ಯಸ್ಮಿನ್ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ ।**

(ಋ. ಸಂ. ೫-೫೬-೮)

ಎಂಬ ಋಕ್ಕಿನಲ್ಲಿ **ರೋದಸೀ** ಎಂಬುವಳು **ರುದ್ರ** ಪತ್ನಿಯೆಂದೂ **ಮರುತ್ತು**ಗಳ ಮಾತೆಯೆಂದೂ ಹೇಳಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ದ್ವಿವಚನವಿರುವುದರಿಂದ ದ್ಯಾವಾಪೃಥಿವಿಗಳೆಂದು ಅರ್ಥಮಾಡುವುದೇ ಸರಿಯಾಗಿರುವುದು.

**ಮರುತಃ— ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ ।** ಕ್ರಮಬದ್ಧವಾದ ಶಬ್ದಕಾರಕರಾದುದರಿಂದಾಗಲೀ, ಕ್ರಮಬದ್ಧವಾದ ಪ್ರಕಾಶವುಳ್ಳವರಾದುದರಿಂದಾಗಲೀ ಅಥವಾ ಅಧಿಕವಾಗಿಯೂ ವೇಗವಾಗಿಯೂ ಚಲಿಸುವವರಾದುದರಿಂದಾಗಲಿ **ಮರುತ್ತು**ಗಳೆಂದು ಹೆಸರು. (ನಿ. ೧೧-೧೩) ಇದರ ವಿವರಣೆಯನ್ನೂ ಹಿಂದೆಯೇ ಹೇಳಿದೆ.

**ಇಷುಧ್ಯಾ—ಇಷುಧ್ಯಾ (ನಿಷಂಗೇಣ)ಶತ್ರೂನ್ ಯಥಾ ನಿರಸ್ಯತಿ ತಥಾ ।** (ಬತ್ತಳಿಕೆಯ) ಬಾಣದಿಂದ ಶತ್ರುಗಳನ್ನು ಓಡಿಸಲು ಸುಲಭವಾಗುವಂತೆ ವೀರರಾದ ಮರುತ್ತುಗಳೊಡನೆ ಕೂಡಿಕೊಂಡು ದ್ಯುಲೋಕದಿಂದ ಅಸುರನಾಶಕ್ಕಾಗಿ ಬರತಕ್ಕ ದೇವನಾದ ರುದ್ರನನ್ನು **ಸ್ತೌಮಿ** (ಸ್ತುತಿಸುವೆನು) ಎಂದರ್ಥ. ಸ್ವತಃ ಶಕ್ತಿಯುಳ್ಳ ಅವನ ಬಾಣಗಳಿಗೆ ಮರುತ್ತುಗಳ ಸಹಾಯವೂ ಇದೆ. ಅದರ ಪ್ರಭಾವವು ಅತ್ಯಧಿಕವಾಗುವುದೆಂದಭಿಪ್ರಾಯವು.

**ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ ।**

(ಋ. ಸಂ. ೭-೪೬-೧)

**ಶತಶೀರ್ಷಾ ರುದ್ರಃ ಸಹಸ್ರಾಕ್ಷಃ ಶತೇಷುಧಿರಧಿಜ್ಯಧನ್ವಾ**

(ಶ. ಬ್ರಾ. ೯-೧-೧-೬)

ಇತ್ಯಾದಿ ವಾಕ್ಯಗಳಲ್ಲಿ ಭಯಂಕರವಾದ ಬಾಣಗಳಿಂದ ಕೂಡಿದ ಬತ್ತಳಿಕೆಗಳನ್ನು ಹಿಡಿದಿರುವ ರುದ್ರನ ವರ್ಣನೆಯಿರುವ ಅಂಶವನ್ನೂ ಇಲ್ಲಿ ಹೆಚ್ಚಾಗಿ ಹೇಳಿ ರುದ್ರನ ಶತ್ರುನಾಶಕರವೂ ಭಯಂಕರವೂ ಆದ ಸ್ವರೂಪವನ್ನೂ ಮರುತ್ತುಗಳ ಸಹಾಯದಿಂದ ಅದು ಇನ್ನೂ ಶಕ್ತಿಯುತವಾಗುವುದನ್ನೂ ತಿಳಿಸಿದೆ.

**ಅಸುರಸ್ಯ**—ಇಲ್ಲಿ ದ್ವಿತೀಯಾವಿಭಕ್ತಿಯ ಪ್ರಯೋಗವಿರುವುದು. ಅಸುರಶಬ್ದಕ್ಕೆ ಇಲ್ಲಿ ಭಾಷ್ಯಕಾರರು ನಿರಸಿತಾರಂ ದೇವಂ—(ಶತ್ರುಗಳನ್ನು) ಪರಾಭವಗೊಳಿಸುವ ದೇವನನ್ನು ಎಂದರ್ಥವನ್ನು ಹೇಳಿರುವರು. ಸಾಧಾರಣವಾಗಿ ಅಸುರಶಬ್ದಕ್ಕೆ ರಾಕ್ಷಸರೆಂಬ ಅರ್ಥವು ರೂಢಿಯಲ್ಲಿದ್ದರೂ ಅನೇಕಕಡೆ ಈ ಶಬ್ದಕ್ಕೆ ದೇವತೆಗಳ ಪರವಾಗಿಯೇ ಅರ್ಥವಿರುವುದು. ಈ ಅಷ್ಟಕದಲ್ಲಿ ಈ ಅಸುರಶಬ್ದ ಪ್ರಯೋಗವು ಸುಮಾರು ಹತ್ತು ಋಕ್ಕುಗಳಲ್ಲಿರುವುದು. ಅಲ್ಲೆಲ್ಲಾ ದೇವತೆಗಳ ಪರವಾಗಿಯೇ ಅರ್ಥವಿರುವುದು.

**ದಿವೋ ಅಸ್ಮೋತ್ಯಸುರಸ್ಯ ವೀರೈರಿಷುಧ್ಯೇವ ಮರುತೋ ರೋದಸ್ಯೋಃ ।**

(ಋ. ಸಂ. ೧-೧೨೨-೧)

ಎಂಬ ಋಕ್ಕಿನಲ್ಲಿ—**ಅಸುರಸ್ಯ ನಿರಸಿತವ್ಯಾನಾಮಸುರಾಣಾಂ ನಿರಸಿತುಃ । ಕರ್ಮಣಿ ಷಷ್ಠೀ । ನಿರಸಿತಾರಂ ತಮೇವ ದೇವಂ (ರುದ್ರಂ)** ಅಸುರರನ್ನು ಪರಾಭವಗೊಳಿಸುವ ರುದ್ರನೆಂದರ್ಥವು.

**ಶತಂ ರಾಜ್ಞೋ ನಾಧಮಾನಸ್ಯ ನಿಷ್ಕಾಞ್ಛತಮಶ್ವಾನ್ಪ್ರಯತಾನ್ತ್ಸದ್ಯ ಆದಂ ।**
**ಶತಂ ಕಕ್ಷೀವಾ ಅಸುರಸ್ಯ ಗೋನಾಂ ದಿವಿ ಶ್ರವೋಽಜರಮಾ ತತಾನ ॥**

(ಋ. ಸಂ. ೧-೧೨೬-೨)

ಇಲ್ಲಿ—**ಅಸುರಸ್ಯ ಧನಾನಾಂ ನಿರಸಿತುರ್ದಾನಶೀಲಸ್ಯ ರಾಜ್ಞಃ ಸ್ವನಯಸ್ಯ ।** ಎಂದರೆ ಧನಾದಿಗಳನ್ನು ದಾನ ಮಾಡುವ ಸ್ವನಯನೆಂಬ ರಾಜನ ಎಂದು ಅಸುರಶಬ್ದವು ಸ್ವನಯರಾಜನ ಪರವಾಗಿರುವುದು.

**ಇಂದ್ರಾಯ ಹಿ ದ್ಯೌರಸುರೋ ಅನಮ್ನತೇಂದ್ರಾಯ ಮಹೀ ಪೃಥಿವೀ ವರೀಮಭಿರ್ದ್ಯುಮ್ನ-ಸಾತಾ ವರೀಮಭಿಃ ॥**

(ಋ. ಸಂ. ೧-೧೩೧-೧)

ಇಲ್ಲಿ—ಅಸುರಶಬ್ದವು **ಅಸುರಃ ನಿರಸನಶೀಲಃ ಶತ್ರೂಣಾಂ ಪುಣ್ಯಕೃತಾಮೇವ ತನ್ನಿವಾಸಾತ್ (ದ್ಯೌಃ ದ್ಯುಲೋಕಃ)** ಯಜ್ಞಾದಿಗಳನ್ನು ಮಾಡುವ ಪುಣ್ಯವಂತರಿಗೆ ಆವಾಸಸ್ಥಾನವಾಗಿದ್ದು ಅವರ ಶತ್ರುಗಳಿಗೆ ಎಡೆಗೊಡದಿರುವ ಸ್ವರ್ಗಲೋಕವೆಂದು ದ್ಯೌಃ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದು.

**ಪ್ರ ಸಾ ಕ್ಷಿತಿರಸುರ ಯಾ ಮಹಿ ಪ್ರಿಯ ಋತಾವಾನಾವೃತಮಾ ಘೋಷತೋ ಬೃಹತ್ ।**

(ಋ. ಸಂ. ೧-೧೫೧-೪)

ಈ ಋಕ್ಕಿನಲ್ಲಿ ಅಸುರಶಬ್ದವು— **ಹೇ ಅಸುರಾ ಅಸುರೌ ಬಲವಂತೌ ಮಿತ್ರಾವರುಣೌ** । ಮಿತ್ರಾವರುಣರಿಗೆ ವಿಶೇಷಣವಾಗಿ ಅವರ ಶಕ್ತಿಸಾಮರ್ಥ್ಯಗಳನ್ನು ಹೇಳುವುದು.

**ತ್ವಂ ರಾಜೇಂದ್ರ ಯೇ ಚ ದೇವಾ ರಕ್ಷಾ ನ್ನ್ಪಾಹ್ಯಸುರ ತ್ವಮಸ್ಮಾನ್ ।**
(ಋ. ಸಂ. ೧-೧೭೪-೧)

ಈ ಋಕ್ಕಿನಲ್ಲಿ— **ಅಸುರ ಶತ್ರೂಣಾಂ ನಿರಸಿತಃ ಹೇ ಇಂದ್ರ ।** ಶತ್ರುಗಳನ್ನು ಪರಾಭವಗೊಳಿಸುವ ಎಲೈ ಇಂದ್ರನೇ, ಎಂದು ಅಸುರಶಬ್ದವು ಇಂದ್ರನ ಪರವಾಗಿ ಪ್ರಯೋಗಿಸಲ್ಪಟ್ಟಿರುವುದು.

**ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಂ ಶರ್ಧೋ ಮಾರುತಂ ಪೃಕ್ಷ ಈಶಿಷೇ ।**
(ಋ. ಸಂ. ೨-೧-೬)

ಈ ಋಕ್ಕಿನಲ್ಲಿ ಅಸುರಶಬ್ದವು— **ಅಸುರಃ ಶತ್ರೂಣಾಂ ನಿರಸಿತಾ ರುದ್ರೋಽಸಿ ।** ಶತ್ರುವನ್ನು ಜಯಿಸತಕ್ಕ ರುದ್ರನೆಂದು ಅರ್ಥವನ್ನು ಹೇಳುವುದು.

**ತ್ವಂ ವಿಶ್ವೇಷಾಂ ವರುಣಾಸಿ ರಾಜಾ ಯೇ ಚ ದೇವಾ ಅಸುರ ಯೇ ಚ ಮರ್ತಾಃ ।**
(ಋ. ಸಂ. ೨-೨೭-೧೦)

ಇಲ್ಲಿ ಅಸುರಶಬ್ದಕ್ಕೆ— **ಹೇ ಅಸುರ ಶತ್ರೂಣಾಂ ಕ್ಷೇಪಕ ವರುಣ ।** ಶತ್ರುಗಳನ್ನು ಪರಾಭವಗೊಳಿಸುವ ಎಂದು ಅರ್ಥವಿದ್ದು ಅಸುರಶಬ್ದವು ವರುಣನ ಪರವಾಗಿರುವುದು.

**ಮಾ ನೋ ವಧೈರ್ವರುಣ ಯೇ ತ ಇಷ್ಟಾವೇನಃ ಕೃಣ್ವಂತಮಸುರ ಭ್ರೀಣಂತಿ ।**
(ಋ. ಸಂ. ೨-೨೮-೭)

ಈ ಋಕ್ಕಿನಲ್ಲಿಯೂ— **ಹೇ ಅಸುರ ಪಾಪಕೃತಾಂ ನಿರಸಿತಃ ವರುಣ ।** ಪಾಪಮಾಡುವವರನ್ನು ನಿಗ್ರಹಿಸುವ ವರುಣನೆಂದು ವರುಣನ ಪರವಾಗಿಯೇ ಇರುವುದು.

**ಬೃಹಸ್ಪತೇ ತಪುಷಾಶ್ನೇವ ವಿಧ್ಯ ವೃಕದ್ವರಸೋ ಅಸುರಸ್ಯ ವೀರಾನ್ ।**
(ಋ. ಸಂ. ೨-೩೦-೪)

ಈ ಋಕ್ಕಿನಲ್ಲಿ **ಅಸುರಸ್ಯ** ಎಂಬ ಶಬ್ದವು **ವೃಕದ್ವರಸಃ** ಎಂಬ ಶಬ್ದಕ್ಕೆ ವಿಶೇಷಣವಾಗಿರುವುದು. **ಸಂವೃತದ್ವಾರಸ್ಯ ಅಸುರಸ್ಯ**— ಬಾಗಿಲನ್ನು ಮುಚ್ಚಿ ತಡೆದಿರುವ ಅಸುರನ ಎಂದು ಅಸುರಶಬ್ದದ ಸಾಮಾನ್ಯಾರ್ಥವೇ ವಿವೃತವಾಗಿರುವುದು.

**ಪಿತಾ ಯಜ್ಞಾನಾಮಸುರೋ ವಿಪಶ್ಚಿತಾಂ ವಿಮಾನಮಗ್ನಿರ್ವಯುನಂ ಚ ವಾಘತಾಂ ।**
(ಋ. ಸಂ. ೩-೩-೪)

ಈ ಋಕ್ಕಿನಲ್ಲಿ— **ಅಸುರೋ ಬಲಪ್ರದಃ** ಎಂದು ಅಸುರಶಬ್ದವು ಅಗ್ನಿ ಪರವಾಗಿ ಪ್ರಯುಕ್ತವಾಗಿರುವುದು.

‖ ವ್ಯಾಕರಣಪ್ರಕ್ರಿಯಾ ‖

**ಪಾಂತಮ್**—ಪಾ ರಕ್ಷಣೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಅಥವಾ ಪಾ ಪಾನೇ ಧಾತು. ಇದಕ್ಕೆ ಔಣಾದಿಕ ಝ ಪ್ರತ್ಯಯ. **ಝೋಂತಃ** (ಪಾ. ಸೂ. ೭-೧-೩) ಎಂಬುದರಿಂದ ಅದಕ್ಕೆ ಅಂತಾದೇಶ. ಪ್ರತ್ಯಯಸ್ವರದಿಂದ ಅಕಾರ ಉದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ರಘುಮನ್ಯವಃ**—ಲಘು ಮನ್ಯುಃ ಯೇಷಾಂ ತೇ ಲಘುಮನ್ಯವಃ. **ವಾಲಮೂಲಲಘ್ವಲಮಂಗುಲೀನಾಂ ವಾ ಲೋ ರತ್ವಮಾಪದ್ಯತೇ** (ಉ. ಸೂ. ೧-೨೯) ಎಂಬ ವಚನದಿಂದ ವಿಕಲ್ಪವಾಗಿ ಲತ್ವವೆಂಬುದರಿಂದ ಇಲ್ಲಿ ಬರುವುದಿಲ್ಲ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಯಜ್ಞಮ್**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಯಜಯಾಚ**—(ಪಾ. ಸೂ. ೩-೩-೯೦) ಎಂಬುದರಿಂದ ನಙ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಮೀಳ್ಹುಷೇ**—**ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಇದಕ್ಕೆ ಚತುರ್ಥೀ ಏಕವಚನ ಪರವಾದಾಗ **ವಸೋಃ ಸಂಪ್ರಸಾರಣಮ್** (ಪಾ. ಸೂ. ೬-೪-೧೩೧) ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. **ಶಾಸಿ ವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ವಸುವಿನ ಸಕಾರಕ್ಕೆ ಇಣ್ಣಿನ ಪರದಲ್ಲಿ ಬಂದುದರಿಂದ ಷತ್ವ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಭರಧ್ವಮ್**—ಭೃಞ್ ಭರಣೇ. ಧಾತು. ಭ್ವಾದಿ. ಇದಕ್ಕೆ ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಧ್ವಮ್ ಪ್ರತ್ಯಯ. ಏತ್ವ ಬಂದಾಗ **ಸವಾಭ್ಯಾಂ ವಾಮೌ** ಎಂಬುದರಿಂದ ಅದಕ್ಕೆ ಅಮಾದೇಶ. ಶಪ್ ವಿಕರಣ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ದಿವಃ**—**ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಸ್ತೋಷಿ**—ಷ್ಟುಞ್ ಸ್ತುತೌ ಧಾತು. ವರ್ತಮಾನಾರ್ಥ ತೋರುವಾಗ **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲುಙ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಚ್ಲೇಃ ಸಿಚ್** ಎಂಬುದರಿಂದ ಸಿಚಾದೇಶ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಅಂಗಕ್ಕೆ ಅಡಾಗಮ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಸುರಸ್ಯ**—ಅಸು ಕ್ಷೇಪಣೇ. ಧಾತು. **ಅಸೇರುರನ್** ಎಂಬುದರಿಂದ ಉರನ್ ಪ್ರತ್ಯಯ. ನಿತ್ತಾದುದರಿಂದ **ಙ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಇಷುಧ್ಯೇವ**—ಇಷವಃ ಧೀಯಂತೇ ಅತ್ರ ಇತಿ ಇಷುಧಿಃ (ಬತ್ತಳಿಕೆ) ಡುಧಾಞ್ ಧಾರಣಪೋಷಣಯೋಃ ಧಾತು. **ಕರ್ಮಣ್ಯಧಿಕರಣಯೋಶ್ಚ** ಎಂಬುದರಿಂದ ಇದಕ್ಕೆ ಅಧಿಕರಣಾರ್ಥದಲ್ಲಿ ಕಿ ಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ ಧಾತುವಿನ ಆಕಾರಕ್ಕೆ **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಲೋಪ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತೀಯಾವಿಭಕ್ತಿ ಪರವಾದಾಗ ಉದಾತ್ತವಾದ ಇಕಾರಕ್ಕೆ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋಹಲ್‌ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

**ಪತ್ನೀ᳚ವ ಪೂರ್ವಹೂ᳚ತಿಂ ವಾವೃಧಧ್ಯಾ᳚ ಉಷಾಸಾನಕ್ತಾ᳚ ಪುರುಧಾ ವಿದಾ᳚ನೇ ।**
**ಸ್ತರೀರ್ನಾತ್ಕಂ᳚ ವ್ಯು᳚ತಂ ವಸಾ᳚ನಾ ಸೂರ್ಯ᳚ಸ್ಯ ಶ್ರಿಯಾ ಸುದೃಶೀ᳚ ಹಿರ᳚ಣ್ಯೈಃ ॥**

॥ ಪದಪಾಠಃ ॥

ಪತ್ನೀ᳚ಽಇವ । ಪೂರ್ವ᳚ಽಹೂತಿಂ । ವವೃಧಧ್ಯೈ᳚ । ಉಷಸಾನಕ್ತಾ᳚ । ಪುರುಧಾ । ವಿದಾ᳚ನೇ ಇತಿ᳚ ।
ಸ್ತರೀಃ । ನ । ಅತ್ಕಂ᳚ । ವಿಽ ಉ᳚ತಂ । ವಸಾ᳚ನಾ । ಸೂರ್ಯ᳚ಸ್ಯ । ಶ್ರಿಯಾ । ಸುಽದೃಶೀ᳚ । ಹಿರ᳚ಣ್ಯೈಃ ॥ ೨ ॥

॥ ಸಾಯಣಭಾಷ್ಯಂ ॥

**ಪತ್ನೀವ ಪತ್ನೀ ಯಥಾ ಪೂರ್ವಹೂತಿಂ ಪತ್ಯುಃ ಪೂರ್ವಾಹ್ವಾನಂ ವವೃಧಧ್ಯೈ ವರ್ಧಯಿತುಂ ಶೀಘ್ರಗತಿರ್ಭವತಿ ತದ್ವದುಷಾಸಾನಕ್ತಾಹೋರಾತ್ರೇ ದೇವತೇ ಅಪಿ ಪುರುಧಾ ಬಹುಪ್ರಕಾರಂ ಬಹುವಿಧೈಃ ಸ್ತೋತ್ರೈರ್ವಿದಾನೇ ಜ್ಞಾಯಮಾನೇ ಸತ್ಯೌ ಪೂರ್ವಹೂತಿಂ ವವೃಧಧ್ಯಾ ಅಸ್ಮದೀಯಂ ಪೂರ್ವಾಹ್ವಾನಂ ವರ್ಧಯಿತುಂ ಶೀಘ್ರಮಾಗಚ್ಛತಮಿತಿ ಶೇಷಃ । ಯದ್ವಾ । ವವೃಧಧ್ಯಾ ಅಸ್ಮದ್ವರ್ಧನಾಯ ಪುರುಧಾ ಬಹುಪ್ರಕಾರಂ ವಿದಾನೇ ವರ್ಧನೋಪಾಯಾಭಿಜ್ಞೇ ಸತ್ಯೌ ಭವತಮಿತಿ ಶೇಷಃ ॥ ಉಷಾಸಾನಕ್ತಾ । ಉಷಾಸೋಷಸಃ । ಪಾ. ೬-೩-೩೧ । ಇತಿ ಪೂರ್ವಪದಸ್ಯೋಷಾಸಾದೇಶಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ ॥ ಅಥ ಕೇವಲೋಷಾ ಉಚ್ಯತೇ । ಸ್ತರೀಃ ಶತ್ರೂಣಾಂ ಹಿಂಸಕಸ್ತೇಜಸಾ-**

**ಚ್ಛನ್ನೋ ವಾದಿತ್ಯಃ ಸ ಇವ ಹಿರಣ್ಯೈರ್ಹಿರಣ್ಯವರ್ಣೈ ರಶ್ಮಿಭಿರ್ವ್ಯೂತಂ ವಿತತಂ ವಿಶೇಷೇಣ ಸಂಬದ್ಧಮತ್ಕಮುಕ್ತಂ ಸಂತತಂ ವಾ ರೂಪಂ ವಸಾನಾಚ್ಛಾದಯಂತೀ ಧಾರಯಂತೀ ಸೂರ್ಯಸ್ಯ ಶ್ರಿಯಾ ಶೋಭಯಾ ಸುದೃಶೀ ಶೋಭನಂ ದೃಶ್ಯಮಾನಾ ಸೂರ್ಯಸ್ಯ ಪುರೋಗಾಮಿನೀ ರಶ್ಮಿಭಿಃ ಖಲ್ವೇಷಾ ಜಗದ್ಭಾಸಯತಿ । ತಾದೃಶ್ಯುಷಾ ಅಸ್ಮತ್ಪೂರ್ವಹೂತಿಂ ಪಾಲಯತ್ವಿತ್ಯರ್ಥಃ । ಯದ್ವಾ । ಹಿರಣ್ಯೈರ್ಹಿತರಮಣೀಯೈಃ ಪ್ರಕಾಶೈರ್ಧನವಿಶೇಷೈರ್ವಾ ಸಹಾಗಚ್ಛತು ॥ ವ್ಯೂತಂ । ವ್ಯೇಞೋ ನಿಷ್ಠಾಯಾಂ ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಸ್ತರೀಃ । ಅವಿತೃಸ್ತೃ ಇತೀಕಾರಪ್ರತ್ಯಯಃ ॥**

॥ ಪ್ರತಿಪದಾರ್ಥ ॥

**ಉಷಾಸಾನಕ್ತಾ**—ಎಲೈ ಹಗಲುರಾತ್ರಿಗಳೇ । **ಪುರುಧಾ**—ಬಹುವಿಧವಾದ (ಸ್ತೋತ್ರಗಳಿಂದ) । **ವಿದಾನೇ**—ತಿಳಿಯಲ್ಪಡಬೇಕಾದ (ನೀವು) । **ಪತ್ನೀ ಇವ**—ಪತ್ನಿಯಂತೆ (ಪತಿಯ ಮೊದಲನೆಯ ಆಹ್ವಾನವನ್ನು ಮನ್ನಿಸಿ ಶೀಘ್ರವಾಗಿ ಬರುವಂತೆ) । **ಪೂರ್ವಹೂತಿಂ**—ಮೊದಲನೆಯ ಆಹ್ವಾನವನ್ನು । **ವವೃಧಧ್ಯೈ**—ವರ್ಧಿಸುವುದಕ್ಕೋಸ್ಕರ ಶೀಘ್ರವಾಗಿ ಬನ್ನಿ । [ಅಥವಾ **ವವೃಧಧ್ಯೈ**—ನಮ್ಮ ಅಭಿವೃದ್ಧಿಗೆ । **ಪುರುಧಾ**—ಬಹುವಿಧವಾದ **ವಿದಾನೇ**—ಉಪಾಯಗಳನ್ನು (ತಿಳಿದಿರುವ ನೀವು) । **ಪತ್ನೀ ಇವ**—ಪತ್ನಿಯಂತೆ । **ಪೂರ್ವಹೂತಿಂ**—(ನಮ್ಮ) ಮೊದಲನೆಯ ಪ್ರಾರ್ಥನೆಯನ್ನು (ಉದ್ದೇಶಿಸಿ) ಬನ್ನಿ] । **ಸ್ತರೀಃ ನ**—ತೇಜೋವಿಶಿಷ್ಟನಾದ (ಶತ್ರುಹಿಂಸಕನಾದ) ಸೂರ್ಯನಂತೆ । **ಹಿರಣ್ಯೈಃ**—ಹಿರಣ್ಯವರ್ಣವ (ಕಿರಣಗಳಿಂದ) ಅಥವಾ ಧನದಿಂದ । **ವ್ಯೂತಂ**—ವಿಶೇಷವಾಗಿ ಸಂಬದ್ಧವಾದ (ಯುಕ್ತವಾದ) **ಅತ್ಕಂ**—ರೂಪವನ್ನು । **ವಸಾನಾ**—ಧರಿಸಿರುವ (ಮತ್ತು) । **ಸೂರಸ್ಯ ಶ್ರಿಯಾ**—ಸೂರ್ಯನಂತೆ ತೇಜಸ್ಸಿನಿಂದ । **ಸುದೃಶೀ**—ಮನೋಹರರೂಪವುಳ್ಳ ಉಷಸ್ಸು । (**ಪೂರ್ವಹೂತಿಂ**—ನಮ್ಮಪ್ರಥಮ ಪ್ರಾರ್ಥನೆಯನ್ನು ಮನ್ನಿಸಲಿ) ।

॥ ಭಾವಾರ್ಥ ॥

ಎಲೈ ಹಗಲು ರಾತ್ರಿಗಳೇ, ಅನೇಕ ಸ್ತುತಿಗಳಿಂದ ಜ್ಞೇಯರಾದ (ನೀವು) ಪತ್ನಿಯು ಪತಿಯ ಪ್ರಥಮ ಆಹ್ವಾನವನ್ನು ಮನ್ನಿಸುವಂತೆ) ನಮ್ಮ ಮೊದಲನೆಯ ಸ್ತುತಿ ರೂಪಕಾಹ್ವಾನವನ್ನು ಅಭಿವೃದ್ಧಿ ಹೊಂದುವಂತೆ ಮಾಡಿ (ನಮ್ಮ ಅಭಿವೃದ್ಧಿಗೆ ನಾನಾಮಾರ್ಗಗಳನ್ನು ತಿಳಿದ ನೀವು ನಮ್ಮ ಮೊದಲನೆಯ ಕರೆಯನ್ನು ಮನ್ನಿಸಿ). ಮತ್ತು ಸೂರ್ಯನ ತೇಜಸ್ಸಿನಿಂದ ಮನೋಹರರೂಪಳೂ, ಸೂರ್ಯನಂತೆ ಸ್ವರ್ಣಕಿರಣಗಳಿಂದ ಯುಕ್ತಳೂ (ವ್ಯಾಪ್ತಳೂ) ಆದ ಉಷೋದೇವಿಯೂ (ನಮ್ಮ ಪ್ರಥಮಾಹ್ವಾನವನ್ನು ಮನ್ನಿಸಲಿ).

## English Translation.

Animated by our deversified praise, hasten, Morning and Night, to attend to our first invocation, as a wife (to the first call of her husband); and may the Dawn, beautiful with the lustre of the (rising) Sun, and robing, like the Sun (her) vast expanse with golden rays, (come to our early rite).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ರಾತ್ರ್ಯುಷಸ್ಸುಗಳ ಸ್ವರೂಪಸೌಂದರ್ಯವನ್ನೂ ಉಪಕಾರಕಸ್ವರೂಪವನ್ನೂ ವರ್ಣಿಸಿ ಅವರ ಅನುಗ್ರಹವನ್ನು ಪ್ರಾರ್ಥಿಸಿದೆ. ಅವರನ್ನು ಪತ್ನಿಗೆ ಹೋಲಿಸಿರುವುದು ಅವರ ಪ್ರೀತ್ಯಭಿಮಾನಗಳನ್ನು ಸೂಚಿಸುತ್ತದೆ.

ಈ ಋಕ್ಕಿನ ಪೂರ್ವಾರ್ಧಕ್ಕೆ ಎರಡುವಿಧವಾದ ಅನ್ವಯವು ಸಾಧ್ಯವಾಗುತ್ತದೆ. ಮೊದಲನೆಯದಾಗಿ,

**ಪುರುಧಾ ವಿದಾನೇ ವವೃಧಧ್ಯೈ—ಬಹುಪ್ರಕಾರಂ ಬಹುವಿಧೈಃ ಸ್ತೋತ್ರೈಃ ಜ್ಞಾಯಮಾನೇ ।** ನಾನಾವಿಧವಾದ ಸ್ತುತಿಗಳಿಂದ ತಿಳಿಯಲ್ಪಡುವವರಾದ ನೀವು ಎಂದೂ, ಎರಡನೆಯದಾಗಿ,

**ವವೃಧಧ್ಯೈ**—ನಮ್ಮ ಅಭಿವೃದ್ಧಿಗಾಗಿ, **ಪುರುಧಾ**—ನಾನಾವಿಧವಾದ ಮಾರ್ಗಗಳನ್ನು, **ವಿದಾನೇ**—ತಿಳಿದಿರುವ ನೀವು ಎಂದೂ ಅರ್ಥವಾಗುತ್ತದೆ. ಉಷಸ್ಸೂ ರಾತ್ರಿಯೂ ಪರ್ಯಾಯರೂಪದಿಂದ ಮಾನವನಿಗೆ ಅನ್ನಾದಿ ಧನಸಂಪತ್ತಿಗೂ, ಹರ್ಷಾದಿ ಸುಖಸಂಪತ್ತಿಗೂ ಕಾರಣವಾಗಿರುವುವು. ವಾಜಿನೀವತೀ, (ಅನ್ನದಾತಳು) **ಸುಮ್ನಾವರೀ** (ಸುಖದಾತಳು) **ಸೂನೃತಾವತೀ** (ಹರ್ಷದಾಯಕವಾದ ವಾಕ್ಕುಳ್ಳವಳು) ಇತ್ಯಾದಿ ಉಷಸ್ಸಿನ ಸ್ವರೂಪವನ್ನು ಸೂಚಿಸುವ ವಿಶೇಷಣಗಳು ವಿಶೇಷ್ಯರೂಪದಲ್ಲಿಯೇ **ಉಷಸ್ಸಿಗೆ** ಪರ್ಯಾಯನಾಮಗಳಾಗಿ ನಿರುಕ್ತದಲ್ಲಿ ಪಠಿತವಾಗಿವೆ (೨–೧೮). ರಾತ್ರ್ಯುಷಸ್ಸುಗಳೇ ಸಕಲ ವಿಧದಲ್ಲಿಯೂ ಜಗನ್ನಿಯಾಮಕಗಳಾಗಿರುವುದರಿಂದ ಎರಡನೆಯ ಅರ್ಥವು ಸರಿಹೋಗುವುದು.

**ಪತ್ನೀ ಇವ**—ಈ ಉಪಮಾನದಲ್ಲಿ ಸೌಂದರ್ಯವೂ, ಸಂಪತ್ಪ್ರಾಪ್ತಿಸ್ಸಾಮ್ಯವೂ, ಅಭಿಮಾನವೂ ಸೂಚಿತವಾಗಿವೆ. ಉಷಸ್ಸಿನ ವರ್ಣನಾಕಾಲಗಳಲ್ಲೆಲ್ಲಾ ಅವಳನ್ನು ಸುಂದರಸ್ತ್ರೀಗೆ ಹೋಲಿಸುವುದು ವಾಡಿಕೆಯಾಗಿದೆ. ಮತ್ತು ಮಕ್ಕಳಿಗೆ ಮಾತೆಯಂತೆಯೂ, ದೊಡ್ಡವರಿಗೆ ಪತ್ನಿಯಂತೆಯೂ ಆಹ್ಲಾದವನ್ನುಂಟುಮಾಡುತ್ತಾಳೆಂದೂ ವರ್ಣಿತವಾಗಿದೆ.

**ಸ್ತರೀಃ—ಶತ್ರೂಣಾಂ ಹಿಂಸಕಃ ; ತೇಜಸಾ ಆಚ್ಛನ್ನೋ ವಾ ಆದಿತ್ಯಃ ।** ಶತ್ರುನಾಶಕನಾದ ಅಥವಾ ತೇಜಸ್ಸಿನಿಂದ ವ್ಯಾಪ್ತನಾದ ಆದಿತ್ಯನು ಎಂದು **ಸ್ತರೀ** ಶಬ್ದಕ್ಕೆ ಅರ್ಥಮಾಡಿದ್ದಾರೆ. ಸಾಧಾರಣವಾಗಿ **ಸ್ತರೀಃ** ಎಂಬ ಪದವು ಬರುವೆಡೆಗಳಲೆಲ್ಲಾ ಅಪ್ರಯೋಜಕವಾದುದು, ಫಲದಾಯಕವಲ್ಲದ್ದು ಎಂಬ ಅರ್ಥವೇ ಇರುತ್ತದೆ. ಉದಾಹರಣೆಗೆ—

**ಸ್ತರೀರು ತ್ವದ್ಭವತಿ ಸೂತ ಉ ತ್ವದ್ಯಥಾವಶಂ ತನ್ವಂ ಚಕ್ರ ಏಷಃ ।**

(ಋ. ಸಂ. ೭-೧೦೧-೩)

ಎಂಬ ಋಕ್ಕಿನಲ್ಲಿ **ಪರ್ಜನ್ಯನ** ಸ್ವರೂಪ ವರ್ಣನೆಯಿದೆ. ಅವನ ಒಂದಂಶವನ್ನು ಬಂಜೆಯಾದ ಗೋವಿಗೆ ಹೋಲಿಸಿದೆ. ಬಂಜೆಯಾದ ಗೋವು ಯಾವ ರೀತಿ ಹಾಲನ್ನು ಕೊಡುವುದಿಲ್ಲವೋ ಅದರಂತೆ ವೃಷ್ಟಿದಾಯಕವಲ್ಲದ್ದು ಎಂದು ಹೋಲಿಸುವಾಗ **ಸ್ತರೀಃ** ಎಂಬ ಶಬ್ದಕ್ಕೆ **ನಿವೃತ್ತಪ್ರಸವಾ ಗೌಃ** ಎಂದು ಸಾಯಣರು ಅರ್ಥಮಾಡಿದ್ದಾರೆ. ಅದರಂತೆಯೇ,

**ಸ್ತರೀರ್ಯತ್ಸೂತ ಸದ್ಯೋ ಅಜ್ಯಮಾನಾ ವ್ಯಥಿರವ್ಯಥೀಃ ಕೃಣುತ ಸ್ವಗೋಪಾ ।**

(ಋ. ಸಂ. ೧೦-೩೧-೧೦)

ಎಂಬ ಋಕ್ಕಿನಲ್ಲೂ ಸಹ ಅದೇ ಅರ್ಥವಾಗುತ್ತದೆ. ತೈತ್ತಿರೀಯ ಸಂಹಿತೆಯಲ್ಲಿ,

**ಕದಾ ಚನ ಸ್ತರೀರಸೀತ್ಯಾಹ ನ ಸ್ತರೀಗ್ಂ ರಾತ್ರಿಂ ವಸತಿ ।**

(ತೈ. ಸಂ. ೧-೫-೮)

ಎಂಬ ವಾಕ್ಯದಲ್ಲಿ **ಸ್ತರೀಗ್ಂ ರಾತ್ರಿಂ** ಎಂಬ ಪದಗಳಿಗೆ ಸಾಯಣರು ತಸ್ಕರ ಮತ್ತು ವೃಶ್ಚಿಕಾದಿಗಳಿಂದ ಕೂಡಿದ ರಾತ್ರಿಯೆಂದರ್ಥಮಾಡಿದ್ದಾರೆ. ಭಟ್ಟಭಾಸ್ಕರರು **ಸ್ತರೀಂ ಛಾದಯಿತ್ರೀಂ ವಿನಾಶಯಿತ್ರೀಂ ರಾತ್ರಿಂ ।** ನಾಶಕರ ವಾದ ಎಂಬರ್ಥವನ್ನು ಮಾಡಿದ್ದಾರೆ. ಎಂದರೆ ಅಲ್ಲೂ ಪ್ರಯೋಜನವನ್ನು ನಾಶಮಾಡುವ, ಅಪ್ರಯೋಜಕವಾದ ಎಂದೇ ಪರಂಪರೆಯಾದ ಅರ್ಥವಾಗುತ್ತದೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲೂ ಸಹ **ಶತ್ರೂಣಾಂ ಹಿಂಸಕಃ** ಎಂದರೆ ಶತ್ರುಗಳ ಪ್ರಯತ್ನವನ್ನು ವ್ಯರ್ಥಮಾಡತಕ್ಕ ಸೂರ್ಯನೆಂದು ಹೇಳಬಹುದು.

**ಅತ್ಕಂ ವಸಾನಾ—ರೂಪಂ ವಸಾನಾ ।** ರೂಪವನ್ನು ಧರಿಸಿರುವ ಎಂದರ್ಥ. ಸುಂದರವಾದ ರೂಪ ವೆಂಬರ್ಥದಲ್ಲಿ ಉಷಸ್ಸಿನ ವರ್ಣನೆಯಿರುವ ಅನೇಕ ಋಕ್ಕುಗಳಲ್ಲಿ ಈ ಪದದ ಪ್ರಯೋಗವಿದೆ. (ಋ. ಸಂ. ೬-೨೯-೩ : ೧೦-೯೫-೮ ಇತ್ಯಾದಿ ಋಕ್ಕುಗಳಲ್ಲಿ ನೋಡಬಹುದು, **ಸೂರ್ಯಸ್ಯ ಪುರೋಗಾಮಿನೀ ರಶ್ಮಿಭಿಃ ಋಲ್ವೇಷಾ ಜಗದ್ಭಾಸಯತಿ ।** ಸೂರ್ಯನಿಗೆ ಪೂರ್ವಭಾವಿಯಾಗಿ ಹುಟ್ಟಿ ಅವನ ಹೊಂಬಣ್ಣದ ರಶ್ಮಿಗಳಿಂದ ವ್ಯಾಪ್ತಳಾಗಿ ಜಗತ್ತನ್ನು ಎಬ್ಬಿಸುತ್ತಾಳೆ ಮತ್ತು ಪ್ರಕಾಶಪಡಿಸುತ್ತಾಳೆ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಪತ್ನೀವ—ಪತ್ಯುರ್ನೋ ಯಜ್ಞಸಂಯೋಗೇ**—(ಪಾ. ಸೂ. ೪-೧-೩೩) ಎಂಬುದರಿಂದ ಸ್ತ್ರೀತ್ವದಲ್ಲಿ ನುಕ್ ಸಂನಿಯೋಗದಿಂದ ಙೀಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಪೂರ್ವಹೂತಿಮ್—**ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. **ಸ್ತ್ರಿಯಾಂ ಕ್ತಿನ್**—(ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಧಾತುವಿಗೆ ಸಂಪ್ರಸಾರಣ. **ಹಲಃ**—(ಪಾ. ಸೂ. ೬-೪-೨) ಎಂಬುದರಿಂದ ಅದಕ್ಕೆ ದೀರ್ಘ. ದ್ವಿತೀಯಾ ಏಕವಚನಾಂತರೂಪ.

**ವವೃಧಧ್ಯೈ**—ವೃಧು ವೃದ್ಧೌ ಧಾತು. ಯಙ್ ಲುಗಂತದ ಮೇಲೆ ತುಮುನರ್ಥತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಕಧ್ಯೈ ಪ್ರತ್ಯಯ. **ಆಗಮಾನುಶಾಸನಮನಿತ್ಯಮ್**— ಎಂಬ ವಚನದಿಂದ ಅಭ್ಯಾಸಕ್ಕೆ ರೀಕಾದಿ ಆಗಮ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಧಕಾರೋತ್ತರಾ ಕಾರವು ಉದಾತ್ತವಾಗುತ್ತದೆ. ಏಜಂತವಾದುದರಿಂದ **ಕೃನ್ಮೇಜಂತಃ** (ಪಾ. ಸೂ. ೧-೧-೩೯) ಎಂಬುದರಿಂದ ಅವ್ಯಯಸಂಜ್ಞಾ ಬರುವುದರಿಂದ **ಅವ್ಯಯಾದಾಪ್ಸುಪಃ**—(ಪಾ. ಸೂ. ೨-೪-೮೨) ಎಂಬುದರಿಂದ ಪರದ ಸುಪ್ಪಿಗೆ ಲುಕ್ ಬರುತ್ತದೆ. ಛಾಂದಸವಾಗಿ ಸಂಹಿತಾದಲ್ಲಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ.

**ಉಷಾಸಾನಕ್ತಾ**— ಉಷಾಶ್ಚ ನಕ್ತಂ ಚ ಉಷಾಸಾನಕ್ತೇ. **ಉಷಸೋಽಷಸಃ** (ಪಾ. ಸೂ. ೬-೩-೩೧). ಎಂಬುದರಿಂದ ದೇವತಾದ್ವಂದ್ವತೋರುವಾಗ ಉಷಸ್ ಶಬ್ದಕ್ಕೆ ಉಷಾಸ್ ಆದೇಶ ಬರುತ್ತದೆ. **ಸುಪಾಂಸುಲುಕ್**— (ಪಾ. ಸೂ. ೩-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೪೧). ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ.

**ಸ್ತರೀಃ**— ಸ್ತೃಞ್ ಆಚ್ಛಾದನೇ. ಧಾತು. **ಅವಿತೃಸ್ತೃ ತಂತ್ರಿಭ್ಯ**—(ಉ. ಸೂ. ೪–೪೩೮) ಎಂಬುದರಿಂದ ಈಕಾರರೂಪ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ. ಙ್ಯಂತವಾಗದಿರುವುದರಿಂದ **ಹಲ್‌ಙ್ಯಾಭ್ಯೋ**— ಸೂತ್ರದಿಂದ ಸುಲೋಪ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವ್ಯುತಮ್**—ವಿ ಉಪಸರ್ಗ. ವೇಞ್ ತಂತುಸಂತಾನೇ ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ**— (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ಇದು ಕಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ. **ವಚಿಸ್ವಪಿ ಯಜಾದೀನಾಂ ಕಿತಿ**—(ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಉಪಸರ್ಗದ ಇಕಾರಕ್ಕೆ ಯಣಾದೇಶ. **ಗತಿರನಂತರಃ** (ಪಾ. ಸೂ. ೬–೨–೪೯) ಎಂಬುದರಿಂದ ಗತಿಗೆ (ವಿ) ಉದಾತ್ತಸ್ವರ ಬರುತ್ತದೆ. ಅನುದಾತ್ತ ಪರವಾದಾಗ ಉದಾತ್ತವಾದ ಇಕಾರಕ್ಕೆ ಯಣಾದೇಶ ಬಂದುದರಿಂದ **ಉದಾತ್ತ ಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಅನುದಾತ್ತಕ್ಕೆ ಸಂಹಿತಾ ದಲ್ಲಿ ಸ್ವರಿತಸ್ವರ ಬಂದಿದೆ.

**ವಸಾನಾ**—ವಸ ಆಚ್ಛಾದನೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸ್ತ್ರೀತ್ವ ವಿವಕ್ಷಾ ಮಾಡಿದಾಗ ಅದಂತವಾದುದರಿಂದ ಟಾಪ್. ಪ್ರಥಮಾ ಏಕವಚನಾಂತರೂಪ.

**ಸೂರ್ಯಸ್ಯ**—ಸುವತಿ ಕರ್ಮಣಿ ಲೋಕಂ ಪ್ರೇರಯತಿ ಇತಿ ಸೂರ್ಯಃ. ಷೂ ಪ್ರೇರಣೇ. ಧಾತು. ತುದಾದಿ. **ರಾಜಸೂಯ ಸೂರ್ಯ**—(ಪಾ. ಸೂ. ೩-೧-೧೧೪) ಎಂಬುದರಿಂದ ನಿಪಾತಿತವಾಗಿದೆ.

**ಶ್ರಿಯಾ**—ತೃತೀಯಾ ಏಕವಚನಾಂತರೂಪ. **ಸಾವೇಕಾಚಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಮುಮುತ್ತು ನಃ ಪರಿಜ್ಮಾ ವಸರ್ಹಾ ಮುಮುತ್ತು ವಾತೋ ಅಪಾಂ ವೃಷಣ್ವಾನ್ ।

ಶಿಶೀತಮಿಂದ್ರಾಪರ್ವತಾ ಯುವಂ ನಸ್ತನ್ನೋ ವಿಶ್ವೇ ವರಿವಸ್ಯಂತು ದೇವಾಃ ॥ ೩ ॥

॥ ಪದಪಾಠಃ ॥

ಮಮತ್ತು । ನಃ । ಪರಿऽಜ್ಮಾ । ವಸರ್ಹಾ । ಮಮತ್ತು । ವಾತಃ । ಅಪಾಂ । ವೃಷಣ್ऽವಾನ್ ।
ಶಿಶೀತಂ । ಇಂದ್ರಾಪರ್ವತಾ । ಯುವಂ । ನಃ । ತತ್ । ನಃ । ವಿಶ್ವೇ । ವರಿವಸ್ಯಂತು । ದೇವಾಃ ॥ ೩ ॥

॥ ಸಾಯಣಭಾಷ್ಯಂ ॥

**ನೋऽಸ್ಮಾನ್ವಸರ್ಹಾ ವಸನಾಹೋರ್ಃ ಗಾರ್ಹಪತ್ಯಾದಿರೂಪೇಣ । ಯದ್ವಾ । ವಾಸಕಾನಾಮಾಚ್ಛಾದಕಾನಾಂ ವೃಕ್ಷಾದೀನಾಂ ಹಂತಾಗ್ನಿಃ । ಅಥವಾ । ವಸರ್ಹಾ ವಾಸಾಹೋರ್ಃ ವಾಸರಸ್ಯ ಗಮಯಿತಾ । ಪರಿಜ್ಮಾ ಪರಿತೋ ಗಂತಾದಿತ್ಯೋ ಮಮತ್ತು । ಮಾದಯತು । ತಥಾಪಾಂ ವೃಷ್ಟ್ಯುದಕಾನಾಂ ವೃಷಣ್ವಾನ್ ವರ್ಷಣವಾನ್ ವೃಷ್ಟ್ಯುತ್ಪಾದಕೋ ವಾತೋ ವಾಯುರಸ್ಮಾನ್ಮಮತ್ತು । ಕಿಂಚ ಹೇ ಇಂದ್ರಾಪರ್ವತಾ । ಇಂದ್ರಃ ಪ್ರಸಿದ್ಧಃ । ಪರ್ವತಃ ಪರ್ವವಾನ್ ವೃಷ್ಟ್ಯಾದಿಪೂರಣವಾನ್ಪರ್ಜನ್ಯಃ । ತೌ ಯುವಂ ಯುವಾಂ ನೋऽಸ್ಮಾನಸ್ಮದ್ಬುದ್ಧಿಂ ವಾ ಶಿಶೀತಂ । ತೀಕ್ಷ್ಣೀಕುರುತಂ । ಶೋಧಯತಮಿತ್ಯರ್ಥಃ । ತತ್ತಸ್ಮಾತ್ ಯಸ್ಮಾದಹಂ ಸರ್ವಾನ್ದೇವಾನ್ ಸ್ತೌಮಿ ತಸ್ಮಾದ್ವಿಶ್ವೇ ಸರ್ವೇऽಪಿ ದೇವಾ ನೋऽಸ್ಮಾಕಂ ವರಿವಸ್ಯಂತು । ಪ್ರಭೂತಮನ್ನಂ ಪ್ರದಾತುಮಿಚ್ಛಂತು । ಸಮೃದ್ಧಾನ್ನಪ್ರದಾನೇನ ಪ್ರೀಣಯಂತ್ವಿತ್ಯರ್ಥಃ ॥ ಮಮತ್ತು । ಮದೀ ಹರ್ಷೇ । ಅಂತರ್ಭಾವಿತಣ್ಯರ್ಥಾಲ್ಲೋಟಿ ಛಾಂದಸೋ ವಿಕರಣಸ್ಯ ಶ್ಲುಃ । ದ್ವಿರ್ವಚನಂ । ಶಿಶೀತಂ । ಈ ಹಲ್ಯಘೋರಿತೀತ್ವಂ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಇಂದ್ರಾಪರ್ವತೇತ್ಯತ್ರ ದೇವತಾದ್ವಂದ್ವೇ ಚೇತಿ ಪೂರ್ವಪದಸ್ಯಾನಙಾದೇಶಃ ॥**

॥ ಪ್ರತಿಪದಾರ್ಥ ॥

ನಃ—ನಮಗೆ । **ವಸರ್ಹಾ**—ಗಾರ್ಹಪತ್ಯಾದಿ ನಾನಾರೂಪಿಯಾದ (ವೃಕ್ಷಾದಿಹಂತೃವಾದ) ಅಗ್ನಿಯು ಮತ್ತು । (**ವಸರ್ಹಾ**—ದಿನಗಳನ್ನು ಕಳೆಯುವಂತೆ ಮಾಡುವ) । **ಪರಿಜ್ಮಾ**—ಸುತ್ತಲೂ ಸಂಚರಿಸುವ (ಆದಿತ್ಯನು) । **ಮಮತ್ತು**—ಸಂತೋಷವನ್ನುಂಟುಮಾಡಲಿ । (**ತಥಾ**—ಹಾಗೆಯೇ) । **ಅಪಾಂ**—ಮಳೆ ನೀರನ್ನು । **ವೃಷಣ್ವಾನ್**—ಸುರಿಸುವ । **ವಾತಃ**—ವಾಯುವು । **ಮಮತ್ತು**—(ನಮಗೆ) ಸಂತೋಷವನ್ನುಂಟುಮಾಡಲಿ । (ಮತ್ತು) **ಹೇ ಇಂದ್ರಾಪರ್ವತಾ**—ಎಲೈ ಇಂದ್ರ ಮತ್ತು (ವೃಷ್ಟ್ಯಾದಿ ಪೂರ್ಣನಾದ) ಪರ್ಜನ್ಯರೇ । **ಯುವಂ**—ನೀವಿಬ್ಬರು । **ನಃ**—ನಮ್ಮ (ಬುದ್ಧಿಯನ್ನು) ಅಥವಾ (ನಮ್ಮನ್ನು) । **ಶಿಶೀತಂ**—ತೀಕ್ಷ್ಣವನ್ನಾಗಿ ಮಾಡಿ ಅಥವಾ (ಶುದ್ಧವನ್ನಾಗಿ ಮಾಡಿ) । **ತತ್**—ಆದ್ದರಿಂದ (ನಾನು ಎಲ್ಲ ದೇವತೆಗಳನ್ನು ಸ್ತುತಿಸುವುದರಿಂದ) । **ವಿಶ್ವೇ ದೇವಾಃ**—ಎಲ್ಲಾ ದೇವತೆಗಳೂ । **ನಃ**—ನಮಗೆ । **ವರಿವಸ್ಯಂತು**—ಪ್ರಭೂತಾನ್ನವನ್ನು ಕೊಡಲಿಚ್ಛಿಸಲಿ.

॥ ಭಾವಾರ್ಥ ॥

ಗಾರ್ಹಪತ್ಯಾದಿರೂಪಿಯಾದ ಅಥವಾ—ವೃಕ್ಷಾದಿಹಂತೃವಾದ ಅಗ್ನಿಯೂ ಮತ್ತು (ದಿನಾಧಿಪತಿಯೂ) ಸರ್ವತ್ರ ಸಂಚರಿಸುವವನೂ ಆದ ಆದಿತ್ಯನೂ ನಮಗೆ ಸಂತೋಷವನ್ನುಂಟುಮಾಡಲಿ; ಮಳೆಯನ್ನುಂಟುಮಾಡುವ ವಾಯುವೂ

(ನಮಗೆ) ಸಂತೋಷವನ್ನುಂಟುಮಾಡಲಿ ; ಮತ್ತು ಎಲೈ ಇಂದ್ರ ಮತ್ತು (ವೃಷ್ಟ್ಯಾದಿ ಪೂರ್ಣನಾದ) ಪರ್ಜನ್ಯರೇ (ನೀವು) ನಮ್ಮ ಬುದ್ಧಿಯನ್ನು ಶುದ್ಧಿಮಾಡಿ.; ಎಲ್ಲಾ ದೇವತೆಗಳೂ (ನಮ್ಮಿಂದ ಸ್ತುತರಾದುದರಿಂದ) ನಮಗೆ ಹೆಚ್ಚಾದ ಆಹಾರವನ್ನು ಅನುಗ್ರಹಿಸಲಿ.

## English Translation.

May the circumambient divinity, the wearer of various forms, grant us delight; May the wind, the shedder of rain, grant us delight; do you, Indra and Parvata. sharpen our (intellects), and may all the gods show us favour and grant us abundant food.

॥ ವಿಶೇಷವಿಷಯಗಳು ॥

**ವಸರ್ಹಾ—ವಸನಾರ್ಹೋ ಗಾರ್ಹಪತ್ಯಾದಿರೂಪೇಣ। ಯದ್ವಾ। ವಾಸಕಾನಾಮಾಚ್ಛಾದಕಾನಾಂ ವೃಕ್ಷಾದೀನಾಂ ಹಂತಾ ಅಗ್ನಿಃ। ಅಥವಾ ವಸರ್ಹಾ ವಾಸಾರ್ಹೋ ವಾಸರಸ್ಯ ಗಮಯಿತಾ ಪರಿಜ್ಮಾ ಪರಿತೋ ಗಂತಾ ಆದಿತ್ಯಃ।** ಗಾರ್ಹಪತ್ಯಾದಿ ನಾನಾ ರೂಪಗಳನ್ನು ಧರಿಸುವ ಅಥವಾ ತನ್ನಲ್ಲಿರಿಸಿದ ಕಾಷ್ಠಾದಿಗಳನ್ನು ನಾಶಮಾಡುವ ಅಗ್ನಿ ಅಥವಾ ಉಷರ್ಹಾ ಎಂಬುದು ವಸರ್ಹಾ ಎಂದಾಗಿ ಉಷಃಕಾಲದಲ್ಲಿ ಕತ್ತಲನ್ನು ನಾಶಮಾಡುವ ಅಥವಾ ದಿನಗಳನ್ನು ಕಳೆಯುವಂತೆ ಮಾಡುವ ಆದಿತ್ಯನೆಂದು ಹೇಳಿದೆ. ಇದೇ ಋಕ್ಕನ್ನು ತೈತ್ತಿರೀಯ ಸಂಹಿತೆಯಲ್ಲಿ ವಿವರಿಸುವಾಗ (ತೈ. ಸಂ. ೨-೧-೧೧) ಭಟ್ಟಭಾಸ್ಕರರೂ **ವಸರ್ಹಾ—ಅಗ್ನಿಹೋತ್ರಶರಣಾಭಿಮುಖಸ್ಥಾನಾರ್ಹಾ ವಸನಾರ್ಹಾ (ಪೃಷೋದರಾದಿತ್ವಾತ್ ನಾ ಶಬ್ದೋ ಲುಪ್ಯತೇ) ಯದ್ವಾ ಛಾದಯಿತ್ರೂಣಾಂ ಕಾಷ್ಠಾದೀನಾಂ ಹಂತಾ ಅಗ್ನಿಃ ಯದ್ವಾ ವಾಸರಸ್ಯ ಗಮಯಿತಾ ಆದಿತ್ಯ ಉಚ್ಯತೇ**—ಎಂದು ಮೇಲಿನ ರೀತಿಯಲ್ಲಿಯೇ ಅರ್ಥಮಾಡಿದ್ದಾರೆ. ಯಜ್ಞಗೃಹದಲ್ಲಿರುವ ಅಗ್ನಿಗಾಗಲಿ ಅಥವಾ ಆದಿತ್ಯರೂಪದ ಅಗ್ನಿಗಾಗಲಿ ವಿಶೇಷಣವಾಗಿದೆ.

**ವೃಷಣ್ವಾನ್—ವರ್ಷಣವಾನ್ ವೃಷ್ಟ್ಯುತ್ಪಾದಕಃ।** ವೃಷ್ಟಿಯನ್ನು ಉತ್ಪನ್ನ ಮಾಡುವ **ವಾತಃ** ಎಂದು ಸಾಯಣರೂ, **ಅಪಾಂ ವೃಷಾ ವರ್ಷಿತಾ ಪರ್ಜನ್ಯಃ ತದ್ವಾನ್ ವಾತಃ।** ವೃಷ್ಟಿಯನ್ನು ಸುರಿಸತಕ್ಕ ಪರ್ಜನ್ಯನೊಡಗೂಡಿದ ವಾಯುವೆಂದು ಭಟ್ಟಭಾಸ್ಕರರೂ (ತೈ. ಸಂ. ೨-೧-೧೧) ಅರ್ಥಮಾಡಿದ್ದಾರೆ.

**ಇಂದ್ರಾಪರ್ವತಾ—ಇಂದ್ರಃ ಪ್ರಸಿದ್ಧಃ। ಪರ್ವತಃ ಪರ್ವವಾನ್ ವೃಷ್ಟ್ಯಾದಿಪೂರಣವಾನ್ ಪರ್ಜನ್ಯ: ಪರ್ವತ** ವೆಂದರೆ **ಪರ್ಜನ್ಯ**ದೇವತೆಯೆಂದು ಸಾಯಣರು ಅರ್ಥಮಾಡಿದ್ದಾರೆ. **ಪರ್ವತಸ್ಸಂವತ್ಸರ**—ಇತ್ಯೇತೇ ಸಂವತ್ಸರವೆಂಬ ಅರ್ಥವೂ ಉಂಟೆಂದು ಭಟ್ಟಭಾಸ್ಕರರು ಹೇಳಿದ್ದಾರೆ. ಯಾವ ಅರ್ಥವಾದರೂ ಇಲ್ಲಿ **ಪರ್ವತ** ಶಬ್ದವು ಒಂದು ಆರಾಧ್ಯದೇವತೆಯ ಪರ್ಯಾಯಪದವಾಗಿದೆಯೆಂಬುದು ಸ್ಪಷ್ಟವಾಗಿದೆ. ಈ ಪದವನ್ನು ಶತ್ರುಪರ್ಯಾಯವಾಗಿಯೂ ಉಪಯೋಗಿಸಿ **ಪರ್ವತಚ್ಛೇದನದಿಂದ ಇಂದ್ರನು** ವೃಷ್ಟಿಯನ್ನು ಸುರಿಸಿದನು, ಇತ್ಯಾದಿಯಾಗಿ ಅನೇಕಕಡೆಗಳಲ್ಲಿ ಹೇಳಿರುವುದರಿಂದ ಈ ಪದವನ್ನು ಉಪಯೋಗಿಸಿರುವ ವಿಷಯದಲ್ಲಿ ವಿಮರ್ಶೆಯು ಉಚಿತವಾಗಿದೆ.

**ಪರ್ವತ** ಶಬ್ದದ ಪ್ರಯೋಗವು **ಇಂದ್ರ** ಮತ್ತು **ಮರುತ್ತು**ಗಳ ಸೂಕ್ತಗಳಲ್ಲಿಯೇ ಅಧಿಕವಾಗಿದೆ. ಇದರ ಸಾಧಾರಣವಾದ ಅರ್ಥವು ಪರ್ವತ (ಬೆಟ್ಟ)ವೆಂದೇ ಆದರೂ ಇದು **ಮೇಘ** ಪರ್ಯಾಯವಾಗಿರುವುದು ವಾಡಿಕೆಯಾಗಿದೆ. ನಿರುಕ್ತಕಾರರು **ಪರ್ವವಾನ್ ಪರ್ವತಃ। ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ। ಮೇಘೋಽಪಿ ಗಿರಿರೇತಸ್ಮಾದೇವ।** (ನಿ. ೧-೨೦.) **ತುಂಬು** ಎಂಬರ್ಥವನ್ನು ಕೊಡುವ ಪೃಧಾತುವಿನಿಂದಾಗಲೀ ಆರಾಧಿಸು ಅಥವಾ ತೃಪ್ತಿಗೊಳಿಸು ಎಂಬರ್ಥವನ್ನು ಕೊಡುವ **ಪ್ರೀ** ಧಾತುವಿನಿಂದಾಗಲೀ ನಿಷ್ಪನ್ನವಾದ **ಪರ್ವ** ಶಬ್ದದಿಂದ **ಪರ್ವತ**ವೆಂದಾಗಿದೆಯೆಂದು ತೋರಿಸಿ **ಪರ್ವತ** (ಬೆಟ್ಟ) ಅಥವಾ **ಮೇಘ** ಎಂದಾಗುತ್ತದೆಯೆಂದು ನಿರ್ವಚನವನ್ನು ಮಾಡಿದ್ದಾರೆ. ಈ ಶಬ್ದ ವ್ಯುತ್ಪತ್ತಿಯು ಬರಿದಾಗಿರುವ ಪ್ರದೇಶವನ್ನು ತುಂಬುವುದು ಎಂಬಭಿಪ್ರಾಯವನ್ನಾಗಲಿ ಅಥವಾ ಭೂತಗಳನ್ನು (ವೃಷ್ಟ್ಯಾದಿಗಳಿಂದ) ತೃಪ್ತಿಪಡಿಸುವುದು ಎಂಬಭಿಪ್ರಾಯವನ್ನಾಗಲಿ ಕೊಡುತ್ತದೆ. ಇದರಲ್ಲಿ ನಿರೋಧಕವಾದ ಪರ್ವತ ವಾವುದು, ಉಪಕಾರಕವಾದ ಪರ್ವತವಾವುದು ಎಂಬುದನ್ನು ಗಮನಿಸಬೇಕು.

ಸಾಧಾರಣವಾಗಿ ಅಸುರರೊಂದಿಗೂ, ಪರ್ವತಗಳೊಂದಿಗೂ ಇಂದ್ರನ ಹೋರಾಟವನ್ನು ತಮಸ್ತೇಜಸ್ಸುಗಳ ಹೋರಾಟವೆಂದು ಹೇಳಬಹುದು.

**ವಿ ಚಿದ್ವೃತ್ರಸ್ಯ ದೋಧತೋ ವಜ್ರೇಣ ಶತಪರ್ವಣಾ। ಶಿರೋ ಬಿಭೇದ ವೃಷ್ಣಿನಾ ॥**

(ಋ. ಸಂ ೮-೬-೬)

ಎಂಬ ಋಕ್ಕಿನಲ್ಲಿ ಶತಸಂಖ್ಯಾಕವಾದುದೂ, ರಶ್ಮಿರೂಪವಾದುದೂ ಆದ ಪರ್ವಗಳುಳ್ಳ ವಜ್ರಾಯುಧದಿಂದ ತಮೋರೂಪನಾದವನೂ ಆವರಕನಾದವನೂ ಆದ ಅಸುರನನ್ನು ನಾಶಮಾಡಿದನು. ಇತ್ಯಾದ್ಯುದಾಹರಣೆಗಳಿಂದ **ವೃತ್ರಾದಿ** ಪದಗಳೂ ಸಹ ಜಗತ್ತನ್ನು ಆವರಿಸುವ ತಮಸ್ಸಿನ ಭೂತಾಕಾರವನ್ನು ತೋರಿಸುವಂತೆ **ಪರ್ವತ** ಶಬ್ದವೂ ಸಹ ಪರ್ವತಾಕಾರದ ತಮಸ್ಸನ್ನು ನಿರ್ದೇಶಿಸುತ್ತದೆಯೆಂದು ಹೇಳಬಹುದು. ಇದಲ್ಲದೇ ಕೇವಲ ಬೆಟ್ಟ ಅಥವಾ ಮೇಘವೆಂದು ಸಾಧಾರಣವಾದ ಅರ್ಥವನ್ನು ಮಾಡಿದರೆ ಆಗ ಸನ್ನಿವೇಶಗಳಿಗನುಗುಣವಾದ ಪೂರ್ಣಾರ್ಥವನ್ನು ಕೊಡುವುದಿಲ್ಲ. ಹೇಗೆಂದರೆ, **ಪರ್ವತ** ಹನನದಿಂದ ಮರೆಮಾಡಿ ಇರಿಸಿದ ಗೋವುಗಳನ್ನೂ ಉದಕಗಳನ್ನೂ ಬಿಡಿಸುವುದೂ ಮತ್ತು ಉಷಸ್ಸನ್ನೂ ಸೂರ್ಯನನ್ನೂ ಆವಿರ್ಭಾವವಾಗುವಂತೆ ಮಾಡುವುದೂ ಹೀಗೆ ನಾಲ್ಕುವಿಧವಾದ ಕಾರ್ಯ ಸಾಧನೆಯು ವರ್ಣಿತವಾಗಿದೆ. ಆದುದರಿಂದ ಪರ್ವತಶಬ್ದಕ್ಕೆ ಕೇವಲ ಮೇಘವೆಂದೇ ಅರ್ಥಮಾಡಿದರೆ ಅದು ಸನ್ನಿವೇಶಗಳಿಗನುಗುಣವಾಗಿರುವುದಿಲ್ಲ.

**ಅದರ್ದರುತ್ಸಮಸೃಜೋ ವಿ ಖಾನಿ ತ್ವಮರ್ಣವಾನ್ಬದ್ಬಧಾನಾँ ಅರಮ್ಣಾಃ।**
**ಮಹಾಂತಮಿಂದ್ರ ಪರ್ವತಂ ವಿ ಯದ್ವಃ ಸೃಜೋ ವಿ ಧಾರಾ ಅವ ದಾನವಂ ಹನ್ ।**

(ಋ. ಸಂ. ೫-೩೨-೧)

ಎಂಬ ಋಕ್ಕಿನಲ್ಲಿಯೂ,

**ಶಿಶುಂ ನದೀನಾಂ ಹರಿಮದ್ರಿಬುಧ್ನಮಿತಿ ಗಿರಿರ್ವಾ ಅದ್ರಿರ್ಗಿರಿಬುಧ್ನಾ ॥**

(ಶ. ಬ್ರಾ. ೭-೫-೨-೧೮)

ಎಂಬ ಬ್ರಾಹ್ಮಣವಾಕ್ಯದಲ್ಲಿಯೂ ಸಹ **ಪರ್ವತ, ಮೇಘ** ಎಂಬ ಪದಗಳಿಗೆ ಒಂದು ಅತಿಶಯವಾದುದೂ ಅಲೌಕಿಕವಾದುದೂ ಆದ ಅರ್ಥವಿರುವುದಾಗಿ ತಿಳಿಯುತ್ತದೆ. ಇದು ಪರ್ವತಾಕಾರವಾದ ತಮೋರಾಶಿಯೆಂದೂ, ದ್ಯುಲೋಕಸ್ಥ

ವೆಂದೂ, ಉದಕವನ್ನೂ ಗೋವನ್ನೂ ಮರೆಸಿಕೊಂಡಿರುವುದಾಗಿಯೂ ವರ್ಣಿತವಾಗಿದೆ. ಈ ತಮಸ್ಸನ್ನು ಭೇದಿಸಿ ಇಂದ್ರನು ಮರುತ್ತುಗಳೂ ಉದಕವನ್ನೂ, ತೇಜಸ್ಸನ್ನೂ ಪ್ರಸರಿಸುವಂತೆ ಮಾಡುತ್ತಾನೆ.

**ಅಹನ್ನಹಿಂ ಪರ್ವತೇ ಶಿಶ್ರಿಯಾಣಂ ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ ।**

(ಋ. ಸಂ. ೧-೩೨-೨)

ಇತ್ಯಾದಿ ಋಕ್ಕುಗಳಲ್ಲಿ **ಅಹಿ, ಶಂಬರ, ವೃತ್ರ** ಇತ್ಯಾದ್ಯಸುರರು ಈ ಪರ್ವತರೂಪವಾದ ತಮೋರಾಶಿಯಲ್ಲಿ ಅಡಗಿ ಪ್ರವಹಿಸುವ ನೀರನ್ನು ತಡೆಯುವುದರಿಂದ ಅವರನ್ನು ನಾಶಮಾಡುವ ಇಂದ್ರನು ಸ್ತುತ್ಯನು ಎಂದಿದೆ. ಹೀಗೆಯೇ ಅನೇಕ ಕಡೆಗಳಲ್ಲಿ **ಪರ್ವತ** ಪದವು ಶತ್ರುಪರ್ಯಾಯವಾಗಿಯೂ, ಅಥವಾ ಶತ್ರುಗಳಿಗೆ ಆಶ್ರಯವಾಗಿಯೂ ಇರುವ ವರ್ಣನೆಯಿದೆ. ಆದುದರಿಂದಲೇ, **ಅರಂಸ್ತ ಪರ್ವತಶ್ಚಿತ್ಸರಿಷ್ಯನ್** (ಋ. ಸಂ. ೨-೧೧-೭); **ಶುಷ್ಮಾಚ್ಚಿದಸ್ಯ ಪರ್ವತಾ ಭಯಂತೇ** (ಋ. ಸಂ. ೨-೧೨-೧೩) ಇತ್ಯಾದಿ ಋಕ್ಕುಗಳಲ್ಲಿ ತೇಜೋರೂಪಿಯಾದ ಇಂದ್ರನು ಪ್ರತ್ಯಕ್ಷವಾದೊಡನೆಯೇ **ಪರ್ವತ**ರೂಪಿಗಳಾದ ತಮೋರಾಶಿಗಳು ಭಯದಿಂದ ನಡುಗಿದವೆಂದೂ, ಅವನ್ನು ಇಂದ್ರನು ಪಾತಾಳದಲ್ಲಿ ಅಡಗಿಸಿದನೆಂದೂ ಹೇಳಿದೆ—

ಈ ವರ್ಣನೆಗಳಿಗೆ ವಿರುದ್ಧವಾಗಿ **ಪರ್ವತವು** ತೇಜೋರೂಪಿಯಾದ ವಜ್ರಾಯುಧವೆಂದೂ, ವೃಷ್ಟ್ಯುದಕಾದಿಗಳಿಗೆ ಅಧಿದೇವತೆಯಾದ **ಪರ್ಜನ್ಯ**ನೆಂದೂ ಸಹ ಅನೇಕ ಕಡೆಗಳಲ್ಲಿ ಹೇಳಿದೆ.

**ಪ್ರಾಕ್ತಾದಪಾಕ್ತಾದಧರಾದುದಕ್ತಾದಭಿ ಜಹಿ ರಕ್ಷಸಃ ಪರ್ವತೇನ ।**

(ಋ. ಸಂ. ೭-೧೦೪-೧೯)

**ಅಸ್ಮೇ ರುದ್ರಾ ಮೇಹನಾ ಪರ್ವತಾಸೋ ವೃತ್ರಹತ್ಯೇ ಭರಹೂತೌ ಸಜೋಷಾಃ ।**

(ಋ. ಸಂ. ೮-೬೩-೧೨)

ಇತ್ಯಾದಿ ಋಕ್ಕುಗಳಲ್ಲಿ ಪರ್ವತಗಳು ಶತ್ರುನಾಶಕಾರ್ಯದಲ್ಲಿ ಇಂದ್ರನಿಗೆ ಸಹಾಯಕಗಳಾದ ಸಾಧನಗಳಾಗಿವೆ.

**ಪ್ರ ಪೂಷಣಂ ವಿಷ್ಣುಮಗ್ನಿಂ ಪುರಂಧಿಂ ಸವಿತಾರಮೋಷಧೀಃ ಪರ್ವತಾಂಶ್ಚ ।**

(ಋ. ಸಂ. ೬-೨೧-೯)

**ಶಂ ನಃ ಪರ್ವತಾ ಧ್ರುವಯೋ ಭವಂತು ಶಂ ನಃ ಸಿಂಧವಃ ಶಮು ಸನ್ತ್ವಾಪಃ ।**

(ಋ. ಸಂ. ೭-೩೫-೮)

ಇತ್ಯಾದಿ ಋಕ್ಕುಗಳಲ್ಲಿ **ಪರ್ವತಕ್ಕೆ** ಮಿತ್ರ, ವರುಣ, ಪೂಷ ಮುಂತಾದ ದೇವತೆಗಳೊಡನೆ ಆಹ್ವಾನವಿದೆ.

**ಯುವಂ ತಮಿಂದ್ರಾಪರ್ವತಾ ಪುರೋಯುಧಾ ಯೋ ನಃ ಪೃತನ್ಯಾದಪ ತಂತಮಿದ್ಧತಂ ವಜ್ರೇಣ ತಂತಮಿದ್ಧತಂ ।**

(ಋ. ಸಂ. ೧-೧೩೨-೬)

**ಇಂದ್ರಾಪರ್ವತಾ ಬೃಹತಾ ರಥೇನ ವಾಮೀರಿಷ ಆ ವಹತಂ ಸುವೀರಾಃ ।**

(ಋ. ಸಂ. ೩-೫೩-೧)

ಎಂಬ ಕಡೆಗಳಲ್ಲಿಯೂ ಪ್ರಕೃತವಾದ ಋಕ್ಕಿನಲ್ಲಿಯೂ **ಇಂದ್ರನಿಗೂ, ಪರ್ವತಕ್ಕೂ** ಜೊತೆಯಲ್ಲಿ ಆಹ್ವಾನವೂ ಸ್ತುತಿಯೂ ಇದೆ. ಇಲ್ಲಿ **ಪರ್ವತವೆಂದರೆ ಪರ್ಜನ್ಯ**ನೆಂಬರ್ಥವೆಂದು ಸಾಯಣರು ಹೇಳಿದ್ದಾರೆ. ಇಲ್ಲಿ **ಪರ್ವತವು** ಆರಾಧ್ಯ ದೇವತೆ.

**ಶಿಶೀತಂ—ತೀಕ್ಷ್ಣೀಕುರುತಂ, ಶೋಧಯತಮಿತ್ಯರ್ಥಃ।** ನಮ್ಮನ್ನು ತೀಕ್ಷ್ಣರನ್ನಾಗಿ ಮಾಡಲಿ ಅಥವಾ ಶುದ್ಧರನ್ನಾಗಿ ಮಾಡಲಿ ಎಂದರ್ಥ. ತೀಕ್ಷ್ಣ, ಹರಿತ ಎಂಬರ್ಥವೂ ಆಗುತ್ತದೆ. ಚೈತನ್ಯ, ಹುರುಪು, ಉತ್ಸಾಹ ಎಂಬರ್ಥವನ್ನು ತೋರಿಸುತ್ತದೆ. ಇಲ್ಲಿ **ಶುದ್ಧ, ಸಂಸ್ಕೃತ** ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಮಮತ್ತು**—ಮದೀ ಹರ್ಷೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಏರುಃ** (ಪಾ. ಸೂ. ೩-೪-೮೬) ಎಂಬುದರಿಂದ ಉತ್ವ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ ಬರುತ್ತದೆ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. **ಖರಿ ಚ** (ಪಾ. ಸೂ. ೮-೪-೫೫) ಎಂಬುದರಿಂದ ಧಾತು ದಕಾರಕ್ಕೆ ಚರ್ತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಪರಿಜ್ಮಾ**—ಜನೀ ಪ್ರಾದುರ್ಭಾವೇ ಧಾತು, ಪರಿ ಉಪಸರ್ಗ ಪೂರ್ವದಲ್ಲಿರುವಾಗ **ಶ್ವನ್ನುಕ್ಷನ್‌ಪೂಷನ್**-(ಉ. ಸೂ. ೧-೧೫೭) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಜನ್ ಧಾತುವಿನ ಉಪಧೆಗೆ ಲೋಪವೂ ಮಕಾರ ಅಂತಾದೇಶವೂ ಬರುತ್ತವೆ.

**ಅಪಾಮ್**—ಅಪ್ ಶಬ್ದ. ಸ್ತ್ರೀಲಿಂಗ, ನಿತ್ಯ ಬಹುವಚನಾಂತ. ಷಷ್ಠೀ ಬಹುವಚನಾಂತರೂಪ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಶಿಶೀತಮ್**—ಶೋ ತನೂಕರಣೇ. ಧಾತು. ದಿವಾದಿ. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ಥಸ್ಸಿಗೆ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶ್ಯನಿಗೆ ಶ್ಲು ವಿಕರಣ. **ಆದೇಚ ಉಪದೇಶೇಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ ಬಂದಾಗ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಧಾತುವಿನ ಆಕಾರಕ್ಕೆ ಈತ್ವ. **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಶಿಶೀತಮ್ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಇಂದ್ರಾಪರ್ವತಾ**—ಇಂದ್ರಶ್ಚ ಪರ್ವತಶ್ಚ ಇಂದ್ರಾಪರ್ವತೌ **ದೇವತಾದ್ವಂದ್ವೇಚ** (ಪಾ. ಸೂ. ೬-೩-೨೬) ಎಂಬುದರಿಂದ ಪೂರ್ವಪದಕ್ಕೆ ಆನಙ್ ಆದೇಶ ಬರುತ್ತದೆ. **ಅಲೋಂತ್ಯ**—ಪರಿಭಾಷೆಯಿಂದ ಅಂತ್ಯಕ್ಕೆ

ಬಂದಾಗ ನಕಾರಕ್ಕೆ ಲೋಪ. ಸಂಬೋಧನಾದ್ವಿವಚನದಲ್ಲಿ ಔಕಾರವಿಭಕ್ತಿಗೆ ಬಂದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಯುವಮ್—ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಂ** (ಪಾ. ಸೂ. ೭-೨-೮೮) ಎಂಬಲ್ಲಿ ಭಾಷಾಯಾಂ ಎಂಬುದರಿಂದ ಲೋಕದಲ್ಲಿ ಮಾತ್ರ ಆತ್ವವಿಧಾನ ಮಾಡಿರುವುದರಿಂದ ಛಂದಸ್ಸಿನಲ್ಲಿ ಬರುವುದಿಲ್ಲ. ವಿಭಕ್ತಿಗೆ ಅಮಾದೇಶ. **ಯುವಾವೌ ದ್ವಿವಚನೇ** ಎಂಬುದರಿಂದ ಮಪರ್ಯಂತಕ್ಕೆ ಯುವಾದೇಶ.

**ವಿಶ್ವೇ**—ಪ್ರಥಮಾ ಬಹುವಚನದಲ್ಲಿ ಜಸ್ ಬಂದಾಗ **ಜಸಃಶೀ** (ಪಾ. ಸೂ. ೭-೧-೧೭) ಎಂಬುದರಿಂದ ಅದಕ್ಕೆ ಶೀ ಆದೇಶ. ಗುಣ. **ಸ್ವಾಂಗಶಿಟಾಮದಂತಾನಾಮ್** (ಫಿ. ಸೂ. ೨೯) ಎಂಬುದರಿಂದ ಅದಂತ ಸರ್ವನಾಮವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವರಿವಸ್ಯಂತಿ**—ವರಿವಸ್ ಎಂಬುದು ಪ್ರಾತಿಪದಿಕ. ಇದಕ್ಕೆ ಧಾತ್ವರ್ಥವಿವಕ್ಷಾಮಾಡಿದಾಗ **ನಮೋವರಿವಶ್ಚಿತ್ರಙಃ ಕ್ಯಚ್** (ಪಾ. ಸೂ. ೩-೧-೧೯) ಎಂಬುದರಿಂದ ಕ್ಯಚ್ ಪ್ರತ್ಯಯ ಬರುತ್ತದೆ. **ಸನಾದ್ಯಂತಾ ಧಾತವಃ** (ಪಾ. ಸೂ. ೩-೧-೩೨) ಎಂಬುದರಿಂದ ವರಿವಸ್ಯ ಎಂಬುದು ಧಾತು ಸಂಜ್ಞೆಯನ್ನು ಹೊಂದುತ್ತದೆ. ಲಟ್‌ಪ್ರಥಮ ಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ದೇವಾಃ**—ದ್ಯೋತನಶೀಲಾಃ ದೇವಾಃ. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಉತ ತ್ಯಾ ಮೇ ಯಶಸಾ ಶ್ವೇತನಾಯೈ ವ್ಯಂತಾ ಪಾಂತೌಶಿಜೋ ಹುವಧ್ಯೈ ।
ಪ್ರ ವೋ ನಪಾತಮಪಾಂ ಕೃಣುಧ್ವಂ ಪ್ರ ಮಾತರಾ ರಾಸ್ಪಿನಸ್ಯಾಯೋಃ ॥ ೪ ॥

॥ ಪದಪಾಠಃ ॥

ಉತ । ತ್ಯಾ । ಮೇ । ಯಶಸಾ । ಶ್ವೇತನಾಯೈ । ವ್ಯಂತಾ । ಪಾಂತಾ । ಔಶಿಜಃ । ಹುವಧ್ಯೈ ।
ಪ್ರ । ವಃ । ನಪಾತಂ । ಅಪಾಂ । ಕೃಣುಧ್ವಂ । ಪ್ರ । ಮಾತರಾ । ರಾಸ್ಪಿನಸ್ಯ । ಆಯೋಃ ॥ ೪ ॥

॥ ಸಾಯಣಭಾಷ್ಯಂ ॥

**ಔಶಿಜ ಉಶಿಜಃ ಪುತ್ರಃ ಕಕ್ಷೀವಾನಹಂ ಮೇ । ತಾದರ್ಥ್ಯೇ ಚತುರ್ಥೀ । ಮದರ್ಥಂ ಯಶಸಾ । ಯಶ ಇತ್ಯನ್ನಂ ಬಲಂ ಕೀರ್ತಿರ್ವೋಚ್ಯತೇ । ತದ್ವಂತೌ ವ್ಯಂತಾ ಭಕ್ಷಯಂತೌ ಚರುಪುರೋಡಾಶಾದಿಕಂ ಪಾಂತಾ ಪಿಬಂತಾವಾಜ್ಯಸೋಮಾದಿಕಂ ತ್ಯಾ । ತಚ್ಛಬ್ದಸಮಾನಾರ್ಥಸ್ತ್ಯಚ್ಛಬ್ದಃ । ಯೌ ಸ್ತುತ್ಯತ್ವೇನ ಪ್ರಸಿದ್ಧೌ ತಾವಾಶ್ವಿನೌ । ಅತ್ರ ಯದ್ಯಪಿ ವಿಶೇಷೋ ನ ಶ್ರುತಃ ತಥಾಪಿ ಸೂಕ್ತಸ್ಯ ವೈಶ್ವದೇವತ್ವಾದುಷಃ-ಸಂಬಂಧಾದ್ದ್ವಿವಚನಲಿಂಗಾಚ್ಚಾಶ್ವಿನಾವಿತಿ ಗಮ್ಯತೇ । ತಾದೃಶಾವಶ್ವಿನೌ ಶ್ವೇತನಾಯ್ಯೈ । ಇತಿ ಷಷ್ಠ್ಯರ್ಥೇ ಚತುರ್ಥೀ । ವಿಶ್ವಂ ಜಗಚ್ಛ್ವೇತಯಂತ್ಯಾ ಉಷಸಃ ತತ್ಸಂಬಂಧಿನಿ ಕಾಲೇ । ಉಷಃಕಾಲೀನಾಹ್ವಾನಾಯ ಯತೇಯಮಿತಿ ಶೇಷಃ । ಹೇ ಋತ್ವಿಜಃ ವೋ ಯೂಯಂ । ಪ್ರಥಮಾರ್ಥೇ ದ್ವಿತೀಯಾ । ಅಪಾಮುದ-ಕಾನಾಂ ನಪಾತಂ ನಪಾತಯಿತಾರಂ ತಾಸಾಂ ನಪ್ತಾರಂ ವಾಗ್ನಿಂ । ಅದ್ಭ್ಯ ಓಷಧಿವನಸ್ಪತಯಃ ತಾಭ್ಯೋಽಗ್ನಿರಿತ್ಯಪಾಂ ನಪ್ತೃತ್ವಮಗ್ನೇಃ । ತಂ ದೇವಂ ಪ್ರ ಕೃಣುಧ್ವಂ । ಕರೋತಿರತ್ರ ಕ್ರಿಯಾಸಾಮಾ-ನ್ಯವಾಚೀ ಕ್ರಿಯಾವಿಶೇಷೇ ಸ್ತೋತ್ರೇ ಪರ್ಯವಸ್ಯತಿ । ಪ್ರಕರ್ಷೇಣ ಸ್ತುಧ್ವಮಿತ್ಯರ್ಥಃ । ಕಿಂಚ ರಾಸ್ಪಿ-ನಸ್ಯ । ರಪತೇ ರಸತೇರ್ವಾ ಶಬ್ದನಾರ್ಥಸ್ಯ ಘಞಂತಸ್ಯ ಕೃತಸಕಾರಪಕಾರೋಪಜನಸ್ಯ ರಾಸ್ಪ ಇತಿ ಭವತಿ । ತದಸ್ಯಾಸ್ತೀತಿ ರಾಸ್ಪಿ ಸ್ತೋತ್ರಂ । ತದ್ವಾನ್ ರಾಸ್ಪಿನಃ ಸ್ತೋತಾ । ತಸ್ಯಾಯೋಸ್ತಾದೃಶಸ್ಯ ಮನುಷ್ಯಸ್ಯ ಮಮ ಮಹ್ಯಂ ಮಾತರಾ ಮಾತೃವದ್ಧಿತಕಾರಿಣ್ಯಾವಹೋರಾತ್ರದೇವತೇ ಅಪಿ ಪ್ರ ಕೃಣುಧ್ವಂ। ಅಥವಾ ರಾಸ್ಪಿನಸ್ಯ । ಏಕೋ ಮತ್ವರ್ಥಪ್ರತ್ಯಯಶ್ಛಾಂದಸಃ । ಪ್ರವರ್ಷಣಧ್ವನಿಯುಕ್ತಸ್ಯ ವೃಷ್ಟ್ಯುದ-ಕಸ್ಯ ಗಮನಶೀಲಸ್ಯ ನಿರ್ಮಾತ್ರ್ಯಾವಹೋರಾತ್ರೇ ಪ್ರ ಕೃಣುಧ್ವಂ ॥ ವ್ಯಂತಾ ಪಾಂತಾ । ಉಭಯತ್ರ ಸುಪಾಂ ಸುಲುಗಿತ್ಯಾಕಾರಃ ॥**

॥ ಪ್ರತಿಪದಾರ್ಥ ॥

**ಔಶಿಜಃ**— ಉಶಿಜಪುತ್ರನಾದ ನಾನು (ಕಕ್ಷೀವಂತನು) । **ಮೇ**— ನನಗೋಸ್ಕರ । **ಯಶಸಾ**— ಆಹಾರ, ಬಲ ಅಥವಾ ಕೀರ್ತಿಯುಕ್ತರೂ । **ವ್ಯಂತಾ**—(ಚರುಪುರೋಡಾಶಾದಿಗಳ) ಭಕ್ಷಕರೂ । **ಪಾಂತಾ**—(ಆಜ್ಯ ಸೋಮಾದಿಗಳನ್ನು) ಪಾನಮಾಡುವರೂ ಆದ । **ತ್ಯಾ**—(ಪ್ರಸಿದ್ಧರಾದ) ಆ (ಅಶ್ವಿನೀದೇವತೆಗಳನ್ನು ಉದ್ದೇಶಿಸಿ) । **ಶ್ವೇತನಾಯ್ಯೈ**—(ಜಗತ್ತನ್ನು) ಶ್ವೇತವರ್ಣವಾಗಿ ಮಾಡುವ (ಉಷಃಕಾಲದ) । **ಹುವಧ್ಯೈ**— ಪ್ರಾರ್ಥನೆಗೆ ಪ್ರಯತ್ನಿಸುತ್ತೇನೆ । **ಉತ**— ಮತ್ತು । **ವಃ**—(ಋತ್ವಿಜರೇ) ನೀವೂ । **ಅಪಾಂ**— ಉದಕದ । **ನಪಾತಂ**— ಪೌತ್ರನಾದ (ಅಗ್ನಿಯನ್ನು) । **ಪ್ರ ಕೃಣುಧ್ವಂ**— ಹೆಚ್ಚಾಗಿ ಸ್ತುತಿಸಿರಿ । **ರಾಸ್ಪಿನಸ್ಯ**— ಸ್ತೋತೃವಾದ । **ಆಯೋಃ**— ಮನುಷ್ಯನ (ನನ್ನ) । **ಮಾತರಾ**— ಮಾತೃಭೂತರಾದ (ಅಹೋರಾತ್ರದೇವತೆಗಳನ್ನು) । [ಅಥವಾ **ರಾಸ್ಪಿನಸ್ಯ ಆಯೋಃ**— ಪ್ರವರ್ಷಣಧ್ವನಿಯುಕ್ತವೂ (ಗಮನಶೀಲವೂ) ಆದ ವೃಷ್ಟ್ಯುದಕದ । **ಮಾತರಾ**— ನಿರ್ಮಾತೃಗಳಾದ (ಅಹೋರಾತ್ರ ದೇವತೆಗಳನ್ನೂ)] । **ಪ್ರ (ಕೃಣುಧ್ವಂ)**— ಹೆಚ್ಚಾಗಿ (ಸ್ತುತಿಸಿ).

॥ ಭಾವಾರ್ಥ ॥

ಉಶಿಜಪುತ್ರನು (ಕಕ್ಷೀವಂತನೂ ಆದ ನಾನು), ಆಹಾರ, ಬಲ, ಕೀರ್ತಿಯುಕ್ತರೂ, (ಚರ್ವಾದಿ) ಭಕ್ಷಕರೂ **(ಸೋಮಾದಿ)** ಪಾತೃಗಳೂ ಪ್ರಸಿದ್ಧರೂ ಆದ ಅಶ್ವಿನೀದೇವತೆಗಳನ್ನು ಪ್ರಪಂಚವನ್ನು ಶ್ವೇತವರ್ಣವಾಗಿಮಾಡುವ ಉಷಃ

ಕಾಲದಲ್ಲಿ ಸ್ತುತಿಸುತ್ತೇನೆ; (ಋತ್ವಿಜರೇ)ನೀವೂ ಉದಕದ ಪೌತ್ರನಾದ ಅಗ್ನಿಯನ್ನೂ, ಸ್ತೋತೃಪುರುಷನಿಗೆ (ವೃಷ್ಟ್ಯುದಕನಿರ್ಮಾತ್ರಿಯರೂ) ಮಾತೃಸ್ಥಾನೀಯರೂ ಆದ ಅಹೋರಾತ್ರ ದೇವತೆಗಳನ್ನೂ ಹೆಚ್ಚಾಗಿ ಸ್ತುತಿಸಿರಿ.

## English Translation

Whenever I, the one of Ushij, worship with my offerings (of food) those two (Ashwins) who eat and drink (of oblations and libations) at (the approach of) of the world-whitening (dawn); do you, Priests, glorify the grandson ot the waters (Agni), and render (the divinities of the day and night) the mothers (as it were) of the man who repeats their praise.

॥ ವಿಶೇಷವಿಷಯಗಳು ॥

**ಔಶಿಜಃ—ಉಶಿಜಃ ಪುತ್ರಃ ಕಕ್ಷೀವಾನಹಂ ।** **ಉಶಿಕ್** ಎಂಬುವಳ ಮಗನೂ, ಕಕ್ಷೀವಂತನೆಂಬ ಹೆಸರುಳ್ಳವನೂ ಆದ ನಾನು ಎಂದು ಈ ಸೂಕ್ತದ್ರಷ್ಟೃವಾದ ಋಷಿಯು ಹೇಳಿಕೊಳ್ಳುತ್ತಾನೆ. ಇವನು ದೀರ್ಘತಮಸ್ಸೆಂಬ ಋಷಿಯಿಂದ **ಉಶಿಕ್** ಎಂಬುವಳಲ್ಲಿ ಉತ್ಪನ್ನನಾದವನು ಎಂದು ಬೃಹದ್ದೇವತೆಯ ಆಧಾರದಿಂದ ತಿಳಿಯುತ್ತದೆ.

**ಅಂಗರಾಜಗೃಹೇ ಯುಕ್ತಾಂ ಉಶಿಜಂ ಪುತ್ರಕಾಮಯಾ ।**
**ರಾಜ್ಞಾ ಚ ಪ್ರಹಿತಾಂ ದಾಸೀಂ ಭಕ್ತಾಂ ಮತ್ವಾ ಮಹಾತಪಾಃ ॥**
**ಜನಯಾಮಾಸ ಚೋತ್ಥಾಯ ಕಕ್ಷೀವತ್ಪ್ರಮುಖಾನ್ ಋಷೀನ್ ॥**

(ಬೃ. ದೇ. ೪-೨೪,೨೫)

ಅಂಗರಾಜನ ಮನೆಯಲ್ಲಿ ಕೆಲಸಕ್ಕೆ ಇದ್ದ **ಉಶಿಕ್** ಎಂಬುವಳನ್ನು ದೊರೆಯು ಪುತ್ರೇಚ್ಛೆಯಿಂದ **ದೀರ್ಘತಮಸ್** ಎಂಬ ಋಷಿಯ ಸಮೀಪಕ್ಕೆ ಕಳುಹಿಸಿದನು. ಇವಳು ಬಹಳ ಭಕ್ತಿಯುತಳಾಗಿ ಅವನಿಗೆ ಸೇವೆಯನ್ನು ಸಲ್ಲಿಸುತ್ತಿದ್ದುದರಿಂದ ಅವನು ತುಷ್ಟನಾಗಿ ಇವಳಲ್ಲಿ ಕಕ್ಷೀವತ್ಪ್ರಮುಖರಾದ ಋಷಿಗಳನ್ನು ಉತ್ಪನ್ನಮಾಡಿದನು ಎಂದು ಕಥೆಯು ಉಕ್ತವಾಗಿದೆ.

**ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ ।**

(ಋ. ಸಂ. ೧-೧೧೬-೭)

**ತದ್ವಾಂ ನರಾ ಶಂಸ್ಯಂ ಪಜ್ರಿಯೇಣ ಕಕ್ಷೀವತಾ ನಾಸತ್ಯಾ ಪರಿಜ್ಮನ್ ।**

(ಋ. ಸಂ. ೧-೧೧೭-೬)

ಇತ್ಯಾದಿ ಋಕ್ಕುಗಳಿಂದ ಇವನು **ಪಜ್ರ** ಸಂತತಿಯವನೆಂದು ತಿಳಿಯುತ್ತದೆ

**ಮದಚ್ಯುತಃ ಕೃಶನಾವತೋ ಅತ್ಯಾನ್ಕಕ್ಷೀವಂತ ಉದಮೃಕ್ಷಂತ ಪಜ್ರಾಃ ।**

(ಋ. ಸಂ. ೧-೧೨೬-೪)

ಎಂಬ ಋಕ್ಕಿನಲ್ಲಿ ಇವನ ವಂಶದಲ್ಲಿ ಉತ್ಪನ್ನರಾದವರೂ **ಪಜ್ರ**ರೆಂದೇ ಕರೆಯಲ್ಪಡುವುದಾಗಿ ತಿಳಿಯುತ್ತದೆ. ಇದೇ ಸೂಕ್ತದಲ್ಲಿ **ಸಿಂಧೂ** ನದಿಯ ದಡದಲ್ಲಿದ್ದ ಭಾವಯವ್ಯನ ಮಗನಾದ **ಸ್ವನಯನು** ತನಗೆ ಅತಿ ಪ್ರಭೂತವಾದ ದಾನ

ವನ್ನು ಕೊಟ್ಟುದಾಗಿ ಪ್ರಶಂಸಿಸಿದ್ದಾನೆ. ಈ ದಾನವನ್ನು ಕೊಡಬೇಕಾದ ಸಂದರ್ಭವೂ, ಇವರಿಬ್ಬರಿಗೂ ಉಂಟಾದ ನಿಕಟವಾದ ಸಂಬಂಧವೂ ಬೃಹದ್ದೇವತೆಯಲ್ಲಿ ಉಕ್ತವಾಗಿರುವ ಕಥೆಯಿಂದ ತಿಳಿಯುತ್ತದೆ.

**ಅಧಿಗಮ್ಯ ಗುರೋರ್ವಿದ್ಯಾಂ ಗಚ್ಛನ್ ಸ್ವನಿಲಯಂ ಕಿಲ ।**
**ಕಕ್ಷೀವಾನಧ್ವನಿ ಶ್ರಾಂತಃ ಸುಷ್ವಾಪಾರಣ್ಯಗೋಚರಃ ॥**
**ತಂ ರಾಜಾ ಸ್ವನಯೋ ನಾಮ ಭಾವಯವ್ಯಸುತೋ ವ್ರಜನ್ ।**
**ಕ್ರೀಡಾರ್ಥಂ ಸಾನುಗೋಽಪಶ್ಯತ್ ಸಭಾರ್ಯಃ ಸಪುರೋಹಿತಃ ॥**
**ಅಥೈನಂ ರೂಪಸಂಪನ್ನಂ ದೃಷ್ಟ್ವಾ ದೇವಸುತೋಪಮಂ ।**
**ಕನ್ಯಾದಾನೇ ಮತಿಂ ಚಕ್ರೇ ವರ್ಣಗೋತ್ರಾವಿರೋಧತಃ ॥**
**ಸಂಬೋಧ್ಯೈನಂ ಸ ಪಪ್ರಚ್ಛ ವರ್ಣಗೋತ್ರಾದಿಕಂ ತತಃ ।**
**ರಾಜನ್ನಾಂಗಿರಸೋಽಸ್ಮೀತಿ ಕುಮಾರಃ ಪ್ರತ್ಯುವಾಚ ತಂ ॥**
**ಪುತ್ರೋಽಹಂ ದೀರ್ಘತಮಸ ಔಚಥ್ಯಸ್ಯ ಋಷೇರ್ನೃಪ ।**
**ಅಥಾಸ್ಮೈ ಸ ದದೌ ಕನ್ಯಾ ದಶಾಭರಣಭೂಷಿತಾಃ ॥**
**ತಾವತಶ್ಚ ರಥಾನಶ್ವ್ಯಾವಾನ್ಸ್ತ್ರೀಡ್ವಂಗಾನ್ಸ್ವೈ ಚತುರ್ಯುಜಃ ।**
**ವಧೂನಾಂ ವಾಹನಾರ್ಥಾಯ ಧನಕುಪ್ಯಮಜಾವಿಕಂ ॥**
**ನಿಷ್ಕಾಣಾಂ ವೃಷಭಾಣಾಂ ಚ ಶತಂ ಶತಮುದಾತ್ಮನಃ ।**
**ಏತದುತ್ತರಸೂಕ್ತೇನ ಶತಮಿತ್ಯಾದಿನೋದಿತಂ ॥**
**ಶತಮಶ್ವಾಞ್ಛತಂ ನಿಷ್ಕಾನ್ ರಥಾನ್ ದಶ ವಧೂಮತಃ**
**ಚತುರ್ಯುಜೋ ಗವಾಂ ಚೈವ ಸಹಸ್ರಂ ಷಷ್ಟ್ಯಾಧಿಕಂ ॥**
**ಸ್ವನಯಾದ್ಭಾವಯವ್ಯಾದ್ಯಃ ಕಕ್ಷೀವಾನ್ಪ್ರತ್ಯಪದ್ಯತ ।**
**ಪ್ರತಿಗೃಹ್ಯ ಚ ತುಷ್ಟಾವ ಸ್ವಾತಃ ಪಿತ್ರೇ ಶಶಂಸ ಚ ॥**

(ಬೃ. ದೇ. ೩-೧೪೨ ರಿಂದ ೧೫೦)

ಗುರುವಿನ ಮನೆಯಲ್ಲಿ ವಿದ್ಯಾಭ್ಯಾಸವಾದ ಮೇಲೆ ಕಕ್ಷೀವಂತನು ಮನೆಗೆ ಹಿಂತಿರುಗುತ್ತಿದ್ದಾಗ ದಾರಿಯಲ್ಲಿ ಬಳಲಿದವನಾಗಿ ಕಾಡಿನಲ್ಲಿ ಮಲಗಿ ನಿದ್ರೆಹೋಗುತ್ತಿದ್ದನು. ಆಗ ಭಾವಯವ್ಯಪುತ್ರನಾದ **ಸ್ವನಯ**ನೆಂಬ ರಾಜನು ತನ್ನ ಪತ್ನೀಭೃತ್ಯಾದಿಪರಿವಾರಗಳೊಡನೆ ಕ್ರೀಡಾರ್ಥವಾಗಿ ಅಲ್ಲಿಗೆ ಬಂದಾಗ ಅವನನ್ನು ನೋಡಿದನು. ಅವನ ಸೌಂದರ್ಯವನ್ನು ನೋಡಿ ಸಂತೋಷಗೊಂಡು ವರ್ಣ ಮತ್ತು ಗೋತ್ರಗಳ ದೃಷ್ಟಿಯಿಂದ ತನಗೆ ಏನೂ ವಿರೋಧವಿಲ್ಲದಿದ್ದರೆ ಅವನಿಗೆ ಮಗಳನ್ನು ಕೊಟ್ಟು ವಿವಾಹವನ್ನು ನೆರವೇರಿಸಬೇಕೆಂದಿಚ್ಛಿಸಿ ಅವನನ್ನು ಎಬ್ಬಿಸಿ ಅವನ ವಂಶಾದಿಗಳ ವಿಷಯವನ್ನು ಪ್ರಶ್ನಿಸಿದನು. ಆಗ ಕಕ್ಷೀವಂತನು ತಾನು ಅಂಗಿರಸ್ಸಿನ ವಂಶದವನೆಂದೂ ಉಚಥ್ಯ ಪುತ್ರನಾದ ದೀರ್ಘತಮಸ್ಸಿನ ಮಗನೆಂದೂ ಹೇಳಿದೊಡನೆಯೇ **ಸ್ವನಯನು** ಅವನಿಗೆ ಅಲಂಕೃತರಾದ ಹತ್ತುಜನ ಕನ್ಯೆಯರನ್ನು ದಾನಮಾಡಿದನು. ಜೊತೆಯಲ್ಲಿಯೇ ಅಶ್ವಗಳನ್ನೂ, ರಥಗಳನ್ನೂ, ಧನವನ್ನೂ, ಅಜಾದಿಸಂಪತ್ತುಗಳನ್ನೂ ಪ್ರಭೂತವಾಗಿ ದಾನಮಾಡಿದನು. ಈ ವಿಷಯವು—

**ಅಮಂದಾನ್ತ್ಸ್ತೋಮಾನ್ಪ್ರ ಭರೇ ಮನೀಷಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ।**
**ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ॥**
**ಶತಂ ರಾಜ್ಞೋ ನಾಧಮಾನಸ್ಯ ನಿಷ್ಕಾಞ್ಛತಮಶ್ವಾನ್ಪ್ರಯತಾನ್ತ್ಸದ್ಯ ಆದಂ ।**
**ಶತಂ ಕಕ್ಷೀವಾँ ಅಸುರಸ್ಯ ಗೋನಾಂ ದಿವಿ ಶ್ರವೋಽಜರಮಾ ತತಾನ ॥**

(ಋ. ಸಂ. ೧-೧೨೬-೧ ಮತ್ತು ೨)

ಇತ್ಯಾದಿ ಋಕ್ಕುಗಳಲ್ಲಿ ಹೇಳಲ್ಪಟ್ಟಿದೆ. ಋಕ್ಸಂಹಿತೆಯಲ್ಲಿಯೂ ಬ್ರಾಹ್ಮಣಾದಿಗಳಲ್ಲಿಯೂ ಸಹ ಇವನು ಪ್ರಾಜ್ಞನೂ, ಪೂಜ್ಯನೂ ಆದ ಋಷಿಯೆಂದು ಇವನನ್ನು ಪ್ರಶಂಸಿಸಿದೆ.

**ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾँ ಋಷಿರಸ್ಮಿ ವಿಪ್ರಃ ।**

(ಋ ಸಂ. ೪-೨೬-೧)

**ಅಯಂ ಕಕ್ಷೀವತೋ ಮಹೋ ವಿ ವೋ ಮದೇ ಮತಿಂ ವಿಪ್ರಸ್ಯ ವರ್ಧಯದ್ವಿವಕ್ಷಸೇ ॥**

(ಋ. ಸಂ: ೧೦-೨೫-೧೦)

ಇತ್ಯಾದಿ ಋಕ್ಕುಗಳಲ್ಲಿಯೂ ಮತ್ತು

**ಏತಾಭಿರ್ಹಾಶ್ವಿನೋಃ ಕಕ್ಷೀವಾನ್ಪ್ರಿಯಂ ಧಾಮೋಪಾಗಚ್ಛತ್ಸ ಪರಮಂ ಲೋಕಮಜಯತ್ ।**

(ಐ. ಬ್ರಾ. ೧–೨೧)

(ಋ. ಸಂ. ೧-೧೨೦-೧ ರಿಂದ ೯ ರವರೆಗೆ ಋಕ್ಕುಗಳನ್ನು ಪಠಿಸಿಕೊಂಡು) ಕಕ್ಷೀವಂತನು ಅಶ್ವಿನೀದೇವತೆಗಳ ನಿವಾಸಕ್ಕೆ ಹೋಗಿ ಸೇರಿ ಅವರಿಂದ ಅನುಗ್ರಹೀತನಾಗಿ ಇನ್ನೂ ಉತ್ತಮವಾದ ಲೋಕವನ್ನು ಸೇರಿದನು ಎಂದು **ಐತರೇಯ ಬ್ರಾಹ್ಮಣದಲ್ಲಿಯೂ,**

**ಕಕ್ಷೀವಂತಂ ಯ ಔಶಿಜಃ । ಯೋ ದೇವಾನ್ಯೋಽಮೀವಹಾ ।**
**ವಸುವಿತ್ಪುಷ್ಟಿವರ್ಧನಃ । ಸ ನಃ ಸಿಷಕ್ತು ಯಸ್ತುರಃ ॥**

(ಶ. ಬ್ರಾ. ೨-೩-೪-೩೫)

ಪುಷ್ಟಿಮಂತನೂ, ಶತ್ರುನಾಶಕನೂ, ಧನದಾತನೂ, ಸಂಪದ್ವರ್ಧಕನೂ **ಉಶಿಜೆಯ** ಪುತ್ರನೂ ಆದ **ಕಕ್ಷೀವಂತನು** ನಮ್ಮೊಂದಿಗಿರಲಿ ಎಂದು ಶತಪಥಬ್ರಾಹ್ಮಣವಾಕ್ಯಗಳಲ್ಲಿಯೂ ಸಹ **ಕಕ್ಷೀವಂತನು** ಶ್ರೇಷ್ಠವಾದ ವ್ಯಕ್ತಿಯೆಂದು ಸ್ತುತಿಸಿದೆ.

**ಯಾಭಿಸ್ತ್ರಿಮಂತುರಭವದ್ವಿಚಕ್ಷಣಸ್ತಾಭಿರೂಷು ಊತಿಭಿರಶ್ವಿನಾ ಗತಂ ।**

(ಋ. ಸಂ. ೧-೧೧೨-೪)

ಎಂಬ ಋಕ್ಕಿನಲ್ಲಿ **ಕಕ್ಷೀವಂತನು ಪಾಕಯಜ್ಞ, ಹವಿರ್ಯಜ್ಞ** ಮತ್ತು **ಸೋಮಯಜ್ಞಗಳ** ವಿಷಯದಲ್ಲಿ ಪೂರ್ಣವಾದ ಜ್ಞಾನವನ್ನು ಪಡೆದಿದ್ದನೆಂದು ಹೇಳಿದೆ. ಇವನು ಮೊದಲು ಅತ್ಯಂತ ಮೂಢನಾಗಿದ್ದುದರಿಂದ ಹೇಗಾದರೂ ಪ್ರಯತ್ನಿಸಿ ಭೂತಭವಿಷ್ಯದ್ವರ್ತಮಾನಕಾಲಗಳ ವ್ಯವಹಾರಗಳ ವಿಷಯಗಳಲ್ಲೆಲ್ಲಾ ಅಪ್ರತಿಹತವಾದ ಜ್ಞಾನವನ್ನು ಸಂಪಾದಿಸಬೇಕೆಂಬ ಉತ್ಕಟವಾದ ಇಚ್ಛೆಯುಂಟಾಗಿ **ಅಶ್ವಿನೀದೇವತೆ**ಗಳನ್ನುದ್ದೇಶಿಸಿ ಯಜ್ಞಮಾಡಿದನಂತರ ಅವರು ಸಂತುಷ್ಟರಾಗಿ ಇವನಿಗೆ ತ್ರಿಕಾಲವಿಷಯಕವಾದುದೂ, ಸರ್ವಾರ್ಥವಿಷಯಕವಾದುದೂ ಆದ ಜ್ಞಾನವನ್ನು ಅನುಗ್ರಹಿಸಿದರು ಎಂಬ ಕಥೆಯಿದೆ.

**ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ ।**

(ಋ. ಸಂ. ೧-೧೧೬-೭)

ಎಂಬಲ್ಲಿ **ಕಕ್ಷೀವಂತನೇ** ಈ ಕಥೆಯನ್ನು ಸೂಚಿಸಿದ್ದಾನೆ. **ತ್ರಿಮುಂತುಃ ವಿಚಕ್ಷಣಃ** ಎಂಬ ವಿಶೇಷಣಗಳಿಂದ ಕಕ್ಷೀವಂತನು ಸರ್ವಾರ್ಥಗಳನ್ನು ತಿಳಿದವನು ; ಪ್ರಾಜ್ಞನು ಎಂದು ವಿದಿತವಾಗುತ್ತದೆ.

**ಅಪಾಂ ನಪಾತಂ— ಅಪಾಂ ಉದಕಾನಾಂ ನಪಾತಂ ನಪಾತಯಿತಾರಂ ತಾಸಾಂ ನಪ್ತಾರಂ ವಾ ಅಗ್ನಿಂ । ಅದ್ಭ್ಯಃ ಓಷಧಿವನಸ್ಪತಯಃ ತಾಭ್ಯಃ ಅಗ್ನಿಃ ಇತ್ಯಪಾಂ ನಪ್ತೃತ್ವಮಗ್ನೇಃ ।** ಉದಕಗಳಿಂದ ಓಷಧಿ ವನಸ್ಪತಿಗಳು ಉತ್ಪನ್ನವಾಗಿ, ಅವುಗಳಿಂದ **ಅಗ್ನಿಯು** ಜನಿಸುವುದರಿಂದ **ಅಗ್ನಿಗೆ** (ಉದಕಗಳ ಪೌತ್ರ) **ಅಪಾಂ ನಪಾತ್** ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ಸಾಯಣರು ವಿವರಿಸಿದ್ದಾರೆ.

**ನಪಾತ್** ಎಂಬ ಪದಕ್ಕೆ ಪುತ್ರನೆಂದೂ ಪೌತ್ರನೆಂದೂ ಅರ್ಥವಾಗುತ್ತದೆ. ಈ ಎರಡು ಅರ್ಥಗಳಲ್ಲಿಯೂ ಪ್ರಯೋಗವಿದೆ. ಆದರೆ ನಿರುಕ್ತಕಾರರು, **ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ** । ಸಾಕ್ಷಾತ್ಪುತ್ರನಲ್ಲವೆಂದೂ ಪೌತ್ರಾದಿಗಳೆಂದೂ ಈ ಶಬ್ದದ ಅರ್ಥವೆಂದು ಹೇಳಿದ್ದಾರೆ (ನಿ. ೮-೫) ಮತ್ತು **ತನೂನಪಾತ್** ಎಂಬ ಶಬ್ದದ ನಿರ್ವಚನವನ್ನು ಹೇಳುವಾಗ **ಆಪಃ ಅತ್ರ ತನ್ವ ಉಚ್ಯಂತೇ । ತತಾ ಅಂತರಿಕ್ಷೇ ತಾಭ್ಯಃ ಓಷಧಿವನಸ್ಪತಯಃ ಜಾಯಂತೇ ಓಷಧಿವನಸ್ಪತಿಭ್ಯಃ ಏಷ ಜಾಯತೇ ।** ಎಂದು ವಿವರಿಸಿ ಉದಕಗಳ ಪೌತ್ರನೆಂದೂ ಮತ್ತು ಶಾಕಪೂಣಿಯ ಮತದಂತೆ **ಅಗ್ನಿಯ** ಪರ್ಯಾಯನಾಮವೆಂದೂ ಹೇಳಿದ್ದಾರೆ.

**ಅನಂತರಾಂ ಪ್ರಜಾಮಾಹುರ್ನಪಾದಿತಿ ಕೃಪಣ್ಯವಃ ।**
**ನಪಾದಮುಷ್ಯ ಚೈವಾಯಮಗ್ನಿಸ್ತೇನ ತನೂನಪಾತ್ ॥**

(ಬೃ. ದೇ. )

ಎಂದು **ಬೃಹದ್ದೇವತೆಯಲ್ಲಿಯೂ** ಇದೇ ಅಭಿಪ್ರಾಯವನ್ನನುಸರಿಸಿದ್ದಾರೆ. ಇಲ್ಲಿ **ಅಪಾಂ ನಪಾತ್** ಎಂಬುದು **ಅಗ್ನಿ**ಪರ್ಯಾಯನಾಮವೇ ಅಥವಾ ಬೇರೆ ದೇವತೆಯ ಹೆಸರೇ ಎಂಬ ವಿಷಯದಲ್ಲಿ ವಿಚಿಕಿತ್ಸೆಯಿರುವುದನ್ನು **ಅಗ್ನಿರಿತಿ ಶಾಕಪೂಣಿಃ** ಎಂಬ ನಿರುಕ್ತಕಾರರ ಮಾತಿನಲ್ಲಿ ತಿಳಿಯಬಹುದು. ಸಾಕ್ಷಾತ್ **ಅಗ್ನಿಗೇ** ಈ ವಿಶೇಷಣವಿದೆಯೇ ಅಥವಾ ಈ ಹೆಸರಿನ ಬೇರೆ ದೇವತೆಯುಂಟೇ ಎಂಬ ವಿಷಯವನ್ನು ಋಕ್ಸಂಹಿತಾವಾಕ್ಯಗಳ ಆಧಾರಗಳೊಂದಿಗೂ ಕೆಲವು ಆಧುನಿಕಪಂಡಿತರ ಅಭಿಪ್ರಾಯಗಳೊಂದಿಗೂ ಋ. ಸಂ. ೧-೧೪೩-೧ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗುತ್ತೆ.

**ರಾಸ್ಪಿನಸ್ಯ— ರಾಸ್ಪಿನೋ ರಾಸ್ಪೀ ರಪತೇರ್ವಾ ರಸತೇರ್ವಾ ।** (ನಿ. ೬-೨೧) ಎಂಬ ನಿರುಕ್ತಕಾರರ ನಿರ್ವಚನದಂತೆ ಈ ಪದದ ಮೂಲವಾದ **ರಪ್** ಅಥವಾ **ರಸ್** ಎಂಬ ಧಾತುವಿನಿಂದ ನಿಷ್ಪನ್ನವಾಗಿ ಸ್ತೋತ್ರಮಾಡತಕ್ಕ ಯಜಮಾನನೆಂದರ್ಥವಾಗುತ್ತದೆ. ಸ್ತುತಿಕಾಲದಲ್ಲಿ ಹಿತಕರವಾದ ಶಬ್ದವಿರುವಂತೆ ಚಮಸಪಾತ್ರೆಯಿಂದಲೂ ಶಬ್ದವಾಗುವುದರಿಂದ ಅದನ್ನು ಹಿಡಿದಿರುವ ಯಜಮಾನನಿಗೂ ಸಹ—

**ಮಾತುಷ್ಪದೇ ಪರಮೇ ಶುಕ್ರ ಆಯೋರ್ವಿಪನ್ಯವೋ ರಾಸ್ಪಿರಾಸೋ ಅಗ್ಮನ್ ।**

(ಋ. ಸಂ. ೫-೪೩-೧೪)

ಎಂಬ ಋಕ್ಕಿನಲ್ಲಿ **ರಾಸ್ಪಿರಾಸಃ** ಎಂದಿದೆ.

॥ ವ್ಯಾಕರಣಪ್ರಕ್ರಿಯಾ ॥

**ತ್ಯಾ**—ತಚ್ಛಬ್ದ ಸಮಾನಾರ್ಥಕವಾದ ತ್ಯದ್ ಶಬ್ದ. ದ್ವಿವಚನ ಔ ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಯಶಸಾ ಎಂಬಲ್ಲಿಯೂ ಹೀಗೆಯೇ ಆಕಾರಾದೇಶ ಬಂದಿದೆ.

**ಶ್ವೇತನಾಯ್ಯೈ—ಸುಪಾಂ ಸುಪೋ ಭವಂತಿ**— ಎಂಬ ವಚನದಿಂದ ಷಷ್ಠ್ಯರ್ಥದಲ್ಲಿ ಚತುರ್ಥೀ ಬಂದಿದೆ.

**ವ್ಯಂತಾ**—ವೀ ಗತಿವ್ಯಾಪ್ತಿಪ್ರಜನಕಾಂತ್ಯಸನಖಾದನೇಷು ಧಾತು. ಅದಾದಿ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ**—(ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕ ಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಪ್ರತ್ಯಯಕ್ಕೆ ಙಿತ್ವ ವಿರುವುದರಿಂದ ಗುಣ ಬರುವುದಿಲ್ಲ. ಯಣಾದೇಶ. ವ್ಯತ್ ಶಬ್ದ. ದ್ವಿವಚನ ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೬) ಎಂಬುದರಿಂದ ಅದಕ್ಕೆ ಆಕಾರಾದೇಶ. ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ, ಪರಸವರ್ಣ. ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ.

**ಪಾಂತಾ**—ಪಾ ಪಾನೇ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ ಬಂದಾಗ **ಬಹುಲಂ ಛಂದಸಿ**—ಎಂಬುರಿಂದ ಅದಕ್ಕೆ ಲುಕ್. ಪಾತ್ ಶಬ್ದವಾಗುತ್ತದೆ. ಶಪ್ ಲುಕ್ಕಾದುದರಿಂದ ಪಿಬಾದೇಶ ಬರುವುದಿಲ್ಲ. ಹಿಂದಿನಂತೆ ದ್ವಿವಚನಕ್ಕೆ ಆಕಾರಾದೇಶ.

**ಔಶಿಜಃ**—ಉಶಿಜಃ ಅಪತ್ಯಂ ಪುಮಾನ್ ಔಶಿಜಃ. **ತಸ್ಯಾಪತ್ಯಮ್** (ಪಾ. ಸೂ. ೪-೧-೯೨) ಎಂಬುದರಿಂದ ಅಪತ್ಯಾರ್ಥದಲ್ಲಿ ಅಣ್ ಪ್ರತ್ಯಯ. ಣಿತ್ತಾದುದರಿಂದ **ತದ್ಧಿತೇಷ್ವಚಾಮಾದೇಃ**—(ಪಾ.ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹುವಧ್ಯೈ**—ಹ್ವೇಞ್ ಸ್ಪರ್ಧಾಯಾಂ ಶಬ್ದೇಚ ಧಾತು. ತುಮುನರ್ಥ ತೋರುವಾಗ **ತುಮರ್ಥೇ ಸೇಸೇ-ನಸೇ**—(ಪಾ. ಸೂ. ೩-೪-೯) ಎಂಬುದರಿಂದ ಶಧ್ಯೈ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪರಕ್ಕೆ ಪೂರ್ವರೂಪ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ **ಅಚಿಶ್ನುಧಾತುಭ್ರುವಾಂ**—ಎಂಬುದರಿಂದ ಉವಙಾದೇಶ. ಙಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ. ಏಜಂತವಾದುದರಿಂದ **ಕೃನ್ಮೇಜಂತಃ** (ಪಾ. ಸೂ. ೧-೧-೩೯) ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ನಪಾತಮ್**—ನ ಪಾತ್ ನಪಾತ್. ಪಾತ್ ಎಂಬುದು ಶತ್ರಂತ. ನಞ್ಸಮಾಸವಾದಾಗ **ನಭ್ರಾಣ್-ನಪಾತ್**—(ಪಾ. ಸೂ. ೬-೩-೭೫) ಎಂಬುದರಿಂದ ನಞಿಗೆ ಲೋಪಾಭಾವದೊಡನೆ ನಿಪಾತಿತವಾಗಿದೆ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅಪಾಮ್—ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕೃಣುಧ್ವಮ್**—ಕೃವಿ ಹಿಂಸಾಕರಣಯೋಶ್ಚ. ಧಾತು. ಇದಿತ್ತಾದುದರಿಂದ ನುಮಾಗಮ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಅಕಾರಾಂತಾದೇಶ. ಉ ಪ್ರತ್ಯಯ. **ಅತೋಲೋಪಃ** ಎಂಬುದರಿಂದ ಅಕಾರಕ್ಕೆ ಲೋಪ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ **ಸವಾಭ್ಯಾಂ ವಾಮೌ** ಎಂಬುದರಿಂದ ಟಿಗೆ ಅಮಾದೇಶ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಾತರಾ—ಸುಪಾಂ ಸುಲುಕ್**—ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ.

**ರಾಸ್ಪಿನಸ್ಯ**—ರಪ ವ್ಯಕ್ತಾಯಾಂ ವಾಚಿ. ಅಥವಾ ರಸ ಶಬ್ದೇ. ಧಾತು. ಇದಕ್ಕೆ ಘಞ್ ಪ್ರತ್ಯಯ ಬಂದಾಗ ಸ ಪಕಾರಾಗಮಗಳು ಕ್ರಮವಾಗಿ ಛಾಂದಸವಾಗಿ ಬರುತ್ತದೆ. ರಾಸ್ಪಮಸ್ಯ ಅಸ್ತಿ ಎಂದು ಅರ್ಥವಿವಕ್ಷಾ ಮಾಡಿದಾಗ **ಅತ ಇನಿಠನೌ**—ಎಂಬುದರಿಂದ ಇನಿ ಪ್ರತ್ಯಯ. ರಾಸ್ಪಿ ಎಂದರೆ ಸ್ತೋತ್ರ. ರಾಸ್ಪಿ ಅಸ್ಯ ಅಸ್ತಿ ಎಂದು ಅರ್ಥ ವಿವಕ್ಷಾ ಮಾಡಿದಾಗ ಮತ್ವರ್ಥದಲ್ಲಿ ಅಣ್ ಪ್ರತ್ಯಯ. ರಾಸ್ಪಿನ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಆ ವೋ ರುವಣ್ಯುಮೌಶಿಜೋ ಹುವಧ್ಯೈ ಘೋಷೇವ ಶಂಸಮರ್ಜುನಸ್ಯ ನಂಶೇ ।
ಪ್ರ ವಃ ಪೂಷ್ಣೇ ದಾವನ ಆँ ಅಚ್ಛಾ ವೋಚೇಯ ವಸುತಾತಿಮಗ್ನೇಃ ॥ ೫ ॥

॥ ಪದಪಾಠಃ ॥

ಆ । ವಃ । ರುವಣ್ಯುಂ । ಔಶಿಜಃ । ಹುವಧ್ಯೈ । ಘೋಷಾऽಇವ । ಶಂಸಂ । ಅರ್ಜುನಸ್ಯ । ನಂಶೇ ।
ಪ್ರ । ವಃ । ಪೂಷ್ಣೇ । ದಾವನೇ । ಆ । ಅಚ್ಛ । ವೋಚೇಯ । ವಸುऽತಾತಿಂ । ಅಗ್ನೇಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ದೇವಾಃ ಔಶಿಜಃ ಕಕ್ಷೀವಾನಹಂ ವೋ ಯುಷ್ಮಾಕಂ ಸಂಬಂಧಿನಂ ರುವಣ್ಯುಂ ರವಣೀಯಂ ಶಬ್ದನೀಯಂ ಶಂಸಂ ಸ್ತೋತ್ರಮಾ ಹುವಧ್ಯೈ ಯುಷ್ಮದಾಹ್ವಾನಾಯಾಚ್ಛಾ ವೋಚೇಯ । ಅಭಿಮುಖ್ಯೇನ ಬ್ರವೀಮಿ । ಯದ್ವಾ । ಅತ್ರಾಪ್ಯಶ್ವಿನಾವೇವೋಚ್ಯೇತೇ । ತಸ್ಮಿನ್ಪಕ್ಷೇ ಬಹುವಚನಂ ಪೂಜಾರ್ಥಂ । ಹೇ ಅಶ್ವಿನೌ ವೋ ಯುಷ್ಮಾನ್ ಘೋಷೇವೈತನ್ನಾಮಿಕಾ ಬ್ರಹ್ಮವಾದಿನೀವ । ಸಾ ಯಥಾರ್ಜುನಸ್ಯ ಶ್ವೇತವರ್ಣಸ್ಯ ಸ್ವಶರೀರಗತತ್ವಗ್ರೋಗಸ್ಯ ನಂಶೇ ನಾಶನಾಯ ಯಥಾಶ್ವಿನೋಃ ಶಂಸಮುಕಾರ್ಷೀತ್ ತದ್ವದಹಮಪೀತ್ಯರ್ಥಃ । ಹೇ ದೇವಾಃ ಯುಷ್ಮತ್ಸಂಬಂಧಿನೇ ದಾವನ ಆ ಅಭಿಮುಖ್ಯೇನ

ಫಲಸ್ಯ ದಾತ್ರೇ ಪೂಷ್ಣೇ ಪೋಷಕಾಯೈತನ್ನಾಮಕಾಯ ದೇವಾಯಾಪಿ॥ ಆಕಾರಸ್ಯಾಜಿಕೋSನುನಾಸಿಕ-ಶ್ಛಂದಸೀತಿ ಪ್ರಕೃತಿಭಾವಃ ॥ ಅಚ್ಛಾಭಿಮುಖ್ಯಗಮನೇನ ವೋಚೇಯ । ಸ್ತೌಮಿ । ವಚ ಪರಿಭಾಷಣೇ । ಲಿಙ್ಯಾಶಿಷ್ಯಙ್ । ವಚ ಉಮಿತ್ಯುಮ್ । ಕಿಂಚಾಗ್ನೇರ್ವಸುತಾತಿಂ ತತ್ಸಂಬಂಧಿ ಧನಮಪಿ ವೋಚೇಯ । ಸ್ತೌಮಿ ತಮೇವಾಗ್ನಿಂ ॥

॥ ಪ್ರತಿಪದಾರ್ಥ ॥

**(ದೇವಾಃ**—ಎಲೈ ಅಶ್ವಿನೀದೇವತೆಗಳೇ) | **ಔಶಿಜಃ**—ಕಕ್ಷೀವಂತನಾದ (ನಾನು) | **ವಃ**—ನಿಮ್ಮ ಸಂಬಂಧಿಯಾದ | **ರುವಣ್ಯುಂ**—ಘೋಷಿಸಲ್ಪಡಬೇಕಾದ | **ಶಂಸಂ**—ಸ್ತೋತ್ರವನ್ನು | **ಆ ಹುವಧ್ಯೈ**—ನಿಮ್ಮ ಆಹ್ವಾನಕ್ಕಾಗಿ | **ಅಚ್ಛ ಆ ವೋಚೇಯ**—(ಉದ್ದೇಶಿಸಿ) ಹೇಳುತ್ತೇನೆ; | **ವಃ**—ನಿಮ್ಮನ್ನು | **ಘೋಷಾ**—ಘೋಷಾ ಎಂಬ ಸ್ತ್ರೀಯು | **ಅರ್ಜುನಸ್ಯ**—ಶ್ವೇತವರ್ಣವಾದ (ಚರ್ಮರೋಗದ) | **ನಂಶೇ ಇವ**—ನಾಶಕ್ಕೋಸ್ಕರ | ಹೇಗೆ ಸ್ತುತಿಸಿದಳೋ ಹಾಗೆ (ನಾನೂ ಸ್ತುತಿಸುತ್ತೇನೆ) | (**ಹೇ ದೇವಾಃ**—ದೇವತೆಗಳೇ) | **ವಃ**—ನಿಮ್ಮ | **ದಾವನೇ**—ಫಲದಾನಮಾಡುವ | **ಪೂಷ್ಣೇ**—ಪೂಷನ್ ಎಂಬ ದೇವತೆಗೂ | (**ವೋಚೇಯ**—ಸ್ತುತಿಯನ್ನು ಹೇಳುತ್ತೇನೆ) | **ಅಗ್ನೇಃ**—ಅಗ್ನಿಯ | **ವಸುತಾತಿಂ**—ಐಶ್ವರ್ಯದಾತೃತ್ವವನ್ನೂ | (**ವೋಚೇಯ**—ಸ್ತುತಿಸುತ್ತೇನೆ.

॥ ಭಾವಾರ್ಥ ॥

(ಅಶ್ವಿನೀದೇವತೆಗಳೇ) ಕಕ್ಷೀವಂತನಾದ (ನಾನು) ನಿಮ್ಮ ಸ್ತುತಿಯನ್ನು ಗಟ್ಟಿಯಾಗಿ ನಿಮ್ಮನ್ನು ಆಹ್ವಾನಿಸುವುದಕ್ಕಾಗಿ, ಘೋಷಾನಾಮಕಸ್ತ್ರೀಯು (ತನ್ನ) ಶ್ವೇತವರ್ಣದ (ಚರ್ಮರೋಗ) ನಿವಾರಣೆಗಾಗಿ (ಸ್ತುತಿಸಿದಂತೆ) ಉಚ್ಚರಿಸುತ್ತೇನೆ ಎಲೈ ದೇವತೆಗಳೇ, (ನಿಮ್ಮನ್ನೂ) ಪೂಷದೇವತೆಯನ್ನೂ ಫಲದಾನಕ್ಕಾಗಿ (ಸ್ತುತಿಸುತ್ತೇನೆ); (ಹಾಗೆಯೇ) ಅಗ್ನಿಯ ಐಶ್ವರ್ಯದಾತೃತ್ವವನ್ನೂ (ಸ್ತುತಿಸುತ್ತೇನೆ.)

## English Translation.

I, the son of Usij, address to you (Ashwins) audible praises, in like mauner as Ghosha praised you for the removal of her white-tinted (skin]; I glorify (gods) the bauntiful Pushan (associated) with you, and I proclaim the munificnce of Agni.

॥ ವಿಶೇಷವಿಷಯಗಳು ॥

**ಘೋಷಾ**—ಇವಳು ಕಕ್ಷೀವಂತನ ಪುತ್ರಿಯೆಂದೂ, ಹತ್ತನೇ ಮಂಡಲದಲ್ಲಿ ೩೯-೪೦ಮತ್ತು ೪೧ನೇ ಸೂಕ್ತಗಳ ನಿರ್ಮಾತ್ರಿಯೆಂದೂ ಪ್ರಸಿದ್ಧಳಾಗಿದ್ದಾಳೆ. ಅವಳು ತನ್ನ ಕುಷ್ಠರೋಗವನ್ನು ನಾಶಮಾಡಿಕೊಳ್ಳಲು **ಅಶ್ವಿನೀ** ದೇವತೆಗಳನ್ನೂ ಪ್ರಾರ್ಥಿಸಿ ಅವರಿಂದ ಸಹಾಯವನ್ನು ಪಡೆದ ವಿಷಯವನ್ನು ಇಲ್ಲಿ ಸೂಚಿಸಿ ಅದರಂತೆಯೇ ಈ ಸೂಕ್ತ ದ್ರಷ್ಟೃವೂ ಆ ದೇವತೆಗಳನ್ನು ಸ್ತುತಿಸಿ ಅವರ ಅನುಗ್ರಹವನ್ನಪೇಕ್ಷಿಸುತ್ತಾನೆ. **ಘೋಷಾ** ಎಂಬುವಳು **ಅಶ್ವಿನೀ** ದೇವತೆಗಳಿಂದ ಸಹಾಯವನ್ನು ಪಡೆದ ಸಂದರ್ಭವು **ಬೃಹದ್ದೇವತೆಯಲ್ಲಿ** ಈ ರೀತಿ ಉಕ್ತವಾಗಿದೆ.

**ಆಸೀತ್ಕಾಕ್ಷೀವತೀ ಘೋಷಾ ಪಾಪರೋಗೇಣ ದುರ್ಭಗಾ ।**
**ಉವಾಸ ಷಷ್ಟಿಂ ವರ್ಷಾಣಿ ಪಿತುರೇವ ಗೃಹೇ ಪುರಾ ॥**
**ಆತಸ್ಥೇ ಮಹತೀಂ ಚಿಂತಾಂ ನ ಪುತ್ರೋ ನ ಪತಿರ್ಮಮ ।**
**ಜರಾಂ ಪ್ರಾಪ್ತಾ ಮುಧಾ ತಸ್ಮಾತ್ಪ್ರಪದ್ಯೇಽಹಂ ಶುಭಸ್ಪತೀ ॥**
**ಯಥೈತೌ ಮಾಮಕಸ್ತಾತ ಆರಾಧ್ಯಾಪ ಯೌವನಂ ।**
**ಆಯುರಾರೋಗ್ಯಮೈಶ್ವರ್ಯಂ ಸರ್ವಭೂತಹನೇ ವಿಷಂ ॥**
**ರೂಪವತ್ತಾಂ ಚ ಸೌಭಾಗ್ಯಮಹಂ ತಸ್ಯ ಸುತಾ ಯದಿ ।**
**ಮಮಾಪಿ ಮಂತ್ರಾಃ ಪ್ರಾದುಃಸ್ಯುರ್ಯೈಸ್ತೋಷ್ಯೇತೇ ಮಯಾಶ್ವಿನೌ ॥**
**ಚಿಂತಯಂತೀತಿ ಸೂಕ್ತೇ ದ್ವೇ ಯೋ ವಾಂ ಪರಿ ದದರ್ಶ ಸಾ ।**
**ಸ್ತುತೌ ತಾವಶ್ವಿನೌ ದೇವೌ ಪ್ರೀತೌ ತಸ್ಯಾ ಭಗಾಂತರಂ ॥**
**ಪ್ರವಿಶ್ಯ ವಿಜರಾರೋಗಾಂ ಸುಭಗಾಂ ಚಕ್ರತುಶ್ಚ ತೌ ।**
**ಭರ್ತಾರಂ ದದತುಸ್ತಸ್ಯೈ ಸುಹಸ್ತ್ಯಂ ಚ ಸುತಂ ಮುನಿಂ ॥**
**ದದತುಸ್ತತ್ಸಪರ್ಣಾಭ್ಯಾಂ ಯನ್ನಾಸತ್ಯೇತಿ ಕೀರ್ತ್ಯತೇ ।**
**ಕಾಕ್ಷೀವತ್ಯೈ ಚ ಘೋಷಾಯೈ ನ ತಸ್ಯಾಮಾಜುರೋಽನಯಾ ॥**

(ಬೃ. ದೇ. ೭-೪೨ ರಿಂದ ೪೮)

ಕಕ್ಷೀವಂತನ ಪುತ್ರಿಯಾದ **ಘೋಷಾ** ಎಂಬ ಸ್ತ್ರೀಯು ಒಂದು ದುಷ್ಟ ರೋಗದಿಂದ ವಿಕೃತಳಾದವಳು. ಆದುದ ರಿಂದ ಅರವತ್ತು ವರ್ಷ ವಯಸ್ಸಿನವರೆಗೂ ತನ್ನ ತಂದೆಯ ಮನೆಯಲ್ಲಿಯೇ ಉಳಿಯಬೇಕಾಯಿತು. ಆಗ ಅವಳು ಪತಿಪುತ್ರರಹಿತಳಾದ ತನ್ನ ಜೀವನದ ವಿಷಯದಲ್ಲಿ ಜಿಗುಪ್ಸೆಪಟ್ಟು ತನ್ನ ತಂದೆಯು ಯಾವ ದೇವತೆಗಳನ್ನೂ ಆರಾಧಿಸಿ ಯೌವನವನ್ನು ಪಡೆದನೋ ತಾನೂ ಸಹ **ಶುಭಸ್ಪತಿ**ಗಳಾದ ಅದೇ ಅಶ್ವಿನೀದೇವತೆಗಳನ್ನೇ ಆರಾಧಿಸಬೇಕೆಂದಪೇಕ್ಷಿಸಿ ಅವರನ್ನು ಪೂಜಿಸಲು ಬೇಕಾದ ನಿಯಮಗಳನ್ನೂ ತಂತ್ರಗಳನ್ನೂ ತಿಳಿಯಲಿಚ್ಛಿಸಿದಳು. ಅದೇ ಧ್ಯಾನದಲ್ಲಿದ್ದಾಗ ಅವಳಿಗೆ **ಯೋ ವಾಂ ಪರಿಜ್ಮಾ** (೧೦-೩೯,೪೦) ಎಂಬ ವಾಕ್ಯದಿಂದ ಪ್ರಾರಂಭವಾಗುವ ಎರಡು ಸೂಕ್ತಗಳ ದರ್ಶನ ವಾಯಿತು. ಅವುಗಳನ್ನು ಪಠಿಸಿ ಅವಳು ಅಶ್ವಿನೀದೇವತೆಗಳನ್ನು ಸ್ತುತಿಸಲು ಅವರು ಅವಳನ್ನು ರೋಗರಹಿತಳನ್ನಾ ಗಿಯೂ, ಸುಂದರಳನ್ನಾಗಿಯೂ ಮಾಡಿ ಅವಳಿಗೆ ಪತಿಯನ್ನೂ ಸುಹಸ್ತ್ಯನೆಂಬ ಪುತ್ರನನ್ನೂ ಅನುಗ್ರಹಿಸಿದರು ಎಂಬ ಈ ಕಥೆಯನ್ನು ಸೂಚಿಸಿದ್ದಾರೆ. ಅವಳ ವ್ಯಾಧಿಗೆ **ಅರ್ಜುನ** ಎಂಬ ಹೆಸರೆಂದು ಈ ಋಕ್ಕಿನಲ್ಲಿ ಹೇಳಿರುವ ವರ್ಣನೆ ಯಿಂದ ತಿಳಿಯುತ್ತದೆ. ಸಾಧಾರಣವಾಗಿ **ಅರ್ಜುನ** ಶಬ್ದಕ್ಕೆ ಧಾವಳ್ಯ ಪ್ರಕಾಶವೆಂಬ ಅರ್ಥವೇ ಇದೆ.

**ವಯಶ್ಚಿತ್ತೇ ಪತತ್ರಿಣೋ ದ್ವಿಪಚ್ಚತುಷ್ಪದರ್ಜುನಿ ।**

(ಋ. ಸಂ.೧-೪೯-೩)

**ಅಹಶ್ಚ ಕೃಷ್ಣಮಹರರ್ಜುನಂ ಚ ವಿ ವರ್ತೇತೇ ರಜಸೀ ವೇದ್ಯಾಭಿಃ ।**

(ಋ. ಸಂ. ೬-೯-೧)

ಇತ್ಯಾದಿ ಋಕ್ಕುಗಳಲ್ಲಿ ಧಾವಳ್ಯವೆಂಬ ಅರ್ಥದಲ್ಲಿ ಈ ಪದದ ಪ್ರಯೋಗವಿದೆ. ಇದು ಅಂಕಿತನಾಮವಾಗಿಯೂ ಒಬ್ಬ ವ್ಯಕ್ತಿಯ ಹೆಸರಾಗಿದೆ. [ಪುರಾಣದ ಅರ್ಜುನನಲ್ಲ.] ಪ್ರಕೃತವಾದ ಋಕ್ಕಿನಲ್ಲಿ ವ್ಯಾಧಿಯ ಹೆಸರೆಂದು (ತೊನ್ನು) ಸಾಯಣರು ವಿವರಿಸಿದ್ದಾರೆ. ಅಶ್ವಿನೀದೇವತೆಗಳ ಅನುಗ್ರಹದಿಂದ ಈ ವ್ಯಾಧಿಯು ನಾಶವಾಯಿತೆಂದೂ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಶಂಸಮ್**—ಶಂಸು ಸ್ತುತೌ. ಧಾತು. ಇದಕ್ಕೆ ಘಞ್‌ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ನಂಶೇ**—ಣಶ ಅದರ್ಶನೇ ಧಾತು. ದಿವಾದಿ. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಛಾಂದಸವಾಗಿ ನುಮಾಗಮ. ಚತುರ್ಥೀ ಏಕವಚನಾಂತರೂಪ.

**ಪೂಷ್ಣೇ**—ಪೂಷ ವೃದ್ಧೌ. ಧಾತು. **ಶ್ವನ್ನುಕ್ಷನ್**—(ಉ. ಸೂ. ೧-೧೫೭) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚತುರ್ಥೀ ಏಕವಚನದಲ್ಲಿ **ಅಲ್ಲೋಪೋಽನಃ** ಎಂಬುದರಿಂದ ಅನಿನ ಅಕಾರಕ್ಕೆ ಲೋಪ. **ಅನುದಾತ್ತಸ್ಯ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಆ ಅಚ್ಛ**—**ಆಙೋಽನುನಾಸಿಕಶ್ಛಂದಸಿ** (ಪಾ. ಸೂ. ೬-೧-೧೨೬) ಎಂಬುದರಿಂದ ಅಚ್ ಪರದಲ್ಲಿರುವಾಗ ಆಙಿನ ಆಕಾರಕ್ಕೆ ಛಂದಸ್ಸಿನಲ್ಲಿ ಅನುನಾಸಿಕತ್ವ ಬರುತ್ತದೆ. ಅದು ಪ್ರಕೃತಿಭಾವವನ್ನು ಹೊಂದುತ್ತದೆ. ಆದುದರಿಂದ ಸವರ್ಣದೀರ್ಘ ಬರುವುದಿಲ್ಲ.

**ಅಚ್ಛ ವೋಚೇಯ**—ಅಚ್ಛ ಆಭಿಮುಖ್ಯಗಮನೇನ ವೋಚೇಯ. ಸ್ವಾಮಿ. ವಚ ಪರಿಭಾಷಣೇ. ಧಾತು. ಲಿಙ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಇಟೋಽತ್** (ಪಾ. ಸೂ. ೩-೪-೧೦೬) ಎಂಬುದರಿಂದ ಅದಕ್ಕೆ ಅಕಾರಾದೇಶ. **ಲಿಙ್ಯಾಶಿಷ್ಯಙ್** (ಪಾ. ಸೂ. ೩-೧-೮೬) ಎಂಬುದರಿಂದ ಅಙ್. **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಅಙ್ ಪರವಾದಾಗ ಧಾತುವಿಗೆ ಉಮಾಗಮ. **ಮಿದಚೋಽಂತ್ಯಾತ್ಪರಃ** ಎಂಬ ಪರಿಭಾಷೆಯಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಪ್ರತ್ಯಯಕ್ಕೆ ಸೀಯುಟಾಗಮ. ಗುಣ. ವೋಚೇಯ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿ ಬಂದುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ. ಅಚ್ಛ ಎಂಬುದಕ್ಕೆ **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವಸುತಾತಿಮ್**—**ಸರ್ವದೇವಾತ್ತಾತಿಲ್** (ಪಾ. ಸೂ. ೪-೪-೧೪೨) ಎಂಬುದರಿಂದ ಸ್ವಾರ್ಥದಲ್ಲಿ ವಿಧಿಸಲ್ಪಡುವ ತಾತಿಲ್ ಪ್ರತ್ಯಯವು ವ್ಯತ್ಯಯದಿಂದ ವಸುಶಬ್ದದಮೇಲೂ ಬರುತ್ತದೆ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೭-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅಗ್ನೇಃ**—ಅಗಿ ಗತೌ ಧಾತು. **ಅಂಗೇರ್ನಲೋಪಶ್ಚ** (ಉ. ಸೂ. ೪-೪೯೦) ಎಂಬುದರಿಂದ ನಿ ಪ್ರತ್ಯಯ **ಇದಿತೋನುಮ್ ಧಾತೋಃ** ಎಂಬುದರಿಂದ ಬಂದಿರುವ ನುಮಾಗಮದ ನಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ. ॥ ೫ ॥



॥ ಸಂಹಿತಾಪಾಠಃ ॥

ಶ್ರುತಂ ಮೇ ಮಿತ್ರಾವರುಣಾ ಹವೇಮೋತ ಶ್ರುತಂ ಸದನೇ ವಿಶ್ವತಃ ಸೀಂ ।
ಶ್ರೋತು ನಃ ಶ್ರೋತುರಾತಿಃ ಸುಶ್ರೋತುಃ ಸುಕ್ಷೇತ್ರಾ ಸಿಂಧುರದ್ಭಿಃ ॥ ೬ ॥

॥ ಪದಪಾಠಃ ॥

ಶ್ರುತಂ । ಮೇ । ಮಿತ್ರಾವರುಣಾ । ಹವಾ । ಇಮಾ । ಉತ । ಶ್ರುತಂ । ಸದನೇ । ವಿಶ್ವತಃ । ಸೀಂ ।
ಶ್ರೋತು । ನಃ । ಶ್ರೋತುಽರಾತಿಃ । ಸುಽಶ್ರೋತುಃ । ಸುಽಕ್ಷೇತ್ರಾ । ಸಿಂಧುಃ । ಅತ್ಽಭಿಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಮಿತ್ರಾವರುಣಾ ಏತನ್ನಾಮಾನಾವಹೋರಾತ್ರಾಭಿಮಾನಿದೇವೌ ಯುವಾಮಿಮೇಮಾನಿ ಹವಾಸ್ಮದಾಹ್ವಾನಾನಿ ಶ್ರುತಂ । ಶೃಣುತಂ । ನ ಕೇವಲಮಸ್ಮದಾಹ್ವಾನಂ ಉತಾಪಿ ಚ ಸದನೇ ಯಾಗಗೃಹೇ ವಿಶ್ವತ ಉದ್ಗಾತ್ರಾದಿಭಿಃ ಸರ್ವತಃ ಕ್ರಿಯಮಾಣಂ ಸೀಮೇತತ್ಸ್ತೋತ್ರಮಪಿ ಶ್ರುತಂ । ಶೃಣುತಂ ॥ ಕಿಂಚ ಶ್ರೋತುರಾತಿಃ ಸರ್ವತ್ರ ಶ್ರೂಯಮಾಣಧನಸ್ತಾದೃಶದಾನೋ ವಾ ಸುಶ್ರೋತುರಸ್ಮದಾಹ್ವಾನಸ್ಯ ಸಮ್ಯಕ್ಶ್ರೋತಾ ಸಿಂಧುರ್ಜಲಾಭಿಮಾನೀ ದೇವಃ ಸುಕ್ಷೇತ್ರಾ ಸುಕ್ಷೇತ್ರಾಣ್ಯದ್ಭಿರ್ವರ್ಷಜಲೈಃ ಕ್ಲೇದಯನ್ನಿತಿ ಶೇಷಃ । ಯದ್ವಾ । ಅಸ್ಮತ್ಕ್ಷೇತ್ರಾಣ್ಯದ್ಭಿಃ ಸುಕ್ಷೇತ್ರಾಣಿ ಸಸ್ಯಾದಿಸಮೃದ್ಧಾನಿ ಕುರ್ವನ್ನೋ ಹವಂ ಶೃಣೋತು । ಸುಕ್ಷೇತ್ರತ್ವ ಲಾಭಾಯ ಶೃಣೋತ್ವಿತ್ಯರ್ಥಃ ॥ ಹವಾ ಇಮಾ । ಉಭಯತ್ರ ವಿಭಕ್ತ್ಯೈ ಆಕಾರಃ । ಶ್ರುತಮಿತ್ಯತ್ರ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

॥ ಪ್ರತಿಪದಾರ್ಥ ॥

**ಹೇ ಮಿತ್ರಾವರುಣ**—ಎಲೈ ಮಿತ್ರ ಮತ್ತು ವರುಣರೇ (ನೀವಿಬ್ಬರು) । **ಇಮಾ**—ಈ । **ಹವಾ**—(ನಮ್ಮ) (ಸ್ತುತಿಪೂರ್ವಕಾ) ಹ್ವಾನವನ್ನು । **ಶ್ರುತಂ**—ಶ್ರವಣಮಾಡಿ । **ಉತ**—ಮತ್ತು । **ಸದನೇ**—ಯಾಗಗೃಹದಲ್ಲಿ । **ವಿಶ್ವತಃ**—(ಉದ್ಗಾತ್ರಾದಿಗಳಿಂದ) ಸರ್ವತ್ರ (ಮಾಡಲ್ಪಡುತ್ತಿರುವ) । **ಸೀಂ**—ಈ (ಸ್ತುತಿಯನ್ನೂ) । **ಶ್ರುತಂ**—ಕೇಳಿ । **ಶ್ರೋತುರಾತಿಃ**—ಪ್ರಸಿದ್ಧ ದಾನವುಳ್ಳ (ಪ್ರಸಿದ್ಧ ಧನಯುಕ್ತನಾದ) । **ಸುಶ್ರೋತುಃ**—(ನಮ್ಮ ಆಹ್ವಾನವನ್ನು) ಚೆನ್ನಾಗಿ ಕೇಳಿದ । **ಸಿಂಧುಃ**—ಜಲಾಭಿಮಾನಿದೇವತೆಯು । **ಅದ್ಭಿಃ**—(ನಮ್ಮ ಕ್ಷೇತ್ರಗಳನ್ನು) ಉದಕದಿಂದ । **ಸುಕ್ಷೇತ್ರಾ**—ಫಲವತ್ತಾದ ಕ್ಷೇತ್ರವನ್ನಾಗಿ (ಮಾಡಿ) । **ನಃ**—ನಮ್ಮ (ಸ್ತುತಿಯನ್ನು) । **ಶ್ರೋತು**—ಕೇಳಲಿ.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ನಮ್ಮ ಸ್ತುತಿಪೂರ್ವಕಾಹ್ವಾನವನ್ನು ಕೇಳಿ ; ಯಾಗಗೃಹದಲ್ಲಿ (ಉದ್ಗಾತೃವೇ ಮೊದಲಾದವರಿಂದ) ಸರ್ವತ್ರ (ಮಾಡಲ್ಪಡುತ್ತಿರುವ) ಸ್ತುತಿಯನ್ನೂ ಕೇಳಿ ; ಸುಪ್ರಸಿದ್ಧ ದಾನಿಯಾದ ಜಲಾಭಿಮಾನಿ ದೇವತೆಯು (ಸಿಂಧುವು) ನಮ್ಮ ಆಹ್ವಾನವನ್ನು ಚೆನ್ನಾಗಿ ಕೇಳಿ, (ನಮ್ಮ ಕ್ಷೇತ್ರಗಳ ಮೇಲೆ) ಉದಕವನ್ನು (ಸುರಿಸಿ) (ಅವುಗಳನ್ನು) ಫಲವತ್ತಾಗಿ ಮಾಡಲಿ.

English Translation.

Mitra and Varuna, hear these my invocations, and moreover listen to those (that are) everywhere (uttered) in the chamber of sacrifice; and may Sindhu, the renowned bestower of wealth, hear us, (fertilizing our) broad fields with water.

॥ ವಿಶೇಷವಿಷಯಗಳು ॥

ಈ ಋಕ್ಕಿನ ಕೊನೆಯ ಪಾದವು ಛಂದೋಬದ್ಧವಾಗಿಲ್ಲವೆಂಬ ಒಂದು ದೋಷವನ್ನು ತೋರಿಸಿ Bloomfield ಎಂಬ ಆಂಗ್ಲ ಪಂಡಿತನು ಹೀಗೆ ಹೇಳಿದ್ದಾನೆ.

The entire stanza with its hysterical repetition of root ಶ್ರು is secondary clap-trap, its last Pada is metrically defective. It is quite probable that such a versifix borrowed his first pada from the faultless stanza VII 62. 5.

**ಪ್ರ ಬಾಹವಾ ಸಿಸೃತಂ ಜೀವಸೇ ನ ಆ ನೋ ಗವ್ಯೂತಿಮುಕ್ಷತಂ ಘೃತೇನ ।**
**ಆ ನೋ ಜನೇ ಶ್ರವಯತಂ ಯುವಾನಾ ಶ್ರುತಂ ಮೇ ಮಿತ್ರಾವರುಣಾ ಹವೇಮಾ ।**

(ಋ. ಸು. ೭-೬೨-೫)

ಎಂಬ ಋಕ್ಕಿನ **ಶ್ರುತಂ ಮೇ ಮಿತ್ರಾವರುಣಾ ಹವೇಮ** ಎಂಬ ಕೊನೆಯ ಪಾದವನ್ನು ಇಲ್ಲಿ ಮೊದಲನೆಯ ಪಾದವನ್ನಾಗಿ ಮಾಡಿಕೊಂಡು ಈ ಋಕ್ಕನ್ನು ನಿರ್ಮಿಸಿರುವುದು ಸಾಧ್ಯವೆಂದು ಅವನು ಅಭಿಪ್ರಾಯಪಟ್ಟಿದ್ದಾನೆ.

[Rigveda Repititions Pt. I. P. 126]

**ಸೀಂ-ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ ।** (ನಿ. ೧-೭) ಸಂಪೂರ್ಣವಾಗಿ ಎಂಬರ್ಥದಲ್ಲೂ ಪದಪೂರಣಕಾಲದಲ್ಲಿಯೂ ಈ ಪದದ ಪ್ರಯೋಗವಿದೆಯೆಂದೂ ನಿರುಕ್ತಕಾರರು ಹೇಳಿ,

**ಪ್ರ ಸೀಮಾದಿತ್ಯೋ ಅಸೃಜದ್ವಿಧರ್ತಾ ಋತಂ ಸಿಂಧವೋ ವರುಣಸ್ಯ ಯಂತಿ ।**

(ಋ. ಸಂ. ೨-೨೮-೪)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಸೀಂ** ಎಂಬ ಪದಕ್ಕೆ **ಸರ್ವತಃ** ಎಲ್ಲಾ ಕಡೆಯಲ್ಲಿಯೂ ಎಂಬರ್ಥವನ್ನು ಹೇಳಬಹುದು ಅಥವಾ ಆ ಪದವನ್ನು ಕೇವಲ **ಪದ** ಪೂರಣವೆಂದು ತಿಳಿದು ಅರ್ಥಮಾಡದೆಯೇ ಇರಬಹುದು ಎಂದು ತೋರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ **ವಿಶ್ವತಃ** ಎಂಬ ಪದದಿಂದಲೇ **ಸರ್ವತಃ** ಎಂಬ ಅರ್ಥವು ತೋರುವುದ ರಿಂದ **ಸೀಂ** ಎಂಬ ಪದವು ಕೇವಲ ಪಾದಪೂರಣವೆಂದು ತಿಳಿಯಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಶ್ರುತಮ್**—ಶ್ರು ಶ್ರವಣೇ, ಧಾತು. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ಥಸಿಗೆ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಸಾರ್ವಧಾತುಕಮಪಿತ್** ಸೂತ್ರ ದಿಂದ ಪ್ರತ್ಯಯಕ್ಕೆ ಙಿದ್ವದ್ಭಾವ ಬರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕ್ಕಿಗೆ ಗುಣ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರ ಬರುವುದರಿಂದ ಅಂತೋದಾತ್ತವಾದ ಪದ ವಾಗುತ್ತದೆ.

**ಮಿತ್ರಾವರುಣಾ**—ಮಿತ್ರಶ್ಚ ವರುಣಶ್ಚ ಮಿತ್ರಾವರುಣೌ **ದೇವತಾದ್ವಂದ್ವೇ ಚ** (ಪಾ. ಸೂ. ೬-೩-೨೬) ಎಂಬುದರಿಂದ ಪೂರ್ವಪದಕ್ಕೆ ಆನಙ್ ಆದೇಶ. ಸಂಬೋಧನಾದಲ್ಲಿ ದ್ವಿವಚನ ಬಂದಾಗ **ಸುಪಾಂ ಸುಲುಕ್**— ಎಂಬುದರಿಂದ ಅದಕ್ಕೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಹವಾ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಭಾವಾರ್ಥದಲ್ಲಿ **ಭಾವೇಽನುಪಸರ್ಗಸ್ಯ** (ಪಾ ಸೂ. ೩-೩-೭೫) ಎಂಬುದರಿಂದ ಅಪ್‌ಪ್ರತ್ಯಯ ಬರುತ್ತದೆ. ತತ್ಸಂನಿಯೋಗದಿಂದ ಧಾತುವಿಗೆ ಸಂಪ್ರಸಾರಣ ಪೂರ್ವರೂಪ. ಪ್ರತ್ಯಯನಿಮಿತ್ತವಾಗಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಹವ ಎಂದು ರೂಪವಾಗುತ್ತದೆ. ದ್ವಿತೀಯಾ ಬಹುವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ. ಇಮಾ ಎಂಬಲ್ಲಿಯೂ ಹೀಗೆಯೇ ವಿಭಕ್ತಿಗೆ ಆಕಾರಾದೇಶ ಬರುತ್ತದೆ.

**ಸದನೇ**—ಷದ್‌ಲೃ ವಿಶರಣಗತ್ಯವಸಾದನೇಷು. ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪), ಎಂಬುದರಿಂದ ಆದಿಗೆ ಸತ್ವ. ಸೀದಂತಿ ಅಸ್ಮಿನ್ ಇತಿ ಸದನಂ ಗೃಹಮ್ ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩), ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ವಿಶ್ವತಃ**—**ಪಂಚಮ್ಯಾಃ ತಸಿಲ್** (ಪಾ. ಸೂ. ೫-೩-೭) ಎಂಬುದರಿಂದ ಪಂಚಮ್ಯರ್ಥದಲ್ಲಿ ತಸಿಲ್ ಪ್ರತ್ಯಯ. ಪ್ರತ್ಯಯ ಲಿತ್ತಾದುದರಿಂದ **ಲಿತಿ** ಎಂಬುದರಿಂದ ಪ್ರತ್ಯಯಪೂರ್ವಕ್ಕೆ ಉದಾತ್ತಸ್ವರ ಬರುವುದರಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ಶ್ರೋತು**—ಶ್ರು ಶ್ರವಣೇ. ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಏರುಃ** ಸೂತ್ರದಿಂದ ಪ್ರತ್ಯಯಕ್ಕೆ ಉತ್ವ. ತನ್ನಿಮಿತ್ತವಾಗಿ

ಧಾತುವಿನ ಉಕಾರಕ್ಕೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಸುಕ್ಷೇತ್ರಾ**—ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಅದ್ಭಿಃ**—ಅಪ್ ಶಬ್ದ. ಭಿಸ್ ಪರವಾದಾಗ **ಅಪೋ ಭಿ** (ಪಾ. ಸೂ. ೭-೪-೪೮) ಎಂಬುದರಿಂದ ತಕಾರ ಅಂತಾದೇಶವಾಗಿ ಬರುತ್ತದೆ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಸ್ತುಷೇ ಸಾ ವಾಂ ವರುಣ ಮಿತ್ರ ರಾತಿರ್ಗವಾಂ ಶತಾ ಪೃಕ್ಷಯಾಮೇಷು ಪಜ್ರೇ ।
ಶ್ರುತರಥೇ ಪ್ರಿಯರಥೇ ದಧಾನಾಃ ಸದ್ಯಃ ಪುಷ್ಟಿಂ ನಿರುಂಧಾನಾಸೋ ಅಗ್ಮನ್ ॥ ೭ ॥

॥ ಪದಪಾಠಃ ॥

ಸ್ತುಷೇ । ಸಾ । ವಾಂ । ವರುಣ । ಮಿತ್ರ । ರಾತಿಃ । ಗವಾಂ । ಶತಾ । ಪೃಕ್ಷಽಯಾಮೇಷು । ಪಜ್ರೇ ।
ಶ್ರುತಽರಥೇ । ಪ್ರಿಯಽರಥೇ । ದಧಾನಾಃ । ಸದ್ಯಃ । ಪುಷ್ಟಿಂ । ನಿಽರುಂಧಾನಾಸಃ । ಅಗ್ಮನ್ ॥ ೭ ॥

॥ ಸಾಯಣಭಾಷ್ಯಂ ॥

ಹೇ ಮಿತ್ರ ಹೇ ವರುಣ ದೇವ ವಾಂ ಯುವಾಮಹಂ ಸ್ತುಷೇ । ಸ್ತುವೇ ॥ ವ್ಯತ್ಯಯೇನ ಮಧ್ಯಮಃ ॥ ಯುವಯೋಃ ಸಂಬಂಧಿನೀ ಸಾ ಪ್ರಸಿದ್ಧಾ ರಾತಿರ್ದಾನಂ ಶತಾ ಶತಾನಾಂ ಶತಸಂಖ್ಯಾನಾಮಪರಿಮಿತಾನಾಂ ಗವಾಂ ಸಂಬಂಧಿನ್ಯಸಂಖ್ಯಾತಗೋವಿಷಯಾ ರಾತಿಃ ಪಜ್ರೇ ಕಕ್ಷೀವತಿ ಮಯಿ ಪೃಕ್ಷಯಾಮೇಷು । ಪೃಕ್ಷ ಇತ್ಯೇಕಾರಾಂತೋಽಪ್ಯಸ್ತಿ । ಪೃಕ್ಷಾಣಾಮನ್ನಾನಾಂ ನಿಯಮನಂ ಯೇಷು ಸ್ತೋತ್ರೇಷು ಯಜ್ಞೇಷು ವಾ ತೇಷು ನಿಮಿತ್ತಭೂತೇಷು ಭವತ್ವಿತಿ ಶೇಷಃ । ಕಿಂಚ ಮಿತ್ರಾದಯೋ

**ದೇವಾಃ ಶ್ರುತರಥೇ ಸರ್ವತ್ರ ಪ್ರಸಿದ್ಧರಥೋಪೇತೇ ಪ್ರಿಯರಥೇ ಪ್ರೀಯಮಾಣರಥಯುಕ್ತೇ ಸರ್ವದಾ ರಥಪ್ರಿಯೇ ಪಜ್ರೇ ಚ ಮಯ್ಯೇವ ದಧಾನಾಃ ಪ್ರೀತಿಂ ಧಾರಯಂತಃ ಸದ್ಯ ಆಗಮನಾನಂತರಮೇವ ಪುಷ್ಟಿಂ ಗವಾದಿಪೋಷಂ ನಿರುಂಧಾನಾಸೋಽವರುಂಧಾನಾ ಅಸ್ಮಾಸ್ವೇವ ಸ್ಥಾಪಯಂತಃ । ಯದ್ವಾ । ಮಯಿ ಪುಷ್ಟಿಂ ದಧಾನಾಃ ಕುರ್ವಾಣಾ ನಿರುಂಧಾನಾಸಃ ಕೃತಾಮೇವ ಪುಷ್ಟಿಂ ಮಯಿ ಸ್ಥಿರಾಂ ಕುರ್ವಂತೋಽಗ್ಮನ್ । ಆಗಚ್ಛಂತು ॥ ರಾತಿಃ । ರಾ ದಾನೇ । ಭಾವೇ ಕ್ತಿನ್ । ಮಂತ್ರೇ ವೃಷೇತ್ಯಾದಿನಾ ಕ್ತಿನ ಉದಾತ್ತತ್ವಂ । ಶತಾ । ಸುಪಾಂ ಸುಲುಗಿತಿ ಷಷ್ಠ್ಯಾಃ ಪೂರ್ವಸವರ್ಣದೀರ್ಘತ್ವಂ । ದಧಾನಾಃ । ಜುಹೋತ್ಯಾದಿತ್ವಾಚ್ಛಪಃ ಶ್ಲುಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಅಗ್ಮನ್ । ಗಮೇಶ್ಛಾಂದಸೇ ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ಗಮಹನೇತ್ಯುಪಧಾಲೋಪಃ ॥**

॥ ಪ್ರತಿಪದಾರ್ಥ ॥

**ಹೇ ಮಿತ್ರ ಹೇ ವರುಣ**—ಎಲೈ ಮಿತ್ರ ಮತ್ತು ವರುಣರೇ । **ವಾಂ**—ನಿಮ್ಮಿಬ್ಬರನ್ನೂ । **ಸ್ತುಷೇ**—[ನಾನು] ಸ್ತುತಿಸುತ್ತೇನೆ । **ಸಾ**—ಪ್ರಸಿದ್ಧವೂ ॥ **ಶತಾ**—ಅಪರಿಮಿತವೂ ಆದ । **ಗವಾಂ**—ಗೋವುಗಳ । **ರಾತಿಃ**—ದಾನವು । **ಪಜ್ರೇ**—ಪಜ್ರ(ಕಕ್ಷೀವಂತ)ನಲ್ಲಿ (ನನ್ನಲ್ಲಿ) । **ಪೃಕ್ಷಯಾಮೇಷು**—ಆಹಾರ ನಿಯಮವುಳ್ಳ ಯಜ್ಞಗಳು ಅಥವಾ ಸ್ತೋತ್ರಗಳು [ನಿಮಿತ್ತವಾಗಿರಲು] । (**ಭವತು**—ಆಗಲಿ) । (**ಕಿಂಚ**—ಮತ್ತು) । **ಶ್ರುತರಥೇ**—ಪ್ರಸಿದ್ಧ ರಥವುಳ್ಳವನಾದ ಮತ್ತು । **ಪ್ರಿಯರಥೇ**—ಪ್ರಿಯವಾದ ರಥವುಳ್ಳವನಾದ ನನ್ನಲ್ಲಿ । **ದಧಾನಾಃ**—ಪ್ರೀತಿಯನ್ನಿಟ್ಟವರಾಗಿ । **ಸದ್ಯಃ**—[ಬಂದ]ನಂತರವೇ । **ಪುಷ್ಟಿಂ**—ಗವಾದಿ ಪುಷ್ಟಿಯನ್ನು । (**ದಧಾನಾಃ**—ನನಗೆ ಉಂಟು ಮಾಡಿದವರಾಗಿ) । **ನಿರುಂಧಾನಾಸಃ**—(ನಮ್ಮಲ್ಲೇ ಸ್ಥಾಪಿಸುವವರಾಗಿ (ಸ್ಥಿರವನ್ನಾಗಿ ಮಾಡಿ) । **ಅಗ್ಮನ್**—ಆಗಮಿಸಲಿ.

॥ ಭಾವಾರ್ಥ ॥

ಎಲೈ ಮಿತ್ರಾ ವರುಣರೇ, ನಿಮ್ಮಿಬ್ಬರನ್ನೂ ಸ್ತುತಿಸುತ್ತೇನೆ. ನಿಮ್ಮ ಪ್ರಸಿದ್ಧವಾದ ಅಸಂಖ್ಯಾತ ಗೋವುಗಳ ದಾನವನ್ನು ಆಹಾರಾದಿ ನಿಯಮಯುಕ್ತವಾದ ಯಾಗ ಕರ್ತೃವಾದ ನನಗೇ ಕೊಡಿ (ಎಲೈ ದೇವತೆಗಳೇ) ಪ್ರಸಿದ್ಧ ಮತ್ತು ಪ್ರಿಯವಾದ ರಥಗಳುಳ್ಳ (ರಥಪ್ರಿಯನಾದ) ನನ್ನಲ್ಲಿ ವಿಶ್ವಾಸವಿಟ್ಟು, ಗವಾದಿ ಪುಷ್ಟಿಯನ್ನು ಸ್ಥಿರೀಕರಿಸಲು ಆಗಮಿಸಿ,

## English Translation.

I praise you, Mitra and Varuna, for your gift of numerous cattle to the Pajra, and (from those praises) may abundant food (proceed). May (the gods), bestowiug nourishment on me, come quickly unimpeded, (each) in his famous and favourite car.

॥ ವಿಶೇಷವಿಷಯಗಳು ॥

**ಪೃಕ್ಷಯಾಮೇಷು**—**ಪೃಕ್ಷಶಬ್ದವು** ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) **ಪೃಕ್ಷಾಣಾಂ ಅನ್ನಾನಾಂ ನಿಯಮನಂ ಯೇಷು ಸ್ತೋತ್ರೇಷು ಯಜ್ಞೇಷು ವಾ** । ಸ್ತೋತ್ರನಿಮಿತ್ತವಾಗಿಯಾಗಲಿ ಅಥವಾ

ಯಜ್ಞನಿಮಿತ್ತವಾಗಿಯಾಗಲಿ ಎಂದು ತಾತ್ಪರ್ಯ. Monier williams ಎಂಬ ಪಂಡಿತನು ತನ್ನ Sanskrit-English Dictionary ಎಂಬ ಕೋಶದಲ್ಲಿ ಇದೇ ಋಕ್ಕಿನ ಈ ಪದವನ್ನು ನಿರ್ದೇಶಿಸಿ "Driviug swift horses' ಎಂಬ ಅರ್ಥವನ್ನು ಮಾಡಿ Probably name of a family, ಪ್ರಾಯಶಃ ಒಂದು ವಂಶದ ಹೆಸರಿರಬಹುದೆಂದು ಊಹಿಸಿದ್ದಾನೆ. ಮುಂದೆ **ಪ್ರಿಯರಥೇ ಶ್ರುತರಥೇ** ಎಂಬ ವಿಶೇಷಣಗಳು ಕಕ್ಷೀವಂತನ ರಥವನ್ನು ಕುರಿತು ಹೇಳುವುದರಿಂದ ಪ್ರಾಯಶಃ ಈ ಅರ್ಥಮಾಡಿರಬಹುದಾಗಿ ತೋರುತ್ತದೆ.

**ನಿರುಂಧಾನಾಸಃ—ಅವರುಂಧಾನಾಃ ಅಸ್ಮಾಸ್ವೇವ ಸ್ಥಾಪಯಂತಃ । ಯದ್ವಾ । ಮಯಿ ಪುಷ್ಟಿಂ ದಧಾನಾಃ ಕುರ್ವಾಣಾಃ ನಿರುಂಧಾನಾಸಃ ಕೃತಾಮೇವ ಪುಷ್ಟಿಂ ಮಯಿ ಸ್ಥಿರಾಂ ಕುರ್ವಂತಃ** । ಗವಾದಿ ಪುಷ್ಟಿಯನ್ನು ನನ್ನಲ್ಲಿ ಸ್ಥಾಪಿಸುವವರಾಗಿ ಎಂದಾಗಲಿ ಅಥವಾ ಸ್ಥಾಪಿಸಿದ ಪುಷ್ಟಿಯನ್ನು ಸ್ಥಿರವಾಗಿ ಉಳಿಯುವಂತೆ ಮಾಡುವವರಾಗಿ ಎಂದಾಗಲಿ ಎಂದಭಿಪ್ರಾಯ.

**ಪ್ರಿಯರಥೇ ಶ್ರುತರಥೇ**—ಸ್ವನಯನಿಂದ ಪ್ರಭೂತವಾಗಿ ಅಶ್ವಗಳೂ, ರಥಗಳೂ ದಾನಮಾಡಲ್ಪಟ್ಟ ಅತ್ಯುತ್ತಮವಾದ ರಥಗಳಿಗೆ ಸ್ವಾಮಿಯಾದುದರಿಂದ ಪ್ರಾಯಶಃ ಕಕ್ಷೀವಂತನು ಈ ವಿಶೇಷಣಗಳಿಂದ ತನ್ನನ್ನು ವರ್ಣಿಸಿಕೊಂಡಿರಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಸ್ತುಷೇ**—ಷ್ಟುಞ್ ಸ್ತುತೌ ಧಾತು. ಲಟ್ ಉತ್ತಮಪುರುಷ ಏಕವಚನದಲ್ಲಿ **ವ್ಯತ್ಯಯೋ ಬಹುಲಮ್** ಎಂಬುದರಿಂದ ಥಾಸ್ ಪ್ರತ್ಯಯ. **ಥಾಸಃಸೇ** ಎಂಬುದರಿಂದ ಅದಕ್ಕೆ ಸೇ ಆದೇಶ. **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ವ ಬರುವುದರಿಂದ ಧಾತುವಿಗೆ ಗುಣ ಬರುವುದಿಲ್ಲ. **ಆದೇಶಪ್ರತ್ಯಯಯೋಃ** ಸೂತ್ರದಿಂದ ಪ್ರತ್ಯಯಕ್ಕೆ ಷತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರಾತಿಃ**—ರಾ ದಾನೇ. ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಇದು ನಿತ್ತಾದರೂ **ಮಂತ್ರೇವೃಷೇಷಪಚ**—(ಪಾ. ಸೂ. ೩-೩-೯೬) ಎಂಬುದರಿಂದ ಇದಕ್ಕೆ ಉದಾತ್ತಸ್ವರ ಬರುತ್ತದೆ.

**ಶತಾ**—ಶತ ಶಬ್ದಕ್ಕೆ ಷಷ್ಠೀ ಬಹುವಚನ ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಪೂರ್ವ ಸವರ್ಣದೀರ್ಘ ಬರುತ್ತದೆ.

**ಪೃಕ್ಷಯಾಮೇಷು**—ಪೃಕ್ಷಾಣಾಂ ಯಾಮಃ ಯೇಷು ತೇ ಪೃಕ್ಷಯಾಮಾಃ . ತೇಷು . **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ. ಹೀಗೆಯೇ ಶ್ರುತರಥೇ ಪ್ರಿಯರಥೇ ಎಂಬಲ್ಲಿಯೂ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದಧಾನಾಃ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಎಂಬುದರಿಂದ **ಶ್ಲು** ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ **ಹ್ರಸ್ವಃ** ಸೂತ್ರದಿಂದ ಅಭ್ಯಾಸಕ್ಕೆ ಹ್ರಸ್ವ. ಜಶ್ತ್ವ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನಿರುಂಧಾನಾಸಃ**—ನಿ ಉಪಸರ್ಗ. ರುಧಿರ್ ಆವರಣೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚ್ಚಿನಪರವಾಗಿ ಬರುತ್ತದೆ. ಅಪಿತ್ತಾದ ಸಾರ್ವಧಾತುಕವಾದುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧.) ಎಂಬುದರಿಂದ ವಿಕರಣದ ಅಕಾರಕ್ಕೆ ಲೋಪ. ಉಳಿದ ನಕಾರಕ್ಕೆ ಅನುಸ್ವಾರ ಪರಸವರ್ಣ. **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಅಗ್ಮನ್**—ಗಮ್ಲೃ ಗತೌ ಧಾತು. ಲೋಟರ್ಥ ತೋರುವಾಗ **ಛಂದಸಿ ಲುಙ್‌ಲಙ್‌ಲಿಟಃ**–(ಪಾ.ಸೂ. ೩-೪-೬) ಎಂಬುದರಿಂದ ಲುಙ್. ಪ್ರಥಮಪುರುಷ ಬಹುವಚನದಲ್ಲಿ ಝಿ ಬಂದಾಗ ಅಂತಾದೇಶ. ಇಕಾರಲೋಪ. **ಮಂತ್ರೇಘಸ**—(ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿಗೆ ಲುಕ್. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ಧಾತುವಿನ ಉಪಧೆಗೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ಅಸ್ಯ ಸ್ತುಷೇ ಮಹಿಮಘಸ್ಯ ರಾಧಃ ಸಚಾ ಸನೇಮ ನಹುಷಃ ಸುವೀರಾಃ ।
ಜನೋ ಯಃ ಪಜ್ರೇಭ್ಯೋ ವಾಜಿನೀವಾನಶ್ವಾವತೋ ರಥಿನೋ ಮಹ್ಯಂ ಸೂರಿಃ ॥ ೮ ॥

॥ ಪದಪಾಠಃ ॥

ಅಸ್ಯ । ಸ್ತುಷೇ । ಮಹಿಽಮಘಸ್ಯ । ರಾಧಃ । ಸಚಾ । ಸನೇಮ । ನಹುಷಃ । ಸುಽವೀರಾಃ ।
ಜನಃ । ಯಃ । ಪಜ್ರೇಭ್ಯಃ । ವಾಜಿನೀಽವಾನ್ । ಅಶ್ವಽವತಃ । ರಥಿನಃ । ಮಹ್ಯಂ । ಸೂರಿಃ ॥ ೮ ॥

॥ ಸಾಯಣಭಾಷ್ಯಂ ॥

ಮಹಿಮಘಸ್ಯ । ಮಹಿ ಮಹತ್ಪೂಜ್ಯಂ ಮಘೋ ಧನಮನ್ನಂ ವಾ ಯಸ್ಯ ದೇವಸಂಘಸ್ಯ ಸ ತಥೋಕ್ತಃ । ತಾದೃಶಸ್ಯಾಸ್ಯ ರಾಧೋ ಧನಂ ಸ್ತುಷೇ । ಸ್ತುವೇ । ವ್ಯತ್ಯಯೇನ ಮಧ್ಯಮಃ । ಧನಲಾಭಾಯ ಪ್ರಭೂತಧನಂ ದೇವಸಂಘಂ ಸ್ತೌಮೀತ್ಯರ್ಥಃ । ಕಿಂಚ ನಹುಷಃ । ಮನುಷ್ಯಾನ್ನಾನ್ಮೈತತ್ ।

ಪರಸ್ಪರಸ್ನೇಹಬಂಧೋಪೇತಾ ಮನುಷ್ಯಾ ವಯಂ ಕಕ್ಷೀವಂತಃ ಸುವೀರಾಃ ಶೋಭನಪುತ್ರಾದ್ಯುಪೇತಾಃ ಸಂತಃ ಸಚಾ ಸಹ ಪರಸ್ಪರೈಕಮತ್ಯೇನ ಸನೇಮ । ತ್ವದ್ದತ್ತಂ ಧನಂ ಸಂಭಜೇಮ । ಲಭೇಮಹಿ । ದೇವಸಂಘೋ ವಿಶೇಷ್ಯತೇ । ಯೋ ಜನೋ ದೇವಜನೋ ಯಶ್ಚ ದೇವಸಂಘಃ ಪಜ್ರೇಭ್ಯೋಽಂಗಿರೋಗೋತ್ರೋತ್ಪನ್ನೇಭ್ಯಃ ಕಕ್ಷೀವದ್ಭ್ಯಃ । ಪಜ್ರಾ ವಾ ಅಂಗಿರಸ ಇತಿ ಶ್ರುತೇಃ । ತೇಭ್ಯೋ ವಾಜಿನೀವಾನ್ । ವಾಜೋಽನ್ನಂ । ತದ್ವತೀ ಕ್ರಿಯಾ ವಾಜಿನೀ । ತಯಾ ತದ್ವಾನ್ಭವತಿ । ಯದ್ವಾ । ಏಕೋ ಮತ್ವರ್ಥೀಯಪ್ರತ್ಯಯಶ್ಛಾಂದಸಃ । ಅಸ್ಮಭ್ಯಂ ಪ್ರದೇಯೇನ ದತ್ತೇನ ವಾನ್ನೇನ ತದ್ವಾನ್ಭವತೀತ್ಯರ್ಥಃ । ಯಶ್ಚ ದೇವಸಂಘೋಽಶ್ವಾವತೋ ಬಹುಭಿಸ್ತದ್ದತ್ತೈರಶ್ವೈಸ್ತದ್ವತೋ ರಥಿನೋ ರಥವತೋ ಮಹ್ಯಂ ಮೇ ಸೂರಿಃ ಪ್ರೇರಕೋ ಭವತಿ । ಅಶ್ವಾನಾಂ ರಥಾನಾಂ ಪ್ರೇರಯಿತಾರಂ ದೇವಸಂಘಂ ಸ್ತುಷ ಇತ್ಯರ್ಥಃ ॥ ಸುವೀರಾಃ । ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ । ಅಶ್ವಾವತಃ । ಅಶ್ವಶಬ್ದಸ್ಯ ಮಂತ್ರೇ ಸೋಮಾಶ್ವೇತ್ಯಾದಿನಾ ಮತುಪಿ ದೀರ್ಘತ್ವಂ ॥

॥ ಪ್ರತಿಪದಾರ್ಥ ॥

**ಯಃ ಜನಃ**—ಯಾವ ದೇವಸಂಘವು । **ಪಜ್ರೇಭ್ಯಃ**—ಆಂಗಿರಸಗೋತ್ರೋತ್ಪನ್ನರಾದಪಜ್ರರಿಗೆ (ಕಕ್ಷೀವಂತರೆಂಬ ನಮಗೆ) । **ವಾಜಿನೀವಾನ್**—(ದೇಯವಾದ)ಅನ್ನಯುಕ್ತರೋ । (**ಯಃ ಜನಃ**—ಯಾವ ದೇವ ಸಂಘವು) । **ಅಶ್ವಾವತಃ**—(ತದ್ದತ್ತವಾದ) ಅಶ್ವಯುಕ್ತನೂ । **ರಥಿನಃ**—ರಥಯುಕ್ತನೂ(ಆದ) । **ಮಹ್ಯಂ**—ನನಗೆ । **ಸೂರಿಃ**—ಪ್ರೇರಕವೋ । (**ತಸ್ಯ**—ಅಂಥಾ) । **ಮಹಿಮಘಸ್ಯ**—ಶ್ರೇಷ್ಠವಾದ ಧನ (ಅನ್ನ) ಯುಕ್ತವಾದ । **ಅಸ್ಯ**—ಈ ದೇವಸಂಘದ । **ರಾಧಃ**—ಧನವನ್ನು । **ಸ್ತುಷೇ**—ಸ್ತುತಿಸುತ್ತೇನೆ । **ಕಿಂಚ**—ಮತ್ತು **ನಹುಷಃ**—ಮನುಷ್ಯರಾದ ನಾವು । **ಸುವೀರಾಃ**—ಉತ್ತಮ ಪುತ್ರಾದಿಯುಕ್ತರಾಗಿ । **ಸಚಾ**—ಐಕಮತ್ಯದಿಂದ **ಸನೇಮ**—(ತದ್ದತ್ತ)ಧನವನ್ನು ಪಡೆಯೋಣ.

॥ ಭಾವಾರ್ಥ ॥

ಆಂಗಿರಸರಿಂದ ನಮಗೆ ದೇಯವಾದ ಅನ್ನಯುಕ್ತರೂ, (ತದ್ದತ್ತವಾದ) ಅಶ್ವರಥಯುಕ್ತನಾದ ನನಗೆ ಪ್ರೇರಕರೂ, ಉತ್ತಮ ಐಶ್ವರ್ಯಸಂಪನ್ನರೂ ಆದ ದೇವತೆಗಳನ್ನು ಐಶ್ವರ್ಯವನ್ನು ಪಡೆಯುವುದಕ್ಕೋಸ್ಕರ ಸ್ತುತಿಸುತ್ತೇನೆ. ವೀರರಾದ ಪುತ್ರರಿಂದ ಯುಕ್ತರಾದ ನಾವು ಐಕಮತ್ಯದಿಂದ (ನಿಮ್ಮಿಂದ ದತ್ತವಾದ) ಧನವನ್ನು ಪಡೆಯುವಂತೆ (ಅನುಗ್ರಹಿಸಿ).

## English Translation.

I laud the treasures of that opulent (assembly of the god s); may we, men who (are blessed) with excellent descendants, partake of them together: the assembly conferring upon the Pajras abundant food, has been my benefactor, and has made me the master of horses and chariots.

॥ ವಿಶೇಷವಿಷಯಗಳು ॥

**ನಹುಷಃ**— ಈ ಪದವು **ಮನುಷ್ಯನಾಮಗಳಲ್ಲಿ** ಪಠಿತವಾಗಿದೆ (ನಿ. ೩-೭). **ಪರಸ್ಪರಸ್ನೇಹಬಂಧೋಪೇತಾ ಮನುಷ್ಯಾ ವಯಂ ಕಕ್ಷೀವಂತಃ ।** ಕಕ್ಷೀವಂತನ ಸಂಬಂಧಿಗಳೂ, ಪರಸ್ಪರವಾಗಿ ಸ್ನೇಹ ಮತ್ತು ಬಂಧುತ್ವವುಳ್ಳವರೂ ಆದ ನಾವು ಎಂದು **ನಹುಷ** ಶಬ್ದದಿಂದ ಸೂಚಿತವಾಗುವ ಅರ್ಥವನ್ನು ವಿವರಿಸಿದೆ. [ನಾಹುಷನೆಂಬ ದೊರೆಯ ವಿಷಯವನ್ನು ಹಿಂದೆ ತಿಳಿಸಿದೆ.]

**ಸೂರಿಃ**— **ಸೂರಿ** ಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೬) ಮೇಧಾವಿ, ಕ್ರಾಂತದರ್ಶಿ, ತತ್ತ್ವಜ್ಞ ಇತ್ಯಾದ್ಯರ್ಥಗಳಲ್ಲಿ ಸಂಹಿತೆಗಳಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ಇಲ್ಲಿ **ಸೂರಿಃ** ಎನ್ನುವುದಕ್ಕೆ **ಪ್ರೇರಕ**ನೆಂಬರ್ಥವನ್ನು ಮಾಡಿದ್ದಾರೆ. ನಿರುಕ್ತಕಾರರು.

**ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ।**

(ಋ. ಸಂ. ೧-೧೮೧-೪)

ಎಂಬ ಋಕ್ಕನ್ನು ದಹರಿಸುವಾಗ ಅದರಲ್ಲಿ **ಸೂರಿಃ** ಎಂಬ ಪದಕ್ಕೆ **ಈರಯಿತಾ ಪ್ರೇರಕಃ** ಎಂಬರ್ಥವಾಗುವುದನ್ನು ತೋರಿಸಿದ್ದಾರೆ. (ನಿ. ೧೨-೩) ಅದರಂತೆ ಇಲ್ಲಿಯೂ ಸಹ **(ದೇವ) ಜನಃ ಮಹ್ಯಂ ಸೂರಿಃ** ಎಂದರೆ ದೇವಸಂಘವು ಯಜ್ಞಯಾಗಾದ್ಯನುಷ್ಠಾನಗಳನ್ನು ನೆರವೇರಿಸಲು ನನಗೆ **ಪ್ರೇರಕವಾಹುದು** ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಯ—ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸ್ತುಷೇ**—ಷ್ಟುಞ್ ಸ್ತುತೌ. ಅದಾದಿ. **ವ್ಯತ್ಯಯೋ ಬಹುಲಂ**—ಎಂಬುದರಿಂದ ಲಟ್ ಉತ್ತಮ ಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. ಅದಕ್ಕೆ ಸೇ ಆದೇಶ. ಶಪ್ಪಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಹಿಮಘಸ್ಯ**—ಮಹಿ ಪೂಜ್ಯಂ ಮಘಂ ಧನಂ ಯಸ್ಯ ಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ರಾಧಃ**—ರಾಧ್ನುವಂತಿ ಅನೇನ ಇತಿ ರಾಧಃ ಧನಮ್. ರಾಧ ಸಂಸಿದ್ಧೌ ಧಾತು. **ಸರ್ವಧಾತುಭ್ಯ ಅಸುನ್**—(ಉ. ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ.

**ಸಚಾ**—ಷಚ ಸಮವಾಯೇ ಧಾತು. **ಧಾತ್ವಾದೇಃ ಷಃ ಸಃ**—(ಪಾ. ಸೂ. ೬-೧-೬೪) ಎಂಬುದರಿಂದ ಧಾತ್ವಾದಿಗೆ ಸತ್ವ. ಸಂಪದಾದಿಯಲ್ಲಿ ಸೇರಿರುವುದರಿಂದ **ಸಂಪದಾದಿಭ್ಯಃ ಕ್ವಿಪ್**—(ಪಾ. ಸೂ.೩-೩-೧೦೮-೬) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ. ತೃತೀಯಾ ಏಕವಚನಾಂತರೂಪ. ಏಕಾಚಾದರೂ ವ್ಯತ್ಯಯದಿಂದ ಧಾತುಸ್ವರವೇ ಉಳಿಯುತ್ತದೆ.

**ಸನೇಮ**—ಷಣ ಸಂಭಕ್ತೌ ಧಾತು. ಹಿಂದಿನಂತೇ ಧಾತ್ವಾದಿಗೆ ಸತ್ವ. ವಿಧಿಲಿಙ್ ಉತ್ತಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುವೀರಾಃ**—ಶೋಭನಾಃ ಪುತ್ರಾಃ ಯೇಷಾಂ ತೇ. ಸುವೀರಾಃ **ವೀರವೀರ್ಯೌ ಚ**—(ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ವಾಜನೀವಾನ್**—ವಾಜಮಸ್ಯಾಸ್ತಿ ಇತಿ ವಾಜಿನೀ. **ಅತಇನಿಠನೌ**—ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ನಾಂತವಾದುದರಿಂದ ಸ್ತ್ರೀತ್ವದಲ್ಲಿ ಙೀಪ್ ಪ್ರತ್ಯಯ. ವಾಜಿನೀ ಅಸ್ಯ ಅಸ್ತಿ ಇತಿ ವಾಜಿನೀವಾನ್ **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. **ಛಂದಸೀರಃ**—(ಪಾ. ಸೂ. ೮-೨-೧೫)ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಮತುಪ್ ಙೀಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಇನಿ ಪ್ರತ್ಯಯದ ಇಕಾರವು ಉದಾತ್ತವಾಗುತ್ತದೆ.

**ಅಶ್ವಾವತಃ**—ಅಶ್ವಾಃ ಅಸ್ಯ ಸಂತಿ ಎಂದು ಅರ್ಥವಿವಕ್ಷಾಮಾಡಿದಾಗ **ತದಸ್ಯಾಸ್ತ್ಯ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ಅಕಾರದ ಪರದಲ್ಲಿ ಬಂದುದರಿಂದ **ಮಾದುಪಧಾಯಾಶ್ಚ**-(ಪಾ.ಸೂ ೮-೨-೯) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. **ಮಂತ್ರೇಸೋಮಾಶ್ವ**—(ಪಾ. ಸೂ. ೬-೩-೧೩೧) ಎಂಬುದರಿಂದ ಮತುಪ್ ಪರವಾದಾಗ ಅಶ್ವ ಶಬ್ದಕ್ಕೆ ದೀರ್ಘ ಬರುತ್ತದೆ. ಮತುಪ್ ಪಿತ್ತಾದುದರಿಂದ ಅಶ್ವ ಶಬ್ದವು ಕ್ವನ್ ಪ್ರತ್ಯಯಾಂತವಾದುದರಿಂದಲೂ ಆದ್ಯುದಾತ್ತಸ್ವರವು ಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ಜನೋ ಯೋ ಮಿತ್ರಾವರುಣಾವಭಿಧ್ರುಗಪೋ ನ ವಾಂ ಸುನೋತ್ಯ-
ಕ್ಷ್ಣಯಾಧ್ರುಕ್।
ಸ್ವಯಂ ಸ ಯಕ್ಷ್ಮಂ ಹೃದಯೇ ನಿ ಧತ್ತ ಆಪ ಯದೀಂ ಹೋತ್ರಾಭಿ-
ಋತಾವಾ ॥ ೯ ॥

॥ ಪದಪಾಠಃ ॥

ಜನಃ । ಯಃ । ಮಿತ್ರಾವರುಣೌ । ಅಭಿಽಧ್ರುಕ್ । ಅಪಃ । ನ । ವಾಂ । ಸುನೋತಿ । ಅಕ್ಷ್ಣಯಾಽಧ್ರುಕ್ ।
ಸ್ವಯಂ । ಸಃ । ಯಕ್ಷ್ಮಂ । ಹೃದಯೇ । ನಿ । ಧತ್ತೇ । ಆಪ । ಯತ್ । ಈಂ । ಹೋತ್ರಾಭಿಃ ।
ಋತಽವಾ ॥ ೯ ॥

॥ ಸಾಯಣಭಾಷ್ಯಂ ॥

ಹೇ ಮಿತ್ರಾವರುಣೌ ಯುಷ್ಮಾಕಂ ಯೋ ಜನೋಽಭಿಧ್ರುಕ್ ಅಭಿತೋ ದ್ರೋಗ್ಧಾ ಭವತಿ । ಅಯಷ್ಟಾ ಭವತೀತ್ಯರ್ಥಃ । ಯಶ್ಚಾಕ್ಷ್ಣಯಾಧ್ರುಕ್ ವಕ್ರೇಣ ಮಾರ್ಗೇಣ ದ್ರುಹ್ಯತಿ ಅನ್ಯಥಾಪ್ರಕಾರೇಣ ದ್ರುಹ್ಯತಿ। ದ್ರೋಹಪ್ರಕಾರ ಉಚ್ಯತೇ । ವಾಂ ಯುವಾಮಪಃ ಸೋಮರಸಾನ್ನ ಸುನೋತಿ । ಅಭಿಷವಂ ನ ಕರೋತಿ । ಯುವಾಮುತಿಕ್ರಮ್ಯಾನ್ಯದೇವತಾರ್ಥಂ ಸುನೋತೀತ್ಯಭಿಪ್ರಾಯಃ । ಅಯಮೇವಾಕ್ಷ್ಣಯಾ- ದ್ರೋಹಃ । ಸ ಮೂಢೋ ದ್ವಿವಿಧೋ ಜನಃ ಸ್ವಯಂ ಯಕ್ಷ್ಮಂ ವ್ಯಾಧಿಂ ಹೃದಯೇ ಸ್ವಚಿತ್ತೇ ನಿ ಧತ್ತೇ । ಸ್ಥಾಪಯತಿ । ಅನುಷ್ಠಾತೄಣಾಂ ಭೋಗಾನ್ಪಶ್ಯನ್ವ್ಯಥಿತೋ ಭವತೀತ್ಯರ್ಥಃ । ಯತ್ । ಲಿಂಗವ್ಯತ್ಯಯಃ । ಯ ಉಕ್ತವಿಲಕ್ಷಣಃ ಪುಮಾನ್ ಋತಾವಾ ಯಜ್ಞವಾನ್ ಪರಿಗೃಹೀತಯಜ್ಞೋ ಹೋತ್ರಾಭಿಃ । ವಾಙ್ನಾಮೈತತ್ । ಸ್ತುತಿವಾಗ್ಭಿರೀಮೇನಂ ಸೋಮರಸಮಾಪ ವ್ಯಾಪ್ನೋತಿ । ಸ್ತುವನ್ ಸೋಮಮಭಿ- ಷುಣೋತೀತಿ ಯಾವತ್ । ಸ ನರಃ ಪೃತ್ಸು ಯಾತೀತಿ ವಕ್ಷ್ಯಮಾಣೇನ ಸಹ ಸಂಬಂಧಃ ॥ ಅಭಿಧ್ರುಕ್ । ದ್ರುಹೇಃ ಸತ್ಸೂದ್ವಿಷೇತಿ ಕ್ವಿಪ್ । ಸಂಹಿತಾಯಾಂ ಛಷ್ಟಾವಶ್ಛಂದಸಃ । ಋತಾವೇತ್ಯತ್ರ ಛಂದಸೀವನಿ- ಪಾವಿತಿ ಮತ್ವರ್ಥೀಯೋ ವನಿಪ್ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘತ್ವಂ ॥

॥ ಪ್ರತಿಪದಾರ್ಥ ॥

**ಹೇ ಮಿತ್ರಾವರುಣೌ**—ಎಲೈ ಮಿತ್ರಾವರುಣರೇ । **ಯಃ ಜನಃ**—ಯಾವ ಮನುಷ್ಯನು । **ಅಭಿಧ್ರುಕ್**— (ನಿಮಗೆ) ದ್ರೋಹವೆಸಗುತ್ತಾನೋ (ನಿಮ್ಮನ್ನು ದ್ವೇಷಿಸಿ ಯಾಗಮಾಡುವುದಿಲ್ಲವೋ) । (**ಯಶ್ಚ**—ಯಾವನು) । **ಅಕ್ಷ್ಣಯಾಧ್ರುಕ್**—ಇತರ ಯಾವ ಮಾರ್ಗದಿಂದಲಾದರೂ ದ್ರೋಹಿಯೋ । **ವಾಂ**—ನಿಮ್ಮಿಬ್ಬರಿಗೋಸ್ಕರ । **ಅಪಃ**—ಸೋಮರಸವನ್ನು । **ನ ಸುನೋತಿ**—ಸಿದ್ಧಪಡಿಸುವುದಿಲ್ಲವೋ । **ಸಃ**—ಆ (ಮೂಢನು) । **ಸ್ವಯಂ**— ತಾನೇ । **ಯಕ್ಷ್ಮಂ**—ವ್ಯಾಧಿಯನ್ನು । **ಹೃದಯೇ**—(ತನ್ನ) ಹೃದಯದಲ್ಲೇ । **ನಿ ಧತ್ತೇ**—ಸ್ಥಾಪಿಸಿಕೊಳ್ಳುತ್ತಾನೆ । **ಯತ್**—ಯಾವನು । **ಋತಾವಾ**—ಯಜ್ಞವನ್ನು ಮಾಡುವವನಾಗಿ । **ಹೋತ್ರಾಭಿಃ**—ಸ್ತುತಿ ವಾಕ್ಯಗಳಿಂದ । **ಈಂ**—ಈ ಸೋಮರಸವನ್ನು । **ಆಪ**—ಸಿದ್ಧಪಡಿಸುತ್ತಾನೋ । [ಮುಂದಿನ ಋಕ್ಕಿನೊಡನೆಅನ್ವಯ]

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ನಿಮಗೆ ಯಾವುದೇ ವಿಧದಲ್ಲಿ ದ್ರೋಹವೆಸಗುವನೂ, ನಿಮಗಾಗಿ ಸೋಮರಸವನ್ನು ಸಿದ್ಧಪಡಿಸದೇ ಇರುವವನೂ, (ಈ ಇಬ್ಬರು ಮೂಢರೂ) ತಾವೇ ತಮ್ಮ ಹೃದಯದಲ್ಲಿ ವ್ಯಾಧಿಯು ನೆಲಸುವಂತೆ ಮಾಡಿಕೊಳ್ಳುತ್ತಾರೆ; (ಆದರೆ) ಯಾವನು ಯಜ್ಞಾರಂಭ ಮಾಡಿ, ಸ್ತುತಿವಾಕ್ಯಪೂರ್ವಕವಾಗಿ ಸೋಮರಸವನ್ನು ಸಿದ್ಧಪಡಿಸುತ್ತಾನೋ (ಅವನು). [ಮುಂದಿನ ಋಕ್ಕಿನೊಡನೆ ಅನ್ವಯ]

## English Translation.

The man who does you wrong, Mitra and Varuna, who injures you in any way, who does not qresent you with oblations, contracts for himself sickness in his heart; but he who, performing worship, (celebrates it) with praises—

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಯಜ್ಞಕರ್ತನಿಗೂ ಯಜ್ಞವನ್ನು ನೆರವೇರಿಸದವನಿಗೂ ಉಂಟಾಗತಕ್ಕ ಅನುಭವಗಳ ವ್ಯತ್ಯಾಸವನ್ನು ತೋರಿಸಿದೆ. ಯಜ್ಞಕರ್ತನಲ್ಲದವನು ದ್ರೋಹಿಯಾಗುತ್ತಾನೆ.

**ತೈರ್ದತ್ತಾನ ಪ್ರದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ ।**

(ಭಗವದ್ಗೀತಾ. ೩-೧೨)

ಎಂಬ ವಚನದಂತೆ ದೇವತೆಗಳಿಂದ ಅನುಗ್ರಹಿತವಾದ ವೃಷ್ಟ್ಯುದಕಾದಿಗಳನ್ನೂ, ಅವುಗಳಿಂದ ಉತ್ಪನ್ನವಾದ ಅನ್ನವನ್ನೂ ಅನುಭವಿಸಿ ತತ್ಪ್ರತಿಯಾಗಿ ಯಜ್ಞಾಚರಣೆಯನ್ನು ಮಾಡದಿದ್ದರೆ ಅದು ದೇವತೆಗಳಿಗೆ ದ್ರೋಹ ಮಾಡಿದಂತಾಗುವುದೆಂಬುದು ತಿಳಿದ ವಿಷಯವಾಗಿದೆ. ಈ ದ್ರೋಹವು **ಅಭಿಧ್ರುಕ್, ಅಕ್ಷ್ಣಯಾಧ್ರುಕ್ ।** ನೇರವಾದ ದ್ರೋಹ, ವಕ್ರಮಾರ್ಗದಲ್ಲಿ ವ್ಯವಹರಿಸಿ ಯಜ್ಞಕರ್ತರಿಗೆ ಮೋಸಮಾಡಿ ದ್ರೋಹವಮಾಡುವುದು ಹೀಗೆ ಎರಡು ವಿಧವಾಗಿದೆ. ಈ ರೀತಿ ದ್ರೋಹದ ಜೀವನವನ್ನು ನಡೆಸಿದವರಿಗೆ ಯಾವ ವಿಧವಾದ ಸಂಪತ್ತೂ ಇರುವುದಿಲ್ಲ. ಅವರು ಯಜ್ಞಕರ್ತರು ಅನುಭವಿಸುವ ಸಕಲಸಂಪತ್ತುಗಳನ್ನೂ ನೋಡಿ ಅಸೂಯೆ ಪಡುವುದರಿಂದ ಈ ಅಸೂಯೆಯು ಹೃದಯ ವನ್ನು ದಹಿಸುತ್ತದೆ. ಆ ವ್ಯಾಧಿಗೆ **ಯಕ್ಷ್ಮ**ವೆಂದು ಕರೆದಿದ್ದಾರೆ ಸಾಧಾರಣವಾಗಿ ಯಕ್ಷ್ಮವೆಂದರೆ ಕ್ಷಯರೋಗ ವೆಂದರ್ಥ. ಅಸೂಯೆಯೂ ಹೃದಯವನ್ನು ಕ್ಷಯಿಸುವಂತೆ ಮಾಡುವುದರಿಂದ ಅದಕ್ಕೂ **ಯಕ್ಷ್ಮವೆಂದೇ** ಹೇಳಿದೆ.

**ಹೋತ್ರಾಭಿಃ**—**ಹೋತ್ರಾ** ಎಂಬ ಪದವು **ವಾಙ್ನಾಮ**ಗಳಲ್ಲಿ ಪಠಿತವಾಗಿದೆ. (ನಿ. ೨-೨೩) ಸ್ತುತಿವಾಕ್ಯ ಗಳಿಂದ ಎಂದರ್ಥ. ಮತ್ತು ಯಜ್ಞನಾಮಗಳಲ್ಲಿಯೂ ಪಠಿತವಾಗಿದೆ (ನಿ. ೩-೧೯) ಯಾದುದರಿಂದ ಯಜ್ಞ ಕ್ರಿಯೆಗಳಿಂದ ಎಂದೂ ಅರ್ಥವಾಗಬಹುದು.

**ಸಮಾನಂ ಯೋನಿಮನು ಸಂಚರಂತಂ ದ್ರಪ್ಸಂ ಜುಹೋಮ್ಯನು ಸಪ್ತ ಹೋತ್ರಾಃ ।**

(ಋ. ಸಂ. ೧೦-೧೭-೧೧)

ಎಂಬ ಋಕ್ಕಿನಲ್ಲಿ **ಹೋತ್ರಾಃ** ಎಂಬ ಪದಕ್ಕೆ ಈ ಎರಡರ್ಥಗಳಲ್ಲಿ ಯಾವುದನ್ನು ಹೇಳಿದರೂ ಸರಿಹೋಗು ತ್ತದೆ ಎಂಬ ಅಂಶವನ್ನು ಭಾಷ್ಯದಲ್ಲಿ ನೋಡಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಮಿತ್ರಾವರುಣೌ**—ಮಿತ್ರಶ್ಚ ವರುಣಶ್ಚ ಮಿತ್ರಾವರುಣೌ. **ದೇವತಾ ದ್ವಂದ್ವೇಚ**—(ಪಾ. ಸೂ. ೬-೩-೨೬) ಎಂಬುದರಿಂದ ಪೂರ್ವಪದಕ್ಕೆ ಆನಙಾದೇಶ. ಸಂಬೋಧನಾದಲ್ಲಿ **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಭಿಧ್ರುಕ್**—ದ್ರುಹ ಜಿಘಾಂಸಾಯಾಂ ಧಾತು. **ಸತ್ಸೂದ್ವಿಷದ್ರುಹ ಮುಹ**—(ಪಾ. ಸೂ. ೩-೨-೬೧) ಎಂಬುದರಿಂದ ಕ್ವಿಪ್ ಪ್ರತ್ಯಯ. ಇದಕ್ಕೆ ಸು ಪರವಾದಾಗ **ವಾ ದ್ರುಹಮುಹ**—(ಪಾ. ಸೂ. ೩-೨-೬೧) ಎಂಬುದ ರಿಂದಹಕಾರಕ್ಕೆ ಘತ್ವ (ವಿಕಲ್ಪ) **ಏಕಾಚೋ ಬಶೋ**—(ಪಾ. ಸೂ. ೮-೨-೩೭) ಎಂಬುದರಿಂದ ಆದಿಗೆ ಧತ್ವ. **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಪಃ— ಊಡಿದಂಪದಾದಿ—**( ಪಾ. ಸೂ. ೬–೧–೧೭೧)ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸುನೋತಿ—**ಷುಞ್ ಅಭಿಷವೇ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಸ್ವಾದಿಭ್ಯ ಶ್ನುಃ**—ಎಂಬುದರಿಂದ ಶ್ನು ವಿಕರಣ ಇದಕ್ಕೆ ಪ್ರತ್ಯಯನಿಮಿತ್ತವಾಗಿ ಗುಣ. ಯಚ್ಛಬ್ದ ಸಂಬಂಧವಿರುವುದ ರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಧತ್ತೇ—**ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚನ ರೂಪ. ತಿಙಂತನಿಘಾತಸ್ವರ ಬರುತ್ತದೆ,

**ಆಪ—**ಆಪ್ಲೃ ವ್ಯಾಪ್ತೌ ಧಾತು. **ಛಂದಸಿ ಲುಙ್**–(ಪಾ. ಸೂ. ೩–೪–೬) ಎಂಬುದರಿಂದ ವರ್ತಮಾನಾ ರ್ಥದಲ್ಲಿ ಲಿಟ್. ಪ್ರಥಮಪುರುಷ ಏಕವಚನಾಂತರೂಪ. **ಅತಿಙಃ**—ಎಂದು ನಿಷೇಧಮಾಡಿರುವುದರಿಂದ ಪಾದಾದಿ ಯಲ್ಲಿರುವುದರಿಂದಲೂ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಲಿತ್ತಾದುದರಿಂದ **ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಯುತ್—ವ್ಯತ್ಯಯೋ ಬಹುಲಮ್**—( ಪಾ. ಸೂ. ೩-೧-೮೫) ಎಂಬುದರಿಂದ ಪುಲ್ಲಿಂಗಕ್ಕೆ ನಪುಂಸಕ ಲಿಂಗ ಬಂದಿದೆ.

**ಋತಾವಾ—**ಋತಃ ಅಸ್ಯ ಅಸ್ತಿ ಇತಿ ಋತವಾ. **ಛಂದಸೀವನಿಪೌ**—ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಋತವನ್ ಶಬ್ದವಾಗುತ್ತದೆ. ಛಂದಸ್ಸಿನಲ್ಲಿ **ಅನ್ಯೇಷಾಮಪಿ ದೃಶ್ಯತೇ**—( ಪಾ ಸೂ. ೬-೩-೧೩೭) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ದೀರ್ಘ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಪ್ರಥಮಾ ಏಕವಚನದಲ್ಲಿ ಉಪಧಾ ದೀರ್ಘ, ಸುಲೋಪ ನಲೋಪ. ॥ ೯ ॥

---

॥ ಸಂಹಿತಾಪಾಠಃ ॥

**ಸ ವ್ರಾಧತೋ ನಹುಷೋ ದಂಸುಜೂತಃ ಶರ್ಧಸ್ತರೋ ನರಾಂ ಗೂರ್ತಶ್ರವಾಃ**

**ವಿಸೃಷ್ಟರಾತಿರ್ಯಾತಿ ಬಾಳ್ಹಸೃತ್ವಾ ವಿಶ್ವಾಸು ಪೃತ್ಸು ಸದಮಿಚ್ಛೂರಃ ॥ ೧೦ ॥**

॥ ಪದಪಾಠಃ ॥

**ಸಃ । ವ್ರಾಧತಃ । ನಹುಷಃ । ದಂऽಸುಜೂತಃ । ಶರ್ಧಃऽತರಃ । ನರಾಂ । ಗೂರ್ತऽಶ್ರವಾಃ ।**

**ವಿಸೃಷ್ಟऽರಾತಿಃ । ಯಾತಿ । ಬಾಳ್ಹऽಸೃತ್ವಾ । ವಿಶ್ವಾಸು । ಪೃತ್ऽಸು । ಸದಂ । ಇತ್ । ಶೂರಃ ॥ ೧೦ ॥**

॥ ಸಾಯಣಭಾಷ್ಯಂ ॥

ಹೇ ಮಿತ್ರಾವರುಣೌ ಯುವಾಂ ಗತೇಮಂತ್ರಾವಸಾನೋಕ್ತಲಕ್ಷಣೋ ಯುಷ್ಮತ್ಪೂಜಕೋ ಜನೋ ದಂಸುಜೂತೋ ದಾಂತೈರಶ್ವೈಃ ಸುಷ್ಠು ಪ್ರೇರಿತಃ ಅತ ಏವ ನರಾಂ ನರಾಣಾಂ ಶರ್ಧಸ್ತರೋಽತಿಶಯೇನಾಭಿಭವಿತಾ । ಅಥವಾತಿಶಯೇನ ಬಲವಾನ್ । ನರಾಣಾಂ ಸ್ವಸಮಾನಾನಾಂ ಮಧ್ಯೇ ಗೂರ್ತಶ್ರವಾ ಉದ್ಗೂರ್ಣದೀಪ್ತಿಃ ಪ್ರಖ್ಯಾತಾನ್ನೋ ವಾ ವಿಸೃಷ್ಟರಾತಿರರ್ಥಿಭ್ಯಃ ಪ್ರದತ್ತಧನಃ ಏವಂ ಮಹಾನುಭಾವಃ ಶೂರಃ ಸನ್ ವಿಶ್ವಾಸು ಪೃತ್ಸು ಸರ್ವೇಷು ಜನ್ಯೇಷು ಸಂಗ್ರಾಮೇಷು ವ್ರಾಧತಃ । ಮಹನ್ನಾಮೈತತ್ । ಹಿಂಸಕಾನ್ಮಹತೋಽಪಿ ನಹುಷಃ । ಮನುಷ್ಯನಾಮೈತತ್ । ಮನುಷ್ಯಾನ್ ಶತ್ರೂನ್ಪ್ರತಿ ಬಾಳ್ಹಂಸೃತ್ವಾ ಭೃಶಂ ಸರ್ತಾಶಂಕಿತಗಮನಃ ಸನ್ ಸದಮಿತ್ ಸದೈವ ಯಾತಿ । ಗಚ್ಛತಿ ॥ ದಂಸುಜೂತಃ । ದಾಮೇರ್ವಿಚ್ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಗೂರ್ತಶ್ರವಾಃ । ಗುರೀ ಉದ್ಯಮನೇ । ನಸತ್ತನಿಷತ್ತೇತ್ಯಾದೌ ನಿಪಾತನಾನ್ನಿಷ್ಠಾನತ್ವಾಭಾವಃ । ವಿಸೃಷ್ಟರಾತಿಃ । ವಿಪೂರ್ವಾತ್ಸೃಜತೇಃ ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ । ಪೃತ್ಸು । ಪದಾದಿಷು ಮಾಂಸ್ಪೃತ್ಸ್ನೂನಾಮುಪಸಂಖ್ಯಾನಮಿತಿ ಪೃತನಾಶಬ್ದಸ್ಯ ಪೃದಾದೇಶಃ । ಸಾವೇಕಾಚಃ ಇತಿ ವಿಭಕ್ತೇರುದಾತ್ತತ್ವಂ । ಬಾಳ್ಹಂಸೃತ್ವಾ । ಸರ್ತೇರನ್ಯೇಭ್ಯೋಽಪಿ ದೃಶ್ಯಂತ ಇತಿ ಕ್ವನಿಪ್ ॥

॥ ಪ್ರತಿಪದಾರ್ಥ ॥

**ಹೇ ಮಿತ್ರಾವರುಣೌ**—ಎಲೈ ಮಿತ್ರಾವರುಣರೇ । **ಸಃ**—(ಹಿಂದಿನ ಋಕ್ಕಿನಲ್ಲಿ ಉಕ್ತಲಕ್ಷಣನಾದ) ಪುರುಷನು । **ದಂಸುಜೂತಃ**—ಸುಶಿಕ್ಷಿತವಾದ ಅಶ್ವಗಳಿಂದ ಯುಕ್ತನಾಗಿ । **ನರಾಣಾಂ**—ಮನುಷ್ಯರಲ್ಲಿ । **ಶರ್ಧಸ್ತರಃ**—ಅತ್ಯಂತ ಬಲಿಷ್ಠನೂ । **ಗೂರ್ತಶ್ರವಾಃ**—ಪ್ರಖ್ಯಾತನೂ (ಪ್ರಖ್ಯಾತವಾದ ಅನ್ನವುಳ್ಳವನಾಗಿ) । **ವಿಸೃಷ್ಟರಾತಿಃ**—(ಅರ್ಥಿಗಳಿಗೆ) ದಾನ ಮಾಡುವವನೂ । **ಶೂರಃ**—ಶೂರನೂ ಆಗಿ । **ವಿಶ್ವಾಸು ಪೃತ್ಸು**—ಎಲ್ಲಾ ಸಂಗ್ರಾಮಗಳಲ್ಲಿಯೂ । **ವ್ರಾಧತಃ**—(ಬಲಿಷ್ಠರಾದಾಗ್ಯೂ) ಶತ್ರುಗಳಾದ । **ನಹುಷಃ**—ಮನುಷ್ಯರನ್ನು (ಎದುರಿಸಿ) **ಬಾಳ್ಹಂಸೃತ್ವಾ**—ಅಶಂಕಿತಗಮನನಾಗಿ । **ಸದಮಿತ್**—ಯಾವಾಗಲೂ । **ಯಾತಿ**—ಹೋಗುತ್ತಾನೆ ।

॥ ಭಾವಾರ್ಥ ॥

(ಪೂರ್ವಋಗುಕ್ತಲಕ್ಷಣನಾದ) ಪುರುಷನು, ಎಲೈ ಮಿತ್ರಾವರುಣರೇ, ಸುಶಿಕ್ಷಿತವಾದ ಅಶ್ವಗಳನ್ನೇರಿ, ಅತ್ಯಂತ ಬಲಿಷ್ಠನೂ, ಪ್ರಖ್ಯಾತನೂ, ದಾನಿಯೂ ಶೂರನೂ ಆಗಿ ಯುದ್ಧಗಳಲ್ಲಿ ಶತ್ರುಗಳು ಎಷ್ಟೇ ಬಲಿಷ್ಠರಾದರೂ (ಅವರನ್ನೆದುರಿಸಿ) ಅಪ್ರತಿಹತನಾಗಿ, ಯಾವಾಗಲೂ ಮುಂದುವರೆಯುತ್ತಾನೆ.

## English Translation

He, borne by well-trained horses, endowed with surpassing strength renowned above men, munificent in gifts, moves a hero, ever uudaunted in all combats, (even) against mighty men.

॥ ವಿಶೇಷವಿಷಯಗಳು ॥

**ದಂಸುಜೂತಃ—ದಾಂತೈರಶ್ವೈಃ ಸುಷ್ಠು ಪ್ರೇರಿತಃ** । ಚೆನ್ನಾಗಿ ಪಳಗಿಳಿಸಿದ ಕುದುರೆಗಳಿಂದ ವಹಿಸಲ್ಪಟ್ಟವನಾಗಿ ಉತ್ಸಾಹಪೂರಿತನೂ ಶಕ್ತಿಯುತನೂ ಆಗುತ್ತಾನೆಂದರ್ಥ.

**ಶರ್ಧಸ್ತರಃ—ಶರ್ಧ** ಶಬ್ದಕ್ಕೆ ಶಕ್ತಿಯೆಂದರ್ಥವಾಗುವುದಾಗಿಯೂ ಅದಲ್ಲದೇ ಇತರ ಅರ್ಥಗಳೂ ಸಾಧ್ಯವೆಂದೂ ಹಿಂದೆ ವಿವರಿಸಿದೆ. ಇಲ್ಲಿ ಎಲ್ಲರನ್ನೂ ಸೋಲಿಸತಕ್ಕ ಶಕ್ತಿಯೆಂದಭಿಪ್ರಾಯವು.

**ಗೂರ್ತಶ್ರವಾಃ**—ಗೂರ್ತಶಬ್ದಕ್ಕೆ ಪ್ರಶಸ್ಯವೆಂದರ್ಥ. ಅಥವಾ ಪ್ರಸಿದ್ಧವಾದುದು ಎಂದಾಗುತ್ತದೆ. **ಶ್ರವಸ್** ಎಂದರೆ ಇಲ್ಲಿ ಅನ್ನವೆಂದರ್ಥ. ಶ್ರೇಷ್ಠವಾದ ಕಾಂತಿಯುಳ್ಳವನು ಎಂದಾಗಲಿ, ಪ್ರಸಿದ್ಧವಾದ ಅನ್ನವುಳ್ಳವನು ಎಂದಾಗಲಿ ಆಗುತ್ತದೆ.

**ಬಾಳ್ಹಸೃತ್ವಾ—ಬಾಳ್ಹವೆಂದರೆ** ದೃಢವೆಂದರ್ಥ.

**ಅಸರ್ಜಿ ವಾಂ ಸ್ಥವಿರಾ ವೇಧಸಾ ಗೀರ್ಬಾಳ್ಹೇ ಅಶ್ವಿನಾ ತ್ರೇಧಾ ಕ್ಷರಂತೀ ।**

(ಋ. ಸಂ. ೧-೧೮೧-೭)

ಎಂಬ ಋಕ್ಕಿನಲ್ಲಿ **ಬಾಳ್ಹೇ** ಎಂಬ ಪದಕ್ಕೆ **ದೃಢೇ, ಸ್ಥೈರ್ಯೇ** ಎಂದು ಅರ್ಥವೆಂದು ಸಾಯಣರು ತೋರಿಸಿದ್ದಾರೆ. ಅದರಂತೆ ಇಲ್ಲಿಯೂ ಸಹ **ದೃಢವಾದ ಸರಣ** ಎಂದರೆ ಚಿತ್ತಸ್ಥೈರ್ಯದಿಂದ ಕೂಡಿದ, ಮಿತ್ರಾವರುಣರ ಸಹಾಯವಿರುವುದರಿಂದ ಯಾವ ವಿಧವಾದ ಶತ್ರುಗಳಿಂದಲೂ ಭಯವನ್ನು ನಿರೀಕ್ಷಿಸದೆ ಧೈರ್ಯದಿಂದ ಕೂಡಿದ ಸಂಚಾರವೆಂದರ್ಥ. ಆದುದರಿಂದಲೇ **ಅಶಂಕಿತಗಮನಃ** ಎಂದು ವಿವರಿಸಿದೆ.

**ವ್ರಾಧತಃ ನಹುಷಃ—ಮಹನ್ನಾಮೈತತ್ । ಹಿಂಸಕಾನ್ ಮಹತೋಽಪಿ ಶತ್ರೂನ್ ।** ಶತ್ರುಗಳು ಎಷ್ಟು ಪ್ರಬಲರಾಗಿದ್ದಾಗ್ಯೂ ಎಂದರ್ಥ. ಸಾಧಾರಣವಾಗಿ **ಮಹತ್** ಶಬ್ದವನ್ನು ಪೂಜ್ಯವಾದ ಎಂಬ ಅರ್ಥದಲ್ಲಿ ಉಪಯೋಗಿಸುವ ರೂಢಿಯಿದೆ. ಆದರೆ **ವ್ರಾಧತಃ** ಎಂಬ ವಿಶೇಷಣವನ್ನು ಶತ್ರುಪರವಾಗಿ ಉಪಯೋಗಿಸಿರುವುದರಿಂದ ಅತ್ಯಂತ ಪ್ರಬಲವಾದ ಶಕ್ತಿಯುಳ್ಳ ಎಂದು ಅರ್ಥವಾಗುತ್ತದೆ. ದೇವತೆಗಳ ಪರವಾಗಿ ಈ ವಿಶೇಷಣವಿರುವುದು ಅಪರೂಪ.

**ಇಮೇ ಯೇ ತೇ ಸು ವಾಯೋ ಬಾಹ್ವೋಜಸೋಽಂತರ್ನದೀ ತೇ ಪತಯಂತ್ಯುಕ್ಷಣೋ**
**ಮಹಿ ವ್ರಾಧಂತ ಉಕ್ಷಣಃ ।**

(ಋ. ಸಂ. ೧-೧೩೫-೯)

ಎಂಬ ಋಕ್ಕಿನಲ್ಲಿ **ವ್ರಾಧಂತಃ** ಎಂಬ ಪದವು ವಾಯುವಿನ ಕುದುರೆಗಳಿಗೆ ವಿಶೇಷಣವಾಗಿ **ಮಹಿ ವ್ರಾಧಂತಃ—ಅತಿ ಪ್ರಭೂತಂ ವರ್ಧಮಾನಾಃ** ಅತಿ ಪ್ರಭೂತವಾಗಿ ವೃದ್ಧಿಯಾಗತಕ್ಕ ಎಂಬರ್ಥವನ್ನು ಕೊಡುತ್ತದೆ. ಮತ್ತು—

**ಸ ಚಂದ್ರೋ ವಿಪ್ರ ಮರ್ತ್ಯೋ ಮಹೋ ವ್ರಾಧಂತಮೋ ದಿವಿ ।**

(ಋ. ಸಂ. ೧-೧೫೦-೩)

ಎಂಬ ಋಕ್ಕಿನಲ್ಲಿ ಅಗ್ನಿಯನ್ನು ಪೂಜಿಸತಕ್ಕ ಮಾನವನ ಮಹತ್ವವನ್ನು ಪ್ರಶಂಸಿಸತಕ್ಕ ವಿಶೇಷಣವಾಗಿದೆ. **ವ್ರಾಧಂತಮಃ—ಪ್ರವೃದ್ಧತಮಃ । ಇತರದೇವಾನಾಮಪಿ ಶ್ರೇಷ್ಠಃ ।** ಇತರ ದೇವತೆಗಳಿಗಿಂತಲೂ ಅತ್ಯಂತ ಶ್ರೇಷ್ಠನು ಎಂದರ್ಥ. ಹೀಗೆ ಇನ್ನೂ ಒಂದೆರಡು ಋಕ್ಕುಗಳನ್ನು ಬಿಟ್ಟರೆ ಉಳಿದೆಡೆಗಳಲ್ಲೆಲ್ಲಾ ಶತ್ರುಪರ್ಯಾಯವಾಗಿಯೇ ಉಪಯೋಗಿಸಲ್ಪಟ್ಟಿದೆ.

**ಶತ್ರೂಯಂತೋ ಅಭಿ ಯೇ ನಸ್ತತಸ್ರೇ ಮಹಿ ವ್ರಾಧಂತ ಓಗಣಾಸ ಇಂದ್ರ ।**

(ಋ. ಸಂ. ೧೦-೮೯-೧೫)

ಎಂಬಲ್ಲಿ **ವ್ರಾಧಂತಃ—ಅಸ್ಮಾನ್ ಬಾಧಮಾನಾಃ ।** ನಮ್ಮನ್ನು ಅತಿಯಾಗಿ ಹಿಂಸಿಸುವ ಎಂದರ್ಥವಾಗಿದೆ. ಹೀಗೆಯೇ ಇನ್ನು ಕೆಲವು ಕಡೆಗಳಲ್ಲಿ ಅತ್ಯಂತ ಪ್ರಬಲನೂ, ತಡೆಯಲಾರದಷ್ಟು ಹಿಂಸೆಯನ್ನುಂಟುಮಾಡುವವನೂ ಆದ ಶತ್ರುವು ಎಂದು ಅರ್ಥವಿರುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಶತ್ರುವು ಎಷ್ಟೇ ಮಹತ್ತಾದ ಪ್ರಾಬಲ್ಯವುಳ್ಳವನಾದರೂ ಅವನನ್ನು ಲಕ್ಷ್ಯಮಾಡದೆಯೂ, ಹೆದರದೆಯೂ ಚಿಂತಾರಹಿತನಾಗಿಯೂ ಸಂಚರಿಸಬಹುದು ಎಂದು ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ವ್ರಾಧತಃ**—ವೃಧು ವೃದ್ಧೌ ಧಾತು. ಇದಕ್ಕೆ ಔಣಾದಿಕವಾದ ಅತಿ ಪ್ರತ್ಯಯ. ತತ್ಸಂನಿಯೋಗದಿಂದ ಆಕಾಗಮ. **ವೃಷಾದೀನಾಂ ಚ**—(ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಂಸುಜೂತಃ**—ದಮು ಉಪಶಮೇ. ಧಾತು. **ಅನ್ಯೇಭ್ಯೋಽಪಿ ದೃಶ್ಯತೇ** (ಪಾ. ಸೂ. ೩-೨-೭೫) ಎಂಬುದರಿಂದ ಇದಕ್ಕೆ ವಿಚ್ ಪ್ರತ್ಯಯ. ವಿಚ್ಚಿನಲ್ಲಿ ಸರ್ವಲೋಪ. ಜು ಎಂಬುದು ಗತ್ಯರ್ಥಕವಾದ ಸೌತ್ರಧಾತು. ಸೂ ಎಂಬುದು ಪೂರ್ವದಲ್ಲಿರುವಾಗ ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. **ತೃತೀಯಾ ಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ನರಾಮ್**—ನೃ ಶಬ್ದ. ಷಷ್ಠೀ ಬಹುವಚನ ಪರವಾದಾಗ **ಜಸಾದಿಷು ಛಂದಸಿ ವಾವಚನಮ್** ಎಂಬ ವಚನದಿಂದ ನುಡಾಗಮ ಬರುವುದಿಲ್ಲ. ವ್ಯತ್ಯಯದಿಂದ ಗುಣ. ರಪರವಾಗಿ ಬರುತ್ತದೆ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಗೂರ್ತಶ್ರವಾಃ**—ಗೂರೀ ಉದ್ಯಮನೇ. ಧಾತು. ಇದಕ್ಕೆ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ರೇಫದ ಪರದಲ್ಲಿರುವುದರಿಂದ ನತ್ವವು ಪ್ರಾಪ್ತವಾದರೆ **ನಸತ್ತನಿಷತ್ತ**—(ಪಾ. ಸೂ. ೮-೨-೬೧) ಎಂಬುದರಿಂದ ನಿಪಾತ ಮಾಡಿರುವುದರಿಂದ ನತ್ವ ಬರುವುದಿಲ್ಲ. ಗೂರ್ತಂ ಶ್ರವಃ ಯಸ್ಯ ಸಃ ಗೂರ್ತಶ್ರವಾಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವಿಸೃಷ್ಟರಾತಿಃ**—ಸೃಜ ವಿಸರ್ಗೇ. ಧಾತು. ವಿ ಉಪಸರ್ಗ ಪೂರ್ವದಲ್ಲಿರುವಾಗ ಇದಕ್ಕೆ ಕರ್ಮಣಿಯಲ್ಲಿ ನಿಷ್ಠಾ ಪ್ರತ್ಯಯ. (**ವ್ರಶ್ಚಭ್ರಸ್ಜ**—ಪಾ. ಸೂ. ೮-೨-೩೬) ಎಂಬುದರಿಂದ ಜಕಾರಕ್ಕೆ ಷತ್ವ. ತನ್ನಿಮಿತ್ತವಾಗಿ ಪ್ರತ್ಯಯಕ್ಕೆ ಷ್ಟುತ್ವ. **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ.

ವಿಸೃಷ್ಟಾ ರಾತಿಃ ಯೇನ ಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಯಾತಿ**—ಯಾ ಪ್ರಾಪಣೇ ಧಾತು. ಲಟ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಬಾಳ್ಹಸೃತ್ವಾ**—ಬಾಢಂ ಸರತಿ ಇತಿ. ಬಾಳ್ಹಸೃತ್ವಾ. ಸೃ ಗತೌ ಧಾತು. **ಅನ್ಯೇಭ್ಯೋಽಪಿ ದೃಶ್ಯತೇ** (ಪಾ. ಸೂ. ೩-೨-೭೫) ಎಂಬುದರಿಂದ ಇದಕ್ಕೆ ಕ್ವನಿಪ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಪಿತ್ತಾದುದರಿಂದ **ಹ್ರಸ್ವಸ್ಯ ಪಿತಿಕೃತಿತುಕ್**—(ಪಾ. ಸೂ. ೬-೧-೭೧) ಎಂಬುದರಿಂದ ಪೂರ್ವದ ಋಕಾರಕ್ಕೆ ತುಕಾಗಮ. ಸೃತ್ವನ್ ಶಬ್ದವಾಗುತ್ತದೆ. **ಗತಿಕಾರಕೋಪ ಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. .

**ಪೃತ್ಸು**—ಪೃತನಾ ಶಬ್ದ. ಇದಕ್ಕೆ ಸಪ್ತಮೀ ಬಹುವಚನಪರವಾದಾಗ **ಪದಾದಿಷು ಮಾಂಸ್‌ಪೃತ್ ಸ್ನೂನಾಮುಪಸಂಖ್ಯಾನಮ್**—ಎಂಬ ವಚನದಿಂದ ಪೃದಾದೇಶ. **ಖರಿ ಚ** (ಪಾ. ಸೂ. ೮-೪-೫೫) ಎಂಬುದರಿಂದ ದಕಾರಕ್ಕೆ ತಕಾರಾದೇಶ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ**—(ಪಾ ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧೦ ॥

॥ ಸಂಹಿತಾಪಾಠಃ ॥

ಅಧ ಗ್ಮಂತಾ ನಹುಷೋ ಹವಂ ಸೂರೇಃ ಶ್ರೋತಾ ರಾಜಾನೋ ಅಮೃತಸ್ಯ ಮಂದ್ರಾಃ ।
ನಭೋಜುವೋ ಯನ್ನಿರವಸ್ಯ ರಾಧಃ ಪ್ರಶಸ್ತಯೇ ಮಹಿನಾ ರಥವತೇ ॥ ೧೧ ॥

॥ ಪದಪಾಠಃ ॥

ಅಧ । ಗ್ಮಂತ । ನಹುಷಃ । ಹವಂ । ಸೂರೇಃ । ಶ್ರೋತ । ರಾಜಾನಃ । ಅಮೃತಸ್ಯ । ಮಂದ್ರಾಃ ।
ನಭಃಽಜುವಃ । ಯತ್ । ನಿರವಸ್ಯ । ರಾಧಃ । ಪ್ರಽಶಸ್ತಯೇ । ಮಹಿನಾ । ರಥಽವತೇ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ರಾಜಾನೋ ರಾಜಮಾನಾಃ ಸರ್ವಸ್ಯೇಶ್ವರಾ ವಾ ಹೇ ಮಂದ್ರಾ ಮಾದಯಿತಾರಃ ಯೂಯಮಮೃತಸ್ಯಾಮರಣಸ್ಯ ಸೂರೇಃ ಸ್ತೋತ್ರಾದಿಪ್ರೇರಕಸ್ಯ ನಹುಷೋ ಮನುಷ್ಯಸ್ಯ ಮಮ ಹವಮಾಹ್ವಾನಂ ಶ್ರೋತ। ಶೃಣುತ॥ ಬಹುಲಂ ಛಂದಸೀತಿ ಶಪೋ ಲುಕ್। ಅಮೃತಸ್ಯೇತ್ಯತ್ರ ಬಹುವ್ರೀಹೌ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ॥ ಅಥಾಥ ಶ್ರವಣಾನಂತರಂ ಗ್ಮಂತ। ಆಗಚ್ಛತ॥ ಗಮೇಶ್ಛಾಂದಸೋ ಲಙ್। ಮಧ್ಯಮಬಹುವಚನಸ್ಯ ವ್ಯತ್ಯಯೇನ ರುಃ। ಬಹುಲಂ ಛಂದಸೀತಿ ಶಪೋ ಲುಕ್। ಗಮಹನೇತ್ಯುಪಧಾಲೋಪಃ॥ ಕಿಮರ್ಥಮಾಗಮನಂ ಉಚ್ಯತೇ। ನಭೋಜುವೋ ನಭಸಿ ವ್ಯಾಪ್ತಾ ಯೂಯಂ ಯದ್ಯಸ್ಮಾನ್ನಿರವಸ್ಯ ನಿರ್ಗತರಕ್ಷಕಸ್ಯ ಯುಷ್ಮದ್ವ್ಯತಿರೇಕೇಣ ರಕ್ಷಕಾಂತರರಹಿತಸ್ಯ। ಅಥವಾ ನಿರ್ಗತೋ ಮುಖಾದುಚ್ಚರಿತೋ ರವಃ ಶಬ್ದಃ ಸ್ತೋತ್ರರೂಪೋ ಯಸ್ಯ ತಾದೃಶಸ್ಯ। ರಥವತೇ ರಥವತೋ ಯಜಮಾನಸ್ಯ। ಷಷ್ಠ್ಯರ್ಥೇ ಚತುರ್ಥೀ। ಮಹಿನಾ ಮಹಿಮ್ನಾ ಮಾಹಾತ್ಮ್ಯೇನ॥ ಮಕಾರಲೋಪಶ್ಛಾಂದಸಃ॥ ತೇನ ಯುಕ್ತಂ ರಾಧಃ ಸಮೃದ್ಧಿಸಾಧನಂ ಹವಿರ್ಲಕ್ಷಣಂ ಸಂರಾಧಕಂ ಸ್ತೋತ್ರಂ ವಾ ಪ್ರಶಸ್ತಯೇ ಪ್ರಶಂಸಿತುಂ ಕಾಮಯಧ್ವೇ। ತಸ್ಮಾದಾಹ್ವಾನಂ ಶೃಣುತಾಗಚ್ಛತ ಚೇತಿ॥

॥ ಪ್ರತಿಪದಾರ್ಥ ॥

**ನಭೋಜುವಃ**—ಅಂತರಿಕ್ಷದಲ್ಲಿ ವ್ಯಾಪ್ತರಾಗಿರುವ (ನೀವು) | **ಯತ್**—ಯಾವ ಕಾರಣ | **ನಿರವಸ್ಯ**—(ನೀವಲ್ಲದೆ ಬೇರೆ) ರಕ್ಷಕರಿಲ್ಲದ (ಸ್ತುತಿರೂಪ ಶಬ್ದವನ್ನು ಮಾಡುತ್ತಿರುವ) | **ರಥವತೇ**—ರಥಯುಕ್ತನಾದ (ಯಜಮಾನನ) **ಮಹಿನಾ**—ಶ್ರೇಷ್ಠವಾದ | **ರಾಧಃ**—ಸಮೃದ್ಧಿಸಾಧಕವಾದ ಹವಿಸ್ಸನ್ನು (ಸ್ತುತಿಯನ್ನು) | **ಪ್ರಶಸ್ತಯೇ**—ಪ್ರಶಂಸಿಸಲು (ಇಚ್ಛಿಸುತ್ತೀರೋ) ಆದ್ದರಿಂದ | **ರಾಜಾನಃ**—ಸರ್ವೇಶ್ವರರಾದ (ರಾಜಿಸುತ್ತಿರುವ) ಮತ್ತು | **ಮಂದ್ರಾಃ**—ಮದಕಾರಕರಾದ (ನೀವು) | **ಅಮೃತಸ್ಯ**—ಮರಣರಹಿತನೂ | **ಸೂರೇಃ**—ಸ್ತೋತ್ರಾದಿಗಳನ್ನು ಮಾಡುವವನೂ ಆದ | **ನಹುಷಸ್ಯ**—ಮನುಷ್ಯನ (ನನ್ನ) | **ಹವಂ**—ಸ್ತುತಿಪೂರ್ವಕಾಹ್ವಾನವನ್ನು | **ಶ್ರೋತ**—ಕೇಳಿ | **ಅಧ**—(ಆಹ್ವಾನವನ್ನು ಕೇಳಿದ)ನಂತರ | **ಗ್ಮಂತ**—(ನಮ್ಮ ಯಾಗ ಮಂದಿರಕ್ಕೆ) ಬನ್ನಿ.

॥ ಭಾವಾರ್ಥ ॥

ಸರ್ವೇಶ್ವರರೂ, ಸಂತೋಷಕಾರಕರೂ, ಅಂತರಿಕ್ಷದಲ್ಲಿ ವ್ಯಾಪ್ತರಾಗಿರುವವರೂ (ಆದ ಎಲೈ ದೇವತೆಗಳೇ) (ಅನ್ಯ) ರಕ್ಷಕರಿಲ್ಲದ (ನಿಮ್ಮ ಸ್ತುತಿಯನ್ನೇ ಮಾಡುತ್ತಿರುವ) ರಥಯುಕ್ತನಾದ ಯಜಮಾನನು (ಸಿದ್ಧಪಡಿಸಿರುವ) ಶ್ರೇಷ್ಠವೂ, ಸಮೃದ್ಧಿಕಾರಣವೂ ಆದ ಹವಿಸ್ಸನ್ನು (ಸ್ತುತಿಯನ್ನು) ಪ್ರಶಂಸಿಸಲು, ಅಮರನೂ (ನಿಮ್ಮನ್ನು) ಸ್ತುತಿಸುವವನೂ ಆದ (ಈ) ಮನುಷ್ಯನ (ನನ್ನ) ಸ್ತುತಿಪೂರ್ವಕಾಹ್ವಾನವನ್ನು ಮನ್ನಿಸಿ, ಇಲ್ಲಿಗೆ ಬನ್ನಿ.

## English Translation.

Royal bestowers of delight, listen to the invocation of (your) undying worshipper, and then come hither, that you who traverse the sky may be

propitiated by the greatness of the (sacrificial) wealth presented to you by the sacrificer, who acknowledges no other protector.

॥ ವಿಶೇಷವಿಷಯಗಳು ॥

**ಅಧ**—ಅಥಶಬ್ದದ ಥಕಾರವು ಛಾಂದಸವಾಗಿ ಧಕಾರವಾಗಿರುವುದು. ಅನಂತರ ಎಂದರ್ಥವು.

**ಗ್ಮಂತ**—ಈ ಶಬ್ದದ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ನಹುಷಃ**—ನಹುಷಃ ಎಂಬ ಶಬ್ದವು ಮನುಷ್ಯಾಃ ನರಃ ಮೊದಲಾದ ಇಪ್ಪತ್ತೈದು ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩–೭) ನಹುಷಃ ಎಂದರೆ ಮನುಷ್ಯನ ಎಂದರ್ಥವು. ಇಲ್ಲಿ ನಹುಷಃ ಎಂಬ ಶಬ್ದವು ನಹುಸ್ ಎಂಬ ಶಬ್ದದ ಷಷ್ಠೀ ಏಕವಚನವು.

**ಸೂರೇಃ—ಸ್ತೋತ್ರಾದಿಪ್ರೇರಕಸ್ಯ ।** ರೇಭಃ ಜರಿತಾ ಮೊದಲಾದ ಹದಿಮೂರು ಸ್ತೋತೃನಾಮಗಳ ಮಧ್ಯದಲ್ಲಿ ಸೂರಿಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩–೧೬) ಸೂರೇಃ ಎಂದರೆ ಸ್ತೋತ್ರಾದಿಗಳನ್ನು ಮಾಡುವವನ ಎಂದರ್ಥವು.

**ಅಮೃತಸ್ಯ**—ಭಾಷ್ಯಕಾರರು ಈ ಶಬ್ದಕ್ಕೆ **ಅಮೃತಸ್ಯ—ಅಮರಣಸ್ಯ,** ಮರಣರಹಿತನಾದ ಎಂಬ ಸಾಧಾರಣಾರ್ಥವನ್ನೇ ಹೇಳಿರುವುದು. ಈ ಶಬ್ದವು ನಹುಷಃ—ಮನುಷ್ಯನ (ನನ್ನ) ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದ ಮನುಷ್ಯನು ಹೇಗೆ ಮರಣರಹಿತನು ಎಂಬ ಸಂಶಯವು ತಲೆದೋರುವುದು ಸಹಜವಾಗಿದೆ. ಇದಕ್ಕೆ ಸರಿಯಾದ ವಿವರಣೆಯನ್ನು ಭಾಷ್ಯಕಾರರು ಕೊಟ್ಟಿಲ್ಲ.

**ಮಂದ್ರಾಃ—ಮಾದಯಿತಾರಃ** । ಸಂತೋಷವನ್ನುಂಟುಮಾಡುವವರು.

**ನಭೋಜುವಃ—ನಭಸಿ ವ್ಯಾಪ್ತಾಃ ।** ಅಂತರಿಕ್ಷದಲ್ಲಿ ವ್ಯಾಪಿಸಿರುವವರು. ಅಂತರಿಕ್ಷಸ್ಥಾನೀಯರು.

**ನಿರವಸ್ಯ—ನಿರ್ಗತರಕ್ಷಕಸ್ಯ । ಯುಷ್ಮದ್ವ್ಯತಿರೇಕೇಣ ರಕ್ಷಕಾಂತರರಹಿತಸ್ಯ** । ನಿಮ್ಮನ್ನು ಬಿಟ್ಟು ಬೇರೆ ರಕ್ಷಕರಿಲ್ಲದ । **ಅಥವಾ ನಿರ್ಗತೋ ಮುಖಾದುಚ್ಚಾರಿತೋ ರವಃ ಶಬ್ದಃ ಸ್ತೋತ್ರರೂಪೋ ಯಸ್ಯ ತಾದೃಶಸ್ಯ ।** ಅಥವಾ ಮುಖದಿಂದ ಸ್ತೋತ್ರರೂಪವಾದ ಶಬ್ದವು ಹೊರಡುತ್ತಿರುವ, ಸ್ತೋತ್ರಮಾಡುತ್ತಿರುವ ಎಂದಭಿಪ್ರಾಯವು.

**ರಥವತೇ**—ಇಲ್ಲಿ ಷಷ್ಠೀವಿಭಕ್ತಿಗೆ ಬದಲಾಗಿ ಚತುರ್ಥಿವಿಭಕ್ತಿಯ ಪ್ರಯೋಗವಿರುವುದು. ಎಂದರೆ **ರಥವತಃ** ಎನ್ನುವುದಕ್ಕೆ ಬದಲಾಗಿ **ರಥವತೇ** ಎಂಬ ಶಬ್ದವಿರುವುದು. ರಥವನ್ನುಳ್ಳ ಯಜಮಾನನ ಎಂದರ್ಥವು.

**ಪ್ರಶಸ್ತಯೇ—ಪ್ರಶಂಸಿತುಂ ಕಾಮಯಧ್ವೇ ।** ಪ್ರಶಂಸಿಸಲು ಇಚ್ಛಿಸುತ್ತೀರಿ. ಆದುದರಿಂದ ನಮ್ಮ ಆಹ್ವಾನವನ್ನು ಕೇಳಿ ಇಲ್ಲಿಗೆ ಬನ್ನಿ ಎಂದಭಿಪ್ರಾಯವು.

**ರಾಧಃ - ಸಮೃದ್ಧಿಸಾಧನಂ ಹವಿರ್ಲಕ್ಷಣಂ ಸಂರಾಧಕಂ ಸ್ತೋತ್ರಂ ವಾ** । ನಾವು ಸಮೃದ್ಧಿಯಾಗಿ ಸಿದ್ಧಪಡಿಸಿರುವ ಹವಿರ್ಲಕ್ಷಣರೂಪವಾದ ಅನ್ನವನ್ನು ಅಥವಾ ನಾವು ವಿಶೇಷರೀತಿಯಿಂದ ಮಾಡುತ್ತಿರುವ ಸ್ತೋತ್ರವನ್ನು ಪ್ರಶಂಸಿಸುವುದಕ್ಕಾಗಿ ಎಂದಭಿಪ್ರಾಯವು.

ಈ ಋಕ್ಕಿನ ಬಹುಭಾಗವು, ಅದರಲ್ಲಿಯೂ, ಉತ್ತರಾರ್ಧವು ಬಹು ತೊಡಕಾಗಿರುವುದು. ಅರ್ಥವು ಸರಿಯಾಗಿ ಹೊಂದುವುದಿಲ್ಲ. ಪೂರ್ವಾರ್ಧದಲ್ಲಿರುವ ಅಮೃತಸ್ಯ ಎಂಬ ಶಬ್ದವು ಮನುಷ್ಯನ ಗುಣಕ್ಕೆ ತೀರಾ ವಿರುದ್ಧವಾಗಿದೆ. ಮನುಷ್ಯರೆಲ್ಲರೂ ಮರಣಕ್ಕೆ ಈಡಾಗಬೇಕಾಗಿರುವುದರಿಂದ ಅವರು ಅಮರರು ಹೇಗಾಗುವರು? ಉತ್ತರಾರ್ಧದಲ್ಲಿಯೂ ಸಹ ರಥವತೀ ಎಂಬ ಶಬ್ದಪ್ರಯೋಗವು ಯಜ್ಞಮಾಡುವ ಯಜಮಾನನಿಗೆ ಅನ್ವಯಿಸುವುದೆಂದು ಸಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ. ಮತ್ತೂ ಈ ವಾಕ್ಯದಲ್ಲಿ ಕ್ರಿಯಾಪದವು ಇಲ್ಲದಿರುವುದರಿಂದ ವಾಕ್ಯದ ಮುಖ್ಯಾಭಿಪ್ರಾಯವಾಗಲಿ, ಋಷಿಯ ಆಶಯವಾಗಲಿ ಯಾವುದೂ ಸ್ಪಷ್ಟವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಅಧ**—ಅಥ ಎಂದಿರುವಾಗ ವ್ಯತ್ಯಯದಿಂದ ಥಕಾರಕ್ಕೆ ಧಕಾರಾದೇಶ ಬಂದಿದೆ.

**ಗ್ಮಂತ**—ಗಮ್ಲೃ ಗತೌ ಧಾತು. **ಛಂದಸಿ ಲುಙ್‌ಲಙ್‌ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲಙ್. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಮಧ್ಯಮ ಪುರುಷ ಬಹುವಚನಕ್ಕೆ ಝ ಪ್ರತ್ಯಯ ಬರುತ್ತದೆ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್. **ಸಾರ್ವಧಾತುಕಮಪಿತ್**—(ಪಾ. ಸೂ. ೧-೨-೪)ಎಂಬುದರಿಂದ ಪ್ರತ್ಯಯಕ್ಕೆ ಙಿತ್ವ ಅತಿದೇಶವಿರುವುದರಿಂದ ಅದನ್ನು ನಿಮಿತ್ತೀಕರಿಸಿ **ಗಮಹನಜನ**—(ಪಾ ಸೂ. ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ ಲೋಪ. ಪ್ರತ್ಯಯಕ್ಕೆ **ಝೋಽಂತಃ**—(ಪಾ. ಸೂ. ೭-೧-೩) ಎಂಬುದರಿಂದ ಅಂತಾದೇಶ. **ಬಹುಲಂ ಛಂದಸ್ಯಮಾಙ್ಯೋಗೇಽಪಿ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅಧ ಎಂಬ ನಿಪಾತಸಂಬಂಧವಿರುವುದರಿಂದ **ನಿಪಾತೈರ್ಯದ್ಯ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರ ಉಳಿಯುತ್ತದೆ.

**ಹವಮ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. **ಭಾವೇಽನುಪಸರ್ಗಸ್ಯ**—(ಪಾ. ಸೂ. ೩-೩-೭೫) ಎಂಬುದರಿಂದ ಭಾವಾರ್ಥದಲ್ಲಿ ಅಪ್ ಪ್ರತ್ಯಯ, ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಆಗ ಪ್ರತ್ಯಯವನ್ನು ನಿಮಿತ್ತೀಕರಿಸಿ **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಉಕಾರಕ್ಕೆ ಗುಣ. ಅವಾದೇಶ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಶ್ರೋತಾ**—ಶ್ರು ಶ್ರವಣೇ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ ಅದಕ್ಕೆ ತ ಆದೇಶ **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. ವ್ಯತ್ಯಯದಿಂದ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. **ದ್ವ್ಯಚೋಽತಸ್ತಿಙಃ**—(ಪಾ. ಸೂ. ೬-೩-೧೩೫) ಎಂಬುದರಿಂದ ದ್ವ್ಯಚ್ಕವಾದುದರಿಂದ ಸಂಹಿತಾದಲ್ಲಿ ಇದಕ್ಕೆ ದೀರ್ಘ ಬರುತ್ತದೆ.

**ರಾಜಾನಃ**—ರಾಜೃ ದೀಪ್ತೌ ಧಾತು. ಔಣಾದಿಕವಾದ ಕನಿನ್ ಪ್ರತ್ಯಯ. ಸಂಬೋಧನಾ ಬಹುವಚನಾಂತ ರೂಪ **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಮೃತಸ್ಯ**—ಮೃಙ್ ಪ್ರಾಣತ್ಯಾಗೇ ಧಾತು. ಭಾವಾರ್ಥದಲ್ಲಿ ಕ್ತ ಪ್ರತ್ಯಯ. ನ ವಿದ್ಯತೇ ಮೃತಂ ಯಸ್ಯ ಸಃ ತಸ್ಯ. **ನಞೋ ಜರಮರಮಿತ್ರಮೃತಾಃ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ನಭೋಜುವಃ**—ಜು ಎಂಬುದು ಸೌತ್ರ ಧಾತು. ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪ್ರಶಸ್ತಯೇ**—ಶಂಸು ಸ್ತುತೌ ಧಾತು. ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. **ಅನಿದಿತಾಂ ಹಲ**—ಎಂಬುದರಿಂದ ಉಪಧಾನಕಾರಲೋಪ. **ತಾದೌ ಚ ನಿತಿ**—(ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಮಹಿನಾ**—ಮಹಿಮನ್ ಶಬ್ದ. ತೃತೀಯಾ ಏಕವಚನದಲ್ಲಿ **ಅಲ್ಲೋಪೋಽನಃ**—ಎಂಬುದರಿಂದ ಅನಿನ ಅಕಾರಕ್ಕೆ ಲೋಪ ಬಂದಾಗ ಛಾಂದಸವಾಗಿ ಮಕಾರಕ್ಕೂ ಲೋಪ ಬರುತ್ತದೆ.

**ರಥವತೇ**—ರಥಃ ಅಸ್ಯ ಅಸ್ತಿ ಇತಿ ರಥವಾನ್. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—ಸೂತ್ರದಿಂದ ಮತುಪಿನ ಮಕಾರಕ್ಕೆ ವತ್ವ. **ವಿವಕ್ಷಾತಃ ಕಾರಕಾಣಿ ಭವಂತಿ**—ಎಂಬ ವಚನದಿಂದ ಷಷ್ಠ್ಯರ್ಥದಲ್ಲಿ ಚತುರ್ಥೀ ಬಂದಿದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ॥ ೧೧ ॥



॥ ಸಂಹಿತಾಪಾಠಃ ॥

ಏತಂ ಶರ್ಧಂ ಧಾಮ ಯಸ್ಯ ಸೂರೇರಿತ್ಯವೋಚನ್ದಶತಯಸ್ಯ ನಂಶೇ ।
ದ್ಯುಮ್ನಾನಿ ಯೇಷು ವಸುತಾತೀ ರಾರನ್ವಿಶ್ವೇ ಸನ್ವಂತು ಪ್ರಭೃಥೇಷು
ವಾಜಂ ॥ ೧೨ ॥

॥ ಪದಪಾಠಃ ॥

ಏತಂ । ಶರ್ಧಂ । ಧಾಮ । ಯಸ್ಯ । ಸೂರೇಃ । ಇತಿ । ಅವೋಚನ್ । ದಶಽತಯಸ್ಯ । ನಂಶೇ । ದ್ಯುಮ್ನಾನಿ । ಯೇಷು । ವಸುಽತಾತಿಃ । ರರನ್ । ವಿಶ್ವೇ । ಸನ್ವಂತು । ಪ್ರಽಭೃಥೇಷು । ವಾಜಂ ॥ ೧೨ ॥

|| ಸಾಯಣಭಾಷ್ಯಂ ||

ಯಸ್ಯ ಸೂರೇರ್ಹವಿರಾದಿಪ್ರೇರಕಸ್ಯ ಯಜಮಾನಸ್ಯ ಸಂಬಂಧಿನೋ ದಶತಯಸ್ಯ ದಶೇಂದ್ರಿಯ-ಸಂವರ್ಧಕತ್ವೇನ ದಶಾವಯವಸ್ಯಾನ್ನಸ್ಯ ನಂಶೇ ಪ್ರಾಪ್ತಯೇ ವಯಮಾಹೂತಾಃ ಸ್ಮ ತಸ್ಮೈ ಯಜಮಾನಾಯೈತಮಿದಾನೀಂ ದಾತವ್ಯತ್ವೇನ ವರ್ತಮಾನಂ ಶರ್ಧಂ ಪರೇಷಾಮಭಿಭಾವಕಮನ್ನಂ ತತ್ಪ್ರಾಪ್ತಿ ಹೇತುಂ ಬಲಂ ವಾ ಧಾಮ ವಿದಧಾಮ ಕರವಾಮೇತ್ಯವೋಚನ್ದೇವಾಃ || ಧಾಮ | ದಧಾತೇರ್ಲುಙಿ ಗಾತಿಸ್ಥೇತಿ ಸಿಚೋ ಲುಕ್ | ವಚೇರಕಾರಸ್ಯೋಮ್ | ಅಸ್ಯತಿವಕ್ತೀತ್ಯಾದಿನಾ ಚ್ಲೇರಙ್ || ಯೇಷು ದೇವೇಷು ದ್ಯುಮ್ನಾನಿ ದ್ಯೋತಮಾನಾನ್ಯನ್ನಾನಿ ವಸುತಾತಿರ್ವಸೂನಾಂ ಧನಾನಾಂ ತಾತಿರ್ವಿಸ್ತಾರಶ್ಚ ವಸೂನ್ಯೇವ ವಾ ರಾರನ್ ರಮಂತೇ ಭೃಶಂ || ತಾತಿಃ | ತನೋತೇಃ ಕ್ತಿನಿ ವ್ಯತ್ಯಯೇನಾತ್ವಂ | ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ | ಯದ್ವಾ | ಸ್ವಾರ್ಥಿಕಸ್ತಾತಿಲ್ | ರಾರನ್ನಿತಿ ರಮತೇರ್ಯಙ್‍ಲುಗಂತಸ್ಯ ಲುಙಿ ರೂಪಂ || ತೇ ವಿಶ್ವೇ ಸರ್ವೇ ದೇವಾಃ ಪ್ರಭೃಥೇಷು ಪ್ರಕೃಷ್ಟ-ಭರಣೇಷು ಯಾಗೇಷು ವಾಜಮನ್ನಂ ಸನ್ವಂತು | ದದತು | ಪ್ರಯಚ್ಛಂತು || ಷಣು ದಾನೇ || ಯದ್ವಾ | ಯಸ್ಯ ಸೂರೇಃ ಸ್ವಭೂತಸ್ಯ ಚ ದಶತಯಸ್ಯ ದಶ ಚಮಸೇಷ್ವವಸ್ಥಿತಸ್ಯ ಸೋಮಸ್ಯ ಪ್ರಾಪ್ತಯೇ ವಯಮಾಹೂತಾಃ ಸ್ಮ ತಸ್ಮಾ ಏತಂ ಶರ್ಧಂ ಧಾಮೇತ್ಯವೋಚನ್ | ಯಸ್ಮಾದೇವಂ ತಸ್ಮಾತ್ಪ್ರಭೃತೇಷು ಯಾಗೇಷು ವಾಜಂ ತಾದೃಶಂ ಸೋಮಲಕ್ಷಣಮನ್ನಂ ವಿಶ್ವೇ ದೇವಾಃ ಸನ್ವಂತು | ಸಂಭಜಂತಾಂ || ವನ ಷಣ ಸಂಭಕ್ತಾವಿತ್ಯಸ್ಯ ವ್ಯತ್ಯಯೇನೋಪ್ರತ್ಯಯಃ || ಕೀದೃಶೇಷು ಯಜ್ಞೇಷು | ಯೇಷು ವಸುತಾತಿ-ರ್ವಸೂನಾಂ ಹವಿರ್ಲಕ್ಷಣಾನಾಂ ಧನಾನಾಂ ವಾ ವಿಸ್ತಾರಯಿತಾರ ಋತ್ವಿಜಃ | ವಚನವ್ಯತ್ಯಯಃ | ದ್ಯುಮ್ನಾನಿ ದ್ಯೋತಮಾನಾನಿ ಹವೀಂಷಿ ರಾರನ್ ದದತಿ || ರಾ ದಾನೇ | ಲೇಟಿ ಛಾಂದಸಃ ಶಪಃ ಶ್ಲುಃ | ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದಾತೋ ಲೋಪ ಇಟಿ ಚೇತ್ಯಾಕಾರಲೋಪಃ | ಅತ ಏವಾಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಾಭಾವಶ್ಚ ||

|| ಪ್ರತಿಪದಾರ್ಥ ||

**ಯಸ್ಯ ಸೂರೇಃ**—ಯಾವ ಸ್ತುತಿ ಕರ್ತೃವಾದ ಯಜಮಾನನ | **ದಶತಯಸ್ಯ**—(ದಶೇಂದ್ರಿಯ ವರ್ಧಕವಾದ) ದಶಾವಯವಾದ ಅನ್ನದ | **ನಂಶೇ**—ಪ್ರಾಪ್ತಿಗಾಗಿ (ಆಹೂತರಾದ ನಾವು) | (**ತಸ್ಮೈ**—ಆ ಯಜಮಾನನಿಗೆ) | **ಏತಂ**—ಈ (ಈಗ ದಾತವ್ಯವಾಗಿರುವ) | **ಶರ್ಧಂ**—ಇತರರಿಗೆ ಅಪಜಯಕಾರಕವಾದ (ಬಲ ಕಾರಕವಾದ) ಅನ್ನವನ್ನು | **ಧಾಮ**—ಕೊಡೋಣ | **ಇತಿ ಅವೋಚನ್**—(ದೇವತೆಗಳು) ಹಾಗೆ ಹೇಳಿದರು | **ಯೇಷು**—ಯಾವ ದೇವತೆಗಳಲ್ಲಿ | **ದ್ಯುಮ್ನಾನಿ**—ದ್ಯೋತಮಾನವಾದ ಅನ್ನಾದಿಗಳು | **ವಸುತಾತಿಃ**—ಧನರಾಶಿಯೂ | **ರಾರನ್**—ರಮಿಸುತ್ತವೋ | (**ತೇ**—ಆ) | **ವಿಶ್ವೇ**—ಎಲ್ಲಾ (ದೇವತೆಗಳೂ) | **ಪ್ರಭೃತೇಷು**—ಯಥೇಚ್ಛವಾಗಿ ಸಿದ್ಧವಾಗಿರುವ ಸಂಭಾರಗಳುಳ್ಳ ಯಾಗಗಳಲ್ಲಿ | **ವಾಜಂ**—ಅನ್ನವನ್ನು | **ಸನ್ವಂತು**–ದಾನಮಾಡಲಿ [ಅಥವಾ | **ಯಸ್ಯ ಸೂರೇಃ**—ಯಾವ ಯಾಗ ಕರ್ತೃವಿನ | **ದಶತಯಸ್ಯ**—ಹತ್ತು ಚಮಸಗಳಲ್ಲಿರುವ ಸೋಮದ | **ನಂಶೇ**—ಪ್ರಾಪ್ತಿಗಾಗಿ (ನಾವು ಆಹೂತರೋ) | **ತಸ್ಮೈ**—ಆ ಯಜಮಾನನಿಗೆ) | **ಏತಂ ಶರ್ಧಂ**—ಈ ಅನ್ನವನ್ನು | **ಧಾಮ**—ಕೊಡೋಣ | **ಇತ್ಯವೋಚನ್**—ಎಂದು (ದೇವತೆಗಳು) ಹೇಳಿದರು (ಆದುದರಿಂದ) |

**ಯೇಷು**— ಯಾವ ಯಜ್ಞಗಳಲ್ಲಿ | **ವಸುತಾತಿಃ**— ಹವಿರ್ಲಕ್ಷಣಾನ್ನವನ್ನು ವಿಸ್ತರಿಸುವ (ಋತ್ವಿಜರು) | **ದ್ಯುಮ್ನಾನಿ**— ಶ್ರೇಷ್ಠವಾದ ಹವಿಸ್ಸುಗಳನ್ನು | **ರಾರನ್**— ಅರ್ಪಿಸುತ್ತಾರೋ | (**ತೇಷು**— ಅ) | **ಪ್ರಭೃತೇಷು**— ಪ್ರಕೃಷ್ಟ ಸಂಭಾರವುಳ್ಳ ಯಾಗಗಳಲ್ಲಿ | **ವಾಜಂ**— ಸೋಮರೂಪಾನ್ನವನ್ನು | **ವಿಶ್ವೇ**— ಎಲ್ಲಾ ದೇವತೆಗಳೂ | **ಸನ್ವಂತು**— ಸ್ವೀಕರಿಸಲಿ ]

॥ ಭಾವಾರ್ಥ ॥

(ದಶೇಂದ್ರಿಯವರ್ಧಕವಾದದ್ದರಿಂದ) ದಶಾವಯವವುಳ್ಳ ಅನ್ನವನ್ನು (ಸ್ವೀಕರಿಸಿ ಎಂದು) (ನಮ್ಮನ್ನು) ಆಹ್ವಾನಿಸುವ ಯಜಮಾನನಿಗೆ ಬಲಕಾರಕವಾದ ಈ ಅನ್ನವನ್ನು ಕೊಡೋಣವೆಂದು ವಿಶ್ವೇದೇವತೆಗಳು, ಹೇಳುತ್ತಾರೆ; (ಆದ್ದರಿಂದ) ದ್ಯೋತಮಾನವಾದ ಅನ್ನಾದಿಗಳು, ಐಶ್ವರ್ಯವು, ಇವುಗಳಿಂದ ಯುಕ್ತರಾದ ವಿಶ್ವೇದೇವತೆಗಳು, ನಾವು ಸಿದ್ಧಪಡಿಸಿರುವ ಈ ಯಾಗಗಳಲ್ಲಿ ಅನ್ನಾದಿಗಳನ್ನು ಅನುಗ್ರಹಿಸಲಿ. ಅಥವಾ, ದಶ ಚಮಸಗಳಲ್ಲಿ ಸಿದ್ಧಪಡಿಸಿರುವ ಸೋಮರಸಪಾನಕ್ಕಾಗಿ ನಮ್ಮನ್ನಾಹ್ವಾನಿಸುವ ಯಜಮಾನನಿಗೆ ಬಲವರ್ಧಕಾನ್ನವನ್ನು ಕೊಡುತ್ತೇವೆಂದು ಹೇಳಿದ ವಿಶ್ವೇದೇವತೆಗಳು ಹವಿರ್ಲಕ್ಷಣಾನ್ನವನ್ನು ಅರ್ಪಿಸುವ ಋತ್ವಿಜರಿಂದ ಸಿದ್ಧಪಡಿಸಲ್ಪಟ್ಟ ಸೋಮರೂಪದಲ್ಲಿರುವ ಹವಿಸ್ಸನ್ನು ಸ್ವೀಕರಿಸಲಿ.

## English Translation.

The gods have declared- "We confer present vigour upon the worshipper (who invokes us) to partake of the decupled (libation)" May all (the gods) in whom splendours and riches abound, bestow (abundant) food at (solemn) sacrifices.

॥ ವಿಶೇಷವಿಷಯಗಳು ॥

**ಶರ್ಧಂ**— ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಶರ್ಧ ಎಂಬ ಶಬ್ದವು ಪಠಿತವಾಗಿರುವುದರಿಂದ ಶರ್ಧ ಶಬ್ದಕ್ಕೆ ಬಲವೆಂದರ್ಥವು. (ನಿ. ೩-೯) ಭಾಷ್ಯಕಾರರು ಈ ಋಕ್ಕಿನಲ್ಲಿ ಶರ್ಧ ಶಬ್ದಕ್ಕೆ ಬಲವೆಂಬ ಅರ್ಥವನ್ನೂ, **ಪರೇಷಾಮಭಿಭಾವಕಮನ್ನಂ**— ಇತರರನ್ನು (ಶತ್ರುಗಳನ್ನು) ಪರಾಭವಗೊಳಿಸಲು ಸಾಮರ್ಥ್ಯವನ್ನುಂಟುಮಾಡುವ ಅನ್ನವನ್ನು ಎಂಬ ಅರ್ಥವನ್ನೂ ಹೇಳಿರುವರು. ಇದಲ್ಲದೆ ಈ ಶಬ್ದಕ್ಕೆ ಬೇರೆ ಬೇರೆ ಋಕ್ಕುಗಳಲ್ಲಿ ಸಂದರ್ಭಾನುಸಾರವಾಗಿ ಬೇರೆ ಬೇರೆ ಅರ್ಥಗಳನ್ನು ಹೇಳಿರುವರು. ಉದಾ—

**ಕ್ರೀಳಂ ವಃ ಶರ್ಧೋ ಮಾರುತಮನರ್ವಾಣಂ ರಥೇ ಶುಭಂ | ಕಣ್ವಾ ಅಭಿ ಪ್ರ ಗಾಯತ ॥**
(ಋ. ಸಂ. ೧-೩೭-೧)

ಎಂಬ ಋಕ್ಕಿನಲ್ಲಿ ಶರ್ಧವೆಂದರೆ ಬಲವೆಂದೂ,

**ಪ್ರ ಶಂಸಾ ಗೋಷ್ವಘ್ನ್ಯಂ ಕ್ರೀಳಂ ಯಚ್ಛರ್ಧೋ ಮಾರುತಂ | ಜಂಭೇ ರಸಸ್ಯ ವಾವೃಧೇ ॥**
(ಋ. ಸಂ. ೧-೩೭-೫)

ಎಂಬ ಋಕ್ಕಿನಲ್ಲಿ **ಶರ್ಧಃ— ಪ್ರಸಹನಶೀಲಂ ತೇಜಃ**— ತಡೆಯುವ ಶಕ್ತಿಯುಳ್ಳ ಅಥವಾ ಅಪ್ರತಿಹತವಾದ ತೇಜಸ್ಸೆಂದೂ.

**ಇಂದ್ರಂ ಮಿತ್ರಂ ವರುಣಮಗ್ನಿಮೂತಯೇ ಮಾರುತಂ ಶರ್ಧೋ ಅದಿತಿಂ ಹವಾಮಹೇ |**

(ಋ. ಸಂ. ೧-೧೦೬-೧)

ಎಂಬ ಋಕ್ಕಿನಲ್ಲಿ **ಮಾರುತಂ ಶರ್ಧೋ ಮರುತ್ಸಮೂಹರೂಪಂ ಬಲಂ ಚ** ಮರುತ್ತುಗಳ ಸಂಘಶಕ್ತಿರೂಪವಾದ ಬಲವನ್ನು ಎಂದೂ,

**ಸ ಹಿ ಶರ್ಧೋ ನ ಮಾರುತಂ ತುವಿಷ್ವಣಿರಪ್ನಸ್ವತೀಷೂರ್ವರಾಸ್ವಿಷ್ಟನಿ ರಾರ್ತನಾಸ್ವಿಷ್ಟನಿಃ |**

(ಋ. ಸಂ. ೧-೧೨೭-೬)

ಎಂಬ ಋಕ್ಕಿನಲ್ಲಿ **ಮಾರುತಂ ಶರ್ಧೋ ಮರುತ್ಸಂಬಂಧಿ ಬಲಂ** ಮರುತ್ತುಗಳ ಬಲವೆಂದೂ, ಅರ್ಥಮಾಡಿರುವರು. ಅಥವಾ ದಶೇಂದ್ರಿಯಗಳಿಂದ ಕೂಡಿ ಸಾಧಾರಣವಾಗಿ ಈ ಶಬ್ದವು ಮರುದ್ದೇವತೆಗಳ ಸಂಘಶಕ್ತಿರೂಪವಾದ ಬಲವನ್ನು ಹೇಳುವುದಾದರೂ, ಋ. ಸಂ. ೧-೭೧-೮ ; ೧-೧೪೧-೧ ಮೊದಲಾದ ಋಕ್ಕುಗಳಲ್ಲಿ ಅಗ್ನಿ ಪರವಾಗಿಯೂ ಉಪಯುಕ್ತ ವಾಗಿರುವುದು. ಅನ್ನವು ಅಥವಾ ಆಹಾರವು ಶಕ್ತಿವರ್ಧಕವಾಗಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ಬಲವನ್ನು ಉಂಟುಮಾಡತಕ್ಕ ಅನ್ನವನ್ನು ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿರುವರು.

**ದಶತಯಸ್ಯ—ದಶೇಂದ್ರಿಯಸಂವರ್ಧಕತ್ವೇನ ದಶಾವಯವಸ್ಯಾನ್ನಸ್ಯ |** ದಶೇಂದ್ರಿಯಗಳನ್ನು ಅಥವಾ ದಶೇಂದ್ರಿಯಗಳಿಂದ ಕೂಡಿರುವ ಶರೀರವನ್ನು ಪುಷ್ಟಿಗೊಳಿಸುವ ಅನ್ನದ ಎಂದರ್ಥವು. ಇದೇ ಸೂಕ್ತದ ಮುಂದಿನ ಋಕ್ಕಿನಲ್ಲಿ ಎಂದರೆ, ಋ. ಸಂ. ೧-೧೨೨-೧೩ ರಲ್ಲಿ ಈ ಶಬ್ದವು ಪಠಿತವಾಗಿದೆ. ಅಲ್ಲಿಯೂ ಭಾಷ್ಯಕಾರರು. **ದಶತಯಸ್ಯ ಧಾಸೇಃ ದಶೇಂದ್ರಿಯತೃಪ್ತಿಸಾಧನತ್ವೇನ ದಶಾವಯವಸ್ಯಾನ್ನಸ್ಯ ಯಸ್ಮಾದ್ದ್ವಿಃ ಪಂಚದಶವಿಧಾನ್ಯನ್ನಾನಿ | ದಶಚಮಸಗೃಹೀತತ್ವಾದನ್ನಸ್ಯ ದಶವಿಧತ್ವಂ |** ದಶೇಂದ್ರಿಯಗಳ ತೃಪ್ತಿಗೆ ಸಾಧನಭೂತವಾದ ಹತ್ತುವಿಧ ಅನ್ನಗಳು ಎಂದು ಹೇಳಿರುವರು. ಹತ್ತು ಚಮಸಪಾತ್ರೆಗಳಲ್ಲಿ ಅನ್ನ (ಅಥವಾ ಸೋಮ) ವನ್ನಿಟ್ಟಿರುವುದರಿಂದ ಹತ್ತು ವಿಧವಾದ ಎಂದರ್ಥವಿವರಣೆ ಮಾಡಿರುವರು. ಮತ್ತು,

**ಮಾ ಮಾಮೇಧೋ ದಶತಯಶ್ಚಿತೋ ಧಾಕ್ ಪ್ರ ಯದ್ವಾಂ ಬದ್ಧಸ್ತ್ಮನಿ ಖಾದತಿ ಕ್ಷಾಂ ||**

(ಋ. ಸಂ. ೧-೧೫೮-೪)

ಎಂಬ ಋಕ್ಕಿನಲ್ಲಿ ದಶತಯಃ ಎಂಬ ಶಬ್ದಕ್ಕೆ **ದಶತಯೋ ದಶವಾರಃ** ಹತ್ತಾವರ್ತಿ ಎಂಬ ಅರ್ಥವನ್ನು ಭಾಷ್ಯಕಾರರು ಹೇಳಿರುವರು. ಆದುದರಿಂದ ದಶತಯ ಶಬ್ದಕ್ಕೆ ಹತ್ತುಸಲ ಅಥವಾ ಹತ್ತುವಿಧವಾದ ಎಂದು ಮಾತ್ರ ಅರ್ಥ ವಾಗುವುದು. ಪ್ರಕೃತ ಸಂದರ್ಭದಲ್ಲಿ ಅರ್ಥವು ಹೊಂದುವುದಕ್ಕಾಗಿ ದಶೇಂದ್ರಿಯತೃಪ್ತಿಸಾಧನಭೂತವಾದ ಎಂಬರ್ಥವನ್ನು ಹೇಳಿರುವರು.

**ಏತಂ ಶರ್ಧಂ—ದಶತಯಸ್ಯ ನಂಶೇ** ನಮಗೆ ಹವಿಸ್ಸಿನ ರೂಪದಲ್ಲಿರುವ ಅನ್ನವನ್ನ ಅರ್ಪಿಸಿ ನಮ್ಮನ್ನು ಆಹ್ವಾನಮಾಡಿರುವುದರಿಂದ ಯಜ್ಞಮಾಡುವ ಯಜಮಾನರಿಗೆ ಶತ್ರುಪರಾಭವವನ್ನುಂಟುಮಾಡುವ ಶಕ್ತಿಯನ್ನು ಕೊಡುವ ಅನ್ನವನ್ನು ಕೊಡೋಣ ಎಂದು ದೇವತೆಗಳು ತಮ್ಮತಮ್ಮಲ್ಲಿ ಮಾತನಾಡಿಕೊಳ್ಳುವರು ಎಂದಭಿಪ್ರಾಯವು.

**ದ್ಯುಮ್ನಾನಿ—** ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ದ್ಯುಮ್ನಶಬ್ದವು ಪಠಿತ ವಾಗಿರುವುದರಿಂದ ದ್ಯುಮ್ನಾನಿ ಎಂದರೆ ಧನಗಳು ಎಂದರ್ಥವು. ಈ ಋಕ್ಕಿನಲ್ಲಿ ಭಾಷ್ಯಕಾರರು **ದ್ಯೋತಮಾನಾನ್ಯನ್ನಾನಿ**

ಪ್ರಕಾಶಮಾನವಾದ ಎಂದರೆ ಪುಷ್ಟಿಕರವಾದ ಅನ್ನಗಳೆಂದು ಅರ್ಥವಿವರಣೆ ಮಾಡಿರುವರು. (ನಿ. ೩.೯) ಯಾಸ್ಕರೂ ಸಹ-**ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ**-ಎಂದರೆ ಚೆನ್ನಾಗಿ ಬೆಳಗುವ ಕೀರ್ತಿ ಅಥವಾ ಅನ್ನವೆಂದು ನಿರ್ವಚನವನ್ನು ಹೇಳಿ ಈ ಅರ್ಥಸಮರ್ಥನೆಗಾಗಿ,

**ಶತಂ ತೇ ಶಿಪ್ರಿನ್ನೂತಯಃ ಸುದಾಸೇ ಸಹಸ್ರಂ ಶಂಸಾ ಉತ ರಾತಿರಸ್ತು ।**
**ಜಹಿ ವಧರ್ವನುಷೋ ಮರ್ತ್ಯಸ್ಯಾಸ್ಮೇ ದ್ಯುಮ್ನಮಧಿ ರತ್ನಂ ಚ ಧೇಹಿ ॥**
(ಋ. ಸಂ. ೭-೨೫-೩)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

**ವಸುತಾತಿಃ—ವಸೂನಾಂ ಧನಾನಾಂ ತಾತಿರ್ವಿಸ್ತಾರಶ್ಚ ।** ಧನದ ಬಾಹುಳ್ಯವು ಎಂದರೆ ಅಧಿಕವಾದ ಧನವೆಂದರ್ಥವು. ಈ ವಸುತಾತಿ ಎಂಬ ಶಬ್ದದ ಪ್ರಯೋಗವು ಮುಂದಿನ ಋಕ್ಕಿನಲ್ಲಿಯೂ ಇರುವುದು. ಮತ್ತೆಲ್ಲಿಯೂ ಇರುವುದಿಲ್ಲ. ಈ ಶಬ್ದಕ್ಕೆ ಭಾಷ್ಯಕಾರರು—**ವಸುತಾತಿರ್ವಸೂನಾಂ ಹವಿರ್ಲಕ್ಷಣಾನಾಂ ಧನಾನಾಂ ವಾ ವಿಸ್ತಾರಯಿತಾರ ಋತ್ವಿಜಃ । ವಚನವ್ಯತ್ಯಯಃ ।** ಹವಿರ್ಲಕ್ಷಣದಿಂದಿರುವ ಧನವನ್ನು ಸಂಪಾದಿಸಿ ಅರ್ಪಿಸುವವರಾದ್ದರಿಂದ ವಸುತಾತಿಃ ಎಂದರೆ ಋತ್ವಿಕ್ಕುಗಳು. ಇಲ್ಲಿ ಬಹುವಚನಕ್ಕೆ ಬದಲಾಗಿ ವ್ಯತ್ಯಯದಿಂದ ಏಕವಚನ ಪ್ರಯೋಗವಿರುವುದು ಎಂದು ಹೇಳಿದಾರೆ.

**ಪ್ರಭೃತೇಷು—ಪ್ರಕೃಷ್ಟಭರಣೇಷು ಯಾಗೇಷು ।** ಉತ್ತಮವಾದ ಸಂಭಾರದ್ರವ್ಯಗಳಿಂದ ಯುಕ್ತವಾದ ಯಜ್ಞಗಳಲ್ಲಿ ಎಂದಭಿಪ್ರಾಯವು.

ಈ ಋಕ್ಕಿನ ಉತ್ತರಾರ್ಧಕ್ಕೆ—ಋತ್ವಿಕ್ಕುಗಳು ಯಜ್ಞದಲ್ಲಿ ಬಹಳವಾಗಿ ದೇವತೆಗಳಿಗೆ ಅರ್ಪಿಸುವ ಸೋಮರೂಪದಿಂದಿರುವ ಅನ್ನಗಳನ್ನು ದೇವತೆಗಳೆಲ್ಲರೂ ಬಂದು ಸ್ವೀಕರಿಸಲಿ ಎಂದು ಮುಖ್ಯಾಭಿಪ್ರಾಯವನ್ನು ಹೇಳಬಹುದೆಂದು Wilson ಎಂಬ ಪಾಶ್ಚಾತ್ಯಪಂಡಿತನ ಅಭಿಪ್ರಾಯವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಧಾಮ—**ಡುಧಾಞ್ ಧಾರಣಪೋಷಣಯೋಃ ಧಾತು. **ಛಂದಸಿ ಲುಙ್‌ಲಙ್‌ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲುಙ್. ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ. ಚ್ಲಿಗೆ ಸಿಚ್ ಬಂದಾಗ **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅವೋಚನ್**—ವಚ ಪರಿಭಾಷಣೇ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಇಕಾರಲೋಪ. **ಝೋಽಂತಃ**—ಎಂಬುದರಿಂದ ಅಂತಾದೇಶ. ಚ್ಲಿ ವಿಕರಣ ಬಂದಾಗ ಅದಕ್ಕೆ **ಅಸ್ಯತಿವಕ್ತಿಖ್ಯಾತಿಭ್ಯೋಽಙ್**—(ಪಾ. ಸೂ. ೩-೧-೫೨) ಎಂಬುದರಿಂದ ಅಙಾದೇಶ. **ವಚ ಉಮ್**—(ಪಾ. ಸೂ. ೭-೪-೨೦) ಎಂಬುದ

ರಿಂದ ಅಜ್ ಪರವಾದಾಗ ಧಾತುವಿಗೆ ಉವಾಗಮ. **ಮಿದಚೋಽಂತ್ಯಾತ್ಪರಃ**—ಎಂಬುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಗುಣ. ಅಂಗಕ್ಕೆ ಅಡಾಗಮ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಶತಯಸ್ಯ**—ದಶ ಅವಯವಾ ಅಸ್ಯ. ದಶತಯಮ್. **ಸಂಖ್ಯಾಯಾ ಅವಯವೇ ತಯಪ್** (ಪಾ. ಸೂ. ೫-೨-೪೨)ಎಂಬುದರಿಂದ ತಯಪ್ ಪ್ರತ್ಯಯ. ಪಿತ್ತಾದುದರಿಂದ ಇದು ಅನುದಾತ್ತವಾಗುತ್ತದೆ.

**ವಸುತಾತಿಃ**—ವಸೂನಾಂ ತಾತಿಃ ವಸುತಾತಿಃ. ತನು ವಿಸ್ತಾರೇ ಧಾತು. ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ವ್ಯತ್ಯಯದಿಂದ ಇದು ಪರವಾದಾಗ ಧಾತುವಿಗೆ ಆತ್ವ ಬರುತ್ತದೆ. **ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಮ್**—(ಪಾ. ಸೂ. ೬-೨-೧೦೨-೨) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ಅಥವಾ **ಸರ್ವದೇವಾತ್ತಾತಿಲ್**—ಎಂಬುದರಿಂದ ವಿಧಿಸಲ್ಪಡುವ ತಾತಿಲ್ ಪ್ರತ್ಯಯವು ವ್ಯತ್ಯಯದಿಂದ ಇದಕ್ಕೂ ಸ್ವಾರ್ಥದಲ್ಲಿ ಬರುತ್ತದೆ. ಆಗ **ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಸ್ವರಸವಾಗಿ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ರಾರನ್**—ರಮು ಕ್ರೀಡಾಯಾಂ ಧಾತು. ಭೃಶಾರ್ಥತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಬಂದಾಗ ಅದಕ್ಕೆ **ಯಙೋಽಚಿಚ** (ಪಾ. ಸೂ. ೨-೪-೭೪) ಎಂಬುದರಿಂದ ಲುಕ್. ಯಙ್‌ಲುಙಂತದ ಮೇಲೆ ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನದಲ್ಲಿ ಝಿ ಬಂದಾಗ ಅದಕ್ಕೆ ಅಂತಾದೇಶ. ಇಕಾರಲೋಪ. **ದೀರ್ಘೋಽಕಿತಃ**—(ಪಾ. ಸೂ. ೭-೪-೮೩) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಯೇಷು ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧಬರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಇನ್ನೊಂದು ವ್ಯಾಖ್ಯಾನದಲ್ಲಿ ರಾ ದಾನೇ ಧಾತು. ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಬಂದಾಗ **ಇತಶ್ಚ ಲೋಪಃ ಪರಸ್ಮೈಪದೇಷು**—ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ**—ಎಂಬುದರಿಂದ ಶಪ್ಪಿಗೆ ಶ್ಲು ಆದೇಶ. ಇದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಶಪಿಗೆ ಆರ್ಧಧಾತುಕ ಸಂಜ್ಞೆ ಇರುವುದರಿಂದ ಸಾರ್ವಧಾತುಕ ನಿಮಿತ್ತವಾಗಿ ಙಿತ್ವವಿರುವುದರಿಂದ **ಆತೋಲೋಪ ಇಟಿ ಚ**—(ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಆದುದರಿಂದಲೇ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಆದ್ಯುದಾತ್ತಸ್ವರ ಬರುವುದಿಲ್ಲ.

**ಸನ್ವಂತು**—ಷಣು ದಾನೇ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ಎರಡನೇ ವ್ಯಾಖ್ಯಾನದಲ್ಲಿ ವನ **ಷಣ** ಸಂಭಕ್ತೌ. ಧಾತು. ಹಿಂದಿನಂತೆ ಝಿ ಪ್ರತ್ಯಯ ಬಂದಾಗ ಉತ್ವ ಅಂತಾದೇಶ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶಪಿಗೆ ಉ ವಿಕರಣ. ಹಿಂದಿನಂತೆಯೇ ರೂಪಸಿದ್ಧಿ. ‖ ೧೨ ‖



॥ ಸಂಹಿತಾಪಾಠಃ ॥

ಮಂದಾಮಹೇ ದಶತಯಸ್ಯ ಧಾಸೇರ್ದ್ವಿರ್ಯತ್ಪಂಚ ಬಿಭ್ರತೋ ಯಂತ್ಯನ್ನಾ ।

ಕಿಮಿಷ್ಟಾಶ್ವ ಇಷ್ಟರಶ್ಮಿರೇತ ಈಶಾನಾಸಸ್ತರುಷ ಋಂಜತೇ ನೄನ್ ॥ ೧೩ ॥

॥ ಪದಪಾಠಃ ॥

ಮಂದಾಮಹೇ । ದಶ್ಽತಯಸ್ಯ । ಧಾಸೇಃ । ದ್ವಿಃ । ಯತ್ । ಪಂಚ । ಬಿಭ್ರತಃ । ಯಂತಿ । ಅನ್ನಾ ।

ಕಿಂ । ಇಷ್ಟಽಅಶ್ವಃ । ಇಷ್ಟಽರಶ್ಮಿಃ । ಏತೇ । ಈಶಾನಾಸಃ । ತರುಷಃ । ಋಂಜತೇ । ನೄನ್ ॥ ೧೩ ॥

॥ ಸಾಯಣಭಾಷ್ಯಂ ॥

ಮಂದಾಮಹೇ । ಸ್ತುಮೋ ವಯಂ ದೇವಾನ್ ॥ ಮದಿ ಸ್ತುತೌ । ಇದಿತ್ತ್ವಾನ್ನುಮ್ ॥ ಕಿಮರ್ಥಂ । ದಶತಯಸ್ಯ ಧಾಸೇರ್ದಶೇಂದ್ರಿಯತೃಪ್ತಿಸಾಧನತ್ವೇನ ದಶಾವಯವಸ್ಯಾನ್ನಸ್ಯ ಯದ್ಯಸ್ಮಾದ್ದ್ವಿಃ ಪಂಚ ದಶವಿಧಾನ್ಯನ್ನಾನಿ । ದಶಚಮಸಗೃಹೀತತ್ವಾದನ್ನಸ್ಯ ದಶವಿಧತ್ವಂ । ಏವಂವಿಧಮನ್ನಂ ಬಿಭ್ರತೋ ಧಾರಯಂತೋ ದಶ ಚಮಸಾಧ್ವರ್ಯವೋ ಯಂತಿ ಹೋಮಾಯ ಗಚ್ಛಂತ್ಯಾಹವನೀಯಂ ಪ್ರತಿ । ಯದ್ವಾ । ಅಶ್ವಮೇಧಿಕಾನಿ ದಶಾನ್ನಾನಿ ಜುಹೋತೀತ್ಯಾಮ್ನಾತಾನ್ಯಾಜ್ಯಮಧ್ವಾದೀನಿ ದಶವಿಧಾನ್ಯನ್ನಾನಿ ವಿಶ್ವೇಭ್ಯೋ ಹೋತುಂ ಧಾರಯಂತೋ ಯಂತಿ ಯದಾ ತದಾ ಮಂದಾಮಹ ಇತಿ । ನ ಚೇಷ್ಟಾಶ್ವಪ್ರಭೃತೀನ್ಯಷ್ಟ್ವಾನ್ನಿಹಾಯ ಕಸ್ಮಾದಸ್ಮಾನ್ಪ್ರತ್ಯಾಗಮಿಷ್ಯಂತೀತಿ ವಾಚ್ಯಂ । ತರುಷಃ ಶತ್ರೂಣಾಂ ತಾರಕಾನ್ ॥ ತರತೇರೌಣಾದಿಕ ಉಸಿನ್ ॥ ನೄನ್ ನೇತೄನ್ಕರ್ಮಣಾಂ ಏವಂ ಮಹಾನುಭಾವಾನ್ವರುಣಾದೀನಿಷ್ಟಾಶ್ವ ಏತನ್ನಾಮಕೋ ರಾಜಾ ಕಿಮೃಂಜತೇ । ಕಿಂ ಪ್ರಸಾಧಯತಿ । ತಥೇಷ್ಟರಶ್ಮಿಶ್ಚ ಕಿಮೃಂಜತೇ । ಏತೇ ಇದಾನೀಂ ವರ್ತಮಾನಾ ಈಶಾನಾಸಃ ಪೃಥಿವ್ಯಾ ಈಶ್ವರಾ ರಾಜಾನಶ್ಚ ಕಿಂ ಪ್ರಸಾಧಯಂತಿ । ಯದ್ವಾ । ಯೇಷಾಂ ಸ್ತೋತೄಣಾಮಸ್ಮಾಕಮೇತೇ ಸ್ತುತಾ ದೇವಾ ಈಶಾನಾಸಃ ಸ್ವಾಮಿನಃ ಕಿಲ ತಾದೃಶಾಂಸ್ತರುಷಃ ಶತ್ರೂಣಾಂ ತಾರಕಾನ್ ನೄನ್ ಕರ್ಮನಿರ್ವಾಹಕಾನಸ್ಮಾನಿಷ್ಟಾಶ್ವಾದಯಃ ಕಿಂ ಸಾಧಯಂತಿ । ಕಿಮುಪದ್ರವಂತಿ । ಪ್ರಭವಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ದಶತಯಸ್ಯ**—(ದಶೇಂದ್ರಿಯವರ್ಧಕವಾದುದರಿಂದ) ದಶವಿಧವಾದ । **ಧಾಸೇಃ**—ಅನ್ನದ । **ದ್ವಿಃ ಪಂಚ**—(ದಶಚಮಸಗಳಲ್ಲಿ ಗೃಹೀತವಾದುದರಿಂದ) ಹತ್ತು । **ಅನ್ನಾ**—(ಹವಿರೂಪದಾದ) ಅನ್ನಗಳನ್ನು । **ಬಿಭ್ರತಃ**—ಧರಿಸಿದವರಾಗಿ (ಅಧ್ವರ್ಯುಗುಂಪಿನವರು) । **ಯಂತಿ**—(ಹೋಮಮಾಡಲು)

ಹೋಗುತ್ತಾರೋ । (**ತತ್**—ಆಗ) **ಮಂದಾಮಹೇ**—(ದೇವತೆಗಳನ್ನು) ನಾವು ಸ್ತುತಿಸೋಣ; । **ಇಷ್ಟಾಶ್ವಃ**—ಇಷ್ಟಾಶ್ವನೆಂಬ ರಾಜನೂ । **ಇಷ್ಟರಶ್ಮಿಃ**—ಇಷ್ಟರಶ್ಮಿಯೂ । **ಏತೇ**—ಈಗ (ಇರುವ) । **ಈಶಾನಾಸಃ**—ರಾಜರುಗಳೂ । **ತರುಷಃ**—ಶತ್ರುನಾಶಕರಾದ । **ನೄನ್**—ಮನುಷ್ಯರಿಗೆ ನೇತೃಗಳಾದ ವರುಣಾದಿಗಳನ್ನು (ವರುಣಾದಿಗಳ ವಿಷಯದಲ್ಲಿ) । **ಕಿ ಋಂಜತೇ**—ಏನು ಸಾಧಿಸಿಯಾರು ? । ಅಥವಾ [**ಏತೇ**—(ನಮ್ಮಿಂದ ಸ್ತುತರಾದ) ಈ ದೇವತೆಗಳು । **ಈಶಾನಾಸಃ**—(ಯಾವ ನಮಗೆ) ಸ್ವಾಮಿಗಳೋ । **ತರುಷಃ**—(ಅಂಥಾ) ಶತ್ರುತಾರಕರಾದ । **ನೄನ್**—ಕಾರ್ಯನಿರ್ವಾಹಕರಾದ ನಮ್ಮನ್ನು । **ಇಷ್ಟಾಶ್ವ ಏತೇ ಈಶಾನಾಸಃ ಇಷ್ಟರಶ್ಮಿಃ**—ಇಷ್ಟಾಶ್ವ, ಇಷ್ಟರಶ್ಮಿ, ಈಗ ಇರುವ ರಾಜರು ಮೊದಲಾದವರು । **ಕಿಂ ಋಂಜತೇ**—ಏನು ಸಾಧಿಸಿಯಾರು ? (ಹೇಗೆ ಹಿಂಸಿಸಿಯಾರು ?)]

॥ ಭಾವಾರ್ಥ ॥

ದಶವಿಧವಾದ ಅನ್ನವನ್ನು ಹತ್ತು ಚಮಸಗಳಲ್ಲಿ (ತೆಗೆದುಕೊಂಡು ಅಧ್ವರ್ಯು ಗುಂಪಿನವರು) ಹೋಮಮಾಡುವಾಗ (ನಾವು ವಿಶ್ವೇ ದೇವತೆಗಳನ್ನು) ಸ್ತುತಿಸುತ್ತೇವೆ. ಶತ್ರುತಾರಕರೂ ಕರ್ಮನಿರ್ವಾಹಕರೂ ಆದ ವರುಣಾದಿ ವಿಶ್ವೇದೇವತೆಗಳನ್ನು ಇಷ್ಟಾಶ್ವ, ಇಷ್ಟರಶ್ಮಿ (ಮೊದಲಾದ) ರಾಜರು ಏನು (ತಾನೇ) ತೃಪ್ತಿಪಡಿಸಿಯಾರು ? (ವಿಶ್ವೇದೇವತೆಗಳನ್ನು ಸ್ವಾಮಿಗಳನ್ನಾಗಿ ಪಡೆದು, ಶತ್ರುತಾರಕರೂ ಕರ್ಮನಿರ್ವಾಹಕರೂ ಆದ ನಮ್ಮನ್ನು ಇಷ್ಟಾಶ್ವಾದಿಗಳು ಹೇಗೆ (ತಾನೇ) ಹಿಂಸಿಸಿಯಾರು ? )

## English Translation

we rejoice that for the satisfaction of the ten (organs of sense) the (priests) bearing the twice five (ladles of) sacrificial food, proceed (to the altar). What can Ishtashwa, (what can) Ishtarashmi, (what can) those who are now lords of the earth, achieve (with respect) to the leaders of men, the conquerors of their foes ?

॥ ವಿಶೇಷವಿಷಯಗಳು ॥

**ದಶತಯಸ್ಯ ಧಾಸೇಃ**—**ದಶೇಂದ್ರಿಯತೃಪ್ತಿಸಾಧನತ್ವೇನ ದಶಾವಯವಸ್ಯಾನ್ನಸ್ಯ ।** ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು ಒಟ್ಟು ಹತ್ತು ಇಂದ್ರಿಯಗಳ ತೃಪ್ತಿಗೆ ಸಾಧನಭೂತವಾದ ಅನ್ನವೆಂದು ಭಾಷ್ಯಕಾರರ ವಿವರಣೆಯು. ದಶತಯಸ್ಯ ಎಂದರೆ ಹತ್ತು ವಿಧವಾದ ಎಂದರ್ಥವಾಗುವುದರಿಂದ ಹತ್ತು ಚಮಸಪಾತ್ರೆಗಳಲ್ಲಿ ಇಡಲ್ಪಟ್ಟಿರುವ ಹವಿಸ್ಸು, ಸೋಮ, ಆಜ್ಯ ಮೊದಲಾದ ದ್ರವ್ಯಗಳು ಎಂದೂ ಅರ್ಥವಾಗಬಹುದು. ಧಾಸಿಃ ಎಂಬ ಶಬ್ದವು ಇಪ್ಪತ್ತೆಂಟು ಅನ್ನನಾಮಗಳಲ್ಲಿ ಪಠಿತವಾಗಿರುವುದು. (ನಿ. ೩–೯)

**ದ್ವಿಃ ಪಂಚ**—ಎಂದರೆ ಹತ್ತು. **ದಶವಿಧಾನ್ಯನ್ನಾನಿ । ದಶ ಚಮಸಗೃಹೀತತ್ವಾದನ್ನಸ್ಯ ದಶವಿಧತ್ವಂ ।** ಹತ್ತು ಚಮಸಪಾತ್ರೆಗಳಲ್ಲಿ ಇರಿಸಿರುವ ಅನ್ನಗಳನ್ನು ಹತ್ತುವಿಧ ಅನ್ನಗಳೆಂದು ಇಲ್ಲಿ ಹೇಳಿರುವುದು.

**ಬಿಭ್ರತಃ ಯಂತಿ ಅನ್ನಾ**—ಋತ್ವಿಗ್ಜನರು ಎಂದರೆ ಅಧ್ವರ್ಯು ಮುಂತಾದವರು ಹತ್ತು ಪಾತ್ರೆಗಳಲ್ಲಿ ತುಂಬಿರುವ ಅನ್ನವನ್ನು ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಕೈಗಳಲ್ಲಿ ಹಿಡಿದು ಆಹವನೀಯಾಗ್ನಿಯಲ್ಲಿ ಹೋಮಮಾಡು

ವುದಕ್ಕಾಗಿ ಆ ಅಗ್ನಿಯ ಸಮೀಪಕ್ಕೆ ಹೋಗುವರು ಎಂದಭಿಪ್ರಾಯವು. ಅಥವಾ ಅಶ್ವಮೇಧಯಾಗದಲ್ಲಿ ವಿಶ್ವೇದೇವತೆಗಳಿಗೆ ಸಮರ್ಪಿಸಿ ಹೋಮಮಾಡುವುದಕ್ಕಾಗಿ ಆಜ್ಯ, ಮಧು, ಅನ್ನ ಮೊದಲಾದ ಹತ್ತುವಿಧ ಹವಿರ್ದ್ರವ್ಯಗಳನ್ನು ಸಿದ್ಧಪಡಿಸಿಕೊಂಡು ಅಗ್ನಿಯ ಸಮೀಪಕ್ಕೆ ಹೋಗುವರು ಎಂದೂ ಭಾಷ್ಯಕಾರರು ಇನ್ನೊಂದು ವಿಧವಾದ ಅರ್ಥವನ್ನು ಹೇಳಿರುವರು.

**ಇಷ್ಟಾಶ್ವಃ, ಇಷ್ಟರಶ್ಮಿಃ**— ಭಾಷ್ಯಕಾರರು ಈ ಶಬ್ದಗಳಿಗೆ ಈ ಹೆಸರಿನ ರಾಜರೆಂದು ಅರ್ಥಮಾಡಿರುವರು. ಈ ಶಬ್ದಗಳು ಈ ಋಕ್ಕಿನಲ್ಲಲ್ಲದೆ ಋಗ್ವೇದದಲ್ಲಿ ಬೇರೆಲ್ಲಿಯೂ ಇಲ್ಲದಿರುವುದರಿಂದ ಇವರ ವಿಷಯವಾಗಿ ಹೆಚ್ಚಾಗಿ ಏನನ್ನು ಹೇಳಲೂ ಸಾಧ್ಯವಿಲ್ಲ.

**ಈಶಾನಾಸಃ—ವರ್ತಮಾನಾ ಪೃಥಿವ್ಯಾ ಈಶ್ವರಾ ರಾಜಾನಶ್ಚ ।** ಈಗ ಇರುವ ಪೃಥಿವೀಪಾಲಕರು ಎಂದರೆ ರಾಜರು, ಮುಖಂಡರು ಇತ್ಯಾದಿ.

ಈ ಋಕ್ಕಿನ ಉತ್ತರಾರ್ಧದ ಅರ್ಥವು ಅಸ್ಪಷ್ಟವಾಗಿರುವುದು. ಋಷಿಯ ಆಶಯವು ಸ್ಪಷ್ಟವಾಗಿ ತಿಳಿಯುವಂತಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಮಂದಾಮಹೇ**—ಮದಿ ಸ್ತುತೌ ಧಾತು. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತ ಆತ್ಮನೇಪದಾನಾಂ**-ಎಂಬುದರಿಂದ ಅದರ ಟಿಗೆ ಏತ್ವ. ಶಪ್ ವಿಕರಣ. **ಅತೋ ದೀರ್ಘೋ ಯಞಿ**—(ಪಾ. ಸೂ. ೭-೩-೧೦೧) ಎಂಬುದರಿಂದ ಅದಂತಾಂಗಕ್ಕೆ ದೀರ್ಘ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಬಿಭ್ರತಃ**—ಡುಭೃಞ್ ಭರಣೇ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಶ್ಲು ವಿಕರಣ. ಧಾತುವಿಗೆ ದ್ವಿತ್ವ. **ಭೃಞಾಮಿತ್**—(ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಸಾರ್ವಧಾತುಕಮಪಿತ್**—ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಗುಣ ಬರುವುದಿಲ್ಲ. ಯಣಾದೇಶ. **ನಾಭ್ಯಸ್ತಾಚ್ಛತುಃ**—ಎಂಬುದರಿಂದ ಪ್ರಥಮಾ ಬಹುವಚನದಲ್ಲಿ ನುಮಾಗಮ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಂತಿ**—ಇಣ್ ಗತೌ ಧಾತು. ಅದಾದಿ ಲಟ್ ಪ್ರಥಮಪುರುಷ ಬಹುವಚನದಲ್ಲಿ **ಝೋಂತಃ**—ಎಂಬುದರಿಂದ ಅಂತಾದೇಶ ಬಂದಾಗ **ಇಣೋ ಯಣ್**—(ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅನ್ನಾ**—ನಪುಂಸಕ ಬಹುವಚನದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦) ಎಂಬುದರಿಂದ ಅದಕ್ಕೆ ಲೋಪ.

**ಇಷ್ವಾಶ್ವಃ, ಇಷ್ವರಶ್ಮಿಃ—ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಈಶಾನಾಸಃ**—ಪ್ರಥಮಾ ಬಹುವಚನದಲ್ಲಿ ಜಸ್ ಬಂದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ. ಅಂತ್ಯಸಕಾರಕ್ಕೆ ರುತ್ವ ವಿಸರ್ಗ.

**ತರುಷಃ**—ತೄ ಪ್ಲವನತರಣಯೋಃ ಧಾತು. ಇದಕ್ಕೆ ಔಣಾದಿಕವಾದ ಉಸಿನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ಇಣ್ಣಿನ ಪರದಲ್ಲಿರುವುದರಿಂದ ಸಕಾರಕ್ಕೆ **ಆದೇಶಪ್ರತ್ಯಯಯೋಃ** ಎಂಬುದರಿಂದ ಷತ್ವ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಋಞ್ಜತೇ**—ಋಜಿ ಭರ್ಜನೇ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಪ್ರಸಾಧನಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಇದಿತ್ತಾದುದರಿಂದ ನುಮಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೧೩ ‖



‖ ಸಂಹಿತಾಪಾಠಃ ‖

ಹಿರಣ್ಯಕರ್ಣಂ ಮಣಿಗ್ರೀವಮರ್ಣಸ್ತನ್ನೋ ವಿಶ್ವೇ ವರಿವಸ್ಯಂತು ದೇವಾಃ ।
ಅರ್ಯೋ ಗಿರಃ ಸದ್ಯ ಆ ಜಗ್ಮುಷೀರೋಸ್ರಾಶ್ಚಾಕಂತೂಭಯೇಷ್ವಸ್ಮೇ ‖ ೧೪ ‖

‖ ಪದಪಾಠಃ ‖

ಹಿರಣ್ಯಽಕರ್ಣಂ । ಮಣಿಽಗ್ರೀವಂ । ಅರ್ಣಃ । ತತ್ । ನಃ । ವಿಶ್ವೇ । ವರಿವಸ್ಯಂತು । ದೇವಾಃ ।
ಅರ್ಯಃ । ಗಿರಃ । ಸದ್ಯಃ । ಆ । ಜಗ್ಮುಷೀಃ । ಆ । ಉಸ್ರಾಃ । ಚಾಕಂತು । ಉಭಯೇಷು । ಅಸ್ಮೇ ಇತಿ ‖ ೧೪ ‖

॥ ಸಾಯಣಭಾಷ್ಯಂ ॥

ಹಿರಣ್ಯಕರ್ಣಂ ಹಿರಣ್ಯವಿಕಾರಕುಂಡಲಾದ್ಯುಪೇತಕರ್ಣಂ ಮಣಿಗ್ರೀವಂ ರತ್ನಾದ್ಯುಪೇತಕಂಠಂ । ಏತದ್ದ್ವಯಂ ಸರ್ವಾವಯವಸ್ಯಾಪ್ಯುಪಲಕ್ಷಣಂ । ಏವಂ ಸರ್ವಾಂಗಾಭರಣಯುಕ್ತಮರ್ಣ ಅರಣೀಯಂ ರೂಪಂ ತದ್ವಂತಂ ಪುತ್ರಾದಿಕಮಿತ್ಯರ್ಥಃ । ಉಕ್ತಲಕ್ಷಣಮಸ್ಮದೀಯಂ ರೂಪಂ ವಾ ನೋಽಸ್ಮಾಕಂ ವಿಶ್ವೇ ಸರ್ವೇ ದೇವಾ ವರಿವಸ್ಯಂತು । ಪರಿಚರಂತು । ಪ್ರಯಚ್ಛಂತ್ವಿತ್ಯರ್ಥಃ । ಅರ್ಯೋಽರಣೀಯೋ ವಿಶ್ವೇಷಾಂ ದೇವಾನಾಂ ಸಂಘೋ ಜುಗ್ಮಷೀಃ ಸ್ತೋತುರ್ಮುಖಾನ್ನಿರ್ಗಚ್ಛಂತೀರ್ಗಿರಃ ಸ್ತುತೀರುಸ್ರಾಃ । ವಿಕಾರೇ ಪ್ರಕೃತಿಶಬ್ದಃ । ಕ್ಷೀರಾಜ್ಯಾದೀನಿ ಹವೀಂಷಿ ಚ ಸದ್ಯೋಽಸ್ಮದಾಗಮನಾನಂತರಮೇವ ಚಾಕಂತು । ಕಾಮಯಂತಾಂ । ಛಾಂದಸಃ ಶಪಃ ಶ್ಲುಃ ಪರಸ್ಮೈಪದಂ ಚ । ಯದ್ವಾ । ಯಙ್ಲುಕಿ ನುಗಭಾವಃ ॥ ಆ ಚಾಕಂತ್ವಿತಿ ವಾ ಯೋಜ್ಯಂ । ಪರ್ಯಾಪ್ತಂ ಕಾಮಯಂತಾಮಿತ್ಯರ್ಥಃ । ಕೇಷ್ವಿತಿ ತದುಚ್ಯತೇ । ಅಸ್ಮೇ ಅಸ್ಮಾಕಂ ಸಂಬಂಧಿಷೂಭಯೇಷು ಸ್ತೋತೃಷು ಯಷ್ಟೃಷು ಚ । ಯದ್ವಾ । ಅಸ್ಮಾಕಮುಭಯೇಷ್ವೈಹಿಕಾಮುಷ್ಮಿಕವಿಷಯೇಷೂಭಯವಿಧೇಷು ಫಲೇಷು ॥

॥ ಪ್ರತಿಪದಾರ್ಥ ॥

**ಹಿರಣ್ಯಕರ್ಣಂ**—ಸುವರ್ಣಮಯವಾದ ಕರ್ಣಕುಂಡಲವುಳ್ಳವರೂ । **ಮಣಿಗ್ರೀವಂ**—ಮಣಿಮಯವಾದ ಕಂಠಹಾರವುಳ್ಳವರೂ ॥ **ಅರ್ಣಃ**—ಮನೋಹರರೂಪವುಳ್ಳವರೂ ಆದ । **ತತ್**—ಪುತ್ರಾದಿಗಳನ್ನು । **ನಃ**—ನಮಗೆ । **ವಿಶ್ವೇ ದೇವಾಃ**—ವಿಶ್ವೇದೇವತೆಗಳು । **ವರಿವಸ್ಯಂತು**—ಅನುಗ್ರಹಿಸಲಿ । **ಅರ್ಯಃ**—ಸ್ತೋತ್ರಾರ್ಹವಾದ (ವಿಶ್ವೇದೇವತೆಗಳ ಗುಂಪು) । **ಆ ಜಗ್ಮುಷೀಃ**—(ಸ್ತೋತೃಮುಖದಿಂದ) ಹೊರಡುತ್ತಿರುವ । **ಗಿರಃ**—ಸ್ತುತಿವಾಕ್ಯಗಳನ್ನೂ ಮತ್ತು । **ಉಸ್ರಾಃ**—ಕ್ಷೀರಾದಿ ಹವಿಸ್ಸನ್ನೂ । **ಅಸ್ಮೇ**—ನಮ್ಮವರಾದ (ನಮಗೆ) । **ಉಭಯೇಷು**—ಸ್ತೋತೃಯಷ್ಟೃಗಳಲ್ಲಿ (ಐಹಿಕಾಮುಷ್ಮಿಕಗಳೆರಡು ಫಲಗಳನ್ನು) । **ಸದ್ಯಃ**—ಕೂಡಲೇ । **ಆ ಚಾಕಂತು**—ಹೆಚ್ಚಾಗಿ ಇಚ್ಛಿಸಲಿ (ಹೆಚ್ಚಾಗಿ ಅನುಗ್ರಹಿಸಲಿಚ್ಛಿಸಲಿ).

॥ ಭಾವಾರ್ಥ ॥

ವಿಶ್ವೇದೇವತೆಗಳು ನಮಗೆ ಕರ್ಣಕುಂಡಲ ಮತ್ತು ರತ್ನಹಾರಾದಿಯುಕ್ತರೂ, ಸ್ಫುರದ್ರೂಪಿಗಳೂ ಆದ ಪುತ್ರಾದಿಗಳನ್ನು ಅನುಗ್ರಹಿಸಲಿ; ಸ್ತೋತ್ರಾರ್ಹರಾದ ಅವರು ಸ್ತೋತೃಮುಖದಿಂದ ಹೊರಡುತ್ತಿರುವ ಸ್ತುತಿವಾಕ್ಯಗಳನ್ನೂ, ಯಷ್ಟೃವಿನಿಂದ (ದತ್ತವಾದ) ಹವಿಸ್ಸನ್ನೂ, ಸ್ವೀಕರಿಸಲಿ. ನಮ್ಮವರಾದ ಸ್ತೋತೃಯಷ್ಟೃಗಳಿಬ್ಬರಲ್ಲಿಯೂ (ನಮಗೆ ಐಹಿಕಾ ಮುಷ್ಮಿಕ ಫಲಗಳೆರಡನ್ನೂ ಅನುಗ್ರಹಿಸಲಿಚ್ಛೆಯುಳ್ಳವರಾಗಿ) ಹೆಚ್ಚಾಗಿ ಅಪೇಕ್ಷಿಸಲಿ (ಸ್ವೀಕರಿಸಲಿ).

## English Translation.

May all the gods favour us with a person decorated with golden earrings and jewel necklace: may the venerable (company of the deities) be propitiated by the praises issuing (from the mouth of the worshipper):

may our offerings be acceptable to them, and (may they be pleased) with both (our praises and offerings).

॥ ವಿಶೇಷವಿಷಯಗಳು ॥

**ಹಿರಣ್ಯಕರ್ಣಂ, ಮಣಿಗ್ರೀವಂ**—ಕರ್ಣಗಳಲ್ಲಿ ಕುಂಡಲಾದಿ ಹಿರಣ್ಯಾಭರಣಗಳನ್ನು ಧರಿಸಿರುವ, ಕತ್ತಿನಲ್ಲಿ ಮಣಿಮಯವಾದ ಹಾರಾದಿ ಅಲಂಕಾರಗಳನ್ನು ಧರಿಸಿರುವ ಪುತ್ರಾದಿಗಳನ್ನು ಅನುಗ್ರಹಿಸಬೇಕೆಂದು ದೇವತೆಗಳನ್ನು ಪ್ರಾರ್ಥಿಸಿದೆ. ಅಥವಾ ನಾವು ಸಹ ಕರ್ಣಗಳಲ್ಲಿ ಕುಂಡಲಾದಿ ಆಭರಣಯುಕ್ತರಾಗಿಯೂ ಕಂಠದಲ್ಲಿ ರತ್ನಾಹಾರಗಳನ್ನು ಧರಿಸಿದವರಾಗಿಯೂ ಇರುವಂತೆ ಅನುಗ್ರಹಿಸಿ ಎಂದು ಪ್ರಾರ್ಥನೆಯು.

**ಅರ್ಣಃ**—ಅರ್ಣ ಶಬ್ದವು ನೂರೊಂದು ಉದಕನಾಮಗಳಲ್ಲಿ ಪಠಿತವಾಗಿದ್ದರೂ (ನಿ. ೨-೨೪) ಇಲ್ಲಿ ಭಾಷ್ಯಕಾರರು **ಅರಣೀಯಂ ರೂಪಂ** ರೂಪವುಳ್ಳ ಪುತ್ರನೆಂದು ಅರ್ಥವಿವರಣೆಮಾಡಿರುವರು.

**ಅರ್ಯಃ—ಅರಣೀಯೋ ವಿಶ್ವೇಷಾಂ ದೇವಾನಾಂ ಸಂಘಃ ।** ಅರ್ಯ ಶಬ್ದಕ್ಕೆ ಸ್ವಾಮಿ, ಈಶ್ವರ ಎಂದರ್ಥವಿದ್ದರೂ ಇಲ್ಲಿ ಭಾಷ್ಯಕಾರರು ವಿಶ್ವೇದೇವತೆಗಳ ಸಂಘವೆಂದು ಹೇಳಿರುವರು.

**ಗಿರ ಆ ಜುಗುಕ್ಷಿಃ**—(ನಮ್ಮ ಮುಖದಿಂದ) ಹೊರಹೊರಡುವ ಸ್ತುತಿರೂಪವಾದ ವಾಕ್ಯಗಳು.

**ಉಸ್ರಾಃ—ಉಸ್ರಿಯೇತಿ ಗೋನಾಮ । ಉಸ್ರಾವಿಣೋಽಸ್ಯಾಂ ಭೋಗಾಃ ಉಸ್ರೇತಿ ಚ ।** (ನಿ. ೪-೧೯). ಉಸ್ರಾಃ ಎಂಬ ಶಬ್ದಕ್ಕೆ ಹಾಲನ್ನು ಕೊಡತಕ್ಕ ಗೋವುಗಳು ಎಂದರ್ಥವಿದ್ದರೂ ಭಾಷ್ಯಕಾರರು ಹೇಳಿರುವಂತೆ—**ವಿಕಾರೇ ಪ್ರಕೃತಿಶಬ್ದಃ ಕ್ಷೀರಾಜ್ಯಾದೀನಿ ಹವೀಂಷಿ ಚ ।** ಗೋವುಗಳಿಂದ ಉತ್ಪತ್ತಿಯಾಗುವ ಎಂದರೆ ಗೋವಿಕಾರವಾದ ಹಾಲು, ತುಪ್ಪ ಮೊದಲಾದ ವಸ್ತುಗಳಿಗೂ ಉಸ್ರಾಃ ಎಂಬ ಶಬ್ದವನ್ನು ಉಪಯೋಗಿಸುವುದು ರೂಢಿಯಾಗಿರುವುದು. ಉಸ್ರಾಃ ಎಂದರೆ ರಶ್ಮಿಗಳೆಂದೂ ಅರ್ಥವು ಕೆಲವು ಕಡೆ ಇರುವುದು. (ಋ. ಸಂ. ೧-೧೭೧-೫ ಇತ್ಯಾದಿ).

**ಉಭಯೇಷು**—ಸ್ತೋತ್ರಮಾಡುವವರು ಮತ್ತು ಯಜ್ಞಮಾಡುವವರು ಎಂಬ ಎರಡುವಿಧ ಜನರು ಎಂದು ಒಂದುವಿಧ ಅರ್ಥವೂ ಈ ಲೋಕ ಪರಲೋಕಗಳೆಂದು ಮತ್ತೊಂದು ಅರ್ಥವೂ ಭಾಸವಾಗುವುದು.

**ಅಸ್ಮೇ**—ಈ ಶಬ್ದವು ಏಳು ವಿಭಕ್ತಿಗಳ ಅರ್ಥದಲ್ಲಿಯೂ ಉಪಯೋಗಿಸಲ್ಪಡುವುದು. ಉದಾಹರಣೆ—

**(೧) ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥**

**ಅಸ್ಮೇ ಇತ್ಯೇತತ್ಪದಂ ಸರ್ವವಿಭಕ್ತ್ಯಂತಂ । ತಸ್ಮಾದನೇಕಾರ್ಥಂ । ಏಕಮೇವ ಹ್ಯೇತಚ್ಛಬ್ದರೂಪಂ ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ । ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ । ತದ್ಯಥಾ—ಪ್ರಥಮಾಯಾಸ್ತಾವತ್—ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥** ಎಂದರೆ ಅಸ್ಮೇ ಎಂಬ ಶಬ್ದವು ಏಳು ವಿಭಕ್ತಿಗಳ ಅರ್ಥದಲ್ಲಿಯೂ ಸಂದರ್ಭಾನುಸಾರವಾಗಿ ಉಪಯೋಗಿಸಲ್ಪಡುವುದು. ಎಂದರೆ ಆಯಾ ಪ್ರಕರಣಾನುಸಾರವಾಗಿ ಈ ಶಬ್ದಕ್ಕೆ ಏಳು ವಿಭಕ್ತಿಗಳಲ್ಲಿ ಯಾವ ವಿಭಕ್ತಿಯ ಅರ್ಥವನ್ನಾದರೂ ಹೇಳಬಹುದು. ಹೇಗೆಂದರೆ—**ಅಸ್ಮೇ ತೇ ಬಂಧುಃ** ಎಂಬ ವಾಕ್ಯದಲ್ಲಿ **ಅಸ್ಮೇ** ಎಂಬ ಶಬ್ದಕ್ಕೆ **ವಯಂ**—ನಾವು ಎಂದರ್ಥವಿರುವುದು. ಇದು ಪ್ರಥಮಾ ವಿಭಕ್ತಿಯ ಅರ್ಥಕ್ಕೆ ಉದಾಹರಣೆಯು—

(೨) ಅಸ್ಮೇ ಯಾತಂ ನಾಸತ್ಯಾ ಸಜೋಷಾಃ । ಅಸ್ಮಾನಿತ್ಯರ್ಥಃ ॥

ದ್ವಿತೀಯಾಯಾಸ್ತಾವತ್—ಅಸ್ಮೇ ಎಂಬ ಶಬ್ದಕ್ಕೆ ದ್ವಿತೀಯಾ ವಿಭಕ್ತಿಯಾದ ಅಸ್ಮಾನ್–ನಮ್ಮನ್ನು ಎಂದು ಅರ್ಥವು. ಈ ಅರ್ಥದ ಉದಾಹರಣೆಗಾಗಿ—

ಆ ಶ್ಯೇನಸ್ಯ ಜವಸಾ ನೂತನೇನಾಸ್ಮೇ ಯಾತಂ ನಾಸತ್ಯಾ ಸಜೋಷಾಃ ।
ಹವೇ ಹಿ ವಾಮಶ್ವಿನಾ ರಾತಹವ್ಯಃ ಶಶ್ವತ್ತಮಾಯಾ ಉಷಸೋ ವ್ಯುಷ್ಟೌ ॥

(ಋ. ಸಂ ೧–೧೧೮–೧೧೧)

ಎಂಬ ಋಕ್ಕನ್ನು ಕೊಟ್ಟಿರುವರು. ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾನ್–ನಮ್ಮನ್ನು ಎಂದರ್ಥವು.

(೩) ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ । ಅಸ್ಮಾಭಿರಿತ್ಯರ್ಥಃ ॥

ತೃತೀಯಾಯಾಸ್ತಾವತ್—ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ–ನಮ್ಮಿಂದ ಎಂದು ತೃತೀಯಾ ವಿಭಕ್ತ್ಯರ್ಥವು. ಈ ವಿಷಯದಲ್ಲಿ—

ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।
ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥

(ಋ. ಸಂ. ೧–೧೬೫–೭)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ–ನಮ್ಮಿಂದ ಎಂದರ್ಥವು.

(೪) ಅಸ್ಮೇ ಪ್ರಯಂಧಿ ಮಘವನ್ನೃಜೀಷಿನ್ । ಅಸ್ಮಭ್ಯಮಿತ್ಯರ್ಥಃ ॥

ಚತುರ್ಥ್ಯಾಸ್ತಾವತ್—ಇಲ್ಲಿ ಅಸ್ಮೇ ಎಂದರೆ ಅಸ್ಮಭ್ಯಂ–ನಮಗಾಗಿ ಎಂದು ಚತುರ್ಥೀ ವಿಭಕ್ತ್ಯರ್ಥವು. ಉದಾಹರಣೆ–

ಅಸ್ಮೇ ಪ್ರ ಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।
ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥

(ಋ. ಸಂ. ೩–೩೬–೧೦)

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಗಳಿಗೆ ಅಸ್ಮಭ್ಯಂ–ನಮಗಾಗಿ ಎಂದು ಚತುರ್ಥೀ ವಿಭಕ್ತ್ಯರ್ಥವು.

(೫) ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು । ಅಸ್ಮದಿತ್ಯರ್ಥಃ ।

ಪಂಚಮ್ಯಾಸ್ತಾವತ್—ಇಲ್ಲಿ ಅಸ್ಮೇ ಎಂದರೆ ಅಸ್ಮತ್–ನಮ್ಮ ದೆಶೆಯಿಂದ ಎಂದರ್ಥವು. ಉದಾಹರಣೆ—

ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।
ಸ ಸುತ್ರಾಮಾ ಸ್ವವಾँ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥

(ಋ. ಸಂ. ೬–೪೭–೧೩)

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮತ್–ನಮ್ಮ ದೆಶೆಯಿಂದ ಎಂದು ಪಂಚಮೀ ವಿಭಕ್ತ್ಯರ್ಥವು.

**(೬) ಊರ್ವ ಇವ ಪಪ್ರಥೇ ಕಾಮೋ ಅಸ್ಮೇ । ಅಸ್ಮಾಕಮಿತ್ಯರ್ಥಃ ।**

**ಷಷ್ಠ್ಯಾ ವ್ಯಾಖ್ಯಾತ್**— ಇಲ್ಲಿ ಅಸ್ಮೇ ಎಂದರೆ ಅಸ್ಮಾಕಂ–ನಮಗೆ ಎಂದರ್ಥವು. ಈ ಅರ್ಥವಿವರಣೆಗಾಗಿ—

**ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।**
**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥**

(ಋ. ಸಂ. ೩-೩೦-೧೯)

ಎಂಬ ಋಕ್ಕನ್ನುದಹರಿಸಿರುವರು ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾಕಂ–ನಮ್ಮ, ನಮಗೆ ಎಂದು ಷಷ್ಠೀ ವಿಭಕ್ತ್ಯರ್ಥವು.

**(೭) ಅಸ್ಮೇ ಧತ್ತ ವಸವೋ ವಸೂನಿ । ಅಸ್ಮಾಸ್ವಿತ್ಯರ್ಥಃ ॥**

**ಸಪ್ತಮ್ಯಾ ವ್ಯಾಖ್ಯಾತ್**—ಇಲ್ಲಿ ಅಸ್ಮೇ ಎಂದರೆ ನಮ್ಮಲ್ಲಿ ಎಂದರ್ಥವು. ಉದಾಹರಣೆ—

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥**

(ಋ. ಸಂ. ೧-೭೯-೪)

ಈ ಋಕ್ಕಿನಲ್ಲಿರುವ ಅಸ್ಮೇ–ಎಂಬ ಶಬ್ದಕ್ಕೆ ಅಸ್ಮಾಸು ನಮ್ಮಲ್ಲಿ ಎಂದು ಸಪ್ತಮೀ ವಿಭಕ್ತ್ಯರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಹಿರಣ್ಯಕರ್ಣಮ್**—ಹಿರಣ್ಮಯೌ (ತದ್ಯುಕ್ತಂ). ಕರ್ಣೌ ಯಸ್ಯ ಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅರ್ಣಃ**—ಋ ಗತೌ ಧಾತು. ಅರ್ತಿ ಇತಿ ಅರ್ಣಃ. **ಉದಕೇ ನುಟ್ ಚ**—(ಉ. ಸೂ. ೪-೬೩೬) ಎಂಬುದರಿಂದ ಅಸುನ್ ಪ್ರತ್ಯಯ. ತತ್ಸಂನಿಯೋಗದಿಂದ ನುಡಾಗಮ. ಧಾತುವಿಗೆ ಗುಣ ರಪರವಾಗಿ ಬರುತ್ತದೆ. **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವರಿವಸ್ಯಂತು**—ವರಿವಸ್ ಎಂಬುದು ಪ್ರಾತಿಪದಿಕ. ಇದಕ್ಕೆ ಪರಿಚರ್ಯಾರೂಪ ಅರ್ಥವನ್ನು ವಿವಕ್ಷಾ ಮಾಡಿದಾಗ **ನಮೋ ವರಿವಶ್ಚಿತ್ರಙಃ ಕ್ಯಚ್**—(ಪಾ. ಸೂ. ೩-೧-೧೯) ಎಂಬುದರಿಂದ ಕ್ಯಚ್ ಪ್ರತ್ಯಯ. **ಸನಾದ್ಯಂತಾ ಧಾತವಃ**—ಎಂಬುದರಿಂದ ವರಿವಸ್ಯ ಎಂಬುದು ಧಾತು ಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ ಬಂದಾಗ ಉತ್ವ, ಅಂತಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರ್ಯಃ**—ಋ ಗತೌ ಧಾತು. **ಅರ್ಯಃ ಸ್ವಾಮಿವೈಶ್ಯಯೋಃ**—(ಪಾ. ಸೂ. ೩-೧-೧೦೩) ಎಂಬುದರಿಂದ ಯತ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. **ಅರ್ಯಸ್ಯ ಸ್ವಾಮ್ಯಾಖ್ಯಾ ಚೇತ್**—(ಫಿ. ಸೂ. ೧೭) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಜಗ್ಮುಷೀಃ**—ಗಮ್ಲೃ ಗತೌ ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಅಭ್ಯಾಸಕ್ಕೆ ಆದಿಹಲ್‌ಶೇಷ ಬಂದಾಗ **ಕುಹೋಶ್ಚುಃ**—(ಪಾ. ಸೂ. ೭-೪-೬೨)ಎಂಬುದರಿಂದ ಚುತ್ವದಿಂದ ಜಕಾರಾದೇಶ. **ಗಮಹನಜನ**—(ಪಾ. ಸೂ. -೪-೪೮)ಎಂಬುದರಿಂದ ಧಾತುವಿನ ಉಪಧೆಗೆ ಲೋಪ. ಉಗಿತ್ತಾದುದರಿಂದ ಸ್ತ್ರೀತ್ವ ವಿವಕ್ಷಾ ಮಾಡಿದಾಗ, **ಉಗಿತಶ್ಚ**—ಎಂಬುದರಿಂದ ಙೀಪ್. ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಮ್** (ಪಾ. ಸೂ. ೬-೪-೧೩೧) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಸಕಾರಕ್ಕೆ ಷತ್ವ. ವಸುವಿನ ಸ್ವರದಿಂದ ಉಕಾರ ಉದಾತ್ತವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಚಾಕಂತು**—ಕಮು ಕಾಂತೌ ಧಾತು. ಕಾಂತಿ ಎಂದರೆ ಇಚ್ಛಾ. **ವ್ಯತ್ಯಯೋ ಬಹುಲಮ್**—(ಪಾ.ಸೂ. ೩-೧-೮೫) ಎಂಬುದರಿಂದ ಲೋಟ್ ಪ್ರಥಮಪುರುಷ ಏಕವಚನದಲ್ಲಿ ಪರಸ್ಮೈಪದ ತು ಪ್ರತ್ಯಯವೂ ಶಪಿಗೆ ಶ್ಲು ವಿಕರಣವೂ ಬರುತ್ತದೆ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ತುಜಾದೀನಾಂ ದೀರ್ಘೋಽಭ್ಯಾಸಸ್ಯ**—(ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಅಥವಾ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಬಂದಾಗ ಅದಕ್ಕೆ **ಯಙೋಽಚಿ ಚ**—ಎಂಬುದರಿಂದ ಲುಕ್. ಛಾಂದಸವಾಗಿ **ನುಗತೋಽನುನಾ**—(ಪಾ. ಸೂ. ೭-೪-೮೫) ಎಂಬುದರಿಂದ ಅಭ್ಯಾಸಕ್ಕೆ ನುಕಾಗಮ ಬರುವುದಿಲ್ಲ. **ದೀರ್ಘೋಽಕಿತಃ**—(ಪಾ. ಸೂ. ೭-೪-೮೩) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ.

**ಅಸ್ಮೇ**—ಅಸ್ಮದ್ ಶಬ್ದ. ಇದಕ್ಕೆ ಷಷ್ಠೀವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—(ಪಾ.ಸೂ ೭-೧-೩೯) ಎಂಬುದರಿಂದ ಅದಕ್ಕೆ ಶೇ ಆದೇಶ. **ಶೇಷೇ ಲೋಪಃ**—ಎಂಬುದರಿಂದ ಮಪರ್ಯಂತದ ಪರಕ್ಕೆ ಲೋಪ. ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧೪ ॥

॥ ಸಂಹಿತಾಪಾಠಃ ॥

ಚತ್ವಾರೋ ಮಾ ಮಶರ್ಶಾರಸ್ಯ ಶಿಶ್ವಸ್ತ್ರಯೋ ರಾಜ್ಞ ಆಯವಸಸ್ಯ ಜಿಷ್ಣೋಃ ।

ರಥೋ ವಾಂ ಮಿತ್ರಾವರುಣಾ ದೀರ್ಘಾಪ್ಸಾಃ ಸ್ಯೂಮಗಭಸ್ತಿಃ ಸೂರೋ ನಾದ್ಯೌತ್ ॥ ೧೫ ॥

॥ ಪದಪಾಠಃ ॥

ಚತ್ವಾರಃ । ಮಾ । ಮಶಶರ್ಾರಸ್ಯ । ಶಿಶ್ವಃ । ತ್ರಯಃ । ರಾಜ್ಞಃ । ಆಯವಸಸ್ಯ । ಜಿಷ್ಣೋಃ ।

ರಥಃ । ವಾಂ । ಮಿತ್ರಾವರುಣಾ । ದೀರ್ಘಽಅಪ್ಸಾಃ । ಸ್ಯೂಮಽಗಭಸ್ತಿಃ । ಸೂರಃ । ನ । ಅದ್ಯೌತ್ ॥೧೫॥

॥ ಸಾಯಣಭಾಷ್ಯಂ ॥

ಮಾ ಮಾಂ ಕಕ್ಷೀವಂತಂ ಮಶಶರ್ಾರಸ್ಯ । ಮಶಕೀಕೃತ್ಯ ಭೃಶಂ ಶೃಣೋತಿ ಶಾರಯತಿ ವಾಮಿತ್ರಾನಿತಿ ಮಶಶರ್ಾರಃ । ಏತನ್ನಾಮಕಸ್ಯ ರಾಜ್ಞಃ ಶಿಶ್ವಃ ಶಿಶವಃ ಶಿಶುವದಪ್ರಬುದ್ಧಾಶ್ಚತ್ವಾರಃ ಪುತ್ರಾ ಬಾಧಂತ ಇತಿ ಶೇಷಃ ॥ ಶಿಶುಶಬ್ದಸ್ಯ ಜಸಾದಿಷು ಚ್ಛಂದಸಿ ವಾವಚನಮಿತಿ ಗುಣಾಭಾವಃ ॥ ತಥಾಯವಸಸ್ಯ ಸರ್ವತಃ ಪ್ರಾಪ್ತಾನ್ನಸ್ಯೈತನ್ನಾಮ್ನೋ ರಾಜ್ಞೋ ಜಿಷ್ಣೋರ್ಜಯಶೀಲಸ್ಯ ಪುತ್ರಾಸ್ತ್ರಯಸ್ತ್ರೇಽಪಿ ಬಾಧಂತ ಇತಿ ಶೇಷಃ । ಹೇ ಮಿತ್ರಾವರುಣೈತನ್ನಾಮಾನೌ ದೇವೌ ವಾಂ ಯುವಯೋಃ ಸಂಬಂಧೀ ರಥೋ ದೀರ್ಘಾಪ್ಸಾಃ । ಅಪ್ಸ ಇತಿ ರೂಪನಾಮ । ಅತಿವಿಸ್ತೃತರೂಪಃ ಸ್ಯೂಮಗಭಸ್ತಿಃ । ಸ್ಯೂಮಮಿತಿ ಸುಖನಾಮ । ಸುಖಕರದೀಪ್ತಿಃ ಸನ್ ಸೂರೋ ನ ಸೂರ್ಯ ಇವಾದ್ಯೌತ್ । ದ್ಯೋತತಾಂ । ಉಕ್ತಾನಾಮಸ್ಮದ್ವಿರೋಧಿನಾಂ ಪುರತಃ ಸ್ಫುರನ್ ಭಯಜನಕೋ ಭವತ್ವಿತ್ಯರ್ಥಃ ॥ ದ್ಯುತೇಶ್ಛಂದಸಿ ಲುಙ್‌ಲಙ್‌ಲಿಟ ಇತಿ ಲುಙ್ । ದ್ಯುದ್ಭ್ಯೋ ಲುಙಿ । ಪಾ. ೧-೩-೯೧ । ಇತಿ ಪರಸ್ಮೈಪದಂ । ಸಿಚಿ ವೃದ್ಧಿಃ ಪರಸ್ಮೈಪದೇಷು । ಪಾ. ೭-೨-೧ । ಇತಿ ವೃದ್ಧಿಃ । ಬಹುಲಂ ಛಂದಸೀತೀಡಭಾವೇ ಹಲ್ಙ್ಯಾಬ್ಭ್ಯೋ ದೀರ್ಘಾತ್- ಸಂಯೋಗಾಂತಲೋಪೌ । ಯದ್ವಾ । ದ್ಯು ಅಭಿಗಮನೇ । ಅದಾದಿಕಃ । ಛಾಂದಸೇ ಲುಙ್ಯತೋ ವೃದ್ಧಿರ್ಲುಕಿ ಹಲಿ । ಪಾ. ೭-೩-೮೯ । ಇತಿ ವೃದ್ಧಿಃ ॥

॥ ಪ್ರತಿಪದಾರ್ಥ ॥

**ಮಾ**—(ನನ್ನನ್ನು) ಕಕ್ಷೀವಂತನನ್ನು । **ಮಶಶರ್ಾರಸ್ಯ**—(ಶತ್ರುನಾಶಕನಾದ) ಮಶಶರ್ಾರನೆಂಬ ರಾಜನ । **ಶಿಶ್ವಃ**—ಅಜ್ಞಾನಿಗಳಾದ । **ಚತ್ವಾರಃ**—ನಾಲ್ಕು (ಮಕ್ಕಳೂ) ಮತ್ತು । **ಆಯವಸಸ್ಯ**—(ಪ್ರಾಪ್ತಾನ್ನನಾದ) ಆಯವಸನೆಂಬ । **ಜಿಷ್ಣೋಃ**—ಜಯಶೀಲನಾದ । **ರಾಜ್ಞಃ**—ರಾಜನ । **ತ್ರಯಃ**—ಮೂರು (ಮಕ್ಕಳೂ) । (**ಬಾಧಂತೇ**—ಬಾಧಿಸುತ್ತಾರೆ) । **ಹೇ ಮಿತ್ರಾವರುಣಾ**—ಎಲೈ ಮಿತ್ರ ಮತ್ತು ವರುಣರೇ । **ವಾಂ**—ನಿಮ್ಮ । **ರಥಃ**-ರಥವು । **ದೀರ್ಘಾಪ್ಸಾಃ**—ಅತಿವಿಸ್ತೃತವಾದ ರೂಪವುಳ್ಳದ್ದಾಗಿ ಮತ್ತು । **ಸ್ಯೂಮಗಭಸ್ತಿಃ**—ಸುಖಕರವಾದ ಪ್ರಕಾಶವುಳ್ಳದ್ದಾಗಿ । **ಸೂರೋ ನ**—ಸೂರ್ಯನಂತೆ । **ಅದ್ಯೌತ್**—(ಅವರುಗಳಿಗೆ ತಾಪಕರವಾಗುವಂತೆ) ಪ್ರಕಾಶಿಸಲಿ.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ನನ್ನನ್ನು (ಕಕ್ಷೀವಂತನನ್ನು) ಮಶಶರ್ಾರ ಎಂಬುವನ ನಾಲ್ಕು ಅಜ್ಞಾನಿಗಳಾದ ಮಕ್ಕಳೂ, ಆಯವಸ ಎಂಬುವನ ಮೂರು ಮಕ್ಕಳೂ ಬಾಧಿಸುತ್ತಿದ್ದಾರೆ; ನಿಮ್ಮ ಬೃಹದ್ರೂಪವುಳ್ಳ ಮತ್ತು ಹಿತವಾದ ಕಾಂತಿಯುಳ್ಳ ರಥವು ಸೂರ್ಯನಂತೆ (ಅವರುಗಳಿಗೆ ತಾಪಕರವಾಗುವಂತೆ) ಪ್ರಕಾಶಿಸಲಿ.

## English Translation.

The four (silly) sons of Masarsara, the three of the victorious monarch Ayavasa, (annoy) me. Let your spacious and bright-rayed chariot, Mitra and Varuna, blaze (before them) like the sun, (filling them with fear).

॥ ವಿಶೇಷವಿಷಯಗಳು ॥

**ಮಶರ್ಶಾರಸ್ಯ, ಆಯುವಸಸ್ಯ**—ಮಶರ್ಶಾರ, ಆಯವಸ ಎಂಬುವರು ಇಬ್ಬರ ರಾಜರುಗಳ ಹೆಸರೆಂದು ಭಾಷ್ಯಕಾರರ ಅರ್ಥವಿವರಣೆಯು. ಇವರು ಯಾರು ? ಇವರ ವಿಷಯವೇನು ಎಂಬುದನ್ನು ವಿವರಿಸಿಲ್ಲ. ಋಗ್ವೇದದಲ್ಲಿ ಇವರ ಹೆಸರು ಮತ್ತೆಲ್ಲಿಯೂ ಇಲ್ಲದಿರುವುದರಿಂದ ಹೆಚ್ಚು ವಿಷಯಗಳು ತಿಳಿಯುವಂತಿಲ್ಲ. Ludwig ಎಂಬ ಜರ್ಮನ್ ಪಂಡಿತನು ಮರ್ಮಶಾರನೆಂಬುವನೇ ನಾಹುಷನೆಂಬುವನೆಂದು ಅಭಿಪ್ರಾಯಪಡುವನು. ಆದರೆ ಅದಕ್ಕೆ ಸರಿಯಾದ ಯಾವ ಆಧಾರವೂ ಇಲ್ಲ.

**ದೀರ್ಘಾಪ್ಸಾಃ—ಅಪ್ಸ ಇತಿ ರೂಪನಾಮ ।** ಅಪ್ಸಃ ಎಂಬ ಶಬ್ದವು ಹದಿನಾರು ರೂಪನಾಮಗಳಲ್ಲಿ ಪಠಿತವಾಗಿರುವುದು (ನಿ. ೩-೧೩). ದೀರ್ಘ ಎಂದರೆ ದೊಡ್ಡದಾದ, ವಿಸ್ತಾರವಾದ. ವಿಸ್ತಾರವಾದ ಆಕಾರವುಳ್ಳ ರಥವೆಂದರ್ಥವು.

**ಸ್ಯೂಮಗಭಸ್ತಿಃ—ಸ್ಯೂಮಮಿತಿ ಸುಖನಾಮ ।** ಸ್ಯೂಮವೆಂದರೆ ಸುಖಕರವಾದ, ಗಭಸ್ತಿಃ—ದೀಪ್ತಿ ಅಥವಾ ರಶ್ಮಿಯುಳ್ಳದ್ದು.

**ರಥೋ ವಾಂ ಮಿತ್ರಾವರುಣಾ ದೀರ್ಘಾಪ್ಸಾಃ ಸ್ಯೂಮಗಭಸ್ತಿಃ ಸೂರೋ ನಾದ್ಯೌತ್ ।** ಎಲೈ ಮಿತ್ರಾವರುಣರೇ ನಿಮ್ಮ ರಥವು ಅತ್ಯಂತ ಪ್ರಕಾಶವುಳ್ಳದ್ದಾಗಿ ಭಕ್ತರಾದವರಿಗೆ ನೋಡುವುದಕ್ಕೆ ಸುಖಕರವಾಗಿದ್ದರೂ ನಮ್ಮ ಶತ್ರುಗಳಿಗೆ ಸೂರ್ಯನ ತೇಜಸ್ಸಿನಂತೆ ಉಗ್ರವಾಗಿಯೂ, ಭಯಂಕರವಾಗಿಯೂ ಇರಲಿ ಎಂದು ಮಿತ್ರಾವರುಣರನ್ನು ಪ್ರಾರ್ಥಿಸಲಾಗಿದೆ.

ಮಿತ್ರಾವರುಣರ ರಥವು ಭಕ್ತರ ದೃಷ್ಟಿಗೆ ಸೌಮ್ಯವಾದ ಆಕಾರವುಳ್ಳದ್ದಾಗಿ ಕಾಣಿಸುವ ವಿಷಯದಲ್ಲಿ—

**ದರ್ಶಂ ನು ವಿಶ್ವದರ್ಶತಂ ದರ್ಶಂ ರಥಮಧಿ ಕ್ಷಮಿ । ಏತಾ ಜುಷತ ಮೇ ಗಿರಃ ॥**

(ಋ. ಸಂ. ೧-೨೫-೧೮)

ಶುನಃಶೇಪನು ಮಿತ್ರಾವರುಣರ ರಥವು ಎಲ್ಲರಿಗೂ ಕಾಣಿಸುತ್ತಿರುವುದಾಗಿಯೂ ಅದನ್ನು ತಾನೂ ನೋಡಿದೆನೆಂದೂ ಹೇಳಿದ್ದಾನೆ.

**ಹಿರಣ್ಯರೂಪಮುಷಸೋ ವ್ಯುಷ್ಟಾವಯಃಸ್ಥೂಣಮುದಿತಾ ಸೂರ್ಯಸ್ಯ ।**
**ಆ ರೋಹಥೋ ವರುಣ ಮಿತ್ರ ಗರ್ತಮತಶ್ಚಕ್ಷಾಥೇ ಅದಿತಿಂ ದಿತಿಂ ಚ ॥**

(ಋ. ಸಂ. ೫-೬೨-೮)

ಇತ್ಯಾದಿ ಋಕ್ಕುಗಳಲ್ಲಿ ಮಿತ್ರಾವರುಣರು ರಥಾರೋಹಣಮಾಡಿದ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ.

‖ ವ್ಯಾಕರಣಪ್ರಕ್ರಿಯಾ ‖

**ಚತ್ವಾರಃ—** ಚತುರ್ ಶಬ್ದ. ಜಸ್ಸಿನಲ್ಲಿ **ಚತುರನಡುಹೋರಾಮುದಾತ್ತಃ—** ಎಂಬುದರಿಂದ ಉದಾತ್ತ ವಾದ ಆಮಾಗಮ. ಮಿತ್ತಾದುದರಿಂದ ಅಂತ್ಯಾಚಿನಪರವಾಗಿ ಬರುತ್ತದೆ.

**ಮಶರ್ಶಾರಸ್ಯ—** ಶ್ವಾ ಹಿಂಸಾಯಾಮ್ ಧಾತು. ಣಿಜಂತದ ಮೇಲೆ ಘಙ್ ಪ್ರತ್ಯಯ. ಧಾತುವಿನ ಇಕ್ಕಿಗೆ ವೃದ್ಧಿ ರಪರವಾಗಿ ಬರುತ್ತದೆ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

ಶಿಶ್ವಃ—ಶಿಶು+ಜಸ್ ಎಂದಿರುವಾಗ **ಜಸಾದಿಷು ಛಂದಸಿ ವಾವಚನಮ್**—ಎಂಬ ವಚನದಿಂದ **ಜಸಿ ಚ**—ಎಂಬುದರಿಂದ ಗುಣ ಬರುವುದಿಲ್ಲ. **ಇಕೋ ಯಣಚಿ**—ಎಂಬುದರಿಂದ ಯಣಾದೇಶ.

**ಜಿಷ್ಣೋಃ—** ಜಿ ಜಯೇ ಧಾತು. **ಗ್ಲಾಜಿಸ್ಥಶ್ಚ ಗ್ಸ್ನುಃ**—ಎಂಬುದರಿಂದ ಗ್ಸ್ನು ಪ್ರತ್ಯಯ. ಗಿತ್ತಾದುದ ರಿಂದ **ಕ್ಙಿತಿ ಚ**—(ಪಾ. ಸೂ. ೧-೧-೫) ಎಂಬುದರಿಂದ ಗುಣ ನಿಷೇಧ ಬರುತ್ತದೆ. **ಆದೇಶಪ್ರತ್ಯಯಯೋಃ**— ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ಮಿತ್ರಾವರುಣಾ—** **ದೇವತಾದ್ವಂದ್ವೇ ಚ** ಎಂಬುದರಿಂದ ಪೂರ್ವಪದಕ್ಕೆ ಆನಙಾದೇಶ. ದ್ವಿಚವನ ಔ ಪರವಾದಾಗ **ಸುಪಾಂ ಸುಲುಕ್**–(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸ್ಯೂಮಗಭಸ್ತಿಃ—** ಸ್ಯೂಮಾಃ ಗಭಸ್ತಯಃ ಯಸ್ಯ ಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅದ್ಯೌತ್**——ದ್ಯುತ ದೀಪ್ತೌ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದ ರಿಂದ ಲೋಡರ್ಥದಲ್ಲಿ ಲುಙ್. ಇದು ಆತ್ಮನೇಪದಿಯಾದರೂ **ದ್ಯುದ್ಭ್ಯೋ ಲುಙಿ** (ಪಾ. ಸೂ. ೧-೩-೯೧) ಎಂಬುದರಿಂದ ಲುಙ್‌ನಲ್ಲಿ ಪರಸ್ಮೈಪದಿಯಾಗುತ್ತದೆ. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಚ್ಲೇಃ ಸಿಚ್** ಸೂತ್ರದಿಂದ ಸಿಚಾದೇಶ. **ಬಹುಲಂ ಛಂದಸಿ** ಎಂಬುದ ರಿಂದ ಅದಕ್ಕೆ ಇಡಾಗಮ ಬರುವುದಿಲ್ಲ. **ಸಿಚಿವೃದ್ಧಿಃ ಪರಸ್ಮೈಪದೇಷು** (ಪಾ. ಸೂ. ೭-೨-೧) ಎಂಬುದರಿಂದ ಪರಸ್ಮೈಪದಪರವಾದ ಸಿಚ್ ಪರವಾದುದರಿಂದ ಧಾತುವಿಗೆ ವೃದ್ಧಿ. ಅಂಗಕ್ಕೆ ಅಡಾಗಮ ಅದ್ಯೌತ್+–ಸ್‌ತ್ ಎಂದಿ ರುವಾಗ **ಹಲ್‌ಙ್ಯಾಭ್ಯೋ ದೀರ್ಘಾತ್**—ಸೂತ್ರದಿಂದ ಪ್ರತ್ಯಯಕ್ಕೆ ಲೋಪ. **ಸಂಯೋಗಾಂತಸ್ಯ ಲೋಪಃ** ಎಂಬುದರಿಂದ ಸಿಚಿನ ಸಕಾರ ಲೋಪ. ಅದ್ಯೌತ್ ಎಂದು ರೂಪವಾಗುತ್ತದೆ. ಅಥವಾ ದ್ಯು ಅಭಿಗಮನೇ ಧಾತು.

ತಪಾದಿ. ಹಿಂದಿನಂತೆ ಛಾಂದಸವಾಗಿ ಲಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಬಂದಾಗ ಅದರ ಇಕಾರಕ್ಕೆ ಲೋಪ. **ಉತೋ ವೃದ್ಧಿರ್ಲುಕಿ ಹಲಿ** (ಪಾ. ಸೂ. ೭-೩-೮೯) ಎಂಬುದರಿಂದ ಉಕಾರಕ್ಕೆ ವೃದ್ಧಿ. ಹಿಂದಿನಂತೆಯೇ ರೂಪಸಿದ್ಧಿಯಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧೫ ॥

ಇಲ್ಲಿಗೆ ನೂರ ಇಪ್ಪತ್ತೆರಡನೇ ಸೂಕ್ತ ಮುಗಿದುದು.

---

# ನೂರ ಇಪ್ಪತ್ತಮೂರನೆಯ ಸೂಕ್ತವು

ಈ ಸೂಕ್ತವೂ ಮುಂದಿನ ಸೂಕ್ತವೂ ಉಷೋದೇವತಾಕವು. ಈ ಪ್ರಥಮಮಂಡಲದಲ್ಲಿ ೩೦ ನೇ ಸೂಕ್ತದಲ್ಲಿ ೨೦-೨೨ ಋಕ್ಕುಗಳೂ, ೪೮ ನೇ ಸೂಕ್ತ (೧೬ ಋಕ್ಕುಗಳು), ೪೯ ನೇ ಸೂಕ್ತ (೧೪ ಋಕ್ಕುಗಳು) ೯೨ ನೇ ಸೂಕ್ತ (೧೫ ಋಕ್ಕುಗಳು) ೧೧೩ ನೇ ಸೂಕ್ತ (೨೦ ಋಕ್ಕುಗಳು) ೧೨೩ ನೇ ಸೂಕ್ತ (೧೩ ಋಕ್ಕುಗಳು) ೧೨೪ ನೇ ಸೂಕ್ತ (೧೩ ಋಕ್ಕುಗಳು) ಇವು ಮಾತ್ರ ಉಷೋದೇವತಾಕವಾಗಿವೆ. ಇವುಗಳಲ್ಲಿ ಕೊನೆಯ ಎರಡು ಸೂಕ್ತಗಳನ್ನು ಬಿಟ್ಟು ಉಳಿದ ಸೂಕ್ತಗಳನ್ನು ಹಿಂದಿನ ಭಾಗಗಳಲ್ಲಿ ವಿವರಣೆಮಾಡಿದ್ದೇವೆ. ಈಗ ೧೨೩ ಮತ್ತು ೧೨೪ ನೇ ಸೂಕ್ತಗಳನ್ನು ವ್ಯಾಖ್ಯಾನಮಾಡುವೆವು.

ಉಷೋದೇವತೆಯ ವಿಷಯದಲ್ಲಿ ಯಾಸ್ಕಮಹರ್ಷಿಗಳು— **ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ॥** (ನಿ. ೨-೧೯) ಎಂದು ಹೇಳಿದಾರೆ. ಎಂದರೆ ಉಷೋದೇವತೆಯು ಯಾರು? ಅದರ ಸ್ವರೂಪವೇನು? ಅದಕ್ಕೆ ಈ ಹೆಸರು ಬರಲು ಕಾರಣವೇನು? ಎಂದು ಮೊದಲಾದ ವಿಷಯ ವಿಮರ್ಶೆಮಾಡುತ್ತಾ **ಉಷಃ ಕಸ್ಮಾತ್ । ಉಚ್ಛತೀತಿ ಸತ್ಯಾಃ । ಉಚ್ಛೀ ವಿವಾಸೇ । ವಿವಾಸಯತಿ ಹೀಯಂ ತಮಾಂಸಿ. ತಸ್ಮಾದುಚ್ಛತೀತ್ಯೇವಮಸ್ಯಾ ಕರ್ತರಿ ಕಾರಕೇ ಉಷಾ ಇತ್ಯೇತದಭಿಧಾನಂ ಭವತಿ । ಕಾ ಪುನರಿಯಮುಷಾ ಇತಿ । ರಾತ್ರೇರಪರಃಕಾಲಃ ಸ ಉಷಾ ಇತ್ಯುಚ್ಯತೇ ॥** ಎಂದರೆ ಹೊರದೂಡು ಎಂಬರ್ಥವುಳ್ಳ ಉಚ್ಛೀ-ವಿವಾಸೇ ಎಂಬ ಧಾತುವಿನಿಂದ ಈ ಉಷಶ್ಶಬ್ದದ ನಿಷ್ಪತ್ತಿಯಾಗಿದೆಯೆಂದು ವಿವರಿಸುತ್ತಾರೆ. ಏನನ್ನು ಹೊರದೂಡುವುದು ಎಂದರೆ ಕತ್ತಲೆಯನ್ನು ಎಂದರ್ಥವು. ಕತ್ತಲೆಯನ್ನು ಹೊರದೂಡಿ ಬೆಳಕನ್ನು ಪ್ರಸರಿಸುವುದರಿಂದ ಈ ದೇವತೆಗೆ **ಉಷಾಃ** ಎಂದು ಹೆಸರು. ಆ ಕಾಲವು ಯಾವುದು ಎಂದರೆ ರಾತ್ರಿಯ ಕೊನೆಯ ಭಾಗವು. ರಾತ್ರಿಯು ಮುಗಿದು ಸೂರ್ಯೋದಯ ವಾಗುವುದಕ್ಕೆ ಮುಂಚಿತವಾಗಿ ಕತ್ತಲೆ ಇಲ್ಲದ ಮತ್ತು ಬೆಳಕಾಗಿರುವ ಕಾಲಕ್ಕೆ ಉಷಃಕಾಲವೆಂದು ಹೆಸರು ಎಂದು ಅರ್ಥವಿವರಣೆಮಾಡಿರುವರು.

ರಾತ್ರಿಯು ಕಳೆದನಂತರ ಉಷಃಕಾಲವಾಗುವುದರಿಂದ ಉಷಃಕಾಲವು ರಾತ್ರಿಯಿಂದ ಹುಟ್ಟಿದ್ದೆಂದು ಹೇಳುವ ರೂಢಿ ಇರುವುದು. ಇದನ್ನು ಸಮರ್ಥನೆಮಾಡುವುದಕ್ಕಾಗಿ ಯಾಸ್ಕರು—

**ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।**
**ಯಥಾ ಪ್ರಸೂತಾ ಸವಿತುಃ ಸವಾಯ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥**

(ಋ. ಸಂ. ೧-೧೧೩-೧)

ಎಂಬ ಋಕ್ಕನ್ನು ಉದಹರಿಸಿರುವರು. ಮತ್ತು ಈ ಕ್ರಮವನ್ನನುಸರಿಸಿ ಉಷಃಕಾಲವಾದನಂತರ ಸೂರ್ಯೋದಯ ವಾಗುವುದರಿಂದ ಉಷಸ್ಸಿನಿಂದ ಸೂರ್ಯನು ಉತ್ಪನ್ನನಾಗುವನೆಂದು ಹೇಳುವ ವಿಷಯದಲ್ಲಿಯೂ ಯಾಸ್ಕರು—

**ರುಶದ್ವತ್ಸಾ ರುಶತೀ ಶ್ವೇತ್ಯಾಗಾದಾರೈಗು ಕೃಷ್ಣಾ ಸದನಾನ್ಯಸ್ಯಾಃ ।**
**ಸಮಾನಬಂಧೂ ಅಮೃತೇ ಅನೂಚೀ ದ್ಯಾವಾ ವರ್ಣಂ ಚರತ ಆಮಿನಾನೇ ॥**

- (ಋ. ಸಂ. ೧-೧೧೩-೨)

ಎಂಬ ಋಕ್ಕನ್ನು ವಿಷಯಸಮರ್ಥನೆಗಾಗಿ ಉದಾಹರಿಸಿರುವರು (ನಿ. ೨-೨೦).

ಈ ಉಷೋದೇವತೆಯ ಸ್ವರೂಪವನ್ನು ಋಷಿಗಳು ವಿಧವಿಧವಾಗಿ ವರ್ಣನೆಮಾಡಿರುವರು. ಈ ವರ್ಣನೆಗನುಸಾರವಾಗಿ ನಾನಾವಿಧ ವಿಶೇಷಣಗಳನ್ನು ಉಪಯೋಗಿಸಿರುವರು. ಅವುಗಳಲ್ಲಿ ಮುಖ್ಯವಾದ ಹದಿನಾರು ಶಬ್ದಗಳು ಉಷೋದೇವತೆಗೆ ಅನ್ವಯಿಸುವ ವಿಶೇಷಣಗಳನ್ನು ಯಾಸ್ಕರು ಈ ರೀತಿ ಹೇಳಿರುವರು (ನಿ. ೨-೧೯).

**ವಿಭಾವರೀ—ವಿಶೇಷಪ್ರಭಾವಯುಕ್ತಾ । ವಿಶಿಷ್ಟಪ್ರಕಾಶಯುಕ್ತಾ ।** ಬಹಳ ಪ್ರಕಾಶಮಾನವಾದ—Resplendent. ಈ ಶಬ್ದವು ಋ. ಸಂ. ೧-೩೦-೨೦ ; ೧-೪೮-೧ ; ೧-೪೮-೧೦ ; ೧-೯೨-೧೪ ; ೪-೫೨-೬ ; ೫-೭೯-೪ ; ೫-೭೯-೧೦ ; ೮-೪೭-೧೪ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

**ಸೂನರೀ—ಸುಷ್ಠು ನೇತ್ರೀ** । ಸುಂದರವಾದ—Beautiful. ಈ ಶಬ್ದವು ಋ. ಸಂ. ೧-೪೮-೧೦ ; ೧-೪೮-೫ ; ೧-೪೮-೮ ; ೪-೫೨-೧ ; ೭-೮೧-೧ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

**ಭಾಸ್ವತೀ—ತೇಜಸ್ವತೀ । ವಿಶಿಷ್ಟಪ್ರಕಾಶನಯುಕ್ತಾ ।** ಹೊಳೆಯುತ್ತಿರುವ—Shining. ಈ ಶಬ್ದವು ಋ. ಸಂ. ೧-೯೨-೭ ; ೧-೧೧೩-೪ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

**ಓದತೀ—ಉಂದೀ ಕ್ಲೇದನೇ । ಉನತ್ತಿ ಸರ್ವಂ ನೀಹಾರೇಣೇತ್ಯೋದತೀ ।** ಹರಿಯುತ್ತಿರುವ, ಚಿಮ್ಮುತ್ತಿರುವ, ಪ್ರಸರಿಸುತ್ತಿರುವ, ಮಂಜಿನಿಂದ ಎಲ್ಲವನ್ನೂ ನೆನೆಯಿಸುವ—flowing, gushing & c—ಈ ಶಬ್ದವು ಋ. ಸಂ. ೧-೪೮-೬ ; ೮-೬೯-೨ ರಲ್ಲಿ ಮಾತ್ರವಿರುವುದು.

**ಚಿತ್ರಾಮಘಾ—ವಿಚಿತ್ರಧನಾ । ವಿವಿಧರಶ್ಮ್ಯಾಖ್ಯಧನಾ ವಾ ॥** ವಿಧವಿಧವಾದ ಅಥವಾ ಪ್ರಕಾಶಮಾನವಾದ ಐಶ್ವರ್ಯವುಳ್ಳ—possessd of brilliant riches. ಈ ಶಬ್ದವು ಋ. ಸಂ. ೭-೭೫-೫ ; ೭-೭೭-೩ ; ೮-೫೮-೩ ರಲ್ಲಿ ಪಠಿತವಾಗಿರುವುದು.

**ಅರ್ಜುನೀ—ಶುಭ್ರವರ್ಣಾ ।** ಬೆಳ್ಳಗಿರುವ—the white. ಈ ಶಬ್ದವು ಋ. ಸಂ. ೧-೪೯-೩ ; ೫-೮೪-೨ ಎಂಬ ಋಕ್ಕುಗಳಲ್ಲಿರುವುದು.

**ವಾಜಿನೀ—ಅಥವಾ ವಾಜಿನೀವತೀ—ವಾಜೋಽನ್ನಮಸ್ಯಾ ಅಸ್ತೀತಿ । ಬಹ್ವನ್ನಾ ।** ಅನ್ನಯುಕ್ತವಾದ ಅಥವಾ ಅನ್ನವನ್ನು ತಂದುಕೊಡುವ—the bringer of food. ಈ ಶಬ್ದಗಳು ಋ. ಸಂ. ३-೬-೧; ३-೬೧-೧; ೬-೬೧-೬ ಮತ್ತು ಋ. ಸಂ. ೧-३-೧೦; ೬-೬೧-೪; ೭-೭೫-೫; ೭-೯೬-३; ೧೦-೭೫-೮; ೧-೪೮-೬; ೧-೪೮-೧೬; ೧-೯೨-೧३; ೧-೯೨-೧೫; ೨-೪೧-೧೮; ೪-೫೫-೯; ೬-೬೧-३; ೮-೨೪-೨೮ ಎಂಬ ಋಕ್ಕುಗಳಲ್ಲಿರುವುದು.

**ಸುಮ್ನಾವರೀ—ಸುಮ್ನಮಿತಿ ಸುಖನಾಮ । ತದ್ವತೀ ।** ಸಂತೋಷವನ್ನುಂಟುಮಾಡುವ—the giver of joy. ಈ ಶಬ್ದವು ಋ. ಸಂ. ೧-೧೧३-೧೨ ನೆಯ ಋಕ್ಕನಲ್ಲಿ ಮಾತ್ರವಿರುವುದು.

**ಅಹನಾ, ದ್ಯೋತನಾ—ಕೃತ್ಸ್ನಂ ಜಗದ್ದ್ಯೋತನಶೀಲಾ ।** ಪ್ರಕಾಶಮಾನವಾದ—Bright. ಈ ಶಬ್ದಗಳು ಋ. ಸಂ. ೧-೧೨३-೪ ಮತ್ತು ಋ. ಸಂ. ೧-೧೨३-೪ ರಲ್ಲಿ ಮಾತ್ರವಿರುವವು.

**ಶ್ವೇತ್ಯಾ—ಶ್ವೇತವರ್ಣೋಪೇತಾ । ಶ್ವಿತಾ ವರ್ಣೇ ।** ಶುಭ್ರವರ್ಣವುಳ್ಳ—the fair-colured. ಈ ಶಬ್ದವು ಋ. ಸಂ. ೧-೧೧३-೨; ೧೦-೭೫-೬ ರಲ್ಲಿರುವುದು.

**ಅರುಷೀ—ಆರೋಚಮಾನಾ । ರಕ್ತವರ್ಣಾ ವಾ ।** ಕೆಂಪುವರ್ಣವುಳ್ಳ, ಸ್ವಲ್ಪಕೆಂಪಾದ ಛಾಯೆಯುಳ್ಳ—the ruddy. ಈ ಶಬ್ದವು ಋ. ಸಂ. ३-೫೫-೧೧; ೪-೫೨-೨; ೮-೬೮-೧೮ ಇತ್ಯಾದಿ ಋಕ್ಕುಗಳಲ್ಲಿ ಪಠಿತವಾಗಿರುವುದು.

**ಸೂನೃತಾ, ಸೂನೃತಾವತೀ, ಸೂನೃತಾವರೀ—ಪ್ರಿಯಸತ್ಯರೂಪಾ । ಪ್ರಿಯಸತ್ಯಾತ್ಮಿಕಾ ವಾಕ್ ತಾದೃಶ್ಯಾ ವಾಚಾ ಯುಕ್ತಾ ।** ಪ್ರಿಯವಾದ ಮತ್ತು ಹಿತವಾದ ಮಾತುಗಳನ್ನಾಡುವ—the utterer of pleasent or sacred voices. ಈ ಶಬ್ದಗಳು. ಋ. ಸಂ. ೧-೮-೮; ೧-३೦-೫; ೧-೪೦-३ ಇತ್ಯಾದಿ ಋಕ್ಕುಗಳಲ್ಲಿಯೂ ಋ. ಸಂ. ೧-೯೨-೧೪; ೧-೨೨-३; ೭-೮೧-೬; ಮತ್ತು ಋ. ಸಂ. ೪-೫೨-೪ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

ಈ ಶಬ್ದಗಳು ಸಾಧಾರಣವಾಗಿ ಉಷೋದೇವತೆಯ ಪರವಾಗಿಯೇ ಉಪಯೋಗಿಸಲ್ಪಟ್ಟಿರುವುದಾದರೂ ಕೆಲವು ಸಂದರ್ಭಗಳಲ್ಲಿ ಇತರ ದೇವತೆಗಳ ಪರವಾಗಿಯೂ ಉಪಯುಕ್ತವಾಗಿರುವುದು.

॥ ಸಾಯಣಭಾಷ್ಯಂ ॥

**ಕದಿತ್ಥೇತ್ಯಸ್ಮಿನ್ನಷ್ಟಾದಶೇಽನುವಾಕೇ ಷಟ್ ಸೂಕ್ತಾನಿ । ತತ್ರ ಪೃಥೂ ರಥ ಇತಿ ತೃತೀಯಂ ಸೂಕ್ತಂ ತ್ರಯೋದಶರ್ಚಂ । ಅತ್ರಾನುಕ್ರಮಣಿಕಾ । ಪೃಥುಃ ಸಪ್ತೋನೋಷಸ್ಯಂ ತ್ವಿತಿ । ದೀರ್ಘತಮಸಃ ಪುತ್ರಃ ಕಕ್ಷೀವಾನೃಷಿರ್ಋಷಿಶ್ಚಾನ್ಯಸ್ಮಾದ್ಯಷೇರಿತಿ ಪರಿಭಾಷಿತತ್ವಾತ್ । ಅನಾದೇಶಪರಿಭಾಷಯಾ ತ್ರಿಷ್ಟುಪ್ ಛಂದಃ । ತುಶಬ್ದಪ್ರಯೋಗಾದಿದಮಾದಿಕೇ ಸೂಕ್ತೇ ಉಷೋದೇವತಾಕೇ ॥ ಪ್ರಾತರನುವಾಕ ಉಷಸ್ಯೇ ಕ್ರತಾವಸ್ಯ ಚೋತ್ತರಸ್ಯ ಚ ವಿನಿಯೋಗಃ । ಅಥೋಷಸ್ಯ ಇತಿ ಖಂಡೇ ಸೂತ್ರಿತಂ । ಪೃಥೂ ರಥ ಇತಿ ಸೂಕ್ತೇ ಪ್ರತ್ಯರ್ಚಿರಿತ್ಯಷ್ಟೌ । ಆ. ४-೧೪ । ಇತಿ ॥ ತಥಾಶ್ವಿನಶಸ್ತ್ರಸ್ಯ ಇದಮಾದಿಸೂಕ್ತದ್ವಯಸ್ಯ ವಿನಿಯೋಗಃ ಪ್ರಾತರನುವಾಕನ್ಯಾಯೇನ । ಆ. ೬-೫ । ಇತ್ಯತಿದಿಷ್ಟತ್ವಾತ್ ॥**

ಅನುವಾದವು—**ಕದಿತ್ಥಾ** ಎಂದು ಪ್ರಾರಂಭವಾಗುವ ಹದಿನೆಂಟನೆಯ ಅನುವಾಕದಲ್ಲಿ ಆರು ಸೂಕ್ತಗಳಿರುವವು. ಅವುಗಳಲ್ಲಿ **ಪೃಥೂ ರಥಃ** ಎಂಬ ಈ ಸೂಕ್ತವು ಮೂರನೆಯದು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಪೃಥುಃ ಸಪ್ತೋನೋಷಸ್ಯಂ ತು** ಎಂದು ಹೇಳಿರುವುದು. ಈ ಸೂಕ್ತಕ್ಕೆ ದೀರ್ಘತಮಸ್ಸುತ್ರನಾದ ಕಕ್ಷೀವಾನ್ ಎಂಬುವನು ಋಷಿಯು. ತ್ರಿಷ್ಟುಪ್ ಛಂದಸ್ಸು. ಸೂತ್ರದಲ್ಲಿ ತು ಶಬ್ದಪ್ರಯೋಗವಿರುವುದರಿಂದ ಈ ಸೂಕ್ತವೂ ಮುಂದಿನ ಸೂಕ್ತವೂ ಉಷೋದೇವತಾಕವು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಉಷಸ್ಯಕ್ರತು ಸಂಬಂಧವಾದ ಮಂತ್ರಗಳಿಗಾಗಿ ಈ ಸೂಕ್ತ ಮತ್ತೂ ಮುಂದಿನ ಸೂಕ್ತದ ವಿನಿಯೋಗವಿರುವುದು ಎಂದು ಆಶ್ವಲಾಯನ ಶ್ರೌತಸೂತ್ರದ **ಅಥೋಷಸ್ಯಃ** ಎಂಬ ಖಂಡದ **ಪೃಥೂ ರಥ ಇತಿ ಸೂಕ್ತೇ ಪ್ರತ್ಯೃರ್ಚಿರಿತ್ಯಷ್ಟೌ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೧೪) ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಎರಡು ಸೂಕ್ತಗಳ ವಿನಿಯೋಗವಿರುವುದೆಂದು **ಪ್ರಾತರನುವಾಕ ನ್ಯಾಯೇನ** ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು (ಆ. ೬-೫).

## ಸೂಕ್ತ—೧೨೩

ಮಂಡಲ—೧ ‖ ಅನುವಾಕ—೧೮ ‖ ಸೂಕ್ತ—೧೨೩ ‖

ಅಷ್ಟಕ—೨ ‖ ಅಧ್ಯಾಯ—೧ ‖ ವರ್ಗ—೪, ೫, ೬ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ‖

‖ ಋಷಿಃ—ಕಕ್ಷೀವಾನ್ ದೈರ್ಘತಮಸ ಔಶಿಜಃ ‖

‖ ದೇವತಾ—ಉಷಾಃ ‖

‖ ಛಂದಃ—ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಪೃಥೂ ರಥೋ ದಕ್ಷಿಣಾಯಾ ಅಯೋಜ್ಯೈನಂ ದೇವಾಸೋ ಅಮೃತಾಸೋ ಅಸ್ಥುಃ ।
ಕೃಷ್ಣಾದುದಸ್ಥಾದರ್ಯಾ೩ ವಿಹಾಯಾಶ್ಚಿಕಿತ್ಸಂತೀ ಮಾನುಷಾಯ ಕ್ಷಯಾಯ ‖ ೧ ‖

‖ ಪದಪಾಠಃ ‖

ಪೃಥುಃ । ರಥಃ । ದಕ್ಷಿಣಾಯಾಃ । ಅಯೋಜಿ । ಆ । ಏನಂ । ದೇವಾಸಃ । ಅಮೃತಾಸಃ । ಅಸ್ಥುಃ ।
ಕೃಷ್ಣಾತ್ । ಉತ್ । ಅಸ್ಥಾತ್ । ಅರ್ಯಾ । ವಿಽಹಾಯಾಃ । ಚಿಕಿತ್ಸಂತೀ । ಮಾನುಷಾಯ । ಕ್ಷಯಾಯ ‖ ೧ ‖

॥ ಸಾಯಣಭಾಷ್ಯಂ ॥

ದಕ್ಷಿಣಾಯಾಃ ಪ್ರವೃದ್ಧಾಯಾಃ ಸ್ವವ್ಯಾಪಾರಕುಶಲಾಯಾ ಉಷೋದೇವತಾಯಾಃ ಪೃಥುರ್ವಿಸ್ತೀರ್ಣೋ ರಥೋಽಯೋಜಿ । ಅಶ್ವೈರ್ಯುಕ್ತಃ ಸಂನದ್ಧೋಽಭೂತ್ । ಅತ್ರ ಯದ್ಯಪಿ ದೇವತಾವಿಶೇಷೋ ನ ಶ್ರುತಸ್ತಥಾಪ್ಯುಷಸ್ಯತ್ವಾದುಷಸ ಇತಿ ಗಮ್ಯತೇ । ಏನಂ ಸಂನದ್ಧಂ ರಥಮಮೃತಾಸೋಽಮರಣಧರ್ಮಾಣೋ ದೇವಾಸೋ ದೇವನಶೀಲಾ ಹವಿರ್ಭಾಜೋ ದೇವಾ ಆಸ್ಥುಃ । ಆಸ್ಥಿತವಂತಃ । ದೇವಯಜನಂ ಗಂತುಮಾರೂಢಾ ಇತ್ಯರ್ಥಃ । ಅನಂತರಂ ಸೋಷಾಃ ಕೃಷ್ಣಾನ್ನಿಃಕೃಷ್ಟವರ್ಣಾನ್ನೈಶಾತ್ತಮಸಃ ಸಕಾಶಾದುದಸ್ಥಾತ್ । ಉತ್ಥಿತಾಭೂತ್ । ಕೃಷ್ಣಂ ಕೃಷ್ಯತೇರ್ನಿಕೃಷ್ಟೋ ವರ್ಣಃ । ನಿ- ೨-೨೦ । ಇತಿ ಯಾಸ್ಕಃ । ಕೀದೃಶೀ ಸಾ । ಆರ್ಯಾ ಅರಣೀಯಾ ಪೂಜನೀಯಾ ವಿಹಾಯಾ ವಿವಿಧಗಮನಯುಕ್ತಾ ಮಹತೀ ವಾ । ವಿಹಾಯಾ ಇತಿ ಮಹನ್ನಾಮ ವಿಹಾಯಾ ಯಹ್ವ ಇತಿ ತನ್ನಾಮಸು ಪಾಠಾತ್ । ಮಾನುಷಾಯ ಕ್ಷಯಾಯ ಮನುಷ್ಯಾಣಾಂ ನಿವಾಸಾಯ ಚಿಕಿತ್ಸಂತ್ಯಂಧಕಾರನಿವಾರಣರೂಪಾಂ ಚಿಕಿತ್ಸಾಂ ಕುರ್ವತೀ । ತಮೋ ನಿವಾರಯಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ದಕ್ಷಿಣಾಯಾಃ**—(ಸ್ವಕರ್ಮ) ದಕ್ಷಳಾದ (ಉಷೋದೇವತೆಯ) । **ಪೃಥುಃ**—ವಿಸ್ತಾರವಾದ । **ರಥಃ**—ರಥವು । **ಅಯೋಜಿ**—ಸನ್ನದ್ಧವಾಯಿತು (ಅಶ್ವಗಳಿಂದ ನಿಯೋಜಿತವಾಯಿತು) । **ಏನಂ**—(ಸನ್ನದ್ಧವಾದ ರಥವನ್ನು) ಇದನ್ನು । **ಅಮೃತಾಸಃ**—ಅಮರರಾದ । **ದೇವಾಸಃ**—ದೇವತೆಗಳು । **ಆ ಅಸ್ಥುಃ**—(ಯಾಗಾಭಿಮುಖರಾಗಿ) ಏರಿದರು (ಅನಂತರ) । **ಆರ್ಯಾ—ಪೂಜ್ಯಳೂ** । **ವಿಹಾಯಾಃ**—ನಾನಾಮುಖವಾದ ಗಮನವುಳ್ಳವಳೂ ಆದ (ಉಷೋದೇವತೆಯು) । **ಮಾನುಷಾಯ ಕ್ಷಯಾಯ**—ಮನುಷ್ಯರ ಸಂಬಂಧವಾದ ಗೃಹಕ್ಕೆ । **ಚಿಕಿತ್ಸಂತೀ**—(ಅಂಧಕಾರ ನಿವಾರಣರೂಪವಾದ) ಚಿಕಿತ್ಸೆ ಮಾಡುವವಳಾಗಿ । **ಕೃಷ್ಣಾತ್**—ಕೃಷ್ಣ ವರ್ಣವಾದ (ಅಂಧಕಾರದಿಂದ) । **ಉತ್ ಅಸ್ಥಾತ್**—ಮೇಲಕ್ಕೆ ಎದ್ದು ಬಂದಳು.

॥ ಭಾವಾರ್ಥ ॥

ದಕ್ಷಳಾದ (ಉಷೋದೇವತೆಯ) ವಿಸ್ತಾರವಾದ ರಥವು ಅಶ್ವಗಳಿಂದ ನಿಯೋಜಿತವಾಯಿತು; (ಸಿದ್ಧವಾದ) ಇದನ್ನು ಅಮರರಾದ ದೇವತೆಗಳು ಆರೋಹಿಸಿದರು (ಅನಂತರ) ಪೂಜ್ಯಳೂ, ವಿವಿಧಗತಿಯವಳೂ ಆದ (ಉಷೋದೇವತೆಯು) ಮನುಷ್ಯರ ಗೃಹಗಳಿಗೆ ಅಂಧಕಾರ ನಿವಾರಣರೂಪವಾದ ಚಿಕಿತ್ಸೆ ಮಾಡುವವಳಾಗಿ, ಕೃಷ್ಣವರ್ಣವಾದ (ಅಂಧಕಾರದಿಂದ) ಎದ್ದು ಬಂದಳು.

## English Translation.

The spacious chariot of the graceful (Dawn) has been harnessed; the immortal gods have ascended it; the noble and all-pervading Ushas has risen up from the darkness, bringing health to human habitations.

॥ ವಿಶೇಷವಿಷಯಗಳು ॥

**ದಕ್ಷಿಣಾಯೋಃ—ಪ್ರವೃದ್ಧಾಯೋಃ ಸ್ವವ್ಯಾಪಾರಕುಶಲಾಯೋಃ** ಬಹಳ ಮಟ್ಟಿಗೆ ಅಭಿವೃದ್ಧಿಯನ್ನು ಹೊಂದಿರುವ, ತನ್ನ ಕಾರ್ಯವನ್ನು ಆಚರಿಸುವುದರಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿರುವ ಉಷೋದೇವತೆಯ ಎಂದು ಎರಡು ವಿಧವಾದ ಅರ್ಥವನ್ನು ವಿವರಿಸಿ ಉಷೋದೇವತೆಗೆ ವಿಶೇಷಣವನ್ನಾಗಿ ಈ ಪದವನ್ನು ಸೇರಿಸಿರುವರು.

ಯಾಸ್ಕರು ನಿರುಕ್ತದಲ್ಲಿ ದಕ್ಷಿಣಾ ಎಂಬ ಪದವು ಅನೇಕಾರ್ಥವುಳ್ಳದ್ದೆಂದು (ನಿ. ೧-೭) ನಿರ್ವಚನ ಮಾಡಿರುವರು.

**ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ ॥**
**ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥**

(ಋ. ಸಂ. ೨-೧೧-೨೧)

ಈ ಋಕ್ಕಿನಲ್ಲಿರುವ ದಕ್ಷಿಣಾ ಎಂಬ ಪದಕ್ಕೆ ನಿರುಕ್ತದಲ್ಲಿ **ದಕ್ಷಿಣಾ ದಕ್ಷತೇಃ ಸಮರ್ಧಯತಿ ಕರ್ಮಣೋ ವ್ಯೃದ್ಧಂ ಸಮರ್ಧಯತೀತಿ ।** ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿರುತ್ತಾರೆ. ಇಲ್ಲಿ ವೃತ್ತಿಕಾರರು **ಯಜ್ಞೇ ಹಿ ಯತ್ ಕಿಂಚಿತ್ ವಿಗತರ್ಧಿಕಂ ಕೃತಂ ಭವತಿ ತದಿಯಂ ಸಮರ್ಧಯತಿ ವಿಶಿಷ್ಟಂ ಹಿ ಯಜ್ಞಸ್ಯ ಸಾಧನ ಮೇತದಿತಿ** ಯಜ್ಞದಲ್ಲಿ ಯಾವುದು ಸಂಪೂರ್ತಿಯಾಗಲು ಸಾಧನವು ನ್ಯೂನವಾಗಿರುವುದೋ ಅದನ್ನು ಇದು ಪೂರ್ಣ ಮಾಡುವುದು. ಆದ್ದರಿಂದ ಇದು ಸಮೃದ್ಧಿಯನ್ನು ಉಂಟುಮಾಡುವುದು. ಆದ್ದರಿಂದ ಯಜ್ಞ ಸಂಪೂರ್ತಿಯ ವಿಷಯದಲ್ಲಿ ಇದು ಸಾಧನವು ಎಂದು ಅರ್ಥವನ್ನು ವಿವರಿಸಿರುತ್ತಾರೆ. ನಿರುಕ್ತದ ಎರಡನೆಯ ವ್ಯಾಖ್ಯಾನದಲ್ಲಿ **ಅಪಿವಾ ಪ್ರದಕ್ಷಿಣಾಗಮನಾತ್‌ದಿಶಮಭಿಪ್ರೇತ್ಯ ದಿಗ್ಘಸ್ತಪ್ರಕೃತಿಃ ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹ ಕರ್ಮಣಃ ।** ದಕ್ಷಿಣ ದಿಕ್ಕೆಂದು ಅರ್ಥವಾಗುತ್ತದೆ. ಇಲ್ಲಿ ವೃತ್ತಿಕಾರರು ಋತ್ವಿಕ್ಕುಗಳೂ ಯಜ್ಞವೇದಿಯಲ್ಲಿ ಪ್ರದಕ್ಷಿಣ ಕ್ರಮದಿಂದ ಸಂಚರಿಸುವ ಕಾರಣ ಮೊದಲು (ದಕ್ಷಿಣಾಭಿಮುಖವಾಗಿ) ದಕ್ಷಿಣದಿಕ್ಕಿಗೆ ಮೊದಲು ಅಭಿಮುಖವಾಗಿ ಸಂಚರಿಸುವರಾದ ಕಾರಣ ದಕ್ಷಿಣಾ ಶಬ್ದಕ್ಕೆ ದಕ್ಷಿಣ ದಿಕ್ಕೆಂದು ಎರಡನೆಯ ಅರ್ಥವನ್ನು ವಿವರಿಸಿರುತ್ತಾರೆ. (ನಿ. ೧-೭)

ನಿರುಕ್ತದ **ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹಕರ್ಮಣಃ** ಎಂಬ ಮೂರನೆಯ ಅರ್ಥದಲ್ಲಿ ಕೆಲಸ ಮಾಡುವಾಗ ಕೆಲಸ ಮಾಡುವವನು ತನ್ನ ಉತ್ಸಾಹವನ್ನು ತೋರಿಸುವದಕ್ಕಾಗಿ ಬಲಗಡೆಯ ಹಸ್ತದಿಂದ ಕಾರ್ಯವನ್ನು ಮಾಡುವನು. ಆದ್ದರಿಂದ **ದಕ್ಷಿಣಾ** ಎಂಬ ಪದಕ್ಕೆ ಬಲಗಡೆಯ ಹಸ್ತವೆಂದು ಅರ್ಥವಾಗುತ್ತದೆ. ಈ ಅರ್ಥವನ್ನು ಅನುಸರಿಸಿಯೇ **ದಾಶತೇರ್ವಾ ಸ್ಯಾದ್ದಾನಕರ್ಮಣಃ** ದಾನಮಾಡುವುದು ಎಂದು ಅರ್ಥವನ್ನು ಬೋಧಿಸುವ ದಾಶೃ ಧಾತುವಿನಿಂದಲೂ **ದಕ್ಷಿಣಾ** ಎಂಬ ಪದವು ನಿಷ್ಪನ್ನವಾಗಿರುವುದು. ದಾನವನ್ನು ಬಲಗಡೆಯ ಹಸ್ತದಿಂದಲೇ ಕೊಡುವರು ಎಂದು ಅರ್ಥವನ್ನು ವಿವರಿಸಿರುವರು. ನಿರುಕ್ತಕಾರರು ಹೇಳಿರುವ ಈ ಮೂರು ವಿಧವಾದ ಅರ್ಥಗಳನ್ನು ಅನುಸರಿಸಿ ಸಾಯಣರು **ಪ್ರವೃದ್ಧಾಯೋಃ** ಅತಿಶಯವನ್ನು ಹೊಂದಿರುವ ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ. (ನಿ. ೧. ೭.)

**ಕೃಷ್ಣಾತ್—ನಿಕೃಷ್ಟ ವರ್ಣಾತ್ ನೈಶಾತ್ ತಮಸಃ** ।(ನಿ. ೧-೭)

ನಿಕೃಷ್ಟ(ಕಪ್ಪು)ವರ್ಣವುಳ್ಳದ್ದಾದ ರಾತ್ರಿಯ ಕತ್ತಲೆಯ ದೆಸೆಯಿಂದ ಎಂದು ಅರ್ಥ. ನಿರುಕ್ತಕಾರರು—

**ರುಶದ್ವತ್ಸಾ ರುಶತೀ ಶ್ವೇತ್ಯಾಗಾದಾರೈಗು ಕೃಷ್ಣಾ ಸದನಾನ್ಯಸ್ಯಾಃ ।**
**ಸಮಾನಬಂಧೂ ಅಮೃತೇ ಅನೂಚೀ ದ್ಯಾವಾ ವರ್ಣಂ ಚರತ ಆಮಿನಾನೇ ॥**

(ಋ. ಸಂ. ೧-೧೧೩-೨)

ಎಂಬ ಋಕ್ಕನ್ನು ಉದಹರಿಸಿ **ಕೃಷ್ಣವರ್ಣಾ ರಾತ್ರಿಃ । ಕೃಷ್ಣಂ ಕೃಷ್ಯತೇರ್ನಿಕೃಷ್ಟೋ ವರ್ಣಃ** (ನಿ. ೨-೨೦) ಕೃಷ್ಣ ಎಂಬ ಪದವು ಕೃಷಧಾತುವಿನಿಂದ ನಿಷ್ಪನ್ನವಾಗಿ ಹೀನವರ್ಣವುಳ್ಳದ್ದೆಂದು ಅರ್ಥವನ್ನು ವಿವರಿಸಿರುವರು.

**ಆರ್ಯಾ — ಅರಣೀಯಾ ಪೂಜನೀಯಾ** — ಪೂಜಿಸಲು ಅರ್ಹವಾದದ್ದೆಂದು ಅರ್ಥ. ಅರ್ಯ ಶಬ್ದವು ನಾಲ್ಕು ಈಶ್ವರನಾಮಗಳಲ್ಲಿ (ನಿ. ೩-೧೧) ಪಠಿತವಾಗಿದೆ. ನಿರುಕ್ತಕಾರರು ಅರ್ಯ ಪದಕ್ಕೆ ಈಶ್ವರನೆಂಬ ಅರ್ಥದಲ್ಲಿ ಪ್ರಯೋಗವನ್ನು ಉದಹರಿಸುವರು. ಆದರೆ ಈಶ್ವರನೆಂಬ ಅರ್ಥವು ಪ್ರಶಂಸೆಗೆ ಅರ್ಹನಾದವನಿಗೆ ಒಪ್ಪುವುದು ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಉದಾಹರಣೆಗೆ—

**ಪ್ರತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಃ ಶಂಸಾಮಿ ವಯುನಾನಿ ವಿದ್ವಾನ್ ।**
**ತಂ ತ್ವಾ ಗೃಣಾಮಿ ತವಸಮತವ್ಯಾನ್ ಕ್ಷಯಂತಮಸ್ಯ ರಜಸಃ ಪರಾಕೇ ॥**

(ಋ. ಸಂ. ೭-೧೦೦-೫)

**ಅರ್ಯೋಽಹಮೀಶ್ವರಃ ಸ್ತೋಮಾನಾಮರ್ಯಸ್ತ್ವಮಸೀತಿ ವಾ** । (ನಿ. ೫-೮) ಇಲ್ಲಿ ವೃತ್ತಿಕಾರರು **ಯಸ್ಮಾದರ್ಯೋಽಹಮಸ್ಮಿ ಈಶ್ವರಃ ಸ್ತುತೀನಾಮುದೀರಣೇ ಯುಷ್ಮದ್ಗುಣಾಭಿಜ್ಞಃ ಅಥವಾ ಅರ್ಯಸ್ತ್ವಮಸಿ ಅರ್ಯ ಈಶ್ವರಃ ಮದನುಗ್ರಹಾಯ ಸಮರ್ಥಃ**—ಸ್ತುತಿಮಾಡಲು ನಿನ್ನ ಗುಣಗಳನ್ನೂ ನಾನು ಚೆನ್ನಾಗಿ ತಿಳಿದು ಇರುವೆನು. ಆದ್ದರಿಂದ ಸ್ತೋತ್ರಾರ್ಹನಾದ ನಿನ್ನನ್ನೂ ಸ್ತುತಿಮಾಡಲು ಸಮರ್ಥನು ಎಂದೂ ಅಥವಾ ನೀನು ಅನುಗ್ರಹವನ್ನು ಮಾಡಲು ಸಮರ್ಥನಾಗಿರುತ್ತೀಯಾದ್ದರಿಂದ (ಅರ್ಯನು) ಪೂಜ್ಯನು ಎಂದೂ ಅರ್ಥವನ್ನು ವಿವರಿಸಿರುತ್ತಾರೆ. ಈ ಋಕ್ಕಿನಲ್ಲಿ ಉಷಸ್ಸೆಂಬ ಪದವು ಇಲ್ಲದಿದ್ದರೂ ಪ್ರಕರಣದಿಂದ ಗಮ್ಯವಾಗಿರುವ ಉಷೋದೇವತೆಯ ಗುಣವನ್ನು ವರ್ಣಿಸುವ ಕಾರಣ **ಆರ್ಯಾ** ಎಂಬ ಪದಕ್ಕೆ ಸಾಯಣರು ಪೂಜನೀಯಾ ಎಂದು ಅರ್ಥವನ್ನು ಉಲ್ಲೇಖ ಮಾಡಿರುವರು.

**ವಿಹಾಯಾಃ — ವಿವಿಧಗಮನಯುಕ್ತಾ ಮಹತೀ ವಾ ।** ಉಷೋದೇವಿಯು ಅನೇಕ ವಿಧವಾಗಿ ಸಂಚಾರಮಾಡುವವಳು ಅಥವಾ ಮಹತ್ತ್ವದಿಂದ ಪೂರಿತಳಾದವಳೆಂದು ಅರ್ಥ. ವಿಹಾಯಾಃ ಎಂಬ ಶಬ್ದವು **ಮಹತ್ ಬ್ರಧ್ನಃ** ಎಂಬಿವೇ ಮೊದಲಾದ ಇಪ್ಪತ್ತೈದು ಮಹನ್ನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. ವಿಹಾಯಾಃ ಎಂಬ ಪದವು ಇದೇ ಅರ್ಥದಲ್ಲಿ ಪ್ರಯೋಗಿಸಿರುವುದನ್ನು ನಿರುಕ್ತಕಾರರು ಉದಹರಿಸಿರುವರು (ನಿ. ೧೦-೨೬) ಉದಾಹರಣೆಗೆ—

**ವಿಶ್ವಕರ್ಮಾ ವಿಮನಾ ಆದ್ವಿಹಾಯಾ ಧಾತಾ ವಿಧಾತಾ ಪರಮೋತ ಸಂದೃಕ್ ।**
**ತೇಷಾಮಿಷ್ಟಾನಿ ಸಮಿಷಾ ಮದಂತಿ ಯತ್ರಾ ಸಪ್ತಋಷೀನ್ ಪರ ಏಕಮಾಹುಃ ॥**

(ಋ. ಸಂ. ೧೦-೮೨-೨)

**ಪರಿ ಸೋಮ ಪ್ರ ಧನ್ವಾ ಸ್ವಸ್ತಯೇ ನೃಭಿಃ ಪುನಾನೋ ಅಭಿ ವಾಸಯಾಶಿರಮ್ ।**
**ಯೇ ತೇ ಮದಾ ಆಹನಸೋ ವಿಹಾಯಸಸ್ತೇಭಿರಿಂದ್ರಂ ಚೋದಯ ದಾತವೇ ಮಘಂ ॥**

(ಋ. ಸಂ. ೯-೭೫-೫)

ಈ ಋಕ್ಕುಗಳಿರುವ **ವಿಹಾಯೋಃ ವಿಹಾಯಸಃ** ಎಂಬ ಪದಗಳಿಗೆ **ಮಹಾಂತಃ** ಮಹತ್ತ್ವ ಪೂರಿತರಾದವರು ಎಂದು ಅರ್ಥವನ್ನು ವೃತ್ತಿಕಾರರು ವಿವರಿಸಿರುತ್ತಾರೆ.

**ಮಾನುಷಾಯ ಕ್ಷಯಾಯ—ಮನುಷ್ಯಾಣಾಂ ನಿವಾಸಾಯ** ಮನುಷ್ಯರು ವಾಸಮಾಡುವುದಕ್ಕಾಗಿ ಎಂದು ಅರ್ಥ.

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ।**
**ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾದ್ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥೇ ॥**

(ಋ. ಸಂ. ೩-೮-೧)

ಈ ಋಕ್ಕಿನಲ್ಲಿರುವ **ಕ್ಷಯ** ಶಬ್ದಕ್ಕೆ **ಕ್ಷಯೋ-ನಿವಾಸಃ** ಎಂದು ನಿರುಕ್ತ ವ್ಯಾಖ್ಯಾನದಲ್ಲಿ ಅರ್ಥವನ್ನು (ನಿ. ೮–೧೮) ವಿವರಿಸಿರುವುದರಿಂದ ಸಾಯಣರೂ ವಾಸಮಾಡುವುದು ಎಂದು ಅರ್ಥವನ್ನು ಹೇಳಿರುತ್ತಾರೆ.

**ಪೃಥುಃ ರಥಃ—ಪೃಥುರ್ವಿಸ್ತೀರ್ಣೋ ರಥಃ**—ದೊಡ್ಡದಾದ ಅಥವಾ ವಿಸ್ತಾರವಾದ ರಥವು—Chariot of massive construction, spacions chariot ಉಷೋದೇವತೆಯ ರಥವು ಅತ್ಯಂತ ದೊಡ್ಡದಾಗಿಯೂ ಸುಖಕರವಾಗಿಯೂ ಇರುವ ವಿಷಯವನ್ನು—

**ವಿಶ್ವಸ್ಯ ಹಿ ಪ್ರಾಣನಂ ಜೀವನಂ ತ್ವೇ ವಿ ಯದುಚ್ಛಸಿ ಸೂನರಿ ।**
**ಸಾ ನೋ ರಥೇನ ಬೃಹತಾ ವಿಭಾವರಿ ಶ್ರುಧಿ ಚಿತ್ರಾಮಘೇ ಹವಂ ॥**

(ಋ. ಸಂ. ೧-೪೮-೧೦)

**ಸುಪೇಶಸಂ ಸುಖಂ ರಥಂ ಯಮಧ್ಯಸ್ಥಾ ಉಷಸ್ತ್ವಂ ।**
**ತೇನಾ ಸುಶ್ರವಸಂ ಜನಂ ಪ್ರಾವಾದ್ಯ ದುಹಿತರ್ದಿವಃ ॥**

(ಋ. ಸಂ. ೧-೪೯-೨)

**ಏಷಾ ಜನಂ ದರ್ಶತಾ ಬೋಧಯಂತೀ ಸುಗಾನ್ ಪಥಃ ಕೃಣ್ವತೀ ಯಾತ್ಯಗ್ರೇ ।**
**ಬೃಹದ್ರಥಾ ಬೃಹತೀ ವಿಶ್ವಮಿನ್ವೋಷಾ ಜ್ಯೋತಿರ್ಯಚ್ಛತ್ಯಗ್ರೇ ಅಹ್ನಾಂ ॥**

(ಋ. ಸಂ.. ೫-೮೦-೨)

**ಪ್ರತಿ ಕೇತವಃ ಪ್ರಥಮಾ ಅದೃಶ್ರನ್ನೂರ್ಧ್ವಾ ಅಸ್ಯಾ ಅಂಜಯೋ ವಿ ಶ್ರಯಂತೇ ।**
**ಉಷೋ ಅರ್ವಾಚಾ ಬೃಹತಾ ರಥೇನ ಜ್ಯೋತಿಷ್ಮತಾ ವಾಮಮಸ್ಮಭ್ಯಂ ವಕ್ಷಿ ॥**

(ಋ. ಸಂ. ೭-೭೮-೧)

ಎಂಬ ಋಕ್ಕುಗಳಲ್ಲಿರುವ ಬೃಹತಾ ರಥೇನ ಇತ್ಯಾದಿ ಶಬ್ದಗಳು ಸಮರ್ಥಿಸುವವು.

**ರಥೋ ಅಯೋಜಿ— ಅಶ್ವೈರ್ಯುಕ್ತಃ ಸಂಸದ್ಧೋsಭೂತ್ ।** ರಥಕ್ಕೆ ಅಶ್ವಗಳನ್ನು ಕಟ್ಟಿ ಸಿದ್ಧಪಡಿಸ ಲ್ಪಟ್ಟಿರುವುದು. ಇಲ್ಲಿ ಅಶ್ವಗಳೆಂದರೆ ಕುದುರೆಗಳಲ್ಲ. ಕೆಂಪುಬಣ್ಣದ ಗೋವುಗಳು (ಅಥವಾ ರಶ್ಮಿಗಳು) ಎಂದು ಯಾಸ್ಕರು ನಿರುಕ್ತದಲ್ಲಿ **ಅರುಣ್ಯೋ ಗಾವ ಉಷಸಃ**—ಉಷಸ್ಸಿನ ರಥಾಶ್ವಗಳೆಂದರೆ ಕೆಂಪುಣ್ಣದ ಗೋವುಗಳೆಂದು ಹೇಳಿರುವರು. (ನಿ. ೨-೨೮)

**ಏವಂ ದೇವಾಸೋ ಅಮೃತಾಸೋ ಅಸ್ಥುಃ**—ಈ ಉಷೋದೇವಿಯ ರಥವನ್ನು ಮರಣರಹಿತರಾದ ದೇವತೆಗಳು ಹತ್ತಿ ಕುಳಿತುಕೊಂಡರು. ದೇವತೆಗಳು ಉಷೋದೇವಿಯ ರಥದಲ್ಲಿ ಕುಳಿತುಕೊಳ್ಳುವುದೆಂದರೆ ಉಷಃಕಾಲ ದಲ್ಲಿ ಯಜ್ಞಾದಿಗಳನ್ನು ಪ್ರಾರಂಭಮಾಡುವ ಯಜಮಾನರು ದೇವತೆಗಳನ್ನು ಆಹ್ವಾನಮಾಡುವುದರಿಂದ ಆ ದೇವತೆ ಗಳು ಉಷೋದೇವತೆಯು ರಥಾರೂಢಳಾದೊಡನೆಯೇ ಎಂದರೆ ಉಷಃಕಾಲದಲ್ಲಿ ಯಜ್ಞವೇದಿಕೆಯನ್ನು ಕುರಿತು ಹೋಗುವರೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅಯೋಜಿ**—ಯುಜಿರ್ ಯೋಗೇ. ಧಾತು. ಕರ್ಮಣಿಯಲ್ಲಿ ಲಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಪರದಲ್ಲಿರುವ ತ ಶಬ್ದಕ್ಕೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವಾಸಃ**—ದಿವು ಧಾತುವಿಗೆ ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ತನ್ನಿಮಿತ್ತವಾಗಿ ಲಘೂಪಧ ಗುಣ. **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

**ಅಮೃತಾಸಃ—**ಮೃಙ್ ಪ್ರಾಣತ್ಯಾಗೇ. ಧಾತು. ಇದಕ್ಕೆ ಕ್ತ ಪ್ರತ್ಯಯ. ನಞ್ ಸಮಾಸವಾದಾಗ **ನಞೋ ಜರಾಮರ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ ಹಿಂದಿನಂತೆ ಅದಕ್ಕೆ ಅಸುಕಾಗಮ.

**ಅಸ್ಥುಃ**—ಷ್ಠಾ ಗತಿನಿವೃತ್ತೌ ಧಾತು. ಲುಙ್ ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ ಚ್ಲಿಗೆ ಸಿಚ್ ಬಂದಾಗ **ಗಾತಿಸ್ಥಾ ಸಿಚಾ**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲುಕ್. **ಆತಃ** (ಪಾ. ಸೂ. ೩-೪-೧೧೦) ಎಂಬುದರಿಂದ ಝಿಗೆ ಜುಸಾದೇಶ. **ಉಸ್ಯಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ. ಅತಿಙಂತದ ಪರದಲ್ಲಿರುವುದರಿಂದರಿಂದ ನಿಘಾತಸ್ವರ ಬರುತ್ತದೆ. ಹೀಗೆಯೇ ಅಸ್ಥಾತ್ ಎಂಬಲ್ಲಿ ಪ್ರಥಮಪುರುಷ ಏಕವಚನರೂಪ.

**ಚಿಕಿತ್ಸಂತೀ—** ಕಿತ ನಿವಾಸೇ ಧಾತು. **ಕಿತೇರ್ವ್ಯಾಧಿಪ್ರತೀಕಾರೇ**(ಪಾ. ಸೂ. ೩-೧-೫—೩)ಎಂಬುದರಿಂದ ಸನ್ ಬರುತ್ತದೆ. ಅದನ್ನು ನಿಮಿತ್ತೀಕರಿಸಿ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. **ಸನಾದ್ಯಂತಾಧಾತವಃ** ಎಂಬುದರಿಂದ ಚಿಕಿತ್ಸ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ ಬಂದಾಗ

ಸ್ತ್ರೀತ್ವದಲ್ಲಿ ಙೀಪ್. ಉಗಿತ್ತಾದುದರಿಂದ ನುಮಾಗನು. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯.) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮಾನುಷಾಯ—ಮನೋರ್ಜಾತಾವಞ್ಯತೌ ಷುಕ್ ಚ** (ಪಾ. ಸೂ. ೪-೧-೧೬೧.) ಎಂಬುದರಿಂದ ಅಞ್ ಪ್ರತ್ಯಯ. ತತ್ಸಂನಿಯೋಗದಿಂದ ಷುಕಾಗಮ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ಕ್ಷಯಾಯ**—ಕ್ಷಿ ನಿವಾಸಗತ್ಯೋಃ, ಧಾತು. **ಅಚೋಯತ್** (ಪಾ. ಸೂ. ೩-೧. ೯೭) ಎಂಬುದರಿಂದ ಯತ್ ಪ್ರತ್ಯಯ **ಯತೋಽನಾವಃ** (ಪಾ. ಸೂ. ೬-೧-೨೧೩) ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಅಯಾದೇಶ. ಚತುರ್ಥೀಏಕವಚನರೂಪ. ॥ ೧ ॥



॥ ಸಂಹಿತಾಪಾಠಃ ॥

ಪೂರ್ವಾ ವಿಶ್ವಸ್ಮಾದ್ಭುವನಾದಬೋಧಿ ಜಯಂತೀ ವಾಜಂ ಬೃಹತೀ ಸನುತ್ರೀ ।
ಉಚ್ಚಾ ವ್ಯಖ್ಯದ್ಯುವತಿಃ ಪುನರ್ಭೂರೋಷಾ ಅಗನ್ಪ್ರಥಮಾ ಪೂರ್ವಹೂತೌ ॥ ೨ ॥

॥ ಪದಪಾಠಃ ॥

ಪೂರ್ವಾ । ವಿಶ್ವಸ್ಮಾತ್ । ಭುವನಾತ್ । ಅಬೋಧಿ । ಜಯಂತೀ । ವಾಜಂ । ಬೃಹತೀ । ಸನುತ್ರೀ । ಉಚ್ಚಾ । ವಿ । ಅಖ್ಯತ್ । ಯುವತಿಃ । ಪುನಃಽಭೂಃ । ಆ । ಉಷಾಃ । ಅಗನ್ । ಪ್ರಥಮಾ । ಪೂರ್ವಽಹೂತೌ ॥ ೨ ॥

॥ ಸಾಯಣಭಾಷ್ಯಂ ॥

**ವಿಶ್ವಸ್ಮಾದ್ಭುವನಾತ್ಸರ್ವಸ್ಮಾತ್ಸೃಷ್ಟಾದ್ಭೂತಜಾತಾತ್ಪೂರ್ವಾ ಪ್ರಥಮಾ ಸತೀಯಮುಷಾ ಅಬೋಧಿ। ಬುದ್ಧಾಭೂತ್। ಉಷಃಕಾಲಮುಪಗತ್ಯ ಹಿ ಪಶ್ಚಾತ್ಸರ್ವೇ ಪ್ರಾಣಿನಃ ಪ್ರತಿಬುಧ್ಯಂತೇ। ಕೀದೃಶೀ ಸಾ।**

ವಾಜಂ ಗಮನಶೀಲಂ ಪ್ರಕಾಶಂ ನಿರ್ವರ್ತ್ಯಾಂಧಕಾರಂ ಜಯಂತೀ ಪರಾಭವಂ ಕುರ್ವತೀ । ಯದ್ವಾ । ವಾಜಶಬ್ದೋಽನ್ನನಾಮಸು ಪಠಿತತ್ವಾದನ್ನ ನಾಮ । ಅನ್ನಂ ವೈ ವಾಜಃ । ಶತ. ೯-೩-೪-೧ । ಇತಿ ಶ್ರುತೇಶ್ಚ । ಯಜಮಾನಾರ್ಥಮನ್ನಂ ಸಂಪಾದಯಂತೀ । ಬೃಹತೀ ಮಹತೀ ಸನುತ್ರೀ ಸರ್ವಂ ಜಗತ್ಸಂಭಜಂತೀ ಧಾತ್ರೀ ವಾ ಪ್ರಕಾಶಸ್ಯ । ಕಿಂಚ ಸೋಷಾ ಉಚ್ಚೋಚ್ಚೈರುನ್ನತಾ ಸತೀ ವ್ಯಖ್ಯತ್ । ವಿಚಷ್ಟೇ । ಸರ್ವಂ ಜಗತ್ಪಶ್ಯತೀತ್ಯರ್ಥಃ । ಕೀದೃಶೀ ಸಾ । ಯುವತಿರ್ಮಿಶ್ರಣಶೀಲಾ ನಿತ್ಯಯೌವನಾ ವಾ ಪುನರ್ಭೂಃ ಪುನಃಪುನರ್ಭವನಶೀಲಾ ಪ್ರತಿದಿನಂ ವರ್ತಮಾನತ್ವಾತ್ । ಸೋಷಾಃ ಪೂರ್ವಹೂತೌ ಸತ್ಯಾಂ ಪ್ರಥಮಾ ಮುಖ್ಯಾ ಪ್ರಕೃಷ್ಟಾ ಸತ್ಯಾಗನ್ । ದೇವಯಜನದೇಶಂ ಪ್ರತ್ಯಾಗಚ್ಛತಿ । ಪ್ರಥಮ ಇತಿ ಮುಖ್ಯನಾಮ ಪ್ರತಮೋ ಭವತೀತಿ ಯಾಸ್ಕಃ । ನಿ. ೨-೨೨ । ಇತರದೇವೇಭ್ಯಃ ಪೂರ್ವಮಾಹೂತಾ ಸತೀ ಶೀಘ್ರಮೇವಾಗಚ್ಛತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಾಜಂ**— ಗಮನಶೀಲವಾದ (ಕಳೆದುಹೋಗುವ ಅಂಧಕಾರವನ್ನು) ಅಥವಾ ಅನ್ನವನ್ನು । **ಜಯಂತೀ**— ಜಯಿಸಿದವಳಾಗಿ (ಯಜಮಾನನಿಗಾಗಿ ಸಂಪಾದಿಸುವವಳಾಗಿ) । **ವಿಶ್ವಸ್ಮಾತ್**—ಸಮಸ್ತವಾದ । **ಭುವನಾತ್**— (ಸುಪ್ತವಾದ) ಪ್ರಪಂಚಕ್ಕಿಂತಲೂ (ಭೂತ ಜಾತಕ್ಕಿಂತಲೂ) । **ಪೂರ್ವಾ**— ಮೊದಲನೆಯವಳಾಗಿ । **ಬೃಹತೀ**— ಮಹಾಮಹಿಮಳೂ । **ಸನುತ್ರೀ**—(ಪ್ರಪಂಚಕ್ಕೆ) ಬೆಳಕನ್ನು ಕೊಡುವವಳೂ (ಆದ) । **ಉಷಾಃ**— ಉಷೋದೇವತೆಯು । **ಅಬೋಧಿ**—ಎಚ್ಚೆತ್ತಳು । (**ಕಿಂಚ**—ಮತ್ತು) **ಯುವತಿಃ**— ನಿತ್ಯತರುಣಿಯೂ । **ಪುನರ್ಭೂಃ**—ಪುನಃ ಪುನಃ ಆವಿರ್ಭವಿಸುವವಳೂ ಆದ (ಆಕೆಯು) । **ಉಚ್ಚಾ**—ಎತ್ತರವಾದ (ಪ್ರದೇಶದಲ್ಲಿರುವವಳಾಗಿ) । **ವಿ ಅಖ್ಯತ್**—(ಪ್ರಪಂಚವನ್ನೆಲ್ಲಾ) ನೋಡುತ್ತಾಳೆ (ಪ್ರಕಾಶಿಸುತ್ತಾಳೆ) । (**ಸಾ**—ಅವಳು) । **ಪೂರ್ವಹೂತೌ**—(ದಿನದ) ಮೊದಲನೆಯ ಪ್ರಾರ್ಥನೆಗೆ । **ಪ್ರಥಮಾ**—(ಎಲ್ಲರಿಗಿಂತ) ಮೊದಲು (ಶ್ರೇಷ್ಠಳಾಗಿ) । **ಆ ಅಗನ್**—(ಯಾಗ ಪ್ರದೇಶಕ್ಕೆ) ಬರುತ್ತಾಳೆ.

॥ ಭಾವಾರ್ಥ ॥

ಕಳೆದುಹೋಗುವ (ಅಶಾಶ್ವತವಾದ) ತಮಸ್ಸನ್ನು ಪರಿಹರಿಸಿ, (ಸಮಸ್ತ ಜಗತ್ತಿಗೂ) ಬೆಳಕನ್ನು ಕೊಡುತ್ತಾ, ಮಹಾಮಹಿಮಳಾದ ಉಷೋದೇವತೆಯು ಪ್ರಪಂಚದಲ್ಲೆಲ್ಲರಿಗೂ ಮೊದಲು ಎಚ್ಚೆತ್ತಳು (ಕಾಣಿಸಿಕೊಂಡಳು.) ಅವಳು ನಿತ್ಯತರುಣಿಯು ಮತ್ತು (ಪ್ರತಿದಿನವೂ) ಉದಯಿಸುವವಳು; ಎತ್ತರವಾದ ಪ್ರದೇಶದಿಂದ ಪ್ರಪಂಚವೆಲ್ಲವನ್ನೂ ನೋಡುತ್ತಾಳೆ (ಬೆಳಕನ್ನು ಕೊಡುತ್ತಾಳೆ); ಯಾಗದಲ್ಲಿ ಪೂರ್ವಹೂತಿಗೆ (ಎಲ್ಲಾ ದೇವತೆಗಳಿಗೂ) ಮೊದಲು ಬರುತ್ತಾಳೆ.

## English Translation.

First of all the world is she awake, triumphing over transitory (darkness): the mighty, the giver (of light) from on high, she beholds (all things): ever youthful, ever reviving, she comes first to the invocation.

॥ ವಿಶೇಷವಿಷಯಗಳು ॥

**ವಿಶ್ವಸ್ಮಾತ್ ಭುವನಾತ್ ಪೂರ್ವಾ ಅಬೋಧಿ—ಸುಪ್ತಾತ್ ಭೂತಜಾತಾತ್ ಇಯಂ ಉಷಾಃ ಪ್ರಥಮಾ ಅಬೋಧಿ। ಉಷಃಕಾಲಮುವಗತ್ಯ ಹಿ ಪಶ್ಚಾತ್ ಸರ್ವೇ ಪ್ರಾಣಿನಃ ಪ್ರತಿಬುಧ್ಯಂತೇ।** ನಿದ್ರೆಯನ್ನು ಮಾಡುತ್ತಿರುವ ಎಲ್ಲಾ ಪ್ರಾಣಿಗಳಿಗಿಂತಲೂ ಮೊದಲು ಈ ಉಷೋದೇವತೆಯು ಏಳುವಳು. ಎಂದರೆ ಉಷಃಕಾಲ ವಾಗುವುದು. ಉಷಃಕಾಲವು ಪ್ರಾಪ್ತವಾದದ್ದನ್ನು ತಿಳಿದು ಎಲ್ಲರೂ ಎಚ್ಚರವಾಗುವರು ಎಂದು ಅರ್ಥ. ಇಲ್ಲಿ ಪೂರ್ವಾ ಎಂಬ ಶಬ್ದಕ್ಕೆ ಪ್ರಥಮಾ ಎಂದು ಅರ್ಥವನ್ನು ಸಾಯಣರು ವಿವರಿಸಿರುತ್ತಾರೆ.

**ವಾಜಂ ಜಯನ್ತೀ—ಗಮನಶೀಲಂ ಪ್ರಕಾಶಂ ನಿರ್ವರ್ತ್ಯ ಅಂಧಕಾರಂ ಪರಾಭವಂ ಕುರ್ವತೀ।** ಉಷೋದೇವತೆಯು ರಾತ್ರಿಯ ಸಂಬಂಧವಾದ ಕಗ್ಗತ್ತಲೆಯನ್ನು ತೊಲಗಿಸಿ ಪ್ರಾಣಿಗಳು ಎಲ್ಲರೂ ಸಂಚರಿಸಲು ಅನುಕೂಲವಾಗಿರುವಂತೆ ಬೆಳಕನ್ನು ಉಂಟುಮಾಡುವಳೆಂದು ಒಂದು ವಿಧವಾದ ಅರ್ಥವು. ಇದರಲ್ಲಿ ವಾಜ ಶಬ್ದಕ್ಕೆ ಸಾಯಣರು ಅಂಧಕಾರವೆಂದು ಅರ್ಥವನ್ನು ವಿವರಿಸಿರುವರು. ಮತ್ತು ಇವರು **ಯದ್ವಾ ವಾಜಶಬ್ದಃ ಅನ್ನನಾಮಸು ಪಠಿತತ್ವಾದನ್ನನಾಮ** ಅಥವಾ **ವಾಜ** ಎಂಬ ಶಬ್ದವು ಅನ್ನನಾಮಗಳಲ್ಲಿಯೂ, (ನಿ. ೩-೯) ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ವಾಜ ಎಂದು ಒಬ್ಬರಾಜನ ಹೆಸರೆಂದೂ (ನಿ. ೧೧-೧೭)ಹವಿಸ್ಸು ಅಥವಾ ಉದಕವೆಂದೂ (ನಿ. ೧೧-೨೭) ಅರ್ಥವನ್ನು ಕೊಡುವುದಾಗಿ ನಿರುಕ್ತಕಾರರು ಪಾಠಮಾಡಿರುವುದರಿಂದಲೂ, **ಅನ್ನಂ ವೈ ವಾಜಃ** (ಶತ. ಬ್ರಾ. ೯-೩-೪-೧) (ತೈ. ಬ್ರಾ. ೧-೩-೬-೨) ಎಂದು ಶ್ರುತಿಗಳಲ್ಲಿ ಅನ್ನಪರವಾದ ಅರ್ಥದಲ್ಲಿ ಪ್ರಯೋಗಿಸಿರುವುದರಿಂದಲೂ, ವಾಜಶಬ್ದಕ್ಕೆ ಅನ್ನವೆಂದು ಅರ್ಥವನ್ನೂ ಹೇಳಿರುವರು. ಇದರಿಂದ **ಯಜಮಾನಾರ್ಥಂ ಅನ್ನಂ ಸಂಪಾದಯಂತೀ** ಯಜ್ಞಮಾಡುವ ಯಜಮಾನರುಗಳಿಗೆ ಉಷೋದೇವತೆಯು ಅನ್ನವನ್ನೂ ಸಂಪಾದಿಸಿಕೊಡುವಳು ಎಂದು ಇನ್ನೊಂದು ವಿಧವಾದ ಅರ್ಥವನ್ನೂ ವಿವರಿಸಿರುತ್ತಾರೆ. ಈ ಪ್ರಕಾರವಾಗಿ ಎರಡು ವಿಧವಾದ ಅರ್ಥವನ್ನೂ ವರ್ಣಿಸಿರುವರು.

**ಬೃಹತೀ ಸನುತ್ರೀ—ಮಹತೀ ಸರ್ವಂ ಜಗತ್ಸಂಭಜಂತೀ ದಾತ್ರೀ ವಾ ಪ್ರಕಾಶಸ್ಯ।** ಲೋಕದಲ್ಲಿರುವ ಎಲ್ಲ ಪ್ರಾಣಿಗಳನ್ನೂ ಅವರವರು ಆಯಾಯ ಕಾರ್ಯಗಳಲ್ಲಿ ನಿರತರಾಗಿರುವ ಹಾಗೆ ಶಿಸ್ತಿನಿಂದ ಇರುವಂತೆ ಉಷೋದೇವಿಯು ನಿಯಮಿಸುವಳು ಅಥವಾ ಲೋಕವೆಲ್ಲಕ್ಕೂ ಅನುಕೂಲಕ್ಕಾಗಿ ಬೆಳಕನ್ನು ಉಂಟುಮಾಡುವ ಮಹತ್ವದಿಂದ ಕೂಡಿರುವವಳು ಎಂದು ಎರಡು ವಿಧವಾದ ಅರ್ಥವನ್ನೂ ವಿವರಿಸಿರುವರು.

ನಿರುಕ್ತಕಾರರು ಬೃಹತೀ ಶಬ್ದವು ಮಹತ್ವಪೂರಿತವಾದದ್ದು ಎಂಬ ಅರ್ಥವನ್ನು ಬೋಧಿಸುವುದು ಎಂದು ವಿವರಿಸಿ.

**ರಮಧ್ವಂ ಮೇ ವಚಸೇ ಸೋಮ್ಯಾಯ ಋತಾವರೀರುಪ ಮುಹೂರ್ತಮೇವೈಃ।**
**ಪ್ರ ಸಿಂಧುಮಚ್ಛಾ ಬೃಹತೀ ಮನೀಷಾವಸ್ಯುರಹ್ವೇ ಕುಶಿಕಸ್ಯ ಸೂನುಃ॥**

(ಋ. ಸಂ. ೩-೩೩-೫)

ಎಂಬ ಋಕ್ಕಿನಲ್ಲಿ **ಬೃಹತ್ಯಾ=ಮಹತ್ಯಾ** ಎಂದು ಅರ್ಥವನ್ನು ಹೇಳಿರುವರು.

**ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।।**
**ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ।।**

(ಋ. ಸಂ. ೧೦-೧೧೦-೬)

ಎಂಬ ಋಕ್ಕಿನಲ್ಲಿಯೂ ಬೃಹತೀ ಶಬ್ದಕ್ಕೆ **ಬೃಹತ್ಯೌ ಮಹತ್ಯೌ** ಎಂದು ಅರ್ಥವನ್ನು ವಿವರಿಸಿರುತ್ತಾರೆ.

**ಪುನರ್ಭೂಃ—ಪುನಃ ಪುನಃ ಭವನಶೀಲಾ ಪ್ರತಿದಿನಂ ವರ್ತಮಾನತ್ವಾತ್ ।** ಉಷಸ್ಸು ಪ್ರತಿದಿನವೂ ಉದಯಿಸುವುದರಿಂದ ಆಯಾಯ ದಿನಗಳಲ್ಲಿ ಬೇರೆಬೇರೆಯಾಗಿ ಸ್ಥಿತಿಯನ್ನು ಹೊಂದಿರುವ ಸ್ವಭಾವವುಳ್ಳದ್ದೆಂದು ಅರ್ಥ.

ಎಂದರೆ ಮತ್ತೆ ಮತ್ತೆ (ಪ್ರತಿದಿನವೂ) ಹುಟ್ಟುತ್ತಲೇ ಇರುವಳು. ಆದುದರಿಂದ ಈ ಉಷೋದೇವತೆಯು ಯಾವಾಗಲೂ ಯುವತಿಯಾಗಿಯೇ ಇರುವಳೆಂದು ಅನೇಕ ಋಕ್ಕುಗಳಲ್ಲಿ ಹೇಳಿದೆ ,

**ಪುನಃಪುನರ್ಜಾಯಮಾನಾ ಪುರಾಣೀ ಸಮಾನಂ ವರ್ಣಮಭಿ ಶುಂಭಮಾನಾ ।**

(ಋ. ಸಂ. ೧-೯೨-೧೦)

ಇತ್ಯಾದಿ ಋಕ್ಕುಗಳಲ್ಲಿ ಉಷೋದೇವತೆಯು ಪುನಃ ಪುನಃ ಉದಯಿಸುವಳೆಂದು ವರ್ಣನೆ ಇದೆ.

**ಪೂರ್ವಹೂತೌ ಸತ್ಯಾಂ ಉಷಾಃ ಪ್ರಥಮಾ—ಮುಖ್ಯಾ ।** ಉಷಸ್ಸಿಗಿಂತಲೂ ಬೇರೆಯಾಗಿರುವ ಇತರ ದೇವತೆಗಳಿಗಿಂತಲೂ ಮೊದಲು ಉಷೋದೇವತೆಯನ್ನು ಯಜ್ಞದಲ್ಲಿ ಹವಿಸ್ಸಿನ ಸ್ವೀಕಾರಕ್ಕಾಗಿ ಆಹ್ವಾನ ಮಾಡಿದಾಗ ಎಲ್ಲಾ ದೇವತೆಗಳಿಗಿಂತಲೂ ಮುಂದುಗಡೆಯಲ್ಲಿ ಯಜ್ಞವು ನಡೆಯುವ ಪ್ರದೇಶಕ್ಕೆ ಉಷೋದೇವಿಯು ಬರುವಳು ಎಂದು ಅರ್ಥ. **ಇತರದೇವೇಭ್ಯಃ ಪೂರ್ವಮಾಹೂತಾ ಸತೀ ಶೀಘ್ರಮೇವಾ ಗಚ್ಛತೀತ್ಯರ್ಥಃ ।** ಎಂದು ಸಾಯಣರ ವಿವರಣೆಯು ಇರುತ್ತದೆ.

ಯಾಸ್ಕರು ಪ್ರಥಮ ಶಬ್ದಕ್ಕೆ ಮುಖ್ಯ ಎಂದು ಅರ್ಥವನ್ನು ಹೇಳಿ—

**ದೇವಾನಾಂ ಮಾನೇ ಪ್ರಥಮಾ ಅತಿಷ್ಠನ್ ಕೃಂತತ್ರಾದೇಷಾಮುಪರಾ ಉದಾಯನ್ ।**
**ತ್ರಯಸ್ತಪಂತಿ ಪೃಥಿವೀಮನೂಪಾ ದ್ವಾ ಬೃಬೂಕಂ ವಹತಃ ಪುರೀಷಂ ।।**

(ಋ. ಸಂ. ೧೦-೨೭-೨೩)

ಎಂಬ ಋಕ್ಕಿನಲ್ಲಿ ಪ್ರಥಮ ಇತಿ ಮುಖ್ಯನಾಮ ಪ್ರತಮೋ ಭವತಿ (ನಿ. ೨. ೨೨.) ಎಂದು ಪ್ರಥಮ ಶಬ್ದಕ್ಕೆ ಮುಖ್ಯಾರ್ಥವನ್ನು ಹೇಳಿರುವರು. ಈ ಋಕ್ಕಿನಲ್ಲಿ ವೃತ್ತಿಕಾರರು ಪ್ರಥಮಾಃ ಎಂಬ ಪದಕ್ಕೆ **ಪ್ರಥಮಾಃ**—ಪ್ರಕೃಷ್ಟತಮಾಃ ಎಂದು ಅರ್ಥಮಾಡಿ ಮುಖ್ಯ ಎಂದು ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಅಬೋಧಿ**—ಬುಧ ಅವಗಮನೇ ಧಾತು. ಲುಙ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. **ದೀಪಜನ ಬುಧಪೂರಿತಾಯಿ**—(ಪಾ. ಸೂ. ೩-೧-೬೧) ಎಂಬುದರಿಂದ ಚ್ಲಿಗೆ ಚಿಣಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿನ

ಲಘೂಪಧೆಗೆ ಗುಣ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಪರದ ತ ಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜಯಂತೀ**—ಜಿ ಜಯೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕ್ಕಿಗೆ ಗುಣ. ಅಯಾದೇಶ. ಸ್ತ್ರೀತ್ವವಿವಕ್ಷಾಮಾಡಿದಾಗ **ಉಗಿತಶ್ಚ**—(ಪಾ. ಸೂ. ೪-೧-೬) ಎಂಬುದರಿಂದ ಙೀಪ್. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಙೀಪ್ ಪಿತ್ತಾದುದರಿಂದ ಅನುದಾತ್ತ.

**ಅಖ್ಯತ್**—ಖ್ಯಾ ಪ್ರಕಥನೇ ಧಾತು. **ಛಂದಸಿಲುಙ್‌ಲಙ್‌ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. **ಅಸ್ಯತಿವಕ್ತಿಖ್ಯಾತಿಭ್ಯೋಽಙ್**—(ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙ್. **ಆತೋಲೋಪಇಟಿಚ**—(ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯುವತಿಃ**—ಯುವನ್ ಶಬ್ದ. ಸ್ತ್ರೀತ್ವ ವಿವಕ್ಷಾ ಮಾಡಿದಾಗ **ಯೂನಸ್ತಿಃ** (ಪಾ. ಸೂ. ೪-೧-೭೭) ಎಂಬುದರಿಂದ ತಿಪ್ರತ್ಯಯ. ಟಿಲೋಪಕ್ಕೆ ಅಪವಾದವಾಗಿ ಪ್ರಕೃತಿಭಾವ ಬರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಗನ್**—ಗಮ್ಲೃ ಗತೌ ಧಾತು. ಹಿಂದಿನಂತೆ ವರ್ತಮಾನಾರ್ಥದಲ್ಲಿ ಲುಙ್. ಛಾಂದಸವಾಗಿ ಧಾತುವಿನ ಮಕಾರಕ್ಕೆ ಲೋಪ. ಪ್ರಥಮಪುರುಷ ಏಕವಚನಕ್ಕೆ ವ್ಯತ್ಯಯದಿಂದ ಬಹುವಚನ ಪ್ರತ್ಯಯ. ತಿಙಂತ ನಿಘಾತಸ್ವರ ಬರುತ್ತದೆ.

**ಪೂರ್ವಹೂತೌ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. **ಸ್ತ್ರಿಯಾಂ ಕ್ತಿನ್**—(ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಧಾತುವಿಗೆ ಸಂಪ್ರಸಾರಣ, ಪೂರ್ವರೂಪ. **ಹಲಃ**—(ಪಾ. ಸೂ. ೬-೪-೨) ಎಂಬುದರಿಂದ ಸಂಪ್ರಸಾರಣಕ್ಕೆ ದೀರ್ಘ. **ತಾದೌ ಚ ನಿತಿ**—(ಪಾ. ಸೂ ೬-೨-೫೦) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ || ೨ ||



॥ ಸಂಹಿತಾಪಾಠಃ ॥

ಯದದ್ಯ ಭಾಗಂ ವಿಭಜಾಸಿ ನೃಭ್ಯ ಉಷೋ ದೇವಿ ಮರ್ತ್ಯತ್ರಾ
ಸುಜಾತೇ ।
ದೇವೋ ನೋ ಅತ್ರ ಸವಿತಾ ದಮೂನಾ ಅನಾಗಸೋ ವೋಚತಿ
ಸೂರ್ಯಾಯ || ೩ ||

॥ ಪದಪಾಠಃ ॥

ಯತ್ । ಅದ್ಯ । ಭಾಗಂ । ವಿಽಭಜಾಸಿ । ನೃಽಭ್ಯಃ । ಉಷಃ । ದೇವಿ । ಮರ್ತ್ಯಽತ್ರಾ । ಸುಽಜಾತೇ ।
ದೇವಃ । ನಃ । ಅತ್ರ । ಸವಿತಾ । ದಮೂನಾಃ । ಅನಾಗಸಃ । ವೋಚತಿ । ಸೂರ್ಯಾಯ ॥ ೩ ॥

॥ ಸಾಯಣಭಾಷ್ಯಂ ॥

**ಸುಜಾತೇ ಶೋಭನಜನನೇ ದೇವಿ ದೇವನಶೀಲೇ ಹೇ ಉಷಃ ಉಷಃಕಾಲಾಭಿಮಾನಿದೇವತೇ ಮರ್ತ್ಯತ್ರಾ ಮನುಷ್ಯಾಣಾಂ ಪಾಲಯಿತ್ರೀ ತ್ವಮದ್ಯಾಸ್ಮಿನ್ಕಾಲೇ ನೃಭ್ಯೋ ಮನುಷ್ಯೇಭ್ಯೋ ಯದ್ಯಂ ಭಾಗಂ ಭಜನೀಯಂ ಸ್ವಕೀಯಪ್ರಕಾಶಸ್ಯಾಂಶಂ ವಿಭಜಾಸಿ ವಿಭಜ್ಯ ದದಾಸಿ । ಯದ್ವಾ । ಮರ್ತ್ಯತ್ರಾ ಮರ್ತ್ಯೇಷು ಮಧ್ಯೇ ನೃಭ್ಯೋ ಯಜಮಾನೇಭ್ಯೋ ದೇವಾನಾಂ ಭಾಗಂ ವಿಭಜ್ಯ ದದಾಸಿ । ಉಷಸಿ ಪ್ರವೃತ್ತಾಯಾಂ ಹವಿಷೋ ದೀಯಮಾನತ್ವಾದುಷಸೋ ದಾತೃತ್ವಮುಪಚರ್ಯತೇ । ಅತ್ರಾಸ್ಮಿನ್ಭಾಗವಿಷಯೇ ದಮೂನಾ ಯಜಮಾನೇಭ್ಯೋಽಭಿಮತಫಲದಾನಮನಾಃ । ದಮೂನಾ ದಮಮನಾ ವಾ ದಾನಮನಾ ವಾ ದಾಂತಮನಾ ವೇತಿ ನಿರುಕ್ತವಚನಂ । ನಿ. ೪-೪ । ತಾದೃಶಃ ಸವಿತಾ ಪ್ರೇರಕೋ ದೇವೋ ನೋಽಸ್ಮಾನನಾಗಸೋ ವೋಚತಿ । ಅಪಾಪಾನ್ ಯಾಗಯೋಗ್ಯಾನ್ಬ್ರವೀತು । ಅನುಗೃಹ್ಣಾತ್ವಿತ್ಯರ್ಥಃ । ಕಿಮರ್ಥಂ । ಸೂರ್ಯಾಯಾಸ್ಮದ್ಯಾಗದೇಶಂ ಪ್ರತಿ ಸೂರ್ಯಸ್ಯಾಗಮನಾರ್ಥಂ ॥**

॥ ಪ್ರತಿಪದಾರ್ಥ ॥

**ಸುಜಾತೇ**—ಶುಭಜನ್ಮವುಳ್ಳವಳೂ । **ದೇವಿ**—ಪ್ರಕಾಶನಸ್ವಭಾವವುಳ್ಳವಳೂ ಆದ । **ಹೇ ಉಷಃ**—ಉಷೋದೇವಿಯೇ । **ಮರ್ತ್ಯತ್ರಾ**—ಮನುಷ್ಯರನ್ನು ರಕ್ಷಿಸುವ (ನೀನು) (ಮನುಷ್ಯರ ಮಧ್ಯದಲ್ಲಿ) । **ಅದ್ಯ**—ಈಗ **ನೃಭ್ಯಃ**—ಮನುಷ್ಯರಿಗೆ (ಯಾಗ ಕರ್ತೃಗಳಾದ ಯಜಮಾನರಿಗೋಸ್ಕರ) । **ಯತ್**—ಯಾವ । **ಭಾಗಂ**—(ನಿನ್ನ) ಪ್ರಕಾಶಭಾಗವನ್ನೂ (ಹವಿರ್ಭಾಗವನ್ನೂ) । **ವಿಭಜಾಸಿ**—ವಿಭಜಿಸಿಕೊಡುತ್ತೀಯೋ (ದೇವತೆಗಳಿಗೆ ಹಂಚಿಕೊಡತೀಯೋ) । **ಅತ್ರ**—ಈ ಭಾಗ ವಿಷಯದಲ್ಲಿ । **ದಮೂನಾಃ**—(ಯಜಮಾನನಿಗೆ ಅಭಿಮತವಾದ) ಅಥವಾ ದಾನದಲ್ಲಿ ಮನಸ್ಸುಳ್ಳ । **ದೇವಃ ಸವಿತಾ**—ಸವಿತೃದೇವನು । **ನಃ**—ನಮ್ಮನ್ನು । **ಅನಾಗಸಃ**—ಪಾಪರಹಿತರು (ಯಾಗಯೋಗ್ಯರು) ಎಂದು । **ಸೂರ್ಯಾಯ**—ಸೂರ್ಯನಿಗೆ (ಯಾಗಗೃಹಕ್ಕೆ ಬರುವುದಕ್ಕೋಸ್ಕರ) । **ವೋಚತಿ**—ಹೇಳುತ್ತಾನೆ ।

॥ ಭಾವಾರ್ಥ ॥

ಶುಭಜನ್ಮಳಾದ ಎಲೈ ಉಷೋದೇವಿಯೇ (ಮನುಷ್ಯರಿಗೆ ರಕ್ಷಕಳಾದ ನೀನು ಮನುಷ್ಯರಿಗೆ ಈಗ ನಿನ್ನ ಪ್ರಕಾಶದ ಯಾವ ಭಾಗವನ್ನು ಹಂಚಿಕೊಡುತ್ತೀಯೋ) ಮನುಷ್ಯರ ಮಧ್ಯದಲ್ಲಿ ಈಗ ಯಜಮಾನರಿಗೋಸ್ಕರ ಹವಿಸ್ಸಿನ ಯಾವ ಭಾಗವನ್ನು (ದೇವತೆಗಳಿಗೆ) ಹಂಚಿಕೊಡುತ್ತೀಯೋ ಆ ಭಾಗದ ವಿಷಯದಲ್ಲಿ (ಯಜಮಾನರಿಗೆ ಅಭಿಮತವಾದ) ದಾನ ಕೊಡಬೇಕೆಂಬ ಮನಸ್ಸುಳ್ಳ ಸವಿತೃದೇವನು ನಮ್ಮನ್ನು ಪಾಪರಹಿತ, (ಯಾಗಯೋಗ್ಯ) ರೆಂದು, ಸೂರ್ಯದೇವನಿಗೆ (ನಮ್ಮ ಯಾಗಗೃಹಕ್ಕೆ ಬರುವುದಕ್ಕೋಸ್ಕರ) ಹೇಳಲಿ.

## English Translation

Well-born and divine Ushas, you are the protectress of mortals; whatever share (of light) you apportion to-day to men, ·may the radiant Savitri be disposed (to confirm) the gift, and declare us free from sin; so that (he) the sun (may come to our sacrificial hall).

॥ ವಿಶೇಷವಿಷಯಗಳು ॥

**ಮರ್ತ್ಯತ್ರಾ ಭಾಗಂ ವಿಭಜಾಸಿ ನೃಭ್ಯಃ—ಮನುಷ್ಯಾಣಾಂ ಪಾಲಯಿತ್ರೀ ತ್ವಂ ಮನುಷ್ಯೇಭ್ಯಃ ಸ್ವಕೀಯಪ್ರಕಾಶಸ್ಯಾಂಶಂ ವಿಭಜ್ಯ ದದಾಸಿ । ಯದ್ವಾ ಮರ್ತ್ಯೇಷು ಮಧ್ಯೇ ಯಜಮಾನೇಭ್ಯಃ ದೇವಾನಾಂ ಭಾಗಂ ವಿಭಜ್ಯ ದದಾಸಿ ।** ಮನುಷ್ಯರನ್ನು ರಕ್ಷಿಸುವ ಉಷೋದೇವತೆಯು ಮನುಷ್ಯರ ಅನುಕೂಲಕ್ಕಾಗಿ ತನ್ನ ಬೆಳಕಿನ ಭಾಗವನ್ನು ಪ್ರತ್ಯೇಕವಾಗಿ ಕೊಡುತ್ತಾಳೆ ಎಂದು ಒಂದು ವಿಧವಾದ ಅರ್ಥವು.

ಮನುಷ್ಯರು ರಕ್ಷಣೆಗೆ ಅರ್ಹರಾದವರು ಆದಾಗ್ಯೂ ಅವರಲ್ಲಿ ಯಜ್ಞಮಾಡುವ ಯಜಮಾನರಿಂದ ದೇವತೆಗಳಿಗೆ ಅವರವರ ಹವಿಸ್ಸಿನ ಭಾಗವನ್ನು ಬೇರೆಬೇರೆಯಾಗಿ ಉಷೋದೇವತೆಯು ಕೊಡಿಸುವಳು ಎಂದು ಇನ್ನೊಂದು ವಿಧವಾದ ಅರ್ಥವು. ಈ ಎರಡುವಿಧವಾದ ಅರ್ಥವನ್ನೂ ಸಾಯಣರು ಭಾಷ್ಯದಲ್ಲಿ ವಿವರಿಸಿರುತ್ತಾರೆ.

ಮೊದಲನೆಯ ಅರ್ಥದಲ್ಲಿ ಮರ್ತ್ಯತ್ರಾ ಎಂಬ ಪದವು ಮನುಷ್ಯರನ್ನು ರಕ್ಷಿಸುವವಳು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿ ಇರುತ್ತದೆ. ಎರಡನೆಯ ಅರ್ಥದಲ್ಲಿ ನೃಭ್ಯಃ ಎಂಬ ಪದವು ಮನುಷ್ಯ ಸಾಮಾನ್ಯವಾಚಕವಾಗಿದ್ದಾಗ್ಯೂ ಯಜ್ಞಮಾಡುವವರು ಎಂಬ ಅರ್ಥವನ್ನು ಬೋಧಿಸುವುದಾಗಿ ಮನುಷ್ಯರಲ್ಲಿ ವಿಶೇಷವನ್ನು ಸೂಚಿಸುವುದಾಗಿ ಇರುತ್ತದೆ.

ದೇವತೆಗಳಿಗೆ ಅಗ್ನಿಯೇ ಹವಿರ್ಭಾಗಗಳನ್ನು ಅವರವರಿಗೆ ಹಂಚಿಕೊಡುವವನು. ಆದರೂ ಉಷೋದೇವತೆಯು ಭಾಗಮಾಡಿ ಕೊಡುವಳೆಂದು ಹೇಳಿರುವುದು ಉಷಃಕಾಲವು ಬಂದವಡನೆಯೇ ಅಗ್ನಿಯಲ್ಲಿ ಹೋಮಮಾಡುವುದರಿಂದ ಉಷಸ್ಸಿಗೆ ಹವಿರ್ದಾತೃತ್ವವು ಔಪಚಾರಿಕವಾಗಿ ಉಂಟಾಗಿರುತ್ತದೆ. **ಉಷಸಿ ಪ್ರವೃತ್ತಾಯಾಂ ಹವಿಷೋ ದೀಯಮಾನತ್ವಾತ್ ಉಷಸೋ ದಾತೃತ್ವಮುಪಚರ್ಯತೇ** ಎಂದು ಸ್ಪಷ್ಟವಾಗಿ ವಿವರಿಸಿರುತ್ತಾರೆ.

**ದಮೂನಾಃ—ಯಜಮಾನೇಭ್ಯಃ ಅಭಿಮತಫಲದಾನಮನಾಃ ।** **ದಮೂನಾ** ಎಂಬ ಪದವು ಯಜ್ಞಮಾಡುವವರಿಗೆ ಇಷ್ಟವಾದ ಫಲವನ್ನು ಅನುಗ್ರಹಿಸುವ ಮನಸ್ಸುಳ್ಳವನು ಎಂದು ಅರ್ಥವನ್ನು ಬೋಧಿಸುತ್ತದೆ. ನಿರುಕ್ತದಲ್ಲಿ ದಮೂನಾ ಎಂಬ ಪದಕ್ಕೆ (ನಿ. ೪-೪) **ದಮಮನಾಃ** ಕ್ರೂರವಾದ ಮನಸ್ಸಿಲ್ಲದವನು, ಅಥವಾ **ದಾನಮನಾಃ** ದಾನಮಾಡಬೇಕೆಂಬ ಮನಸ್ಸುಳ್ಳವನು. ಅಥವಾ **ದಾಂತಮನಾಃ** ಯಮನಿಯಮಾದಿಗಳಿಂದ ಶಾಂತವಾದ ಮನಸುಳ್ಳವನು ಅಥವಾ (ಈ ಪದಾರ್ಥವು) ಈ ಮನೆಯು ನನ್ನದು ಎಂದು ಅಭಿಮಾನವುಳ್ಳವನು ಎಂದು

ನಾಲ್ಕು ವಿಧವಾದ ಅರ್ಥವನ್ನು ವಿವರಿಸಿ **ದಮೂನಾಃ ಗೃಹಪತಿರಗ್ನಿಃ** ಎಂದು ಅಗ್ನಿಗೆ ದಮೂನಾಃ ಎಂಬ ಪದವು ವಿಶೇಷಣವೆಂದು ಹೇಳಿರುವರು. ಇಲ್ಲಿ **ದಮೂನಾಃ ದೇವಃ ಸವಿತಾ** ಎಂದು ಸವಿತೃ ಪದಕ್ಕೆ ವಿಶೇಷಣವನ್ನು ಮಾಡಿರುವುದು ಅಗ್ನಿಗೂ (ಸೂರ್ಯನಿಗೂ) ಸವಿತೃವಿಗೂ ತಾದಾತ್ಮ್ಯವನ್ನು ಬೋಧಿಸುವುದಾಗಿ ಇರುತ್ತದೆ. ಅಥವಾ ಅಗ್ನಿಯಂತೆಯೇ ಸವಿತೃದೇವನೂ ಆಪ್ರಕಾರವಾದ ಮಹಿಮೆಯುಳ್ಳವನೆಂದು ಅಭಿಪ್ರಾಯವನ್ನೂ ಸೂಚಿಸುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ವಿಭಜಾಸಿ**—ಭಜ ಸೇವಾಯಾಂ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಲೇಟೋಽಡಾಟೌ**—(ಪಾ. ಸೂ ೩-೪-೯೪) ಎಂಬುದರಿಂದ ಆಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್, ಶಪ್, ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮರ್ತ್ಯತ್ರಾ**—ಸಪ್ತಮ್ಯರ್ಥ ತೋರುವಾಗ (ಮನುಷ್ಯರ ಮಧ್ಯದಲ್ಲಿ) **ದೇವಮನುಷ್ಯಪುರುಷ**—(ಪಾ.ಸೂ ೫-೪-೫೬)ಎಂಬುದರಿಂದ ತ್ರಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸುಜಾತೇ**—ಶೋಭನಂ ಜಾತಂ ಜನನಂ ಯಸ್ಯಾಃ ಸಾ ಸುಜಾತಾ. ಸಂಬುದ್ಧ್ಯಂತರೂಪ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅನಾಗಸಃ**—ನ ವಿದ್ಯತೇ ಆಗಃ ಯೇಷಾಂ ತೇ ಅನಾಗಸಃ. **ನಲೋಪೋ ನಞಃ**—ಎಂಬುದರಿಂದ ನಞಿನ ನಕಾರಕ್ಕೆ ಲೋಪ ಬಂದಾಗ **ತಸ್ಮಾನ್ನುಡಚಿ**—ಎಂಬುದರಿಂದ ಪರದ ಅಚಿಗೆ ನುಡಾಗಮ. ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ವೋಚತಿ**—ವಚ ಪರಿಭಾಷಣೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಲೇಟೋಽಡಾಟೌ**—(ಪಾ. ಸೂ. ೩-೪-೯೪), ಎಂಬುದರಿಂದ ತಿಪಿಗೆ ಅಡಾಗಮ. ವ್ಯತ್ಯಯದಿಂದ **ವಚ ಉಮ್**—(ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಉಮಾಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಗುಣ. ಅತಿಙಂತಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸೂರ್ಯಾಯ**—ಸೃ ಗತೌ ಧಾತು. ಸರತಿ ಆಕಾಶೇ ಇತಿ ಸೂರ್ಯಃ. **ರಾಜಸೂಯ ಸೂರ್ಯ**—(ಪಾ. ಸೂ. ೩-೧-೧೧೪)ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಇದು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಚತುರ್ಥೀ ವಿಭಕ್ತಿ ಏಕವಚನದಲ್ಲಿ ಸೂರ್ಯಾಯ ಎಂದು ರೂಪವಾಗುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಗೃಹಂಗೃಹಮಹನಾ ಯಾತ್ಯಚ್ಛಾ ದಿವೇದಿವೇ ಅಧಿ ನಾಮಾ ದಧಾನಾ ।
ಸಿಷಾಸಂತೀ ದ್ಯೋತನಾ ಶಶ್ವದಾಗಾದಗ್ರಮಗ್ರಮಿದ್ಭಜತೇ ವಸೂನಾಂ ॥೪॥

॥ ಪದಪಾಠಃ ॥

ಗೃಹಂಽಗೃಹಂ । ಅಹನಾ । ಯಾತಿ । ಅಚ್ಛ । ದಿವೇಽದಿವೇ । ಅಧಿ । ನಾಮ । ದಧಾನಾ ।
ಸಿಸಾಸಂತೀ । ದ್ಯೋತನಾ । ಶಶ್ವತ್ । ಆ । ಅಗಾತ್ । ಅಗ್ರಂಽಅಗ್ರಂ । ಇತ್ । ಭಜತೇ । ವಸು‌ನಾಂ ॥೪॥

॥ ಸಾಯಣಭಾಷ್ಯಂ ॥

ಅಹನಾ । ಉಷೋನಾಮ್ಯೈತತ್ । ಅಹನಾ ದ್ಯೋತನೇತಿ ತನ್ನಾಮಸು ಪಾಠಾತ್ । ಸಾ ದೇವೀ ದಿವೇ ದಿವೇ ಪ್ರತ್ಯಹಂ । ದಿವೇ ದಿವೇ ದ್ಯವಿ ದ್ಯವೀತ್ಯಹರ್ನಾಮಸು ಪಾಠಾತ್ । ಗೃಹಂ ಗೃಹಂ ತತ್ತದ್ಯಜ್ಞ-ಗೃಹಮಚ್ಛಾಭಿಮುಖ್ಯೇನ ಯಾತಿ । ಗಚ್ಛತಿ । ಕೀದೃಶೀ । ಅಧ್ಯಧಿಕಂ ನಾಮ ನಮನಂ ಪ್ರಹ್ವತ್ವಂ ಪ್ರತಿಗೃಹಮುದ್ಯೋಗಂ ಪ್ರಕಾಶನರೂಪಂ ದಧಾನಾ ಧಾರಯಂತೀ। ಯದ್ವಾ । ಅಧಿ ದಧಾನಾಧಿಕಂ ಧಾರಯಂತೀ। ಕಿಂಚ ಸಿಷಾಸಂತೀ ಸಂಭಕ್ತುಮಿಚ್ಛಂತೀ ದ್ಯೋತನಾ ಕೃತ್ಸ್ನಂ ಜಗದ್ದ್ಯೋತನಶೀಲಾ ಶಶ್ವತ್ ಪ್ರತಿದಿನಮಾಗಾತ್ । ಆಗಚ್ಛತಿ । ಪೂರ್ವಂ ಯಾತೀತ್ಯುಕ್ತತ್ವಾತ್ಪುನರಾಗಾದಿತಿ ವಚನ-ನಾವಶ್ಯಕತ್ವದ್ಯೋತನಾರ್ಥಂ । ಆಗತ್ಯ ಚ ವಸೂನಾಂ ಧನಾನಾಂ ಹವಿರ್ಲಕ್ಷಣಾನಾಮಗ್ರಮಗ್ರಮಿತ್ ತತ್ತಚ್ಛ್ರೇಷ್ಠಭಾಗಂ ಭಜತೇ । ಸೇವತೇ । ಸ್ವೀಕರೋತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಹನಾ**—ಉಷೋದೇವಿಯು । **ದಿವೇದಿವೇ**—ಪ್ರತಿದಿವಸವೂ । **ಅಧಿ**—ಹೆಚ್ಚಾಗಿ । **ನಾಮ**—(ಪ್ರಕಾಶನರೂಪ) ಉದ್ಯೋಗವನ್ನು (ಪ್ರಹ್ವತ್ವವನ್ನು) । **ದಧಾನಾ**—ಧರಿಸಿದವಳಾಗಿ । **ಗೃಹಂಗೃಹಂ**—ಪ್ರತಿ ಯಾಗಗೃಹಕ್ಕೂ । **ಅಚ್ಛ ಯಾತಿ**—ಅಭಿಮುಖವಾಗಿ ಹೋಗುತ್ತಾಳೆ। **(ಕಿಂಚ**—ಮತ್ತೂ) । **ಸಿಷಾಸಂತೀ**—ಅನುಗ್ರಹಿಸಲಿಚ್ಛೆಯುಳ್ಳವಳಾಗಿ । **ದ್ಯೋತನಾ**—ಜಗತ್ತನ್ನು ಪ್ರಕಾಶಗೊಳಿಸುತ್ತಾ । **ಶಶ್ವತ್**—ಸರ್ವದಾ (ಪ್ರತಿ ದಿನವೂ) । **ಆಗಾತ್**—ಬರುತ್ತಾಳೆ (ಬಂದು) । **ವಸೂನಾಂ**—ಹವಿರಾದಿಗಳ । **ಅಗ್ರ ಅಗ್ರಂ ಇತ್**—ಆಯಾ ಶ್ರೇಷ್ಠ ಭಾಗಗಳನ್ನೇ । **ಭಜತೇ**—ಸ್ವೀಕರಿಸುತ್ತಾಳೆ.

॥ ಭಾವಾರ್ಥ ॥

ಉಷೋದೇವಿಯು ಪ್ರತಿ ದಿವಸವೂ (ತನ್ನ) ಪ್ರಕಾಶರೂಪ ಉದ್ಯೋಗವನ್ನವಲಂಬಿಸಿ, ಪ್ರತಿ ಯಾಗ ಗೃಹಕ್ಕೂ ಹೋಗುತ್ತಾಳೆ; (ಯಾಗಕರ್ತೃಗಳಿಗೆ) ದಾನಮಾಡಲಿಚ್ಛಿಸಿ ಜಗತ್ತನ್ನು ಪ್ರಕಾಶಗೊಳಿಸುತ್ತಾ (ಪ್ರತಿ ದಿನವೂ) ಶಾಶ್ವತವಾಗಿ ಬರುತ್ತಿರುತ್ತಾಳೆ; (ಬಂದು) (ಅರ್ಪಿತವಾದ) ಹವಿರಾದಿಗಳಲ್ಲಿ ಉತ್ತಮ ಭಾಗವನ್ನೇ ಸ್ವೀಕರಿಸುತ್ತಾಳೆ.

## English Translation.

Ahana, charged with downward-bending (light), goes daily from house to house; she comes, perpetually diffusing light, and desirous of bestowing (benefiits), and accepts the choicest portions of (the sacrificial) treasures.

॥ ವಿಶೇಷವಿಷಯಗಳು ॥

**ಅಹನಾ**—ಉಷೋದೇವತೆಯೆಂದು ಅರ್ಥ. **ವಿಭಾವರೀ, ಸೂನರೀ, ಭಾಸ್ವತೀ,** ಎಂಬ ಹದಿನಾರು ಉಷೋನಾಮಗಳಲ್ಲಿ (ನಿ. ೨-೧೯) **ಅಹನಾ** ಎಂಬ ಪದವೂ ಉಕ್ತವಾಗಿರುತ್ತದೆ. (ಈ ಸೂಕ್ತದ ಪೀಠಿಕೆಯನ್ನು ನೋಡಿ).

**ದಿವೇ ದಿವೇ—ವಸ್ತೋಃ, ದ್ಯೌ, ಭಾನುಃ,** ಎಂಬ ಹನ್ನೆರಡು ಅಹರ್ನಾಮಗಳಲ್ಲಿ ಈ ಪದವು (ನಿ. ೨-೨೧) ಉಕ್ತವಾಗಿ ಇರುವುದರಿಂದ ಪ್ರತಿದಿನವೆಂದು ಅರ್ಥ.

**ಅಚ್ಛ—ಅಚ್ಛಾಭೇರಾಪ್ತುಮಿತಿ ಶಾಕಪೂಣಿಃ** (ನಿ. ೫-೧೮) **ಅಚ್ಛ** ಎಂಬ ಪದವು **ಅಭಿ** ಎಂಬ ಅರ್ಥದಲ್ಲಿಯೂ **ಆಪ್ತುಂ** ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿರುತ್ತದೆ. 'ಎಂದು ಶಾಕಪೂಣಿ ಆಚಾರ್ಯರ ಮತವು. ಸಾಯಣರು ಇಲ್ಲಿ **ಅಚ್ಛ** ಎಂಬ ಪದಕ್ಕೆ ಆಭಿಮುಖ್ಯೇನ—ಎದುರಾಗಿ ಎಂದು ಅರ್ಥ. **ಗೃಹಂ ಗೃಹಂ ಅಚ್ಛ ಯೊತಿ** ಆಯಾಯ ಯಜ್ಞಗೃಹಗಳನ್ನು ಉಷೋದೇವತೆಯು ಪ್ರಸನ್ನತೆಯಿಂದ ಪ್ರವೇಶಿಸುವಳೆಂದು ಅರ್ಥ.

**ಅಧಿ ನಾಮ ದಧಾನಾ**—ಎಂಬ ಈ ವಾಕ್ಯದಲ್ಲಿ ಸಾಯಣರು **ಅಧಿಕಂ ನಮನಂ ಪ್ರಹ್ವತ್ವಂ ಉದ್ಯೋಗಂ ಪ್ರಕಾಶನ ರೂಪಂ ಪ್ರತಿಗೃಹಂ ದಧಾನಾ** ಉಷೋದೇವಿಯು ಪ್ರತಿಯೊಂದು ಮನೆಯಲ್ಲಿಯೂ ತನ್ನ ಅತಿಶಯವಾದ ಪ್ರಕಾಶವನ್ನು ಬೀರುತ್ತಿರುವಳು ಎಂದು ಒಂದು ವಿಧವಾಗಿಯೂ, ಅಥವಾ **ಅಧಿ ದಧಾನಾ ಅಧಿಕಂ ದಧಾನಾ** ಅತಿಶಯವಾಗಿ ಪ್ರಕಾಶವನ್ನು ಧರಿಸಿರುವಳು ಎಂದು ಇನ್ನೊಂದು ವಿಧವಾಗಿಯೂ ಒಟ್ಟು ಎರಡು ವಿಧವಾದ ಅರ್ಥವನ್ನು ವಿವರಿಸಿರುತ್ತಾರೆ.

**ಗೃಹಂಗೃಹಂ ಅಹನಾ ಯೊತಿ**—ಉಷಸ್ಸು ಪ್ರತಿ ಗೃಹದಲ್ಲಿಯೂ ಪ್ರಕಾಶಿಸುತ್ತಿರುವಳು ಎಂದು ಹೇಳಿ **ಶಶ್ವತ್ ಅಗಾತ್** ಪ್ರತಿದಿನವೂ ಬರುತ್ತದೆ ಎಂದು ಪುನಃ ಹೇಳುವುದರಿಂದ ಉಷಸ್ಸಿನ ಆಗಮನದ ಆವಶ್ಯಕತೆಯು ತೋರುತ್ತದೆ.

**ವಸೂನಾಂ ಅಗ್ರಮಗ್ರಮಿತ್ ಭಜತೇ—ಧನಾನಾಂ ಹವಿರ್ಲಕ್ಷಣಾನಾಂ ತತ್ತಚ್ಛ್ರೇಷ್ಠಭಾಗಂ ಸ್ವೀಕರೋತೀತ್ಯರ್ಥಃ** । ಉಷೋದೇವತೆಯು, ಯಜ್ಞಮಾಡುವ ಯಜಮಾನರು ಅರ್ಪಿಸುವ ಹವಿಸ್ಸಿನ ರೂಪವಾದ ಆಯಾಯ ಶ್ರೇಷ್ಠವಾದ ಭಾಗಗಳನ್ನು ಸ್ವೀಕರಿಸುವಳು ಎಂದು ಅರ್ಥ. **ವಸು** ಶಬ್ದವು ಅನೇಕಾರ್ಥಗಳನ್ನು ಬೋಧಿಸುವುದಾಗಿ ಇರುತ್ತದೆ. ಈ ಶಬ್ದವು (ನಿ. ೨-೧೫) ರಲ್ಲಿ ರಶ್ಮಿನಾಮಗಳಲ್ಲಿಯೂ, **ಮಘಂ ರೇಕ್ಣಃ** ಎಂಬ ಧನನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ.

**ಸುಗುರಸತ್ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇಂದ್ರೋ ದಧಾತಿ ।**
**ಯಸ್ತ್ವಾ ಯಂತಂ ವಸುನಾ ಪ್ರಾತರಿತ್ವೋ ಮುಕ್ಷೀಜಯೇವ ಪದಿಮುತ್ಸಿನಾತಿ ॥**

(ಋ. ಸಂ. ೧-೧೨೫-೨)

ಈ ಋಕ್ಕಿನಲ್ಲಿ **ವಸುನಾ ಅನ್ನೇನ** ಎಂದು ವಸು ಶಬ್ದಕ್ಕೆ ಅನ್ನವೆಂದು ಅರ್ಥ.

**ದೇವೀ ಜೋಷ್ಟ್ರೀ ವಸುಧಿತೀ ಯಯೋರನ್ಯಾಘಾದ್ವೇಷಾಂಸಿ ಯೂಯಾವದನ್ಯಾವಕ್ಷದ್ವಸು ವಾರ್ಯಾಣಿ ಯಜಮಾನಾಯ ವಸುವನೇ ವಸುಧೇಯಸ್ಯ ವೀತಾಂ ಯಜ ॥**

(ವಾ. ಸಂ. ೨೮-೧೫)

ಈ ಪ್ರೈಷದಲ್ಲಿ ಉಕ್ತವಾಗಿರುವ ವಸುಶಬ್ದಕ್ಕೆ ಧನ ಮತ್ತು ಅನ್ನ ಎಂದು ಎರಡು ವಿಧವಾದ ಅರ್ಥವೂ ಉಕ್ತವಾಗಿರುತ್ತದೆ.

**ಸುಗಾವೋ ದೇವಾಃ ಸುಪಥಾ ಅಕರ್ಮ ಯ ಆಜಗ್ಮುಃ ಸವನಮಿದಂ ಜುಷಾಣಾಃ ।**
**ಜಕ್ಷಿವಾಂಸಃ ಪಪಿವಾಂಸಶ್ಚ ವಿಶ್ವೇಽಸ್ಮೇ ಧತ್ತ ವಸವೋ ವಸೂನಿ ॥**

(ಯ. ವಾ. ಸಂ. ೮-೧೮)

ಇಲ್ಲಿ ವಸು ಶಬ್ದವು ಧನ ಮತ್ತು ಅನ್ನ ಎಂಬ ಅರ್ಥವನ್ನು ಬೋಧಿಸುವುದಾಗಿರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಗೃಹಂಗೃಹಂ—ನಿತ್ಯ ವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ವೀಪ್ಸಾರ್ಥತೋರುವಾಗ ದ್ವಿರ್ವಚನ ಬರುತ್ತದೆ. **ತಸ್ಯ ಪರಮಾಮ್ರೇಡಿತಮ್**—ಸೂತ್ರದಿಂದ ದ್ವಿರುಕ್ತವಾದುದರಲ್ಲಿ ಪರಕ್ಕೆ ಆಮ್ರೇಡಿತಸಂಜ್ಞೆ ಇರುವಾಗ **ಅನುದಾತ್ತಂ ಚ**—(ಪಾ. ಸೂ. ೮-೧-೩) ಎಂಬುದರಿಂದ ಅದಕ್ಕೆ ಸರ್ವಾನುದಾತ್ತಸ್ವರ ಬರುತ್ತದೆ. ಹೀಗೆಯೇ ಮುಂದೆ ದಿವೇ ದಿವೇ, ಅಗ್ರಮಗ್ರಮ್ ಎಂಬಲ್ಲಿಯೂ ದ್ವಿತ್ವ, ಸ್ವರ ಬರುತ್ತದೆ.

**ಯಾತಿ**—ಯಾ ಪ್ರಾಪಣೇ ಧಾತು. ಅದಾದಿ, ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅಚ್ಛ—ನಿಪಾತಸ್ಯ ಚ**—(ಪಾ. ಸೂ. ೬-೩.೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ದಧಾನಾ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶ್ಲು ವಿಕರಣ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ, ಜಸ್ತ್ವ. ಸ್ತ್ರೀತ್ವದಲ್ಲಿ ಟಾಪ್. **ಅಭ್ಯಸ್ತಾನಾಮಾದಿಃ**—(ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಿಸಾಸಂತೀ—**ವನ ಷಣ ಸಂಭಕ್ತೌ ಧಾತು. **ಧಾತ್ವಾದೇಃ ಷಃ ಸಃ**—ಎಂಬುದರಿಂದ ಆದಿಗೆ ಸತ್ವ. ಇಚ್ಛಾರ್ಥದಲ್ಲಿ ಸನ್. **ಸನ್ಯಙೋಃ**—ಎಂಬುದರಿಂದ ಧಾತುವಿಗೆ ದ್ವಿತ್ವ. ಹಲಾದಿಶೇಷ. **ಸನ್ಯತಃ**—(ಪಾ. ಸೂ

೭-೪-೭೯) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಆದೇಶಪ್ರತ್ಯಯಯೋಃ**—(ಪಾ. ಸೂ.೮-೩-೫೯) ಎಂಬುದರಿಂದ ಧಾತು ಸಕಾರಕ್ಕೆ ಷತ್ವ. **ಸನೀವಂತರ್ಧ**—(ಪಾ. ಸೂ. ೭-೨-೪೯) ಎಂಬುದರಿಂದ ವಿಕಲ್ಪವೆಂಬುದರಿಂದ ಇಡಾಗಮ ಬರುವುದಿಲ್ಲ. **ಜನಸನಖನಾಂಸನ್‌ಝಲೋಃ**—(ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿನ ನಕಾರಕ್ಕೆ ಆತ್ವ. ಸನ್ನಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಕರ್ತ್ರರ್ಥದಲ್ಲಿ ಶಪ್. ಉಗಿತ್ತಾದುದರಿಂದ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. **ಶ್ಯಪ್‌ಶ್ಯನೋರ್ನಿತ್ಯಂ**—(ಪಾ. ಸೂ. ೭-೧-೮೧) ಎಂಬುದರಿಂದ ನುಮಾಗಮ. ಶಪ್, ಙೀಪ್ ಪಿತ್ತಾದುದರಿಂದಲೂ, ಶತೃ ಲಸಾರ್ವಧಾತಕತ್ವ ನಿಬಂಧನವಾಗಿ ಅನುದಾತ್ತವಾಗುವುದರಿಂದ ಸನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಬರುವ ಆದ್ಯುದಾತ್ತ ಸ್ವರವೇ ಉಳಿಯುತ್ತದೆ.

**ಆಗಾತ್**—ಇಣ್ ಗತೌ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. **ಇಣೋ ಗಾ ಲುಙಿ**—(ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. ಚ್ಲಿಗೆ ಸಿಚ್ ಬಂದಾಗ **ಗಾತಿಸ್ಥಾಘು**—(ಪಾ.ಸೂ. ೨-೪-೭೭) ಎಂಬುದರಿಂದ ಲುಕ್. ಅಂಗಕ್ಕೆ ಅಡಾಗಮ. ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭಜತೇ**—ಭಜ ಸೇವಾಯಾಂ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ಭಗಸ್ಯ ಸ್ವಸಾ ವರುಣಸ್ಯ ಜಾಮಿರುಷಃ ಸೂನೃತೇ ಪ್ರಥಮಾ ಜರಸ್ವ ।
ಪಶ್ಚಾ ಸ ದಧ್ಯಾ ಯೋ ಅಘಸ್ಯ ಧಾತಾ ಜಯೇಮ ತಂ ದಕ್ಷಿಣಯಾ
ರಥೇನ ॥ ೫ ॥

॥ ಪದಪಾಠಃ ॥

ಭಗಸ್ಯ । ಸ್ವಸಾ । ವರುಣಸ್ಯ । ಜಾಮಿಃ । ಉಷಃ । ಸೂನೃತೇ । ಪ್ರಥಮಾ । ಜರಸ್ವ ।
ಪಶ್ಚಾ । ಸಃ । ದಧ್ಯಾಃ । ಯಃ । ಅಘಸ್ಯ । ಧಾತಾ । ಜಯೇಮ । ತಂ । ದಕ್ಷಿಣಯಾ । ರಥೇನ ॥ ೫ ॥

॥ ಸಾಯಣಭಾಷ್ಯಂ ॥

**ಸೂನೃತೇ ಸುಷ್ಠು ಮನುಷ್ಯಾಣಾಂ ನೇತ್ರ್ಯುಷೋ ಹೇ ಉಷೋ ದೇವತೇ ಭಗಸ್ಯ ಸರ್ವೈರ್ಭಜನೀಯಸ್ಯಾದಿತ್ಯಸ್ಯ ಸ್ವಸಾಸಿ । ಸ್ವಸೃಸ್ಥಾನೀಯಾಸಿ । ತೇನ ಸಹೋತ್ಪದ್ಯಮಾನತ್ವಾತ್ತದ್ವತ್ಪೂಜ್ಯೇತ್ಯರ್ಥಃ । ತಥಾ ವರುಣಸ್ಯ ತಮೋವಾರಕಸ್ಯ ಸವಿತುರ್ದೇವಸ್ಯ ಜಾಮಿರಸಿ । ಭಗಿನೀಸ್ಥಾನೀಯಾಸಿ । ಏಕಸ್ಮಿನ್ನೇವ ಸ್ಥಾನ ಉತ್ಪದ್ಯಮಾನತ್ವಾತ್ । ಜನಯಂತ್ಯತ್ಯಾಪದಯಂತ್ಯಸ್ಯಾಮಪತ್ಯಮನ್ಯ ಇತಿ ಜಾಮಿಃ । ಯದ್ವಾ । ಜಮತಿ ಗಚ್ಛತಿ ಸ್ವೋತ್ಪತ್ತಿಸ್ಥಾನಾದನ್ಯತ್ರೇತಿ । ಉಕ್ತನಿರ್ವಚನದ್ವಯಮಭಿಪ್ರೇತ್ಯ ಯಾಸ್ಕ ಆಹ । ನ ಜಾಮಯೇ ಭಗಿನ್ಯೈ ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ ಜಮತೇರ್ವಾ. ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ । ನಿ. ೩-೬ । ಇತಿ । ತಾದೃಶೀ ತ್ವಂ ಪ್ರಥಮೇತರದೇವೇಭ್ಯಃ ಪೂರ್ವೋತ್ಕೃಷ್ಟಾ ವಾ ಸತೀ ಜರಸ್ವ । ಸ್ತುತಾ ಭವ । ಜರತಿಃ ಸ್ತುತ್ಯರ್ಥಃ । ಜರಾ ಸ್ತುತಿರ್ಜರತೇಃ ಸ್ತುತಿಕರ್ಮಣಃ । ನಿ. ೧೦-೮ । ಇತಿ ಯಾಸ್ಕಃ । ಪಶ್ಚಾ ಪಶ್ಚಾತ್ತ್ವತ್ಪ್ರೀತ್ಯನಂತರಂ ಯೋಽಘಸ್ಯ ಧಾತಾ ಯಃ ಕಶ್ಚಿದ್ದುಃಖಸ್ಯ ತದುತ್ಪಾದಕಪಾಪಸ್ಯ ವಾ ಧಾರಯಿತಾಸ್ತಿ ಸ ದಧ್ಯಾಃ । ಗಚ್ಛತು । ವಚನವ್ಯತ್ಯಯಃ । ದಧ್ಯತಿರ್ಗತ್ಯರ್ಥಃ । ದಧ್ಯತಿ ದಭ್ನೋತೀತಿ ಗತ್ಯರ್ಥೇಷು ಪಾಠಾತ್ । ಯದಿ ಸ ಪಾಪೀ ಬಲೀಯಾನ್ ತಂ ದಕ್ಷಿಣಯಾ ಪ್ರವೃದ್ಧಯಾ ಸಹಾಯಭೂತಯಾ ತ್ವಯಾ ರಥೇನಾಸ್ಮದೀಯರಥಾದಿಸಾಧನೇನ ಚ ಜಯೇಮ ॥**

॥ ಪ್ರತಿಪದಾರ್ಥ ॥

**ಸೂನೃತೇ**—(ಮನುಷ್ಯರನ್ನು) ಉತ್ತಮಮಾರ್ಗದಲ್ಲಿ ನಡಸುವವಳಾದ । **ಉಷಃ**—ಎಲೈ ಉಷೋದೇವತೆಯೇ (ನೀನು) । **ಭಗಸ್ಯ**—(ಸರ್ವರಿಂದಲೂ) ಭಜನೀಯನಾದ ಆದಿತ್ಯನ । **ಸ್ವಸಾ**—ತಂಗಿಯು (ಆಗಿದ್ದೀ)। (**ತಥಾ**–ಹಾಗೆಯೇ) । **ವರುಣಸ್ಯ**—ತಮಃ ಪರಿಹಾರಕನಾದ (ಸವಿತೃದೇವನ) । **ಜಾಮಿಃ**—ಭಗಿನಿಯು (ಆಗಿದ್ದಿ)। (ಅಂಥಾ ನೀನು) । **ಪ್ರಥಮಾ**—ಇತರ ದೇವತೆಗಳಿಗಿಂತ ಮೊದಲು (ಉತ್ಕೃಷ್ಟಳಾಗಿ) । **ಜರಸ್ವ**—(ನಮ್ಮಿಂದ) ಸ್ತುತಳಾಗು । **ಪಶ್ಚಾ**—(ಪ್ರೀತಳಾದ) ನಂತರ । **ಯಃ**—ಯಾವನು । **ಅಘಸ್ಯ**—ದುಃಖದ ಅಥವಾ ದುಃಖ ಕಾರಣವಾದ ಪಾಪದ । **ಧಾತಾ**—ಆಶ್ರಯನೋ । **ಸಃ**—ಅವನು । **ದಧ್ಯಾಃ**—(ಇಲ್ಲಿಂದ ಹೊರಡಲಿ । **ತಂ**—ಅವನನ್ನು । **ದಕ್ಷಿಣಯಾ**—ದಕ್ಷಳಾದ ನಿನ್ನಿಂದ (ನಿನ್ನ ಸಹಾಯದಿಂದ) । **ರಥೇನ**—(ನಮ್ಮ) ರಥದಿಂದ । **ಜಯೇಮ**—ಜಯಿಸೋಣ ।

॥ ಭಾವಾರ್ಥ ॥

ಉತ್ತಮನೇತ್ರಿಯಾದ ಎಲೈ ಉಷೋದೇವತೆಯೇ ನೀನು ಸರ್ವರಿಂದಲೂ ಭಜನೀಯನಾದ ಆದಿತ್ಯನ ಭಗಿನಿಯು ; ಮತ್ತು ತಮೋನಿವಾರಕನಾದ ಸವಿತೃವಿನ ಸೋದರಿಯು, ಎಲ್ಲ ದೇವತೆಗಳಿಗಿಂತ ಉತ್ಕೃಷ್ಟಳಾದ ನಿನ್ನನ್ನು ಮೊದಲು (ನಾವು) ಸ್ತುತಿಸುತ್ತೇವೆ ; ನಮ್ಮ ಸ್ತುತಿಯಿಂದ ಪ್ರೀತಳಾಗಿ) ದುಃಖಕಾರಕರನ್ನು (ಇಲ್ಲಿಂದ) ಓಡಿಸು ; ನಿನ್ನ ಸಹಾಯಯುಕ್ತರಾಗಿ ನಾವು (ನಮ್ಮ) ರಥಗಳಿಂದಲೂ ಅವನನ್ನು ಜಯಿಸುತ್ತೇವೆ.

## English Translation.

Ushas, endowed with truth, you are the sister of Bhaga, the sister of Varuna, you are hymned first (of the gods): then let the worker of iniquity depart, for we shall overcome him with our chariot, through your assistance.

॥ ವಿಶೇಷವಿಷಯಗಳು ॥

**ಭಗಸ್ಯ ಸ್ವಸಾ—ಸರ್ವೈಃ ಭಜನೀಯಸ್ಯ ಆದಿತ್ಯಸ್ಯ ಸ್ವಸಾ ಸ್ವಸೃಸ್ಥಾನೀಯಾ ಅಸಿ ।** ಉಷೋದೇವತೆಯು ಎಲ್ಲರಿಂದಲೂ ಪೂಜಿಸಲ್ಪಡುವ (ಆದಿತ್ಯ)ಸೂರ್ಯನ ಸ್ವಸೃ(ತಂಗಿ)ವಾಗಿರುವಳು. ಆದಿತ್ಯನ ಸಂಗಡ ಉದಯವನ್ನು ಹೊಂದಿರುವ ಕಾರಣ ಆದಿತ್ಯನಂತೆಯೇ ಮಾಹಾತ್ಮ್ಯವುಳ್ಳವಳಾಗಿ ಪೂಜೆಗೆ ಅರ್ಹಳಾಗಿರುವಳು. ಎಂದು ಅರ್ಥ. ಭಗಶಬ್ದವು ನಾನಾರ್ಥಗಳನ್ನೂ ಹೊಂದಿರುವುದು.

**ಭಗ** ಶಬ್ದವು (ನಿ. ೧-೭) "**ನೂನಂ ಸಾ ತೇ**" ಎಂಬ ಋಕ್ಕಿನಲ್ಲಿ (ಋ. ಸಂ. ೨-೧೧-೨೧) ಧನವಾಚಕವಾಗಿಯೂ (ನಿ. ೩-೯)ರಲ್ಲಿಯೂ ಧನ ಎಂಬರ್ಥವನ್ನು ಬೋಧಿಸುವುದಾಗಿಯೂ ಇರುತ್ತದೆ.

**ವಾಮಂವಾಮಂ ತ ಆದುರೇ ದೇವೋ ದದಾತ್ವರ್ಯಮಾ ।**
**ವಾಮಂ ಪೂಷಾ ವಾಮಂ ಭಗೋ ವಾಮಂ ದೇವಃ ಕರೂಳತೀ ॥**

(ಋ. ಸಂ. ೪-೩೦-೨೪)

ಎಂಬಲ್ಲಿ ಭಗಶಬ್ದವು ಆದಿತ್ಯರಲ್ಲಿ ಒಬ್ಬನಾಗಿರುವ ದೇವ ವಾಚಕವಾಗಿಯೂ,

**ಶ್ರದ್ಧಯಾಗ್ನಿಸ್ಸಮಿಧ್ಯತೇ ಶ್ರದ್ಧಯಾ ಹೂಯತೇ ಹವಿಃ ।**
**ಶ್ರದ್ಧಾಂ ಭಗಸ್ಯ ಮೂರ್ಧನಿ ವಚಸಾ ವೇದಯಾಮಸಿ ॥**

(ಋ. ಸಂ. ೧೦-೧೫೧-೧)

ಇಲ್ಲಿ **ಭಗಸ್ಯ ಭಾಗಧೇಯಸ್ಯ ಧರ್ಮಸ್ಯ** ಎಂದು ವೃತ್ತಿಕಾರರು ವ್ಯಾಖ್ಯಾನ ಮಾಡಿರುವುದರಿಂದ ಭಗ ಶಬ್ದಕ್ಕೆ ಧರ್ಮವೆಂಬ ಅರ್ಥದಲ್ಲಿಯೂ,

**ಪ್ರಾತರ್ಜಿತಂ ಭಗಮುಗ್ರಂ ಹುವೇಮ ವಯಂ ಪುತ್ರಮದಿತೇರ್ಯೋ ವಿಧರ್ತಾ ।**
**ಆಧ್ರಶ್ಚಿದ್ಯಂ ಮನ್ಯಮಾನಸ್ತುರಶ್ಚಿದ್ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ ॥**

(ಋ. ಸಂ. ೭-೪೧-೨)

ಎಂಬ ಋಕ್ಕಿನಲ್ಲಿ ಸೂರ್ಯವಾಚಕವಾಗಿಯೂ ಪ್ರಯುಕ್ತವಾಗಿರುತ್ತದೆ.

**ವರುಣಸ್ಯ ಜಾಮಿಃ—ತಮೋ ವಾರಕಸ್ಯ ಸವಿತುರ್ದೇವಸ್ಯ ಭಗಿನೀಸ್ಥಾನೀಯಾಸಿ । ಜನಯಂತ್ಯುತ್ಪಾದಯಂತಿ ಅಸ್ಯಾಮಪತ್ಯಂ ಅನ್ಯೇ ಇತಿ ಜಾಮಿಃ । ಯದ್ವಾ ಜಮತಿ ಗಚ್ಛತಿ ಸ್ವೋತ್ಪತ್ತಿಸ್ಥಾನಾದನ್ಯತ್ರ ಇತಿ ಜಾಮಿಃ ।** ಕತ್ತಲೆಯನ್ನು ನಾಶಪಡಿಸುವ ಸವಿತೃದೇವನಿಗೆ ಉಷೋದೇವಿಯು ಸೋದರಿಯಾಗಿರುವಳು.

ಸವಿತೃದೇವನಿಗೂ ಉಷೋದೇವಿಗೂ ಉತ್ಪತ್ತಿಸ್ಥಾನವು ಒಂದೇ ಆಗಿರುವುದರಿಂದ ಈ ಪ್ರಕಾರವಾದ ವ್ಯಪದೇಶವು ಇರುವುದೆಂದು ಸಾಯಣರು ವಿವರಿಸಿದ್ದಾರೆ. ಗಮನ ಎಂಬ ಅರ್ಥವುಳ್ಳ ಜಮ್ ಧಾತುವಿನಿಂದಲೂ ಉತ್ಪತ್ತಿ ಎಂಬ ಅರ್ಥವುಳ್ಳ ಜನ ಧಾತುವಿನಿಂದಲೂ ಜಾಮಿ ಶಬ್ದದ ರೂಪವು ನಿಷ್ಪನ್ನವಾಗಿರುತ್ತದೆ. ಈ ಸ್ತ್ರೀಯಲ್ಲಿ ಮಕ್ಕಳು ಉತ್ಪನ್ನವಾಗುವುದರಿಂದ ಜಾಮಿ ಎಂಬುದಾಗಿ ಒಂದು ಅರ್ಥವನ್ನು ವಿವರಿಸಿ ಅಥವಾ ತಾನು ಉತ್ಪನ್ನವಾದ ಪ್ರದೇಶದಿಂದ ಬೇರೆ (ಮನೆಯನ್ನು) ಕುಲವನ್ನು ಈ ಸ್ತ್ರೀಯು ಸೇರುವ ಕಾರಣ ಜಾಮಿ ಎಂಮ ಹೆಸರನ್ನು ಹೊಂದುವಳು ಎಂದು ಇನ್ನೊಂದು ವಿಧವಾದ ಅರ್ಥವನ್ನೂ ವರ್ಣಿಸಿರುವರು. ಈ ಪ್ರಕಾರವಾದ ಎರಡು ಅರ್ಥಗಳನ್ನೂ ಯಾಸ್ಕರು ಹೇಳಿರುವರು.

**ನ ಜಾಮಯೇ ಭಗಿನ್ಯೈ । ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ ॥**

(ನಿ. ೩-೬)

ಹೆಣ್ಣುಮಕ್ಕಳು ದಾಯಭಾಗಕ್ಕೆ ಅರ್ಹರಾಗಿರುವುದಿಲ್ಲ. ಇವರು ಮಕ್ಕಳುಗಳನ್ನು ಪೋಷಿಸಿ ಪತಿಗೆ ಒಪ್ಪಿಸುವರಾದ್ದರಿಂದ ತಂದೆಯ ಆಸ್ತಿಯಲ್ಲಿ ಭಾಗಕ್ಕೆ ಅರ್ಹರಲ್ಲವು. **ಜಾಮಿಃ** ಎಂಬುವ ಶಬ್ದಾರ್ಥವು ಭಗಿನೀ ಎಂಬುವುದಾಗಿ ಪ್ರಸಿದ್ಧವಾಗಿರುತ್ತದೆ ಅಥವಾ ಗಮನಾರ್ಥವಾದ ಜಮ ಧಾತುವಿನಿಂದ ನಿಷ್ಪನ್ನವಾದ ಜಾಮಿಶಬ್ದವು ಉತ್ಪನ್ನವಾದ ವಂಶದಿಂದ ಬೇರೆಯ ವಂಶವನ್ನು ಸೇರುವವಳು ಎಂಬ ಅರ್ಥವನ್ನೂ ಬೋಧಿಸುವುದು ಎಂದು ನಿರುಕ್ತಕಾರರ ಅಭಿಪ್ರಾಯಕ್ಕೆ ಅನುಗುಣವಾದ ಎರಡು ಅರ್ಥಗಳನ್ನೂ ಸಾಯಣರು ವಿವರಿಸಿರುತ್ತಾರೆ.

**ಪ್ರಥಮಾ ಜರಸ್ವ—ಇತರದೇವೇಭ್ಯಃ ಪೂರ್ವಾ ಉತ್ಕೃಷ್ಟಾ ವಾ ಸತೀ ಸ್ತುತಾ ಭವ ।** ಉಷೋದೇವತೆಯು ಇತರ ದೇವತೆಗಳಿಗಿಂತಲೂ ಮೊದಲು ಯಜ್ಞದಲ್ಲಿ ಸ್ತುತಳಾಗುವಳು ಅಥವಾ ಇತರ ದೇವತೆಗಳು ಎಲ್ಲರಿಗಿಂತಲೂ ಮುಖ್ಯಳಾಗಿ ಸ್ತುತಿಸಲ್ಪಡುವಳು ಎಂದು ಎರಡು ವಿಧವಾದ ಅರ್ಥವನ್ನೂ ಸಾಯಣರು ವಿವರಿಸಿದ್ದಾರೆ.

ಯಾಸ್ಕರು **ಜರಾಃ ಸ್ತುತಿಃ ಜರತೇಃ ಸ್ತುತಿಕರ್ಮಣಃ** (ನಿ. ೧೦-೮) ಎಂದು ವಿವರಿಸಿ ಜರಾ ಶಬ್ದಕ್ಕೆ ಸ್ತುತಿ ಎಂದು ಅರ್ಥವು. **ಜರತೇ** ಎಂಬ ಶಬ್ದವು ಅರ್ಚತಿ ಕರ್ಮಗಳಲ್ಲಿ (ನಿ. ೩-೧೯) ಉಕ್ತವಾಗಿರುವುದರಿಂದ ಸ್ತುತಿ ಎಂಬ ಅರ್ಥವನ್ನು ಜರತಿ ಎಂಬ ಕ್ರಿಯಾಪದದಿಂದ ಬೋಧಿಸುವ ಕಾರಣದಿಂದ **ಜರತಿಃ ಸ್ತುತ್ಯರ್ಥಃ** ಎಂದು ಸಾಯಣರ ವಿವರಣೆಯು ಇರುತ್ತದೆ.

**ಯಃ ಅಘಸ್ಯ ಧಾತಾ ಸಃ ಪದ್ಯಾಃ ಯಃ ಕಶ್ಚಿದ್ದುಃಖಸ್ಯ ತದುತ್ಪಾದಕಪಾಪಸ್ಯ ವಾ ಧಾರಯಿತಾ ಸಃ ಗಚ್ಛತು ।** ದುಃಖವುಳ್ಳವನೂ ದುಃಖವನ್ನು ಉಂಟುಮಾಡುವ ಪಾಪವನ್ನು ಹೊಂದಿರುವವನೂ (ಉಷೋದೇವತೆಯ ಪ್ರೀತಿಯು ಉಂಟಾದನಂದರ) ನಮ್ಮಿಂದ ಜಯಿಸಲ್ಪಟ್ಟು ಹೋಗಲಿ ಎಂದು ಪ್ರಾರ್ಥನೆಯು ವಿವೃತವಾಗಿರುತ್ತದೆ.

**ಪದ್ಯಾಃ**—ಯಾಸ್ಕರು **ಪದ್ಯತಿ, ಪಭ್ನೋತಿ** (ನಿ. ೩-೯) ಎಂದು ಗತಿಕರ್ಮಕ ಧಾತುಗಳಲ್ಲಿ ಪಾಠಮಾಡಿರುವುದರಿಂದ ಇಲ್ಲಿ **ಪದ್ಯಾಃ** ಎಂಬ ಪದಕ್ಕೆ **ಗಚ್ಛತು** ಎಂದು ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜಾಮಿಃ**—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಬಹುಲಗ್ರಹಣದಿಂದ ಔಣಾದಿಕ ಇಪ್ರತ್ಯಯ. ವ್ಯತ್ಯಯದಿಂದ ನಕಾರಕ್ಕೆ ಮತ್ವ. ಜನಯಂತಿ ಅಸ್ಯಾಮಪತ್ಯಮನ್ಯೇ ಇತಿ ಜಾಮಿಃ ಅಥವಾ ಜಮತಿ ಗಚ್ಛತಿ ಸ್ವೋತ್ಪತ್ತಿಸ್ಥಾನಾತ್ ಅನ್ಯತ್ರ ಇತಿ ಜಾಮಿಃ. ಹೀಗೆ ಅರ್ಥ ವಿವಕ್ಷಾಮಾಡಿದಾಗ ಜಮು ಅದನೇ ಧಾತು. ಇದಕ್ಕೆ ಹಿಂದಿನಂತೆ ಇಪ್ರತ್ಯಯ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ.

**ಸೂನೃತೇ**—ಊನ ಪರಿಹಾಣೇ ಧಾತು. ಸುತರಾಂ ಊನಯತಿ ಅಪ್ರಿಯಮ್ ಇತಿ ಸೂನ್. ಸಾ ಚಾಸೌ ಋತಾ ಸತ್ಯಾ ಚೇತಿ ಸೂನೃತಾ ಪ್ರಿಯಸತ್ಯಾ ವಾಕ್. ಸಂಬುದ್ಧಿಯಲ್ಲಿ ಸೂನೃತೇ ಎಂದು ರೂಪವಾಗುತ್ತದೆ. **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಜರಸ್ವ**—ಜ್ಯೂಷ್ ವಯೋಹಾನೌ ಧಾತು. ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲೋಟ್ ಮಧ್ಯಮ ಪುರುಷ ಏಕವಚನ ರೂಪ. ವ್ಯತ್ಯಯದಿಂದ ಕರ್ಮಣಿಯಲ್ಲಿ ಯಗಾದಿಗಳು ಬರುವುದಿಲ್ಲ. **ಸೆನಾಭ್ಯಾಂ ಪಾಮ್ಮೌ**—ಎಂಬುದರಿಂದ ಏತ್ವಕ್ಕೆ ನತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪಶ್ಚಾ—ಪಶ್ಚಾತ್** (ಪಾ. ಸೂ. ೫-೩-೩೨) ಎಂಬುದರಿಂದ ಅಪರ ಶಬ್ದಕ್ಕೆ ಪಶ್ಚಭಾವವೂ ಅಸ್ತಾತಿ ವಿಷಯದಲ್ಲಿ ಆತಿ ಪ್ರತ್ಯಯವೂ ನಿಪಾತಿತವಾಗಿದೆ. ಛಾಂದಸವಾಗಿ ಅಂತ್ಯ ತಕಾರಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ದಧ್ಯಾಃ**—ದಧ್ಯತಿ ದಭ್ನೋತಿ (ನಿರು. ೨-೧೪-೬೧)ಎಂದು ನಿರುಕ್ತದಲ್ಲಿ ಗತ್ಯರ್ಥಮಧ್ಯದಲ್ಲಿ ಪಾಠಮಾಡಿರುವುದರಿಂದ ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಿಙ್ ಮಧ್ಯಮಪುರುಷ ಏಕವಚನದಲ್ಲಿ **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫)ಎಂಬುದರಿಂದ ಮಧ್ಯಮಪುರುಷ ಏಕವಚನ ಪ್ರತ್ಯಯ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಧಾತಾ**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ. ಪ್ರಥಮಾಏಕವಚನಾಂತರೂಪ.

**ಜಯೇಮ**—ಜಿ ಜಯೇ ಧಾತು. ವಿಧಿಲಿಙ್ ಉತ್ತಮಪುರುಷಬಹುವಚನದಲ್ಲಿ ಜಯೇಮ ಎಂದು ರೂಪವಾಗುತ್ತದೆ. ಯಃ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ನಿಷೇಧ ಬರುವುದರಿಂದ ಪ್ರತ್ಯಯವು ಲಸಾರ್ವಧಾತುಕವಾದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ದಕ್ಷಿಣಯಾ**—ದಕ್ಷ ವೃದ್ಧೌ ಧಾತು. **ದ್ರುದಕ್ಷಿಭ್ಯಾಮಿನನ್**—(ಉ. ಸೂ. ೨-೨೦೮)ಎಂಬುದರಿಂದ ಇದಕ್ಕೆ ಇನನ್ ಪ್ರತ್ಯಯ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್. ಪ್ರತ್ಯಯವು ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭)ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತ ರೂಪ. ॥ ೫ ॥

॥ ಸಂಹಿತಾಪಾಠಃ ॥

ಉದೀರತಾಂ ಸೂನೃತಾ ಉತ್ಪುರಂಧೀರುದಗ್ನಯಃ ಶುಶುಚಾನಾಸೋ ಅಸ್ಥುಃ ।
ಸ್ಪಾರ್ಹಾ ವಸೂನಿ ತಮಸಾಪಗೂಳ್ಹಾವಿಷ್ಕೃಣ್ವಂತ್ಯುಷಸೋ ವಿಭಾತೀಃ ॥ ೬ ॥

॥ ಪದಪಾಠಃ ॥

ಉತ್ । ಈರತಾಂ । ಸೂನೃತಾಃ । ಉತ್ । ಪುರಂऽಧೀಃ । ಉತ್ । ಅಗ್ನಯಃ । ಶುಶುಚಾನಾಸಃ । ಅಸ್ಥುರಿತಿ ।
ಸ್ಪಾರ್ಹಾ । ವಸೂನಿ । ತಮಸಾ । ಅಪऽಗೂಳ್ಹಾ । ಆವಿಃ । ಕೃಣ್ವಂತಿ । ಉಷಸಃ । ವಿऽಭಾತೀಃ ॥ ೬ ॥

॥ ಸಾಯಣಭಾಷ್ಯಂ ॥

ಸೂನೃತಾಃ ಪ್ರಿಯಸತ್ಯಾತ್ಮಿಕಾ ವಾಚ ಉದೀರತಾಂ । ಉದ್ಗಚ್ಛಂತು । ಹೇ ಋತ್ವಿಜಃ ಉತ್ಕೃಷ್ಟಂ ಯಥಾ ಭವತಿ ತಥಾ ಸ್ತೋತ್ರಂ ಪ್ರವರ್ತಯಧ್ವಂ । ತಥಾ ಪುರಂಧೀಃ ಪುರಂಧಯಃ । ಪುರಂ ಶರೀರಂ ಯಾಸು ಧೀಯತೇ ಯಾಭಿರ್ವಾ ತಾಃ ಪುರಂಧಯಃ ಪ್ರಜ್ಞಾಃ ಪ್ರಯೋಗವಿಷಯಾಃ । ತಾ ಅಪ್ಯುನ್ನಿಷಂತು । ಪ್ರಜ್ಞೋಪಲಕ್ಷಿತಾನಿ ಕರ್ಮಾಣಿ ಪ್ರವರ್ತಂತಾಮಿತ್ಯರ್ಥಃ । ಯದ್ಯಪಿ ಪ್ರಾಣವಾಯುನಾ ಶರೀರಂ ಧಾರ್ಯತೇ ತಥಾಪಿ 'ಯೋ ವೈ ಪ್ರಾಣಃ ಸಾ ಪ್ರಜ್ಞಾ ಯಾ ವಾ ಪ್ರಜ್ಞಾ ಸ ಪ್ರಾಣ ಇತಿ ಶ್ರುತೇಃ ಪ್ರಾಣಪ್ರಜ್ಞಯೋರೇಕತ್ವಾತ್ಪ್ರಜ್ಞಾಯಾಃ ಶರೀರಧಾರಣಮವಿರುದ್ಧಂ । ತಥಾಗ್ನಯ ಆಹವನೀಯಾದ್ಯಾಃ ಶುಶುಚಾನಾಸೋऽತ್ಯಂತಂ ದೀಪ್ಯಮಾನಾ ಉದಸ್ಥುಃ । ಉತ್ತಿಷ್ಠಂತು । ಪ್ರಜ್ವಲಯಂತ್ವಿತ್ಯರ್ಥಃ । ಕಿಮರ್ಥಮೇವಮಿತಿ ತದುಚ್ಯತೇ । ಯತೋ ವಿಭಾತೀರ್ವಿವಿಧಂ ಭಾಸಮಾನಾ ಉಷಸ ಉಷೋದೇವತಾಸ್ತಮಸಾಪಗೂಳ್ಹಾನ್ಯಂಧಕಾರೇಣಾತ್ಯಂತಂ ಗೋಪಿತಾನಿ ಸ್ಪಾರ್ಹಾ ಸ್ಪೃಹಣೀಯಾನಿ ವಸೂನಿ ವಾಸಯೋಗ್ಯಾನಿ ಯಜ್ಞಸಾಧನಭೂತಹವಿರಾದೀನ್ಯಾವಿಷ್ಕೃಣ್ವಂತಿ ಯಥಾವಸ್ತು ಪ್ರಕಟೀಕುರ್ವಂತಿ । ತಸ್ಮಾತ್ಸ್ತೋತ್ರಾದಿಕಂ ಕುರ್ವಂತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಿಭಾತೀಃ**—ನಾನಾರೂಪವಾಗಿ ಪ್ರಕಾಶಿಸುತ್ತಿರುವ । **ಉಷಸಃ**—ಉಷೋದೇವತೆಗಳು । **ತಮಸಾ**—ಅಂಧಕಾರದಿಂದ । **ಅಪಗೂಳ್ಹಾ**—ಚೆನ್ನಾಗಿ ಮುಚ್ಚಿಡಲ್ಪಟ್ಟಿರುವುವೂ । **ಸ್ಪಾರ್ಹಾ**—ಇಚ್ಛಾಯೋಗ್ಯಗಳೂ ಆದ । **ವಸೂನಿ**—ವಾಸ ಯೋಗ್ಯವಾದ ಗೃಹಗಳನ್ನೂ (ಹವಿರಾದಿಗಳನ್ನೂ) । **ಆವಿಃ ಕೃಣ್ವಂತಿ**—ಪ್ರಕಟಿಸುತ್ತಾರೆ । (ಆದ್ದರಿಂದ) **ಸೂನೃತಾಃ**—ಪ್ರಿಯವಾದ ಮತ್ತು ಸತ್ಯವಾದ (ಸ್ತುತಿ) ವಾಕ್ಯಗಳು । **ಉತ್ ಈರತಾಂ**—

ಉಚ್ಚರಿಸಲ್ಪಡಲಿ । **ಪುರಂಧೀಃ**—(ಪ್ರಯೋಗಸಂಬಂಧವಾದ) ಜ್ಞಾನವಿಶಿಷ್ಟ ಕರ್ಮಗಳು । **ಉತ್**—ಪ್ರಾರಂಭಿಸಲ್ಪಡಲಿ (ಮತ್ತು) । **ಅಗ್ನಯಃ**—(ಆವಹನೀಯಾದಿ) ಅಗ್ನಿಗಳು । **ಶುಶುಚಾನಾಸಃ**—ದೇದೀಪ್ಯಮಾನವಾಗಿ । **ಉತ್ ಅಸ್ಥುಃ**—ಪ್ರಜ್ವಲಿಸಲಿ।

॥ ಭಾವಾರ್ಥ ॥

ನಾನಾರೂಪಳಾದ ಉಷೋದೇವತೆಯು ಉದಿಸಿದರೆ, ಅಂಧಕಾರದಿಂದ (ಕಣ್ಣಿಗೆ ಕಾಣದೇ) ಮುಚ್ಚಿಡಲ್ಪಟ್ಟಿದ್ದ, (ನಮಗೆ) ಬಹಳ ಅಪೇಕ್ಷ್ಯವಾದ ಗೃಹಗಳು ಅಥವಾ ಹವಿರಾದಿ ಪದಾರ್ಥಗಳು ಪ್ರಕಟವಾಗುತ್ತವೆ; (ಆದುದರಿಂದ) ಎಲೈ ಋತ್ವಿಜರೇ (ಆ ವೇಳೆಗೆ) ಉತ್ತಮವಾದ ಸ್ತುತಿರೂಪವಾಕ್ಯಗಳನ್ನು ಘಟ್ಟಿಯಾಗಿ ಉಚ್ಚರಿಸಿ; (ಪ್ರಯೋಗಜ್ಞಾನದ ಫಲವಾದ) ಕರ್ಮಗಳನ್ನು ಆರಂಭಿಸಿ; (ಆಹವನೀಯಾದಿ) ಅಗ್ನಿಗಳನ್ನು ದೇದೀಪ್ಯಮಾನವಾಗುವಂತೆ ಪ್ರಜ್ವಲಿಸಿ.

## English Translation.

Let words of truth be spoken : let works of wisdom (be performed) : let the blazing fires rise up, so that the many radiant Ushas may make manifest the desirable treasures hidden by the darkness.

॥ ವಿಶೇಷವಿಷಯಗಳು ॥

**ಸೂನೃತಾಃ—ಪ್ರಿಯಸತ್ಯಾತ್ಮಿಕಾಃ ವಾಚಃ** ಯಾಸ್ಕರು ಸೂನೃತಾ ಪದವನ್ನು (ನಿ. ೨-೧೯) ಉಷೋವಾಚಕಗಳಲ್ಲಿಯೂ, ಮತ್ತು ಅನ್ನ ನಾಮಗಳಲ್ಲಿಯೂ (ನಿ. ೩-೯) ಪಾಠಮಾಡಿರುತ್ತಾರೆ. ಸಾಯಣರು ಮಾತ್ರ ಇದಕ್ಕೆ ಹಿತಕರವಾಗಿಯೂ ಸತ್ಯವಾಗಿಯೂ ಇರುವ ವಾಕ್ಕೆಂಬದಾಗಿ ಬೇರೆಯ ಅರ್ಥದಲ್ಲಿ ಪ್ರಯುಕ್ತವಾಗಿದೆಯೆಂದು ಅರ್ಥವನ್ನು ವಿವರಿಸಿದ್ದಾರೆ. ಇದರಿಂದ ಋತ್ವಿಜರು ದೇವತೆಗಳಿಗೆ ಸಂತೋಷವನ್ನು ಉಂಟುಮಾಡುವಂತೆ ಇರುವ ಮಿಗಿಲಾದ ಅರ್ಥವನ್ನು ಕೊಡುವ ಸ್ತೋತ್ರಗಳನ್ನು ಪಠಿಸಲಿ ಎಂದು ಅಭಿಪ್ರಾಯವು.

**ಪುರಂಧೀಃ ಉನ್ಮಿಷಂತು—ಪುರಂ ಶರೀರಂ ಯಾಸು ಧೀಯತೇ ಯಾಭಿರ್ವಾ ತಾಃ ಪುರಂಧಯಃ ಪ್ರಜ್ಞಾಃ ಪ್ರಯೋಗವಿಷಯಾಸ್ತಾ ಅಪಿ ಉನ್ಮಿಷಂತು । ಪ್ರಜ್ಞೋಪಲಕ್ಷಿತಾನಿ ಕರ್ಮಾಣಿ ಪ್ರವರ್ತಂತಾಮಿತ್ಯರ್ಥಃ ।** ಪುರಶಬ್ದವು ಶರೀರ ಎಂದು ಅರ್ಥವನ್ನು ಬೋಧಿಸುವುದು, ಶರೀರವನ್ನು ಸರಿಯಾಗಿರುವಂತೆ ಇರಿಸಿಕೊಳ್ಳುವ ಪ್ರಜ್ಞೆಯು ಎಂದು ಪುರಂಧಿ ಶಬ್ದಕ್ಕೆ ಅರ್ಥವು. ಪರಿಶುದ್ಧವಾದ ಜ್ಞಾನದಿಂದ (ಕೂಡಿರುವ) ಅಥವಾ ಆಚರಿಸಲ್ಪಡುವ ಕರ್ಮಗಳು ಪ್ರವೃತ್ತವಾಗಲಿ ಎಂದು ಅರ್ಥ.

ಕೌಷೀತಕೀ ಉಪನಿಷತ್ತಿನಲ್ಲಿ **ಯೋ ವೈ ಪ್ರಾಣಃ ಸಾ ಪ್ರಜ್ಞಾ ಯಾ ವಾ ಪ್ರಜ್ಞಾ ಸ ಪ್ರಾಣಃ** (ಕೌ. ಉ. ೩-೩.) ಎಂದು ಉಕ್ತವಾಗಿರುತ್ತದೆ. ಈ ವಾಕ್ಯದಿಂದ ಪ್ರಾಣವಾಯುವಿಗೂ ಪ್ರಜ್ಞೆಗೂ (ಏಕತ್ವ) ಅಭೇದವನ್ನು ಹೇಳಿರುತ್ತದೆ ಪ್ರಾಣವಾಯುವೇ ಶರೀರವನ್ನು ಧರಿಸಿ ಇರುವುದು. ಆದರೆ ಪ್ರಜ್ಞೆಯು ಶರೀರವನ್ನು ಧರಿಸಿರುವಂತೆ ಇಲ್ಲಿ ಉಕ್ತವಾಗಿರುವುದು ಎಂದು ವಿರೋಧವು ತೋರುವುದು. ಇದು ಪ್ರಾಣಪ್ರಜ್ಞೆಗಳಿಗೆ ಇರುವ ಅಭೇದವನ್ನು ಹೇಳುವುದರಿಂದ ಪರಿಹಾರವಾಗುತ್ತದೆ.

ಭಾಷ್ಯದಲ್ಲಿ **ಯದ್ಯಪಿ ಪ್ರಾಣವಾಯುನಾ ಶರೀರಂ ಧಾರ್ಯತೇ ತದಾಪಿ ಪ್ರಾಣಪ್ರಜ್ಞಯೋರೇಕತ್ವಾತ್ ಪ್ರಜ್ಞಾಯಾಃ ಶರೀರಧಾರಣಮವಿರುದ್ಧಂ** ಎಂದು ವಿರೋಧಪರಿಹಾರವಾಗುವ ಕ್ರಮವನ್ನು ವಿವರಿಸಿ, ಪುರಂಧಿ ಶಬ್ದಕ್ಕೆ (ಪ್ರಜ್ಞೆಯಿಂದ ಕೂಡಿರುವ ಕರ್ಮಗಳು) ಪ್ರಜ್ಞೆಗಳು ಎಂದು ಅರ್ಥವನ್ನು ಸಾಯಣರು ವಿವರಿಸಿದ್ದಾರೆ.

ಯಾಸ್ಕರು **ಪುರಂಧಿ, ಪುರಂಧೀ** ಎಂದು ಎರಡು ಶಬ್ದಗಳನ್ನು ಪಾಠಮಾಡಿ, ಅವುಗಳ ಅರ್ಥಭೇದವನ್ನು ತೋರಿಸಿರುವರು. **ಪುರಂಧೀ** ಶಬ್ದವು (ನಿ. ೩-೨೨) ದ್ಯಾವಾಪೃಥಿವೀವಾಚಕವಾಗಿರುತ್ತದೆ.

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।**
**ತಾಁ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ।**

(ಋ. ಸಂ. ೭-೩೯-೪)

**ಪುರಂಧಿರ್ಬಹುಧೀಸ್ತತ್ಕಃ, ಪುರಂಧಿರ್ಭಗಃ, ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ । ಇಂದ್ರ ಇತ್ಯಪರಂ, ಸ ಬಹುಕರ್ಮತಮಃ, ಪುರಾಂ ಚ ದಾರಯಿತೃತಮಃ, ವರುಣ ಇತ್ಯಪರಂ ।**

(ನಿ. ೬-೧೩)

ಎಂದು ಹೇಳಿರುವರು. ವೃತ್ತಿಕಾರರಾದ ದುರ್ಗಾಚಾರ್ಯರು—ಪುರಂಧಿ ಶಬ್ದಕ್ಕೆ ಭಗನೆಂಬ ದೇವತೆಯೆಂದು ಅರ್ಥ ಎಂದು ಒಂದು ಮತವು. ಧೀ ಶಬ್ದಕ್ಕೆ ಕರ್ಮವೆಂದು ಅರ್ಥವಾಗುವುದರಿಂದ ಬಹಳ ಸಾಹಸ ಕರ್ಮಗಳನ್ನು ಆಚರಿಸುವವನಾದಕಾರಣ ಇಂದ್ರನೆಂದು ಅರ್ಥ ಎಂದು ಇನ್ನೂ ಕೆಲವರ ಮತವು. ಅಥವಾ ಮೇಘಗಳನ್ನೂ, ಶತ್ರುಪಟ್ಟಣಗಳನ್ನೂ ನಾಶಮಾಡುವುದರಿಂದಲೂ ಪುರಂಧಿ ಶಬ್ದವು ಇಂದ್ರನೆಂಬ ಅರ್ಥವನ್ನು ಬೋಧಿಸುವುದು ಎಂದು ಕೆಲವರ ಮತವು

**ಇಮಾಮೂ ನು ಕವಿತಮಸ್ಯ ಮಾಯಾಂ ಮಹೀಂ ದೇವಸ್ಯ ನಕಿರಾ ದಧರ್ಷ ।**
**ಏಕಂ ಯದುದ್ನಾ ನ ಪೃಣಂತ್ಯೇನೀರಾಸಿಂಚಂತೀರವನಯಃ ಸಮುದ್ರಂ ॥**

(ಋ. ಸಂ. ೫-೮೫-೬)

ಈ ಋಕ್ಕಿನಲ್ಲಿ ಮಂತ್ರದೃಕ್ಕಾದ ಋಷಿಯು ವರುಣನನ್ನು ಸ್ತುತಿಸಿರುವನು । **ಧೀರಿತಿ ಪ್ರಜ್ಞಾನಾಮ ಸಾ ಯಸ್ಯ ಪೂರ್ವೀ ಬಹ್ವೀ ಸ ಪುರಂಧಿಃ । ವರುಣಶ್ಚ ಪ್ರಜ್ಞಯಾ ಸ್ತೂಯತೇ ತಸ್ಮಾತ್ ವರುಣಃ ಪುರಂಧಿಃ ।** ಎಂದು ವೃತ್ತಿಕಾರರ ವ್ಯಾಖ್ಯಾನದಲ್ಲಿ ಧೀ ಶಬ್ದವು ಪ್ರಜ್ಞಾವಾಚಕವಾಗಿಯೂ, ಬಹಳ ಪ್ರಜ್ಞೆಯಿಂದ ಸ್ತುತಿಸಲ್ಪಡುವವನಾದಕಾರಣ ವರುಣನು ಪುರಂಧಿ ಶಬ್ದಕ್ಕೆ ಅರ್ಥವೆಂದೂ ಹೇಳಿರುವುದರಿಂದ ಇದು ಒಂದು ಮತವು.

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾಁ ಅಯುತಂ ಚ ಸಾಕಂ ।**
**ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥**

(ಋ. ಸಂ. ೪-೨೬-೭)

ಈ ಋಕ್ಕಿನಲ್ಲಿ **ಪುರಂಧಿಃ ಬಹುನೋ ಧನಸ್ಯ ದಾತಾ** ಬಹಳ ದ್ರವ್ಯವನ್ನು ದಾನಮಾಡಿರುವವನು ಎಂದು ಪುರಂಧಿ ಶಬ್ದಕ್ಕೆ ಅರ್ಥವನ್ನು ವಿವರಿಸಿರುವರು.

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಸ್ಸಮುದ್ರಿಯಃ ।**
**ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥**

(ಋ. ಸಂ. ೧೦–೬೫–೧೩)

ಇಲ್ಲಿ **ಪುರಂಧ್ಯಾ ಸ್ತುತ್ಯಾ** ಸ್ತುತಿಯಿಂದ ಎಂದು ಅರ್ಥವನ್ನು ಪುರಂಧಿ ಶಬ್ದಕ್ಕೆ ವಿವರಿಸಿರುತ್ತದೆ.

**ವಸೂನಿ—ವಾಸಯೋಗ್ಯಾನಿ ಯಜ್ಞಸಾಧನಭೂತಹವಿರಾದೀನಿ ।** ಮಘಂ ರೇಕ್ಣಃ ಎಂಬ ಧನನಾಮ ಗಳಲ್ಲಿ (ನಿ. ೩–೯) ವಸು ಶಬ್ದವೂ ಪಠಿತವಾಗಿರುವುದರಿಂದ ಧನವೆಂದು ಅರ್ಥ.

**ಸುಗುರಸತ್ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇಂದ್ರೋ ದಧಾತಿ ।**
**ಯಸ್ತ್ವಾಯಂತಂ ವಸುನಾ ಪ್ರಾತರಿತ್ವೋ ಮುಕ್ಷೀಜಯೇವ ಪದಿಮುತ್ಸಿನಾತಿ ॥**

(ಋ. ಸಂ. ೧–೧೨೫–೨)

ಇಲ್ಲಿ ವಸುನಾ - ಅನ್ನೇನ ಎಂದು ವಸು ಶಬ್ದಕ್ಕೆ ಅರ್ಥವಾಗುವುದರಿಂದ ಯಜ್ಞವು ನೆರವೇರಲು (ಸಾಧನವಾದ) ಕಾರಣವಾದ ಹವಿಸ್ಸೇ ಮೊದಲಾದುವುಗಳನ್ನು ಕತ್ತಲೆಯಿಂದ ಮುಚ್ಚಿರುವುವುಗಳನ್ನು (ಕಾಣಿಸದಿರುವವುಗಳನ್ನು) ಉಷೋದೇವತೆಯು ಪ್ರಕಟಮಾಡಿಕೊಡುವುದರಿಂದ ಉಷೋದೇವತೆಯನ್ನು ಸ್ತುತಿಮಾಡತಕ್ಕದ್ದೆಂದು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಉದೀರತಾಮ್**—ಉತ್ ಉಪಸರ್ಗ. ಈರ ಗತೌ ಕಂಪನೇ ಚ ಧಾತು. ಅದಾದಿ ಲೋಟ್ ಪ್ರಥಮ ಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಅನಕಾರದಪರ ದಲ್ಲಿರುವುದರಿಂದ **ಆತ್ಮನೇಪದೇಷ್ವನತಃ**—(ಪಾ ಸೂ. ೭–೧–೫) ಎಂಬುದರಿಂದ ಪ್ರತ್ಯಯಕ್ಕೆ ಅದಾದೇಶ. **ಆಮೇತಃ**—(ಪಾ. ಸೂ. ೩-೪-೯೦) ಸೂತ್ರದಿಂದ ಟಿಗೆ ಏತ್ವ. ಈರತಾಮ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪುರಂಧೀಃ**—ಪುರಂ ಪೂರಯಿತವ್ಯಂ ಸರ್ವವಿಷಯಜಾತಂ ಅಸ್ಯಾಂ ಧೀಯತೇ ಅವಸ್ಥಾಪ್ಯತೇ ಇತಿ ಪುರಂಧಿಃ ಬುದ್ಧಿಃ. ಡುಧಾಞ್ ಧಾರಣಪೋಷಣಯೋಃ ಧಾತು. **ಕರ್ಮಣ್ಯಧಿಕರಣೇ ಚ**—(ಪಾ. ಸೂ. ೩-೩-೯೩) ಎಂಬುದರಿಂದ ಅಧಿಕರಣಾರ್ಥದಲ್ಲಿ ಕಿ ಪ್ರತ್ಯಯ. **ಆತೋಲೋಪ ಇಟಿ ಚ—**(ಪಾ. ಸೂ. ೬-೪-೬೪) ಎಂಬುದ ರಿಂದ ಧಾತುವಿನ ಆಕಾರಕ್ಕೆ ಲೋಪ. **ತತ್ಪುರುಷೇ ಕೃತಿ ಬಹುಲಂ**—ಎಂಬಲ್ಲಿ ಬಹುಲವಚನ ಸಾಮರ್ಥ್ಯದಿಂದ ವಿಭಕ್ತಿಗೆ ಅಲುಕ್. ಅಥವಾ ಪೃಷೋದರಾದಿಗಣವು ಆಕೃತಿಗಣವಾದುದರಿಂದ ಅದರಲ್ಲಿ ಸೇರಿಸುವುದರಿಂದ ಅಭಿಮತ ರೂಪಸಿದ್ಧಿಯಾಗುತ್ತದೆ. ಬಹುವಚನ ಪರವಾದಾಗ **ಸುಪಾಂ ಸುಲುಕ್—**(ಪಾ. ಸೂ. ೭-೩-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಶುಶುಚಾನಾಸಃ**—ಶುಚಿರ್ ಪೂತೀಭಾವೇ ಧಾತು. ಭೃಶಾರ್ಥ ತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಬಂದಾಗ **ಯಙೋಚಿ ಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಅನೈಮಿತ್ತಿಕವಾಗಿ ಲುಕ್. **ಸಂಜ್ಞಾಪೂರ್ವಕೋ ವಿಧಿರನಿತ್ಯಃ**—ಎಂಬ ವಚನದಿಂದ ಅಭ್ಯಾಸಕ್ಕೆ ಗುಣ ಬರುವುದಿಲ್ಲ. ಯಙ್‌ಲುಙ್‌ಂತದಮೇಲೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಅದಾದಿಯಲ್ಲಿ ಯಙ್‌ಲುಙ್‌ಂತವನ್ನು

ಪಾತಮಾಡಿರುವುದರಿಂದ ಶಪಿಗೆ ಲುಕ್. ಶಾನಚಿಗೆ **ಸಾರ್ವಧಾತುಕಮಪಿತ್**—ಎಂಬುದರಿಂದ ಙಿತ್ವವಿರುವುದರಿಂದ ಧಾತುವಿನ ಇಕ್ಕಿಗೆ ಗುಣ ಬರುವುದಿಲ್ಲ. ಶುಶುಚಾನ ಎಂದು ರೂಪವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ಆಜ್ಜ-ಸೇರಸುಕ್**—(ಪಾ. ಸೂ. ೭-೧-೫೦)ಎಂಬುದರಿಂದ ಅದಕ್ಕೆ ಅಸುಕಾಗಮ.

**ಆಸ್ಥುಃ**—ಷ್ಠಾ ಗತಿನಿವೃತ್ತೌ ಧಾತು. **ಛಂದಸಿ ಲುಙ್‌ಲಙ್‌ಲಿಟಃ**—(ಪಾ. ಸೂ. ೩-೪-೬)ಎಂಬುದರಿಂದ ಲೋಡರ್ಥದಲ್ಲಿ ಲುಙ್ ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. **ಗಾತಿಸ್ಥಾಘುಪಾಭೂಭ್ಯಃ**—(ಪಾ. ಸೂ. ೨-೪-೭೭)ಎಂಬುದರಿಂದ ಚ್ಲಿಗೆ ಸಿಚಾದೇಶ ಬಂದಾಗ ಅದಕ್ಕೆ ಲುಕ್. **ಆತಃ**—(ಪಾ. ಸೂ. ೩-೪-೧೧೦) ಎಂಬುದರಿಂದ ಝಿಗೆ ಉಸಾದೇಶ. **ಉಸ್ಯಪದಾಂತಾತ್**—(ಪಾ. ಸೂ. ೬-೧-೯೬)ಎಂಬುದರಿಂದ ಪರರೂಪ. ಅಂಗಕ್ಕೆ ಅಡಾಗಮ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ಪಾರ್ಹಾ**—ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦)ಎಂಬುದರಿಂದ ಶಿಗೆ ಲೋಪ. ಸ್ಪೃಹಾಯಾಂ ಸಂಬಂಧಿ ಸ್ಪಾರ್ಹಮ್. **ತಸ್ಯೇದಮ್**—(ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಪಗೂಳ್ಹಾ**—ಗುಹೂ ಸಂವರಣೇ ಧಾತು. ಇದಕ್ಕೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಹೋಢಃ**—ಎಂಬುದರಿಂದ ಧಾತುಹಕಾರಕ್ಕೆ ಢತ್ವ. **ಝಷಸ್ತಥೋ**—ಎಂಬುದರಿಂದ ಪ್ರತ್ಯಯ ತಕಾರಕ್ಕೆ ಧತ್ವ. ಷ್ಟುತ್ವದಿಂದ ಅದಕ್ಕೆ ಢತ್ವ. **ಢೋಢೇ ಲೋಪಃ**—ಸೂತ್ರದಿಂದ ಪೂರ್ವ ಢಕಾರಕ್ಕೆ ಲೋಪ. **ಢ್ರಲೋಪೇ ಪೂರ್ವಸ್ಯ**-ಎಂಬುದರಿಂದ ಪೂರ್ವದ ಅಣಿಗೆ ದೀರ್ಘ. ಹಿಂದಿನಂತೆಯೇ ಪ್ರತ್ಯಯಸ್ವರದಿಂದ ಅಂತೋದಾತ್ತವಾದಾಗ ಸಮಾಸದಲ್ಲಿ **ಗತಿರನಂತರಃ**—(ಪಾ. ಸೂ. ೩-೨-೪೯)ಎಂಬುದರಿಂದ ಗತಿಗೆ (ಅಪ)ಪ್ರಕೃತಿಸ್ವರ ಬರುತ್ತದೆ. **ಶೇಶ್ಛಂದಸಿ ಬಹುಲಂ**—ಎಂಬುದರಿಂದ ಶಿಗೆ ಲೋಪ.

**ವಿಭಾತೀಃ**—ಭಾ ದೀಪ್ತೌ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಸ್ತ್ರೀತ್ವದಲ್ಲಿ **ಉಗಿತಶ್ಚ**—(ಪಾ. ಸೂ. ೪-೧-೬)ಎಂಬುದರಿಂದ ಙೀಪ್ **ಶತುರನುಮೋ ನದ್ಯಜಾದೀ**—(ಪಾ. ಸೂ. ೬-೧-೧೭೩)ಎಂಬುದರಿಂದ ನುಮ್ ರಹಿತವಾದ ಶತೃವಿನ ಪರದಲ್ಲಿ ಙೀಪ್ ಬಂದುದರಿಂದ ಉದಾತ್ತವಾಗುತ್ತದೆ. **ಸುಪಾಂಸುಲುಕ್**—(ಪಾ. ಸೂ. ೭-೩-೩೯)ಎಂಬುದರಿಂದ ವಿಭಕ್ತಿಗೆ ಪೂರ್ವಸವರ್ಣದೀರ್ಘ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

**ಅಪಾನ್ಯದೇತ್ಯಭ್ಯ೧ನ್ಯದೇತಿ ವಿಷುರೂಪೇ ಅಹನೀ ಸಂ ಚರೇತೇ ।**

**ಪರಿಕ್ಷಿತೋಸ್ತಮೋ ಅನ್ಯಾ ಗುಹಾಕರದ್ಯೌದುಷಾಃ ಶೋಶುಚತಾರಥೇನ ॥೭॥**

॥ ಪದಪಾಠಃ ॥

ಅಪ । ಅನ್ಯತ್ । ಏತಿ । ಅಭಿ । ಅನ್ಯತ್ । ಏತಿ । ವಿಷುರೂಪೇ ಇತಿ ವಿಷುऽರೂಪೇ । ಅಹನೀ ಇತಿ । ಸಂ । ಚರೇತೇ ಇತಿ ।

ಪರಿऽಕ್ಷಿತೋಃ । ತಮಃ । ಅನ್ಯಾ । ಗುಹಾ । ಅಕಃ । ಅದ್ಯೌತ್ । ಉಷಾಃ । ಶೋಶುಚತಾ । ರಥೇನ ॥ ೭ ॥

॥ ಸಾಯಣಭಾಷ್ಯಂ ॥

ಇದಾನೀಮಹೋರಾತ್ರಸ್ತುತಿದ್ವಾರೋಷಾಃ ಸ್ತೂಯತೇ। ವಿಷುರೂಪೇ ವಕ್ಷ್ಯಮಾಣಪ್ರಕಾರೇಣ ನಾನಾರೂಪೇऽಹನೀ ಅಹಶ್ಚ ರಾತ್ರಿಶ್ಚೋಭೇ ಸಂ ಚರೇತೇ । ಸಮಿತ್ಯೇಕೀಭಾವೇ। ಸಹೈವಾವ್ಯವಧಾನೇನ ಚರತಃ । ಅತ್ರಾಹ್ನಃ ಸಾಹಚರ್ಯಾತ್ತತ್ಪ್ರತಿಯೋಗಿತ್ವಾಚ್ಚ ರಾತ್ರಿರಪ್ಯಹರಿತ್ಯುಚ್ಯತೇ । ಉತ್ತರತ್ರ ಮಂತ್ರಾಂತರೇऽಯಮೇವಾರ್ಥಃ ಸ್ಪಷ್ಟ ಆಮ್ನಾತಃ। ಅಹಶ್ಚ ಕೃಷ್ಣಮಹರರ್ಜುನಂ ಚ ವಿ ವರ್ತೇತೇ ರಜಸೀ ವೇದ್ಯಾಭಿಃ । ಋ. ೬-೯-೧ । ಇತಿ । ತಯೋರ್ಮಧ್ಯೇऽನ್ಯದ್ರಾತ್ರಿರೂಪಮಹರಪೈತಿ । ಅಪಗಚ್ಛತಿ। ಪ್ರತಿಲೋಮಂ ಗಚ್ಛತಿ ವಾ। ಅಪೇತ್ಯೇತಸ್ಯ ಪ್ರಾತಿಲೋಮ್ಯಂ । ನಿ. ೧-೩ । ಇತಿ ಯಾಸ್ಕಃ। ಅನ್ಯಚ್ಚ ದಿವಸಾಖ್ಯಮಹರಭ್ಯೇತಿ । ಅಭಿಮುಖ್ಯೇನ ಗಚ್ಛತಿ । ಅಭೀತ್ಯಾಭಿಮುಖ್ಯಂ । ನಿ. ೧-೩ । ಇತಿ ಯಾಸ್ಕಃ। ರಾತ್ರ್ಯಾಂ ಪ್ರತಿನಿವೃತ್ತಾಯಾಮಹರಭಿಮುಖಮಾಗಚ್ಛತೀತ್ಯರ್ಥಃ । ವಿಷುರೂಪೇ ಸಂ ಚರೇತೇ ಇತಿ ಯದುಕ್ತಂ ತದೇವ ಸ್ಪಷ್ಟೀಕ್ರಿಯತೇ। ಪರಿಕ್ಷಿತೋಃ ಪರ್ಯಾಯೇಣ ನಿವಸತೋಃ ಪರಿಕ್ಷಪಯತೋರ್ವಾ । ಪ್ರಾಣಿನಾಮಹಃಸ್ವತೀತೇಷ್ವಾಯುಷಃ ಕ್ಷಯಾತ್ಪರಿಕ್ಷಪಣಂ ಪ್ರಸಿದ್ಧಂ। ತಯೋರ್ಮಧ್ಯೇऽನ್ಯಾ ರಾತ್ರಿಸ್ತಮಸ್ತಮೋರೂಪಾ ಗುಹಾ ಪದಾರ್ಥಾನಾಂ ಗೂಹನಮಕಃ। ಕರೋತಿ। ಅನ್ಯಾಹರೇಕದೇಶಭೂತಾ ಚೋಷಾಃ ಶೋಶುಚತಾ ಭೃಶಂ ದೀಪ್ತೇನ ರಥೇನಾದ್ಯೌತ್ । ದ್ಯೋತತೇ । ಪ್ರಕಾಶತೇ ಪ್ರಕಾಶಯತಿ ವಾ ಸರ್ವಂ। ರಾತ್ರಿಸ್ತಮೋರೂಪತ್ವಾತ್ಸರ್ವಂ ಜಗದಾವೃಣೋತಿ। ಉಷಾಸ್ತು ಸರ್ವಾನ್ಭಾವಾನ್ಪ್ರಕಾಶಯತೀತ್ಯುಷಸಃ ಸ್ತುತಿಃ ॥

॥ ಪ್ರತಿಪದಾರ್ಥ ॥

**ವಿಷುರೂಪೇ**—(ಮುಂದೆ ಹೇಳುವ ರೀತಿಯಲ್ಲಿ) ವಿವಿಧ ರೂಪಗಳಾದ । **ಅಹನೀ**—ಅಹೋರಾತ್ರಗಳು । **ಸಂ ಚರೇತೇ**—ಒಟ್ಟಾಗಿಯೇ ಸಂಚರಿಸುತ್ತವೆ । **ಅನ್ಯತ್**—(ಅವೆರಡರಲ್ಲಿ) ಒಂದು (ರಾತ್ರಿಯು) । **ಅಪ ಏತಿ**—ಹಿಂದಕ್ಕೆ (ಕಳೆದು) ಹೋಗುತ್ತದೆ । **ಅನ್ಯತ್**—ಮತ್ತೊಂದು (ಹಗಲು) । **ಅಭಿ ಏತಿ**—ಮುಂದಕ್ಕೆ ಹೋಗುತ್ತದೆ । **ಪರಿಕ್ಷಿತೋಃ**—(ಪ್ರಾಣಿಗಳ ಆಯುಸ್ಸನ್ನು) ಕ್ಷಯಿಸುವಂತೆ ಮಾಡುವ (ಸರದಿಯಮೇಲೆ ಬರುವ) ಅವೆರಡರಲ್ಲಿ । **ಅನ್ಯಾ**—ಒಂದು (ರಾತ್ರಿಯು) । **ತಮಃ**—ತಮೋರೂಪವಾಗಿ । **ಗುಹಾ**—(ಪದಾರ್ಥಗಳು) ಮರೆ(ಯಾಗುವಂತೆ) ।

**ಅಕಃ**—ಮಾಡುತ್ತದೆ । (**ಅನ್ಯಾ**—ಮತ್ತೊಂದು) **ಉಷಾಃ**—(ಹಗಲಿನ ಭಾಗವಾದ) ಉಷಃಕಾಲವು । **ಶೋಶುಚತಾ**—ಹೆಚ್ಚಾಗಿ ದೀಪ್ಯಮಾನವಾದ । **ರಥೇನ**—(ತನ್ನ) ರಥದಿಂದ । **ಅದ್ಯೌತ್**—(ಎಲ್ಲವನ್ನೂ) ಪ್ರಕಾಶಗೊಳಿಸುತ್ತದೆ.

॥ ಭಾವಾರ್ಥ ॥

ವಿವಿಧರೂಪಗಳಾದ ಅಹೋರಾತ್ರಗಳು (ಒಂದಾಗುತ್ತಲೊಂದು) ಒಟ್ಟಾಗಿಯೇ ಸಂಚರಿಸುತ್ತವೆ; (ಅವುಗಳಲ್ಲಿ) ಒಂದು (ರಾತ್ರಿಯು) ಹಿಂದಕ್ಕೂ, ಮತ್ತೊಂದು (ಹಗಲು) ಮುಂದಕ್ಕೂ ಹೋಗುತ್ತದೆ; ಆಯುಃಕ್ಷಯಕಾರಿಗಳಾದ (ಅವೆರಡರಲ್ಲಿ) ತಮೋರೂಪವಾದ ಒಂದು (ರಾತ್ರಿಯು) (ಪದಾರ್ಥಗಳನ್ನು) ಮರೆಮಾಡುತ್ತದೆ; (ಮತ್ತೊಂದಾದ ಹಗಲಿನ ಏಕದೇಶವಾದ) ಉಷಸ್ಸು ದೇದೀಪ್ಯಮಾನವಾದ (ತನ್ನ) ರಥದಿಂದ (ಅಂಧಕಾರಾವೃತವಾಗಿದ್ದ ಸಮಸ್ತ ಜಗತ್ತನ್ನು) ಪ್ರಕಾಶಗೊಳಿಸುತ್ತದೆ.

English Translation.

The twofold day proceeds unseparated ; one (part going) forward, one backward ; one of these two alternating (periods) effects the concealment (of things); the Dawn illumines them with her radiant chariot.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಹೋರಾತ್ರಗಳನ್ನು ಸ್ತುತಿಮಾಡುವುದರಮೂಲಕವಾಗಿ ಉಷಸ್ಸನ್ನು ಸ್ತೋತ್ರಮಾಡಿರುತ್ತದೆ. ಅಹೋರಾತ್ರಗಳೆರಡೂ ಅನೇಕ ರೂಪಗಳಿಂದ ಒಂದನ್ನು ಇನ್ನೊಂದು ಎಡಬಿಡದೆ ಸಂಚರಿಸುತ್ತವೆ.

**ವಿಷುರೂಪೇ—ವಕ್ಷ್ಯಮಾಣ ಪ್ರಕಾರೇಣ ನಾನಾರೂಪೇ । ಅಹಶ್ಚ ರಾತ್ರಿಶ್ಚೋಭೇ ಸಹೈವ ಅವ್ಯವಧಾನೇನ ಚರತಃ** ಎಂದು ಸಾಯಣರು ವಿವರಿಸಿ **ಅತ್ರಾಹ್ನಃ ಸಾಹಚರ್ಯಾತ್ ತತ್ಪ್ರತಿಯೋಗಿತ್ವಾಚ್ಚ ರಾತ್ರಿರಪಿ ಅಹಃ ಇತ್ಯುಚ್ಯತೇ ।**

**ಅಹಶ್ಚ ಕೃಷ್ಣಮಹರರ್ಜುನಂ ಚ ವಿ ವರ್ತೇತೇ ರಜಸೀ ವೇದ್ಯಾಭಿಃ ।**
**ವೈಶ್ವಾನರೋ ಜಾಯಮಾನೋ ನ ರಾಜಾವಾತಿರಜ್ಯೋತಿಷಾಗ್ನಿಸ್ತಮಾಂಸಿ ॥**

(ಋ. ಸಂ. ೬-೯-೧)

ಎಂಬ ಋಕ್ಕನ್ನು ಉದಹರಿಸಿ ಅಹಸ್ಸಿನ ಸಾಹಚರ್ಯದಿಂದಲೂ, ಅಹಸ್ಸಿಗೆ ಪ್ರತಿಯೋಗಿಯಾಗಿ ಇರುವುದರಿಂದಲೂ ರಾತ್ರಿಯೂ ಅಹಸ್ಸೆಂದು ವ್ಯಪದಿಷ್ಟವಾಗಿರುವುದು ಎಂದು ವರ್ಣಿಸಿರುವರು.

ರಾತ್ರಿಗೂ ಅಹಸ್ಸೆಂಬ ಶಬ್ದದಿಂದಲೇ ವ್ಯವಹಾರವಿರುವಾಗ ಅಹೋರಾತ್ರಸಮುದಾಯರೂಪವಾದ ದಿನದಲ್ಲಿ ಅಹಸ್ಸೆಂಬುದು ಎರಡು ರೂಪದಿಂದ ಇರುವುದು. ಅವುಗಳಲ್ಲಿ ರಾತ್ರಿರೂಪವಾದ ಅಹಸ್ಸು ತಮಸ್ಸಿನಿಂದ ಕೂಡಿದ್ದಾಗಿ ಪದಾರ್ಥಗಳೆಲ್ಲವನ್ನೂ ಯಾರಿಗೂ ಕಾಣಿಸದಂತೆ ಮುಚ್ಚುತ್ತದೆ. ಮತ್ತು ಇದು ಹಗಲಿಗೆ (ವಿರುದ್ಧವಾಗಿರುವ ರೀತಿಯಿಂದ) ವಿಪರೀತವಾದ ರೀತಿಯಿಂದ ಇರುತ್ತಾ ಕಳೆದುಹೋಗುತ್ತದೆ. ಈ ಅಂಶವನ್ನೇ **ತಯೋಃ ಮಧ್ಯೇ ಅನ್ಯತ್ ರಾತ್ರಿರೂಪಮಹಃ ಅಪಗಚ್ಛತಿ ಪ್ರತಿಲೋಮಂ ಗಚ್ಛತಿ ವಾ** ಎಂದು ವಿವರಿಸಿರುತ್ತಾರೆ.

**ಅಪ+ಏತಿ** ಎಂಬಲ್ಲಿ **ಅಪ** ಎಂಬ ಉಪಸರ್ಗವು ಪ್ರಾತಿಲೋಮ್ಯರೂಪವಾದ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಯಾಸ್ಕರು **ವ್ಯಪೇತ್ಯೇತಸ್ಯ ಪ್ರಾತಿಲೋಮ್ಯಂ** (ನಿ. ೧-೩) ಎಂದು ವಿವರಿಸಿರುವರು.

ಇದರಂತೆಯೇ **ಅನ್ಯಚ್ಚ ದಿವಸಾಖ್ಯಮಹಃ ಅಭಿ ಏತಿ ಆಭಿಮುಖ್ಯೇನ ಗಚ್ಛತಿ ।** ದಿವಸ (ಹಗಲು) ಎಂದು ಹೆಸರುಳ್ಳ ಅಹಸ್ಸು ರಾತ್ರಿಗೆ ವಿಪರೀತಭಾವದಿಂದ ಅಂದರೆ ಪ್ರಕಾಶಕರವಾದರೂಪದಿಂದ ಇರುತ್ತಾ ರಾತ್ರಿಗೆ ಅಭಿಮುಖವಾಗಿ (ಎಂದರೆ ರಾತ್ರಿಯು ಕಳೆದನಂತರ) ಸಂಚರಿಸುತ್ತಿರುತ್ತದೆ

ಅಭಿ+ಏತಿ ಎಂಬಲ್ಲಿ ಅಭಿ ಎಂಬ ಉಪಸರ್ಗವು ಆಭಿಮುಖ್ಯರೂಪವಾದ ಅರ್ಥದಲ್ಲಿ ಪ್ರಯುಕ್ತವಾಗಿರುವುದು ಎಂದು ಯಾಸ್ಕರು **ಅಭೀತ್ಯಾಭಿಮುಖ್ಯಂ** (ನಿ. ೧-೩) ಎಂದು ವರ್ಣಿಸಿರುವರು. ರಾತ್ರಿಯು ಕಳೆದನಂತರ ಅಹಸ್ಸು ಅಭಿಮುಖವಾಗಿ ಬರುವುದೆಂದು ಅರ್ಥ.

**ಪರಿಕ್ಷಿತೋಃ—ಪರ್ಯಾಯೇಣ ನಿವಸತೋಃ ಪರಿಕ್ಷಪಯತೋರ್ವಾ ।** ಅಹೋರಾತ್ರಗಳು ಒಂದರ ಅನಂತರ ಇನ್ನೊಂದು ಎಡಬಿಡದೆ ಬರುವುವು ಮತ್ತು ಇವುಗಳು ಪ್ರಾಣಿಗಳ ಆಯುಸ್ಸನ್ನು ತಮ್ಮ ಗಮನಾಗಮನಗಳಿಂದ ಕಳೆಯುವುವು ಎಂದು ಅರ್ಥ.

**ಉಷಾಃ ಶೋಶುಚತಾ ರಥೇನ ಅದ್ಯೌತ್—ದ್ಯೋತತೇ ಪ್ರಕಾಶತೇ ಪ್ರಕಾಶಯತಿ ವಾ ಸರ್ವಂ ।** ರಾತ್ರಿಯು ಕತ್ತಲೆಯಿಂದ ಜಗತ್ತೆಲ್ಲವನ್ನೂ ಮುಚ್ಚುತ್ತದೆ. ಉಷಸ್ಸು ತನ್ನ ಉದಯದಿಂದ ಜಗತ್ತೆಲ್ಲವನ್ನೂ ಪ್ರಕಾಶಗೊಳಿಸುತ್ತಾ ತಾನೂ ಪ್ರಕಾಶರೂಪದಿಂದ ಬೆಳಗುತ್ತಿರುವುದು ಎಂದು ಉಷಸ್ಸು ಇಲ್ಲಿ ಸ್ತುತಿಸಲ್ಪಟ್ಟಿರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಏತಿ**—ಇಣ್ ಗತೌ ಧಾತು. ಅದಾದಿ ಲಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ. ಮುಂದೆಯೂ ಏಕಕರ್ತೃಕವಾಗಿ ಏತಿ ಎಂದಿರುವುದರಿಂದ ಸಾಮರ್ಥ್ಯವಿರುವುದರಿಂದ **ಏಕಾನ್ಯಾಭ್ಯಾಂ ಸಮರ್ಥಾಭ್ಯಾಮ್** (ಪಾ. ಸೂ. ೮-೧-೬೫) ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಎರಡನೇ ಏತಿ ಎಂಬಲ್ಲಿ ನಿಷೇಧವಿಲ್ಲದಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿಷುರೂಪೇ**—ವಿಷು ರೂಪಾಣಿ ಯಯೋಸ್ತೇ ವಿಷುರೂಪೇ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಚರೇತೇ**—ಚರ ಗತಿಭಕ್ಷಣಯೋಃ ಧಾತುಃ. ಲಟ್ ಪ್ರಥಮಪುರುಷದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪರಿಕ್ಷಿತೋಃ**—ಕ್ಷಿ ನಿವಾಸಗತ್ಯೋಃ ಧಾತು. ಇದಕ್ಕೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ.

**ಗತಿಕಾರಕೋಪಪದಾತ್ ಕೃತ್** (ಪಾ ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀ ದ್ವಿವಚನಾಂತರೂಪ.

**ಗುಹಾ**—ಗುಹೂ ಸಂವರಣೇ ಧಾತು. ಅಪ್ ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಅಮ್) ಆಕಾರಾದೇಶ.

**ಅಕಃ**—ಡುಕೃಞ್ ಕರಣೇ ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನದಲ್ಲಿ ಅದಕ್ಕೆ ತಿಬಾದೇಶ. **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಮಂತ್ರೇ ಘಸಹ್ವರಣ**—(ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿಗೆ ಲುಕ್. ತಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ **ಸಾರ್ವಧಾತುಕಾರ್ಧಧಾತುಕಯೋಃ** ಸೂತ್ರದಿಂದ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಹಲಂತದ ಪರದಲ್ಲಿ ಅಪೃಕ್ತವಾದ ತಿಪ್ ಬಂದುದರಿಂದ **ಹಲ್‌ಙ್ಯಾಭ್ಭ್ಯೋ**—(ಪಾ. ಸೂ. ೬-೧-೬೮) ಎಂಬುದರಿಂದ ಅದಕ್ಕೆ ಲೋಪ. ಅಂತ್ಯರೇಫಕ್ಕೆ **ಖರವಸಾನಯೋರ್ವಿಸರ್ಜನೀಯಃ** ಸೂತ್ರದಿಂದ ವಿಸರ್ಗ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅದ್ಯೌತ್**—ದ್ಯುತ ದೀಪ್ತೌ ಧಾತು. ಹಿಂದಿನಂತೆಯೇ ಛಾಂದಸವಾಗಿ ಲುಙ್. **ದ್ಯುದ್ಭ್ಯೋ ಲುಙಿ** (ಪಾ. ಸೂ. ೧-೩-೯೧) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಚ್ಲಿಗೆ ಲುಕ್ ಬರುತ್ತದೆ. ಗುಣವು ಪ್ರಾಪ್ತವಾದರೆ ಛಾಂದಸವಾಗಿ ವೃದ್ಧಿ ಬರುತ್ತದೆ. ಅಥವಾ ದ್ಯು ಅಭಿಗಮನೇ ಧಾತು. ಅದಾದಿ. ಲಙ್ ಪ್ರಥಮಪುರುಷ ಏಕವಚನದಲ್ಲಿ **ಉತೋ ವೃದ್ಧಿರ್ಲುಕಿ ಹಲಿ** (ಪಾ.ಸೂ. ೭-೩-೮೯) ಎಂಬುದರಿಂದ ಉಕಾರಕ್ಕೆ ವೃದ್ಧಿ. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬಲ್ಲಿ ಅತಿಙಃ ಎಂದು ನಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಶೋಶುಚತಾ**—ಶುಚಿರ್ ಪೂತೀಭಾವೇ. ಧಾತು. ಭೃಶಾರ್ಥದಲ್ಲಿ ಯಙ್ ಬಂದಾಗ **ಯಙೋಽಚಿ ಚ** ಎಂಬುದರಿಂದ ಲುಕ್. ಯಙ್‌ನಿಮಿತ್ತವಾಗಿ ದ್ವಿತ್ವ ಬಂದಾಗ **ಗುಣೋ ಯಙ್‌ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ ಯಙ್‌ಲುಙಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ. || ೭ ||

॥ ಸಂಹಿತಾಪಾಠಃ ॥

ಸದೃಶೀರದ್ಯ ಸದೃಶೀರಿದು ಶ್ವೋ ದೀರ್ಘಂ ಸಚಂತೇ ವರುಣಸ್ಯ ಧಾಮ ।
ಅನವದ್ಯಾಸ್ತ್ರಿಂಶತಂ ಯೋಜನಾನ್ಯೇಕೈಕಾ ಕ್ರತುಂ ಪರಿ ಯಂತಿ ಸದ್ಯಃ ॥ ೮ ॥

॥ ಪದಪಾಠಃ ॥

ಸಽದೃಶೀಃ । ಅದ್ಯ । ಸಽದೃಶೀಃ । ಇತ್ । ಊಂ ಇತಿ । ಶ್ವಃ । ದೀರ್ಘಂ । ಸಚಂತೇ । ವರುಣಸ್ಯ ।
ಧಾಮ ।

ಅನವದ್ಯಾಃ । ತ್ರಿಂಶತಂ । ಯೋಜನಾನಿ । ಏಕಾಽಏಕಾ । ಕ್ರತುಂ । ಪರಿ । ಯಂತಿ । ಸದ್ಯಃ ॥ ೮ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ನಹನಿ ಸದೃಶೀರಿತ್ ಪರಸ್ಪರಂ ಸದೃಶ್ಯ ಏವ । ತಥಾ ಶ್ವ ಇತ್ ಪರಸ್ಮಿನ್ನಪ್ಯಹನಿ ಸದೃಶೀಃ ಪರಸ್ಪರಂ ಸದೃಶ್ಯ ಏವ । ಉಶಬ್ದೋಽಪಿಶಬ್ದಾರ್ಥಃ । ಇಚ್ಛಬ್ದ ಏವಾರ್ಥಃ । ಅದ್ಯತನ್ಯೋಽಪಿ ಶ್ವಸ್ತನೀಭಿಃ ಸದೃಶ್ಯಃ ಶ್ವಸ್ತನ್ಯಶ್ಚಾದ್ಯತನೀಭಿಃ । ಏವಮಹರಂತರೇಣ ಸಾದೃಶ್ಯಂ । ಕಥಂ ಸಾದೃಶ್ಯಮಿತಿ ತದುಪಪಾದ್ಯತೇ । ಯದಾ ನಕ್ಷತ್ರಾಣಿ ನ ದೃಶ್ಯಂತೇ ಸೂರ್ಯಶ್ಚ ನೋದೇತಿ ಉಷಃಕಾಲಃ । ಸ ಚೈಕವಿಂಶತಿಘಟಿಕಾಭಿಃ ಷಡ್ವಿಂಶತಿಪರಾಭಿಶ್ಚ ಸಂಮಿತಃ । ಸೂರ್ಯೋ ಹಿ ಪ್ರತಿದಿನಮೇಕೋನಷಷ್ಟ್ಯಧಿಕಪಂಚಸಹಸ್ರಯೋಜನಾನಿ ಮೇರುಂ ಪ್ರಾದಕ್ಷಿಣ್ಯೇನ ಪರಿಭ್ರಮತಿ । ತಥಾ ಸತಿ ಯತ್ರ ಯತ್ರ ಲಂಕಾದಿಭೂಪ್ರದೇಶೇ ಸೂರ್ಯೋ ಗಚ್ಛತಿ ತಸ್ಯ ತಸ್ಯ ಪುರಸ್ತಾತ್ತ್ರಿಂಶದ್ಯೋಜನಮುಷಾ ಅಪಿ ಗಚ್ಛತಿ । ಸೂರ್ಯೋ ಯಸ್ಮಿನ್ದೇಶೇ ಗಚ್ಛತಿ ತತ್ರ ತ್ರಿಂಶದ್ಯೋಜನಂ ಪುರಸ್ತಾದ್ದೇಶಸ್ಥಿತಾನಾಮುದಿತೋ ದೃಶ್ಯತೇ । ಏವಂ ಸರ್ವಪ್ರದೇಶೇಷ್ವಪಿ । ತಥೋಷಾ ಅಪಿ ಯತ್ರ ಗಚ್ಛತಿ ತತಃ ಪುರಸ್ತಾತ್ತ್ರಿಂಶದ್ಯೋಜನಭೂಭಾಗವರ್ತಿನಾಮುದಿತಾ ದೃಶ್ಯತೇ । ಏವಂ ಲಂಕಾದಿಸರ್ವಪ್ರದೇಶಸ್ಥಿತಾನಾಮಪ್ಯುಷಸ ಉದಯೋಽವಗಂತವ್ಯಃ । ಏವಂ ಚ ಸತ್ಯೇಕಸ್ಮಿನ್ಭೂಭಾಗೇ ಯಾವತ್ಕಾಲಂ ಯಥೋಷಾಃ ಪ್ರಕಾಶಯತಿ ತಥಾ ಭೂಭಾಗಾಂತರೇಽಪಿ ತಾವಂತಂ ಕಾಲಂ ಪ್ರಕಾಶಯತಿ । ಏವಮುಕ್ತರೀತ್ಯೈಕಸ್ಮಿನ್ನೇವಾಹನಿ ಸರ್ವಪ್ರದೇಶವರ್ತಿನಾಮಪ್ಯುಷಸಃ ಸದೃಶ್ಯಃ । ಪ್ರದೇಶಬಾಹುಲ್ಯಮಪೇಕ್ಷ್ಯೋಷಸಾಂ ಬಹುತ್ವಾದ್ಬಹುವಚನಂ । ಏವಮೇಕರೂಪಾ ಉಷಸೋಽನವದ್ಯಾಃ ಶುದ್ಧಾಃ । ತಾಸಾಮುದಯಾತ್ಸರ್ವೇ ಭಾವಾ ಅನವದ್ಯಾ ಭವಿಷ್ಯಂತಿ ಕಿಮು ವಕ್ತವ್ಯಂ ತಾಸಾಮನವದ್ಯತ್ವೇ । ದೀರ್ಘಮುಕ್ತರೀತ್ಯಾತ್ಯಂತಮಾಯತಂ ವರುಣಸ್ಯ ತಮೋನಿವಾರಕಸ್ಯ ಸೂರ್ಯಸ್ಯ ಧಾಮ ಸ್ಥಾನಂ ಮೇರುವಲಯಂ ಸಚಂತೇ । ಪ್ರತಿದಿನಂ ಸೇವಂತೇ । ಕಿಯದ್ದೂರಮಿತಿ ತದುಚ್ಯತೇ । ತ್ರಿಂಶತಂ ಯೋಜನಾನಿ ತ್ರಿಂಶದ್ಯೋಜನಾನಿ ಪುರತಃ । ಸೂರ್ಯೋ ಯತ್ರ ಯತ್ರೋದೇತಿ ತತಸ್ತತಸ್ತ್ರಿಂಶದ್ಯೋಜನಂ ಪುರಸ್ತಾದುದ್ಯಂತೀತ್ಯರ್ಥಃ । ಕಿಂಚಾಸಾಂ ಮಧ್ಯ ಏಕೈಕೋಷಾ ಲಂಕಾದ್ಯೇಕೈಕಭೂಭಾಗವರ್ತಿನಾಂ ಕ್ರತುಂ ಗಮನಾಗಮನಾದಿರೂಪಂ ಕರ್ಮ ತದ್ವಿಷಯಾಂ ಪ್ರಜ್ಞಾಂ ವಾ । ತಥಾ ಚ ನಿರುಕ್ತಂ । ಕ್ರತುಂ ದಧಿಕ್ರಾಃ ಕರ್ಮ ವಾ ಪ್ರಜ್ಞಾಂ ವಾ । ನಿ. ೨–೨೮ । ಇತಿ । ಸದ್ಯಸ್ತದಾನೀಮೇವ ಹಿ ಸ್ವೋದಯಕಾಲ ಏವ ಪರಿ ಯಂತಿ । ಪರಿತೋ ಗಚ್ಛಂತಿ । ನಿರ್ವಹಂತೀತ್ಯರ್ಥಃ । ತತ್ತದ್ಭೂಭಾಗವಿಶೇಷೇಣ ಸೂರ್ಯಸ್ಯೋದಯೋ ಜ್ಯೋತಿಶ್ಶಾಸ್ತ್ರೇ ಪ್ರದರ್ಶಿತಃ । ಉದಯೋ ಯೋ

**ಲಂಕಾಯಾಂ ಸೋಽಸ್ತಮಯಃ ಸವಿತುರೇವ ಸಿದ್ಧಪುರೇ । ಮಧ್ಯಾಹ್ನೋ ಯವಕೋಟ್ಯಾಂ ರೋಮಕವಿಷಯೇಽರ್ಧರಾತ್ರಃ ಸ್ಯಾತ್ । ಆರ್ಯ. ೪-೧೩ । ಇತಿ ॥**

॥ ಪ್ರತಿಪದಾರ್ಥ ॥

(**ಉಷಸಃ**—ಉಷಸ್ಸುಗಳು) । **ಅದ್ಯ**—ಈಗ । **ಸದೃಶೀಃ ಇತ್**—(ಒಂದಕ್ಕೊಂದು)ಸಮವಾದವುಗಳೇ ; । **ಶ್ವಃ ಇತ್**—ನಾಳೆಯೂ । **ಸದೃಶೀಃ ಉ**—ಸಮನಾದವುಗಳೇ (ಈರೀತಿ ಏಕರೂಪಗಳಾದ) । **ಅನವದ್ಯಾಃ**—ಶುದ್ಧವಾದ (ಅವುಗಳು) । **ದೀರ್ಘಂ**—(ಅತ್ಯಂತ)ದೀರ್ಘವಾದ (ವಿಸ್ತೃತವಾದ) । **ವರುಣಸ್ಯ**—ತಮೋನಿವಾರಕನಾದ (ಸೂರ್ಯನ) । **ಧಾಮ**—ಸ್ಥಾನವನ್ನು । **ತ್ರಿಂಶತಂ**—ಮೂವತ್ತು । **ಯೋಜನಾನಿ**—ಯೋಜನಗಳಷ್ಟು ದೂರ (ಸೂರ್ಯನಿಗಿಂತ ಮುಂದೆ ಉದಿಸಿ) । **ಸಚಂತೇ**—ಸೇವಿಸುತ್ತವೆ (ಸುತ್ತುತ್ತವೆ) । **ಏಕೈಕಾ**—ಒಂದೊಂದು (ಉಷಸ್ಸು) । **ಕ್ರತುಂ**—(ಆಯಾ ಭೂಭಾಗಕ್ಕೆ ಅನ್ವಯಿಸುವಂತೆ ಗಮನಾಗಮನರೂಪ) ಕ್ರಿಯೆಯನ್ನೂ । **ಸದ್ಯಃ**—ಆಗಲೇ (ತಮ್ಮ ಉದಯಕಾಲದಲ್ಲೇ) । **ಪರಿಯಂತಿ**—ನಿರ್ವಹಿಸುತ್ತವೆ.

॥ ಭಾವಾರ್ಥ ॥

ಈಗಲೂ ನಾಳೆಯೂ ಒಂದೇ ರೀತಿಯಿರುವ ಉಷಸ್ಸುಗಳು ಶುದ್ಧವಾದವು ; ಅವು ತಮೋನಿವಾರಕನಾದ ಸೂರ್ಯನ ಅತ್ಯಂತ ವಿಸ್ತಾರವಾದ ಸ್ಥಾನವನ್ನು (ಪಥವನ್ನು) ಮೂವತ್ತು ಯೋಜನಗಳು (ಸೂರ್ಯನಿಗಿಂತ ಮುಂದೆ ಉದಿಸಿ)ಸುತ್ತುತ್ತವೆ ; (ಮತ್ತೂ) ಪ್ರತಿಯೊಂದು ಉಷಸ್ಸೂ (ತನ್ನ) ಉದಯಕಾಲದಲ್ಲೇ ಆಯಾ ದೇಶಕ್ಕೆ ಅನ್ವಯಿಸುವಂತೆ (ಗಮನಾಗಮನಾದಿರೂಪ) ಕ್ರಿಯೆಯನ್ನೂ ನಿರ್ವಹಿಸುತ್ತದೆ.

## English Translation.

The same to-day, the same tomorrow, the irreproachable (Dawns) precede the distant course of Varuna (Sun) by thirty yojanas, and each in succession revolves in its (appointed) office.

॥ ವಿಶೇಷವಿಷಯಗಳು ॥

**ಸದೃಶೀರದ್ಯ ಸದೃಶೀರಿದು ಶ್ವಃ—ಅಸ್ಮಿನ್ನಹನಿ ಪರಸ್ಪರಂ ಸದೃಶ್ಯಃ । ಪರಸ್ಮಿನ್ನಹನ್ಯಪಿ ಪರಸ್ಪರಂ ಸದೃಶ್ಯ ಏವ । ಅದ್ಯತನ್ಯೋಽಪಿ ಶ್ವಸ್ತನೀಭಿಃ ಸದೃಶ್ಯಃ ಶ್ವಸ್ತನ್ಯಶ್ಚ ಅದ್ಯತನೀಭಿಃ । ಏವಮಹರಂತರೇಣ ಸಾದೃಶ್ಯಂ ।** ಇಲ್ಲಿ ದಿನಗಳಿಗೆ ಪರಸ್ಪರವಾಗಿ ಹೋಲಿಕೆಯನ್ನು ವರ್ಣಿಸಿದೆ. ಇವತ್ತಿನ ಅಹಸ್ಸಿಗೆ (ದಿನಕ್ಕೆ) ನಾಳೆಯ ದಿನವು ಸಮನಾಗಿರುತ್ತದೆ. ನಾಳೆಯ ದಿನಕ್ಕೆ ಇವತ್ತಿನ ದಿನವು ಸಮಾನವು. ನಿನ್ನೆಯ ದಿನಕ್ಕೆ ಇವತ್ತಿನ ದಿನವೂ, ನಾಳೆಯ ದಿನವು ಇವತ್ತಿಗೂ ಸಮಾನವೆಂಥು ಪರಸ್ಪರವಾದ ಸಾದೃಶ್ಯವನ್ನು ಇಲ್ಲಿ ವಿವರಿಸಿದೆ. ಸೂರ್ಯನ ಗತಿವಿಶೇಷದಿಂದ ಉಂಟಾಗಿರುವ ಪ್ರಕಾಶದ ಸಮಾನ ಧರ್ಮವನ್ನು ನಿಮಿತ್ತಮಾಡಿಕೊಂಡು ಬೇರೆಯ ದಿನಗಳಿಗೂ ಸಾದೃಶ್ಯವನ್ನು ಹೇಳಬಹುದಾಗಿರುತ್ತದೆ ಎಂದು ಅರ್ಥ. ಹೀಗೆ ಇರುವ ಸಾದೃಶ್ಯವನ್ನು ಸಾಯಣರು ವಿವರಿಸಿರುವರು.

ನಕ್ಷತ್ರಗಳು ಕಾಣದಂತೆ ಇರುವಾಗ ಸೂರ್ಯನು ಉದಯವನ್ನು ಹೊಂದುವವರೆಗಿನ ಕಾಲವು ಇಪ್ಪತ್ತೊಂದು ಘಳಿಗೆಗಳಿಂದ ಇಪ್ಪತ್ತಾರು ಘಳಿಗೆಗಳವರೆಗಿನ ಕಾಲವು ಎಂತಲೂ ಅದನ್ನು ರಾತ್ರಿಯ ಕೊನೆಯ ಭಾಗದಲ್ಲಿ ಪ್ರಾಪ್ತವಾಗುವ ಉಷಃಕಾಲವೆಂತಲೂ ವ್ಯವಹಾರಮಾಡುತ್ತಾರೆ. ಸೂರ್ಯನು ಪ್ರತಿದಿನದಲ್ಲಿಯೂ ಐದು ಸಾವಿರದ ಐವತ್ತೊಂಭತ್ತು ಯೋಜನಗಳನ್ನು ಮೇರುವಿನ ಸುತ್ತಲೂ ಪ್ರದಕ್ಷಿಣೆಯನ್ನು ಮಾಡುವ ಕ್ರಮದಿಂದ ಸುತ್ತುತ್ತಿರುವನು. ಸೂರ್ಯನು ಉದಯಿಸುವುದಕ್ಕೆ ಮುಂಚಿತವಾಗಿ (ಉದಯವನ್ನು ಹೊಂದುವ ಪ್ರದೇಶವಾದ ಲಂಕಾನಗರವೇ ಮೊದಲಾದ ಪ್ರದೇಶಕ್ಕೆ ಸೂರ್ಯನು ಬರುವ ವೇಳೆಗೆ ಮುಂಚಿತವಾಗಿ) ಅವನ ಮುಂದುಗಡೆಯಲ್ಲಿ ಉಷಸ್ಸು ಮೂವತ್ತು ಯೋಜನಗಳನ್ನು ಬಂದಿರುತ್ತದೆ. ಇದರಿಂದ ಸೂರ್ಯನು ಇರುವ ಪ್ರದೇಶದ ಮುಂದುಗಡೆಯಲ್ಲಿ ಮೂವತ್ತು ಯೋಜನಗಳ ದೂರದಲ್ಲಿ ಸೂರ್ಯನ ಉದಯವು ಆದಹಾಗೆ ಕಾಣುತ್ತದೆ. ಈ ಪ್ರಕಾರವಾದ ಸನ್ನಿವೇಶವು ಎಲ್ಲಾ ಪ್ರದೇಶಗಳಲ್ಲಿಯೂ ಸಂಭವಿಸುವುದಾಗಿರುತ್ತದೆ.

ಹೀಗೆಯೇ ಉಷಸ್ಸೂ ಕೂಡ ತಾನು ಇರುವ ಪ್ರದೇಶದ ಮುಂದುಗಡೆಯಲ್ಲಿ ಮೂವತ್ತು ಯೋಜನಗಳ ದೂರದಲ್ಲಿರುವ ಪ್ರದೇಶದಲ್ಲಿ ಉದಯವನ್ನು ಹೊಂದಿರುತ್ತದೆ. ಲಂಕಾನಗರವೇ ಮೊದಲಾದ ಎಲ್ಲಾ ಪ್ರದೇಶಗಳಲ್ಲಿಯೂ ಇರುವವರೆಲ್ಲರಿಗೂ ಉಷಸ್ಸಿನ ಉದಯವು ಒಂದೇ ವಿಧವಾಗಿ ಗೋಚರವಾಗುತ್ತದೆ ಎಂದು ತಿಳಿಯಬೇಕು.

ಹೀಗೆ ಇರುವಾಗ ಒಂದು ಪ್ರದೇಶದಲ್ಲಿ ಉಷಸ್ಸಿನ ಪ್ರಕಾಶವು ಕಂಡುಬರುವಂತೆಯೇ ಇತರ ಎಲ್ಲಾ ಪ್ರದೇಶಗಳಲ್ಲಿಯೂ ಒಂದೇಕಾಲದಲ್ಲಿ ಒಂದೇ ಸಮನಾದ ಉಷಸ್ಸಿನ ಪ್ರಕಾಶವು ಎಲ್ಲರಿಗೂ ಗೋಚರವಾಗುತ್ತದೆ. ಇದರಿಂದ ಉಷಃಕಾಲವನ್ನು ಪ್ರಾರಂಭಮಾಡಿಕೊಂಡು ದಿನಗಳನ್ನು ಬೇರೆ ಬೇರೆಯಾಗಿರುವಂತೆ ವ್ಯವಹಾರಮಾಡುವ ಕಾರಣದಿಂದಲೂ, ಆಯಾಯ ಪ್ರದೇಶಗಳು ಬೇರೆಬೇರೆಯಾಗಿರುವುದರಿಂದಲೂ ಒಂದೇ ಉಷಸ್ಸನ್ನು ಬೇರೆಬೇರೆಯಾಗಿ ಇರುವುದೆಂದು ತಿಳಿದು ಉಷಸ್ಸಿನ ಅನೇಕತ್ವವನ್ನೂ ಅವುಗಳಿಗೆ ಪರಸ್ಪರವಾದ ಸಾದೃಶ್ಯವನ್ನೂ (ಹೋಲಿಕೆಯನ್ನೂ) ಇಲ್ಲಿ ವಿವರಿಸಿರುತ್ತದೆ.

ಆಯಾಯ ಪ್ರದೇಶಗಳ ವಿವಕ್ಷೆಯಿಲ್ಲದಿರುವಾಗ ಉಷಸ್ಸು ತನ್ನ ಸ್ವಭಾವದಿಂದ ಪರಿಶುದ್ಧವಾಗಿ ಉದಯವನ್ನು ಹೊಂದುವುದರಿಂದಲೂ, ಆಯಾಯ ಪದಾರ್ಥಗಳೆಲ್ಲವನ್ನೂ ಪರಿಶುದ್ಧವನ್ನಾಗಿ ಮಾಡುವ (ಅಧಿಕವಾದ) ನಿರತಿಶಯವಾದ ಪರಿಶುದ್ಧತೆಯು ಉಷಸ್ಸಿನಲ್ಲಿರುವುದರಿಂದಲೂ, ಉಷಸ್ಸಿನ ಶುಚಿತ್ವ ವಿಷಯದಲ್ಲಿ ಹೆಚ್ಚು ವಿವರಿಸಬೇಕಾಗಿಲ್ಲ.

**ವರುಣಸ್ಯ ದೀರ್ಘಂ ಧಾಮ ಸಚಂತೇ—ಅತ್ಯಂತಮಾಯತಂ ತಮೋನಿವಾರಕಸ್ಯ ಸೂರ್ಯಸ್ಯ ಮೇರುವಲಯಂ ಪ್ರತಿದಿನಂ ಸೇವಂತೇ ।** ಸೂರ್ಯನ ಪ್ರಕಾಶವು ಅವನು ಇರುವ ಪ್ರದೇಶಕ್ಕೆ ಬಹಳ ದೂರದಲ್ಲಿ ಇದ್ದರೂ ಕತ್ತಲೆಯನ್ನು ನಾಶಮಾಡುವುದರಿಂದ ಸೂರ್ಯನ ಪ್ರಕಾಶದ ವ್ಯಾಪನೆಯು ಗೋಚರವಾಗಿರುತ್ತದೆ. ಹೀಗೆ ಇರುವ ಸೂರ್ಯನು ಪ್ರದಕ್ಷಿಣಕ್ರಮದಿಂದ ಸುತ್ತುತ್ತಿರುವ ಮೇರುವನ್ನು ಸೂರ್ಯನು ಸುತ್ತುವಂತೆಯೇ ಉಷಸ್ಸೂ ಕೂಡ ಪ್ರತಿದಿನವೂ ಸುತ್ತುತ್ತದೆ ಎಂದು ವರ್ಣಿಸಿದೆ.

**ವರುಣಃ ವೃಣೋತೀತಿ ಸತಃ** (ನಿ ೧೦-೩) ಎಂದು **ಮೇಘಾವಾರಕತ್ವನಿಮಿತ್ತ**ದಿಂದ ತಮೋನಿವಾರಕನಾದ ಸೂರ್ಯನನ್ನು ವರುಣನೆಂದೂ ಪ್ರಕಾಶವನ್ನು ಬೆಳಗಿಸುವನೆಂದೂ ಹೇಳಿದೆ ಮತ್ತು

**ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾ ಅನು । ತ್ವಂ ವರುಣ ಪಶ್ಯಸಿ ॥**

(ಋ. ಸಂ. ೧-೫೦-೬)

ಈ ಋಕ್ಕಿಗೆ ವ್ಯಾಖ್ಯಾನ ಮಾಡುವಾಗ ವರುಣಶಬ್ದಕ್ಕೆ ಪಾವಕ ಎಂದು ವಿಶೇಷಣವನ್ನಾಗಿ ಹೇಳಿ ಪರಿಶುದ್ಧಿಯನ್ನು ಉಂಟುಮಾಡುವನೆಂದು ಅರ್ಥಮಾಡಿದ್ದಾರೆ. ಮತ್ತು

**ವಿ ದ್ಯಾಮೇಷಿ ರಜಸ್ಪೃಥ್ವಹಾ ಮಿಮಾನೋ ಅಕ್ತುಭಿಃ । ಪಶ್ಯನ್ ಜನ್ಮಾನಿ ಸೂರ್ಯ ॥**

(ಋ. ಸಂ. ೧-೫೦-೭)

ಎಂಬ ಮಂತ್ರವನ್ನು ಉದಹರಿಸಿ, ವರುಣ, ಸೂರ್ಯ ಎಂದು ಸಂಬೋಧಿಸಿರುತ್ತಾರೆ. ಮತ್ತು **ತ್ವಂ ವರುಣ ಪಶ್ಯಸಿ** ಎಂದು ವರುಣಕೃತವಾದ ಪುಣ್ಯಕೃದ್ದರ್ಶನವನ್ನೂ ವಿವರಿಸಿದ್ದಾರೆ. ಮತ್ತೂ

**ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ । ಪ್ರತ್ಯಙ್ ವಿಶ್ವಂ ಸ್ವರ್ದೃಶೇ ॥**

(ಋ. ಸಂ. ೧-೫೦-೫)

ಎಂಬ ಮಂತ್ರವನ್ನು ಉದಹರಿಸಿ ವರುಣ, ಪಾವಕ ಜನಾಁ ಅನು ಭುರಣ್ಯಂತಂ ಪಶ್ಯಸಿ- ತಮೋವಾರಕನಾದ ಪರಿಶುದ್ಧಿಯನ್ನು ಉಂಟುಮಾಡುವ ವರುಣನೇ, ನೀನು ಪುಣ್ಯವಂತರಾದ ಜನರನ್ನು ನೋಡುತ್ತೀಯೆ. **ಪ್ರತ್ಯಙ್ ದೇವಾನಾಂ ವಿಶಃ, ಪ್ರತ್ಯಙ್ ಉದೇಷಿ ಮಾನುಷಾಁ** ದೇವತೆಗಳ ಮತ್ತು ಮನುಷ್ಯರ ಮುಂದುಗಡೆಯಲ್ಲಿ ಉದಯವನ್ನು ಹೊಂದುತ್ತೀಯೆ ಎಂದೂ, **ಪ್ರತ್ಯಙ್ ವಿಶ್ವಂ ಸ್ವರ್ದೃಶೇ** ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುತ್ತಿಯೆ ಎಂದೂ ವ್ಯಾಖ್ಯಾನಮಾಡಿರುವರು. ಇದರಿಂದ ವರುಣ ಶಬ್ದಕ್ಕೆ ಸೂರ್ಯಪರವಾಗಿ ಅರ್ಥವನ್ನು ಸಾಯಣರು ವಿವರಿಸಿದ್ದಾರೆ.

**ಸಚಂತೇ—ಸಚತ ಇತಿ ಸೇವಮಾನಸ್ಯ** (ನಿ. ೩-೨೧) ಸಚತೇ ಎಂಬುವ ಪದಕ್ಕೆ ಸೇವೆಮಾಡುವುದು ಎಂದು ಯಾಸ್ಕರು ವಿವರಿಸಿದ್ದಾರೆ. ಮತ್ತೂ—

**ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ॥**

(ಋ. ಸಂ. ೧-೫೯-೬)

ಇಲ್ಲಿ ಸಚಂತೆ-ಸೇವಂತೆ, ಸೇವಿಸುತ್ತಾರೆ ಎಂದು ಅರ್ಥವನ್ನು ವಿವರಿಸಿದ್ದಾರೆ. ಇದರಿಂದ ಸಚಂತೇ ಎಂಬುವ ಶಬ್ದಕ್ಕೆ ಸೇವೆಮಾಡುವುದು ಎಂದು ಅರ್ಥವನ್ನು ಸಾಯಣರು ವಿವರಿಸಿದ್ದಾರೆ.

**ತ್ರಿಂಶತಂ ಯೋಜನಾನಿ—ತ್ರಿಂಶದ್ಯೋಜನಾನಿ ಪುರತಃ** ಸೂರ್ಯನು ಉದಯಿಸುವ ಪ್ರದೇಶಕ್ಕಿಂತ ಮುಂದುಗಡೆಯಲ್ಲಿ ಮೂವತ್ತು ಯೋಜನಗಳ ದೂರದಲ್ಲಿ ಉಷಸ್ಸು ಉದಯವನ್ನು ಹೊಂದುವುದೆಂದು ಅರ್ಥ.

**ಏಕೈಕಾ ಕ್ರತುಂ ಪರಿಯಂತಿ—ಉಷಾ ಲಂಕಾದ್ಯೈಕೈಕಭೂಭಾಗವರ್ತಿನಾಂ ಗಮನಾಗಮನಾದಿರೂಪಂ ಕರ್ಮ ತದ್ವಿಷಯಾಂ ಪ್ರಜ್ಞಾಂ ವಾ ನಿರ್ವಹಂತಿ ।** ಆಯಾಯ ದಿನಗಳಲ್ಲಿ ಉದಿತವಾಗುವ ಉಷಸ್ಸು ಆಯಾಯ ಪ್ರದೇಶಗಳಲ್ಲಿರುವವರಿಗೆ ಅವರ ವ್ಯವಹಾರಕ್ಕನುಗುಣವಾದ ಕಾರ್ಯಗಳನ್ನು ನೆರವೇರಿಸುತ್ತದೆ. ಅಥವಾ ಆಯಾಯ ಕಾರ್ಯಗಳನ್ನು ನೆರವೇರಿಸುವುದಕ್ಕೆ ಅನುಗುಣವಾದ ಜ್ಞಾನವನ್ನು ಅನುಗ್ರಹಿಸುತ್ತದೆ ಎಂದು ಅರ್ಥ.

ಯಾಸ್ಕರು ಕ್ರತುಶಬ್ದವನ್ನು ಕರ್ಮನಾಮಗಳಲ್ಲಿಯೂ (ನಿ. ೩-೨) ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಪಾಠಮಾಡಿ,

**ಉತಸ್ಯ ವಾಜೀ ಕ್ಷಿಪಣಿಂ ತುರಣ್ಯತಿ ಗ್ರೀವಾಯಾಂ ಬದ್ಧೋ ಅಪಿಕಕ್ಷ ಆಸನಿ ।**
**ಕ್ರತುಂ ದಧಿಕ್ರಾ ಅನು ಸಂತವೀತ್ವತ್ಪಥಾಮಂಕಾಂಸ್ಯನ್ವಾಪನೀಫಣತ್ ॥**

(ಋ. ಸಂ. ೪-೪೦-೪)

ಎಂಬ ಋಕ್ಕನ್ನು ಉದಹರಿಸಿ ಕ್ರತುಂ ದಧಿಕ್ರಾಃ ಕರ್ಮ ವಾ ಪ್ರಜ್ಞಾಂ ವಾ (ನಿ. ೨-೨೮) ಎಂದು **ಕ್ರತು** ಶಬ್ದಕ್ಕೆ ವ್ಯಾಖ್ಯಾನಮಾಡಿ **ಕರ್ಮ ಅಥವಾ ಪ್ರಜ್ಞಾ** ಎಂದು ಎರಡು ವಿಧವಾದ ಅರ್ಥವನ್ನೂ ವಿವರಿಸಿದ್ದಾರೆ. ಇದನ್ನು ಅನುಸರಿಸಿ ಸಾಯಣರೂ ಎರಡು ವಿಧವಾದ ಅರ್ಥವನ್ನು ವಿವರಿಸಿರುವರು.

**ಉದಯೋ ಯೋ ಲಂಕಾಯಾಂ ಸೋಽಸ್ತಮಯಃ ಸವಿತುರೇವ ಸಿದ್ಧಪುರೇ ।**
**ಮಧ್ಯಾಹ್ನೋ ಯವಕೋಟ್ಯಾಂ ರೋಮಕವಿಷಯೇಽರ್ಧರಾತ್ರಃ ಸ್ಯಾತ್ ॥**

ಸೂರ್ಯನು ಲಂಕಾನಗರದಲ್ಲಿ ಉದಯವನ್ನು ಹೊಂದಿದಾಗ ಸಿದ್ಧಪುರದಲ್ಲಿ ಅಸ್ತವೂ, ಯವಕೋಟಿ ಎಂಬ ಪ್ರದೇಶದಲ್ಲಿ ಮಧ್ಯಾಹ್ನವೂ, ರೋಮಕವೆಂಬ ಪ್ರದೇಶದಲ್ಲಿ ಅರ್ಧರಾತ್ರಿಯೂ ಆಗುತ್ತದೆ ಎಂದು ಸೂರ್ಯನ ಗತಿವಿಶೇಷದಿಂದ ಉಂಟಾಗುವ ಉದಯಾಸ್ತಗಳ ಕ್ರಮವನ್ನು ಬೋಧಿಸುವ ಜ್ಯೋತಿಶ್ಶಾಸ್ತ್ರದ ಸಿದ್ಧಾಂತವನ್ನೂ ಇಲ್ಲಿ ಸಾಯಣರು ವರ್ಣಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಸದೃಶೀಃ**—ದೃಶಿರ್ ಪ್ರೇಕ್ಷಣೇ. ಧಾತು. ಕಞ್‌ಪ್ರತ್ಯಯ. ಸ್ತ್ರೀತ್ವದಲ್ಲಿ **ಟಿಡ್ಢಾಣಞ್**—(ಪಾ. ಸೂ. ೪-೧-೧೫) ಎಂಬುದರಿಂದ ಙೀಪ್. ಇದಕ್ಕೆ ಬಹುವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣ ದೀರ್ಘ.

**ಸಚಂತೇ**—ಷಚ ಸೇಚನೇ ಸೇವನೇ ಚ. ಧಾತು. **ಧಾತ್ವಾದೇಃ ಷಃ ಸಃ** ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. ಲಟ್‌ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅನವದ್ಯಾಃ**—ನ ವಿದ್ಯತೇ ಅವದ್ಯಂ ಯಾಸಾಂ ತಾಃ ಅನವದ್ಯಾಃ. **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ.

**ಏಕೈಕಾ**—**ಕ್ರಿಯಾಸಮಭಿಹಾರೇ ಸರ್ವನಾಮ್ನೋ ದ್ವೇ ಭವತಃ** ಎಂಬುದರಿಂದ ಕ್ರಿಯಾಸಮಭಿಹಾರ ತೋರುವಾಗ ದ್ವಿರ್ವಚನ. **ತಸ್ಯ ಪರಮಾಮ್ರೇಡಿತಮ್** (ಪಾ. ಸೂ. ೮-೧-೨.) ಎಂಬುದರಿಂದ ಪರಕ್ಕೆ ಆಮ್ರೇಡಿತ ಸಂಜ್ಞೆ ಬರುತ್ತದೆ. **ಅನುದಾತ್ತಂಚ** (ಪಾ. ಸೂ. ೮-೧-೩) ಎಂಬುದರಿಂದ ಅದು ಅನುದಾತ್ತವಾಗುತ್ತದೆ.

**ಯಂತಿ**—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಽಂತಃ** ಎಂಬುದರಿಂದ ಅಂತಾದೇಶ ಬಂದಾಗ **ಇಣೋ ಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತು ವಿನ ಇಕಾರಕ್ಕೆ ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. || ೮ ||

---

|| ಸಂಹಿತಾಪಾಠಃ ||

ಜಾನತ್ಯಹ್ನಃ ಪ್ರಥಮಸ್ಯ ನಾಮ ಶುಕ್ರಾ ಕೃಷ್ಣಾದಜನಿಷ್ಟ ಶ್ವಿತೀಚೀ ।
ಋತಸ್ಯ ಯೋಷಾ ನ ಮಿನಾತಿ ಧಾಮಾಹರಹರ್ನಿಷ್ಕೃತಮಾಚರಂತೀ || ೯ ||

|| ಪದಪಾಠಃ ||

ಜಾನತೀ । ಅಹ್ನಃ । ಪ್ರಥಮಸ್ಯ । ನಾಮ । ಶುಕ್ರಾ । ಕೃಷ್ಣಾತ್ । ಅಜನಿಷ್ಟ । ಶ್ವಿತೀಚೀ ।
ಋತಸ್ಯ । ಯೋಷಾ । ನ । ಮಿನಾತಿ । ಧಾಮ । ಅಹಃऽಅಹಃ । ನಿಃऽಕೃತಂ । ಆऽಚರಂತೀ || ೯ ||

|| ಸಾಯಣಭಾಷ್ಯಂ ||

**ಉಷಾಃ ಪ್ರಥಮಸ್ಯ ಮುಖ್ಯಸ್ಯ ಪ್ರಥಮಾನಸ್ಯ ವಾಹ್ನೋ ದಿವಸಸ್ಯ ನಾಮ ನಮನಮಾಗಮನಂ ಜಾನತ್ಯವಗಚ್ಛಂತೀ । ಪ್ರಾಣಿನಾಂ ಪ್ರಜ್ಞಾಪಯಂತೀತ್ಯರ್ಥಃ । ಸೋಷಾಃ ಶುಕ್ರಾ ಸ್ವತೋ ದೀಪ್ತಾ ಅತ ಏವ ಶ್ವಿತೀಚೀ ಶ್ವೈತ್ಯಂ ಗಚ್ಛಂತೀ ಪ್ರಕಾಶಂ ಪ್ರಾಪ್ನುವತೀ ಕೃಷ್ಣಾನ್ನಿಕೃಷ್ಟಾತ್ತಮಸಃ ಸಕಾಶಾದಜನಿಷ್ಟ । ಪ್ರಾದುರ್ಭವತಿ । ಯದ್ಯಪಿ ತಮಸಃ ಸಕಾಶಾನ್ನೋತ್ಪದ್ಯತೇ ತಥಾಪಿ ತದನಂತರಭಾವಿತ್ವಾತ್ತತ ಉತ್ಪದ್ಯತ ಇತ್ಯುಪಚರ್ಯತೇ । ಉತ್ಪನ್ನಾ ಸಾ ಋತಸ್ಯ ಸತ್ಯಭೂತಸ್ಯಾದಿತ್ಯಸ್ಯ ಧಾಮ ತೇಜೋಯುಕ್ತಂ ಸ್ಥಾನಂ ಯೋಷಾ ಮಿಶ್ರಯಂತೀ ನ ಮಿನಾತಿ । ನ ಹಿನಸ್ತಿ । ತದೀಯಂ ತೇಜೋ ನ ಪರಾಭವತಿ । ಅಪಿ ತ್ವಹರಹಃ ಸರ್ವೇಷ್ವಹಃಸು ನಿಷ್ಕೃತಮಾಚರಂತೀ । ಅಲಂಕಾರಶೋಭಾಂ ಕುರ್ವತೀ । ಯದ್ವಾ । ಋತಸ್ಯ ಸತ್ಯಭೂತಸ್ಯ ಯಜ್ಞಸ್ಯ ಧಾಮ ದೇವಯಜನಾಖ್ಯಂ ಸ್ಥಾನಂ ಯೋಷಾ ಮಿಶ್ರಣಶೀಲಾ ಸತೀ ನ ಮಿನಾತಿ । ನ ಹಿನಸ್ತಿ । ಕಿಂತ್ವಹರಹಃ ಸರ್ವೇಷು ಯಾಗದಿವಸೇಷು ನಿಷ್ಕೃತಂ ಹವಿರಾದೀನಾಂ ಪ್ರಕಾಶನರೂಪಮಲಂಕಾರಮಾಚರಂತೀ ಕುರ್ವಂತೀ । ತಾದೃಶ್ಯುಷಾ ಅಜನಿಷ್ಟೇತಿ ಪೂರ್ವತ್ರಾನ್ವಯಃ ||**

|| ಪ್ರತಿಪದಾರ್ಥ ||

**ಋತಸ್ಯ**—ಸತ್ಯಭೂತನಾದ ಆದಿತ್ಯನ (ಯಜ್ಞದ) । **ಧಾಮ**—ತೇಜೋಯುಕ್ತವಾದ ಸ್ಥಾನವನ್ನು (ಪ್ರದೇಶವನ್ನು) । **ಯೋಷಾ**—ಸೇರಿದವಳಾಗಿದ್ದರೂ (ಉಷೆಯು) । **ನ ಮಿನಾತಿ**—(ಆದಿತ್ಯನ ತೇಜಸ್ಸಿಗೆ)ಪರಾಭವ

ವನ್ನುಂಟುಮಾಡುವುದಿಲ್ಲ । (**ಅಪಿತು**—ಆದರೆ) । **ಅಹರಹಃ**—ಪ್ರತಿದಿವಸವೂ । **ನಿಷ್ಕೃತಂ ಆಚರಂತೀ**—ಅಲಂಕಾರಭೂತವಾದ ಶೋಭೆಯನ್ನು ಕೊಡುವ (ಹವಿರಾದಿ ಪ್ರಕಾಶರೂಪ ಅಲಂಕಾರವನ್ನು ಉಂಟುಮಾಡುವ) । (**ಉಷಾ**—ಉಷೋದೇವತೆಯು) । **ಅಹ್ನಃ**—ದಿವಸದ । **ಪ್ರಥಮಸ್ಯ**—ಆದಿಭಾಗದ । **ನಾಮ**—ಆಗಮನವನ್ನು । **ಜಾನತೀ**—ತಿಳಿದವಳಾಗಿ (ಪ್ರಪಂಚಕ್ಕೆ ತಿಳಿಸುವವಳಾಗಿ) । **ಶುಕ್ರಾ**—ಸ್ವತಃ ದೀಪ್ತಳಾಗಿ (ಆದುದರಿಂದಲೇ) । **ಶ್ವಿತೀಚೀ**—ಶ್ವೇತವರ್ಣವನ್ನು ಹೊಂದಿದವಳಾಗಿ । **ಕೃಷ್ಣಾತ್**—ಕೃಷ್ಣವರ್ಣವಾದ ತಮಸ್ಸಿನಿಂದ । **ಅಜನಿಷ್ಟ**—ಪ್ರಾದುರ್ಭವಿಸಿದಳು ।

॥ ಭಾವಾರ್ಥ ॥

ಉಷಸ್ಸು (ತಾನು) ಆದಿತ್ಯನ ಸ್ಥಾನದೊಡನೆ ಸೇರಿದರೂ (ಯಜ್ಞಮಂದಿರವನ್ನು ಪ್ರವೇಶಿಸಿದರೂ) (ಆತನ) ಪ್ರಭೆಗೆ ಕುಂದನ್ನುಂಟು (ಯಜ್ಞಕ್ಕೆ ತೊಂದರೆಯನ್ನುಂಟು)ಮಾಡುವುದಿಲ್ಲ; ಪ್ರತಿ ದಿವಸವೂ (ಆದಿತ್ಯನಿಗೆ) (ಯಾಗಶಾಲೆಗೆ) ಅಲಂಕಾರಭೂತವಾದ ಶೋಭೆಯನ್ನು (ಹವಿರಾದಿಪ್ರಕಾಶನರೂಪ ಅಲಂಕಾರವನ್ನು) ಕೊಡುತ್ತಾ (ಉಂಟುಮಾಡುತ್ತಾ) ದಿವಸದ ಆದಿಭಾಗವನ್ನು (ಪ್ರಪಂಚಕ್ಕೆ) ತಿಳಿಸುತ್ತಾ ಸ್ವತಃ ಪ್ರಕಾಶಳಾ(ದುದರಿಂದ) ಶ್ವೇತವರ್ಣಳಾಗಿ, ಕಪ್ಪಾದ (ಅಂಧಕಾರದೊಳಗಿಂದ) ಉದ್ಭವಿಸುತ್ತಾಳೆ.

## English Translation.

The self-illumined Dawn, announcing the declination of the first (portion) of the day, is born white-shining out of the gloom: cleansing (with the radiance) of the sun, she impairs not his splendour, but daily adds embellishment (to his lustre).

॥ ವಿಶೇಷವಿಷಯಗಳು ॥

**ಜಾನತೀ ಅವಗಚ್ಛನ್ತೀ ಪ್ರಾಣಿನಾಂ ಪ್ರಜ್ಞಾಪಯಂತೀ ।** ಉಷಸ್ಸು (ಅಹಸ್ಸಿನ)ದಿವಸದ ಪ್ರಾರಂಭವನ್ನು ತಿಳಿದು ಪ್ರಾಣಿಗಳಿಗೆಲ್ಲರಿಗೂ ಅದನ್ನು ತಿಳಿಸುತ್ತದೆ ಎಂದು ಅರ್ಥ.

**ಕೃಷ್ಣಾತ್ ಅಜನಿಷ್ಟ ನಿಕೃಷ್ಟಾತ್ ತಮಸಃ ಸಕಾಶಾತ್ ಪ್ರಾದುರ್ಭವತಿ ।** ಉಷಸ್ಸು (ರಾತ್ರಿಯ ಕತ್ತಲೆಯು ಇತರರಿಗೆ ತೊಂದರೆಯನ್ನು ಕೊಡುವ ಕಾರಣ ಅದು ಕಡಿಮೆಯಾದನಂತರ)ಅಧಮ ಸ್ವಭಾವದಿಂದ ಇರುವ ಕತ್ತಲೆಯಿಂದ ಉತ್ಪನ್ನವಾಗುವುದು. ರಾತ್ರಿಯಲ್ಲಿ ಕತ್ತಲೆಯು ಬಹಳವಾಗಿ ವ್ಯಾಪಿಸಿರುವುದರಿಂದಲೂ, ರಾತ್ರಿಯ ಕೊನೆಯ ಭಾಗದಲ್ಲಿ ಉಷಸ್ಸು ಉದಯವನ್ನು ಹೊಂದುವುದರಿಂದಲೂ, ಕತ್ತಲೆಯಿಂದಲೇ ಉಷಸ್ಸಿನ ಉತ್ಪತ್ತಿಯು ಉಂಟಾಗಿದೆಯೆಂದು ವರ್ಣಿಸಿದೆ. ಕತ್ತಲೆಯು ಕಳೆದನಂತರ ಉದಿತವಾಗುವುದರಿಂದ ಈ ವ್ಯಪದೇಶವು ಔಪಚಾರಿಕವಾಗಿರುತ್ತದೆ. (ಈ ಸೂಕ್ತದ ಪೀಠಿಕೆಯನ್ನು ನೋಡಿ)

**ಋತಸ್ಯ ಧಾಮ ಯೋಷಾ ನ ಮಿನಾತಿ**—ಎಂಬ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ಸಾಯಣರು ಹೇಳಿರುವರು. ಋತ ಶಬ್ದಕ್ಕೆ ಸತ್ಯನಾಗಿರುವ ಆದಿತ್ಯನೆಂದೂ, ಅವನ ತೇಜಸ್ಸಿನ ಸ್ಥಾನವನ್ನು ಉಷಸ್ಸು ತನ್ನ ತೇಜಸ್ಸಿನೊಡನೆ ಸೇರಿಸುವುದಾದರೂ ಆ ತೇಜಸ್ಸನ್ನು ತಿರಸ್ಕಾರ ಮಾಡುವುದಿಲ್ಲ ಎಂದು ಮೊದಲನೆಯ ಅರ್ಥವು.

ಋತಶಬ್ದವು ಉದಕ(ಪರ್ಯಾಯ)ನಾಮಗಳಲ್ಲಿ (ನಿ. ೨-೧೪) ಪಠಿತವಾಗಿದೆ. **ಅಪಿಗುಋರ್ತಂ ನಃ** ಎಂಬಲ್ಲಿ (ನಿ. ೪-೧೯) **ಸತ್ಯಂ ವಾ ಯಜ್ಞಂ ವಾ** ಎಂದು ಅರ್ಥವನ್ನು ವಿವರಿಸಿರುವುದರಿಂದ ಸತ್ಯವೆಂಬ ಅರ್ಥವನ್ನು ಅನುಸರಿಸಿ ಮೊದಲನೆಯ ಅರ್ಥವನ್ನು ವಿವರಿಸಿದೆ.

ದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುವ ಯಜ್ಞಪ್ರದೇಶವೆಂದು ಋತ ಶಬ್ದದ ಅರ್ಥವನ್ನು ಅನುಸರಿಸಿ **ದೇವಯಜನಾಖ್ಯಂ ಸ್ಥಾನಂ ಯೋಷಾ ಮಿಶ್ರಣಶೀಲಾ ಸತೀ ನ ಮಿನಾತಿ ನ ಹಿನಸ್ತಿ ಕಿಂತು ಅಹರಹಃ ಸರ್ವೇಷು ಯಾಗದಿವಸೇಷು ನಿಷ್ಕೃತಂ ಹವಿರಾದೀನಾಂ ಪ್ರಕಾಶನರೂಪಮಲಂಕಾರಂ ಆಚರಂತೀ ಕುರ್ವತೀ ಅಜನಿಷ್ಟ** ಉಷಸ್ಸು ಪ್ರತಿದಿನದಲ್ಲಿಯೂ ನಡೆಯುವ ಆಯಾಯ ಯಾಗ ದಿವಸಗಳ ಯಾಗ ಕಾಲಗಳಲ್ಲಿ ತನ್ನ ಪ್ರಕಾಶವನ್ನು ಬೆಳಗಿಸಿ ಆಯಾಯ ಹವಿಸ್ಸುಗಳನ್ನು (ಪ್ರಕಾಶ)ಪ್ರಕಟ ಮಾಡುತ್ತಾ ಯಜ್ಞವನ್ನು ನೆರವೇರಿಸುವುದು ಎಂದು ಉಷಸ್ಸಿನ ಉದಯವು ಇಲ್ಲಿ ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜಾನತೀ**—ಜ್ಞಾ ಅವಬೋಧನೇ. ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶತೃಪ್ರತ್ಯಕ್ಕೆ **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾವಿಕರಣ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಆಕಾರಕ್ಕೆ ಲೋಪ. **ಜ್ಞಾ ಜನೋರ್ಜಾ** (ಪಾ. ಸೂ. ೭-೩-೭೯) ಎಂಬು ದರಿಂದ ಧಾತುವಿಗೆ ಜಾದೇಶ. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ನುಮ್‌ರಹಿತ ವಾದ ಶತೃ ಪ್ರತ್ಯಯದ ಪರದಲ್ಲಿ ಙೀಪ್ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಕೃಷ್ಣಾತ್**—ಕೃಷು ವಿಲೇಖನೇ ಧಾತು. **ಕೃಷೇರ್ವರ್ಣೇ** (ಉ. ಸೂ. ೩-೨೪) ಎಂಬುದರಿಂದ ನಕ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವದಿಲ್ಲ. ಷಕಾರಯೋಗವಿರುವುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಪಂಚಮೀಏಕವಚನಾಂತರೂಪ.

**ಅಜನಿಷ್ಟ**—ಜನೀ ಪ್ರಾದುರ್ಭಾವೇ ಧಾತು. **ಛಂದಸಿ ಲುಙ್‌ಲಙ್‌ಲಿಟಃ**—(ಪಾ. ಸೂ. ೩-೩-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಚ್ಲಿಗೆ ಸಿಚಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ**—ಎಂಬುದರಿಂದ ಅದಕ್ಕೆ ಇಡಾಗಮ. **ಆದೇಶಪ್ರತ್ಯಯಯೋಃ**—ಎಂಬುದ ರಿಂದ ಅದಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯ ತಕಾರಕ್ಕೆ ಷ್ಟುತ್ವ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶ್ವಿತೀಚೀ**—ಅಂಚು ಗತಿಪೂಜನಯೋಃ ಧಾತು. ಶ್ವಿತಂ ಅಂಚತಿ ಇತಿ ಶ್ವಿತೀಚೀ. **ಋತ್ವಿಕ್ ದಧೃಕ್**- (ಪಾ. ಸೂ. ೩-೨-೫೧) ಎಂಬುದರಿಂದ ಶ್ವಿತಿ ಎಂಬ ಸುಬಂತವು ಉಪಪದವಾಗಿರುವಾಗ ಈ ಧಾತುವಿಗೆ ಕ್ವಿನ್. **ಅನಿದಿತಾಂ ಹಲಃ**—ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಸ್ತ್ರೀತ್ವದಲ್ಲಿ ಉಗಿತ್ತಾದುದರಿಂದ ಙೀಪ್. **ಅಚಃ**—(ಪಾ. ಸೂ. ೬-೪-೧೩೮)ಎಂಬುದರಿಂದ ಭಸಂಜ್ಞಾ ಇರುವುದರಿಂದ ಧಾತುವಿನ ಅಕಾರಕ್ಕೆ ಲೋಪ.

**ಚೌ**—(ಪಾ. ಸೂ. ೬-೩-೧೩೮)ಎಂಬುದರಿಂದ ಲುಪ್ತನಕಾರ ಅಕಾರವುಳ್ಳ ಅಂಚುಧಾತುವು ಪರವಾದುದರಿಂದ ಪೂರ್ವದ ಇಕ್ಕಿಗೆ ದೀರ್ಘ. ಅನುದಾತ್ತವಾದ ಙೀಪನ್ನು ನಿಮಿತ್ತೀಕರಿಸಿ ಉದಾತ್ತವಾದ ಧಾತು ಅಕಾರಲೋಪವಾದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ**—(ಪಾ. ಸೂ. ೬-೧-೧೬೧) ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ.

**ಮಿನಾತಿ**—ಮೀಞ್ ಹಿಂಸಾಯಾಂ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧-)ಎಂಬುದರಿಂದ ಶ್ನಾ ವಿಕರಣ. **ಮೀನಾತೇರ್ನಿಗಮೇ** (ಪಾ. ಸೂ. ೭-೩-೮೧) ಎಂಬುದರಿಂದ ಶ್ನಾ ಪರವಾದಾಗ ಧಾತುವಿಗೆ ಹ್ರಸ್ವ. ಮಿನಾತಿ ಎಂದು ರೂಪವಾಗುತ್ತದೆ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಹರಹಃ**—ನಿತ್ಯಾರ್ಥ ತೋರುವಾಗ **ನಿತ್ಯವೀಪ್ಸಯೋಃ**(ಪಾ.ಸೂ.೮-೧-೪)ಎಂಬುದರಿಂದ ದ್ವಿರ್ವಚನ. ಪರಕ್ಕೆ ಆಮ್ರೇಡಿತಸಂಜ್ಞೆ ಇರುವಾಗ **ಅನುದಾತ್ತಂ ಚ**—(ಪಾ. ಸೂ. ೮-೧-೩) ಎಂಬುದರಿಂದ ಸರ್ವಾನುದಾತ್ತವಾಗುತ್ತದೆ.

**ನಿಷ್ಕೃತಮ್**—ಡುಕೃಞ್ ಕರಣೇ. ಕರ್ಮಣಿಯಲ್ಲಿ **ನಿಷ್ಠಾ**—ಎಂಬುದರಿಂದ ಕ್ತ ಪ್ರತ್ಯಯ **ಗತಿರನಂತರಃ**—ಎಂಬುದರಿಂದ ಗತಿಗೆ ಪ್ರಕೃತಿಸ್ವರ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ **ಪ್ರವೃದ್ಧಾದೀನಾಂ ಚ**—(ಪಾ. ಸೂ. ೬-೨-೧೪೭) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ.

**ಆ ಚರಂತೀ**—ಚರ ಗತಿಭಕ್ಷಣಯೋಃ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. **ಶಪ್‌ಶ್ಯನೋರ್ನಿತ್ಯಮ್**—(ಪಾ. ಸೂ. ೭-೧-೮೧)ಎಂಬುದರಿಂದ ನುಮಾಗಮ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತು ಸ್ವರ ಉಳಿಯುತ್ತದೆ. ಗತಿ ಸಮಾಸದಲ್ಲಿ ಕೃದುತ್ತರಪದ ಪ್ರಕೃತಿ ಸ್ವರ ಬರುತ್ತದೆ. ॥ ೯ ॥

॥ ಸಂಹಿತಾಪಾಠಃ ॥

ಕನ್ಯೇವ ತನ್ವಾ ಶಾಶದಾನಾಁ ಏಷಿ ದೇವಿ ದೇವಮಿಯಕ್ಷಮಾಣಂ ।
ಸಂಸ್ಮಯಮಾನಾ ಯುವತಿಃ ಪುರಸ್ತಾದಾವಿರ್ವಕ್ಷಾಂಸಿ ಕೃಣುಷೇ
ವಿಭಾತೀ ॥ ೧೦ ॥

‖ ಪದಪಾಠಃ ‖

ಕನ್ಯಾ᳚ಽಇವ । ತನ್ವಾ᳚ । ಶಾಶ॑ದಾನಾ । ಏಷಿ॑ । ದೇ॒ವಿ॒ । ದೇ॒ವಂ । ಇಯ॑ಕ್ಷಮಾಣಂ ।

ಸಂ॒ಽಸ್ಮಯ॑ಮಾನಾ । ಯು॒ವ॒ತಿಃ । ಪು॒ರಸ್ತಾ᳚ತ್ । ಆ॒ವಿಃ । ವಕ್ಷಾಂ᳚ಸಿ । ಕೃ॒ಣು॒ಷೇ॒ । ವಿ॒ಽಭಾ॒ತೀ ॥ ೧೦॥

‖ ಸಾಯಣಭಾಷ್ಯಂ ‖

ತನ್ವಾ ಶರೀರೇಣ ಶಾಶದಾನಾ ಶಾಶಾದ್ಯಮಾನಾ ಸ್ಪಷ್ಟತಾಂ ಪ್ರಾಪ್ನುವತೀ । ಶಾಶದಾನಃ ಶಾಶಾದ್ಯಮಾನಃ । ನಿ. ೬-೧೬ । ಇತಿ ಯಾಸ್ಕಃ । ಕನ್ಯೇವ ಕಮನೀಯಾ ಕನ್ಯಕೇವ । ಕನ್ಯಾ ಕಮನೀಯಾ ಭವತಿ ಕ್ವೇಯಂ ನೇತವ್ಯೇತಿ ವಾ । ನಿ. ೪-೧೫ । ಇತಿ ಯಾಸ್ಕಃ । ಸಾ ಯಥಾ ಜನಾಂತಿಕೇ ವಿವಸನಾ ಸಂಚರತಿ ತಥಾ ಹೇ ಉಷಸ್ತ್ವಂ ಕನ್ಯಾ ಕಮನೀಯಾಪ್ರಗಲ್ಭಾ ಸತೀ ತನ್ವಾ ಶರೀರೇಣ ಶಾಶದಾನಾ ಸ್ಪಷ್ಟತಾಂ ಗಚ್ಛಂತೀ ದೃಶ್ಯಸೇ । ಪಶ್ಚಾತ್ಪ್ರಗಲ್ಭಾ ಸತೀ ಹೇ ದೇವಿ ದೇವನಶೀಲ ಇಯಕ್ಷಮಾಣಂ ಯುಷ್ಟುಮಿಚ್ಛಂತಮಭಿಮತಂ ದಾತುಮಿಚ್ಛಂತಂ ವಾ ದೇವಂ ದ್ಯೋತನಸ್ವಭಾವಂ ಸೂರ್ಯರೂಪಂ ಪ್ರಿಯಮೇಷಿ । ಗಚ್ಛಸಿ । ತತಃ ಪಶ್ಚಾತ್ ಯುವತಿರ್ಯೌವನೋಪೇತಾ ಸತೀ ಪುರಸ್ತಾತ್ಪತ್ಯುಃ ಸೂರ್ಯಸ್ಯ ಪುರತಃ ಸಂಸ್ಮಯಮಾನಾ ಸಮಿಷದ್ಧಸಂತೀ ಹಾಸ್ಯಂ ಕುರ್ವತೀ ವಿಭಾತ್ಯತ್ಯಂತಂ ಭಾಸಮಾನಾ ವಕ್ಷಾಂಸಿ ವಕ್ಷಸೋಪಲಕ್ಷಿತಾನವಯವಾನಾವಿಷ್ಕೃಣುಷೇ । ಪ್ರಕಟೀಕರೋಷಿ । ಯದ್ವಾ । ಯುವತಿರಿತಿ ಲುಪ್ತೋಪಮಾ । ಯಥಾ ಲೋಕೇ ಪ್ರಗಲ್ಭಾ ಯೋಷಿತ್ ಪುರಸ್ತಾತ್ಪ್ರಿಯತಮಸ್ಯ ಪುರತಃ ಸಂಸ್ಮಯಮಾನಾ ದಂತಪ್ರದರ್ಶನಾಯೇಷದ್ಧಸನಂ ಕುರ್ವತೀ ವಕ್ಷಾಂಸಿ ವಕ್ಷಸೋಪಲಕ್ಷಿತಾನಿ ಗೋಪ್ಯಾನಿ ಬಾಹುಮೂಲಸ್ತನಾದೀನ್ಯಾವಿಷ್ಕರೋತಿ ತಥಾ ತ್ವಮಪೀತ್ಯರ್ಥಃ । ಯದ್ವಾ । ಪುರಸ್ತಾತ್ಪೂರ್ವಸ್ಯಾಂ ದಿಶಿ ಸಂಸ್ಮಯಮಾನಾ ಸ್ಮಿತೋಪಮಪ್ರಕಾಶಂ ಕುರ್ವತೀ ಯುವತಿಃ ಸರ್ವೇಷು ಭಾವೇಷು ಮಿಶ್ರಣಶೀಲಾ ವಕ್ಷಾಂಸಿ । ವಕ್ಷ ಇತಿ ರೂಪನಾಮ । ದಂತಸ್ಥಾನೀಯಾನಿ ನೀಲಪೀತಾದೀನಿ ರೂಪಾಣ್ಯಾವಿಷ್ಕರೋಷಿ ॥

‖ ಪ್ರತಿಪದಾರ್ಥ ‖

**ದೇವಿ**—ಎಲೈ ದೇವಿಯೇ । **ಕನ್ಯಾ ಇವ**—ಕನ್ನಿಕೆಯಂತೆ । **ತನ್ವಾ**—ಶರೀರದಿಂದ । **ಶಾಶದಾನಾ**—ಸ್ಪಷ್ಟತ್ವವನ್ನು ಹೊಂದಿದವಳಾಗಿ । **ಇಯಕ್ಷಮಾಣಂ**—(ಅಭಿಮತವನ್ನು) ಕೊಡಲಿಚ್ಛೆಯುಳ್ಳ । **ದೇವಂ**—ದ್ಯೋತಮಾನನಾದ (ಸೂರ್ಯರೂಪೀಪ್ರಿಯನನ್ನು) । **ಏಷಿ**—ಸಮಿಾಪಿಸುತ್ತಿ । **(ತತಃ**—ಅನಂತರ) । **ಯುವತಿಃ**—ಯೌವನೋಪೇತಳಾದ (ನೀನು) । **ಪುರಸ್ತಾತ್**—ಪತಿಯ ಎದುರಿನಲ್ಲಿ । **ಸಂಸ್ಮಯಮಾನಾ**—ಈಷದ್ಧಾಸವುಳ್ಳವಳಾಗಿ । (ಹಾಸ್ಯಮಾಡುತ್ತಾ) । **ವಿಭಾತೀ**—ವಿಶೇಷಕಾಂತಿಯುಳ್ಳವಳಾಗಿ । **ವಕ್ಷಾಂಸಿ**—ವಕ್ಷಸ್ಸು ಮೊದಲಾದ ಎಲ್ಲಾ ಅವಯವಗಳನ್ನೂ । **ಆವಿಃ ಕೃಣುಷೇ**—ವ್ಯಕ್ತಪಡಿಸುತ್ತಿ । **ಪುರಸ್ತಾತ್**—ಪೂರ್ವದಿಕ್ಕಿನಲ್ಲಿ । **ಸಂಸ್ಮಯಮಾನಾ**—ಮಂದಹಾಸಸದೃಶವಾದ ಕಾಂತಿಯನ್ನು ಬೀರಿ । **ಯುವತಿಃ**—ನಾನಾವರ್ಣಗಳನ್ನು ತೋರಿಸುವವಳಾಗಿ । **ವಿಭಾತೀ**—ವಿಶೇಷ ಪ್ರಕಾಶಯುಕ್ತಳಾಗಿ । **ವಕ್ಷಾಂಸಿ**—(ನೀಲಪೀತಾದಿ) ರೂಪಗಳನ್ನು । **ಆವಿಃ ಕೃಣುಷೇ**—ಆವಿಷ್ಕರಿಸುತ್ತೀಯೆ.

॥ ಭಾವಾರ್ಥ ॥

ಕನ್ನಿಕೆಯಂತೆ ಸ್ಪಷ್ಟವಾದ ಶರೀರವುಳ್ಳವಳಾಗಿ, ಎಲೈ ದೇವಿ, ಅಭಿಮತ ದಾನಮನಸ್ಕನೂ ದ್ಯೋತಮಾನನೂ ಆದ (ಸೂರ್ಯರೂಪೀಪ್ರಿಯನನ್ನು) ಸಮೀಪಿಸುತ್ತೀ ; (ಅನಂತರ ಯುವತಿಯಂತೆ (ನಿನ್ನ) ಪತಿಯ ಎದುರಿನಲ್ಲಿ ಮಂದ ಹಾಸವನ್ನು ಬೀರಿ, ವಿಶೇಷಕಾಂತಿಯುಳ್ಳವಳಾಗಿ ವಕ್ಷಸ್ಸೇ ಆದಿಯಾಗಿ ಸರ್ವಾವಯವಗಳನ್ನು ವ್ಯಕ್ತಪಡಿಸುತ್ತೀಯೆ) (ಅನಂತರ) ಪೂರ್ವದಿಕ್ಕಿನಲ್ಲಿ ಮಂದಹಾಸಸದೃಶವಾದ ಕಾಂತಿಯನ್ನು ಬೀರಿ, ವಿಶೇಷಪ್ರಕಾಶಯುಕ್ತಳಾಗಿ, ನೀಲಪೀತಾದ್ಯನೇಕ ರೂಪಗಳನ್ನು ವ್ಯಕ್ತಪಡಿಸುತ್ತೀ.

## English Translation

Goddess, manifest in person like a maiden, you go to the resplendent and munificent (sun); and, like a youthful bride (before her husband), you uncover, smiling, your bosom in his presence.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಉಷಸ್ಸನ್ನು ಕನ್ಯಕಾವಸ್ಥೆಯನ್ನು ಹೊಂದಿ ಅನಂತರ ಪ್ರೌಢಾವಸ್ಥೆಯನ್ನೂ ಹೊಂದುವ ಸ್ತ್ರೀಗೆ ಹೋಲಿಸಿದೆ.

**ಕನ್ಯೇವ ತನ್ವಾ ಶಾಶದಾನಾ—ಕಮನೀಯಾ ಕನ್ಯಕೇವ । ಸಾ ಯಥಾ ಜನಾಂತಿಕೇ ವಿವಸನಾ ಸಂಚರತಿ । ತಥಾ ಉಷಸ್ತ್ವಂ ಕಮನೀಯಾ ಅಪ್ರಗಲ್ಭಾ ಸತೀ ತನ್ವಾ ಶರೀರೇಣ ಶಾಶದಾನಾ ಸ್ಪಷ್ಟತಾಂ ಗಚ್ಛಂತೀ ದೃಶ್ಯಸೇ । ಶಾಶದಾನಾ ಶಾಶಾದ್ಯಮಾನಾ ಸ್ಪಷ್ಟತಾಂ ಪ್ರಾಪ್ನುವತೀ ।** ಉಷಸ್ಸು ಅಂದವಾದ ಬಾಲಿಕೆಯ ಹಾಗೆ, ಏನನ್ನೂ ತಿಳಿಯದಿರುವ ಸಣ್ಣ ಮಗುವಿನಂತೆ (ಜನರ) ಹತ್ತಿರದಲ್ಲಿ ನಗ್ನಳಾಗಿ ತಿರುಗಾಡುತ್ತದೆ. ಅಂದರೆ ಉಷಃಕಾಲವನ್ನು ಉದಯಿಸಿದ ಕೂಡಲೇ ಸುಂದರಳಾದ ಬಾಲಿಕೆಯಂತೆ ಇರುವುದೆಂದು ವರ್ಣಿಸಿದೆ.

**ಯಾಸ್ಕರು—ಕನ್ಯಾ ಕಮನೀಯಾ ಭವತಿ । ಕ್ವೇಯಂ ನೇತವ್ಯೇತಿ ವಾ । ಕಮನೇನಾನೀಯತ ಇತಿ ವಾ ಕನತೇರ್ವಾ ಸ್ಯಾತ್ಕಾಂತಿಕರ್ಮಣಃ,** (ನಿ. ೪-೧೫) ಕನ್ಯಾ ಎಂಬ ಶಬ್ದವು ಸೌಂದರ್ಯವನ್ನು ನಿಮಿತ್ತ ಮಾಡಿಕೊಂಡು ಪ್ರಯುಕ್ತವಾಗಿದೆ. ಇಯಂ–ಈ ಬಾಲೆಯು, ಕ್ವ ನೇತವ್ಯಾ-ಎಲ್ಲಿ ಸೇರುವುದು ಎಂಬ ಅರ್ಥದಿಂದ ಲಾಗಲೀ, ಅಥವಾ ಕಮನೇನ–ಇತರರನ್ನು ಬೆರಗುಮಾಡುವ ಅಂದದಿಂದ ಆನೀಯತೆ-ಕರದುಕೊಂಡು ತರಲ್ಪಡುತ್ತಾಳೆ ಎಂಬರ್ಥದಿಂದಲಾಗಲಿ, ಕಾಂತಿಯುಳ್ಳದ್ದೆಂಬ ಅರ್ಥವನ್ನು ಬೋಧಿಸುವ ಕನ ಧಾತುವಿನಿಂದಾಗಲಿ ಕನ್ಯಾ ಎಂಬ ಶಬ್ದದ ರೂಪನಿಷ್ಪತ್ತಿಯು ಉಂಟಾಗಿರುತ್ತದೆ ಎಂದು ವಿವರಿಸಿರುವರು.

ಇದನ್ನು ಅನುಸರಿಸಿ ಸಾಯಣರು ಶರೀರಗತವಾದ ಸೌಂದರ್ಯದಿಂದ ಕಮನೀಯಾ ಸುಂದರಳಾಗಿ ಎಂದು ಅರ್ಥವನ್ನು ವರ್ಣಿಸಿರುತ್ತಾರೆ.

**ಶಾಶದಾನಃ—ಶಾಶಾದ್ಯಮಾನಃ** (ನಿ. ೬-೧೬) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿರುವುದರಿಂದ ಎಲ್ಲರಿಗೂ ಗೋಚರವಾಗುವ ರೀತಿಯನ್ನು ಹೊಂದಿ ಇರುವುದು ಎಂದು ಅರ್ಥ.

**ದೇವಿ ಇಯಕ್ಷಮಾಣಂ ದೇವಂ ಏಷಿ**—ಎಂಬ ಈ ವಾಕ್ಯದಿಂದ ಪ್ರಕಾಶವನ್ನು ಬೀರುವ ಸ್ವಭಾವವುಳ್ಳ ಉಷಸ್ಸು ಯಾಗಮಾಡಲು ಇಚ್ಛೆಯುಳ್ಳ ಯಜಮಾನನಿಗೆ ಅಥವಾ ಪತಿಯನ್ನು ವರಿಸುವ ಬಾಲಿಕೆಯಾದ ತನಗೆ, ಇಷ್ಟವನ್ನು ನೆರವೇರಿಸಿ ಕೊಡುವ ಪ್ರಕಾಶಕರನಾಗಿರುವ ಸೂರ್ಯನನ್ನು ಪತಿಯನ್ನಾಗಿ ವರಿಸಿ ಹೊಂದುವುದು ಎಂದು ವರ್ಣಿಸಿದೆ.

**ಸಂಸ್ಮಯಮಾನಾ ಯುವತಿಃ ವಕ್ಷಾಂಸಿ ಆವಿಃಕೃಣುಷೆ**—ಎಂಬ ವಾಕ್ಯದಿಂದ ಎರಡುವಿಧವಾದ ಅರ್ಥವನ್ನು ಸಾಯಣರು ವಿವರಿಸುತ್ತಾರೆ. ಮೊದಲನೆಯ ಅರ್ಥದಲ್ಲಿ **ಯುವತಿಃ** ಎಂಬ ಪದವು **ಯುವತಿರಿವ** ಎಂದು ಲುಪ್ತೋಪಮೆಯೆಂದು ವಿವರಿಸಿರುವರು. ಇದರಿಂದ ಪ್ರೌಢಳಾದ ಅಂದರೆ ಭೋಗವನ್ನು ಅನುಭವಿಸಲು ಅರ್ಹವಾದ ವಯಸ್ಸನ್ನೂ ದೇಹಶಕ್ತಿಯನ್ನೂ ಹೊಂದಿರುವ ಸುಂದರಿಯಾದ ಸ್ತ್ರೀಯು ತನ್ನ ಪ್ರಿಯನ ಮುಂದುಗಡೆಯಲ್ಲಿ ತನಗೆ ಇರುವ ಭೋಗೇಚ್ಛೆಯನ್ನು ಪ್ರಕಟಮಾಡುವಹಾಗೆ ಮಂದಸ್ಮಿತವನ್ನೂ ಮತ್ತು ತನ್ನ ಲಾವಣ್ಯವನ್ನೂ ಪ್ರಕಟಗೊಳಿಸುವಂತೆ ಈ ಉಷಸ್ಸು ಸೂರ್ಯನ ಮುಂದುಗಡೆಯಲ್ಲಿ ವರ್ತಿಸುವುದು ಎಂದು ಅಭಿಪ್ರಾಯವನ್ನು ವರ್ಣಿಸಿದೆ.

ಎರಡನೆಯ ಅರ್ಥದಲ್ಲಿ ಪೂರ್ವದಿಕ್ಕಿನಲ್ಲಿ ಮಂದಹಾಸದಂತೆ ಇರುವ ತನ್ನ ಪ್ರಕಾಶವನ್ನು ಬೆಳಗಿಸುತ್ತಾ ತನ್ನ ಪ್ರಕಾಶವನ್ನೂ ಲೋಕದಲ್ಲಿರುವ ವಸ್ತುಗಳೆಲ್ಲವನ್ನೂ (ಕಾಣುವಂತೆ) ಗೋಚರವಾಗುವಂತೆ ಎಲ್ಲರಿಗೂ ಸೇರಿಸಿಕೊಟ್ಟು ಪ್ರಪಂಚದ ಸೌಂದರ್ಯವು ಸರ್ವರಿಗೂ ಗೋಚರವಾಗುವಂತೆ ಉಷಸ್ಸು ವರ್ತಿಸುತ್ತಿರುವುದು ಎಂದು ಅಭಿಪ್ರಾಯವು ವಿವೃತವಾಗಿರುತ್ತದೆ.

**ಉಪೋ ಅದರ್ಶಿ ಶುಂಧ್ಯುವೋ ನ ವಕ್ಷೋ ನೋಧಾ ಇವಾವಿರಕೃತ ಪ್ರಿಯಾಣಿ ।**
**ಅದ್ಮಸನ್ನ ಸಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ ॥**

(ಋ. ಸಂ. ೧-೧೨೪-೪)

ಈ ಋಕ್ಕಿನಲ್ಲಿ ವಕ್ಷಃ ಎಂಬ ಪದಕ್ಕೆ ರೂಪಾಣಿ ಎಂದು ಅರ್ಥವನ್ನು ವಿವರಿಸಿದೆ. ಸಾಯಣರು **ವಕ್ಷಾಂಸಿ—ವಕ್ಷ ಇತಿ ರೂಪನಾಮ. ವನ್ನಸ್ಥಾನೀಯಾನಿ ನೀಲಪೀತಾದೀನಿ ರೂಪಾಣಿ.** ವಕ್ಷಃ ಎಂಬ ಪದವು ರೂಪ ಎಂಬ ಅರ್ಥವನ್ನು ಬೋಧಿಸುತ್ತದೆ. ಯುವತಿಯು ತನ್ನ ದಂತಾದಿಯಾದ ಶರೀರದ ಅವಯವಗಳನ್ನು ಪ್ರಕಟಿ ಮಾಡುವಂತೆ ಉಷಸ್ಸು ನೀಲವರ್ಣ ಪೀತವರ್ಣ ಎಂಬ ವಸ್ತುಗತವಾದ ರೂಪಗಳನ್ನು ಪ್ರಕಟಗೊಳಿಸುವುದು ಎಂದು ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ತನ್ವಾ—**ತೃತೀಯಾ ಏಕವಚನದಲ್ಲಿ ಟಾ ವಿಭಕ್ತಿ. ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ ಸೂ. ೮-೨-೪) ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ.

**ಶಾಶದಾನಾ**—ಶದ್ಲೃ ಶಾತನೇ ಧಾತು. ಅತಿಶಯಾರ್ಥತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨)ಎಂಬುದರಿಂದ ಯಙ್. ಯಙ್ಲುಗಂತದ ಮೇಲೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಛಂದಸ್ಯು-**

**ಭಯೇತಾ**—(ಪಾ. ಸೂ. ೩-೪-೧೧೭)ಎಂಬುದರಿಂದ ಅದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಯಜ್‌ನ ಅಕಾರಕ್ಕೂ **ಯಸ್ಯಹಲಃ**—(ಪಾ. ಸೂ. ೬-೪-೪೯) ಎಂಬುದರಿಂದ ಯಕಾರಕ್ಕೂ ಲೋಪ. **ದೀರ್ಘೋऽಕಿತಃ**—(ಪಾ. ಸೂ. ೭-೪-೮೩) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಹಿಂದಿನ ಸೂತ್ರದಿಂದ ಸಾರ್ವಧಾತುಕಸಂಜ್ಞೆಯೂ ಇರುವುದರಿಂದ **ಅಭ್ಯಸ್ತಾನಾಮಾದಿಃ**—(ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್**— ಎಂಬುದರಿಂದ ಟಾಪ್. **ಆಙೋऽಪ್ರಗೃಹ್ಯಸ್ಯಾನುನಾಸಿಕಃ**—ಎಂಬುದರಿಂದ ಆಕಾರಕ್ಕೆ ಅನುನಾಸಿಕತ್ವ ಬರುತ್ತದೆ.

**ಏಷಿ**—ಇಣ್ ಗತೌ ಧಾತು. ಮಧ್ಯಮಪುರುಷಏಕವಚನದಲ್ಲಿ ಸಿಪ್ ಪ್ರತ್ಯಯ. ಶಪಿಗೆ ಲುಕ್. ಸಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. **ಆದೇಶಪ್ರತ್ಯಯಯೋಃ**—ಎಂಬುದರಿಂದ ಪ್ರತ್ಯಯಕ್ಕೆ ಷತ್ವ.

**ಇಯಕ್ಷಮಾಣಮ್**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಇಚ್ಛಾರ್ಥತೋರುವಾಗ **ಧಾತೋಃಕರ್ಮಣಃಸ**—(ಪಾ. ಸೂ. ೩-೧-೭) ಎಂಬುದರಿಂದ ಸನ್. **ಸನ್ಯಙೋಃ**—ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ ಬಂದಾಗ ಛಾಂದಸವಾಗಿ ಸಂಪ್ರಸಾರಣ ಬರುತ್ತದೆ. ಪೂರ್ವರೂಪ **ಚೋಃಕುಃ**—ಎಂಬುದರಿಂದ ಧಾತು ಜಕಾರಕ್ಕೆ ಕುತ್ವ. **ಖರಿಚ**—ಎಂಬುದರಿಂದ ಚರ್ತ್ವ. **ಆದೇಶಪ್ರತ್ಯಯಯೋಃ** ಎಂಬುದರಿಂದ ಸನಿನಸಕಾರಕ್ಕೆ ಷತ್ವ. **ಆನೇಮುಕ್**—(ಪಾ. ಸೂ. ೭-೨-೮೨) ಎಂಬುದರಿಂದ ಅಂಗಕ್ಕೆ ಮುಕಾಗಮ. ಷಕಾರ ನಿಮಿತ್ತವಾಗಿ ಶಾನಚಿನ ನಕಾರಕ್ಕೆ ಣತ್ವ. **ಅಭ್ಯಸ್ತಾನಾಮಾದಿಃ**—(ಪಾ. ಸೂ. ೬-೧೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಸಂಸ್ಮಯಮಾನಾ**—ಸ್ಮಿಙ್ ಈಷದ್ಧಸನೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಶಪ್** ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ ಅಯಾದೇಶ. **ಆನೇಮುಕ್** ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸ್ತ್ರೀತ್ವವಿವಕ್ಷಾಮಾಡಿದಾಗ ಅದಂತನಿಬಂಧನವಾಗಿ ಟಾಪ್.

**ಯುವತಿಃ**—ಯುವನ್ ಶಬ್ದ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಯೂನಸ್ತಿಃ** (ಪಾ. ಸೂ. ೪-೧-೭೭) ಎಂಬುದರಿಂದ ತಿಪ್ರತ್ಯಯ. **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪುರಸ್ತಾತ್**—**ಪೂರ್ವಾಧರಾವರಾಣಾಮಸಿಪುರಧವಶ್ಚೈಷಾಂ** (ಪಾ. ಸೂ. ೫-೩-೩೯) ಎಂಬುದರಿಂದ ಅಸ್ತಾತಿ ಪ್ರತ್ಯಯ. ಪೂರ್ವಶಬ್ದಕ್ಕೆ ಪುರ್ ಆದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಕೃಣುಷೇ**— ಕೃವಿ ಹಿಂಸಾಕರಣಯೋಶ್ಚ ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಃ ಸೇ** ಎಂಬುದರಿಂದ ಅದಕ್ಕೆ ಸೇ ಆದೇಶ. **ಧಿನ್ವಿಕೃಣ್ವ್ಯೋರ ಚ** (ಪಾ. ಸೂ. ೩-೧-೮೦) ಎಂಬುದರಿಂದ ಅಕಾರ ಅಂತಾದೇಶ. ಉ ವಿಕರಣ. ಇದಿತ್ತಾದುದರಿಂದ ನುಮಾಗಮ. **ಅತೋಲೋಪಃ** ಎಂಬುದರಿಂದ ಅಕಾರ ಲೋಪ. ತಿಙಂತನಿಘಾತಸ್ವರ ಬರುತ್ತದೆ. ॥ ೧೦ ॥



॥ ಸಂಹಿತಾಪಾಠಃ ॥

**ಸುಸಂಕಾಶಾ ಮಾತೃಮೃಷ್ಟೇವ ಯೋಷಾವಿಸ್ತನ್ವಂ ಕೃಣುಷೇ ದೃಶೇ ಕಂ ।**
**ಭದ್ರಾ ತ್ವಮುಷೋ ವಿತರಂ ವ್ಯುಚ್ಛ ನ ತತ್ತೇ ಅನ್ಯಾ ಉಷಸೋ ನಶಂತ ॥ ೧೧ ॥**

॥ ಪದಪಾಠಃ ॥

**ಸು ಽ ಸಂಕಾಶಾ । ಮಾತೃಮೃಷ್ಟಾ ಽ ಇವ । ಯೋಷಾ । ಆವಿಃ । ತನ್ವಂ । ಕೃಣುಷೇ । ದೃಶೇ । ಕಂ ।**
**ಭದ್ರಾ । ತ್ವಂ / ಉಷಃ । ವಿ ಽ ತರಂ । ವಿ । ಉಚ್ಛ । ನ । ತತ್ । ತೇ । ಅನ್ಯಾಃ । ಉಷಸಃ । ನಶಂತ ॥ ೧೧ ॥**

॥ ಸಾಯಣಭಾಷ್ಯಂ ॥

ಹೇ ಉಷೋದೇವಿ ಮಾತೃಮೃಷ್ಟಾ ಮಾತೃಭಿರ್ಜನನೀಭಿಃ ಶುದ್ಧೀಕೃತಾ ಯೋಷೇವ ಸುಸಂಕಾಶಾತ್ಯರ್ಥಂ ಪ್ರಕಾಶಮಾನಾ ತ್ವಂ ತನ್ವಂ ಸ್ವಕೀಯಾಂ ತನುಂ ದೃಶೇ ಸರ್ವೇಷಾಂ ದರ್ಶನಾಯಾವಿಃ ಕೃಣುಷೇ । ಪ್ರಕಟಯಸಿ । ಯಥಾ ಲೋಕೇ ಮಾತ್ರಾದಿನಾ ಸ್ವಲಂಕೃತಾತ್ಯಂತಂ ಶೋಭನಾ ಸತೀ ಸ್ವಕೀಯಂ ಲಾವಣ್ಯೋಪೇತಂ ಸರ್ವಶರೀರಂ ದರ್ಶನಾಯಾವಿಷ್ಕರೋತಿ ತದ್ವತ್ತ್ವಮಪೀತ್ಯರ್ಥಃ । ಅತ್ರ ಕಮಿತಿ ಪಾದಪೂರಣೋಽತ್ರ ವಿಶೇಷಸ್ಯಾಭಾವಾತ್ ಶಿಶಿರಂ ಜೀವನಾಯ ಕಮಿತಿವತ್ । ತಥಾ ಚ ಯಾಸ್ಕಾಚಾರ್ಯಃ । ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ । ನಿ. ೧-೯ । ಇತಿ । ಯದ್ವಾ । ಕಮಿತಿ ಸುಖವಚನಃ । ಸುಖಂ ಯಥಾ ಭವತಿ ತಥಾವಿಷ್ಕೃಣುಷ ಇತ್ಯರ್ಥಃ । ಹೇ ಉಷಃ ಯತ ಏವಂ ಕರೋಷ್ಯತೋ ಭದ್ರಾ ಕಲ್ಯಾಣಶೀಲಾ ಸ್ತುತ್ಯಾ ತ್ವಂ ವಿತರಂ ವ್ಯುಚ್ಛ । ಅಪರಕಮಂಧಕಾರಂ ವಿಪ್ರಕೃಷ್ಟಂ ಯಥಾ ಭವತಿ ತಥಾ ವಿವಾಸಯ । ಅತ್ರ ಯದ್ಯಪಿ ವಿಶೇಷೋ ನ ಶ್ರುತಸ್ತಥಾಪಿ ಪ್ರಕಾಶನಿವರ್ತ್ಯತ್ವಾತ್ಪರಿಹರಣೀಯತ್ವಾಚ್ಚ ವ್ಯುದಸನೀಯಂ ತಮ ಏವೇತಿ ಗಮ್ಯತೇ । ಕಿಂಚ ತೇ ತವ ತದ್ವ್ಯುದಸನಮನ್ಯಾ ಉಷಸೋಽತೀತಾ ಆಗಾಮಿನ್ಯಶ್ಚ ನ ನಶಂತ । ನ ವ್ಯಾಪ್ನುವಂತಿ । ತಥಾ ವ್ಯುಚ್ಛೇತಿ ಭಾವಃ ॥ ನಶಿರ್ವ್ಯಾಪ್ತಿಕರ್ಮಾ । ಇನ್ವತಿ ನಕ್ಷತೀತಿ ವ್ಯಾಪ್ತಿಕರ್ಮಸು ಪಾಠಾತ್ ॥

॥ ಪ್ರತಿಪದಾರ್ಥ ॥

**ಹೇ ಉಷಃ**—ಉಷೋದೇವಿಯೇ । **ಮಾತೃಮೃಷ್ಟಾ**—ತಾಯಿಯಿಂದ ಅಲಂಕರಿಸಲ್ಪಟ್ಟ (ಶುದ್ಧೀಕೃತಳಾದ । **ಯೋಷಾ ಇವ**—ಸ್ತ್ರೀಯಂತೆ । **ಸುಸಂಕಾಶಾ** - ಹೆಚ್ಚು ಪ್ರಕಾಶಮಾನಳಾದ । **ತ್ವಂ**—ನೀನು । **ತನ್ವಂ**—(ಸ್ವ) ಶರೀರವನ್ನು । **ದೃಶೇ**—(ಎಲ್ಲರ) ದರ್ಶನಕ್ಕೋಸ್ಕರ । **ಕಂ**—ಸುಖವಾಗುವಂತೆ । **ಆವಿಷ್ಕೃಣುಷೇ**—ಪ್ರಕಟಿಸುತ್ತೀಯೆ; । (**ಅತಃ**—ಆದ್ದರಿಂದ) । **ಭದ್ರಾ**—ಮಂಗಳಕರಳಾದ (ಆದುದರಿಂದ ಸ್ತುತ್ಯಳಾದ) (**ತ್ವಂ**—ನೀನು) । **ವಿತರಂ**—ಆವರಕವಾದ ಅಂಧಕಾರವನ್ನು । **ವಿ ಉಚ್ಛ**—ಓಡಿಸು । **ತೇ**—ನಿನ್ನ । **ತತ್**—ಆ (ಅಂಧಕಾರ ಪರಿಹಾರರೂಪ) ಕರ್ಮವನ್ನು । **ಅನ್ಯಾಃ**—ಅತೀತ ಮತ್ತು ಅನಾಗತಗಳಾದ । **ಉಷಸಃ**— ಉಷಸ್ಸುಗಳು । **ನ ನಶಂತೆ**—ಹೊಂದುವುದಿಲ್ಲ.

॥ ಭಾವಾರ್ಥ ॥

ಉಷೋದೇವಿಯೇ, ತಾಯಿಯಿಂದ ಅಲಂಕೃತಳಾದ ಸ್ತ್ರೀಯಂತೆ ವಿಶೇಷ ಪ್ರಕಾಶಯುಕ್ತಳಾದ ನೀನು (ನಿನ್ನ) ಶರೀರವು (ಎಲ್ಲರಿಗೂ) ಕಾಣುವಂತೆ ಮಾಡುತ್ತಿ. (ಆದುದರಿಂದ) ಮಂಗಳಕರಳೂ (ಸ್ತುತ್ಯಳೂ) ಆದ (ನೀನು) ಜಗದಾವರಕವಾದ ತಮಸ್ಸನ್ನು, ಅತೀತಾನಾಗತವಾದ ಉಷಸ್ಸುಗಳಾವುವೂ ಅನುಕರಿಸದ (ರೀತಿಯಲ್ಲಿ) ಪರಿಹರಿಸು.

## English Translation

Radiant as a bride decorated by her mother, you willingly display your person to the view. Do you, auspicious Ushas, remove the investing (gloom), for other dawns than you do not disperse it.

॥ ವಿಶೇಷವಿಷಯಗಳು ॥

**ಮಾತೃಮೃಷ್ಟಾ ಯೋಷಾ ಇವ ಸುಸಂಕಾಶಾ—ಮಾತೃಭಿಃ ಜನನೀಭಿಃ ಶುದ್ಧೀಕೃತಾ ಯೋಷಾ ಇವ ಅತ್ಯಂತಂ ಪ್ರಕಾಶಮಾನಾ । ಯಥಾ ಲೋಕೇ ಮಾತ್ರಾದಿನಾ ಸ್ವಲಂಕೃತಾ ಅತ್ಯಂತಂ ಶೋಭನಾ ಸತೀ ಸ್ವಕೀಯಂ ಲಾವಣ್ಯೋಪೇತಂ ಸರ್ವಶರೀರಂ ದರ್ಶನಾಯಾವಿಷ್ಕರೋತಿ ತದ್ವತ್ ತ್ವಮಪೀತ್ಯರ್ಥಃ** ಜನನಿಯೇ ಮೊದಲಾದ ಆಪ್ತಸ್ತ್ರೀಯರಿಂದ ಸಂಸ್ಕೃತಳಾದ ಅಥವಾ ಅಲಂಕೃತಳಾದ ಕಾಮುಕಿಯಾದ ಸ್ತ್ರೀಯು ಬಹಳ ಅಂದವಾಗಿ ಇರುವಂತೆ ಇತರರಿಗೆ ಕಾಣಿಸುತ್ತಾ ಲಾವಣ್ಯದಿಂದ ಕೂಡಿರುವ ತನ್ನ ಶರೀರವನ್ನು ಪ್ರಿಯನಾದವನ ದೃಷ್ಟಿಗೆ ಗೋಚರಗೊಳಿಸುವುದಕ್ಕಾಗಿ ಪ್ರಕಟಮಾಡುವಹಾಗೆ ಉಷಸ್ಸೂ ಕೂಡ ತನ್ನ ಆಕಾರವನ್ನು ಸೂರ್ಯನ ಮುಂಭಾಗದಲ್ಲಿ ಪ್ರಕಟಗೊಳಿಸುವುದು ಎಂದು ವರ್ಣಿಸಿದೆ.

ಯಾಸ್ಕರು **ಯೋಷಾ** ಶಬ್ದವು— **ಯು ಮಿಶ್ರಣೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದು ಎಂದು **ಯೋಷಾ ಯೌತೇಃ** (ನಿ. ೩-೧೫) ಎಂದು ವ್ಯಾಖ್ಯಾನದಿಂದ ವಿವರಿಸಿರುತ್ತಾರೆ. ವೃತ್ತಿಕಾರರು. **ಸಾ ಹಿ ಮಿಶ್ರಯತ್ಯಾತ್ಮಾನಂ ಪುರುಷೇಣ ಸಾಕಂ** ಸ್ತ್ರೀಯು ಪುರುಷರೊಡನೆ ತನ್ನ ಶರೀರಸಂಬಂಧವನ್ನು ಹೊಂದುವುದಕ್ಕಾಗಿಯೇ ಸೇರುತ್ತಾಳೆ ಎಂದು ಅರ್ಥವನ್ನು ವರ್ಣಿಸಿರುತ್ತಾರೆ.

**ದೃಶೇ ಕಂ.—ಅತ್ರ ಕಮಿತಿ ಪಾದಪೂರಣಃ ವಿಶೇಷಸ್ಯಾಭಾವಾತ್ ಶಿಶಿರಂ ಜೀವನಾಯ ಕಂ ಇತಿವತ್ । ಯದ್ವಾ ಕಮಿತಿ ಸುಖವಚನಃ ಸುಖಂ ಯಥಾ ಭವತಿ ತಥಾ ಆವಿಷ್ಕೃಣುಷೇ ।**

ಇಲ್ಲಿ ಕಂ ಎಂಬುದು (ನಿಪಾತ) ಅವ್ಯಯವಾಗಿರುವುದರಿಂದ ಅತಿಶಯವಾದ ಬೇರೆಯ ಅರ್ಥವನ್ನು ಯಾವುದನ್ನೂ ಬೋಧಿಸದಿರುವ ಕಾರಣ ಪಾದಪೂರಣಮಾತ್ರದಲ್ಲಿ ಪರ್ಯವಸಿತವಾಗಿರುತ್ತದೆ ಎಂದು ಕಂ ಎಂಬ ಅರ್ಥವನ್ನು ಒಂದು ವಿಧವಾಗಿ ಸಾಯಣರು ವಿವರಿಸಿರುವರು. ಯಾಸ್ಕರು—

**ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ, ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ ।**

(ನಿ. ೧-೯)

ವಾಕ್ಯಗಳಲ್ಲಿ ನಿಪಾತಗಳು (ಅವ್ಯಯಗಳು) ಪದಪೂರ್ತಿಗಾಗಿ ಉಪಯುಕ್ತಗಳಾಗಿ ಇರುವವು. ಛಂದಸ್ಸುಗಳಿಂದ ಬದ್ಧವಾದ ವಾಕ್ಯಗಳು ಮಿತವಾದ ಅಕ್ಷರಗಳುಳ್ಳ ಕಾರಣ ಇವುಗಳಲ್ಲಿ **ಕಂ, ಈಮ್, ಇತ್, ಉ,** ಎಂಬ ಅವ್ಯಯಗಳು ಯಾವ ವಿಧವಾದ ಅರ್ಥವನ್ನೂ ಬೋಧಿಸದಿರುವುದರಿಂದ ಅನರ್ಥಕಗಳಾಗಿರುತ್ತವೆ ಎಂದು ವಿವರಿಸಿರುವರು.

**ನಿಷ್ಟ್ವಕ್ತ್ರಾಸಶ್ಚಿದಿನ್ನರೋ ಭೂರಿತೋಕಾ ವೃಕಾದಿವ । ಬಿಭ್ಯಸ್ಯಂತೋ ವವಾಶಿರೇ । ಶಿಶಿರಂ ಜೀವನಾಯ ಕಂ ॥**

(ನಿ. ೧-೧೦)

ಎಂಬಲ್ಲಿ ಕಂ ಎಂಬುವ ಪದವು ಇಲ್ಲದಿದ್ದರೂ ಅರ್ಥಪ್ರತೀತಿಯು ಪೂರ್ತಿಯಾಗುವ ಕಾರಣ ಕಂ ಎಂಬುವುದು (ಅನರ್ಥಕ) ಯಾವವಿಧವಾದ ಪ್ರಯೋಜನವಿಲ್ಲದಿರುವಹಾಗೆ ಪ್ರಯುಕ್ತವಾಗಿರುತ್ತದೆ ಎಂದು ಉದಾಹರಣೆಯನ್ನು ಕೊಟ್ಟಿರುತ್ತಾರೆ.

ಮತ್ತು **ಕಂ,** ಈಂ, ಎಂಬ ಎರಡು ಶಬ್ದಗಳೂ ಉದಕನಾಮಗಳಲ್ಲಿ (ನಿ. ೨-೨೪) ಪಠಿತವಾಗಿವೆ. **ಕಂ** ಎಂಬುದು ಇಪ್ಪತ್ತು ಸುಖನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. ಯಾಸ್ಕರು ಹೇಳಿರುವ ಈ ವ್ಯಾಖ್ಯಾನವನ್ನು ಅನುಸರಿಸಿ ಸಾಯಣರು ಕಂ ಎಂಬ ಪದವು ಸುಖವೆಂಬ ಅರ್ಥವನ್ನು ಬೋಧಿಸುವುದು ಎಂದು ವಿವರಿಸಿ ಉಷಸ್ಸು ಇತರರಿಗೆಲ್ಲರಿಗೂ ಸುಖವಾಗುವ ರೀತಿಯಿಂದ ತನ್ನ ಶರೀರವನ್ನು ಪ್ರಕಟಮಾಡುವುದು ಎಂಬ ಎರಡನೆಯ ಅರ್ಥವನ್ನು ವರ್ಣಿಸಿರುತ್ತಾರೆ.

**ಭದ್ರಾ ತ್ವಂ ವ್ಯುಚ್ಛ—ಕಲ್ಯಾಣಶೀಲಾ ಸ್ತುತ್ಯಾ ಆವರಕಮನ್ಧಕಾರಂ ವಿಪ್ರಕೃಷ್ಟಂ ಯಥಾ ಭವತಿ ತಥಾ ವಿವಾಸಯ ।** ಉಷಸ್ಸು ಸ್ತುತಿಮಾಡುವುದರಿಂದ ಅಂಧಕಾರವನ್ನು ಬಹಳಮಟ್ಟಿಗೆ ನಾಶಮಾಡುವಂತೆ ಪ್ರಾರ್ಥಿಸಿದೆ. ಉಷಸ್ಸನ್ನು ಮಂಗಳವನ್ನು ಉಂಟುಮಾಡುವ ಸ್ವಭಾವವುಳ್ಳದ್ದೆಂದೂ ವರ್ಣಿಸಿದೆ. ಉಷಸ್ಸು ಯಾವಾಗಲೂ ಪ್ರಕಾಶವುಳ್ಳದ್ದಾಗಿ ಬೆಳಕನ್ನು ಬೀರುವ ಕಾರ್ಯವನ್ನು ನಿರ್ವಹಿಸುತ್ತಿರುತ್ತದೆಯಾದ್ದರಿಂದ ಉಷಸ್ಸಿನ ಕಾರ್ಯದ ವಿಷಯದಲ್ಲಿ ಪ್ರಾರ್ಥನೀಯವಾದ ಅಂಶವು ವಿಶೇಷವಾಗಿ ಯಾವುದೂ ಇಲ್ಲ. ಆದಾಗ್ಯೂ ಆವರಕವಾದ ತಮಸ್ಸನ್ನು ನಾಶಮಾಡುವ ವಿಷಯದಲ್ಲಿ ಅತೀತಾನಾಗತವಾದ ಉಷಸ್ಸುಗಳು ತಮಸ್ಸನ್ನು ವ್ಯಾಪಿಸಿ ನಾಶಗೊಳಿಸುವಂತೆ ಎಂದು ಉಪಮಾನವು ಉಕ್ತವಾಗಿರುತ್ತದೆ.

**ಇನ್ವತಿ, ನಕ್ಷತಿ,** ಎಂಬ ಹತ್ತು ವ್ಯಾಪ್ತಿಕರ್ಮವಾಚಕಗಳಲ್ಲಿ ನಶತ್ ಎಂದು (ನಿ. ೩-೧೦) ಪಾಠಮಾಡಿರುವುದರಿಂದ **ನಶಂತೆ** ಎಂದರೆ ವ್ಯಾಪಿಸುವುದು ಎಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಸುಸಂಕಾಶಾ**—ಕಾಶೃ ದೀಪ್ತೌ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಮಾತೃಮೃಷ್ಟಾ**—ಮಾತೃಭಿಃ ಮೃಷ್ಟಾ ಮಾತೃಮೃಷ್ಟಾ. ಮೃಜೂಷ್ ಶುದ್ಧೌ ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. **ವ್ರಶ್ಚಭ್ರಸ್ಜ**—(ಪಾ. ಸೂ. ೮-೨-೩೬) ಎಂಬುದರಿಂದ ಧಾತುವಿನ ಜಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯ ತಕಾರಕ್ಕೆ ಷ್ಟುತ್ವ. **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ಸ್ತ್ರೀತ್ವದಲ್ಲಿ ಟಾಪ್.

**ತನ್ವಮ್**—ತನು ಶಬ್ದ. ದ್ವಿತೀಯಾ ಅಮ್ ಪರವಾದಾಗ **ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್** ಎಂಬುದರಿಂದ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** (ಪಾ. ಸೂ. ೮-೨-೪) ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ.

**ದೃಶೇ**—ದೃಶಿರ್ ಪ್ರೇಕ್ಷಣೇ. ಧಾತು. **ದೃಶೇವಿಖ್ಯೇ ಚ** (ಪಾ. ಸೂ. ೩-೪-೧೧) ಎಂಬುದರಿಂದ ಛಂದಸ್ಸಿನಲ್ಲಿ ನಿಪಾತಿತವಾಗಿದೆ. ಏಜಂತವಾದ ಕೃದಂತವಾದುದರಿಂದ **ಕೃನ್ಮೇಜಂತಃ** (ಪಾ. ಸೂ. ೧-೧-೩೯) ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ಭದ್ರಾ**—ಭದಿ ಕಲ್ಯಾಣೇ ಸುಖೇ ಚ. ಔಣಾದಿಕ ರಕ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಏಕವಚನಾಂತರೂಪ.

**ವಿತರಮ್**—ತೄ ಪ್ಲವನತರಣಯೋಃ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಉತ್ತರಪದವು ಪ್ರತ್ಯಯಸ್ವರದಿಂದ ಅಂತೋದಾತ್ತವಾಗಿದೆ.

**ಉಚ್ಛ**—ಉಛೀ ವಿವಾಸೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ ಬಂದಾಗ **ಅತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ನಶಂತೆ**—ಣಶ ಅದರ್ಶನೇ. ಧಾತು. ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇನ್ವತಿ ನಕ್ಷತಿ ಎಂದು ವ್ಯಾಪ್ತಿಕರ್ಮಗಳಲ್ಲಿ ಪಠಿತವಾಗಿದೆ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಛಾಂದಸ

ವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನದ ಝ ಪ್ರತ್ಯಯಕ್ಕೆ ಝೋಂತಃ ಎಂಬುದರಿಂದ ಅಂತಾದೇಶ. ಬಹುಲಂ ಛಂದಸ್ಯಮಾಙ್ಯೋಗೇಽಪಿ (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೧ ॥



॥ ಸಂಹಿತಾಪಾಠಃ ॥

ಅಶ್ವಾವತೀರ್ಗೋಮತೀರ್ವಿಶ್ವವಾರಾ ಯತಮಾನಾ ರಶ್ಮಿಭಿಃ ಸೂರ್ಯಸ್ಯ ।
ಪರಾ ಚ ಯಂತಿ ಪುನರಾ ಚ ಯಂತಿ ಭದ್ರಾ ನಾಮ ವಹಮಾನಾ ಉಷಾಸಃ ॥ ೧೨ ॥

॥ ಪದಪಾಠಃ ॥

ಅಶ್ವಽವತೀಃ । ಗೋಽಮತೀಃ । ವಿಶ್ವಽವಾರಾಃ । ಯತಮಾನಾಃ । ರಶ್ಮಿಽಭಿಃ । ಸೂರ್ಯಸ್ಯ । ಪರಾ । ಚ । ಯಂತಿ । ಪುನಃ । ಆ । ಚ । ಯಂತಿ । ಭದ್ರಾ । ನಾಮ । ವಹಮಾನಾಃ । ಉಷಸಃ ॥ ೧೨ ॥

॥ ಸಾಯಣಭಾಷ್ಯಂ ॥

ಅಶ್ವಾವತೀರಶ್ವವತ್ಯೋ ಬಹುಭಿರಶ್ವೈಸ್ತದ್ವತ್ಯಃ ತಥಾ ಗೋಮತೀರ್ಬಹುಭಿರ್ಗೋಭಿಸ್ತದ್ವತ್ಯಃ । ವಿಶ್ವವಾರಾ ವಿಶ್ವೇ ವಾರಾ ವರಣೀಯಾಃ ಕಾಲಾ ಯಾಸಾಂ ತಾಸ್ತಥೋಕ್ತಾಃ । ಸಾರ್ವಕಾಲೀನಾ ಇತ್ಯರ್ಥಃ । ಯದ್ವಾ । ವಿಶ್ವೇ ವರಿತಾರೋ ಯಾಸು ತಾ ವಿಶ್ವವಾರಾಃ । ವಿಶ್ವೈರ್ವರಣೀಯಾ ಇತ್ಯರ್ಥಃ । ಸೂರ್ಯಸ್ಯ ರಶ್ಮಿಭಿರ್ಯತಮಾನಾಃ ಸೂರ್ಯರಶ್ಮಿಭಿಃ ಸಾಕಂ ತಮೋನಿವಾರಣಾಯ ಪ್ರಯತ್ನಂ ಕುರ್ವಾಣಾಃ । ಯದ್ಯಪಿ ಸೂರ್ಯರಶ್ಮಯ ಏವ ಜಗತ್ಪ್ರಕಾಶನಾಯ ಪ್ರಭವಂತಿ ತಥಾಪಿ ಸೂರ್ಯೋದಯಾತ್ಪೂರ್ವಂ ತಮೋನಿವಾರಣಸ್ಯಾಪೇಕ್ಷಿತತ್ವಾತ್ತಾಸಾಮಪಿ ಪ್ರಯತ್ನಮವಿರುದ್ಧಂ । ರಶ್ಮಿದೇವತಾ ಅಪಿ ಪ್ರಕಾಶಿಕಾ ಇತ್ಯರ್ಥಃ । ಕಿಂಚ ಭದ್ರಾ ಭದ್ರಂ ಕಲ್ಯಾಣಂ ಸ್ತುತ್ಯಂ ವಾ ನಾಮ ನಮನಂ ಸರ್ವಜನಾನುಕೂಲ್ಯಂ ವಹಮಾನಾ ಧಾರಯಮಾಣಾ ಉಷಾಸ ಉಷೋಽದೇವತಾಃ ಪರಾ ಚ ಯಂತಿ । ಪರಾಯಂತಿ ಚ । ತಥಾ ಪುನರಾ ಚ ಯಂತಿ । ಪುನರಾಯಂತಿ ಚ । ಪರಸ್ಪರಾಪೇಕ್ಷಯೋಭಯತ್ರ ಚಶಬ್ದಃ । ಯಾ ಏವಾತೀತೇಷು ದಿನೇಷು ಗತಾಸ್ತಾ ಏವ ಪುನಃಪುನರ್ದಿನಾಂತರೇಷ್ವಪ್ಯಾಯಂತಿ । ಜಗನ್ನಿರ್ವಾಹಾಯ ಪ್ರತಿದಿನಂ ಗತಾಗತಂ ಕುರ್ವಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಶ್ವಾವತೀಃ**—ಅಶ್ವಯುಕ್ತರೂ । **ಗೋಮತೀಃ**—ಗೋವುಗಳಿಂದ ಯುಕ್ತರೂ । **ವಿಶ್ವವಾರಾಃ**—ಸರ್ವಕಾಲೀನರೂ, (ಎಲ್ಲರಿಂದಲೂ ವರಿಸಲ್ಪಡುವವರೂ), । **ಸೂರ್ಯಸ್ಯ**—ಸೂರ್ಯನ । **ರಶ್ಮಿಭಿಃ**—ಕಿರಣಗಳೊಡನೆ । **ಯತಮಾನಾಃ**—(ತಮೋನಿವಾರಣೆಗೆ) ಪ್ರಯತ್ನಿಸುವವರೂ । **ಭದ್ರಾ**—ಮಂಗಳಕರವಾದ । **ನಾಮ**—(ಸರ್ವಜನಗಳಿಗೂ) ಅನುಕೂಲವನ್ನು । **ವಹಮಾನಾಃ**—ಉಂಟುಮಾಡುವವರೂ (ಆದ) । **ಉಷಾಸಃ**—ಉಷೋದೇವತೆಗಳು । **ಪರಾ ಯಂತಿ ಚ**—ಹೊರಟುಹೋಗುತ್ತವೆ (ಮತ್ತು) । **ಪುನಃ ಚ ಆ ಯಂತಿ**—ಪುನಃ ಬರುತ್ತವೆ ।

॥ ಭಾವಾರ್ಥ ॥

ಅಶ್ವಗಳು, ಗೋವುಗಳು ಇವುಗಳಿಂದ ಯುಕ್ತರಾಗಿ, ಸರ್ವಕಾಲದಲ್ಲಿಯೂ ತಮೋನಿವಾರಣಕಾರ್ಯದಲ್ಲಿ ಸೂರ್ಯನ ಕಿರಣಗಳೊಡನೆ (ಸಹಕರಿಸಿ) ಪ್ರಯತ್ನಿಸುತ್ತಿರುವ, ಮತ್ತು (ಸಮಸ್ತರಿಗೂ) ಮಂಗಳವನ್ನುಂಟುಮಾಡುವ ಉಷೋದೇವತೆಗಳು ಹೋಗುತ್ತಲೇ ಇರುತ್ತವೆ ಮತ್ತು ಬರುತ್ತಲೇ ಇರುತ್ತವೆ.

## English Translation.

Possessed of horses, possessed of cows, existing through all time, vying with the rays of the sun (in dissipating darkness), auspicious Dawns, sending down benefits (on mankind), pass away and again return.

॥ ವಿಶೇಷವಿಷಯಗಳು ॥

**ವಿಶ್ವವಾರಾಃ—ವಿಶ್ವೇ ವಾರಾಃ ವರಣೀಯಾಃ ಕಾಲಾಃ ಯಾಸಾಂ ತಾಃ । ಸಾರ್ವಕಾಲೀನಾಃ । ಯದ್ವಾ ವಿಶ್ವೇ ವರಿತಾರೋ ಯಾಸು ತಾಃ । ವಿಶ್ವೈಃ ವರಣೀಯಾಃ ।** (ವೃಙ್ ವರಣೆ) ವರಿಸು, ಅಪೇಕ್ಷಿಸು ಎಂಬ ಅರ್ಥವನ್ನು ಬೋಧಿಸುವ ವೃಙ್ ಧಾತುವಿನಿಂದ ನಿಷ್ಪನ್ನವಾದ ವಾರ ಎಂಬ ಶಬ್ದಕ್ಕೆ ಅಪೇಕ್ಷಿತವಾದ ಎಂದು ಅರ್ಥವಾಗುವುದರಿಂದ ಉಷಾಸಃ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿರುವ ವಿಶ್ವವಾರಾಃ ಎಂಬ ಪದಕ್ಕೆ ಉಷಃ ಕಾಲಗಳು ಎಲ್ಲವೂ ಅಪೇಕ್ಷಿತಗಳಾಗಿರುತ್ತವೆ ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿ ಸಾಯಣರು ಉಷಃಕಾಲಗಳನ್ನು ಎಲ್ಲರೂ ಅಪೇಕ್ಷಿಸುತ್ತಾರೆ ಎಂದು ಇನ್ನೊಂದು ವಿಧವಾದ ಅರ್ಥವನ್ನೂ ವಿವರಿಸಿರುತ್ತಾರೆ. ಈ ಎರಡು ವಿಧವಾದ ಅರ್ಥಗಳಿಂದಲೂ ಉಷಃಕಾಲಗತವಾದ ಸೌಂದರ್ಯವೂ ಸರ್ವರಿಗೂ ಉಪಕಾರವಾಗಿ ಇರುವಿಕೆಯೂ ವ್ಯಕ್ತವಾಗಿರುತ್ತದೆ.

**ಸೂರ್ಯಸ್ಯ ರಶ್ಮಿಭಿಃ ಯತಮಾನಾಃ—ಸೂರ್ಯರಶ್ಮಿಭಿಃ ಸಾಕಂ ತಮೋನಿವಾರಣಾಯ ಪ್ರಯತ್ನಂ ಕುರ್ವಾಣಾಃ ।** ಉಷಸ್ಸು ಸೂರ್ಯನ ಕಿರಣಗಳ ಸಂಗಡ ಸೇರಿ ಕತ್ತಲೆಯನ್ನು ನಿವಾರಿಸುವುದಕ್ಕಾಗಿ ಪ್ರಯತ್ನವನ್ನು ಮಾಡುತ್ತಿರುವುದೆಂದು ಅರ್ಥ. ಸೂರ್ಯನ ಕಿರಣಗಳಿಂದಲೇ ಕತ್ತಲೆಯು ಪರಿಹಾರವಾಗುತ್ತದೆ. ಆದರೆ ಸೂರ್ಯನು ಉದಯಿಸುವುದಕ್ಕೆ ಮುಂಚಿತವಾಗಿ ಸೂರ್ಯನ ರಶ್ಮಿಗಳನ್ನೂ ಪ್ರಕಾಶಗೊಳಿಸುವುದರ ಮೂಲಕ ತಮಸ್ಸನ್ನು ನಾಶಮಾಡುವುದಕ್ಕಾಗಿ ಉಷಸ್ಸು ತನ್ನ ಪ್ರಕಾಶವನ್ನು ಬೆಳಗಿಸಿ ಸಹಾಯಕವಾಗಿ ಇರುವುದು ಎಂದು ಅರ್ಥ.

**ಭದ್ರಾ ನಾಮ ವಹಮಾನಾಃ—ಭದ್ರಂ ಕಲ್ಯಾಣಂ ಸ್ತುತ್ಯಂ ವಾ ನಮನಂ ಸರ್ವಜನಾನುಕೂಲ್ಯಂ ಧಾರಯಮಾಣಾಃ** । ಭದ್ರ ಶಬ್ದಕ್ಕೆ ನಿರುಕ್ತದಲ್ಲಿ ಯಾಸ್ಕರು **ಭಜನೀಯಂ ಭೂತಾನಾಮಭಿದ್ರವಣೀಯಂ ಭವದ್ರಮಯತೀತಿ ವಾ, ಭಾಜನವದ್ವಾ** ಪ್ರಾಣಿಗಳಿಂದ ಹೊಂದತಕ್ಕದ್ದಾಗಿರುವುದು. ಪ್ರಾಣಿಗಳಿಗೆ ಆನಂದವನ್ನು ಉಂಟುಮಾಡುವುದು ಎಂದೂ ಕಲ್ಯಾಣವುಳ್ಳವರನ್ನಾಗಿ ಮನುಷ್ಯರನ್ನೂ ಮಾಡತಕ್ಕದ್ದಾಗಿರುವುದು ಎಂದೂ ಅರ್ಥ ಮಾಡಿರುವುದರಿಂದ ಉಷಸ್ಸು ಕಲ್ಯಾಣವನ್ನು ಉಂಟುಮಾಡಿರುವುದರಿಂದಲೂ ಎಲ್ಲರಿಗೂ ಅನುಕೂಲವನ್ನು ಉಂಟು ಮಾಡಿ ಸರ್ವರ ಸ್ತುತಿಗೂ ಅರ್ಹವಾಗಿರುತ್ತದೆ ಎಂದು ಎರಡು ವಿಧವಾದ ಅರ್ಥವನ್ನೂ ವಿವರಿಸಿರುತ್ತಾರೆ.

**ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।**
**ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥**

(ಋ. ಸಂ. ೧೦-೭೧-೨)

ಎಂಬ ಈ ಋಕ್ಕಿನಲ್ಲಿಯೂ

**ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ ।**
**ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥**

(ಋ. ಸಂ. ೬-೫೮-೧)

ಎಂಬ ಋಕ್ಕಿನಲ್ಲಿಯೂ ಭದ್ರಶಬ್ದವು ಇದೇ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಯಾ ಏವಾತೀತೇಷು ದಿನೇಷು ಗತಾಃ ತಾ ಏವ ಪುನಃಪುನಃ ದಿನಾಂತರೇಷು ಅಪಿ ಆಯಂತಿ ।**
**ಜಗನ್ನಿರ್ವಾಹಾಯ ಪ್ರತಿದಿನಂ ಗತಾಗತಂ ಕುರ್ವಂತಿ ॥**

ಉಷಸ್ಸುಗಳು ಹಿಂದೆ ಕಳೆದುಹೋದ ದಿನಗಳಲ್ಲಿ ಕಳೆದುಹೋದುವುಗಳಾದರೂ ಅವುಗಳೇ ಬೇರೆಬೇರೆ ದಿನಗಳಲ್ಲಿಯೂ ಕೂಡ ಆವೃತ್ತಿಯಾಗಿ ಬರುತ್ತಾ ಜಗತ್ತನ್ನು ರಕ್ಷಿಸುವುದಕ್ಕಾಗಿ ಉದಯಿಸುತ್ತವೆ ಎಂದು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವಾವತೀಃ**—ಅಶ್ವಾಃ ಆಸಾಂ ಸಂತೀತಿ ಅಶ್ವವತ್ಯಃ **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. **ಮಂತ್ರೇ ಸೋಮಾಶ್ವೇಂದ್ರಿ**—(ಪಾ. ಸೂ. ೬-೩-೧೩೧) ಎಂಬುದರಿಂದ ಮತುಪ್ ಪರವಾದಾಗ ಅಶ್ವ ಶಬ್ದಕ್ಕೆ ದೀರ್ಘ. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ಜಸ್ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ. ಗೋಮತೀಃ ಎಂಬಲ್ಲಿಯೂ ಮತುಪ್, ಪೂರ್ವಸವರ್ಣ ಬರುತ್ತದೆ. ಅಕಾರದ ಪರದಲ್ಲಿ ಬಾರದಿರುವುದರಿಂದ ಮತುಪಿನ ಮಕಾರಕ್ಕೆ ವತ್ವ ಬರುವುದಿಲ್ಲ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ವಿಶ್ವವಾರಾಃ**—ವಿಶ್ವೇ ವಾರಾಃ ಯಾಸಾಂ ತಾಃ ವಿಶ್ವವಾರಾಃ **ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್** (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಯತಮಾನಾಃ**—ಯತೀ ಪ್ರಯತ್ನೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್**—(ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತ ವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸೂರ್ಯಸ್ಯ**—ಸೃ ಗತೌ ಧಾತು. **ರಾಜಸೂಯ ಸೂರ್ಯ**—(ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಷಷ್ಠೀಏಕವಚನಾಂತರೂಪ.

**ಯಂತಿ**—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಂತಃ** ಎಂಬುದರಿಂದ ಅಂತಾದೇಶ. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಚ ಎಂಬುದು ಹಿಂದೆ ಇರುವುದರಿಂದ **ಚವಾ ಯೋಗೇ ಪ್ರಥಮಾ** (ಪಾ. ಸೂ. ೮-೧-೫೯) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ ಎರಡನೆ ಧಾತುವಿನಲ್ಲಿ ನಿಷೇಧವಿಲ್ಲದಿರುವುದರಿಂದ ನಿಘಾತಸ್ವರ ಬರುತ್ತದೆ.

**ವಹಮಾನಾಃ**—ವಹ ಪ್ರಾಪಣೇ. ಧಾತು. ಉಭಯಪದೀ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. ಹಿಂದಿನಂತೆಯೇ ಅದಂತಾಂಗಕ್ಕೆ ಮುಕಾಗಮ ಲ ಸಾರ್ವಧಾತುಕವು ಅದುಪದೇಶದ ಪರದಲ್ಲಿರುವುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ಋತಸ್ಯ ರಶ್ಮಿಮನುಯಚ್ಛಮಾನಾ ಭದ್ರಂಭದ್ರಂ ಕ್ರತುಮಸ್ಮಾಸು ಧೇಹಿ ।
ಉಷೋ ನೋ ಅದ್ಯ ಸುಹವಾ ವ್ಯುಚ್ಛಾಸ್ಮಾಸು ರಾಯೋ ಮಘವತ್ಸು
ಚ ಸ್ಯುಃ ॥ ೧೩ ॥

॥ ಪದಪಾಠಃ ॥

ಋತಸ್ಯ । ರಶ್ಮಿಂ । ಅನುऽಯಚ್ಛಮಾನಾ । ಭದ್ರಂऽಭದ್ರಂ । ಕ್ರತುಂ । ಅಸ್ಮಾಸು । ಧೇಹಿ ।
ಉಷಃ । ನಃ । ಅದ್ಯ । ಸುऽಹವಾ । ವಿ । ಉಚ್ಛ । ಅಸ್ಮಾಸು । ರಾಯಃ । ಮಘವತ್ऽಸು । ಚ ।
ಸ್ಯುರಿತಿ ಸ್ಯುಃ ॥ ೧೩ ॥

॥ ಸಾಯಣಭಾಷ್ಯಂ ॥

**ಹೇ ಉಷಃ ಋತಸ್ಯ ಸತ್ಯಭೂತಸ್ಯಾದಿತ್ಯಸ್ಯ ರಶ್ಮಿಂ ರಶ್ಮೀನನುಯಚ್ಛಮಾನಾನುಕೂಲ್ಯೇನ ಪ್ರವರ್ತಮಾನಾ ತ್ವಂ ಭದ್ರಂ ಭದ್ರಂ ಕ್ರತುಂ ತತ್ತತ್ಕಲ್ಯಾಣಂ ಸ್ತುತ್ಯಂ ವಾ ಲೌಕಿಕಂ ವೈದಿಕಂ ಕರ್ಮ ತದ್ವಿಷಯೊಂ ಪ್ರಜ್ಞಾಂ ವಾ ಧೇಹಿ । ಸ್ಥಾಪಯ । ಹೇ ಉಷಃ । ನೋಽಸ್ಮದರ್ಥಂ ಸುಹವಾ ಸುಷ್ಠ್ವಾಹೂತಾ ಸತೀ ವ್ಯುಚ್ಛ । ತಮೋ ವಿವಾಸಯ । ಪ್ರಕಾಶಂ ಕುರ್ವಿತ್ಯರ್ಥಃ । ಕಿಮರ್ಥಮಿತಿ ತದುಚ್ಯತೇ । ಮಘವತ್ಸು । ಮಘಮಿತಿ ಧನನಾಮ । ಹವಿರ್ಲಕ್ಷಣಧನಯುಕ್ತೇಷ್ವಸ್ಮಾಸು ಯಜಮಾನೇಷು ರಾಯಶ್ಚ ಸ್ಯುಃ । ಬಹುವಿಧಾನಿ ಧನಾನಿ ಸಂಭವಂತ್ವಿತಿ ಪೂರ್ವೋಕ್ತೇನ ಕ್ರತುನಾ ಸಹ ಸಮುಚ್ಚಯಾರ್ಥಶ್ಚ ಶಬ್ದಃ ॥**

॥ ಪ್ರತಿಪದಾರ್ಥ ॥

**ಹೇ ಉಷಃ**—ಎಲೈ ಉಷೋದೇವಿಯೇ । **ಋತಸ್ಯ**—ಸತ್ಯಭೂತನಾದ (ಆದಿತ್ಯನ) । **ರಶ್ಮಿಂ**—ಕಿರಣಗಳನ್ನು । **ಅನುಯಚ್ಛಮಾನಾ**—ಎಲ್ಲರಿಗೂ ಅನುಕೂಲವಾಗುವ ರೀತಿಯಲ್ಲಿ ಪ್ರವರ್ತಿಸುತ್ತಾ (ನೀನು) । **ಭದ್ರಂ ಭದ್ರಂ ಕ್ರತುಂ**—ಮಂಗಳಕರವಾದ ಪ್ರತಿಯೊಂದು ಕರ್ಮವನ್ನೂ (ತದ್ವಿಷಯಕ ಜ್ಞಾನವನ್ನೂ) **ಅಸ್ಮಾಸು**—ನಮ್ಮಲ್ಲಿ । **ಧೇಹಿ**—ಸ್ಥಿರೀಕರಿಸು । (**ಉಷಃ**—ಎಲೈ ಉಷೋದೇವಿಯೇ। । **ಸುಹವಾ**—ಚೆನ್ನಾಗಿ (ಸ್ತುತಿಪೂರ್ವಕವಾಗಿ) (ನಮ್ಮಿಂದ) ಆಹೂತಳಾಗಿ । **ನಃ**—ನಮಗಾಗಿ । **ವಿ ಉಚ್ಛ**—ತಮಸ್ಸನ್ನು ನಿವಾರಿಸು । **ಮಘವತ್ಸು**—ಹವಿರ್ಲಕ್ಷಣಧನಯುಕ್ತರಾದ । **ಅಸ್ಮಾಸು**—(ನಮ್ಮಲ್ಲಿ) ಯಜಮಾನರಲ್ಲಿ । **ಅದ್ಯ**—ಈಗ **ರಾಯಃ ಚ ಸ್ಯುಃ**—ಬಹುವಿಧ ಧನವೂ ಉಂಟಾಗಲಿ ।

॥ ಭಾವಾರ್ಥ ॥

ಉಷೋದೇವಿಯೇ, ಆದಿತ್ಯನ ಕಿರಣಗಳನ್ನು ನಮ್ಮ ಅನುಕೂಲಕ್ಕೆ ಪ್ರವರ್ತಿಸಿ, (ನಮ್ಮ) ಪ್ರತಿಯೊಂದು ಮಂಗಳಕರ್ಮವನ್ನೂ ಸ್ಥಿರವನ್ನಾಗಿ ಮಾಡು; (ನಮ್ಮಿಂದ) ಚೆನ್ನಾಗಿ ಸ್ತುತಳಾಗಿ ನಮಗಾಗಿ ತಮಸ್ಸನ್ನು ನಿವಾರಿಸು ; ಹವಿರಾದಿಯುಕ್ತರಾದ ಯಾಗಕರ್ತೃಗಳಿಗೆ ಬಹುವಿಧವಾದ ಐಶ್ವರ್ಯವನ್ನನುಗ್ರಹಿಸು.

## English Translation

Co-operating with the rays of the true (sun), confirm in us every propitious act: earnestly invoked by us to-day, disperse, Ushas, (the darkness), that wealth may devolve upon us, (already) affluent (in sacrificial treasures).

॥ ವಿಶೇಷವಿಷಯಗಳು ॥

**ಋತಸ್ಯ—ಸತ್ಯಭೂತಸ್ಯಾದಿತ್ಯಸ್ಯ । ಋತಶಬ್ದವು ಉದಕ** (ನಿ. ೨-೨೪) ಮುಹೂರ್ತ ಕಾಲವಿಶೇಷ (ನಿ. ೨-೨೫) ಸತ್ಯ ಅಥವಾ ಯಜ್ಞ (ನಿ. ೪-೧೯) ಎಂಬ ಅರ್ಥಗಳಲ್ಲಿಯೂ ಪ್ರಯುಕ್ತ

ವಾಗಿರುವುದು. ಹೀಗೆ ಅನೇಕಾರ್ಥವಾದ ಋತ ಶಬ್ದವು ಇಲ್ಲಿ ಆದಿತ್ಯ ಶಬ್ದಕ್ಕೆ ವಿಶೇಷಣ ವಾಗಿದೆ. ಉಷಸ್ಸು ಸತ್ಯವಾಗಿರುವ ಆದಿತ್ಯನ ರಶ್ಮಿಯನ್ನು ಅನುಸರಿಸಿ ಪ್ರಕಾಶವನ್ನು ಬೆಳಗಿಸುವುದೆಂದು ವರ್ಣಿಸಿದೆ

**ಭದ್ರಂ ಭದ್ರಂ ಕ್ರತುಂ ಧೇಹಿ—ತತ್ತತ್ಕಲ್ಯಾಣಂ ಸ್ತುತ್ಯಂ ವಾ ಲೌಕಿಕಂ ವೈದಿಕಂ ಕರ್ಮ ತದ್ವಿಷಯಾಂ ಪ್ರಜ್ಞಾಂ ವಾ ಸ್ಥಾಪಯ ।** ಲೋಕದಲ್ಲಿ ಆಯಾಯ ಪ್ರಕಾರಗಳಿಂದ ಪ್ರಶಸ್ತ್ಯವಾಗಿಯೂ ಮಂಗಳ ಕರವಾಗಿಯೂ ಇರುವ ವ್ಯವಹಾರಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಆಚರಿಸುವುದರಲ್ಲಿ ಕುಶಲತೆಯನ್ನೂ ಅಥವಾ ವೇದೋಕ್ತವಾದ ಕರ್ಮಗಳನ್ನು ಆಚರಿಸುವುದರಲ್ಲಿ ಪ್ರಾವೀಣ್ಯವನ್ನೂ ಉಷಸ್ಸು ನಮಗೆ ಉಂಟುಮಾಡಲಿ ಎಂದು ಪ್ರಾರ್ಥಿಸಿದೆ.

ಯಾಸ್ಕರು ಕ್ರತು ಶಬ್ದವನ್ನು ಕರ್ಮನಾಮಗಳಲ್ಲಿಯೂ (ನಿ. ೨–೧) ಪ್ರಜ್ಞಾನಾಮಗಳಲ್ಲಿಯೂ (ನಿ- ೩-೯) ಪಾಠಮಾಡಿ—

**ಉತಸ್ಯ ವಾಜೀ ಕ್ಷಿಪಣಿಂ ತುರಣ್ಯತಿ ಗ್ರೀವಾಯಾಂ ಬದ್ಧೋ ಅಪಿಕಕ್ಷ ಆಸನಿ ।**
**ಕ್ರತುಂ ದಧಿಕ್ರಾ ಅನು ಸಂತವೀತ್ವತ್ಪಥಾಮಂಕಾಂಸ್ಯನ್ವಾಪನೀಫಣತ್ ॥**
(ಋ. ಸಂ. ೪-೪೦-೪)

ಎಂಬ ಋಕ್ಕನ್ನು ಉದಹರಿಸಿ ಕ್ರತು ಶಬ್ದಕ್ಕೆ ಕರ್ಮ ವಾ ಪ್ರಜ್ಞಾ ವಾ ಎಂದು ಅರ್ಥವನ್ನು ಹೇಳಿರುವರು. ಸಾಯಣರು ಕ್ರತು ಶಬ್ದಕ್ಕೆ ಈ ಎರಡು ವಿಧವಾದ ಅರ್ಥವನ್ನೂ ವರ್ಣಿಸಿರುವರು.

**ಸುಹವಾ—ಸುಷ್ಠು ಆಹೂತಾ।** ಯಾಗಗಳಲ್ಲಿ ಉಷಸ್ಸು ಆಯಾಯ ವೇದೋಕ್ತ ಕ್ರಮದಿಂದ ಕರೆಯಲ್ಪಟ್ಟ ವ್ಳಾಗಿರುವುದೆಂದರ್ಥ.

**ವ್ಯುಚ್ಛ—ತಮೋ ನಿವಾಸಯ, ಪ್ರಕಾಶಂ ಕುರು।** ಉಚ್ಛೀ ವಿವಾಸನೇ ವಿವಾಸನ ಎಂದರೆ ನಾಶಮಾಡು ವುದು ಎಂಬ ಅರ್ಥವನ್ನು ಬೋಧಿಸುವ ಉಚ್ಛಧಾತುವು ವಿ ಉಪಸರ್ಗದಿಂದ ಕೂಡಿರುವುದಾಗಿರುವುದರಿಂದ ಕತ್ತಲೆ ಯನ್ನು ನಿರ್ಮೂಲಮಾಡಿ ಪ್ರಕಾಶವನ್ನು ಅತಿಶಯವಾಗಿ ಬೆಳಗಿಸು ಎಂದು ಉಷಸ್ಸನ್ನು ಪ್ರಾರ್ಥಿಸಿದೆ.

**ಅಸ್ಮಾಸು ರಾಯಃ ಮಘವತ್ಸು ಚ ಸ್ಯುಃ**—ಎಂಬ ವಾಕ್ಯದಿಂದ ಯಾಗವನ್ನು ಆಚರಿಸುವ ನಮಗೆ ಹವಿಸ್ಸಿನ ರೂಪವಾದ ಧನವನ್ನು ಆಯಾಯ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಉಂಟಾಗುವಂತೆಯೂ ಆಯಾಯ ಕರ್ಮಗಳು ನೆರವೇರುವುದಕ್ಕಾಗಿಯೂ ಉಷಸ್ಸನ್ನು ಪ್ರಾರ್ಥಿಸಿದೆ.

**ರಾಯಃ**— ಎಂಬ ಶಬ್ದವೂ **ಮಘವತ್ಸು** ಎಂಬಲ್ಲಿ ಇರುವ **ಮಘ** ಶಬ್ದವೂ ಕೂಡ **ಮಘಂ ರೇಕ್ಣಃ** ಎಂದು ಇಪ್ಪತ್ತೆಂಟು ಧನನಾಮಗಳಲ್ಲಿ (ನಿ. ೨-೯) ಪಠಿತವಾಗಿರುವುದರಿಂದ ಧನ ಎಂಬ ಅರ್ಥವನ್ನು ಬೋಧಿಸುವುದು.

**ಪರಿಷದ್ಯಂ ಹ್ಯರಣ್ಯಸ್ಯ ರೇಕ್ಣೋ ನಿತ್ಯಸ್ಯ ರಾಯಃ ಪತಯಃ ಸ್ಯಾಮ ।**
**ನ ಶೇಷೋ ಅಗ್ನೇ ಅನ್ಯಜಾತಮಸ್ತ್ಯಚೇತಾನಸ್ಯ ಮಾ ಪಥೋ ವಿ ದುಕ್ಷಃ ॥**
(ಋ. ಸಂ. ೭-೪-೭)

ಎಂಬ ಋಕ್ಕಿನಲ್ಲಿ ರಾಯಃ–ಧನಸ್ಯ ಧನದ ಎಂದು ರಾಯಶಬ್ದಕ್ಕೆ ಅರ್ಥವನ್ನು ವಿವರಿಸಿ,

**ಇಷಿರೇಣ ತೇ ಮನಸಾ ಸುತಸ್ಯ ಭಕ್ಷೀಮಹಿ ಪಿತ್ರ್ಯಸ್ಯೇವ ರಾಯಃ ।**
**ಸೋಮ ರಾಜನ್ಪ್ರಣ ಆಯೂಂಷಿ ತಾರೀರಹಾನೀವ ಸೂರ್ಯೋ ವಾಸರಾಣಿ ॥**
(ಋ. ಸಂ. ೮-೪೮-೭)

ಎಂಬ ಋಕ್ಕಿನಲ್ಲಿಯೂ ಯಾಸ್ಕರು ರೈಶಬ್ದಕ್ಕೆ ಧನವೆಂಬ ಅರ್ಥವನ್ನು ವರ್ಣಿಸಿರುವರು. ಇದರಂತೆಯೇ **ದಕ್ಷಿಣಾ ಮಘೋನೀ** (ಋ. ಸಂ. ೨-೧೧-೨೧)**ಮಾನೋ ಮಘೇವ ನಿಷ್ಪಪೀ ಪರಾದಾಃ** (ಋ. ಸಂ. ೧-೧೦೪-೫) ಎಂಬ ಈ ಋಕ್ಕುಗಳಲ್ಲಿ ಮಘಶಬ್ದವು ಧನವಾಚಕವಾಗಿ ಪ್ರಯುಕ್ತವಾಗಿದೆ. ಸಾಯಣರು ಮಾತ್ರ ಮಘಶಬ್ದಕ್ಕೆ ಇಲ್ಲಿ ಹವಿಸ್ಸಿನ ರೂಪವಾದ ಧನವೆಂದು ಅರ್ಥಮಾಡಿರುತ್ತಾರೆ. ಇದರಿಂದ ಪುನರುಕ್ತಿಯು ಪರಿಹೃತವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ರಶ್ಮಿಮ್**—ವ್ಯತ್ಯಯದಿಂದ ಬಹುವಚನಕ್ಕೆ ಏಕವಚನ ಪ್ರತ್ಯಯ ಬಂದಿದೆ.

**ಅನುಯಚ್ಛಮಾನಾ**—ಯಮ ಧಾತುವಿಗೆ ಲಡರ್ಥದಲ್ಲಿ ಶಾನಚಾದೇಶ ಬಂದಾಗ **ಇಷುಗಮಿಯಮಾಂ ಛಃ** (ಪಾ. ಸೂ. ೭–೩–೭೭) ಎಂಬುದರಿಂದ ಧಾತುವಿಗೆ ಛಾದೇಶ. **ಆನೇಮುಕ್** (ಪಾ. ಸೂ. ೭–೨–೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಕೃದುತ್ತರಪದ ಸಮಾಸದಲ್ಲಿ ಪ್ರಕೃತಿಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಅದಂತನಿಬಂಧನವಾಗಿ ಟಾಪ್. ಪ್ರಥಮಾ ಏಕವಚನಾಂತರೂಪ.

**ಭದ್ರಂಭದ್ರಮ್**—**ನಿತ್ಯವೀಪ್ಸಯೋಃ** (ಪಾ ಸೂ ೮-೧-೪) ಎಂಬುದರಿಂದ ದ್ವಿರ್ವಚನ ಬರುತ್ತದೆ, ಪರಕ್ಕೆ ಆಮ್ರೇಡಿತಸಂಜ್ಞೆ ಇರುವಾಗ **ಅನುದಾತ್ತಂ ಚ** (ಪಾ. ಸೂ. ೮–೧–೩) ಎಂಬುದರಿಂದ ಪರಕ್ಕೆ ಸರ್ವಾನುದಾತ್ತಸ್ವರ ಬರುತ್ತದೆ.

**ಧೇಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ ಶ್ಲು ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಘ್ವಸೋರೇದ್ಧಾವಭ್ಯಾಸಲೋಪಶ್ಚ** (ಪಾ. ಸೂ. ೬-೪-೧೧೯) ಎಂಬುದರಿಂದ ಅಭ್ಯಾಸಕ್ಕೆ ಲೋಪವೂ ಧಾತುವಿನ ಅಕಾರಕ್ಕೆ ಏತ್ವವೂ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುಹವಾ**—ಶೋಭನಂ ಹವಃ ಯಸ್ಯಾಸ್ಸಾ. ಸುಹವಾ ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು **ಭಾವೇನುಪಸರ್ಗಸ್ಯ** (ಪಾ ಸೂ ೩–೩–೭೫) ಎಂಬುದರಿಂದ ಭಾವಾರ್ಥದಲ್ಲಿ ಇದಕ್ಕೆ ಅಪ್ ಪ್ರತ್ಯಯ ತತ್ಸಂನಿಯೋಗ

ದಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಅದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ **ಸಾರ್ವಧಾತು-ಕಾರ್ಧಧಾತುಕಯೋಃ** ಎಂಬುದರಿಂದ ಗುಣ. ಅವಾದೇಶ. ಅಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮಘವತ್ಸು**—ಮಘಂ ಅಸ್ಯ ಅಸ್ತಿ ಇತಿ ಮಘವಾ ಮತುಪ್‌ಪ್ರತ್ಯಯ ಅಕಾರದ ಪರದಲ್ಲಿ ಬಂದುದರಿಂದ **ಮಾದುಪಧಾಯಾಶ್ಚ**—ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಸಪ್ತಮೀ ಬಹುವಚನಾಂತರೂಪ.

**ರಾಯಃ**—ರೈ ಶಬ್ದ. ಇದಕ್ಕೆ ಪ್ರಥಮಾ ಬಹುವಚನ ಜಸ್ ಪರವಾದಾಗ **ಏಚೋಽಯವಾಯಾವಃ** ಎಂಬುದರಿಂದ ಆಯಾದೇಶ.

**ಸ್ಯುಃ**—ಅಸ ಭುವಿ. ಧಾತು. ಲಿಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಅದಕ್ಕೆ ಉಸಾದೇಶ. ಯಾಸುಟಾಗಮ. ಇದಕ್ಕೆ ಙಿತ್ವವಿರುವುದರಿಂದ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೩ ॥

ಇಲ್ಲಿಗೆ ನೂರ ಇಪ್ಪತ್ತಮೂರನೆಯ ಸೂಕ್ತ ಮುಗಿದುದು.



# ನೂರ ಇಪ್ಪತ್ತನಾಲ್ಕನೆಯ ಸೂಕ್ತವು

**ಉಷಾ ಉಚ್ಛಂತೀತಿ ತ್ರಯೋದಶರ್ಚಂ ಚತುರ್ಥಂ ಸೂಕ್ತಂ ದೈರ್ಘತಮಸಃ ಕಕ್ಷೀವತ ಆರ್ಷಂ ತ್ರೈಷ್ಟುಭಮುಷಸ್ಯಂ। ಉಷಾ ಉಚ್ಛಂತೀತ್ಯನುಕ್ರಾಂತಂ ॥ ವಿನಿಯೋಗಸ್ತು ಪೂರ್ವಸೂಕ್ತ ಏವೋಕ್ತಃ ॥**

ಅನುವಾದವು—**ಉಷಾ ಉಚ್ಛಂತೀ** ಎಂಬ ಈ ಸೂಕ್ತವು ಹದಿನೆಂಟನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಕ್ಷೀವಾನ್ ದೈರ್ಘತಮಸಃ ಎಂಬುವನು ಋಷಿಯು. ಉಷಸ್ಸೇ ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಉಷಾ ಉಚ್ಛಂತೀ** ಎಂದು ಹೇಳಿರುವುದು. ಇದರ ವಿನಿಯೋಗವು ಹಿಂದೆಯೇ ಹೇಳಲ್ಪಟ್ಟಿರುವುದು.

## ಸೂಕ್ತ—೧೨೪

ಮಂಡಲ—೧ ॥ ಅನುವಾಕ—೧೮ ॥ ಸೂಕ್ತ—೧೨೪ ॥

ಅಷ್ಟಕ—೨ ॥ ಅಧ್ಯಾಯ—೧ ॥ ವರ್ಗ—೬, ೭, ೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ॥

॥ ಋಷಿಃ—ಕಕ್ಷೀವಾನ್ ದೈರ್ಘತಮಸ ಔಶಿಜಃ ॥

॥ ದೇವತಾ—ಉಷಾಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಉಷಾ ಉಚ್ಛಂತೀ ಸಮಿಧಾನೇ ಅಗ್ನಾ ಉದ್ಯನ್ತ್ಸೂರ್ಯ ಉರ್ವಿಯಾ
ಜ್ಯೋತಿರಶ್ರೇತ್ ।
ದೇವೋ ನೋ ಅತ್ರ ಸವಿತಾ ನ್ವರ್ಥಂ ಪ್ರಾಸಾವೀದ್ದ್ವಿಪತ್ಪ್ರ
ಚತುಷ್ಪದಿತ್ಯೈ ॥ ೧ ॥

॥ ಪದಪಾಠಃ ॥

ಉಷಾಃ । ಉಚ್ಛಂತೀ । ಸಂಽಇಧಾನೇ । ಅಗ್ನೌ । ಉತ್ಽಯನ್ । ಸೂರ್ಯಃ । ಉರ್ವಿಯಾ ।
ಜ್ಯೋತಿಃ । ಅಶ್ರೇತ್ ।
ದೇವಃ । ನಃ । ಅತ್ರ । ಸವಿತಾ । ನು । ಅರ್ಥಂ । ಪ್ರ । ಅಸಾವೀತ್ । ದ್ವಿಽಪತ್ । ಪ್ರ । ಚತುಃಽಪತ್ ।
ಇತ್ಯೈ ॥ ೧ ॥

॥ ಸಾಯಣಭಾಷ್ಯಂ ॥

ಏಷೋಷಾಃ ಸಮಿಧಾನೇಽಗ್ನೌ । ಅಗ್ನಿತ್ವಸಾಮಾನ್ಯೇನೈಕವಚನಂ । ಅಗ್ನಿಷು ಸಮಿಧ್ಯಮಾನೇಷು ಸತ್ಸು । ಕರ್ಮಾರ್ಥೇ ಕರ್ತೃಪ್ರಯೋಗಃ । ಉಷಃಕಾಲೇ ಹ್ಯಾಹವನೀಯಾದಯಃ ಪ್ರಜ್ವಾಲ್ಯಂತೇ । ಉಚ್ಛಂತೀ ತಮೋ ವಿವಾಸಯಂತ್ಯುರ್ವಿಯೋರು ಬಹುಲಂ ಜ್ಯೋತಿಃ ಪ್ರಕಾಶಮಶ್ರೇತ್ । ಸೇವತೇ । ಪ್ರಕಾಶತೇ ಪ್ರಕಾಶಯತಿ ವಾ ಸರ್ವಂ । ಕಿಮಿವ ಉದ್ಯನ್ ಸೂರ್ಯಃ । ಉಪಮಾಪ್ರಧಾನನಿರ್ದೇಶಃ ।

**ಉದಿತಃ ಸೂರ್ಯ ಇವ । ಸೂರ್ಯೋ ಯಥಾ ಪ್ರಕಾಶಯತಿ ತಥೇತ್ಯರ್ಥಃ । ಅತ್ರ ತ್ವದುದಯಾನಂತರಮಸ್ಮಿನ್ಕರ್ಮಣಿವಾ ಸವಿತಾ ದೇವಃ ಸರ್ವಸ್ಯ ಪ್ರೇರಕಃ ಸೂರ್ಯೋ ನೋಽಸ್ಮದರ್ಥಂ ನು ಕ್ಷಿಪ್ರಮರ್ಥಂ । ಅರ್ಥಶಬ್ದೋಽತ್ರ ವಿಶೇಷಣವಾಚೀನಪುಂಸಕಲಿಂಗಃ । ಅಯುನ್ನರ್ಥಾನಿ ಕೃಣವನ್ನಪಾಂಸೀತ್ಯಾದೌ । ಋ. ೭-೬೩-೪ । ತಥಾದೃಷ್ಟತ್ವಾತ್ ॥ ಅರಣೀಯಂ ದ್ವಿಪತ್ ಪಾದದ್ವಯೋಪೇತಂ ಮನುಷ್ಯಾದಿರೂಪಂ ಧನಂ ಪ್ರಾಸಾವೀತ್ । ಅನುಜಾನಾತು ದದಾತ್ವಿತ್ಯರ್ಥಃ । ತಥಾ ಚತುಷ್ಪತ್ ಪಾದಚತುಷ್ಟಯೋಪೇತಂ ಗವಾದಿರೂಪಂ ಧನಂ ಪ್ರಾಸಾವೀತ್ । ಕಿಮರ್ಥಂ । ಇತ್ಯೈ । ದ್ವಿಪದಾಂ ಚತುಷ್ಪದಾಂ ಚ ಗಮನಾಯ । ಯದ್ವಾ । ನ ಇತ್ಯಾ ಇತಿ ಸಂಬಂಧಃ । ಅಸ್ಮದ್ಗಮನಾಗಮನಾದಿವ್ಯಾಪಾರಾಯೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಅಗ್ನೌ**—ಅಗ್ನಿಯು (ಅಗ್ನಿಗಳು) । **ಸಮಿಧಾನೇ**—ಸಮಿದ್ಧವಾಗಲು । **ಉಷಾಃ**—ಉಷೋದೇವತೆಯು । **ಉದ್ಯನ್ ಸೂರ್ಯಃ**—ಉದಿಸುತ್ತಿರುವ ಸೂರ್ಯ(ನಂತೆ) । **ಉಚ್ಛಂತೀ**—(ತಮಸ್ಸನ್ನು) ಪರಿಹರಿಸುತ್ತಾ । **ಉರ್ವಿಯಾ**—ಹೆಚ್ಚಾದ । **ಜ್ಯೋತಿಃ**—ಪ್ರಕಾಶವನ್ನು । **ಅಶ್ರೇತ್**—ಹೊಂದುತ್ತಾಳೆ (ಎಲ್ಲವನ್ನೂ ಪ್ರಕಾಶಿಸುತ್ತಾಳೆ) । **ಅತ್ರ**—(ಉದಯಾ) ನಂತರ (ಈ ಕರ್ಮದಲ್ಲಿ) । **ಸವಿತಾ ದೇವಃ**—(ಸರ್ವ ಪ್ರೇರಕನಾದ) ಸವಿತೃ ದೇವನು । **ನಃ**—ನಮಗೋಸ್ಕರ । **ನು**—ಕ್ಷಿಪ್ರವಾಗಿ । **ಅರ್ಥಂ**—ಅಪೇಕ್ಷಿತವಾದ । **ದ್ವಿಪತ್**—ದ್ವಿಪಾದ ಜಂತುಗಳನ್ನು (ಮನುಷ್ಯಾದಿ ರೂಪಧನವನ್ನು) । **ಇತ್ಯೈ**—(ನಮ್ಮ) ಗಮನಾಗಮನಗಳಿಗಾಗಿ । (**ಪ್ರ ಅಸಾವೀತ್**—ಅನುಗ್ರಹಿಸಲಿ । **ಚತುಷ್ಪತ್**—ಚತುಷ್ಪಾದಗಳನ್ನೂ (ಗವಾದಿ ರೂಪಧನವನ್ನೂ) (**ಪ್ರ ಅಸಾವೀತ್**—ಅನುಗ್ರಹಿಸಲಿ.)

॥ ಭಾವಾರ್ಥ ॥

(ಆಹವನೀಯಾದ್ಯ)ಗ್ನಿಗಳು ಸಮಿದ್ಧವಾಗುತ್ತಿರಲು, ಉಷೋದೇವತೆಯು ತಮಃಪರಿಹಾರಕವಾದ (ತನ್ನ) ಅಮಿತ ತೇಜಸ್ಸಿನಿಂದ ಸೂರ್ಯನಂತೆ ತಮಸ್ಸನ್ನು ಪರಿಹರಿಸುತ್ತಾಳೆ; ಉದಯಾನಂತರ, ಸೂರ್ಯದೇವನು ನಮ್ಮ ಗಮನಾಗಮನಾದಿ ಕರ್ಮಗಳಿಗೋಸ್ಕರ, ದ್ವಿಪಾದ ಚತುಷ್ಪಾದ ಜಂತುಗಳನ್ನು ಕ್ಷಿಪ್ರವಾಗಿ ಅನುಗ್ರಹಿಸಲಿ.

## English Translation.

When the (sacred) fire is kindled, Ushas sheds abundant light, dispersing (the darkness) like the rising sun : may the divine Savitri bestow upon us for our use, wealth of both bipeds and quadrupeds.

॥ ವಿಶೇಷವಿಷಯಗಳು ॥

**ಉಚ್ಛಂತೀ**—ಈ ಪದಕ್ಕೆ ಚದುರಿಸಿ ನಾಶಮಾಡುತ್ತಾ ಎಂಬುದಾಗಿ ಒಂದರ್ಥವನ್ನೂ ಅಥವಾ ಕಾಂತಿಯಿಂದ ಪ್ರಕಾಶಿಸುತ್ತಾ ಎಂದು ಇನ್ನೊಂದು ಅರ್ಥವನ್ನೂ ಹೇಳಬಹುದು. **ಉಷಾ** ಎನ್ನುವ ಶಬ್ದದ ನಿಷ್ಪತ್ತಿಯೂ ಸಹ **ಉಚ್ಛತಿ** ಎನ್ನುವುದರ ಮೂಲಕವಾಗಿಯೇ ಆಗಿದೆ. **ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ।**

ಎಂಬ ವಾಕ್ಯದಿಂದ ನಿರುಕ್ತಕಾರರು ಈ ನಿರ್ವಚನವನ್ನು ಹೇಳಿದ್ದಾರೆ. (ನಿ. ೨-೧೮) ಆದರೆ, **ಉಷಾ ವಷ್ಟೇಃ ಕಾಂತಿಕರ್ಮಣ ಉಚ್ಛತೇರಿತರಾ ಮಾಧ್ಯಮಿಕಾ** | (ನಿ. ೧೨-೭) ಎಂಬ ವಾಕ್ಯದಿಂದ **ಉಚ್ಛತಿ** ಶಬ್ದವು **ವಶ-ಕಾಂತೌ** ಎಂಬ ಧಾತುವಿನಿಂದಾಗಲಿ ಅಥವಾ **ಉಚ್ಛೀ-ವಿವಾಸೇ** ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. **ಉಚ್ಛಂತೀ ಉಷಾ** ಎಂದರೆ ಕತ್ತಲನ್ನು ಚದುರಿಸಿ ಹೊರಕ್ಕೆ ಆವಿರ್ಭವಿಸುವ **ಉಷಸ್ಸು** ಎಂದಾಗಲಿ ಅಥವಾ ಪ್ರಕಾಶಿಸುತ್ತಿರುವ ಉಷಸ್ಸು ಎಂದಾಗಲಿ ಆಗಬಹುದು.

**ನು—ನು ಇತ್ಯೇಷೋಽನೇಕಕರ್ಮಾ** | ಇದಂ ನು ಕರಿಷ್ಯತೀತಿ ಹೇತ್ವಪದೇಶೇ | ಕಥಂ ನು ಕರಿಷ್ಯತೀ-ತ್ಯನುಪೃಷ್ಟೇ | (ನಿ. ೧-೪) | **ನು** ಎನ್ನುವ ನಿಪಾತಕ್ಕೆ ಅನೇಕ ಅರ್ಥಗಳಿವೆ. **ಇದಂ ನು ಕರಿಷ್ಯತಿ** ಎನ್ನುವಾಗ **ನು** ಎನ್ನುವುದಕ್ಕೆ ಆದ್ದರಿಂದ ಎಂದು ಹೇತ್ವರ್ಥವಾಗುತ್ತದೆ. **ಕಥಂ ನು** ಕರಿಷ್ಯತಿ ಎನ್ನುವಾಗ **ನು** ಎನ್ನುವುದಕ್ಕೆ ಹೇಗೆ ಎಂಬ ಪ್ರಶ್ನಾರ್ಥಕವಾಗುತ್ತದೆ. ಹೀಗೆಯೇ **ಅಥಾಪ್ಯುಪಮಾರ್ಥೇ ಭವತಿ** | ಉಪಮಾನವನ್ನು ಸೂಚಿಸುವಾಗಲೂ ಸಹ **ನು** ಶಬ್ದದ ಪ್ರಯೋಗವಿದೆ. ಉದಾಹರಣೆಗೆ—

**ಅಕ್ಷೋ ನ ಚಕ್ರ್ಯೋಃ ಶೂರ ಬೃಹನ್ಪ್ರ ತೇ ಮಹ್ನಾ ರಿರಿಚೇ ರೋದಸ್ಯೋಃ |**
**ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂ೩ತಯೋ ರುರುಹುರಿಂದ್ರ ಪೂರ್ವೀಃ ||**

(ಋ. ಸಂ. ೬-೨೪-೩)

ಎಂಬ ಋಕ್ಕನ್ನು ನಿರುಕ್ತಕಾರರು ಉದಹರಿಸಿ(೧-೪) **ವೃಕ್ಷಸ್ಯೇವ ತೇ ಪುರುಹೂತ ಶಾಖಾಃ** | ವೃಕ್ಷದಂತೆ ಅಥವಾ ವೃಕ್ಷದ ಶಾಖೆಗಳಂತೆ ಎಂದು **ನು** ಎಂಬ ಪದಕ್ಕೆ ಉಪಮಾರ್ಥವನ್ನು ಹೇಳಿದೆ. ಹೀಗೆಯೇ ಕ್ಷಿಪ್ರವಾಗಿ, ಜಾಗ್ರತೆಯಾಗಿ ಎಂಬರ್ಥವೂ ಇದೆ.

**ನೂ ಮರ್ತೋ ದಯತೇ ಸನಿಷ್ಯನ್ಯೋ ವಿಷ್ಣವ ಉರುಗಾಯಾಯ ದಾಶತ್ |**
**ಪ್ರ ಯಃ ಸತ್ರಾಚಾ ಮನಸಾ ಯಜಾತ ಏತಾವಂತಂ ನರ್ಯಮಾವಿವಾಸಾತ್ ||**

(ಋ. ಸಂ. ೭-೧೦೦-೧)

ಇತ್ಯಾದಿ ಋಕ್ಕುಗಳಲ್ಲಿ **ನು** ಎನ್ನುವುದಕ್ಕೆ ಕ್ಷಿಪ್ರಂ ಎಂಬರ್ಥವೂ

**ನೂ ಇಂದ್ರ ಶೂರ ಸ್ತವಮಾನ ಊತೀ ಬ್ರಹ್ಮಜೂತಸ್ತನ್ವಾ ವಾವೃಧಸ್ವ |**
**ಉಪ ನೋ ವಾಜಾನ್ಮಿಮೀಹ್ಯುಪ ಸ್ತೀನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ |**

(ಋ. ಸಂ. ೭-೧೯-೧೧)

ಇವೇ ಮುಂತಾದ ಕಡೆಗಳಲ್ಲಿ **ಅದ್ಯ** ಎಂದರೆ ಈಗ, ಒಡನೆಯೇ ಎಂಬ ಅರ್ಥವೂ ಹಾಗೆಯೇ ನಿರುಕ್ತಕಾರರು **ನು ಇತ್ಯೇಷೋಽನೇಕಕರ್ಮಾ** | (ನಿ. ೧-೪) ಎಂದು ಹೇಳಿರುವಂತೆ ಇನ್ನೂ ಅನೇಕಾರ್ಥಗಳಿದ್ದು ಪ್ರಕೃತವಾದ ಋಕ್ಕಿನಲ್ಲಿ ಕ್ಷಿಪ್ರವಾಗಿ, ಬೇಗನೆ ಎಂದರ್ಥವಾಗುತ್ತದೆ.

**ಇತ್ಯೈ**—ಈ ಪದವು ಗಮನಾರ್ಥಕವಾದುದು. ಗಮನಾಗಮನರೂಪವಾದ ಸಂಚಾರಕ್ಕಾಗಿ ಎಂದರ್ಥ. ಇಲ್ಲಿ **ದ್ವಿಪದಾಂ ಚತುಷ್ಪದಾಂ ಚ ಗಮನಾಯ** ಎಂಬ ಒಂದು ವಿಧವಾದ ಅನ್ವಯವೂ **ಅಸ್ಮದ್ಗಮನಾಗಮನಾದಿ**

**ವ್ಯಾಪಾರಾಯ** । ಎಂಬ ಇನ್ನೊಂದು ಅನ್ವಯವೂ ಸಾಧ್ಯವಾಗುವುದು. ನಮ್ಮ ಸಂಚಾರಕ್ಕಾಗಿ ಅಥವಾ ಸಕಲ ಪ್ರಾಣಿಗಳ ಸಂಚಾರಕ್ಕಾಗಿ ಎಂದರ್ಥ.

**ಕ್ಷತ್ರಾಯ ತ್ವಂ ಶ್ರವಸೇ ತ್ವಂ ಮಹೀಯಾ ಇಷ್ಟಯೇ ತ್ವಮರ್ಥಮಿವ ತ್ವಮಿತ್ಯೈ ।**
**ವಿಸದೃಶಾ ಜೀವಿತಾಭಿಪ್ರಚಕ್ಷ ಉಷಾ ಅಜೀಗರ್ಭುವನಾನಿ ವಿಶ್ವಾ ।**

(ಋ. ಸಂ. ೧-೧೧೩-೬)

ಇತ್ಯಾದಿ ಋಕ್ಕುಗಳಲ್ಲಿಯೂ **ಉಷೋ**ದೇವತೆಯನ್ನೇ ಸಂಬೋಧಿಸಿದೆ. ಇಲ್ಲಿಯೂ ಸಹ **ತ್ವಂ ಕ್ಷತ್ರಾಯ, ತ್ವಂ ಶ್ರವಸೇ, ತ್ವಂ ಇತ್ಯೈ** ಎಂದು ಪ್ರಾಣಿಗಳ ಸಂಚಾರ ಸಹಾಯಕಳು ನೀನೊಬ್ಬಳೇ ಎಂಬರ್ಥವನ್ನು ತೋರಿಸುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಈ ಪದದ ಪ್ರಯೋಗವಿದೆ.

**ಉರ್ವಿಯಾ—ಉರುಶಬ್ದಾತ್ತೃತೀಯೈಕವಚನೇ ಉರ್ವಿಯಾ ಇತಿ ರೂಪಂ । ಉರುತ್ವೇನ ।** **ಉರು** ಶಬ್ದದ ಮೇಲೆ ತೃತೀಯಾ ವಿಭಕ್ತಿಯ ಏಕವಚನದ ಪ್ರಯೋಗವಾದ ಮೇಲೆ **ಉರ್ವಿಯಾ** ಎಂದಾಗುತ್ತದೆ. ವಿಸ್ತಾರವಾಗಿ ಎಂದರ್ಥವು. ವ್ಯಾಪಿಸು, ಎಲ್ಲಾ ಕಡೆಯಲ್ಲಿಯೂ ವಿಸ್ತಾರವಾಗಿ ಹರಡು ಎನ್ನುವ ಸನ್ನಿವೇಶದಲ್ಲಿ ಈ ರೀತಿ **ಉರ್ವಿಯಾ** ಎಂಬ ಪ್ರಯೋಗವಿದೆ.

**ವ್ಯಚಸ್ವತೀರುರ್ವಿಯಾ ವಿ ಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾನಾಃ ।**
**ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾಯಣಾಃ ॥**

(ಋ. ಸಂ. ೧೦-೧೧೦-೫)

ಇತ್ಯಾದಿ ಋಕ್ಕುಗಳಲ್ಲಿ ಉಪಯೋಗಿಸಿರುವಂತೆ ಇಲ್ಲಿಯೂ ಸಹ **ಉಷಸ್ಸು** ವಿಸ್ತಾರವಾಗಿ ವ್ಯಾಪಿಸಿ ಹರಡಿಕೊಂಡು ಬೆಳಗಲಿ ಎಂದರ್ಥ.

**ಐಂದ್ರಂ ಕದ್ವೈಶ್ವದೇವಂ ಚ ಪ್ರಾಷಸೇ ಪೃಥುರುತ್ತರೇ ।**

(ಬೃ. ದೇ. ೩-೧೪೦)

ಋ. ಸಂ. ೧-೧೨೩ ಮತ್ತು ೧-೧೨೪ನೇ ಸೂಕ್ತಗಳೆರಡೂ ಉಷೋದೇವತೆಯನ್ನುದ್ದೇಶಿಸಿದವು ಎಂದು ಬೃಹದ್ದೇವತಾ ವಾಕ್ಯವಿರುತ್ತದೆ.

**ತಥಾಶ್ವಿನಶಸ್ತ್ರೇ ಇದಮಾದಿಸೂಕ್ತದ್ವಯಸ್ಯ ವಿನಿಯೋಗಃ ।**

(ಸಾ. ಭಾ. ಪೀಠಿಕಾ ಋ. ಸಂ. ೧-೧೨೩)

ಎಂದು ಸಾಯಣರು ಈ ಸೂಕ್ತದ ಮತ್ತು ಇದರ ಹಿಂದಿನ (೧-೧೨೩) ಸೂಕ್ತದ ವಿನಿಯೋಗವನ್ನು ತಿಳಿಸಿದ್ದಾರೆ. ಈ ಸಂದರ್ಭದಲ್ಲಿ **ಆಶ್ವಿನ ಶಸ್ತ್ರಕ್ಕೂ** ಪ್ರಕೃತವಾದ ಋಕ್ಕಿಗೂ ಇರತಕ್ಕ ಸಂಬಂಧವನ್ನು ತಿಳಿಯಬೇಕಾದುದರಿಂದ **ಆಶ್ವಿನಶಸ್ತ್ರದ** ಸ್ವರೂಪವೇನೆಂಬುದನ್ನೂ ಅದರ ಕಥಾಸಂದರ್ಭವನ್ನೂ ವಿವರಿಸಲಾಗುತ್ತದೆ. ಈ ಪ್ರಕರಣವು ಐತರೇಯ ಬ್ರಾಹ್ಮಣದಲ್ಲಿ ಹೀಗೆ ಉಕ್ತವಾಗಿದೆ. (ಐ. ಬ್ರಾ. ೪-೭ ರಿಂದ ೧೧)—

**ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ಸಾವಿತ್ರೀಂ ತಸ್ಯೈ ಸರ್ವೇ ದೇವಾ ವರಾ ಆಗಚ್ಛಂಸ್ತಸ್ಯಾ ಏತತ್ಸಹಸ್ರಂ ವಹತುಮನ್ವಾಕರೋದ್ಯದೇತದಾಶ್ವಿನಮಿತ್ಯಾಚಕ್ಷತೇಽನಾಶ್ವಿನಂ ಹೈವ ತದ್ಯದರ್ವಾಕ್ಸಹಸ್ರಂ ತಸ್ಮಾತ್ತತ್ಸಹಸ್ರಂ ವೈವ ಶಂಸೇದ್ಭೂಯೋ ವಾ ಪ್ರಾಶ್ಯ ಘೃತಂ ಶಂಸೇದ್ಯಥಾ ಹ ವಾ ಇದಮನೋ ವಾ ರಥೋ ವಾಕ್ತೋ ವರ್ತತ ಏವಂ ಹೈವಾಕ್ತೋ ವರ್ತತೇ । ಶಕುನಿರಿವೋತ್ಪತಿಷ್ಯನ್ನಾಹ್ವಯೀತ ।**

ಪೂರ್ವದಲ್ಲಿ ಪ್ರಜಾಪತಿಯು ತನ್ನ ಮಗಳಾದ ಸೂರ್ಯೆಯನ್ನು **ಸೋಮನಿಗೆ** ವಿವಾಹಾರ್ಥವಾಗಿ ಕೊಡಲು ನಿಶ್ಚಯಿಸಿದಾಗ ಸಕಲ ದೇವತೆಗಳೂ ಅವಳನ್ನು ತಾವು ವರಿಸಬೇಕೆಂದು ಅಪೇಕ್ಷೆಯಿಂದ ಬಂದರು. ಆಗ ಪ್ರಜಾಪತಿಯು ಆಶ್ವಿನಶಸ್ತ್ರವೆಂದು ಪ್ರಸಿದ್ಧವಾದ ಸಹಸ್ರ ಮಂತ್ರಗಳನ್ನು ಪಠಿಸಬೇಕೆಂದೂ ಅದಕ್ಕೆ ಕಡಿಮೆಯಾಗಬಾರದೆಂದೂ ಒಂದು ಸಮಯವನ್ನು ಗೊತ್ತುಮಾಡಿದನು. ಲೋಕದಲ್ಲಿ ರಥಚಕ್ರವು ತೈಲಸಿಂಚಿತವಾದನಂತರ ಹೇಗೆ ಸುಲಭವಾಗಿ ಚಲಿಸಬಲ್ಲುದೋ ಹಾಗೆ ಘೃತಪಾನಾನಂತರ ಸುಲಭವಾಗಿ ಮಂತ್ರಗಳನ್ನು ಪಠಿಸಬಹುದಾದುದರಿಂದ ಮೊದಲು ಘೃತ ಪಾನವನ್ನು ಮಾಡಿ ಅನಂತರ ಪಠಿಸಬೇಕು. ಮತ್ತು ಪಕ್ಷಿಯು ಹಾರುವುದಕ್ಕೆ ಸಿದ್ಧವಾದಾಗ ತನ್ನ ದೇಹವನ್ನು ಲಘುವಾಗಿ ಮಾಡಿಕೊಳ್ಳುವಂತೆ ಇವಳನ್ನು ಮೋಹಿಸುವ ವರನೂ ಆ ಗುಣವನ್ನು ಹೊಂದಿರಬೇಕೆಂದನು.

**ತಸ್ಮಿನ್ದೇವಾ ನ ಸಮಜಾನತ ಮಮೇದಮಸ್ತು ಮಮೇದಮಸ್ತ್ವಿತಿ ತೇ ಸಂಜಾನಾನಾ ಅಬ್ರುವನ್ನಾಜಿಮಸ್ಯಾಽಯಾಮಹೇ ಸ ಯೋ ನ ಉಜ್ಜೇಷ್ಯತಿ ತಸ್ಯೇದಂ ಭವಿಷ್ಯತೀತಿ ತೇಽಗ್ನೇರೇವಾಧಿ ಗೃಹಪತೇರಾದಿತ್ಯಂ ಕಾಷ್ಠಾಮಕುರ್ವತ ತಸ್ಮಾದಾಗ್ನೇಯೀ ಪ್ರತಿಪದ್ಭವತ್ಯಾಶ್ವಿನಸ್ಯಾಗ್ನಿರ್ಹೋತಾ ಗೃಹಪತಿಃ ಸ ರಾಜೇತಿ ।**

ಆಗ ದೇವತೆಗಳು ಪರಸ್ಪರ ಹೋರಾಟಮಾಡಲಿಷ್ಟಪಡದೆ ಎಲ್ಲರೂ ಸೇರಿ ಒಂದು ಪಂದ್ಯದಲ್ಲಿ ಭಾಗವಹಿಸಬೇಕೆಂದೂ ಆ ಓಟದಲ್ಲಿ ಯಾರು ಜಯಿಸುತ್ತಾರೋ ಅವರು ಇವಳನ್ನು ವರಿಸಲು ಅರ್ಹನೆಂದೂ ಒಟ್ಟಿಗೆ ಒಂದು ತೀರ್ಮಾನಕ್ಕೆ ಬಂದರು. ಆಗ **ಗೃಹಪತಿಯಾದ** ಅಗ್ನಿಯಿಂದ ಪ್ರಾರಂಭಿಸಿ ಸೂರ್ಯನವರೆಗೆ ಓಡಿದರು. ಆದುದರಿಂದಲೇ ಪ್ರಥಮ ಮಂತ್ರವು.

**ಸ ತ್ವಂ ದಕ್ಷಸ್ಯಾವೃಕೋ ವೃಧೋ ಭೂರರ್ಯಃ ಪರಸ್ಯಾಂತರಸ್ಯ ತರುಷಃ ।**
**ರಾಯಃ ಸೂನೋ ಸಹಸೋ ಮರ್ತ್ಯೇಷ್ವಾ ಛರ್ದಿರ್ಯಚ್ಛ ವೀತಹವ್ಯಾಯ ಸಪ್ರಥೋ ಭರದ್ವಾಜಾಯ ಸಪ್ರಥಃ ॥**

(ಋ. ಸಂ. ೬–೧೫–೩)

ಎಂದು ಅಗ್ನಿಪರವಾದ ಋಕ್ಕಾಗಿರುವುದು. ಇದು ಒಂದು ಮತ. ಅಲ್ಲದೆ,

**ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಮಗ್ನಿಂ ಭ್ರಾತರಂ ಸದಮಿತ್ಸಖಾಯಂ ।**
**ಅಗ್ನೇರನೀಕಂ ಬೃಹತಃ ಸಪರ್ಯಂ ದಿವಿ ಶುಕ್ರಂ ಯಜತಂ ಸೂರ್ಯಸ್ಯ ।**

(ಋ. ಸಂ ೧೦-೭-೩)

ಎಂಬ ಮಂತ್ರದಿಂದ ಪ್ರಾರಂಭಿಸಬೇಕೆಂದು ಇನ್ನು ಕೆಲವರ ಮತ. ಇದರ ವಿವರಗಳನ್ನು **ಆಶ್ವಿನ ಶಸ್ತ್ರಕ್ಕೆ** ಸಂಬಂಧಿಸಿದ ಅಗ್ನಿ ಸೂಕ್ತವನ್ನು ವಿವರಿಸುವಾಗ (ಋಗ್ವೇದಸಂಹಿತೆಯಲ್ಲಿ ಭಾಗ ೧೧. ಋ. ಸಂ. ೧-೧೪೪ನೇ ಸೂಕ್ತದ ಪೀಠಿಕೆ) ತಿಳಿಸಲಾಗುತ್ತದೆ. ಪ್ರಕೃತದಲ್ಲಿ ಉಷೋ ದೇವತಾಕವಾದ ಸೂಕ್ತವನ್ನು ವಿವರಿಸುತ್ತಿರುವುದರಿಂದ ಇವಕ್ಕೂ ಆಶ್ವಿನ ಶಸ್ತ್ರಕ್ಕೂ ಇರತಕ್ಕ ಸಂಬಂಧವನ್ನು ಮಾತ್ರ ತಿಳಿಸಲಾಗುತ್ತದೆ.

**ತಾಸಾಂ ವೈ ದೇವತಾನಾಮಾಜಿಂ ಧಾವಂತೀನಾಮಭಿಸೃಷ್ಟಾನಾಮಗ್ನಿರ್ಮುಖಂ ಪ್ರಥಮಃ ಪ್ರತ್ಯಪದ್ಯತ ತಮಶ್ವಿನಾವನ್ವಾಗಚ್ಛತಾಂ ತಮಬ್ರೂತಾಮಪೋದಿಹ್ಯಾವಾಂ ವಾ ಇದಂ ಜೇಷ್ಯಾವ ಇತಿ ಸ ತಥೇತ್ಯಬ್ರವೀತ್ತಸ್ಯ ವೈ ಮನೇಹಾಪ್ಯಸ್ತ್ವಿತಿ ತಥೇತಿ ತಸ್ಮಾ ಅಪ್ಯತ್ರಾಕುರುತಾಂ ತಸ್ಮಾದಾಗ್ನೇಯಮಾಶ್ವಿನೇ ಶಸ್ಯತೇ । ತಾ ಉಷಸಮನ್ವಾಗಚ್ಛತಾಂ ತಾಮಬ್ರೂತಾಮಪೋದಿಹ್ಯಾವಾಂ ವಾ ಇದಂ ಜೇಷ್ಯಾವ ಇತಿ ಸಾ ತಥೇತ್ಯಬ್ರವೀತ್ತಸ್ಯೈ ವೈ ಮನೇಹಾಪ್ಯಸ್ತ್ವಿತಿ ತಥೇತಿ ತಸ್ಯಾ ಅಪ್ಯತ್ರಾಕುರುತಾಂ ತಸ್ಮಾದುಷಸ್ಯಮಾಶ್ವಿನೇ ಶಸ್ಯತೇ ।**

ಸಕಲ ದೇವತೆಗಳೂ ಈ ಪಂದ್ಯದಲ್ಲಿ ಭಾಗವಹಿಸಿ ಓಡುತ್ತಿದ್ದಾಗ ಅಗ್ನಿಯು ಎಲ್ಲರಿಗಿಂತಲೂ ಮುಂದಾದನು. ಆಗ **ಅಶ್ವಿನೀ**ದೇವತೆಗಳು ಅಗ್ನಿಯನ್ನು ಸಮೀಪಿಸಿ ನಮಗೆ ದಾರಿಯನ್ನು ಬಿಡು. ಇದರಲ್ಲಿ ನಾವು ಜಯಿಸಲು ಸಹಾಯಮಾಡು ಎಂದು ಕೇಳಿಕೊಂಡರು. ಆಗ **ಅಗ್ನಿಯು** ಅದಕ್ಕೆ ಒಪ್ಪಿ ಆ ಜಯದಲ್ಲಿ ತನಗೂ ಒಂದು ಅಂಶವನ್ನು ಕೊಡಬೇಕೆಂದು ಕೇಳಿಕೊಂಡನು. ಆದುದರಿಂದಲೇ **ಆಶ್ವಿನಶಸ್ತ್ರ**ದಲ್ಲಿ ಅವನಿಗೂ ಒಂದು ಭಾಗವಿದೆ. ಅನಂತರ **ಅಶ್ವಿನೀ** ದೇವತೆಗಳು **ಉಷಸ್ಸನ್ನು** ಹಿಂಬಾಲಿಸಿ ನಮಗೆ ದಾರಿಯನ್ನು ಬಿಡು. ಈ ಪಂದ್ಯದಲ್ಲಿ ನಾವು ಜಯವನ್ನು ಪಡೆಯುವಂತೆ ಸಹಾಯಮಾಡು ಎಂದರು. ಆಗ **ಉಷೋ** ದೇವತೆಯು ಹಾಗೇ ಆಗಲೆಂದು ಒಪ್ಪಿ ಅವರ ಜಯದಲ್ಲಿ ತಾನೂ ಭಾಗಿಯಾಗಬೇಕೆಂದು ಸಮಯವನ್ನು ವಿಧಿಸಿದಳು. ಆಗ ಅವರು ಅದಕ್ಕೆ ಸಮ್ಮತಿಸಲಾಗಿ **ಆಶ್ವಿನ ಶಸ್ತ್ರದಲ್ಲಿ** ಉಷೋದೇವತಾಪರವಾದ ಸೂಕ್ತದ ಪಠಣೆಯಿದೆ. ಹೀಗೆಯೇ ಇಂದ್ರನಲ್ಲಿಯೂ ಕೇಳಿಕೊಂಡು ಇಂದ್ರನಿಗೂ ಇದರಲ್ಲಿ ಭಾಗವಿರುವಂತೆ ಮಾಡಿದರು.

**ತದಾಹುರ್ಯಚ್ಛಸ್ಯತ ಆಗ್ನೇಯಂ ಶಸ್ಯತ ಉಷಸ್ಯಂ ಶಸ್ಯತ ಐಂದ್ರಮಥ । ಕಸ್ಮಾದೇತದಾಶ್ವಿನಮಿತ್ಯಾಚಕ್ಷತ ಇತ್ಯಶ್ವಿನೌ ಹಿ ತದುದಜಯತಾಮಶ್ವಿನಾವಾಶ್ನುವಾತಾಂ ಯದಶ್ವಿನಾ ಉದಜಯತಾಮಶ್ವಿನಾವಾಶ್ನುವಾತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ ॥**

(ಐ. ಬ್ರಾ. ೪-೭ ರಿಂದ ೮)

ಈ ಸಂದರ್ಭದಲ್ಲಿ **ಅಗ್ನಿಯನ್ನೂ, ಇಂದ್ರನನ್ನೂ, ಉಷಸ್ಸನ್ನೂ** ಉದ್ದೇಶಿಸಿ ಮಂತ್ರಗಳನ್ನು ಪಠಿಸಬೇಕಾಗಿರುವುದರಿಂದ ಇದಕ್ಕೆಲ್ಲಾ **ಆಶ್ವಿನಶಸ್ತ್ರ**ವೆಂದು ಹೆಸರು ಹೇಗೆ ಬಂದಿತು ಎಂಬ ಆಕ್ಷೇಪಣೆ ಬಂದರೆ, ಇದು ಮುಖ್ಯವಾಗಿ ಅಶ್ವಿನೀದೇವತೆಗಳ ಜಯವನ್ನು ಕುರಿತು ಪಠಿತವಾಗಿರುವುದರಿಂದ ಈ ಮಂತ್ರಗಳಿಗೆಲ್ಲಾ ಈ ಹೆಸರು ಎಂಬುದೇ ಸಮಾಧಾನ. ಪ್ರಕೃತವಾದ ೧-೧೨೩ ಮತ್ತು ೧-೧೨೪ ನೇ ಸೂಕ್ತಗಳಿಗೂ ಆಶ್ವಿನಶಸ್ತ್ರಕ್ಕೂ ಇರತಕ್ಕ ಸಂಬಂಧವು ಮೇಲೆ ಹೇಳಿದ ರೀತಿಯಿದೆ.

॥ ವ್ಯಾಕರಣಪ್ರಕ್ರಿಯಾ ॥

**ಉಚ್ಛಂತೀ**—ಉಛೀ ವಿವಾಸೇ. ಧಾತು. ತುದಾದಿ. ಲಡರ್ಥದಲ್ಲಿ ಶತೃ ಪ್ರತ್ಯಯ. ಸ್ತ್ರೀತ್ವ ವಿವಕ್ಷೆ ಮಾಡಿದಾಗ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ನುಮಾಗಮ. ವಿಕರಣಸ್ವರ ಉಳಿಯುತ್ತದೆ.

**ಉದ್ಯನ್**—ಉತ್ ಉಪಸರ್ಗ. ಇಣ್ ಗತೌ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ಪಿಗೆ ಲುಕ್. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸೂರ್ಯಃ**—ಷೂ ಪ್ರೇರಣೇ ಧಾತು. ಸುವತಿ ಕರ್ಮಣಿ ಲೋಕಂ ಪ್ರೇರಯತಿ ಇತಿ ಸೂರ್ಯಃ. **ರಾಜಸೂಯ ಸೂರ್ಯ**—(ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಪ್ ಪ್ರತ್ಯಯ ರುಡಾಗಮದೊಡನೆ ನಿಪಾತಿತವಾಗಿದೆ.

**ಉರ್ವಿಯಾ**—ಉರು ಶಬ್ದ. ಇದಕ್ಕೆ ದ್ವಿತೀಯಾ ಏಕವಚನಪರವಾದಾಗ ಅದಕ್ಕೆ **ಇಯಾಡಿಯಾಜೀಕಾರಣಾಮುಪಸಂಖ್ಯಾನಂ**—(ಪಾ. ಸೂ. ೭-೧-೩೯-೨) ಎಂಬ ವಚನದಿಂದ ಇಯಾಜಾದೇಶ. ಯಣಾದೇಶ. ಪ್ರತ್ಯಯ ಚಿತ್ತಾದುದರಿಂದ **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅಶ್ರೇತ್**—ಶ್ರಿಞ್ ಸೇವಾಯಾಂ ಧಾತು. **ಛಂದಸಿ ಲುಙ್ಲಙ್ಲಿಟಃ**—ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇಕಾರಲೋಪ. **ಬಹುಲಂ ಛಂದಸಿ**—ಸೂತ್ರದಿಂದ ಶಪಿಗೆ ಲುಕ್. ಪ್ರತ್ಯಯ ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಇಕಾರಕ್ಕೆ ಗುಣ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸವಿತಾ**—ಷೂ ಪ್ರೇರಣೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ, ಅವಾದೇಶ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಅಸಾವೀತ್**—ಷು ಪ್ರಸವೈಶ್ವರ್ಯಯೋಃ ಧಾತು. **ಛಂದಸಿ ಲುಙ್ಲಙ್ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇಕಾರಲೋಪ. ಚ್ಲಿಗೆ ಸಿಚಾದೇಶ. ಅದಕ್ಕೆ ಇಡಾಗಮ. **ಅಸ್ತಿಸಿಚೋಽಪೃಕ್ತೇ**—(ಪಾ. ಸೂ. ೭-೩-೯೬) ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ. **ಸಿಚಿವೃದ್ಧಿಃ ಪರಸ್ಮೈ**—(ಪಾ. ಸೂ. ೭-೨-೧)ಎಂಬುದರಿಂದ ಧಾತುವಿಗೆ ವೃದ್ಧಿ. ಅದಕ್ಕೆ ಅಚ್ ಪರವಾದುದರಿಂದ ಆವಾದೇಶ. **ಇಟಈಟಿ**—(ಪಾ. ಸೂ. ೮-೨-೨೮)ಎಂಬುದರಿಂದ ಸಿಚಿಗೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದ್ವಿಪತ್**—ದ್ವೌ ಪಾದೌ ಅಸ್ಯ ದ್ವಿಪತ್. **ಸಂಖ್ಯಾಸುಪೂರ್ವಸ್ಯ**—(ಪಾ. ಸೂ. ೫-೪-೧೪೦) ಎಂಬುದರಿಂದ ಪಾದಶಬ್ದದ ಅಂತ್ಯಕ್ಕೆ ಲೋಪ. ಸಮಾಸಾಂತವಾಗಿ ಬರುತ್ತದೆ. **ಅಯಸ್ಮಯಾದೀನಿ**—(ಪಾ. ಸೂ. ೧-೪-೨೦)ಎಂಬುದರಿಂದ ಭಸಂಜ್ಞಾ ಇರುವುದರಿಂದ **ಪಾದಃಪತ್**—(ಪಾ. ಸೂ. ೬-೪-೧೩೦) ಎಂಬುದರಿಂದ ಪಾದ್

ಎಂಬುದಕ್ಕೆ ಪದಾದೇಶ. **ದ್ವಿತ್ರಿಭ್ಯಾಂ ಷ ಮೂರ್ಧ್ನಃ ಬಹುವ್ರೀಹೌ**—(ಪಾ. ಸೂ. ೬-೨-೧೯೭)ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಚತುಷ್ಪತ್**—ಚತ್ವಾರಃ ಪಾದಾಃ ಅಸ್ಯ ಚತುಷ್ಪದ್. ಸ್ವರವನ್ನು ಬಿಟ್ಟು ಉಳಿದ ಪ್ರಕ್ರಿಯೆಯು ಹಿಂದಿನಂತೆಯೇ ಬರುತ್ತದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. **ಇದುದುಪಧಸ್ಯ ಚಾಪ್ರತ್ಯಯಸ್ಯ**—(ಪಾ. ಸೂ. ೮-೩-೪೧) ಎಂಬುದರಿಂದ ವಿಸರ್ಗಕ್ಕೆ ಷತ್ವ ಬರುತ್ತದೆ.

**ಇತ್ಯೈ**—ಇಣ್ ಗತೌ ಧಾತು. ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಇತಿ ಎಂದು ರೂಪವಾಗುತ್ತದೆ. ಚತುರ್ಥೀ ಏಕವಚನಾಂತರೂಪ. ॥ ೧ ॥



॥ ಸಂಹಿತಾಪಾಠಃ ॥

## ಅಮಿನತೀ ದೈವ್ಯಾನಿ ವ್ರತಾನಿ ಪ್ರಮಿನತೀ ಮನುಷ್ಯಾ ಯುಗಾನಿ ।
## ಈಯುಷೀಣಾಮುಪಮಾ ಶಶ್ವತೀನಾಮಾಯತೀನಾಂ ಪ್ರಥಮೋಷಾ ವ್ಯದ್ಯೌತ್ ॥ ೨ ॥

॥ ಪದಪಾಠಃ ॥

**ಅಮಿನತೀ । ದೈವ್ಯಾನಿ । ವ್ರತಾನಿ । ಪ್ರSಮಿನತೀ । ಮನುಷ್ಯಾ । ಯುಗಾನಿ ।**

**ಈಯುಷೀಣಾಂ । ಉಪಮಾ । ಶಶ್ವತೀನಾಂ । ಆSಯತೀನಾಂ । ಪ್ರಥಮಾ । ಉಷಾಃ । ವಿ । ಅದ್ಯೌತ್ ॥**

॥ ಸಾಯಣಭಾಷ್ಯಂ ॥

**ದೈವ್ಯಾನಿ ವ್ರತಾನಿ ದೇವಸಂಬಂಧೀನ್ಯಗ್ನಿಹೋತ್ರಾದೀನಿ ಕರ್ಮಾಣಿ । ವ್ರತಮಿತಿ ಕರ್ಮನಾಮ ವ್ರತಂ ಕರ್ವರಮಿತಿ ತನ್ನಾಮಸು ಪಾಠಾತ್ । ತಾನಿ ಕರ್ಮಾಣ್ಯಮಿನತ್ಯಹಿಂಸಂತೀ ಭಾನಪ್ರದಾನೇನಾನುಕೂಲಂ ಕುರ್ವತೀ । ತಥಾ ಮನುಷ್ಯಾ ಮನುಷ್ಯಾಣಾಂ ಯುಗಾನಿ ಯುಗೋಪಲಕ್ಷಿತಾನ್ನಿಮೇಷಾದಿಕಾಲಾವಯವಾನ್ಪ್ರಮಿನತೀ ಪ್ರಕರ್ಷೇಣ ಹಿಂಸಂತೀ । ಆಯುಃ ಕ್ಷಪಯಂತೀತ್ಯರ್ಥಃ । ಯದ್ವಾ । ಯುಗಾನಿ ಯುಗ್ಮಾನಿ ಪರಸ್ಪರಸಂಯೋಗಂ ಪ್ರಮಿನತೀ ಹಿಂಸಂತೀ । ವಿಯೋಗಂ ಕುರ್ವತೀತ್ಯರ್ಥಃ ।**

**ಉಷಃಕಾಲೇ ಸರ್ವೇ ಯಥಾಯಥಂ ಸ್ವಸ್ವವ್ಯಾಪಾರಾಯ ಗಚ್ಛಂತೀತಿ ಪ್ರಸಿದ್ಧಂ। ಕಿಂಚ ಈಯುಷೀಣಾಂ ಗಚ್ಛಂತೀನಾಮತೀತಾನಾಂ ಶಶ್ವತೀನಾಂ ನಿತ್ಯಾನಾಮುಷಸಾಮುಪಮಾ। ತಾಭಿಃ ಸದೃಶೀತ್ಯರ್ಥಃ। ಸಾದೃಶ್ಯಂ ಚ ಸದೃಶೀರದ್ಯ ಸದೃಶೀರಿದು ಶ್ವ ಇತ್ಯತ್ರೋಕ್ತಂ। ಋ. ೧-೧೨೩-೮। ತಥಾಯತೀನಾಂ ಪ್ರಥಮಾಗಾಮಿನೀನಾಮುಷಸಾಂ ಪ್ರಥಮಭಾವಿನೀ ಸತೀ ವ್ಯದ್ಯೌತ್। ವಿಶೇಷೇಣ ಪ್ರಕಾಶತೇ। ಯದ್ವಾ। ಈಯುಷೀಣಾಂ ಗಮನಶೀಲಾನಾಂ ಪಶ್ವಾದೀನಾಂ ಶಶ್ವತೀನಾಂ ಸಂತತಿಪ್ರವಾಹರೂಪೇಣ ನಿತ್ಯಾನಾಮುಪಮಾ। ತದ್ವನ್ನಿತ್ಯೇತ್ಯರ್ಥಃ। ತಥಾಯತೀನಾಂ ರಾತ್ರ್ಯವಸಾನಸಮಯ ಉತ್ಪದ್ಯಮಾನಾನಾಂ ಪ್ರಜ್ಞಾವಾಗಾದೀನಾಂ ಪ್ರಥಮಾ ಪ್ರಥಮಭಾವಿನೀ। ಉಷಸ್ಯಾಗತಾಯಾಂ ವಾಚೋ ಬುದ್ಧಯಶ್ಚ ಸ್ಫುರಂತೀತಿ ಪ್ರಸಿದ್ಧಂ। ತಾದೃಶೀ ದೇವೀ ವ್ಯದ್ಯೌತ್। ಪ್ರಾಣಿನಾಮನುಗ್ರಹಾಯ ದ್ಯೋತತೇ॥**

॥ ಪ್ರತಿಪದಾರ್ಥ ॥

**ದೈವ್ಯಾನಿ**—ದೇವತಾ ಸಂಬಂಧವಾದ। **ವ್ರತಾನಿ**—ಅಗ್ನಿಹೋತ್ರಾದಿ ಕರ್ಮಗಳನ್ನು। **ಅಮಿನತೀ**—ಹಿಂಸೆ ಮಾಡದವಳೂ (ಪ್ರಕಾಶಕಳಾದುದರಿಂದ ಅನುಕೂಲಳೂ)। **ಮನುಷ್ಯಾ**—ಮನುಷ್ಯರ। **ಯುಗಾನಿ**—ನಿಮೇಷಾದಿ ಕಾಲಭಾಗಗಳನ್ನು ಅಥವಾ ಯುಗ್ಮಗಳಾಗಿ (ಜೋಡಿಯಾಗಿ)ರುವುವುಗಳನ್ನು। **ಪ್ರ ಮಿನತೀ**—ಹೆಚ್ಚಾಗಿ ಹಿಂಸಿಸುವ (ಕ್ಷೀಣ ಮಾಡುವ) ವಳೂ, ಅಥವಾ ಪ್ರತ್ಯೇಕಿಸುವವಳೂ। **ಈಯುಷೀಣಾಂ**—ಕಳೆದುಹೋದ ಅಥವಾ ಗಮನಶೀಲಗಳಾದ (ಮತ್ತು)। **ಶಶ್ವತೀನಾಂ**—ಶಾಶ್ವತವಾಗಿರುವ (ಉಷಸ್ಸುಗಳಿಗೆ) ಅಥವಾ (ಸಂತತಿ ಪ್ರವಾಹರೂಪವಾಗಿ) ನಿತ್ಯವಾದ ಪ್ರಾಣಿಗಳಿಗೆ। **ಉಪಮಾ**—ಸಮಾನಳೂ। **(ತಥಾ**—ಹಾಗೆಯೇ)। **ಆಯತೀನಾಂ**—ಮುಂದೆ ಬರುವ (ಉಷಸ್ಸುಗಳಿಗೆ) ಅಥವಾ ಉಷಃಕಾಲದಲ್ಲಿ ಉತ್ಪದ್ಯಮಾನವಾಗುವ (ಪ್ರಜ್ಞಾ ಮತ್ತು ವಾಕ್ಕುಗಳಿಗೆ)। **ಪ್ರಥಮಾ**—ಮೊದಲನೆಯವಳೂ ಅಥವಾ ಆದಿಯಲ್ಲಿರುವವಳೂ ಆದ। **ಉಷಾಃ**—ಉಷೋದೇವಿಯು। **ವಿ ಅದ್ಯೌತ್**—ಚೆನ್ನಾಗಿ ಪ್ರಕಾಶಿಸಿದಳು (ಪ್ರಾಣಿಗಳ ಅನುಗ್ರಹಕ್ಕಾಗಿ ಪ್ರಕಾಶಿಸಿದಳು)।

॥ ಭಾವಾರ್ಥ ॥

ಉಷೋದೇವಿಯು ದೇವತಾಸಂಬಂಧವಾದ ಅಗ್ನಿಹೋತ್ರಾದಿ ಕರ್ಮಗಳಿಗೆ ಅಡ್ಡಿಯಾಗುವುದಿಲ್ಲ. ಆದರೆ ಮನುಷ್ಯರ ಆಯುಸ್ಸನ್ನು ಕ್ಷೀಣಮಾಡುತ್ತಾಳೆ; ಹಿಂದೆ ಕಳೆದುಹೋದ ಮತ್ತು ಶಾಶ್ವತವಾಗಿರುವ ಉಷಸ್ಸುಗಳಿಗೆ (ಗಮನಶೀಲವಾದ ಮತ್ತು ಸಂತತಿ ಪ್ರವಾಹರೂಪವಾಗಿ ನಿತ್ಯವಾದ ಪಶ್ವಾದಿಗಳಿಗೆ) ಸಮಾನಳಾದ ಆಕೆಯು ಮುಂದೆ ಬರಲಿರುವ ಉಷಸ್ಸುಗಳಿಗೆ ಮೊದಲನೆಯವಳಾಗಿ (ಉಷಃಕಾಲದಲ್ಲಿ ಜಾಗೃತರಾಗುವ ಪ್ರಾಣಿಗಳ ಪ್ರಜ್ಞಾವಾಕ್ಕುಗಳಿಗೆ ಆದಿಯಲ್ಲಿದ್ದು, ಅವುಗಳ ಅನುಗ್ರಹಾರ್ಥವಾಗಿ) ಚೆನ್ನಾಗಿ ಪ್ರಕಾಶಿಸಿದಳು.

## English Translation.

Unimpeding divine rites, although wearing away the ages of mankind, the Dawn shines the similitude of the (mornings) that have passed, or that are to be for ever, the first of those that are to come.

॥ ವಿಶೇಷವಿಷಯಗಳು ॥

ಈ ಋಕ್ಕಿನ ಕಾವ್ಯಾತ್ಮಕವಾದ ಭಾವವನ್ನೂ ರಚನಾಶೈಲಿಯನ್ನೂ ವಿವರಿಸುತ್ತಾ **ಬ್ಲೂಂ ಫೀಲ್ಡ್** ಎಂಬ ಆಂಗ್ಲವಿಮರ್ಶಕನು ಈ ರೀತಿಯಲ್ಲಿ ವರ್ಣಿಸಿದ್ದಾನೆ.

There can be no question that I. 124.2. is the source of the repeated padas in I. 92· 11 and 12. The antithesis between ಅಮಿನತೀ and ಪ್ರಮಿನತೀ and ಈಯುಷೀಣಾಂ and ಆಯತೀನಾಂ cannot but be intentional and primary. Note also the parallelism between ಅಮಿನತೀ and ಆಯತೀನಾಂ; and ಪ್ರಮಿನತೀ and ಈಯುಷೀಣಾಂ: On the other hand, we ought to allow full weight to the really senseless non-sequitur of the second distich in I. 92. 11. reducing the ages of men, the woman shines by the light of her paramour (the sun). 'For the meaning of Yuga 'age' i. e. 'period of time' see Bal Gangadhar Tilak, The Arctic Home in the Vedas.

Stanza I. 124.2 is the high-water mark of Vedic composition. The two antitheses ಅಮಿನತೀ........ಪ್ರಮಿನತೀ and ಈಯುಷೀಣಾಂ........ಆಯತೀನಾಂ mark as later imitations all repetitions that disturb this balance. The relation of the two pairs of antithetical words may be expressed in the proportion: ಅಮಿನತೀ: ಆಯತೀನಾಂ=ಪ್ರಮಿನತೀ ಈಯುಷೀಣಾಂ. That is to say: the dawns preserve the laws of the Gods (ಅಮಿನತೀ) by their regular appearance (ಆಯತೀನಾಂ); the ages of men waste away (ಪ್ರಮಿನತೀ) as the dawns fade day by day. ಈ ರೀತಿ ೧-೯೨-೧೧ ಮತ್ತು ೧-೯೨-೧೨ ಈ ಎರಡು ಋಕ್ಕುಗಳ ಒಟ್ಟಿನ ಭಾವವನ್ನು ಈ ಒಂದೇ ಋಕ್ಕಿನಲ್ಲಿ ಸೇರಿಸಿ ಉತ್ತಮವಾದ ಕಾವ್ಯಶೈಲಿಯಲ್ಲಿರುವ ವಿರೋಧನ್ಯಾಸದ ರಚನಾಕ್ರಮವನ್ನೂ ಭಾವಾಭಿವ್ಯಕ್ತಿಯನ್ನೂ ಬಹಳವಾಗಿ ಶ್ಲಾಘಿಸಿದೆ.

(Rig-Veda Repetitions. Vol. I. P. 108).

**ದೈವ್ಯಾನಿ ವ್ರತಾನಿ ಅಮಿನತೀ**—**ದೇವಸಂಬಂಧೀನಿ ಅಗ್ನಿಹೋತ್ರಾದಿಕರ್ಮಾಣಿ ಅಹಿಂಸಂತೀ ॥ ಭಾನಪ್ರದಾನೇನ ಅನುಕೂಲಂ ಕುರ್ವತೀ ।** ಪ್ರಕಾಶವನ್ನುಂಟುಮಾಡುವುದರಿಂದಲೂ, ಯಜ್ಞಕರ್ತರಿಗೆ ಅನುಕೂಲಗಳನ್ನು ಒದಗಿಸಿ ಕೊಡುವುದರಿಂದಲೂ ದೇವಸಂಬಂಧವಾದ ಯಾಗಾದಿವ್ರತಗಳನ್ನು ಹಿಂಸಿಸದೇ ಎಂದರ್ಥ.

**ಯುಗಾನಿ ಪ್ರಮಿನತೀ**—ಇಲ್ಲಿ ಎರಡು ವಿಧವಾದ ಅರ್ಥಗಳನ್ನು ಸಾಯಣರು ಹೇಳಿದ್ದಾರೆ. ಮೊದಲನೆಯದಾಗಿ **ಯುಗೋಪಲಕ್ಷಿತಾನ್ ನಿಮೇಷಾದಿಕಾಲಾವಯವಾನ್ ಪ್ರಕರ್ಷೇಣ ಹಿಂಸಂತೀ । ಯುಗ ಶಬ್ದವು** ಮಾನವರ ಜೀವಿತದ ಕಾಲವನ್ನು ತಿಳಿಸುತ್ತದೆ. ಉಷಸ್ಸು-ಕ್ಷಣ, ದಿನ, ಮಾಸ ಇತ್ಯಾದಿ ಸಂಜ್ಞೆಗಳಿಂದ ಪರಿಗಣಿತವಾಗತಕ್ಕ ಮಾನವರ ಜೀವಿತಕಾಲವನ್ನೆಲ್ಲಾ ಸವೆಯುವಂತೆ ಮಾಡುತ್ತಾಳೆಂದರ್ಥ. ಪ್ರಾಯಶಃ ಮಾನವರ ಆಯುಃಕಾಲವನ್ನು ಸೂಚಿಸುವಾಗಲೆಲ್ಲಾ ಯುಗಶಬ್ದದ ಪ್ರಯೋಗವೇ ಇರುವುದನ್ನು—

**ಮರುತ್ಸ್ವೋ ದಧೀಮಹಿ ಸ್ತೋಮಂ ಯಜ್ಞಂ ಚ ಧೃಷ್ಣುಯಾ ।**
**ವಿಶ್ವೇ ಯೇ ಮಾನುಷಾ ಯುಗಾ ಪಾಂತಿ ಮರ್ತ್ಯಂ ರಿಷಃ ॥**

(ಋ. ಸಂ. ೫-೫೨-೪)

ಇತ್ಯಾದಿ ಋಕ್ಕುಗಳಲ್ಲಿ ನೋಡಬಹುದು. ಮರುತ್ತುಗಳು ಸರ್ವಕಾಲಗಳಲ್ಲಿಯೂ ಯಜ್ಞಕರ್ತರನ್ನು ರಕ್ಷಿಸುವರೆಂದರ್ಥವಿರುವ ಈ ಸನ್ನಿವೇಶದಲ್ಲಿಯೂ ಹೀಗೆಯೇ ಇತರ ಕಡೆಗಳಲ್ಲಿಯೂ **ಮಾನುಷಾ ಯುಗಾ** ಎಂಬ ಪ್ರಯೋಗವಿದೆ.

**ಈಯುಷೀಣಾಂ ಉಪಮಾ; ಆಯತೀನಾಂ ಪ್ರಥಮಾ :—ಅತೀತಾನಾಂ ನಿತ್ಯಾನಾಂ ಉಷಸಾಂ (ತಾಭಿಃ) ಸದೃಶೀ; ಆಗಾಮಿನೀನಾಂ ಉಷಸಾಂ ಪ್ರಥಮಭಾವಿನೀ ।** ಹಿಂದೆ ಕಳೆದುಹೋದವರೂ, ಮುಂದೆ ಶಾಶ್ವತವಾಗಿ ಬರತಕ್ಕವರೂ ಆದ ಉಷಸ್ಸುಗಳ ಎಲ್ಲಾ ಆವಿರ್ಭಾಗಗಳಿಗೂ ಒಂದೇ ಸಮಾನವಾದ ರೂಪವುಳ್ಳವಳೆಂದರ್ಥ.

ಈ ಋಕ್ಕಿನಲ್ಲಿ ಹರ್ಷದೊಡನೆ ಒಂದು ವಿಧವಾದ ವ್ಯಾಕುಲವೂ ಮಿಶ್ರಿತವಾಗಿದೆ. ಲೋಕಕ್ಕೆಲ್ಲಾ ಚೈತನ್ಯವನ್ನೂ ಬೆಳಕನ್ನೂ ಕೊಟ್ಟು ಜೀವಕಳೆಯನ್ನು ತುಂಬತಕ್ಕ ಉಷಸ್ಸಿನ ಸೊಬಗು ಮತ್ತು ಸೌಂದರ್ಯಗಳನ್ನು ವರ್ಣಿಸಿ ಆನಂದಾನುಭವವನ್ನು ವ್ಯಕ್ತಪಡಿಸುವುದರ ಮೂಲಕ ಜೊತೆಯಲ್ಲಿಯೇ ನಿತ್ಯವಾಗಿ ತಾರುಣ್ಯಾವಸ್ಥೆಯನ್ನೇ ಹೊಂದಿರುವ ಉಷಸ್ಸಿನ ಎದುರಿಗೇ ಮಾನವಾದಿ ಸಕಲ ಪ್ರಾಣಿಗಳೂ ಸಹ ಅಲ್ಪಕಾಲದಲ್ಲಿಯೇ ವಾರ್ಧಕ್ಯವನ್ನು ಹೊಂದಿ ಮೃತರಾಗುವ ಭಾವನೆಯಲ್ಲಿ ಕೊಂಚ ಉದ್ವೇಗವೂ ತೋರುತ್ತದೆ. ಈ ಭಾವದಲ್ಲಿ ಸತ್ಯಾನುಭವವೂ ಸೌಂದರ್ಯದರ್ಶನವೂ ಒಟ್ಟಿಗೆ ಸೇರಿಕೊಂಡಿದೆ. ಉಷಸ್ಸು ಮಾನವರ ಜೀವಿತದ ಕಾಲವನ್ನೆಲ್ಲಾ ಸವೆಸುತ್ತಾಳೆ ಎಂಬ ಸತ್ಯದರ್ಶನದ ಭಾವವು ಸಾಧಾರಣವಾಗಿ ಉಷಸ್ಸಿನ ವರ್ಣನೆಯು ಬಂದಾಗಲೆಲ್ಲಾ ವ್ಯಕ್ತವಾಗಿದೆ. ಉದಾಹರಣೆಗೆ—

**ಈಯುಷ್ಟೇ ಯೇ ಪೂರ್ವತರಾಮಪಶ್ಯನ್ವ್ಯುಚ್ಛಂತೀಮುಷಸಂ ಮರ್ತ್ಯಾಸಃ ।**
**ಅಸ್ಮಾಭಿರೂ ನು ಪ್ರತಿಚಕ್ಷ್ಯಾಭೂದೋ ತೇ ಯಂತಿ ಯೇ ಅಪರೀಷು ಪಶ್ಯಾನ್ ॥**

(ಋ. ಸಂ. ೧-೧೧೩-೧೧)

ಇತ್ಯಾದಿ ನಾನಾ ಕಡೆಗಳಲ್ಲಿ ಶಾಶ್ವತವಾದ ಈ ಉಷಸ್ಸಿನ ಸೊಬಗನ್ನು ಹಿಂದೆ ನೋಡಿ ಸಂತೋಷಪಟ್ಟವರೆಲ್ಲರೂ ಗತರಾದರು. ಮುಂದಿನವರ ಪಾಡೂ ಹೀಗೆಯೇ. ಆದರೆ ಉಷಸ್ಸು ಮಾತ್ರ ನಿತ್ಯಳೂ, ನಿತ್ಯತರುಣಳೂ ಆಗಿರುತ್ತಾಳೆ ಎಂಬ ಭಾವನೆಯೊಡಗೂಡಿ ಮಾನವನ ಅಲ್ಪಕಾಲದ ಜೀವನಚಿತ್ರವು ಪ್ರತಿಬಿಂಬಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಮಿನತೀ**— ಮೀಞ್ ಹಿಂಸಾಯಾಂ ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶತೃ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ**—ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂಹ್ರಸ್ವಃ**—(ಪಾ. ಸೂ. ೭-೩-೮೦)ಧಾತುವಿಗೆ ಹ್ರಸ್ವ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಶ್ನಾಭ್ಯಸ್ತಯೋರಾತಃ**—(ಪಾ. ಸೂ. ೬-೪-೧೧೨) ಎಂಬುದರಿಂದ ಶ್ನಾಪ್ರತ್ಯಯದ ಆಕಾರಕ್ಕೆ ಲೋಪ. ಸ್ತ್ರೀತ್ವದಲ್ಲಿ ಉಗಿತ್ತಾದುದರಿಂದ ಙೀಪ್. ನಞ್‌ತತ್ಪುರುಷ ಸಮಾಸ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದೈವ್ಯಾನಿ**—ದೇವಸ್ಯ ಇಮಾನಿ ದೈವ್ಯಾನಿ. ಸಂಬಂಧಾರ್ಥ ತೋರುವಾಗ **ದೇವಾದ್ಯಞಞೌ**—(ಪಾ. ಸೂ. ೪-೧-೮೫-೩) ಎಂಬುದರಿಂದ ಯಞ್ ಪ್ರತ್ಯಯ. **ಯಸ್ಯೇತಿ ಚ**—(ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಲೋಪ. ಪ್ರತ್ಯಯ ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಪ್ರಮಿನತೀ**—ಪ್ರ ಉಪಸರ್ಗ. ಮೀಞ್ ಹಿಂಸಾಯಾಂ ಧಾತು. ಹಿಂದಿನಂತೆಯೇ ರೂಪ ಸಿದ್ಧಿ. **ಶತುರನುಮೋನದ್ಯಜಾದೀ**—(ಪಾ. ಸೂ. ೬-೧-೧೭೩) ಎಂಬುದರಿಂದ ಪರದ ಙೀಪಿಗೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮನುಷ್ಯಾ—ಮನೋರ್ಜಾತಾವಞ್ಯತೌ ಷುಕ್ ಚ**—(ಪಾ. ಸೂ. ೪-೧-೧೬೧)ಎಂಬುದರಿಂದ ಯತ್ ಪ್ರತ್ಯಯ. ತತ್ಸಂನಿಯೋಗದಿಂದ ಷುಗಾಗಮ. **ತಿತ್ಸ್ವರಿತಮ್**—(ಪಾ. ಸೂ. ೬-೧-೧೮೫)ಎಂಬುದರಿಂದ ಪ್ರತ್ಯಯಕ್ಕೆ ಸ್ವರಿತ ಸ್ವರ ಬರುತ್ತದೆ. ಇದಕ್ಕೆ ಷಷ್ಠೀ ಬಹುವಚನಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆದಕ್ಕೆ ಆಕಾರಾದೇಶ.

**ಈಯುಷೀಣಾಂ**—ಇಣ್ ಗತೌ ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ**—(ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಉಗಿತಶ್ಚ**—(ಪಾ. ಸೂ. ೪-೧-೬) ಎಂಬುದರಿಂದ ಙೀಪ್ ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಂ** (ಪಾ. ಸೂ. ೬-೪-೧೩೧) ಎಂಬುದರಿಂದ ಸಂಪ್ರಸಾರಣ ಪೂರ್ವರೂಪ. ಅಜಾದಿ ಪ್ರತ್ಯಯಪರವಾದುದರಿಂದ **ಇಣೋ ಯಣ್**—(ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿನ ಇಕಾರಕ್ಕೆ ಯಣಾದೇಶ. **ದೀರ್ಘ ಇಣಃಕಿತಿ**—(ಪಾ. ಸೂ. ೭-೪-೬೯) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ಶಾಸಿವಸಿಘಸೀನಾಂ ಚ**—(ಪಾ. ಸೂ. ೮-೩-೬೦) ಎಂಬುದರಿಂದ ವಸುವಿನ ಸಕಾರಕ್ಕೆ ಷತ್ವ. ಷಷ್ಠೀ ಬಹುವಚನಾಂತರೂಪ. ಙೀಪ್ ಸುಪ್ ಅನುದಾತ್ತವಾಗುವುದರಿಂದ ವಸುವಿನ ಸ್ವರ ಉಳಿಯುತ್ತದೆ.

**ಶಶ್ವತೀನಾಮ್ ಉಗಿತಶ್ಚ**—(ಪಾ. ಸೂ. ೪-೧-೬)ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ಷಷ್ಠೀ ಬಹುವಚನಾಂತರೂಪ.

**ಆಯತೀನಾಮ್**—ಆಙ್ ಉಪಸರ್ಗ ಇಣ್ ಗತೌ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಇಣೋ ಯಣ್**—(ಪಾ. ಸೂ. ೬-೪-೮೧)ಎಂಬುದರಿಂದ ಯಣಾದೇಶ. ಸ್ತ್ರೀತ್ವದಲ್ಲಿ ಙೀಪ್. **ಜ್ಯಾಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೧೭೮) ಎಂಬುದರಿಂದ ಷಷ್ಠೀಬಹುವಚನದಲ್ಲಿ ನಾಮಿಗೆ ಉದಾತ್ತಸ್ವರ ಬರುತ್ತದೆ.

**ಅದ್ಯೌತ್**—ದ್ಯುತ ದೀಪ್ತೌ ಧಾತು. ಲುಙ್, ಪ್ರಥಮಪುರುಷ ಏಕವಚನದಲ್ಲಿ ತಿಪ್ ಇಕಾರಲೋಪ. **ದ್ಯುದ್ಭ್ಯೋ ಲುಙಿ**—(ಪಾ. ಸೂ. ೧-೩-೯೧) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ವ್ಯತ್ಯಯದಿಂದ ಚ್ಲಿಗೆ ಲುಕ್. ಗುಣವು ಪ್ರಾಪ್ತವಾದರೆ ಛಾಂದಸವಾಗಿ ವೃದ್ಧಿ ಬರುತ್ತದೆ. ಅಥವಾ ದ್ಯು ಅಭಿಗಮನೇ ಧಾತು. ಅದಾದಿ ಲಙನಲ್ಲಿ **ಉತೋ ವೃದ್ಧಿರ್ಲುಕಿ ಹಲಿ**—(ಪಾ. ಸೂ. ೭-೩-೮೯) ಎಂಬುದರಿಂದ ವೃದ್ಧಿ ಬರುತ್ತದೆ. ಅತಿಙಂತದ ತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಏಷಾ ದಿವೋ ದುಹಿತಾ ಪ್ರತ್ಯದರ್ಶಿ ಜ್ಯೋತಿರ್ವಸಾನಾ ಸಮನಾ ಪುರಸ್ತಾತ್ ।
ಋತಸ್ಯ ಪಂಥಾಮನ್ವೇತಿ ಸಾಧು ಪ್ರಜಾನತೀವ ನ ದಿಶೋ ಮಿನಾತಿ ॥ ೩ ॥

॥ ಪದಪಾಠಃ ॥

ಏಷಾ । ದಿವಃ । ದುಹಿತಾ । ಪ್ರತಿ । ಅದರ್ಶಿ । ಜ್ಯೋತಿಃ । ವಸಾನಾ । ಸಮನಾ । ಪುರಸ್ತಾತ್ ।
ಋತಸ್ಯ । ಪಂಥಾಂ । ಅನು । ಏತಿ । ಸಾಧು । ಪ್ರಜಾನತೀಽಇವ । ನ । ದಿಶಃ । ಮಿನಾತಿ ॥ ೩ ॥

॥ ಸಾಯಣಭಾಷ್ಯಂ ॥

ಏಷೋಷಾ ದಿವೋ ದ್ಯೋತಮಾನಾತ್ಮಕಸ್ಯ ದ್ಯುಲೋಕಸ್ಯ ದುಹಿತಾ ದುಹಿತೃಸ್ಥಾನೀಯಾ। ತತ ಉತ್ಪದ್ಯಮಾನತ್ವಾದ್ದುಹಿತೇತ್ಯುಪಚರ್ಯತೇ। ಪುರಸ್ತಾತ್ಪೂರ್ವಸ್ಯಾಂ ದಿಶಿ ಪ್ರತಿ ಪ್ರತ್ಯೇಕಮದರ್ಶಿ। ದೃಶ್ಯತೇ। ಸರ್ವೇಷಾಮಪಿ ಪ್ರಾಣಿನಾಮಾಭಿಮುಖ್ಯೇನ ಪ್ರಕಾಶತ ಇತ್ಯರ್ಥಃ। ಕೀದೃಶೀ ಸಾ। ಜ್ಯೋತಿರ್ವಸಾನಾ ತೇಜೋರೂಪಂ ವಸ್ತ್ರಮಾಚ್ಛಾದಯಂತೀ ತೇಜಸಾ ಪ್ರಕಾಶಯಂತೀ ಸಮನಾ ಸಮ್ಯಗಾನಯಿತ್ರೀ ಚೇಷ್ಟಯಿತ್ರೀ॥ ಅಂತರ್ಭಾವಿತಣ್ಯರ್ಥೋಽಯಂ। ಯದ್ವಾ। ಸಹ ಯುಗಪದೇವ ಮನ್ಯತೇಽವಬುಧ್ಯತೇ ಪ್ರಾಣಿಭಿರಿತಿ ಸಮನಾ। ವ್ಯುತ್ಪತ್ತ್ಯನವಧಾರಣಾದನವಗ್ರಹಃ। ಸಾ ತಾದೃಶೀ ಋತಸ್ಯಾದಿತ್ಯಸ್ಯ ಪಂಥಾಂ ಪಂಥಾನಂ ಮೇರೋಃ ಪ್ರಾಂತಪ್ರದೇಶಮನುಕ್ರಮೇಣ ಸಾಧು ಸಮ್ಯಗೇತಿ। ಗಚ್ಛತಿ। ಸೂರ್ಯೋ ಯತ್ರ ಯತ್ರ ಗಚ್ಛತಿ ತತ್ರ ತತ್ರ ಪುರಸ್ತಾದುಷಾ ಅಪಿ ಗಚ್ಛತೀತ್ಯರ್ಥಃ। ಸೈವ ವಿಶೇಷ್ಯತೇ। ಪ್ರಜಾನತೀವ। ಪ್ರಿಯಭೂತಸ್ಯ ಸೂರ್ಯಸ್ಯ ಮಾರ್ಗೋ ಮಯಾಪಿ ಗಂತವ್ಯ ಇತಿ ಚೇತಯಂತೀವ। ಯಥಾ ಲೋಕೇ ಪ್ರಿಯತಮೋಽನುರಾಗಯುಕ್ತಾ ಕಾಚಿದ್ಭರ್ತಾರಂ ಸರ್ವಾಸ್ವವಸ್ಥಾಸು ನ ವಿಮುಂಚತಿ ತಥೇಯಮಪೀತ್ಯರ್ಥಃ। ಕಿಂಚ ದಿಶಃ ಪ್ರಾಗಾದಿಕಾ ನ ಮಿನಾತಿ। ನ ಹಿನಸ್ತಿ। ಕಿಂತೂಷಾ ಯತ್ರ ಗಚ್ಛತಿ ಸಾ ಪ್ರಾಚೀತ್ಯೇವಂ ಪ್ರಾಗಾದಿವ್ಯವಹಾರಂ ಕರೋತೀತ್ಯರ್ಥಃ॥

॥ ಪ್ರತಿಪದಾರ್ಥ ॥

**ಏಷಾ**— ಈ। **ದಿವಃ**—ಅಂತರಿಕ್ಷ ಲೋಕದ। **ದುಹಿತಾ**—ದುಹಿತೃಪ್ರಾಯಳಾದ ಉಷೋದೇವತೆಯು। **ಜ್ಯೋತಿರ್ವಸಾನಾ**—ತೇಜೋರೂಪವಸ್ತ್ರವುಳ್ಳವಳಾಗಿ। **ಸಮನಾ**—(ಪ್ರಾಣಿಗಳನ್ನು ತಮ್ಮತಮ್ಮ ವ್ಯಾಪಾರ

ಗಳಲ್ಲಿ) ಚೆನ್ನಾಗಿ ಆಸಕ್ತರನ್ನಾಗಿ ಮಾಡುವವಳಾಗಿ ಅಥವಾ ಸಮಸ್ತ ಪ್ರಾಣಿಗಳಿಗೂ ಏಕಕಾಲದಲ್ಲಿ ಕಾಣಿಸಿಕೊಳ್ಳುವವಳಾಗಿ | **ಪುರಸ್ತಾತ್**—ಪೂರ್ವದಿಕ್ಕಿನಲ್ಲಿ | **ಪ್ರತಿ ಅದರ್ಶಿ**—ಪ್ರತ್ಯೇಕವಾಗಿ ಕಾಣಿಸುತ್ತಾಳೆ | (**ಸಾ**—ಅವಳು) | **ಋತಸ್ಯ**—ಆದಿತ್ಯನ | **ಪಂಥಾಂ**—ಮಾರ್ಗವನ್ನು (ಪಥದಲ್ಲಿ) | **ಪ್ರಜಾನತೀವ**—(ಪ್ರಿಯನ ಮಾರ್ಗವನ್ನು ಎಲ್ಲಾ ಸಂದರ್ಭಗಳಲ್ಲಿಯೂ ಅನುಸರಿಸಬೇಕೆಂದು) ತಿಳಿದಿರುವ ಸ್ತ್ರೀಯಂತೆ | **ಸಾಧು**—ಚೆನ್ನಾಗಿ | **ಏತಿ**—ಹೋಗುತ್ತಾಳೆ (ಅನುಸರಿಸುತ್ತಾಳೆ) | (**ಕಿಂಚ**—ಮತ್ತೂ) | **ದಿಶಃ**—ಪ್ರಾಗಾದಿ ದಿಕ್ಕುಗಳನ್ನು | **ನ ಮಿನಾತಿ**—ಹಿಂಸಿಸುವುದಿಲ್ಲ (ನಾಶಪಡಿಸುವುದಿಲ್ಲ).

॥ ಭಾವಾರ್ಥ ॥

ದ್ಯುಲೋಕದ ಮಹಿತ್ರ ಸ್ವರೂಪಳಾದ ಉಷೋದೇವತೆಯು ತೇಜೋರೂಪವಸ್ತ್ರಧಾರಿಯಾಗಿ (ಸರ್ವ ಪ್ರಾಣಿಗಳಿಗೂ) ಏಕಕಾಲದಲ್ಲಿ ಕಾಣಿಸಿಕೊಳ್ಳುವವಳಾಗಿ, ಪೂರ್ವದಿಕ್ಕಿನಲ್ಲಿ ಉದಯಿಸುತ್ತಾಳೆ; (ಪ್ರಿಯನ ಮಾರ್ಗವನ್ನೇ ಅನುಸರಿಸಿಬೇಕೆಂದು ತಿಳಿದಿರುವ ಸ್ತ್ರೀಯಂತೆ) ಆದಿತ್ಯನ ಪಥವನ್ನು ಚೆನ್ನಾಗಿ ಅನುಸರಿಸುತ್ತಾಳೆ; (ಹೀಗೆ ಅನುಸರಿಸುವಾಗ) ದಿಕ್ಕುಗಳಿಗೆ (ಇರುವ ಪ್ರಾಗಾದಿವ್ಯವಹಾರವನ್ನು) ತಪ್ಪಿಸುವುದಿಲ್ಲ.

## English Translation.

She, the daughter of heaven, is beheld in the east, gracious and arrayed in light: she travels steadily along the path of the sun, as if cognizant (of his pleasure), and damages not the quarters (of the horizon).

॥ ವಿಶೇಷವಿಷಯಗಳು ॥

ದಿವೋದುಹಿತೆಯಾದ ಉಷಸ್ಸು ಋತದ ಪಥವನ್ನನುಸರಿಸಿ ನಿಯತವಾಗಿ ಸಂಚರಿಸುವುದನ್ನು ಈ ಋಕ್ಕಿನಲ್ಲಿ ವರ್ಣಿಸಿದೆ. ಇಲ್ಲಿ ಋತದ ಪಥವಾವುದೆಂಬುದನ್ನು ವಿಮರ್ಶಿಸಬೇಕು.

ಇಲ್ಲಿ **ಋತ** ಶಬ್ದಕ್ಕೆ **ಆದಿತ್ಯ**ನೆಂದರ್ಥಮಾಡಿದೆ. ಆದುದರಿಂದ ಋತದ ಪಥವೆಂದರೆ **ರಾಶಿಚಕ್ರ**ವಿರಬಹುದೆಂದು (Zodiac) ಪಂಡಿತರು ಅಭಿಪ್ರಾಯಪಡುತ್ತಾರೆ.

"When, in the Rig-veda, the fixed Path of Rita unerringly followed by the Devas (originally the shining ones or the luminaries) is spoken of in the Rig-veda it should, in my opinion, naturally mean Zodiac or the imaginary belt or Zone in the heavens, within which the apparent motions of the Sun, moon and the Principal Planet or Devas are confined."

(A. B. O. R. I).

ಈ ವಿವರಣೆಯಲ್ಲಿ ಸತ್ಯಾಂಶವಿರುವುದೆನ್ನುವುದಕ್ಕೆ ಕೆಳಗೆ ಉದಹರಿಸಿರುವ ಋಕ್ಕಿನ ವರ್ಣನೆಯು ಸ್ವಲ್ಪಮಟ್ಟಿಗೆ ಸಹಾಯಮಾಡುತ್ತದೆ.

**ದ್ವಾದಶಾರಂ ನಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ ।**
**ಆ ಪುತ್ರಾ ಅಗ್ನೇ ಮಿಥುನಾಸೋ ಅತ್ರ ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ ।**

(ಋ. ಸಂ. ೧-೧೬೪-೧೧)

**ಋತ**ದ ಚಕ್ರಕ್ಕೆ ಹನ್ನೆರಡು ಅರೆಕಡ್ಡಿಗಳಿವೆ. ಆ ಚಕ್ರವು ಅಂತರಿಕ್ಷದ ಸುತ್ತಲೂ ಪರಿಭ್ರಮಿಸುತ್ತದೆ. ಈ ಚಕ್ರ ಪಥದೊಳಗೆ ಏಳನೂರಇಪ್ಪತ್ತು ಪುತ್ರರು ದ್ವಂದ್ವಾತ್ಮಕವಾಗಿದ್ದಾರೆ, ಎಂಬುದೇ ಈ ಋಕ್ಕಿನ ಅಭಿಪ್ರಾಯ. ಪ್ರಾಯಶಃ ಈ ವರ್ಣನೆಯಲ್ಲಿ ಹನ್ನೆರಡು ತಿಂಗಳೂ, ಮುನ್ನೂರ ಅರವತ್ತು ಹಗಲುರಾತ್ರಿಗಳೂ ಸೂಚಿತವಾಗಿರಬಹುದು.

**ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ । ವೇದಾ ಯ ಉಪಜಾಯತೇ ॥**

(ಋ. ಸಂ. ೧-೨೫-೮).

ಎಂಬ ಋಕ್ಕಿನಲ್ಲಿ ಹೇಳಿರುವಂತೆ ೩೬೦ ಹಗಲುರಾತ್ರಿಗಳೂ ಸಹ ಈ ದ್ವಾದಶಮಾಸಗಳ ಸಂತಾನಗಳೆಂದು ಹೇಳ ಬಹುದು.

ಕೆಳಗೆ ಉದಹರಿಸಿರುವ ಉಷೋದೇವತಾತ್ಮಕವಾದವೂ, ಉಷೋದೇವತೆಯ ಸಂಚಾರಮಾರ್ಗವನ್ನು ವರ್ಣಿಸುವುದೂ ಆದ ಋಕ್ಕುಗಳು **ಋತದ ಪಥ**ವನ್ನು ಪರಿಚಯಮಾಡಿಕೊಡುತ್ತವೆ.

**ತಾ ಆ ಚರಂತಿ ಸಮನಾ ಪುರಸ್ತಾತ್ ಸಮಾನತಃ ಸಮನಾ ಪಪ್ರಥಾನಾಃ ।**
**ಋತಸ್ಯ ದೇವೀಃ ಸದಸೋ ಬುಧಾನಾ ಗವಾಂ ನ ಸರ್ಗಾ ಉಷಸೋ ಜರಂತೇ ।**

(ಋ. ಸಂ. ೪-೫೧-೮)

ಈ **ಋತದ** ಒಂದು ನಿಯಮಿತವಾದ ಸ್ಥಾನದಿಂದ **ಉಷೋ** ದೇವಿಯು ಇತರ ತೇಜೋಮಂಡಲಗಳಂತೆ ತನ್ನ ಗೋಚರವಿಷಯವಾದ ಸಂಚಾರವನ್ನು ಆರಂಭಿಸುತ್ತಾಳೆ. ಈ **ಋತದ** ಮಾರ್ಗವನ್ನು ಕೊಂಚವೂ ಬಿಡದೆ ಅವಳು ಅನುಸರಿಸಿದರೆ ಮಾತ್ರ ಅವಳ ಋಜುವಾದ ಮಾರ್ಗವು ತಪ್ಪುವುದಿಲ್ಲ.

**ಜಾನತ್ಯಹ್ನಃ ಪ್ರಥಮಸ್ಯ ನಾಮ ಶುಕ್ರಾ ಕೃಷ್ಣಾದಜನಿಷ್ಟ ಶ್ವಿತೀಚೀ ।**
**ಋತಸ್ಯ ಯೋಷಾ ನ ಮಿನಾತಿ ಧಾಮಾಹರಹರ್ನಿಷ್ಕೃತಮಾಚರಂತೀ ॥**

(ಋ. ಸಂ. ೧-೧೨೩-೯)

**ಏಷಾ ವ್ಯೇನೀ ಭವತಿ ದ್ವಿಬರ್ಹಾ ಆವಿಷ್ಕೃಣ್ವಾನಾ ತನ್ವಂ ಪುರಸ್ತಾತ್ ।**
**ಋತಸ್ಯ ಪಂಥಾಮನ್ವೇತಿ ಸಾಧು ಪ್ರಜಾನತೀವ ನ ದಿಶೋ ಮಿನಾತಿ ॥**

(ಋ. ಸಂ. ೫-೮೦-೪)

ದಿವೋದುಹಿತೆಯಾದ ಈ ಉಷಸ್ಸು ಪ್ರಭಾರೂಪವಾದ ಹೊದ್ದಿಕೆಯನ್ನು ಧರಿಸಿಕೊಂಡು **ಋತದ ಪಥವನ್ನು** ಋಜುವಾಗಿ ಅನುಸರಿಸುತ್ತಿದ್ದಾಳೆ. ಹೀಗೆ ಅನೇಕ ಸಂದರ್ಭಗಳಲ್ಲಿ ವರ್ಣಿತವಾಗಿದೆ. ಆದರೆ ಈ ಋತದ ಪಥವಾವುದೆಂದರೆ,

**ಅಗ್ನಿಂ ವಿಶ ಈಳತೇ ಮಾನುಷೀರ್ಯಾ ಅಗ್ನಿಂ ಮನುಷೋ ನಹುಷೋ ವಿ ಜಾತಾಃ ।**
**ಅಗ್ನಿರ್ಗಾಂಧರ್ವೀಂ ಪಥ್ಯಾಮೃತಸ್ಯಾಗ್ನೇರ್ಗವ್ಯೂತಿರ್ಘೃತ ಆ ನಿಷತ್ತಾ ॥**

(ಋ. ಸಂ. ೧೦-೮೦-೬)

ಈ ಋತದ ಮಾರ್ಗವು ಗಂಧರ್ವರು ಸಂಚರಿಸುವ ಮಾರ್ಗವಾದುದರಿಂದ ಇದು ಅಂತರಿಕ್ಷದ ಅತ್ಯುನ್ನತವಾದ ಸ್ಥಾನದಲ್ಲಿರಬೇಕು. ಇದೇ ಆದಿತ್ಯನ ಪಥ. ಮತ್ತು,

**ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾಁ ಏತಿ ಪ್ರಿಯಂ ವರುಣಯೋರದಬ್ಧಂ ।**
**ಋತಸ್ಯ ಶುಚಿ ದರ್ಶತಮನೀಕಂ ರುಕ್ಮೋ ನ ದಿವ ಉದಿತಾ ವ್ಯದ್ಯೌತ್ ॥**

(ಋ. ಸಂ. ೬-೫೧-೧)

**ಇದಮು ತ್ಯನ್ಮಹಿ ಮಹಾಮನೀಕಂ ಯದುಸ್ರಿಯಾ ಸಚತ ಪೂರ್ವ್ಯಂ ಗೌಃ ।**
**ಋತಸ್ಯ ಪದೇ ಅಧಿ ದೀದ್ಯಾನಂ ಗುಹಾ ರಘುಷ್ಯದ್ರಘುಯದ್ವಿವೇದ ॥**

(ಋ. ಸಂ. ೪-೫-೯)

ಎಂಬ ಋಕ್ಕುಗಳಲ್ಲಿ ಋತಾತ್ಮಕನಾದ ಆದಿತ್ಯನ ಉದಯವೂ, ಅವನ ಮನೋಹರವಾದ ರೂಪವೂ—

**ಕವಿರ್ನೃಚಕ್ಷಾ ಅಭಿ ಷೀಮಚಷ್ಟ ಋತಸ್ಯ ಯೋನಾ ವಿಘೃತೇ ಮದಂತೀ ।**
**ನಾನಾ ಚಕ್ರಾತೇ ಸದನಂ ಯಥಾ ವೇಃ ಸಮಾನೇನ ಕ್ರತುನಾ ಸಂವಿದಾನೇ ॥**

(ಋ. ಸಂ. ೩-೫೪-೬)

ಎಂಬ ಋಕ್ಕಿನಲ್ಲಿ ಸೂರ್ಯನು **ಋತದ ಯೋನಿ**ಯಲ್ಲಿ ಹರ್ಷಿಸುತ್ತಾ ದ್ಯಾವಾಪೃಥಿವಿಗಳನ್ನು ವೀಕ್ಷಿಸುತ್ತಿರುವುದೂ ವರ್ಣಿತವಾಗಿವೆ. ಹೀಗೆಯೇ ಇನ್ನೂ ನಾನಾ ಋಕ್ಕುಗಳಲ್ಲಿ ಋತದ ಶಿಖರವೂ ಮೂಲವೂ ವರ್ಣಿತವಾಗಿವೆ.

**ಋತಸ್ಯ ಬುಧ್ನ ಉಷಸಾಮಿಷಣ್ಯನ್ವೃಷಾ ಮಹೀ ರೋದಸೀ ಆ ವಿವೇಶ ।**
**ಮಹೀ ಮಿತ್ರಸ್ಯ ವರುಣಸ್ಯ ಮಾಯಾ ಚಂದ್ರೇವ ಭಾನುಂ ವಿ ದಧೇ ಪುರುತ್ರಾ ॥**

(ಋ. ಸಂ. ೩-೬೧-೭)

ಎಂಬಲ್ಲಿ ಋತದ ಮೂಲಪ್ರದೇಶವೂ ಆ ಪ್ರದೇಶದಲ್ಲಿ ದ್ಯಾವಾಪೃಥಿವಿಗಳ ಪ್ರಕಾಶವೂ ಅವುಗಳ ನಡುವೆ ಆದಿತ್ಯನ ಪ್ರವೇಶವೂ ಹೇಳಲ್ಪಟ್ಟಿದೆ. ಇಂತಹ ಅನೇಕ ಸಂದರ್ಭಗಳಲ್ಲಿ ಪಾಶ್ಚಾತ್ಯಪಂಡಿತರು **ಋತ** ಶಬ್ದಕ್ಕೆ ಈ ವಿಧವಾದ ಭೌತಿಕವಾದ ಅರ್ಥವನ್ನು ಹೇಳದೆ ಎಲ್ಲಾ ಕಡೆಗಳಲ್ಲಿಯೂ ನೈತಿಕವಾದ ಅರ್ಥವನ್ನೇ ಹೇಳಿರುವರು. ಆದರೆ ಪ್ರಕೃತವಾದ ಋಕ್ಕಿನಲ್ಲಿ (೧-೧೨೪-೩) ಈ ಎಲ್ಲಾ ವರ್ಣನೆಗಳೂ ಅಡಕವಾಗಿ ಉಷಸ್ಸು ಋತದ ಪಥವನ್ನು ಅನುಸರಿಸತಕ್ಕ **ಭೌತಿಕವಾದ** ತೇಜೋಮಂಡಲದ ಮಾರ್ಗವು ಸೂಚಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ದಿವಃ**—ಷಷ್ಠೀ ಏಕವಚನಾಂತರೂಪ. **ಊಡಿದಂಪದಾದಿ**—(ಪಾ. ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅದರ್ಶಿ**—ದೃಶಿರ್ ಪ್ರೇಕ್ಷಣೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಕರ್ಮಣಿಯಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. **ಚಿಣೋ ಲುಕ್**—(ಪಾ. ಸೂ. ೬-೪-೧೦೪) ಎಂಬುದರಿಂದ ತಶಬ್ದಕ್ಕೆ ಲುಕ್. ಚಿಣ್ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಅಂಗಕ್ಕೆ ಅಡಾಗಮ. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಸಾನಾ**—ವಸ ಆಚ್ಛಾದನೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ವ್ಯತ್ಯಯದಿಂದ ಶಪಿಗೆ ಲುಕ್ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸಮನಾ**—ಸಮ್ ಉಪಸರ್ಗ. ಅನ ಪ್ರಾಣನೇ ಧಾತು. ಪ್ರಯೋಜಕ ವ್ಯಾಪಾರತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಕರ್ತರಿಯಲ್ಲಿ ಅಚ್ ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್. **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಅಥವಾ ಮನು ಅವಬೋಧನೇ ಧಾತು. ಸಹ ಯುಗಪದೇವ ಮನ್ಯತೇ ಅವಬುಧ್ಯತೇ ಪ್ರಾಣಿಭಿರಿತಿ ಸಮನಾ. ಈ ತರಹವಾದ ವ್ಯುತ್ಪತ್ತಿಯನ್ನು ವಿವೇಚನೆಮಾಡಿಲ್ಲವಾದುದರಿಂದ ಪದಕಾಲದಲ್ಲಿ ಅವಗ್ರಹವನ್ನು ತೋರಿಸಿಲ್ಲ.

**ಪುರಸ್ತಾತ್**—ಪೂರ್ವಶಬ್ದ. **ಪೂರ್ವಾಧರಾವರಾಣಾ**—(ಪಾ. ಸೂ. ೫-೩-೩೯) ಎಂಬುದರಿಂದ ಅಸ್ತಾತಿ ಪ್ರತ್ಯಯವೂ, ಪ್ರಕೃತಿಗೆ ಪುರ್ ಎಂಬ ಆದೇಶವೂ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಪನ್ಥಾಮ್**—ಪಥಿನ್ ಶಬ್ದ. ಇದಕ್ಕೆ ದ್ವಿತೀಯಾ ಏಕವಚನ ಪರವಾದಾಗ **ವ್ಯತ್ಯಯೋ ಬಹುಲಂ** ಎಂಬದುರಿಂದ **ಪಥಿಮಥ್ಯೃಭುಕ್ಷಾಮಾತ್**—(ಪಾ. ಸೂ. ೭-೧-೮೫) ಎಂಬುದರಿಂದ ಆತ್ವ ಬರುತ್ತದೆ. **ಥೋ ನ್ಥಃ** ಎಂಬುದರಿಂದ ಥಕಾರಕ್ಕೆ ನ್ಥಾದೇಶ. ಪಥಿನ್ ಶಬ್ದಕ್ಕೆ **ಪಥೇ ಸ್ಥ ಚ**—(ಉ. ಸೂ. ೪-೪೫೨) ಎಂಬುದರಿಂದ ಪ್ರತ್ಯಯಾಂತವಾಗಿರುವುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ **ಪಥಿಮಥೋಃಸರ್ವನಾಮಸ್ಥಾನೇ** (ಪಾ ಸೂ. ೬-೧-೧೯೯)ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಏತಿ**—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರಜಾನತೀ**—ಜ್ಞಾ ಅವಬೋಧನೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ**—(ಪಾ. ಸೂ. ೩-೧-೮೧) ಎಂಬುದರಿಂದ ಶ್ನಾವಿಕರಣ. **ಜ್ಞಾಜನೋರ್ಜಾ**—(ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. **ಉಗಿತಶ್ಚ**—ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್ **ಶತುರನುಮೋನದ್ಯಜಾದೀ**—(ಪಾ. ಸೂ. ೬-೧-೧೭೩) ಎಂಬುದರಿಂದ ನುಮ್‌ರಹಿತವಾದ ಶತೃವಿನ ಪರದಲ್ಲಿರುವುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮಿನಾತಿ**—ಮೀಙ್ ಹಿಂಸಾಯಾಂ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಉಪೋ ಅದರ್ಶಿ ಶುಂಧ್ಯುವೋ ನ ವಕ್ಷೋ ನೋಧಾ ಇವಾವಿರಕೃತ ಪ್ರಿಯಾಣಿ ।
ಅದ್ಮಸನ್ನ ಸಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ ॥ ೪ ॥

॥ ಪದಪಾಠಃ ॥

ಉಪೋ ಇತಿ । ಅದರ್ಶಿ । ಶುಂಧ್ಯುವಃ । ನ । ವಕ್ಷಃ । ನೋಧಾಃಽಇವ । ಆವಿಃ । ಅಕೃತ । ಪ್ರಿಯಾಣಿ ॥
ಅದ್ಮಽಸತ್ । ನ । ಸಸತಃ । ಬೋಧಯಂತೀ । ಶಶ್ವತ್ಽತಮಾ । ಆ । ಅಗಾತ್ । ಪುನಃ । ಆಽಈಯುಷೀಣಾಂ ॥ ೪ ॥

॥ ಸಾಯಣಭಾಷ್ಯಂ ॥

ಏಷೋಷಾಃ । ಉಪೋ ಇತಿ ನಿಪಾತದ್ವಯಸಮುದಾಯಾತ್ಮಕ ಏಕೋ ನಿಪಾತಃ । ಸರ್ವೈಃ ಸಮೀಪ ಏವಾದರ್ಶಿ । ದೃಶ್ಯತೇ । ತತ್ರ ದೃಷ್ಟಾಂತಃ । ಶುಂಧ್ಯುವೋ ನ ವಕ್ಷಃ । ಅತ್ರ ನಕಾರ ಉಪಮಾರ್ಥೀಯ ಉಪರಿಷ್ಟಾತ್ಪ್ರಯುಜ್ಯಮಾನತ್ವಾತ್ । ಯತ್ರ ತು ಪ್ರತಿಷೇಧೋ ವಿವಕ್ಷಿತಸ್ತತ್ರ ಪುರಸ್ತಾನ್ನಕಾರಃ ಪ್ರಯುಜ್ಯತೇ । ತಥಾಚ ಯಾಸ್ಕಃ । ಪುರಸ್ತಾದುಪಾಚಾರಸ್ತಸ್ಯ ಯತ್ಪ್ರತಿಷೇಧತೀತಿ । ತಸ್ಯೋದಾಹರಣಂ ನೇಂದ್ರಂ ದೇವಮಮಂಸತೇತಿ । ಉಪರಿಷ್ಟಾದುಪಾಚಾರಸ್ತಸ್ಯ ಯೇನೋಪಮಿಮೀತ ಇತಿ । ತಸ್ಯೋದಾಹರಣಂ ದುರ್ಮದಾಸೋ ನ ಸುರಾಯಾಮಿತಿ । ನಿ. ೧-೪ । ಋ. ೧೦-೮೬-೧ । ಋ. ೮-೨-೧೨ । ಶುಂಧ್ಯುರಾದಿತ್ಯಃ ಸರ್ವೇಷಾಂ ಶೋಧಕತ್ವಾತ್ । ತಸ್ಯ ವಕ್ಷೋ ವಕ್ಷಃಸ್ಥಾನೀಯೋ ರಶ್ಮಿಸಮೂಹಃ । ಸ ಯಥಾ ಪ್ರಕಾಶಮಾನೋ ದೃಶ್ಯತೇ ತಥೇತ್ಯರ್ಥಃ । ಯದ್ವಾ ಶುಂಧ್ಯುರಿತಿ ಜಲಚರಃ ಶ್ವೇತವರ್ಣಃ ಪಕ್ಷಿವಿಶೇಷಃ । ಸ ಯಥಾ ಸ್ವಕೀಯಂ ವಕ್ಷಃ ಪ್ರಕಾಶಯನ್ದೃಶ್ಯತೇ ತದ್ವದಿತ್ಯರ್ಥಃ । ಕಿಂಚ ನೋಧಾ ಇವ ಪ್ರಿಯಾಣ್ಯಾವಿರಕೃತ । ನವನಂ ಸ್ತೋತ್ರಂ ಧಾರಯತೀತಿ ನೋಧಾಃ । ಏತನ್ನಾಮಾ ಮಹರ್ಷಿರ್ದೇವತಾಸ್ತುತಿವ್ಯಾಜೇನ ನಾನಾವಿಧೈರ್ಮಂತ್ರೈಃ ಪ್ರಿಯಾಣಿ ಸ್ವಮನೀಷಿತಾನ್ಯಾವಿಷ್ಕೃತವಾನ್ । ತಥೈಷಾಪಿ ಸ್ವಕೀಯಾನಿ ಸರ್ವಲೋಕಪ್ರಿಯಾಣಿ ತೇಜಾಂಸ್ಯಾವಿರಕರೋತ್ । ಕಿಂಚಾದ್ಮಸನ್ನ । ಅತ್ರಾಪ್ಯುಪಮಾರ್ಥೀಯೋ ನಕಾರಃ । ಅದ್ಯತ ಇತ್ಯದ್ಮಾನ್ನಂ । ತಸ್ಯ ಪಾಕಾಯ ಗೃಹೇ ಸೀದತೀತ್ಯದ್ಮಸತ್ ಪಾಚಿಕಾ ಯೋಷಿತ್ ಸಸತೋ ಬೋಧಯಂತೀ । ಸಾ ಯಥಾ ಸ್ವಪತಃ ಪುತ್ರಾದೀನ್ಭೋಜನಾಯ

**ಬೋಧಯತಿ ತದ್ವತ್ । ಯದ್ವಾ । ಅದ್ಮೇತಿ ಗೃಹನಾಮ ವರೂಥಮದ್ಮೇತಿ ತನ್ನಾಮಸು ಪಾಠಾತ್ । ತತ್ರ ಸೀದತೀತ್ಯದ್ಮಸದ್ವ ನನೀ । ಸಾ ಯಥಾ ಸ್ವಪತಃ ಪುತ್ರಾದೀನುಷಃಕಾಲೇ ಪ್ರಬೋಧಯತಿ ತಥಾ ಭುವನಾಖ್ಯೇ ಗೃಹೇ ಸೀದಂತೀ ತತ್ರತ್ಯಾನ್ಪ್ರಾಣಿನಃ ಪ್ರಬೋಧಯಂತೀಯಮುಷಾಃ ಏಯುಷೀಣಾಮಾಗಮನಶೀಲಾನಾಂ ಸ್ತ್ರೀಣಾಂ ಮಧ್ಯೇ ಶಶ್ವತ್ತಮಾ ಪುನಃ ಪುನರಾಗಚ್ಛತಿ । ಪ್ರಾತರ್ನಿಯತಮಾಗಚ್ಛಂತೀನಾಂ ನಾರಯೋಷಿತಾಂ ಮಧ್ಯೇ ಸ್ವಯಮೇಕಾ ಸತೀ ನಿಯತಮಾಗಚ್ಛತೀತ್ಯಭಿಪ್ರಾಯಃ । ಅತ್ರ ನಿರುಕ್ತಂ । ಉಪಾದರ್ಶಿ ಶುಂಧ್ಯುವಃ ಶುಂಧ್ಯುರಾದಿತ್ಯೋ ಭವತಿ ಶೋಧನಾತ್ತಸ್ಯೈವ ವಕ್ಷೋ ಭಾಸೋಽಧ್ಯೂಳ್ಹಮಿದಮಪೀತರದ್ವಕ್ಷ ಏತಸ್ಮಾದೇವಾಧ್ಯೂಳ್ಹಂ ಕಾಯೇ । ಶಕುನಿರಪಿ ಶುಂಧ್ಯುರುಚ್ಯತೇ ಶೋಧನಾದೇವೋದಕಚರೋ ಭವತಿ । ಆಪೋಽಪಿ ಶುಂಧ್ಯುವ ಉಚ್ಯಂತೇ ಶೋಧನಾದೇವ । ನೋಧಾ ಋಷಿರ್ಭವತಿ ನವನಂ ದಧಾತಿ ಸ ಯಥಾ ಸ್ತುತ್ಯಾ ಕಾಮಾನಾವಿಷ್ಕುರುತ ಏವಮುಷಾ ರೂಪಾಣ್ಯಾವಿಷ್ಕುರುತೇ । ಅದ್ಮಸದದ್ಮಾನ್ನಂ ಭವತ್ಯದ್ಮಸಾದಿನೀತಿ ವಾನ್ನಸಾನಿನೀತಿ ವಾ । ಸಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ ಸ್ವಪತೋ ಬೋಧಯಂತೀ ಶಾಶ್ವತಿಕತಮಾಗಾತ್ಪುನರಾಗಾಮಿನೀನಾಂ । ನಿ. ೪-೧೬ । ಇತಿ ॥**

॥ ಪ್ರತಿಪದಾರ್ಥ ॥

**ಏಷಾ**—ಈ. ಉಷೋದೇವಿಯು । **ಶುಂಧ್ಯುವಃ**—ಶೋಧಕನಾದ ಸೂರ್ಯನ (ಜಲಚರವಾದ ಶ್ವೇತ ವರ್ಣವಾದ ಪಕ್ಷಿ ವಿಶೇಷದ) । **ವಕ್ಷಃ ನ**—ವಕ್ಷಃಸ್ಥಾನೀಯವಾದ ಕಿರಣಗಳಂತೆ (ವಕ್ಷಃಪ್ರದೇಶವನ್ನು ಪ್ರದರ್ಶಿಸುತ್ತಾ ಕಾಣಿಸುವಂತೆ) । **ಉಪೋ**—ಸಮೀಪದಲ್ಲಿ । **ಅದರ್ಶಿ**—(ಎಲ್ಲರಿಗೂ) ಕಾಣಿಸುತ್ತಾಳೆ । **ನೋಧಾಃ ಇವ**—ನೋಧಸ್ ಎಂಬ ಋಷಿಯ (ಸ್ತುತಿವ್ಯಾಜದಿಂದ ತನಗೆ ಪ್ರಿಯವಾದವುಗಳನ್ನೆಲ್ಲಾ ಆವಿಷ್ಕರಿಸಿದಂತೆ ಹಾಗೆ । **ಪ್ರಿಯಾಣಿ**—(ಜನ) ಪ್ರಿಯವಾದ (ತೇಜೋರೂಪವಾದ) ರೂಪವಿಶೇಷಗಳನ್ನು । **ಆವಿಃ ಅಕೃತ**—ಪ್ರಕಟಗೊಳಿಸಿದಳು । **ಅದ್ಮಸತ್** —ಅನ್ನಾದಿ ಪಾಚಕಳಾದ ಸ್ತ್ರೀಯು । **ಸಸತಃ ಬೋಧಯಂತೀ ನ**—(ಮಲಗಿರುವ ಮಕ್ಕಳನ್ನು) ಭೋಜನಕ್ಕೋಸ್ಕರ ಏಳಿಸುವಂತೆ (ಸುಪ್ತರಾದ ಪ್ರಾಣಿಗಳನ್ನು ಎಚ್ಚರಗೊಳಿಸುತ್ತಾ ಉಷೋದೇವಿಯು) । **ಆ ಈಯುಷೀಣಾಂ**—(ಉಷಃಕಾಲದಲ್ಲಿ ಎದ್ದು) ಬರುವ ಸ್ತ್ರೀಯರಲ್ಲಿ । **ಶಶ್ವತ್ತಮಾ**—ಶಾಶ್ವತಳಾಗಿ (ನಿಯತವಾಗಿ) । **ಪುನಃ ಆ ಅಗಾತ್**—ಪುನಃ ಪುನಃ ಬರುತ್ತಾಳೆ.

॥ ಭಾವಾರ್ಥ ॥

ಉಷೋದೇವಿಯು, ಸೂರ್ಯನ ಕಿರಣಗಳಂತೆ, ಸಮೀಪದಲ್ಲೇ (ಸರ್ವರಿಗೂ) ಕಾಣಿಸುತ್ತಾಳೆ; ನೋಧಸ್ ಎಂಬ ಋಷಿಯಂತೆ (ಜನರಿಗೆ) ಪ್ರಿಯವಾದ ನಾನಾರೂಪಗಳನ್ನು ಧರಿಸುತ್ತಾಳೆ; (ಮನೆಯಲ್ಲಿ ಅನ್ನಾದಿಗಳನ್ನು) ಪಕ್ವಮಾಡಿ ತಾಯಿಯು ಮಕ್ಕಳನ್ನು ಏಳಿಸುವಂತೆ (ಸುಪ್ತರಾದ ಪ್ರಾಣಿಗಳನ್ನು ಎಚ್ಚರಗೊಳಿಸುತ್ತಾ) ;(ಉಷಃಕಾಲದಲ್ಲಿಯೇ ಎದ್ದು) ಬರುವ (ಅಭ್ಯಾಸವುಳ್ಳ) ಸ್ತ್ರೀಯರೆಲ್ಲರಿಗಿಂತ ನಿಯತವಾಗಿ ಪುನಃ ಪುನಃ ಉದಯಿಸುತ್ತಾಳೆ.

## English Translation.

She is beheld nigh at hand, (radiant) as the breast of the illuminator (the sun); and, like Nodhas, has made manifest many pleasing

(objects) : like a matron she awakens (her) sleeping (children), and of all (females who are) stirring betimes, she, the most unvarying, repeatedly appears.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ನಿರುಕ್ತಕಾರರು ಈ ರೀತಿ ವ್ಯಾಖ್ಯಾನವನ್ನು ಮಾಡಿದ್ದಾರೆ.

**ಉಪಾದರ್ಶಿ ಶುಂಧ್ಯುವಃ ಶುಂಧ್ಯುರಾದಿತ್ಯೋ ಭವತಿ ಶೋಧನಾತ್ತಸ್ಯೈವ ವಕ್ಷೋ ಭಾಸಾಧ್ಯೂಢಮಿದಮಪೀತರದ್ವಕ್ಷ ಏತಸ್ಮಾದೇವಾಧ್ಯೂಢಂ ಕಾಯೇ ಶಕುನಿರಪಿ ಶುಂಧ್ಯುರುಚ್ಯತೇ ಶೋಧನಾದೇವೋದಕಚರೋ ಭವತ್ಯಾಪೋಽಪಿ ಶುಂಧ್ಯುವ ಉಚ್ಯಂತೇ ಶೋಧನಾದೇವ ನೋಧಾ ಋಷಿರ್ಭವತಿ ನವನಂ ದಧಾತಿ ಸ ಯಥಾ ಸ್ತುತ್ಯಾ ಕಾಮಾನಾವಿಷ್ಕುರುತ ಏವಮುಷಾ ರೂಪಾಣ್ಯಾವಿಷ್ಕುರುತೇಽದ್ಮಸದದ್ಮಾನ್ನಂ ಭವತ್ಯದ್ಮಸಾದಿನೀತಿ ವಾನ್ನಸಾನಿನೀತಿ ವಾ । ಸಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ । ಸ್ವಪತೋ ಬೋಧಯಂತೀ ಶಾಶ್ವತಿಕತಮಾಗಾತ್ಪುನರೇಯುಷೀಣಾಂ ಪುನರಾಗಾಮಿನೀನಾಂ । ನಿ. ೪-೧೬ ।**

ಎಂದು ವಿವರಿಸಿ, **ಶುಂಧ್ಯು**ಶಬ್ದಕ್ಕೆ **ಶುಂಧ್ಯುರಾದಿತ್ಯೋ ಭವತಿ ಶೋಧನಾತ್ ।** ಶೋಧಿಸುವುದರಿಂದ ಆದಿತ್ಯನಿಗೆ ಈ ಹೆಸರು ಎಂದು ಮೊದಲನೆಯ ಅರ್ಥವನ್ನೂ ; **ಶಕುನಿರಪಿ ಶುಂಧ್ಯುರುಚ್ಯತೇ ಶೋಧನಾದೇವೋದಕಚರೋ ಭವತಿ** । ನೀರಿನಲ್ಲಿ ಸಂಚರಿಸತಕ್ಕ ಪಕ್ಷಿಯೂ ಸಹ ಅಲ್ಲಿ ಕಶ್ಮಲಾದಿಗಳನ್ನು ತೆಗೆದು ಶೋಧಿಸುವುದರಿಂದ ಈ ಹೆಸರಿನಿಂದ ಕರೆಯಲ್ಪಡುತ್ತದೆಂದೂ ; **ಆಪೋಽಪಿ ಶುಂಧ್ಯುವ ಉಚ್ಯಂತೇ ಶೋಧನಾದೇವ** । ಶುದ್ಧಿಮಾಡುವುದರಿಂದ ಉದಕಕ್ಕೂ ಈ ಹೆಸರು ಎಂದೂ ಈ ಪದದ ನಾನಾರ್ಥಗಳನ್ನು ತೋರಿಸುತ್ತಾರೆ. ಎಲ್ಲಾ ಸಂದರ್ಭಗಳಲ್ಲಿಯೂ ಮೂಲಧಾತುವು ಒಂದೇ ಅರ್ಥವುಳ್ಳದ್ದಾಗಿರುತ್ತದೆ. **ಋಕ್ಸಂಹಿತೆಯಲ್ಲಿ,**

**ಪ್ರ ಶುಂಧ್ಯುವಂ ವರುಣಾಯ ಪ್ರೇಷ್ಠಾಂ ಮತಿಂ ವಸಿಷ್ಠ ಮೀಳ್ಹುಷೇ ಭರಸ್ವ ।**
**ಯ ಈಮರ್ವಾಂಚಂ ಕರತೇ ಯಜತ್ರಂ ಸಹಸ್ರಾಮಘಂ ವೃಷಣಂ ಬೃಹಂತಂ ॥**

(ಋ. ಸಂ ೭-೮೮-೧)

ಎಂಬ ಋಕ್ಕಿನಲ್ಲಿ **ಶೋಧಯಿತ್ರೀಂ ಯದ್ವಾ ಸ್ವತ ಏವ ಶುದ್ಧಾಂ ।** ಪವಿತ್ರವನ್ನಾಗಿ ಮಾಡತಕ್ಕದ್ದೂ ಅಥವಾ ಸ್ವತಃ ಶುದ್ಧವಾಗಿರತಕ್ಕದ್ದೂ ಆದ ಎಂದು ಸ್ತುತಿಗೆ ವಿಶೇಷಣವಾಗಿದೆ.

**ಯುವಂ ರಥೇನ ವಿಮದಾಯ ಶುಂಧ್ಯುವಂ ನ್ಯೂಹಥುಃ ಪುರುಮಿತ್ರಸ್ಯ ಯೋಷಣಾಂ ।**
**ಯುವಂ ಹವಂ ವಧ್ರಿಮತ್ಯಾ ಅಗಚ್ಛತಂ ಯುವಂ ಸುಷುತಿಂ ಚಕ್ರಥುಃ ಪುರಂಧಯೇ ॥**

(ಋ. ಸಂ. ೧೦-೩೯-೭)

ಎಂಬ ಋಕ್ಕಿನಲ್ಲಿ ಶುದ್ಧಳಾದ ಸ್ತ್ರೀ ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ, ಉಷಸ್ಸಿನ ಆವಿರ್ಭಾವವನ್ನು ವರ್ಣಿಸಿದೆ. ಇದನ್ನು ಶೋಧಕನಾದ ಸೂರ್ಯನ ವಕ್ಷಃಸ್ಥಾನೀಯವಾದ ಕಿರಣಗಳ ಸಮೂಹಕ್ಕೆ ಅಥವಾ ಶ್ವೇತವರ್ಣವುಳ್ಳ ಜಲಚರದ **ವಕ್ಷಃ** ಪ್ರದೇಶಕ್ಕೂ ಹೋಲಿಸಬಹುದೆಂದು ತಿಳಿಸಿದೆ.

**ನೋಧಾ ಇವ**—ಈ ಪದಕ್ಕೆ ನಿರುಕ್ತಕಾರರು **ನೋಧಾ ಋಷಿರ್ಭವತಿ । ನವನಂ ದಧಾತಿ । ಸ ಯಥಾ ಸ್ತುತ್ಯಾ ಕಾಮಾನಾವಿಷ್ಕುರುತೇ । ನೋಧಾಃ** ಎಂಬ ಋಷಿಯು ತನ್ನ ನೂತನವಾದುದೂ ಕಾವ್ಯರೂಪವಾದುದೂ ಆದ ಸ್ತುತಿಗಳಿಂದ ಅಂತರ್ಗತವಾದ ತನ್ನ ಅಭಿಲಾಷೆಗಳನ್ನು ಬಿಚ್ಚಿ ತೋರಿಸುವಂತೆ **ಉಷಸ್ಸೂ** ಸಹ ತನ್ನ ಸುಪ್ತವಾಗಿದ್ದ ಕಾಂತಿಯನ್ನು ಪ್ರಕಾಶಪಡಿಸುತ್ತಾಳೆಂದು ಹೋಲಿಸಿದೆ.

**ನೋಧಾ** (ಗೌತಮ) ಋಷಿಯು ಋಕ್ಸಂಹಿತೆಯ ಪ್ರಥಮಮಂಡಲದಲ್ಲಿ ೫೮ ರಿಂದ ೬೪ ನೇ ಸೂಕ್ತದವರೆಗಿರುವ ೭ ಸೂಕ್ತಗಳ ಮತ್ತು ಎಂಟನೇ ಮಂಡಲದಲ್ಲಿ ೮೮ ನೇ ಸೂಕ್ತದ ಮತ್ತು ಒಂಭತ್ತನೆಯ ಮಂಡಲದ ೯೩ ನೆಯ ಸೂಕ್ತಗಳ ದ್ರಷ್ಟೃವೆಂದು ಪ್ರಸಿದ್ಧನಾಗಿದ್ದಾನೆ. ಇವನ ವಿಷಯವನ್ನು ಋಕ್ಸಂಹಿತೆಯಲ್ಲಿಯೇ ಅನೇಕ ಕಡೆ ಹೇಳಿದೆ.

**ತಂ ತ್ವಾ ವಯಂ ಪತಿಮಗ್ನೇ ರಯೀಣಾಂ ಪ್ರ ಶಂಸಾಮೋ ಮತಿಭಿರ್ಗೋತಮಾಸಃ ।**
**ಆಶುಂ ನ ವಾಜಂಭರಂ ಮರ್ಜಯಂತಃ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ ।**
(ಋ. ಸಂ. ೧-೬೦-೫)

ಇತ್ಯಾದಿ ಋಕ್ಕುಗಳಲ್ಲಿ ಗೋತಮಪುತ್ರರೆಂದೂ, ಧನಪತಿಯಾದ ಅಗ್ನಿಯನ್ನು ಸ್ತುತಿಸುವರೆಂದೂ ಹೇಳಿದೆ.

**ಏವಾ ತೇ ಹಾರಿಯೋಜನಾ ಸುವೃಕ್ತೀಂದ್ರ ಬ್ರಹ್ಮಾಣಿ ಗೋತಮಾಸೋ ಅಕ್ರನ್ ।**
**ಐಷು ವಿಶ್ವಪೇಶಸಂ ಧಿಯಂ ಧಾಃ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ ॥**
(ಋ. ಸಂ ೧-೬೧-೧೬)

ಎಂಬಲ್ಲಿ ಇಂದ್ರನನ್ನುದ್ದೇಶಿಸಿ ಗೋತಮಪುತ್ರರಾದ ನೋಧಸ್ಸುಗಳು ಸ್ತುತಿಯನ್ನು ರಚಿಸಿದರೆಂದು ಪಠಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಉಷಸ್ಸಿನ ಆವಿರ್ಭಾವವು ನೋಧಾಗೌತಮನು ರಚಿಸಿದ ಸ್ತುತಿಗಳಿಂದ ಪ್ರಕಾಶಿತಗಳಾದ ಅಭಿಲಾಷೆಗಳಂತೆ ಪ್ರಕಾಶಮಾನವಾಗಿತ್ತು ಎಂಬುದನ್ನು ವರ್ಣಿಸಿದೆ.

**ಅದ್ಮಸತ್—ಅದ್ಮಸದದ್ಮಾನ್ನಂ ಭವತ್ಯದ್ಮಸಾದಿನೀತಿ ವಾನ್ನಸಾನಿನೀತಿ ವಾ ।** (ನಿ. ೪-೧೬) ಅದ್ಮ ಶಬ್ದಕ್ಕೆ ಅನ್ನವೆಂದು ಹೆಸರು. ಅನ್ನದ ಮುಂದೆ ಭೋಜನಕ್ಕಾಗಿ ಕುಳಿತುಕೊಳ್ಳುವುದರಿಂದಾಗಲಿ ಅಥವಾ ಅನ್ನವನ್ನು ಹೊಂದುವುದರಿಂದಾಗಲಿ **ಅದ್ಮಸತ್** ಎಂದಾಗುತ್ತದೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ಹೇಳಿದ್ದಾರೆ. ಸಾಯಣರು,

**ಅದ್ಮಸನ್ನ । ಅತ್ರಾಪ್ಯುಪಮಾರ್ಥೀಯೋ ನಕಾರಃ । ಅದ್ಯತ ಇತ್ಯದ್ಮಾನ್ನಂ । ತಸ್ಯ ಪಾಕಾಯ ಗೃಹೇ ಸೀದತೀತ್ಯದ್ಮಸತ್ । ಪಾಚಿಕಾ ಯೋಷಿತ್ । ಯದ್ವಾ ಅದ್ಮೇತಿ ಗೃಹನಾಮ । ವರೂಥಮದ್ಮೇತಿ ತನ್ನಾಮಸು ಪಾಠಾತ್ । ತತ್ರ ಸೀದತೀತ್ಯದ್ಮಸಜ್ಜನನೀ ॥**

ಭಕ್ಷಿಸಲು ಯೋಗ್ಯವಾದ್ದರಿಂದ **ಅದ್ಮ** ವೆಂದರೆ ಅನ್ನವೆಂದರ್ಥ. **ಅದ್ಮಸತ್** ಎಂದರೆ ಅದನ್ನು ಪಾಕಮಾಡುವುದಕ್ಕಾಗಿ ಗೃಹದಲ್ಲೇ ಕುಳಿತಿರುವ ಸ್ತ್ರೀಯೆಂದಾಗುತ್ತದೆ ಅಥವಾ ಅದ್ಮ ಶಬ್ದವು ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ ಗೃಹದಲ್ಲೇ ಇರತಕ್ಕವಳು **ಜನನೀ** ಎಂದು ಎರಡು ವಿಧವಾಗಿ ಈ ಪದದ ಅರ್ಥವನ್ನು ಹೇಳಿದ್ದಾರೆ. **ನ**ಕಾರವು ಉಪಮಾರ್ಥೀಯವಾದುದರಿಂದ,

**ಸಾ ಜನನೀ ಯಥಾ ಸ್ವಪತಃ ಪುತ್ರಾದೀನುಷಃಕಾಲೇ ಪ್ರಬೋಧಯತಿ ತಥಾ ಭುವನಾಖ್ಯೇ ಗೃಹೇ ಸೀದಂತೀ ತತ್ರತ್ಯಾನ್ಪ್ರಾಣಿನಃ ಪ್ರಬೋಧಯತೀಯಮುಷಾಃ ।**

ಜನನಿಯು ಉಷಃಕಾಲದಲ್ಲಿ ತನ್ನ ಮಕ್ಕಳನ್ನು ಎಬ್ಬಿಸುವಂತೆ ಉಷಸ್ಸೂ ಕೂಡ ಜಗಜ್ಜನನಿಯಾಗಿ ಜಗತ್ತಿನಲ್ಲಿರುವ ಸಕಲಪ್ರಾಣಿಗಳನ್ನೂ ಎಬ್ಬಿಸುತ್ತಾಳೆಂದರ್ಥ.

ಅಥವಾ **ಅದ್ಮಸತ್** ಎಂದರೆ **ಹೋತೃ** ಎಂದೂ ಆಗಬಹುದೆಂದು ಕೆಲವು ಪಂಡಿತರ ಮತ. ಹೋತೃವೂ ಕೂಡ ದೇವತಾದಿಗಳನ್ನು ಎಬ್ಬಿಸುವುದು ಪ್ರಸಿದ್ಧವಾಗಿದೆ.

**ಪ್ರ ಬೋಧಯೋಷೋ ಅಶ್ವಿನಾ ಪ್ರ ದೇವಿ ಸೂನೃತೇ ಮಹಿ ।**
**ಪ್ರ ಯಜ್ಞಹೋತರಾನುಷಕ್ಪ್ರ ಮದಾಯ ಶ್ರವೋ ಬೃಹತ್ ॥**

(ಋ. ಸಂ. ೮-೯-೧೭)

ಎಂಬ ಋಕ್ಕಿನಲ್ಲಿ ಯಜ್ಞಹೋತೃವು ಅಶ್ವಿನೀದೇವತೆಗಳನ್ನು ಎಚ್ಚರಿಸುವಂತೆ ಉಷಸ್ಸೂ ಅವರನ್ನು ಎಚ್ಚರಗೊಳಿಸಬೇಕೆಂದು ಪ್ರಾರ್ಥಿಸಿದೆ.

**ದಶ ರಾಜಾನಃ ಸಮಿತಾ ಅಯಜ್ಯವಃ ಸುದಾಸಮಿಂದ್ರಾವರುಣಾ ನ ಯುಯುಧುಃ ।**
**ಸತ್ಯಾ ನೃಣಾಮದ್ಮಸದಾಮುಪಸ್ತುತಿರ್ದೇವಾ ಏಷಾಮಭವನ್ದೇವಹೂತಿಷು ॥**

(ಋ. ಸಂ. ೭-೮೩-೭)

ಎಂಬ ಋಕ್ಕಿನಲ್ಲಿ ಸಾಯಣರೇ ಈ ಅರ್ಥವನ್ನು ಮಾಡಿದ್ದಾರೆ. **ಅದ್ಮಸದಾಂ। ಅದ್ಮಾನ್ಯನ್ನೇ ಹವಿಷಿ ಸೀದಂತೀತ್ಯದ್ಮಸದ ಋತ್ವಿಜಃ ।** ಎಂದು ವಿವರಿಸಿ ಋತ್ವಿಕ್ಕುಗಳೆಂದು ಹೇಳಿದ್ದಾರೆ. ಹೀಗೆಯೇ—

**ವದ್ಮಾ ಹಿ ಸೂನೋ ಅಸ್ಯದ್ಮಸದ್ವಾ ಚಕ್ರೇ ಅಗ್ನಿರ್ಜನುಷಾಜ್ಮಾನ್ನಂ ।**
**ಸ ತ್ವಂ ನ ಊರ್ಜಸನ ಊರ್ಜಂ ಧಾ ರಾಜೇವ ಜೇರವೃಕೇ ಕ್ಷೇಷ್ಯಂತಃ ॥**

(ಋ. ಸಂ. ೬-೪-೪)

ಎಂಬಲ್ಲಿಯೂ, ಹೀಗೆಯೇ ೮-೪೪-೨೯; ೮-೪೩-೧೯ ಇತ್ಯಾದಿ ಋಕ್ಕುಗಳಲ್ಲಿಯೂ ಹೀಗೆಯೇ **ಹೋತೃ**ವೆಂದು ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಶುಂಧ್ಯುವಃ**—ಶುಂಧ ವಿಶುದ್ಧೌ ಧಾತು. **ಯಜಿಮನಿಶುಂಧಿದಸಿಜನಿಭ್ಯೋ ಯುಃ** (ಉ. ಸೂ. ೩-೩೦೦) ಎಂಬುದರಿಂದ ಯು ಪ್ರತ್ಯಯ. ಇದಕ್ಕೆ ಷಷ್ಠೀ ಏಕವಚನ ಪರವಾದಾಗ **ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಮ್** (ಪಾ. ಸೂ. ೬-೪-೭೭-೧) ಎಂಬುದರಿಂದ ಉವಙಾದೇಶ ಬರುತ್ತದೆ. ಪ್ರತ್ಯಯಸ್ವರ ಬರುತ್ತದೆ.

**ನೋಧಾಃ**— ನವನಂ ದಧಾತಿ ಇತಿ ನೋಧಾಃ **ನೋಧಾ ಋಷಿರ್ಭವತಿ ನವನಂ ದಧಾತಿ** (ನಿರು. ೪-೧೬) ಎಂದು ಯಾಸ್ಕರು ಹೇಳಿರುತ್ತಾರೆ. ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ ನವನಶಬ್ದ ಉಪಪದವಾಗಿರುವಾಗ ಅಸುನ್ ಪ್ರತ್ಯಯ. ಉಪಪದಕ್ಕೆ ನೋಭಾವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಕೃತ**—ಡುಕೃಞ್ ಕರಣೇ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಚ್ಲಿ ಬಂದಾಗ **ಮಂತ್ರೇ ಘಸಹ್ವರಣ**—(ಪಾ. ಸೂ. ೨-೪-೮೦) ಎಂಬುದರಿಂದ ಅದಕ್ಕೆ ಲುಕ್. ಪ್ರತ್ಯಯಕ್ಕೆ ಙಿತ್ತ್ವವಿರುವುದರಿಂದ ಗುಣ ಬರುವುದಿಲ್ಲ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅದ್ಮಸತ್**—ಅದ್ಯತೇ ಇತಿ ಅದ್ಮ=ಅನ್ನಮ್. ತದರ್ಥಂ ಸೀದತೀತಿ ಅದ್ಮಸತ್. **ಸತ್ಸೂದ್ವಿಷ—** (ಪಾ. ಸೂ. ೩-೨-೬೧) ಎಂಬುದರಿಂದ ಸುಬಂತ ಉಪಪದವಾಗಿರುವಾಗ. ಷದ್ಲೃ ಧಾತುವಿಗೆ ಕ್ವಿಪ್ ಪ್ರತ್ಯಯ. ಧಾತ್ವಾದಿಗೆ ಸತ್ವ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸಸತಃ**—ಷಸ ಸ್ವಪ್ನೇ ಧಾತು. ಅದಾದಿ, ಲಡರ್ಥದಲ್ಲಿ ಶತೃ ಪ್ರತ್ಯಯ. ಧಾತ್ವಾದಿಗೆ ಸತ್ವ. ದ್ವಿತೀಯಾ ಬಹುವಚನಾಂತರೂಪ. ನುಮ್ ರಹಿತವಾದ ಶತೃಪ್ರತ್ಯಯದ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋನದ್ಯ-ಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಬೋಧಯಂತೀ**—ಬುಧ ಅವಗಮನೇ ಧಾತು. ಪ್ರಯೋಜಕವ್ಯಾಪಾರತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಣಿಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ, ಅಯಾದೇಶ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಉಗಿತಶ್ಚ** ಎಂಬುದರಿಂದ ನುಮಾಗಮ. ಣಿಚ್‌ಸ್ವರ ಉಳಿಯುತ್ತದೆ.

**ಶಶ್ವತ್ತಮಾ**—ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. **ಉಪೋತ್ತಮ ಶಶ್ವತ್ತಮೌ ಸರ್ವತ್ರ—** (ಪಾ. ಸೂ. ೬-೧-೧೬೦ ಗ) ಎಂದು ಉಞ್ಛಾದಿಯಲ್ಲಿ ಪಾಠಮಾಡಿರುವುದರಿಂದ ತಮಪ್ ಪಿತ್ತಾದರೂ ಅಂತೋದಾತ್ತ ಸ್ವರ ಬರುತ್ತದೆ.

**ಅಗಾತ್**—ಇಣ್ ಗತೌ ಧಾತು. ಅದಾದಿ. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಅಕಾರಲೋಪ. **ಇಣೋ ಗಾ ಲುಙಿ** (ಪಾ ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. ಚ್ಲಿ ಪ್ರಾಪ್ತವಾದಾಗ **ಗಾತಿಸ್ಥಾಘುಪಾ**—(ಪಾ. ಸೂ. ೨.೪-೭೭) ಎಂಬುದರಿಂದ ಅದಕ್ಕೆ ಲೋಪ. ಅಂಗಕ್ಕೆ ಅಡಾಗಮ ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

**ಪೂರ್ವೇ ಅರ್ಧೇ ರಜಸೋ ಅಪ್ತ್ಯಸ್ಯ ಗವಾಂ ಜನಿತ್ರ್ಯಕೃತ ಪ್ರ ಕೇತುಂ ।**

**ವ್ಯು ಪ್ರಥತೇ ವಿತರಂ ವರೀಯ ಓಭಾ ಪೃಣಂತೀ ಪಿತ್ರೋರುಪಸ್ಥಾ ॥ ೫ ॥**

॥ ಪದಪಾಠಃ ॥

**ಪೂರ್ವೇ । ಅರ್ಧೇ । ರಜಸಃ । ಅಪ್ತ್ಯಸ್ಯ । ಗವಾಂ । ಜನಿತ್ರೀ । ಅಕೃತ । ಪ್ರ । ಕೇತುಂ ।**

**ವಿ । ಊಂ ಇತಿ । ಪ್ರಥತೇ । ವಿಽತರಂ । ವರೀಯಃ । ಆ । ಉಭಾ । ಪೃಣಂತೀ । ಪಿತ್ರೋಃ । ಉಪಸ್ಥಾ**

॥ ಸಾಯಣಭಾಷ್ಯಂ ॥

ಅಪ್ತ್ಯಸ್ಯ ವ್ಯಾಪನಶೀಲಸ್ಯ ವಿಸ್ತೃತಸ್ಯ ರಜಸೋ ರಂಜಕಸ್ಯಾಂತರಿಕ್ಷಲೋಕಸ್ಯ । ರಜಃಶಬ್ದೋಽಂತರಿಕ್ಷಲೋಕವಾಚೀ ಲೋಕಾ ರಜಾಂಸ್ಯುಚ್ಯಂತ ಇತಿ ಯಾಸ್ಕೇನೋಕ್ತತ್ವಾತ್ । ನಿ. ೪-೧೯ । ತಸ್ಯ ಪೂರ್ವೇಽರ್ಧೇ ಪೂರ್ವಸ್ಮಿನ್ಭಾಗೇ ಜನಿತ್ರ್ಯುತ್ಪನ್ನಾ ಸತೀ ಗವಾಂ ದಿಶಾಂ ರಶ್ಮೀನಾಂ ವಾ ಕೇತುಂ ಪ್ರಜ್ಞಾನಂ ಪ್ರಾಕೃತ । ಪ್ರಕರ್ಷೇಣ ಕರೋತಿ । ಯದ್ವಾ । ರಜಸೋ ರಂಜಕಸ್ಯಾಹ್ನಃ । ರಜಃಶಬ್ದೋಽಹರ್ವಾಚೀ । ಅಸೃಗಹನೀ ರಜಸೀ ಉಚ್ಯೇತೇ ಇತಿ ಯಾಸ್ಕೇನೋಕ್ತತ್ವಾತ್ । ನಿ. ೪-೧೯ । ತಸ್ಯ ಪೂರ್ವೇಽರ್ಧೇ ಪೂರ್ವಸ್ಮಿನ್ಭಾಗ ಉಷಃಕಾಲೇ ಗವಾಂ ವಾಚಾಂ ಜನಿತ್ರೀ ಜನಯಿತ್ರ್ಯುತ್ಪಾದಯಿತ್ರೀ । ಉಷಃಕಾಲೇ ಸರ್ವೇಷಾಂ ಪ್ರಾಣಿನಾಂ ವಾಚಃ ಸ್ಫುರಂತೀತಿ ಪ್ರಸಿದ್ಧಂ । ಯದ್ವಾ । ಅಪ್ತ್ಯಸ್ಯ ಕರ್ಮಸು ಸ್ಥಿತಸ್ಯ ಜಂತೋಃ ಕೇತುಂ ಗಮನಾಗಮನಾದಿರೂಪಂ ಕರ್ಮ । ಕೇತುರಿತಿ ಕರ್ಮನಾಮ ಕೇತಃ ಕೇತುರಿತಿ ತನ್ನಾಮಸು ಪಾಠಾತ್ । ಪ್ರಾಕೃತ । ಪ್ರಕರ್ಷೇಣ ಕರೋತಿ । ಕಿಂಚ ಪಿತ್ರೋಃ ಪಾಲಯಿತ್ರ್ಯೋರ್ದ್ಯಾವಾಪೃಥಿವ್ಯೋರುಪಸ್ಥೋಪಸ್ಥ ಉತ್ಸಂಗೇಽಂತರಾಲಪ್ರದೇಶೇ ಸ್ಥಿತ್ವೋಭೋಭೇ ದ್ಯಾವಾಪೃಥಿವ್ಯಾ ಪೃಣಂತೀ ಸ್ವತೇಜಸಾ ಪೂರಯಂತೀ । ಯದ್ವಾ । ಉಭೋಭಯೋಃ ಪಿತ್ರೋರಿತಿ ಸಂಬಂಧಃ । ವಿತರಂ ವಿಶಿಷ್ಟತರಂ ವರೀಯ ಉರುತರಮತಿವಿಸ್ತೀರ್ಣಂ ಯಥಾ ಭವತಿ ತಥಾ ವ್ಯು ಪ್ರಥತೇ । ವಿಶೇಷೇಣೈವ ಪ್ರಖ್ಯಾತಾ ಭವತಿ । ಪ್ರಕಾಶತ ಇತ್ಯರ್ಥಃ । ಉಶಬ್ದೋಽವಧಾರಣಾರ್ಥಃ ಪಾದಪೂರಣೋ ವಾ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತೀತಿ ಯಾಸ್ಕೇನೋಕ್ತತ್ವಾತ್ ॥

॥ ಪ್ರತಿಪದಾರ್ಥ ॥

**ಅಪ್ತ್ಯಸ್ಯ**—ವ್ಯಾಪ್ತವಾದ । **ರಜಸಃ**—ಅಂತರಿಕ್ಷ ಲೋಕದ । **ಪೂರ್ವೇ ಅರ್ಧೇ**—ಪೂರ್ವಭಾಗದಲ್ಲಿ (ಮೊದಲಿನ ಭಾಗದಲ್ಲಿ) ಉಷಃಕಾಲದಲ್ಲಿ । **ಜನಿತ್ರೀ**—ಉತ್ಪನ್ನಳಾಗಿ । **ಗವಾಂ**—ದಿಕ್ಕುಗಳ (ರಶ್ಮಿಗಳ) । **ಕೇತುಂ**—ಜ್ಞಾನವನ್ನು । **ಪ್ರ ಅಕೃತ**—(ಉಷಸ್ಸು) ಹೆಚ್ಚಾಗಿ ಉಂಟುಮಾಡುತ್ತದೆ [ಅಥವಾ] । **ಅಪ್ತ್ಯಸ್ಯ**—ಕರ್ಮನಿರತನಾದ ಜಂತುವಿಗೆ । **ರಜಸಃ**—ಅಹಸ್ಸಿನ । **ಪೂರ್ವೇ ಅರ್ಧೇ**— ಪೂರ್ವಾರ್ಧದಲ್ಲಿ । **ಗವಾಂ**—ವಾಕ್ಕುಗಳ । **ಜನಿತ್ರೀ**—ಜನನಿಯಾಗಿ । **ಕೇತುಂ**—(ಗಮನಾಗಮನಾದಿ) ಕರ್ಮಜ್ಞಾನವನ್ನು । **ಪ್ರ ಅಕೃತ** (ಉಷೋದೇವಿಯು) ಚೆನ್ನಾಗಿ ಉಂಟುಮಾಡುತ್ತಾಳೆ । **(ಕಿಂಚ—ಮತ್ತೂ)** । **ಪಿತ್ರೋಃ**—ಪಿತೃಸ್ಥಾನೀಯರಾದ ಭೂಮ್ಯಾಕಾಶಗಳ । **ಉಪಸ್ಥಾ**—ಉತ್ಸಂಗ ಪ್ರದೇಶದಲ್ಲಿ (ಇದ್ದು) । **ಉಭಾ**—ದ್ಯಾವಾ ಪೃಥಿವಿಗಳೆರಡನ್ನೂ । **ಆ ಪೃಣಂತೀ**—(ತನ್ನ ತೇಜಸ್ಸಿನಿಂದ) ತುಂಬುವವಳಾಗಿ । **ವಿತರಂ**—ಹೆಚ್ಚಾಗಿ । **ವರೀಯಃ**—ವಿಸ್ತೃತಳಾಗಿ। **ವ್ಯು ಪ್ರಥತೇ**—ಪ್ರಸಿದ್ಧಳಾಗುತ್ತಾಳೆ (ಪ್ರಕಾಶಿಸುತ್ತಾಳೆ).

॥ ಭಾವಾರ್ಥ ॥

ಉಷಸ್ಸು ವ್ಯಾಪ್ತವಾದ ಅಂತರಿಕ್ಷದ ಪೂರ್ವಭಾಗದಲ್ಲಿ ಉದಿತಳಾಗಿ (ದಿನದ ಪೂರ್ವಭಾಗದಲ್ಲಿ ಉದಿತಳಾಗಿ) ದಿಕ್ಕುಗಳನ್ನು (ಪ್ರಕಾಶದಿಂದ) ತಿಳಿಸುತ್ತದೆ. (ಅಹಸ್ಸಿನ ಪೂರ್ವಭಾಗದಲ್ಲಿ ಉದಿತಳಾಗಿ ಕರ್ಮನಿರತನಾದ ಜಂತುವಿಗೆ (ಗಮನಾಗಮನಾದಿ) ಕರ್ಮಜ್ಞಾನವನ್ನುಂಟುಮಾಡುತ್ತದೆ; ಮತ್ತು ಭೂಮ್ಯಾಕಾಶಗಳ ಮಧ್ಯೆ (ಇದ್ದು) ಎರಡು ಪ್ರದೇಶಗಳನ್ನೂ ಬೆಳಗುತ್ತಾ, ಹೆಚ್ಚಾಗಿ ಪ್ರಸಿದ್ಧವಾಗುತ್ತದೆ (ಪ್ರಕಾಶಿಸುತ್ತದೆ).

## English Translation

Born in the eastern quarter of the spacious firmament, she displays a banner of rays of light. Placed on the lap of both parents (heaven and earth), filling them (with radiance), she enjoys vast and wide-spread renown.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದೆ. ಮೊದಲನೆಯದಾಗಿ, **ಅಪ್ತ್ಯಸ್ಯ ರಜಸಃ ಪೂರ್ವೇ ಅರ್ಧೇ ಜನಿತ್ರೀ ಗವಾಂ ಕೇತುಂ ಪ್ರ ಅಕ್ರೃತ ।** ವಿಸ್ತಾರವಾಗಿ ವ್ಯಾಪಿಸಿರುವ ಅಂತರಿಕ್ಷದ ಪೂರ್ವಭಾಗದಲ್ಲಿ (ಮೊದಲಿನ ಭಾಗದಲ್ಲಿ) ಉಷಸ್ಸು ಜನಿಸಿ ದಶದಿಕ್ಕುಗಳ ಜ್ಞಾನವನ್ನು ಉಂಟುಮಾಡುತ್ತಾಳೆಂದೂ, ಎರಡನೆಯದಾಗಿ, **ಅಪ್ತ್ಯಸ್ಯ** ಕರ್ಮನಿರತನಾದ ಜಂತುವಿಗೆ **ರಜಸಃ** ಅಹಸ್ಸಿನ **ಪೂರ್ವೇ ಅರ್ಧೇ** ಪೂರ್ವಾರ್ಧದಲ್ಲಿ **ಗವಾಂ** ವಾಕ್ಕುಗಳ ಜನಿತ್ರೀ—ಜನನಿಯಾಗಿ **ಕೇತುಂ** ಕರ್ಮಜ್ಞಾನವನ್ನು **ಪ್ರ ಅಕ್ರೃತ** ಚೆನ್ನಾಗಿ ಉಂಟುಮಾಡಿದಳು ಎಂದೂ ವಿವರಿಸಿದೆ. ಆದುದರಿಂದ **ಅಪ್ತ್ಯಸ್ಯ** ಇತ್ಯಾದಿ ಪದಗಳಿಗೆಲ್ಲಾ ಎರಡರ್ಥಗಳನ್ನು ಹೇಳಬೇಕು.

**ಅಪ್ತ್ಯಸ್ಯ—ವ್ಯಾಪನಶೀಲಸ್ಯ ವಿಸ್ತೃತಸ್ಯ** ಅತ್ಯಂತ ವಿಸ್ತಾರವಾಗಿ ಹರಡಿದ ಎಂದು ಅಂತರಿಕ್ಷಕ್ಕೆ ವಿಶೇಷಣವಾಗಿಯೂ; ಅಥವಾ **ಅಪ್** ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ, **ಅಪ್ತ್ಯಸ್ಯ** ಎಂದರೆ **ಕರ್ಮಸು ಸ್ಥಿತಸ್ಯ ಜಂತೋಃ ।** ಕರ್ಮಾಚರಣೆಯಲ್ಲಿ ನಿರತವಾದ ಪ್ರಾಣಿಗೆ ಎಂದೂ ಅರ್ಥವಾಗುತ್ತದೆ.

**ರಜಸಃ— ರಜಃಶಬ್ದೋಽಂತರಿಕ್ಷಲೋಕವಾಚೀ । ಲೋಕಾ ರಜಾಂಸ್ಯುಚ್ಯಂತ ಇತಿ ಯಾಸ್ಕೇನೋಕ್ತತ್ವಾತ್ ।** (ನಿ. ೪-೧೯) **ತಸ್ಯ ಪೂರ್ವೇ ಅರ್ಧೇ ।** ಇಲ್ಲಿ ಯಾಸ್ಕರ ಮತದಂತೆ **ರಜಃ** ಶಬ್ದಕ್ಕೆ ಅಂತರಿಕ್ಷವೆಂದರ್ಥವೆಂದು ಸಾಯಣರು ಈ ಪದದ ಮೊದಲನೇ ಅರ್ಥವನ್ನು ತಿಳಿಸಿ ಇಂತಹ ಅಂತರಿಕ್ಷದ ಪೂರ್ವಭಾಗದಲ್ಲಿ ಎಂದೂ, ಎರಡನೆಯದಾಗಿ, **ರಜಸಃ ರಂಜಕಸ್ಯಾಹ್ನಃ ರಜಃಶಬ್ದೋಽಹರ್ವಾಚೀ । ಅಸ್ಯೃಗಹನೀ ರಜಸೀ ಇತಿ ಯಾಸ್ಕೇನೋಕ್ತತ್ವಾತ್ (೪-೧೯) ತಸ್ಯ ಪೂರ್ವೇಽರ್ಧೇ ।** ರಂಜನಾತ್ಮಕವಾಗಿರುವುದರಿಂದ **ಅಹಸ್ಸಿಗೆ** ರಜಃ ಎಂದು ಹೆಸರು ಎಂದು ಯಾಸ್ಕರ ವಾಕ್ಯವನ್ನೇ ಉದಹರಿಸಿ ಅರ್ಥಮಾಡಿ ಇಂತಹ ರಜಸ್ಸಿನ ಎಂದರೆ ಅಹಸ್ಸಿನ ಪೂರ್ವಭಾಗದಲ್ಲಿ ಎಂದು ವಿವರಿಸಿದ್ದಾರೆ. ಹೀಗೆ **ಅಂತರಿಕ್ಷ, ಅಹಸ್ಸು,** ಎಂಬ ಎರಡರ್ಥಗಳು ಮಾತ್ರವಲ್ಲದೆ,

**ಕ್ವ ಸ್ವಿದಸ್ಯ ರಜಸೋ ಮಹಸ್ಪರಂ ಕ್ವಾವರಂ ಮರುತೋ ಯಸ್ಮಿನ್ನಾಯಯ ।**
**ಯಚ್ಚ್ಯಾವಯಥ ವಿಥುರೇವ ಸಂಹಿತಂ ವ್ಯದ್ರಿಣಾ ಪತಥ ತ್ವೇಷಮರ್ಣವಂ ।**

(ಋ. ಸಂ. ೧-೧೬೮-೬)

ಇತ್ಯಾದಿ ಕೆಲವು ಋಕ್ಕುಗಳಲ್ಲಿ **ರಜಃ** ಶಬ್ದಕ್ಕೆ ಉದಕವೆಂದೂ ಅರ್ಥಮಾಡಿದೆ.

**ಗವಾಂ—ದಿಶಾಂ ರಶ್ಮೀನಾಂ ವಾ ।** ದಿಕ್ಕುಗಳ ಅಥವಾ ಕಿರಣಗಳ ಎಂದು ಒಂದರ್ಥವೂ ಅಥವಾ **ಗವಾಂ ವಾಚಾಂ ಜನಿತ್ರೀ ।** ವಾಕ್ಕುಗಳ ಜನನಿಯೆಂದು ಇನ್ನೊಂದರ್ಥವೂ ಹೇಳಲ್ಪಟ್ಟಿದೆ. ಗೋಶಬ್ದವು ನಿರುಕ್ತದಲ್ಲಿ ನಾನಾರ್ಥಗಳಲ್ಲಿ ಪಠಿತವಾಗಿದೆ. ಇದನ್ನು ಬೇರೆ ಕಡೆಯಲ್ಲಿ ವಿವರಿಸಿದೆ.

**ಪಿತ್ರೋಃ—ಪಾಲಯಿತ್ರ್ಯೋರ್ದ್ಯಾವಾಪೃಥಿವ್ಯೋಃ ।** ತನ್ನ ಪಾಲಕರಾದ ದ್ಯಾವಾಪೃಥಿವಿಗಳ ಎಂದು ದ್ಯಾವಾಪೃಥಿವಿಗಳನ್ನು ಉಷಸ್ಸಿನ **ಪಿತೃ**ಗಳೆಂದು ಕರೆದಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜನಿತ್ರೀ**—ಜನೀ ಪ್ರಾದುರ್ಭಾವೇ. ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವ-ಲಾದೇಃ** ಎಂಬುದರಿಂದ ಇಡಾಗಮ. ಸ್ತ್ರೀತ್ವವಿವಕ್ಷಾಮಾಡಿದಾಗ **ಋನ್ನೇಭ್ಯೋ ಙೀಪ್** ಎಂಬುದರಿಂದ ಙೀಪ್. ಯಣಾದೇಶ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಅಕೃತ**—ಡುಕೃಞ್ ಕರಣೇ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಹಿಂದಿನ ಮಂತ್ರದಲ್ಲಿ ವಿವರಿಸಿದಂತೆ ಚ್ಲಿಗೆ ಲುಕ್. ನಿಘಾತಸ್ವರ ಬರುತ್ತದೆ.

**ಪ್ರಥತೇ**—ಪ್ರಥ ಪ್ರಖ್ಯಾನೇ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತವ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿತರಮ್**—ತೄ ಪ್ಲವನತರಣಯೋಃ ಧಾತು. ಪಚಾದಿನಿಬಂಧನವಾಗಿ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ ರಪರವಾಗಿ ಬರುತ್ತದೆ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವರೀಯಃ**—ಅತಿಶಯೇನ ಉರು ವರೀಯಃ. ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. ಇದು ಪರವಾದಾಗ **ಪ್ರಿಯಸ್ಥಿರಸ್ಫಿರೋರು—**(ಪಾ. ಸೂ. ೬-೪-೧೫೭) ಎಂಬುದರಿಂದ ಉರು ಎಂಬುದಕ್ಕೆ ವರ್ ಆದೇಶ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಉಭಾ—ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಪ್ರಥಮಾ ದ್ವಿವಚನ ಯಾ ಷಷ್ಠೀದ್ವಿವಚನ) ಆಕಾರಾದೇಶ. ಹೀಗೆಯೇ ಉಪಸ್ಥಾ ಎಂಬಲ್ಲಿಯೂ ಸಪ್ತಮಿಗೆ ಆಕಾರಾದೇಶ.

**ಪೃಣಂತೀ**—ಪೄ ಪಾಲನಪೂರಣಯೋಃ ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶತೃ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ**—ಎಂಬುದರಿಂದ ಶ್ನಾ ವಿಕರಣ. ಪ್ವಾದಿಯಲ್ಲಿ ಸೇರಿರುವುದರಿಂದ **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಶ್ನಾಭ್ಯಸ್ತಯೋರಾತಃ—**(ಪಾ. ಸೂ. ೬-೪-೧೧೨) ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಲೋಪ. **ಉಗಿತಶ್ಚ**—ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್ ನುಮಾಗಮ. ಋಕಾರದ ಪರದಲ್ಲಿರುವುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಶತೃಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಏವೇದೇಷಾ ಪುರುತಮಾ ದೃಶೇ ಕಂ ನಾಜಾಮಿಂ ನ ಪರಿ ವೃಣಕ್ತಿ ಜಾಮಿಂ ।
ಅರೇಪಸಾ ತನ್ವಾ ೩ ಶಾಶದಾನಾ ನಾರ್ಭಾದೀಷತೇ ನ ಮಹೋ
ವಿಭಾತೀ ॥ ೬ ॥

॥ ಪದಪಾಠಃ ॥

ಏವ । ಇತ್ । ಏಷಾ । ಪುರುಽತಮಾ । ದೃಶೇ । ಕಂ । ನ । ಅಜಾಮಿಂ । ನ । ಪರಿ । ವೃಣಕ್ತಿ । ಜಾಮಿಂ ।
ಅರೇಪಸಾ । ತನ್ವಾ । ಶಾಶದಾನಾ । ನ । ಅರ್ಭಾತ್ । ಈಷತೇ । ನ । ಮಹಃ । ವಿಽಭಾತೀ ॥ ೬ ॥

॥ ಸಾಯಣಭಾಷ್ಯಂ ॥

ಏಷೋಷಾ ಏವೇತ್ । ಇಚ್ಛಬ್ದ ಏವಕಾರಾರ್ಥಃ । ಏವಮೇವೇದಾನೀಂಭಾಸಮಾನಪ್ರಕಾರೇಣೈವ ಪುರುತಮಾ ವಿಪುಲತಮಾತ್ಯಂತವಿಸ್ತೃತಾ ಸತ್ಯಜಾಮಿಂ ವಿಜಾತೀಯಂ ಮನುಷ್ಯಾದಿಜಾತಿಂ ನ ಪರಿ ವೃಣಕ್ತಿ । ಪರಿತಃ ಸರ್ವತೋ ನ ವರ್ಜಯತಿ । ತಥಾ ಜಾಮಿಂ ಸಜಾತೀಯಂ ದೇವಜಾತಿಂ ನ ಪರಿ ವೃಣಕ್ತಿ । ನ ಪರಿವರ್ಜಯತಿ । ಮನುಷ್ಯಾದಿಕಂ ದೇವಾದಿಕಂ ಚ ತದುಪಲಕ್ಷಿತಂ ಲೋಕದ್ವಯಂ ವಾ ಕಾರ್ತ್ಸ್ನ್ಯೇನ ಪ್ರಕಾಶಯತೀತ್ಯರ್ಥಃ । ಕಿಮರ್ಥಮಿತಿ ತದುಚ್ಯತೇ । ದೃಶೇ ಕಂ ಸುಖೇನ ಸರ್ವೇಷಾಂ ದರ್ಶನಾಯ । ಸುಖಂ ಯಥಾ ಭವತಿ ತಥಾ ಸರ್ವಾನ್ದರ್ಶಯಿತುಂ ವಾ । ಕಿಂಚಾರೇಪಸಾಪಾಪಯಾ ನಿರ್ಮಲಯಾ ತನ್ವಾ ಶರೀರೇಣ ಶಾಶದಾನಾ ಶಾಶಾದ್ಯಮಾನಾ । ಶಾಶದಾನಃ ಶಾಶಾದ್ಯಮಾನ ಇತಿ ಯಾಸ್ಕಃ । ನಿ. ೬-೧೬ । ಸ್ಪಷ್ಟತಾಂ ಗಚ್ಛಂತೀತ್ಯರ್ಥಃ । ವಿಭಾತೀ ವಿಶೇಷೇಣ ಪ್ರಕಾಶಯಂತೀ ಸಾರ್ಭಾದಲ್ಪಾತ್ಪೃತ್ತಿಕಾದೇಃ ಸಕಾಶಾನ್ನೇಷತೇ । ನ ಗಚ್ಛತಿ । ತಮಪಿ ಪ್ರಕಾಶಯತಿ । ತಥಾ ಮಹೋ ಮಹತೋ ಮೇರ್ವಾದೇಃ ಸಕಾಶಾನ್ನೇಷತೇ । ನ ಗಚ್ಛತಿ । ತಮಪಿ ಪ್ರಕಾಶಯತಿ । ಪೂರ್ವಂ ಲೋಕದ್ವಯಂ ಪ್ರಕಾಶತ ಇತ್ಯುಕ್ತಂ । ಇದಾನೀಮಸ್ಮಿಁಲ್ಲೋಕೇ ಪರಮಾಣ್ವಾದಿ ಪರ್ವತಪರ್ಯಂತಂ ಕೃತ್ಸ್ನಂ ಪ್ರಕಾಶಯತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಏಷಾ—ಈ ಉಷಸ್ಸು । **ಏವ ಇತ್**—ಇದೇರೀತಿಯಾಗಿ । **ಪುರುತಮಾ**—ಅತ್ಯಂತ ವಿಸ್ತೃತಳಾಗಿ । **ಅಜಾಮಿಂ**—ವಿಜಾತೀಯರಾದ ಮನುಷ್ಯಾದಿಗಳನ್ನು (ಮನುಷ್ಯ ಲೋಕವನ್ನು) । **ಕಂ ದೃಶೇ**—ಸುಖವಾದ ದರ್ಶನಕ್ಕಾಗಿ । **ನ ಪರಿ ವೃಣಕ್ತಿ**—ಉದಾಸೀನ ಮಾಡುವುದಿಲ್ಲ; । **ಜಾಮಿಂ**—ಸಜಾತೀಯವಾದ ದೇವತೆಗಳನ್ನೂ

(ದೇವಲೋಕವನ್ನೂ) | **ನ (ಪರಿ ವೃಣಕ್ತಿ)**—ಉದಾಸೀನ ಮಾಡುವುದಿಲ್ಲ | **ಅರೇಪಸಾ**—ಪಾಪರಹಿತವಾದ (ಶುದ್ಧವಾದ) | **ತನ್ವಾ**—ಶರೀರದಿಂದ | **ಶಾಶದಾನಾ**—ಪ್ರಕಟಳಾಗಿ | **ವಿಭಾತೀ**—ವಿಶೇಷ ಪ್ರಕಾಶಳಾಗಿ (ಉಷೆಯು) | **ಅರ್ಭಾತ್**—ಅತ್ಯಲ್ಪ ಪದಾರ್ಥದಿಂದಲೂ | **ನ ಈಷತೇ**—ಹೋಗುವುದಿಲ್ಲ | **ಮಹಃ**—ಅತಿ ಮಹತ್ಪದಾರ್ಥದಿಂದಲೂ | **ನ (ಈಷತೇ)**—ಹೋಗುವುದಿಲ್ಲ.

॥ ಭಾವಾರ್ಥ ॥

ಈ ಉಷೆಯು ಇದೇರೀತಿ ಅತ್ಯಂತ ವಿಸ್ತೃತೆ (ಪ್ರಕಾಶ)ಳಾಗಿ ವಿಜಾತೀಯರಾದ (ಮನುಷ್ಯರ ಲೋಕವನ್ನಾಗಲೀ), ಸಜಾತೀಯರಾದ (ದೇವತೆಗಳ ಲೋಕವನ್ನಾಗಲೀ) ಬಿಡದೇ, ಶುದ್ಧವಾದ ಶರೀರದಿಂದ ವ್ಯಕ್ತಳಾಗಿ, ಹೆಚ್ಚು ಪ್ರಕಾಶವುಳ್ಳವಳಾಗಿ, ಚಿಕ್ಕದು ದೊಡ್ಡದು (ಎಂಬ ವ್ಯತ್ಯಾಸವಿಲ್ಲದೇ ಎಲ್ಲಾ ಪದಾರ್ಥಗಳನ್ನೂ) ಬೆಳಗುತ್ತಾಳೆ.

## English Translation.

Verily she, the wide-expanded Ushas, neglects not (to give) the joy of sight to those of her own or of a different nature : visible in her faultless person, and brightly shining, she passes not by the little or the great.

॥ ವಿಶೇಷವಿಷಯಗಳು ॥

**ಜಾಮಿಂ ಅಜಾಮಿಂ** | ಜಾಮಿ ಶಬ್ದಕ್ಕೆ ಸಜಾತೀಯರಾದ ದೇವತೆಗಳೆಂದೂ **ಅಜಾಮಿ** ಶಬ್ದಕ್ಕೆ ವಿಜಾತೀಯರಾದ ಮಾನವಾದಿಗಳೆಂದೂ ಅರ್ಥಮಾಡಿದೆ. ನಿರುಕ್ತಕಾರರು **ಜಾಮಿ** ಶಬ್ದಕ್ಕೆ **ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ | ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ.** (ನಿ. ೩-೬) ಇತರನು ಇವಳಲ್ಲಿ ಮಕ್ಕಳನ್ನೂ ಉತ್ಪನ್ನ ಮಾಡುವಂತೆ ಸಹಾಯಮಾಡುತ್ತಾನೆ. ಎಂಬ ಅಭಿಪ್ರಾಯವನ್ನು ಹೇಳುವುದೂ ಹುಟ್ಟು ಎಂದರ್ಥವನ್ನು ಕೊಡುವ **ಜನ್** ಧಾತುವಿನಿಂದ ನಿಷ್ಪನ್ನವಾದುದೂ ಆಗಿ **ಜಾಮಿ** ಎಂಬ ವ್ಯುತ್ಪತ್ತಿಯು ಒಂದು ವಿಧ ; ಅಥವಾ ಭರ್ತೃವಿನ ಮನೆಗೆ ಹೋಗುವವಳು ಎಂದು ಅಭಿಪ್ರಾಯವನ್ನು ಕೊಡುವುದೂ, ಹೋಗು ಎಂದರ್ಥವನ್ನು ಕೊಡುವ **ಜಮ್** ಧಾತುವಿನಿಂದ ನಿಷ್ಪನ್ನವಾದುದೂ ಆಗಿ **ಜಾಮಿ** ವ್ಯುತ್ಪತ್ತಿಯು ಇನ್ನೊಂದು ವಿಧ. ಈ ಎರಡು ವಿವರಣೆಯ ಪ್ರಕಾರವೂ **ಜಾಮಿ** ಎನ್ನುವ ಪದಕ್ಕೆ **ಸಹೋದರಿ** ಎಂದರ್ಥವೆಂದು ನಿರುಕ್ತಕಾರರ ನಿರ್ವಚನದಿಂದ ತಿಳಿಯುತ್ತದೆ. ಈ ಅರ್ಥವನ್ನು ಸಮರ್ಥಿಸುವಂತೆ,

**ನ ಜಾಮಯೇ ತಾನ್ವೋ ರಿಕ್ಥಮಾರೈಕ್ಚಕಾರ ಗರ್ಭಂ ಸನಿತುರ್ನಿಧಾನಂ |**
**ಯದೀ ಮಾತರೋ ಜನಯಂತ ವಹ್ನಿಮನ್ಯಃ ಕರ್ತಾ ಸುಕೃತೋರನ್ಯ ಋಂಧನ್ ||**

(ಋ. ಸಂ. ೩-೩೧-೨)

ಎಂಬ ಋಕ್ಕನ್ನು ಉದಹರಿಸಿ **ಜಾಮಿ** ಶಬ್ದಕ್ಕೆ ಸಹೋದರಿಯೆಂದರ್ಥಮಾಡಿರುವರು. ಇದರಂತೆಯೇ, ಈ ಭಾಗದಲ್ಲಿ ಹಿಂದಿನ ಸೂಕ್ತದಲ್ಲಿ ವಿವರಿಸುವ,

**ಭಗಸ್ಯ ಸ್ವಸಾ ವರುಣಸ್ಯ ಜಾಮಿರುಷಃ ಸೂನೃತೇ ಪ್ರಥಮಾ ಜರಸ್ವ ।**
**ಪಶ್ಚಾ ಸ ದಧ್ಯಾ ಯೋ ಅಘಸ್ಯ ಧಾತಾ ಜಯೇಮ ತಂ ದಕ್ಷಿಣಯಾ ರಥೇನ ।**

(ಋ ಸಂ. ೧-೧೨೩-೫)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ **ಜಾಮಿ** ಶಬ್ದಕ್ಕೆ ಸಹೋದರಿಯೆಂಬ ಅರ್ಥವೇ ಇದೆ.

ಆದರೆ ಪ್ರಕೃತವಾದ ಯಕ್ಕಿನಲ್ಲಿ ಈ ಪದದ ಅರ್ಥವು ಹೆಚ್ಚು ವಿಸ್ತೃತವಾಗಿ ಬಂಧುಗಳು ಎಂದಾಗಿದೆ. **ಜಾಮಿಂ ಅಜಾಮಿಂ ।** ಬಂಧುಗಳಾದ ದೇವತೆಗಳನ್ನೂ ಮತ್ತು ಬಂಧುಗಳಲ್ಲದ ಮನುಷ್ಯಾದಿಗಳನ್ನೂ ಎಂದರ್ಥ. ಇದರಂತೆಯೇ ಬಂಧುಗಳು ಎಂಬ ವಿಸ್ತೃತವಾದ ಅರ್ಥವು.

**ಜಾಮಿಃ ಸಿಂಧೂನಾಂ ಭ್ರಾತೇವ ಸ್ವಸ್ರಾಮಿಭ್ಯಾನ್ನ ರಾಜಾ ವನಾನ್ಯತ್ತಿ ।**
**ಯದ್ವಾತಜೂತೋ ವನಾ ವ್ಯಸ್ಥಾದಗ್ನಿರ್ಹ ದಾತಿ ರೋಮಾ ಪೃಥಿವ್ಯಾಃ ॥**

(ಋ. ಸಂ. ೧-೬೫-೪)

**ಕಸ್ತೇ ಜಾಮಿರ್ಜನಾನಾಮಗ್ನೇ ಕೋ ದಾಶ್ವಧ್ವರಃ । ಕೋ ಹ ಕಸ್ಮಿನ್ನಸಿ ಶ್ರಿತಃ ॥**

(ಋ. ಸಂ. ೧-೭೫-೩)

ಇತ್ಯಾದಿ ಋಕ್ಕುಗಳಲ್ಲಿಯೂ ಈ ಋಕ್ಕಿನಲ್ಲಿರುವಂತೆಯೇ **ಬಂಧುಗಳು** ಎಂಬರ್ಥವನ್ನು ಕೊಡುತ್ತದೆ.

**ನ ಪರಿವೃಣಕ್ತಿ—ನ ಪರಿವರ್ಜಯತಿ । ಮನುಷ್ಯಾದಿಕಂ ದೇವಾದಿಕಂ ಚ ತದುಪಲಕ್ಷಿತಂ ಲೋಕದ್ವಯಂ ವಾ ಕಾರ್ತ್ಸ್ನ್ಯೇನ ಪ್ರಕಾಶಯತೀತ್ಯರ್ಥಃ ।** ದೇವ ಮಾನವಾದಿಗಳಿಂದ ವ್ಯಾಪ್ತವಾದ ಲೋಕ ದ್ವಯಗಳನ್ನೂ ಭೇದವಿಲ್ಲದೆ ಪ್ರಕಾಶಪಡಿಸುತ್ತಾಳೆಂದರ್ಥ.

**ಅರೇಪಸಾ—ಅಪಾಪಯಾ ನಿರ್ಮಲಯಾ ತನ್ವಾ ।** ಪಾಪರಹಿತವಾದ ಎಂದರೆ ಶುದ್ಧವಾದ ದೇಹದಿಂದ ಎಂದರ್ಥ. ನಿರುಕ್ತಕಾರರು

**ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ ೩ ನಾಮಭಿಃ ಸ್ವೈಃ ।**
**ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ॥**

(ಋ. ಸಂ. ೧-೧೮೧-೪)

ಎಂಬ ಋಕ್ಕನ್ನುದಹರಿಸಿ ಅದರಲ್ಲಿರುವ **ಅರೇಪಸಾ ತನ್ವಾ** ಎಂಬ ಪದಕ್ಕೆ **ಅಪಾಪಯಾ ತನ್ವಾ** ಪಾಪದಿಂದ ಸಂಪರ್ಕವಾಗದ ದೇಹದೊಡನೆ ಎಂದು ಅರ್ಥಮಾಡುವಂತೆ ಇಲ್ಲಿಯೂ ಹೇಳಬೇಕು.

॥ ವ್ಯಾಕರಣಪ್ರಕ್ರಿಯಾ ॥

**ಪುರುತಮಾ—**ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ಸ್ತ್ರೀತ್ವದಲ್ಲಿ ಅದಂತವನ್ನು ನಿಮಿತ್ತೀಕರಿಸಿ ಟಾಪ್.

**ದೃಶೇ—**ದೃಶಿರ್ ಪ್ರೇಕ್ಷಣೇ ಧಾತು. **ದೃಶೇ ವಿಖ್ಯೇ ಚ—**(ಪಾ. ಸೂ. ೩-೧-೧೧) ಎಂಬುದರಿಂದ ದೃಶೇ ಎಂದು ನಿಪಾತಿತವಾಗಿದೆ. ಏಜಂತವಾದುದರಿಂದ ಅವ್ಯಯವಾಗುತ್ತದೆ.

**ಅಜಾಮಿಂ**—ನ ಜಾಮಿಃ ಅಜಾಮಿಃ ತಮ್. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ವೃಣಕ್ತಿ**—ವೃಜೀ ವರ್ಜನೇ ಧಾತು. ರುಧಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ರುಧಾದಿಭ್ಯಃ ಶ್ನಮ್**—(ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. **ಮಿದಚೋಂತ್ಯಾತ್ಪರಃ**—ಎಂಬುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಚೋಃ ಕುಃ**—ಎಂಬುದರಿಂದ ಧಾತು ಜಕಾರಕ್ಕೆ ಕುತ್ವ ಚರ್ತ್ವ. ಖುಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಅತಿಜಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರೇಪಸಾ**—ನ ವಿದ್ಯತೇ ರೇಪಃ ಯಸ್ಯಾ ಸಾಃ ಅರೇಪಾಃ ತಯಾ ಅರೇಪಸಾ **ನಞ್ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ತನ್ವಾ**—ತೃತೀಯಾ ಏಕವಚನ ಪರವಾದಾಗ **ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್**—ಎಂಬ ವಚನದಿಂದ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಅದಕ್ಕೆ ಸ್ವರಿತಸ್ವರ ಬರುತ್ತದೆ.

**ಶಾಶದಾನಾ**—೧-೧೨೩-೧೦ ನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ಅನುನಾಸಿಕತ್ವ ಮಾತ್ರ ಇಲ್ಲಿ ಬರುವುದಿಲ್ಲ.

**ಈಷತೇ**—ಈಷ ಗತಿಹಿಂಸಾದರ್ಶನೇಷು ಧಾತು. ಭ್ವಾದಿ, ಲಟ್ ಪ್ರಥಮಪುರುಷ ಏಕವಚನದಲ್ಲಿ ಈಷತೇ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ ಶಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತವೆ.

**ಮಹಃ**—ಮಹತಃ ಎಂದು ರೂಪವಾದಾಗ ಛಾಂದಸವಾಗಿ ತಕಾರಲೋಪ ಬರುತ್ತದೆ. ಅಥವಾ ಮಹ ಪೂಜಯಾಂ ಧಾತು. **ಕ್ವಿಪ್ ಚ**—ಎಂಬುದರಿಂದ ಕ್ವಿಪ್ ಪ್ರತ್ಯಯ. ಪಂಚಮೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿಭಾತೀ**—ಭಾ ದೀಪ್ತೌ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ಉಗಿತಶ್ಚ**—(ಪಾ. ಸೂ. ೪-೧-೬) ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ನುಮ್ ರಹಿತವಾದ ಶತೃವಿನ ಪರದಲ್ಲಿ ಙೀಪ್ ಬಂದುದರಿಂದ **ಶತುರನುನೋ-ನದ್ಯಜಾದೀ**—(ಪಾ. ಸೂ. ೬-೧-೧-೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಅಭ್ರಾತೇವ ಪುಂಸ ಏತಿ ಪ್ರತೀಚೀ ಗರ್ತಾರುಗಿವ ಸನಯೇ ಧನಾನಾಂ ।
ಜಾಯೇವ ಪತ್ಯ ಉಶತೀ ಸುವಾಸಾ ಉಷಾ ಹಸ್ರೇವ ನಿ ರಿಣೀತೇ
ಅಪ್ಸಃ ॥ ೭ ॥

॥ ಪದಪಾಠಃ ॥

ಅಭ್ರಾತಾಽಇವ । ಪುಂಸಃ । ಏತಿ । ಪ್ರತೀಚೀ । ಗರ್ತಽಅರುಗಿವ । ಸನಯೇ । ಧನಾನಾಂ ।
ಜಾಯಾಽಇವ । ಪತ್ಯೇ । ಉಶತೀ । ಸುಽವಾಸಾಃ । ಉಷಾಃ । ಹಸ್ರಾಽಇವ । ನಿ । ರಿಣೀತೇ । ಅಪ್ಸಃ ॥ ೭ ॥

॥ ಸಾಯಣಭಾಷ್ಯಂ ॥

ಅಭ್ರಾತೇವ ಭ್ರಾತೃರಹಿತೇವ ಪುಂಸಃ ಪಿತ್ರಾದೀನ್ಪ್ರತಿ ಪ್ರತೀಚೀ ಸ್ವಕೀಯಸ್ಥಾನಾತ್ಪ್ರತಿನಿವೃತ್ತಮುಖೀ ಸತ್ಯೇತಿ । ಗಚ್ಛತಿ । ಯಥಾ ಲೋಕೇ ಭ್ರಾತೃರಹಿತಾ ಯೋಷಿತ್ಸ್ವೋಚಿತವಾಸೋಽಲಂಕಾರಾದಿಲಾಭಾಯ ಪಿತ್ರ್ನೇತಿ । ಸತಿ ಭ್ರಾತರಿ ಸ ಏವೋಚಿತಪ್ರದಾನಾದಿನಾ ಸಮ್ಯಕ್ ತೋಷಯತಿ । ತದಭಾವಾತ್ಪಿತರಮೇವ ಪ್ರಾಪ್ನೋತಿ । ಯದ್ವಾ । ಸತಿ ಸ್ವಭ್ರಾತರಿ ಸ ಏವ ಪಿತುಃ ಪಿಂಡದಾನಾದಿಕಂ ಸಂತಾನಕೃತ್ಯಂ ಕರೋತಿ । ತಸ್ಯಾಭಾವಾತ್ಸ್ವಯಮೇವ ತತ್ಕರ್ತುಂ ಪಿತ್ರಾದೀನ್ಗಚ್ಛತಿ । ತದ್ವದಿಯಮುಷಾ ಅಪಿ ಸ್ವೋಚಿತಪ್ರಕಾಶಾದಿ ಲಾಭಾಯ ಸ್ವಪ್ರಕಾಶದಾನಾಯ ವಾ ಪಿತೃಭೂತಂ ಸೂರ್ಯಮಾಭಿಮುಖ್ಯೇನ ಗಚ್ಛತಿ । ಅಯಮೇಕೋ ದೃಷ್ಟಾಂತಃ । ತಥಾ ಧನಾನಾಂ ಸನಯೇ ಗರ್ತಾರುಗಿವೇತ್ಯಪರೋ ದೃಷ್ಟಾಂತಃ । ಗರ್ತ ಇತಿ ಗೃಹನಾಮ ಕೃದರೋ ಗರ್ತ ಇತಿ ತನ್ನಾಮಸು ಪಾಠಾತ್ । ಅತ್ರೌಚಿತ್ಯೇನ ರಾಜಪುರುಷೈರ್ನ್ಯಾಯ- ನಿರ್ಣೇತೃಭಿಶ್ಚಾಧಿಷ್ಠಿತಂ ಸ್ಥಾನಮುಚ್ಯತೇ । ತದಾರೋಹತೀತಿ ಗರ್ತಾರುಕ್ । ಯಥಾ ಲೋಕೇ ಕಾಚಿದ್ಗತಭರ್ತೃಕಾ ಯೋಷಿದ್ಧನಾನಾಂ ಸ್ವಕೀಯರಿಕ್ಥಾನಾಂ ಸನಯೇ ಲಾಭಾಯ ಗರ್ತಮಾಗಚ್ಛತಿ । ತಾಂ ತು ಸಭ್ಯಾ ವಿಚಾರ್ಯ ಯದೀಯಂ ರಿಕ್ಥಂ ಲಭತೇ ಚೇದಕ್ಷೈಃ ಸಂತಾಡ್ಯ ತದೀಯಂ ಧನಂ ವಿತರಂತಿ । ತಥೇಯಮಪಿ ಧನಾನಾಂ ಪ್ರೀಣನಸಾಧನಾನಾಂ ಪ್ರಕಾಶಾನಾಂ ಸನಯೇ ಲಾಭಾಯ ಗರ್ತಮಾಕಾಶಂ ಸೂರ್ಯನಿವಾಸಸ್ಥಾನಮಾರೋಹತಿ । ದೇಶವಿಶೇಷಾಚಾರಮಪೇಕ್ಷ್ಯೈವಂ ದೃಷ್ಟಾಂತಿತಂ। ಕಿಂಚ ಪತ್ಯ ಉಶತೀ ಕಾಮಯಮಾನಾ ಸುವಾಸಾ ಜಾಯೇವ । ಅಯಮಪರೋ ದೃಷ್ಟಾಂತಃ । ಯಥಾ ಚ ಲೋಕೇ ಸುವಾಸಾ ದುಕೂಲಾದಿಶೋಭನವಸನಾ ಸ್ವಲಂಕೃತಾ ಪೂರ್ವಂ ರಜೋದರ್ಶನ- ಸಮಯೇ ಮಲಿನವಸ್ತ್ರಾ ಸತೀ ಸ್ನಾನಾನಂತರಂ ಶೋಭನವಸ್ತ್ರಾಭರಣಾದಿನಾ ಶೋಭಮಾನಾ ವಿಶೇಷೇಣ

**ಪತಿಂ ಭೋಗಾಯ ಕಾಂಕ್ಷಂತೀ ತೇನ ಸಹ ಸಂಕ್ರೀಡತೇ ತಥೇಯಮುಷಾ ಅತಿನೈಶೇನಾಂಧಕಾರೇಣಾ-ವೃತತ್ವಾನ್ಮಲಿನವಸನಾಪಿ ಪ್ರಭಾತೇ ಸ್ವತೇಜಸಾವೃತತ್ವಾತ್ಸುವಸನಾ ಸತೀ ಪತಿಸ್ಥಾನೀಯೇನ ಸೂರ್ಯೇಣ ಸಾಕಂ ಸಂಕ್ರೀಡಮಾನಾ ಹಸ್ರೇವ ಹಸನೇನಾಪ್ಸೋ ದಂತಸ್ಥಾನೀಯಾನಿ ರೂಪಾಣಿ ನೀಲಪೀತಾದೀನಿ । ಯದ್ವಾ । ನಿರೂಪ್ಯಮಾಣಾನಿ ಪದಾರ್ಥಜಾತಾನಿ ನಿ ರಿಣೀತೇ । ನಿತರಾಂ ರಿಣೀತೇ ಗಮಯತಿ । ಪ್ರಕಾಶಯತೀತ್ಯರ್ಥಃ । ಯಥಾ ಲೋಕೇ ಕಾಚಿದ್ರಮಣೀಯಾ ಯೋಷಿತ್ಸ್ಮಿತವ್ಯಾಜೇನ ದಂತಾನ್ವಿವೃಣುತೇ ತಥೇಯಮಪಿ ಸರ್ವಾಣಿ ರೂಪಾಣಿ ಪ್ರಕಾಶಯತೀತ್ಯರ್ಥಃ । ಅಯಂ ಮಂತ್ರೋ ನಿರುಕ್ತೇ ಸ್ಪಷ್ಟಂ ವ್ಯಾಖ್ಯಾತಃ । ಅಭ್ರಾತೃಕೇವ ಪುಂಸಃ ಪಿತೄನೇತ್ಯಭಿಮುಖೀ ಸಂತಾನಕರ್ಮಣೇ ಪಿಂಡದಾನಾಯ ನ ಪತಿಂ ಗರ್ತಾರೋಹಿಣೀವ ಧನಲಾಭಾಯ ದಾಕ್ಷಿಣಾಜಾ । ಗರ್ತಃ ಸಭಾಸ್ಥಾಣುರ್ಗೃಣಾತೇಃ ಸತ್ಯಸಂಗರೋ ಭವತಿ । ತಂ ತತ್ರ ಯಾಪುತ್ರಾ ಯಾಪತಿಕಾ ಸಾರೋಹತಿ ತಾಂ ತತ್ರಾಕ್ಷೈರಾಘ್ನಂತಿ ಸಾ ರಿಕ್ಥಂ ಲಭತ ಇತಿ । ಜಾಯೇವ ಪತ್ಯೇ ಕಾಮಯಮಾನಾ ಸುವಾಸಾ ಋತುಕಾಲೇಷೂಷಾ ಹಸನೇವ ದಂತಾನ್ವಿವೃಣುತೇ । ನಿ. ೩-೫ । ಇತಿ ಚ ॥**

॥ ಪ್ರತಿಪದಾರ್ಥ ॥

**ಉಷಾಃ**—ಉಷೋದೇವಿಯು । **ಅಭ್ರಾತಾ**—ಭ್ರಾತೃರಹಿತಳಾದ ಸ್ತ್ರೀಯು । **ಪುಂಸಃ ಇವ**—(ಅಲಂಕಾರಾದಿ ಲಾಭಕ್ಕಾಗಿ) ಪಿತ್ರಾದಿಗಳನ್ನು (ಪ್ರಾಪ್ತಳಾಗುವಂತೆ, ಅಥವಾ ಭ್ರಾತೃಕರ್ತವ್ಯವಾದ) ಪಿತೃಗಳಿಗೆ(ಮಾಡಬೇಕಾದ ಕರ್ಮಗಳನ್ನು ಮಾಡುವಂತೆ) । (ಮತ್ತೂ) **ಧನಾನಾಂ**—ಧನಾದಿಗಳ (ಪ್ರೀತಿಸಾಧಕವಾದ ಪ್ರಕಾಶದ) । **ಸನಯೇ**—ಪ್ರಾಪ್ತಿಗಾಗಿ । **ಗರ್ತಾರುಕ್ ಇವ**—(ನ್ಯಾಯ)ಸ್ಥಾನಕ್ಕೆ ಹೋಗುವ (ಅಪುತ್ರಳೂ, ಅಭರ್ತೃಕಳೂ ಆದ ಸ್ತ್ರೀಯಂತೆ) । **ಪ್ರತೀಚೀ**—ಪಶ್ಚಿಮ ದಿಕ್ಕಿಗೆ ಅಭಿಮುಖವಾಗಿ (ಸೂರ್ಯನಿಂದ ಪ್ರಕಾಶವನ್ನು ಪಡೆಯುವುದಕ್ಕೆ ಅಥವಾ ಸ್ವಪ್ರಕಾಶ ದಾನಮಾಡುವುದಕ್ಕೆ । **ಏತಿ**—ಹೋಗುತ್ತಾಳೆ । (**ಕಿಂ ಚ**—ಮತ್ತೂ) । **ಪತ್ಯೇ ಉಶತೀ**—ಪತಿಯನ್ನು ಕಾಮಿಸುವ (ಸೂರ್ಯನನ್ನು ಅಪೇಕ್ಷಿಸುವವಳಾಗಿ) । **ಸುವಾಸಾಃ**—ಶುಭ್ರವಸ್ತ್ರಳಾಗಿ (ಸ್ವಪ್ರಕಾಶಾವೃತಳಾಗಿ) । **ಜಾಯಾ ಇವ**—ಪತ್ನಿಯು ಭೋಗಾಪೇಕ್ಷೆಯಿಂದ (ಪತಿಯ ಅಭಿಮುಖಳಾಗಿ) ಹೋಗುವಂತೆ । (**ಉಷಾಃ**—ಉಷೋದೇವಿಯು) । **ಹಸ್ರಾ ಇವ**—ನಗುತ್ತಿರುವವಳಂತೆ । **ಅಪ್ಸಃ**—ನೀಲಪೀತಾದಿರೂಪಗಳನ್ನು (ತನ್ನಿಂದ ಪ್ರಕಾಶ್ಯವಾದ ಪದಾರ್ಥಗಳನ್ನು) । **ನಿ ರಿಣೀತೇ**—ಚೆನ್ನಾಗಿ ಪ್ರಕಾಶಗೊಳಿಸುತ್ತಾಳೆ.

॥ ಭಾವಾರ್ಥ ॥

ಭ್ರಾತೃರಹಿತಳಾದ ಸ್ತ್ರೀಯು (ಅಲಂಕಾರಾದಿ ಲಾಭಕ್ಕೋಸ್ಕರ) ಪಿತ್ರಾದಿಗಳನ್ನು ಪ್ರಾಪ್ತಳಾಗುವಂತೆ ಮತ್ತು (ಅಪುತ್ರಳೂ, ಅಭರ್ತೃಕಳೂ ಆದ) ಸ್ತ್ರೀಯು ಧನಾದಿ ಲಾಭಕ್ಕೋಸ್ಕರ (ನ್ಯಾಯ) ಸ್ಥಾನಕ್ಕೆ ಹೋಗುವಂತೆ, ಉಷೆಯೂ ಸೂರ್ಯನಿಗಭಿಮುಖವಾಗಿ ಹೋಗುತ್ತಾಳೆ; ಮತ್ತು ಪತಿಕಾಮಳಾದ ಸ್ತ್ರೀಯು ಶುಭ್ರವಸ್ತ್ರಳಾಗಿ (ಪತಿಯ ಸಮೀಪಕ್ಕೆ ಹೋಗುವಂತೆ) ಉಷೆಯು (ಸ್ಮಿತವಕ್ತ್ರಳಾಗಿ ದಂತಾದಿಗಳನ್ನು ಪ್ರದರ್ಶಿಸುವಂತೆ) ನೀಲಪೀತಾದಿರೂಪ ವಿಶೇಷಗಳನ್ನು ಪ್ರಕಾಶಪಡಿಸುತ್ತಾಳೆ.

English Translation.

She goes to the west, as (a woman who has) no brother (repairs) to her male (relatives); and like one ascending the hall (of justice) for the recovery of property, (she mounts in the sky to claim her lustre): and like a wife desirous to please her husband, Ushas puts on becoming attire, and smiling as it were, displays her charms.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ನಿರುಕ್ತವು ಈ ರೀತಿಯಿದೆ—

**ಅಭ್ರಾತೃಕೇವ ಪುಂಸಃ ಪಿತೄನೇತ್ಯಭಿಮುಖೀ ಸಂತಾನಕರ್ಮಣೇ ಪಿಂಡದಾನಾಯ ಪತಿಂ। ಗರ್ತಾರೋಹಿಣೀವ ಧನಲಾಭಾಯ ದಾಕ್ಷಿಣಾಜೀ।**

(ನಿ. ೩-೫)

ಭ್ರಾತೃರಹಿತಳಾದ ಸ್ತ್ರೀಯು ತನ್ನ ಪಿತೃವಿನ ಗೃಹಕ್ಕೆ ಪುತ್ರಾದಿಗಳಿಂದ ಮಾಡಲ್ಪಡಬೇಕಾದ ಶುಶ್ರೂಷೆಯನ್ನು ಮಾಡುವುದಕ್ಕೂ ಮತ್ತು ಪಿಂಡಪ್ರದಾನಾದಿಗಳಿಗೂ ಸಹ ಹೋಗುತ್ತಾಳೆ. ಮತ್ತು ದಾಕ್ಷಿಣಾತ್ಯಳಾದ ಸ್ತ್ರೀಯು ತನ್ನ ನ್ಯಾಯವಾದ ಧನಲಾಭಕ್ಕಾಗಿ ನ್ಯಾಯಾಸ್ಥಾನವನ್ನು ಹತ್ತುತ್ತಾಳೆ. ಎಂಬ ಈ ಎರಡು ವಿವರಣೆಗಳೂ ಉಷಸ್ಸಿನ ಆವಿರ್ಭಾವಕ್ಕೆ ಹೋಲಿಸಲ್ಪಟ್ಟಿವೆ. ಈ ಋಕ್ಕಿನಲ್ಲಿ ಒಟ್ಟಿಗೆ ನಾಲ್ಕು ಉಪಮೆಗಳಿವೆ. ಅವು ಯಾವುವೆಂದರೆ,

**ಅಭ್ರಾತೇವ ಪುಂಸ ಇತ್ಯೇಕಾ ;**
**ಗರ್ತಾರೋಹಿಣೀವೇತಿ ದ್ವಿತೀಯಾ ;**
**ಜಾಯೇವ ಪತ್ಯಾ ಇತಿ ತೃತೀಯಾ ;**
**ಹಸ್ರೇವೇತಿ ಚತುರ್ಥೀ ;**

**ಅತ್ರ ಪ್ರಥಮಯೋಪಮಯಾ ಅಭ್ರಾತೇವ ಪುಂಸ ಇತ್ಯನಯಾ ಅಭ್ರಾತೃಕಾಯಾ ಅನಿರ್ವಾಹೋ ಲಿಂಗ್ಯತೇ। ಯಥಾ ಅಭ್ರಾತೃಕಾ ಪಿತ್ರ್ಯನೇವ ಪ್ರತ್ಯೇತಿ ನ ಪತಿಂ ಏವಮುಷಾ ಆದಿತ್ಯಮೇವ ಪ್ರತ್ಯೇತಿ। ಏವಮಭ್ರಾತೃಕಾ ಕನ್ಯಾ ಯಸ್ಮಿನ್ನೇವ ವಂಶೇ ಉತ್ಪನ್ನಾ ಭವತಿ ತಮೇವ ಪ್ರಕಾಶಯತಿ, ವರ್ಧಯತಿ, ನ ಭರ್ತೃವಂಶಂ।**

ಮೊದಲನೆಯದಾಗಿ **ಉಷಸ್ಸಿನ** ವ್ಯವಹಾರವನ್ನು ಭ್ರಾತೃರಹಿತಳಾದ ಸ್ತ್ರೀಯ ವ್ಯವಹಾರಕ್ಕೆ ಹೋಲಿಸಿದೆ. ಅವಳು ಯಾವ ರೀತಿ ತನ್ನ ಭರ್ತೃಗೃಹವನ್ನು ಬಿಟ್ಟು ತನ್ನ ಪಿತೃಗೃಹವನ್ನು ಬೆಳಗಿ ಆ ವಂಶವನ್ನು ವೃದ್ಧಿಮಾಡುತ್ತಾಳೋ ಅದೇ ರೀತಿ ಉಷಸ್ಸೂ ಸಹ ತನ್ನ ಪಿತೃವಾದ ಆದಿತ್ಯನನ್ನು ಸೇರಿ ಅವನ ಮಂಡಲವನ್ನು ಅಧಿಕವಾಗಿ ಪ್ರಕಾಶಿಸುವಂತೆ ಮಾಡುತ್ತಾಳೆ.

ಎರಡನೆಯದಾಗಿ, **ಗರ್ತಾರೋಹಿಣೀವ।** ಧನಲಾಭಕ್ಕಾಗಿ ಗರ್ತವನ್ನು ಹತ್ತಿದ ಸ್ತ್ರೀಯಂತೆ ಉಷಸ್ಸೂ ಸಹ ಸೂರ್ಯನಿಂದ ಪ್ರಕಾಶವನ್ನು ಪಡೆಯುವುದಕ್ಕಾಗಿ ಪಶ್ಚಿಮಾಭಿಮುಖವಾಗಿ ಸರಿಯುತ್ತಾಳೆಂಬುದು ಇನ್ನೊಂದು ಉಪಮಾನ. ಇಲ್ಲಿ **ಗರ್ತ** ವೆಂದರೇನು ಎಂಬುದನ್ನು ನಿರುಕ್ತಕಾರರು ವಿವರಿಸಿದ್ದಾರೆ.

**ಗರ್ತಃ ಸಭಾಸ್ಥಾಣುರ್ಗೃಣಾತೇಃ । ಸತ್ಯಸಂಗರೋ ಭವತಿ । ತಂ ತತ್ರ ಯಾಪುತ್ರಾ ಯಾಪತಿಕಾ ಸಾರೋಹತಿ । ತಾಂ ತತ್ರಾಕ್ಷೈರಾಘ್ನಂತಿ ಸಾ ರಿಕ್ಥಂ ಲಭತೇ । (ನಿ. ೩-೫)**

ಪ್ರಾರ್ಥಿಸು ಎಂಬರ್ಥವನ್ನು ಕೊಡುವ **ಗೃ** ಧಾತುವಿನಿಂದ **ಗರ್ತ** ಶಬ್ದವು ನಿಷ್ಪನ್ನವಾಗಿ **ಸಭಾಸ್ತಂಭ** ಎಂಬ ಅರ್ಥವನ್ನು ಸೂಚಿಸುತ್ತದೆ. ಆ ಸ್ತಂಭದಡಿಯಲ್ಲಿ ನಡೆದ ವ್ಯವಹಾರಗಳೆಲ್ಲವೂ ಸತ್ಯಾತ್ಮಕವಾದುವು. ಪುತ್ರರಹಿತಳೂ, ಪತಿರಹಿತಳೂ ಆದ ಸ್ತ್ರೀಯು ಆ ಸ್ತಂಭದ ಪ್ರದೇಶವನ್ನು ಹತ್ತುವಳು. ಆಗ ಅಲ್ಲಿ ಸಂಬಂಧಿಸಿದವರು ದಾಳಗಳಿಂದ ಹೊಡೆದನಂತರ ಅವಳಿಗೆ ಧನವು ಸಿಕ್ಕುವುದು. ಎಂದು **ಗರ್ತಾರುಕ್** ಎಂಬ ಪದದ ತಾತ್ಪರ್ಯವನ್ನು ಈ ಸಂದರ್ಭಕ್ಕನುಸಾರವಾಗಿ ವಿವರಿಸಿ ಅನಂತರ **ಗರ್ತ** ಶಬ್ದಕ್ಕಿರುವ ಬೇರೆ ಬೇರೆ ಅರ್ಥಗಳನ್ನೂ ಈ ರೀತಿ ತಿಳಿಸಿದ್ದಾರೆ.

**ಸ್ಮಶಾನಸಂಚಯೋಽಪಿ ಗರ್ತ ಉಚ್ಯತೇ ಗುರುತೇರಪಗೂರ್ಣೋ ಭವತಿ ।**

ಎತ್ತರಿಸು ಎಂದರ್ಥವನ್ನು ಕೊಡುವ **ಗುರ್** ಧಾತುವಿನಿಂದ ನಿಷ್ಪನ್ನವಾಗಿ **ಗರ್ತ** ಶಬ್ದವು **ಶ್ಮಶಾನಸಂಚಯ**ವೆಂಬ ಅರ್ಥದಲ್ಲಿಯೂ ಪ್ರಸಿದ್ಧವಾಗಿದೆ, ಎಂದು.

**ನೋಪರಸ್ಯಾವಿಷ್ಕುರ್ಯಾದ್ಯದುಪರಸ್ಯಾವಿಷ್ಕುರ್ಯಾದ್ಗರ್ತೇಷ್ಠಾಃ ಸ್ಯಾತ್ ಪ್ರಮಾಯುಕೋ ಯಜಮಾನಃ ।**

ಎಂಬ ಶ್ರುತಿವಾಕ್ಯವನ್ನುದಹರಿಸಿ ಯಜ್ಞಸ್ತಂಭದ ಮೂಲಭಾಗವನ್ನು ಪ್ರಕಾಶಮಾಡಿ ತೋರಿಸಬಾರದು. ಪ್ರಮಾದದಿಂದ ಹಾಗೇನಾದರೂ ಮಾಡಿದರೆ ಅಂತಹ ಯಜಮಾನನು **ಶ್ಮಶಾನದಲ್ಲಿ** ಮಲಗುತ್ತಾನೆ ಎಂದು **ಗರ್ತ** ಶಬ್ದದ ಅರ್ಥವನ್ನು ತಿಳಿಸಿದ್ದಾರೆ. ಅನಂತರ,

**ರಥೋಽಪಿ ಗರ್ತ ಉಚ್ಯತೇ ಗೃಣಾತೇಃ ಸ್ತುತಿಕರ್ಮಣಃ । ಸ್ತುತತಮಂ ಯಾನಂ ।**

ಸ್ತುತಿಸು ಎಂಬರ್ಥವನ್ನು ಕೊಡುವ **ಗೃ** ಧಾತುವಿನಿಂದ ನಿಷ್ಪನ್ನವಾದ **ಗರ್ತ**ಶಬ್ದವು **ರಥ**ವೆಂಬ ಅರ್ಥದಲ್ಲಿಯೂ ಪ್ರಸಿದ್ಧವಾಗಿದೆ. ಈ ನಿರ್ವಚನವನ್ನು ಹೇಳಿ,

**ಹಿರಣ್ಯರೂಪಮುಷಸೋ ವ್ಯುಷ್ಟಾವಯಃಸ್ಥೂಣಮುದಿತಾ ಸೂರ್ಯಸ್ಯ ।**
**ಆ ರೋಹಥೋ ವರುಣ ಮಿತ್ರ ಗರ್ತಮತಶ್ಚಕ್ಷಾಥೇ ಅದಿತಿಂ ದಿತಿಂ ಚ ॥**

(ಋ. ಸಂ. ೫-೬೨-೮)

ಎಂಬ ಋಕ್ಕನ್ನುದಹರಿಸಿ ಇಲ್ಲಿ **ಗರ್ತ** ಶಬ್ದವು ರಥಪರ್ಯಾಯವಾಗಿದೆಯೆಂದು ತೋರಿಸಿದ್ದಾರೆ

ಅನಂತರ **ಜಾಯೇವ ಪತ್ಯೇ ಕಾಮಯಮಾನಾ ಸುವಾಸಾ ಋತುಕಾಲೇಷು** ಎಂಬ ಮೂರನೆಯ ಉಪಮಾನವನ್ನು ವಿವರಿಸುತ್ತಾರೆ. ವಸ್ತ್ರಾಲಂಕಾರಗಳಿಂದ ಭೂಷಿತಳಾದ ಸ್ತ್ರೀಯು ಸರಿಯಾದ ಋತುಕಾಲಗಳಲ್ಲಿ ತನ್ನ ಪತಿಯ ಆಗಮನವನ್ನು ಆದರದಿಂದ ನಿರೀಕ್ಷಿಸುವ ರೀತಿಯಲ್ಲಿ ತನ್ನ ಕಾಂತಿಯಿಂದ ಪ್ರಕಾಶಿಸುತ್ತಾ ಉಷಸ್ಸು ಆದಿತ್ಯನನ್ನು ನಿರೀಕ್ಷಿಸುತ್ತಿದ್ದಾಳೆ. ಕೊನೆಯದಾಗಿ, **ಹಸ್ರೇವ ನಿರಿಣೀತೇ ಅಪ್ಸಃ । ಹಸನೇವ ದಂತಾನ್ ವಿವೃಣುತೇ ರೂಪಾಣೀತಿ,** ಮುಗುಳುನಗೆಯುಳ್ಳ ಸ್ತ್ರೀಯು ತನ್ನ ಶುಭ್ರವಾದ ದಂತಗಳನ್ನು ಪ್ರಕಾಶಪಡಿಸುವಂತೆ ಉಷಸ್ಸೂ ತನ್ನ ಕಾಂತಿಯನ್ನು ಬೀರಿದಳು ಎಂದು ನಾಲ್ಕು ಉಪಮಾನಗಳನ್ನೂ ವಿವರಿಸಿದೆ. (ನಿ. ೩-೫)

**ಅಪ್ಸಃ—ಅಪ್ಸ** ಶಬ್ದವು ರೂಪನಾಮಗಳಲ್ಲಿ ಪಠಿತವಾಗಿವೆ. (ನಿ. ೩–೧೩)

**ಅಪ್ಸ ಇತಿ ರೂಪನಾಮಾಪ್ಸಾತೇರಪ್ಸಾನೀಯಂ ಭವತ್ಯಾದರ್ಶನೀಯಂ ವ್ಯಾಪನೀಯಂ ವಾ ಸ್ಪಷ್ಟಂ ದರ್ಶನಾಯೇತಿ ಶಾಕಪೂಣಿಃ । ಯದಪ್ಸ ಇತ್ಯಭಕ್ಷಸ್ಯ । ಅಪ್ಸೋ ನಾಮೇತಿ ವ್ಯಾಪಿನಃ ।** (ನಿ. ೫-೧೩)

ಭಕ್ಷಿಸು ಎಂದರ್ಥವನ್ನು ಕೊಡುವ **ಪ್ಸಾ** ಧಾತುವಿನಿಂದ ನಿಷೇಧಾರ್ಥದಲ್ಲಿ **ಅಪ್ಸ** ಶಬ್ದವು ನಿಷ್ಪನ್ನವಾಗಿ ಭಕ್ಷಿಸತಕ್ಕದ್ದಲ್ಲ ಎಂಬರ್ಥವನ್ನು ಕೊಡುತ್ತದೆ. ಭಕ್ಷಣಯೋಗ್ಯವಲ್ಲ ಕೇವಲ ದರ್ಶನಯೋಗ್ಯವೆಂದು **ಶಾಕಪೂಣಿಯವರ** ಮತ. ಅಥವಾ ವ್ಯಾಪನಾರ್ಥಕವಾದ **ಅಪ್** ಧಾತುವಿನಿಂದ ನಿಷ್ಪನ್ನವಾಗಿ ಸರ್ವತ್ರ ವ್ಯಾಪಕವಾದುದರಿಂದ **ಅಪ್ಸ**ವೆಂಬ ಹೆಸರೆಂದೂ ಇನ್ನೊಂದು ಮತವೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ಹೇಳಿದ್ದಾರೆ. (**ತದ್ರಾ ಭವತಿ ರೂಪವತೀ— ಅಪ್ಸ**ವುಳ್ಳವಳು **ಅಪ್ಸರಾ**) ಪ್ರಕೃತವಾದ ಋಕ್ಕಿನಲ್ಲಿ **ಅಪ್ಸ** ಶಬ್ದಕ್ಕೆ ಸಾಯಣರು **ಅಪ್ಸೋ ದಂತ-ಸ್ಥಾನೀಯಾನಿ ರೂಪಾಣಿ ನೀಲಪೀತಾದೀನಿ ।** ಮುಗುಳುನಗೆಯುಳ್ಳ ಸ್ತ್ರೀಯು ತನ್ನ ಶುಭ್ರವಾದ ದಂತಗಳ ರೂಪಗಳನ್ನು ಪ್ರಕಾಶಪಡಿಸುವಂತೆ ಉಷಸ್ಸೂ ತನ್ನ ನೀಲಪೀತಾದಿರೂಪಗಳಿಂದ ಕೂಡಿದ ಕಾಂತಿಯನ್ನು ಬೀರುತ್ತಾಳೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಅಭ್ರಾತಾ**—ನ ವಿದ್ಯತೇ ಭ್ರಾತಾ ಯಸ್ಯ ಸಃ ಅಭ್ರಾತಾ. **ನಞ್ ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಪುಂಸಃ**—ಪೂಞ್ ಪವನೇ ಧಾತು. **ಪೂಞೋ ಡುಂಸುನ್**—ಎಂಬುದರಿಂದ ಡುಂಸುನ್ ಪ್ರತ್ಯಯ. ಡಿತ್ತಾದುದರಿಂದ ಟಿಲೋಪ. ಪುಂಸ್ ಶಬ್ದವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ**—ಎಂಬುದರಿಂದ ವ್ಯತ್ಯಯದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪ್ರತೀಚೀ**—ಪ್ರತಿ ಉಪಸರ್ಗ. ಅಂಚು ಗತಿಪೂಜನಯೋಃ ಧಾತು. **ಋತ್ವಿಕ್‌ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಇದಕ್ಕೆ ಕ್ವಿನ್ ಪ್ರತ್ಯಯ. **ಅನಿದಿತಾಂ ಹಲ**—ಎಂಬುದರಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. **ಅಂಚತೇಶ್ಚೋಪಸಂಖ್ಯಾನಮ್**—ಎಂಬುದರಿಂದ ಙೀಪ್. ಭಸಂಜ್ಞಾ ಇರುವುದರಿಂದ **ಅಚಃ**—(ಪಾ. ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಲುಪ್ತಾಕಾರ ನಕಾರವುಳ್ಳ ಅಂಚು ಧಾತುಪರವಾದುದರಿಂದ **ಚೌ** (ಪಾ. ಸೂ. ೬–೩–೧೩೮) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. ಅನುದಾತ್ತವಾದ ಙೀಪನ್ನು ನಿಮಿತ್ತೀಕರಿಸಿ ಉದಾತ್ತವಾದ ಧಾತು ಅಕಾರಲೋಪವಾದುದರಿಂದ **ಅನುದಾತ್ತಸ್ಯ ಚ ಯತ್ರೋ-ದಾತ್ತಲೋಪಃ**—(ಪಾ. ಸೂ. ೬–೧–೧೬೧) ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ.

**ಗರ್ತಾರುಕ್**—ಗರ್ತಂ ಆರೋಹತಿ ಇತಿ ಗರ್ತಾರುಕ್. ಆಙ್ ಉಪಸರ್ಗ. ರುಹಬೀಜಜನ್ಮನಿ ಪ್ರಾದುರ್ಭಾವೇ ಚ ಧಾತು. **ಕ್ವಿಪ್ ಚ**—ಎಂಬುದರಿಂದ ಕ್ವಿಪ್ ಪ್ರತ್ಯಯ. ವ್ಯತ್ಯಯದಿಂದ ಧಾತು ಹಕಾರಕ್ಕೆ ಕುತ್ವ. **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬–೨–೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಸನಯೇ**—ಷಣ ಸಂಭಕ್ತೌ ಧಾತು. ಇದಕ್ಕೆ ಔಣಾದಿಕ ಇ ಪ್ರತ್ಯಯ. **ಧಾತ್ವಾದೇಃ ಷಃ ಸಃ**—ಎಂಬುದರಿಂದ ಆದಿಗೆ ಸತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಉಶತೀ**—ವಶ ಕಾಂತೌ ಧಾತು ಲಡರ್ಥದಲ್ಲಿ ಶತೃಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ**—(ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಮಪಿತ್**—ಎಂಬುದರಿಂದ ಶತೃಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಗ್ರಹಿಜ್ಯಾವಯಿ**—(ಪಾ ಸೂ. ೬-೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಉಗಿತಶ್ಚ**—ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ನುಮ್‌ರಹಿತವಾದ ಶತೃವಿನ ಪರದಲ್ಲಿ ಙೀಪ್ ಬಂದುದರಿಂದ **ಶತುರನುಮೋನದ್ಯಜಾದೀ**—(ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಸುವಾಸಾಃ**—ಶೋಭನಂ ವಾಸಃ ಯಸ್ಯಾಃ ಸಾ ಸುವಾಸಾಃ ಅಸಂತವಾದುದು ಉತ್ತರಪದವಾಗಿರುವುದರಿಂದ **ಸೋರ್ಮನಸೀ ಅಲೋಮೋಷಸೀ**—(ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಹಸ್ರಾ**—ಹಸೇ ಹಸನೇ ಧಾತು. **ಸ್ಫಾಯಿತಂಚಿವಂಚಿಶಕಿ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರಿಣೀತೇ**—ರೀ ಗತಿರೇಷಣಯೋಃ ಧಾತು. ಕ್ರ್ಯಾದಿ—**ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಪ್ರಥಮಪುರುಷಏಕವಚನದಲ್ಲಿ ತೆ ಪ್ರತ್ಯಯ. **ಟಿತ ಆತ್ಮನೇಪ**—ಎಂಬುದರಿಂದ ಅಂತ್ಯಕ್ಕೆ ಏತ್ವ. **ಕ್ರ್ಯಾದಿಭ್ಯಃ ಶ್ನಾ**— ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಸಾರ್ವಧಾತುಕಮಪಿತ್**—ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದಲೂ ಹಲಾದಿಯಾಗಿರುವುದರಿಂದಲೂ **ಈ ಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಈತ್ವ. **ಅಟ್‌ಕುಪ್ವಾಙ್**—ಎಂಬುದರಿಂದ ಣತ್ವ. ರಿಣೀತೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಇದು ಅಂತರ್ಭಾವಿತಣ್ಯರ್ಥಕವಾದ ಧಾತು. ॥ ೭ ॥

॥ ಸಂಹಿತಾಪಾಠಃ ॥

ಸ್ವಸಾ ಸ್ವಸ್ರೇ ಜ್ಯಾಯಸ್ಯೈ ಯೋನಿಮಾರೈಗಪೈತ್ಯಸ್ಯಾಃ ಪ್ರತಿಚಕ್ಷ್ಯೇವ ।

ವ್ಯುಚ್ಛಂತೀ ರಶ್ಮಿಭಿಃ ಸೂರ್ಯಸ್ಯಾಂಜ್ಯಂಕ್ತೇ ಸಮನಗಾ ಇವ ವ್ರಾಃ ॥ ೮ ॥

॥ ಪದಪಾಠಃ ॥

ಸ್ವಸಾ । ಸ್ವಸ್ರೇ । ಜ್ಯಾಯಸ್ಯೈ । ಯೋನಿಂ । ಅರೈಕ್ । ಅಪ । ಏತಿ । ಅಸ್ಯಾಃ । ಪ್ರತಿಚಕ್ಷ್ಯಾಽಇವ । ವಿಽಉಚ್ಛಂತೀ । ರಶ್ಮಿಽಭಿಃ । ಸೂರ್ಯಸ್ಯ । ಅಂಜಿ । ಅಂಕ್ತೇ । ಸಮನಗಾಃಽಇವ । ವ್ರಾಃ ॥ ೮ ॥

॥ ಸಾಯಣಭಾಷ್ಯಂ ॥

ಏಕಸ್ಮಾದೇವಾಂತರಿಕ್ಷಾದುತ್ಪನ್ನತ್ವಾತ್ಪರಸ್ಪರಂ ಸ್ವಸೃಭಾವಃ । ತಥಾಪ್ಯಹ್ನಃ ಪ್ರಾಥಮ್ಯಾತ್ತೇಜಸ್ವಿತ್ವಾಚ್ಚ ಜ್ಯಾಯಸ್ತ್ವಂ । ಸ್ವಯಮೇವ ಸರತೀತಿ ವಾ ಸ್ವಸಾ । ರಾತ್ರಿಃ ಸ್ವಸ್ರೇ ಜ್ಯಾಯಸ್ಯಾ ಉಕ್ತರೀತ್ಯಾ ಜ್ಯೇಷ್ಠಾಯೈ ಯೋನಿಮುತ್ಪತ್ತಿಸ್ಥಾನಮುಪರರಾತ್ರರೂಪಮರೈಕ್ । ಅರಿಚತ್ । ಪ್ರಾದಾತ್ । ಪ್ರರೇಚಯತೀತ್ಯರ್ಥಃ । ತಥಾ ಚ ಪೂರ್ವತ್ರಾಮ್ನಾತಂ । ರಾತ್ರ್ಯುಷಸೇ ಯೋನಿಮರೈಕ್ । ಋ. ೧-೧೧೩-೧ । ಇತಿ । ದತ್ವಾ ಚಾಸ್ಯಾ ಉತ್ಪನ್ನಾಯಾ ಉಷಸಃ ಪ್ರತಿಚಕ್ಷ್ಯೇವ ಜ್ಞಾಪಯಿತ್ರೀವ ಸ್ವಯಮಪಸೃತ್ಯೈವ ಗಚ್ಛತಿ । ಜ್ಯಾಯಸ್ಯಾಮಾಗತಾಯಾಂ ತಸ್ಯೈ ಸ್ವಸ್ಥಾನಂ ದತ್ತ್ವಾ ಸ್ವಯಂ ತತ್ಸನ್ನಿಧೌ ಸ್ಥಾತುಮನುಚಿತಮಿತಿ ವಿಜ್ಞಾಯೈವಾಪಗಚ್ಛತೀತಿ ಭಾವಃ । ಏವಮುತ್ಪನ್ನೈಷಾ ಸೂರ್ಯಸ್ಯ ರಶ್ಮಿಭಿರ್ವ್ಯುಚ್ಛಂತೀ ತಮೋ ವಿವಾಸಯಂತ್ಯಂಜಿ ವ್ಯಂಜಕಂ ತೇಜಃ । ಯದ್ವಾ । ಅಂಜಿ ವ್ಯಕ್ತಂ ಜಗತ್ । ಅಂಕ್ತೇ । ಅನಕ್ತಿ । ಪ್ರಕಾಶಯತಿ । ಕಿಮಿವ । ಸಮನಗಾ ಇವ । ಸಮ್ಯಗನನಹೇತವ ಅಪಃ ಸಮನಾಃ । ತಾ ಗಚ್ಛಂತೀತಿ ಸಮಾನಗಾ ವಿದ್ಯುತಃ । ವ್ರಾ ವ್ರಾತಾಃ । ವಿದ್ಯುತ್ಸಂಘಾ ಇವ । ಯದ್ವಾ । ಸಮ್ಯಗನನಾಯ ಗಚ್ಛಂತೀತಿ ಸಮನಗಾಃ ಸೂರ್ಯರಶ್ಮಯಃ । ತ ಇವ ವ್ರಾ ವ್ರಾತಾಃ ಸಂಘೀಭೂತಾಃ । ತೇ ಯಥಾಂಜತೇ ಜಗತ್ಪ್ರಕಾಶಯಂತಿ ತಥೇತ್ಯರ್ಥಃ ॥ ವ್ರಾತ ಇತ್ಯತ್ರ ತಕಾರಲೋಪಶ್ಛಾಂದಸಃ ॥

॥ ಪ್ರತಿಪದಾರ್ಥ ॥

**ಸ್ವಸಾ**—ಸ್ವಸೃ (ಸ್ಥಾನೀಯವಾದ ರಾತ್ರಿಯು) ವು। **ಜ್ಯಾಯಸ್ಯೈ ಸ್ವಸ್ರೇ**—ಹಿರಿಯ ಸೋದರಿಗೆ (ಉಷೋದೇವಿಗೆ) । **ಯೋನಿಂ**—ಉತ್ಪತ್ತಿಸ್ಥಾನವನ್ನು (ರಾತ್ರಿಯ ಅಂತ್ಯಭಾಗವನ್ನು) । **ಅರೈಕ್**—ರಚಿಸಿತು (ಕೊಟ್ಟಿತು) । **ಅಸ್ಯಾಃ**—(ಉತ್ಪನ್ನಳಾದ) ಉಷಸ್ಸಿಗೆ । **ಪ್ರತಿಚಕ್ಷ್ಯ ಇವ**—ಜ್ಞಾಪಿಸುವವಳಂತೆ (ತನ್ನ ಸ್ಥಾನವನ್ನು ಬಿಟ್ಟುಕೊಟ್ಟು, ತಾನು ಅಲ್ಲಿರುವುದು ಅನುಚಿತವೆಂದು ತಿಳಿದವಳಂತೆ) । **ಅಪ ಏತಿ**—ಹೊರಟುಹೋಗುತ್ತದೆ । (ಹೀಗೆ ಉತ್ಪನ್ನಳಾದ ಉಷೋದೇವಿಯು) **ಸೂರ್ಯಸ್ಯ ರಶ್ಮಿಭಿಃ**—ಸೂರ್ಯ ರಶ್ಮಿಗಳಿಂದ (ಸಹಾಯದಿಂದ) । **ವಿ ಉಚ್ಛಂತೀ**—(ತಮಸ್ಸನ್ನು) ನಿವಾರಿಸುತ್ತಾ । **ಸಮನಗಾಃ ವ್ರಾಃ ಇವ**—ವಿದ್ಯುತ್ಸಂಘದಂತೆ (ಸೂರ್ಯ ರಶ್ಮಿಗಳ ಸಮೂಹದಂತೆ) (ವಿದ್ಯುತ್ತು ಅಥವಾ ಸೂರ್ಯರಶ್ಮಿಗಳು ಜಗತ್ತನ್ನು ಪ್ರಕಾಶಿಸುವಂತೆ) । **ಅಂಜಿ**—(ಜಗ) ದ್ವ್ಯಂಜಕವಾದ ತೇಜಸ್ಸನ್ನು (ವ್ಯಕ್ತವಾದ ಜಗತ್ತನ್ನು) । **ಅಂಕ್ತೇ**—ವ್ಯಕ್ತಪಡಿಸುತ್ತಾಳೆ.

॥ ಭಾವಾರ್ಥ ॥

ಅನುಜೆಯಾದ ರಾತ್ರಿಯು (ತನ್ನ) ಪೂರ್ವಜೆಯಾದ ಉಷೋದೇವಿಗೆ (ರಾತ್ರಿಯ ಅಂತ್ಯಭಾಗವನ್ನು) ಉತ್ಪತ್ತಿಸ್ಥಾನವಾಗಿ ಕಲ್ಪಿಸುತ್ತಾಳೆ; (ಅನಂತರ) ರಾತ್ರಿಯು ಹೊರಟುಹೋಗುತ್ತಾಳೆ; (ಈ ರೀತಿ ಉತ್ಪನ್ನಳಾದ

ಉಷೋದೇವಿಯು) ಸೂರ್ಯರಶ್ಮಿಗಳ (ಸಹಾಯದಿಂದ) (ತಮಸ್ಸನ್ನು) ನಿವಾರಿಸಿ, ವಿದ್ಯುತ್ಸಂಘದಂತೆ (ಸೂರ್ಯ ರಶ್ಮಿಗಳ ಸಮೂಹದಂತೆ), ಜಗದ್ವ್ಯಂಜಿಕವಾದ ತೇಜಸ್ಸನ್ನು ಬೀರುತ್ತಾಳೆ.

English Translation.

The sister (Night) has prepared a birth-place for her elder sister (Day), and having made it known to her, departs. Ushas, dispersing the darkness with the rays of the sun, illumines the world, like congregated lightnings.

॥ ವಿಶೇಷವಿಷಯಗಳು ॥

**ಸ್ವಸಾ ಸ್ವಸ್ರೇ ಯೋನಿಮಾರೈಕ್**—ಉಷಸ್ಸು ರಾತ್ರಿಯ ಹಿರಿಯ ಸಹೋದರಿಯೆಂದು ಹೇಳಿದೆ. ಉಷಸ್ಸಿನ ಉದಯವಾದೊಡನೆಯೇ ರಾತ್ರಿಯು ತಾನಾಗಿಯೇ ಅದೃಶ್ಯಳಾಗಿ ತನ್ನ ಸಹೋದರಿಗೆ ಸ್ಥಾನವನ್ನು ಮಾಡಿಕೊಟ್ಟಳು. **ಯೋನಿಂ** ಎಂಬ ಪದಕ್ಕೆ **ಉತ್ಪತ್ತಿಸ್ಥಾನಂ** ಎಂದರ್ಥಮಾಡಿದೆ. ನಿರುಕ್ತಕಾರರು,

**ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।**
**ಯಥಾ ಪ್ರಸೂತಾ ಸವಿತುಃ ಸವಾಯಁ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥**
(ಋ. ಸಂ. ೧-೧೧೩-೧)

ಎಂಬ ಋಕ್ಕನ್ನುದಹರಿಸಿ **ಏವಂ ರಾತ್ರ್ಯುಷಸೇ ಯೋನಿಮರಿಚತ್ ಸ್ಥಾನಂ । ಸ್ತ್ರೀಯೋನಿರಭಿಯುತ ಏನಾಂ ಗರ್ಭಃ ।** ಎಂದು ವಿವರಿಸಿದ್ದಾರೆ. ಇದಕ್ಕೆ ದುರ್ಗಾಚಾರ್ಯರು ಈ ರೀತಿ ವ್ಯಾಖ್ಯಾನ ಮಾಡಿದ್ದಾರೆ. (ನಿ. ೨-೧೯)

**ರಾತ್ರಿಃ ಉಷಸಃ ಜನ್ಮಾರ್ಥಂ "ಯೋನಿಂ" "ಸ್ಥಾನಂ" ಅವಕಾಶಂ ಅರಿಚತ್ ಆರೇಚಯತಿ ದದಾತೀತ್ಯರ್ಥಃ । ಯಥೋಷಾ ಆದಿತ್ಯಸ್ಯ ಜನ್ಮನಃ ಹೇತುಸ್ತದನಂತರಜನ್ಮತ್ವಾತ್ ಏವಂ ರಾತ್ರಿಃ ಉಷಸೋ ಜನ್ಮನೋ ಹೇತುಃ ॥**

ಯಾವ ರೀತಿ **ಉಷಸ್ಸು ಆದಿತ್ಯನ** ಉತ್ಪತ್ತಿಗೆ ಕಾರಣಳೋ ಅದರಂತೆ **ಉಷಸ್ಸಿನ** ಉತ್ಪತ್ತಿಗೆ **ರಾತ್ರಿಯು** ಕಾರಣಳು. ಮತ್ತು ಉಷಸ್ಸಿನ ಉದಯಕ್ಕೆ ತಾನು ಕಾರಣಳಾಗಿ ಉಷಸ್ಸಿನ ಆವಿರ್ಭಾವವಾದೊಡನೆಯೇ ತಾನು ಅದೃಶ್ಯಳಾದಳು ಎಂದು ತಾತ್ಪರ್ಯ.

**ಅರುಷಸ್ಯ ದುಹಿತರಾ ವಿರೂಪೇ ಸ್ತೃಭಿರನ್ಯಾ ಪಿಪಿಶೇ ಸೂರೋ ಅನ್ಯಾ ।**
**ಮಿಥುಸ್ತುರಾ ವಿಚರಂತೀ ಪಾವಕೇ ಮನ್ಮ ಶ್ರುತಂ ನಕ್ಷತ ಋಚ್ಯಮಾನೇ ॥**
(ಋ. ಸಂ. ೬-೪೯-೩)

ಇತ್ಯಾದ್ಯನೇಕ ಋಕ್ಕುಗಳಲ್ಲಿ ರಾತ್ರಿಯ ಮತ್ತು ಉಷಸ್ಸಿನ ಸಹೋದರಿ ಸಂಬಂಧವನ್ನು ವರ್ಣಿಸಿ ಯಾವ ರೀತಿ ಅವರಿಬ್ಬರೂ ಸಹ ತಮ್ಮ ಸತತವಾದ ಮತ್ತು ನಿಯಮಿತವಾದ ಸಂಚಾರದಿಂದ ಲೋಕಯಾತ್ರೆಗೆ ಕಾರಣರಾಗಿರುವರೆಂದು ವಿವರಿಸಿದೆ.

**ಪ್ರತಿಚಕ್ಷ್ಯಾ ಇವ—ಜ್ಞಾಪಯಿತ್ರೀವ ।** ಅವಳ ಕರ್ತವ್ಯಜ್ಞಾನವನ್ನು ಸರಿಯಾಗಿ ತಿಳಿಸುವವಳಂತೆ ಎಂದರ್ಥ. ಪ್ರತ್ಯುಪಸರ್ಗದೊಡನೆ ಕೂಡಿದ **ಚಕ್ಷ್** ಧಾತುವಿಗೆ ಸಂಕೀರ್ಣವೂ, ಸಂದಿಗ್ಧವೂ ಅಲ್ಲದ ವಿಮರ್ಶಾತ್ಮಕ ಜ್ಞಾನವೆಂದರ್ಥವಾಗುತ್ತದೆ. ಉದಾಹರಣೆಗೆ—

**ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ।**

(ಋ. ಸಂ. ೬-೪೭-೧೮)

ಎಂಬ ಋಕ್ಕಿನಲ್ಲಿ **ಪ್ರತಿಚಕ್ಷಣಾಯ ಪ್ರತಿನಿಯತದರ್ಶನಾಯ । ಅಯಮಗ್ನಿರಯಂ ವಿಷ್ಣುರಯಂ ರುದ್ರ ಇತ್ಯೇವಮಸಂಕೀರ್ಣದರ್ಶನಾಯ ।** ಎಂದು ಅಸಂಕೀರ್ಣವಾದ ಮತ್ತು ವಿವಿಕ್ತವಾದ ಜ್ಞಾನವೆಂದರ್ಥವಾಗುವಂತೆ ಇಲ್ಲಿಯೂ ಸಹ ಉಷಸ್ಸಿನ ನಿಯತವಾದುದೂ ಸನ್ನಿವೇಶಗಳಿಗನುಗುಣವಾಗಿ ವಿವಿಕ್ತವಾದುದೂ ಆದ ಕರ್ತವ್ಯಜ್ಞಾನವನ್ನು ರಾತ್ರಿಯು ಜ್ಞಾಪಿಸಿದಳೆಂದು ತಾತ್ಪರ್ಯ.

**ಸಮನಗಾಃ ವ್ರಾಃ ಇವ**—ಇಲ್ಲಿ ಎರಡು ವಿಧವಾದ ಅರ್ಥಗಳನ್ನು ಹೇಳಿದ್ದಾರೆ. ಮೊದಲನೆಯದಾಗಿ **ಸಮ್ಯಗನನಹೇತವ ಆಪಃ ಸಮನಾ । ತಾ ಗಚ್ಛಂತೀತಿ ಸಮನಗಾ ವಿದ್ಯುತಃ । ವ್ರಾಃ ವ್ರಾತಾಃ ಸಂಘಾಃ । ವಿದ್ಯುತ್ಸಂಘಾ ಇತ್ಯರ್ಥಃ ।** ಸುಲಭವಾಗಿ ಚಲಿಸತಕ್ಕದಾದ್ದರಿಂದ ಉದಕಕ್ಕೆ **ಸಮನಾ** ಎಂದು ಹೆಸರು. ಉದಕಗಳೊಂದಿಗೆ ಸಂಪರ್ಕವನ್ನು ಹೊಂದಿರುವುದರಿಂದ **ಮಿಂಚಿಗೆ ಸಮನಗಾ** ಎಂದು ಹೆಸರು. **ಸಮನಗಾ ವ್ರಾ** ಎಂದರೆ ವಿದ್ಯುತ್ಸಂಘವೆಂದರ್ಥವೆಂದೂ, ಎರಡನೆಯದಾಗಿ **ಸಮ್ಯಗನನಾಯ ಗಚ್ಛಂತೀತಿ ಸಮನಗಾ ಸೂರ್ಯರಶ್ಮಯಃ** ಸ್ವತಂತ್ರವಾಗಿ ಸಂಚರಿಸುವುದರಿಂದ ಸೂರ್ಯರಶ್ಮಿಗಳಿಗೆ **ಸಮನಗಾ** ಎಂದು ಹೆಸರು. **ಸಮನಗಾ ವ್ರಾ** ಎಂದರೆ ಸೂರ್ಯರಶ್ಮಿಗಳ ಸಮೂಹವೆಂದರ್ಥ.

ನಿರುಕ್ತಕಾರರು **ಸಮನಾ** ಎಂಬ ಪದವನ್ನು **ಸಂಗ್ರಾಮ** ನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೯) ಅನಂತರ,

**ಬಹ್ವೀನಾಂ ಪಿತಾ ಬಹುರಸ್ಯ ಪುತ್ರಶ್ಚಿಶ್ಚಾ ಕೃಣೋತಿ ಸಮನಾವಗತ್ಯ ।**
**ಇಷುಧಿಃ ಸಂಕಾಃ ಪೃತನಾಶ್ಚ ಸರ್ವಾಃ ಪೃಷ್ಠೇ ನಿನದ್ಧೋ ಜಯತಿ ಪ್ರಸೂತಃ ॥**

(ಋ. ಸಂ. ೬-೭೫-೫)

**ವಕ್ಷ್ಯಂತೀವೇದಾ ಗನೀಗಂತಿ ಕರ್ಣಂ ಪ್ರಿಯಂ ಸಖಾಯಂ ಪರಿಷಸ್ವಜಾನಾ ।**
**ಯೋಷೇವ ಶಿಂಕ್ತೇ ವಿತತಾಧಿ ಧನ್ವಞ್ಜ್ಯಾ ಇಯಂ ಸಮನೇ ಪಾರಯಂತೀ ॥**

(ಋ. ಸಂ. ೬-೭೫-೩)

ಎಂಬ ಎರಡು ಋಕ್ಕುಗಳನ್ನೂ ಉದಹರಿಸಿ ಅಲ್ಲಿ **ಸಮನ** ಶಬ್ದಕ್ಕೆ **ಸಂಗ್ರಾಮ**ವೆಂದರ್ಥಮಾಡಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಜ್ಯಾಯಸ್ಯೈ**—ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ ಬಂದಾಗ **ಜ್ಯ ಚ**—(ಪಾ. ಸೂ. ೫-೩-೬೧) ಎಂಬುದರಿಂದ ಪ್ರಶಸ್ಯ ಶಬ್ದಕ್ಕೆ ಜ್ಯಾದೇಶ. ಜ್ಯಾ+ಈಯಸುನ್ ಎಂದಿರುವಾಗ **ಜ್ಯಾದಾದೀಯಸಃ**—(ಪಾ. ಸೂ. ೬-೪-೧೬೦) ಎಂಬುದರಿಂದ ಈಯಸುನ್ ಪ್ರತ್ಯಯಕ್ಕೆ ಆತ್ವ. **ಆದೇಃಪರಸ್ಯ**—ಎಂಬುದರಿಂದ ಆದಿಯಾದ

ಈಕಾರಕ್ಕೆ ಆತ್ವ. ಜ್ಯಾಯಸ್ ಶಬ್ದವಾಗುತ್ತದೆ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಉಗಿತಶ್ಚ**—(ಪಾ. ಸೂ. ೪-೧-೬) ಎಂಬುದರಿಂದ ಙೀಪ್. ಜ್ಯಾಯಸೀ ಎಂದು ರೂಪವಾಗುತ್ತದೆ. ಚತುರ್ಥೀ ಏಕವಚನಾಂತರೂಪ. ನಿತ್ ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅರೈಕ್**—ರಿಚಿರ್ ವಿರೇಚನೇ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ**—ಎಂಬುದ ರಿಂದ ಇಕಾರಲೋಪ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್. **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಹಲ್ಙ್ಯಾಭ್ಯೋ**—ಸೂತ್ರದಿಂದ ಅಪೃಕ್ತ ಪ್ರತ್ಯಯಕ್ಕೆ ಲೋಪ. ವರ್ಣವ್ಯತ್ಯಯದಿಂದ ಏಕಾರಕ್ಕೆ ಐಕಾರಾದೇಶ. ಅತಿಙಂತಪದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರತಿಚಕ್ಷ್ಯ**—ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. **ಸಮಾಸೇನಞ್ಪೂರ್ವೇಕ್ತ್ವೋಲ್ಯಪ್**—(ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾ ಸ್ಥಾನದಲ್ಲಿ ಲ್ಯಪ್. ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವ್ಯುಚ್ಛಂತೀ**—ಉಛೀ ವಿವಾಸೇ ಧಾತು. ವಿ ಉಪಸರ್ಗ. ಲಡರ್ಥದಲ್ಲಿ ಶತೃಪ್ರತ್ಯಯ ಬಂದಾಗ ಸ್ತ್ರೀತ್ವದಲ್ಲಿ **ಉಗಿತಶ್ಚ**—ಎಂಬುದರಿಂದ ಙೀಪ್. ಶ ವಿಕರಣ ಸ್ವರ ಉಳಿಯುತ್ತದೆ.

**ಅಞ್ಜಿ**—ಅಞ್ಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಧಾತು. ಇದಕ್ಕೆ **ಖನಿಕಷ್ಯಂಜಿ**—(ಉ. ಸೂ. ೪-೫೭೯) ಎಂಬುದರಿಂದ ಇ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಂಕ್ತೇ**—ಪೂರ್ವೋಕ್ತವಾದ ಧಾತುವಿಗೆ ಲಟ್ ಪ್ರಥಮಪುರುಷ ಏಕವಚನದಲ್ಲಿ ಅಂಕ್ತೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಮನಗಾಃ**—ಸಮನಾಃ ಗಚ್ಛಂತಿ ಅಥವಾ ಸಮ್ಯಗ್ ಅನನಾಯ ಗಚ್ಛಂತಿ ಇತಿ ಸಮನಗಾಃ. ಗಮ್ಲೃ ಗತೌ ಧಾತು. **ಜನಸನಖನ**—(ಪಾ. ಸೂ. ೩-೨-೬೭) ಎಂಬುದರಿಂದ ಇದಕ್ಕೆ ವಿಟ್ ಪ್ರತ್ಯಯ. ಇದು ಪರ ವಾದಾಗ **ವಿಡ್ವನೋರನುನಾಸಿಕಸ್ಯಾತ್**—(ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿನ ಅನುನಾಸಿಕಕ್ಕೆ ಆತ್ವ. ಪ್ರತ್ಯಯದಲ್ಲಿ ಸರ್ವಲೋಪವಾಗುತ್ತದೆ. **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವ್ರಾಃ**—ವ್ರಾತಾಃ ಎಂದು ಶಬ್ದ ಸ್ವರೂಪ. ಛಾಂದಸವಾಗಿ ತಕಾರಲೋಪ ಬರುತ್ತದೆ. ‖ ೮ ‖



॥ ಸಂಹಿತಾಪಾಠಃ ॥

ಆಸಾಂ ಪೂರ್ವಾಸಾಮಹಸು ಸ್ವಸೃಣಾಮಪರಾ ಪೂರ್ವಾಮಭ್ಯೇತಿ ಪಶ್ಚಾತ್ ।
ತಾಃ ಪ್ರತ್ನವನ್ನವ್ಯಸೀರ್ನೂನಮಸ್ಮೇ ರೇವದುಚ್ಛಂತು ಸುದಿನಾ ಉಷಾಸಃ ॥ ೯ ॥

॥ ಪದಪಾಠಃ ॥

ಆಸಾಂ । ಪೂರ್ವಾಸಾಂ । ಅಹಽಸು । ಸ್ವಸೃಣಾಂ । ಅಪರಾ । ಪೂರ್ವಾಂ । ಅಭಿ । ಏತಿ । ಪಶ್ಚಾತ್ ।
ತಾಃ । ಪ್ರತ್ನಽವತ್ । ನವ್ಯಸೀಃ । ನೂನಂ । ಅಸ್ಮೇ ಇತಿ । ರೇವತ್ । ಉಚ್ಛಂತು । ಸುಽದಿನಾಃ ।
ಉಷಸಃ ॥ ೯ ॥

॥ ಸಾಯಣಭಾಷ್ಯಂ ॥

ಸ್ವಸೃಣಾಂ ಪರಸ್ಪರಂ ಸ್ವಸೃಭಾವಮಾಪನ್ನಾನಾಂ ಸ್ವಯಂ ಸರಂತೀನಾಂ ವಾ ಪೂರ್ವಾಸಾಂ ಪುರಾತನೀನಾಮಾಸಾಮುಷಸಾಂ ಮಧ್ಯೇಽಹಸ್ವಹಃಸು ಪ್ರತಿದಿನಮಪರಾನ್ಯಾದ್ಯತನ್ಯುಷಾ ಪೂರ್ವಾಮತೀತದಿವಸಸಂಬಂಧಿನೀಮುಷಸಂ ಪಶ್ಚಾದನುಸೃತ್ಯಾಭ್ಯೇತಿ । ಅಭಿಮುಖಂ ಗಚ್ಛತಿ । ಅವ್ಯವಧಾನೇನ ಗಚ್ಛತೀತ್ಯರ್ಥಃ । ಸರ್ವೇಷ್ವಹಃಸ್ವೇವಮೇವಾಭ್ಯೇತಿ । ನವ್ಯಸೀರ್ನವೀಯಸ್ಯೋ ನವತರಾ ಆಗಾಮಿನ್ಯಸ್ತಾ ಉಷಾಸ ಉಷಸೋಽಪಿ ನೂನಂ ನಿಶ್ಚಯಂ ಪ್ರತ್ನವತ್ ಪುರಾತನ್ಯ ಇವ ಸುದಿನಾಃ ಶೋಭನಕರ್ಮಾನುಷ್ಠಾನಸಾಧನದಿವಸಾಃ ಶೋಭನದಿನಮುಖಾ ವಾ ಸತ್ಯೋಽಸ್ಮೇ ಅಸ್ಮಾಕಂ ರೇವತ್ ಬಹುಧನವಿಶಿಷ್ಟಂ ಯಥಾ ಭವತಿ ತಥೋಚ್ಛಂತು । ಪ್ರಕಾಶಯಂತು । ಪೂರ್ವತನ್ಯೋ ಯಥೌಚ್ಛನ್ ತಥಾಗಮಿನ್ಯೋಽಪ್ಯುಚ್ಛಂತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸ್ವಸೃಣಾಂ**—(ಪರಸ್ಪರ) ಸ್ವಸೃಭೂತರಾದ । **ಪೂರ್ವಾಸಾಂ**—ಹಿಂದೆ ಕಳೆದುಹೋದ । **ಆಸಾಂ**—ಉಷಸ್ಸುಗಳ ಮಧ್ಯೆ । **ಅಪರಾ**—ಒಂದಾದ ಈ ಉಷಸ್ಸು । **ಪೂರ್ವಾಂ**—ಹಿಂದಿನದನ್ನು । **ಪಶ್ಚಾತ್**—ಅನುಸರಿಸಿ । **ಅಹಸ್ಸು**—ಪ್ರತಿದಿನವೂ । **ಅಭಿ ಏತಿ**—ವ್ಯವಧಾನವಿಲ್ಲದೇ ಹೋಗುತ್ತದೆ । **ನವ್ಯಸೀಃ**—ಮುಂದೆ ಬರುವ (ಹೊಸದಾದ) । **ತಾಃ ಉಷಾಸಃ**—ಉಷಸ್ಸುಗಳೂ । **ನೂನಂ**—ನಿಶ್ಚಯವಾಗಿ । **ಪ್ರತ್ನವತ್**—ಕಳೆದ (ಉಷಸ್ಸುಗಳಂತೆ) । **ಸುದಿನಾಃ**—(ಕರ್ಮಗಳಿಗೆ) ಶುಭದಿನಗಳಾಗಿ (ಶುಭದಿನಗಳನ್ನು ಆರಂಭಿಸುವುವುಗಳಾಗಿ) । **ಅಸ್ಮೇ**—ನಮಗೆ । **ರೇವತ್**—ಧನಾದಿ ಲಾಭಕಾರಕಗಳಾಗುವಂತೆ । **ಉಚ್ಛಂತು**—ಪ್ರಕಾಶಿಸಲಿ.

॥ ಭಾವಾರ್ಥ ॥

ಸೋದರಿಯಂತಿರುವ ಕಳೆದುಹೋದ ಉಷಸ್ಸುಗಳಲ್ಲಿ ಪ್ರತಿಯೊಂದೂ ಹಿಂದಿನದನ್ನು (ಬಿಡದೇ) ಅನುಸರಿಸಿ ಹೋಗುತ್ತಿತ್ತು ; ಮುಂದೆ ಬರುವ ಉಷಸ್ಸುಗಳೂ ಕಳೆದವುಗಳಂತೆ, ನಮ್ಮ ಕರ್ಮಗಳಿಗೆ ಶುಭದಿನಗಳಾಗಿ, ನಮಗೆ ಲಾಭಕರವಾಗಿ ಪ್ರಕಾಶಿಸಲಿ.

## English Translation.

Of all these sisters who have gone before, a successor daily follows the one that has preceded. So may new dawns, like the old, bringing fortunate days, shine upon us blessed with affluence.

॥ ವಿಶೇಷವಿಷಯಗಳು ॥

**ಸ್ವಸ್ಯ್ಣಾಂ ಪರಸ್ಪರಂ ಸ್ವಸೃಭಾವಮಾಪನ್ನಾನಾಂ ಸ್ವಯಂ ಸರಂತೀನಾಂ ವಾ ಪೂರ್ವಾಸಾಂ ಪುರಾತನೀನಾಮಾಸಾಮುಷಸಾಂ ಮಧ್ಯೇ ಅಹಸ್ವಹಸ್ಸು ಪ್ರತಿದಿನಮಪರಾನ್ಯಾದ್ಯಂತಿನ್ಯುಷಾ ಪೂರ್ವಾಮತೀತದಿವಸಸಂಬಂಧಿನೀಮುಷಸಂ ಪಶ್ಚಾದನುಸೃತ್ಯಾಭ್ಯೇತಿ ।** ಉಷಸ್ಸುಗಳು ಪ್ರತಿದಿನವೂ ಬೇರೆ ಬೇರೆಯಾಗಿ ಕಾಣಿಸಿಕೊಳ್ಳುವುದರಿಂದ ಪೂರ್ವದಿನದ ಉಷಸ್ಸಿನೊಡನೆ ಮಾರನೇ ದಿನದ ಉಷಸ್ಸು ಸಹೋದರಿ ಸಂಬಂಧವನ್ನಿಟ್ಟುಕೊಂಡು ಅನುಸರಿಸುತ್ತದೆ. ಆದ್ದರಿಂದ ಕಳೆದ ಎಲ್ಲಾ ಉಷಸ್ಸುಗಳೂ ಪ್ರಕೃತ ದಿನದ ಉಷಸ್ಸಿಗೆ **ಸ್ವಸೃ**ಗಳಾದವೆಂದರ್ಥ.

**ಪ್ರತ್ನವತ್**—ಈ ಪದವು ಪುರಾಣನಾಮಗಳಲ್ಲಿ ಪಠಿತವಾಗಿದೆ. (ನಿ. ೩–೨೦) ನಿರುಕ್ತಕಾರರು—

**ಪವಿತ್ರವಂತಃ ಪರಿ ವಾಚಮಾಸತೇ ಪಿತೈಷಾಂ ಪ್ರತ್ನೋ ಅಭಿ ರಕ್ಷತಿ ವ್ರತಂ ।**
**ಮಹಃ ಸಮುದ್ರಂ ವರುಣಸ್ತಿರೋದಧೇ ಧೀರಾ ಇಚ್ಛೇಕುರ್ಧರುಣೇಷ್ವಾರಭಂ ॥**

(ಋ. ಸಂ ೯-೭೩-೩)

ಎಂಬ ಋಕ್ಕನ್ನುದಹರಿಸಿ **ಪ್ರತ್ನಃ ಪುರಾಣಃ** ಎಂದು ಈ ಪದಕ್ಕೆ ಅರ್ಥವನ್ನು ಹೇಳಿದ್ದಾರೆ. **ಪ್ರತ್ನವತ್** ಎಂದರೆ ಅನಾದಿಕಾಲದಿಂದಲೂ ಸರಿದುಹೋಗಿರತಕ್ಕ ಉಷಸ್ಸುಗಳಂತೆ ಪ್ರಕೃತದಿನದ ಉಷಸ್ಸು **ಸುದಿನಾಃ** ನಮ್ಮ ಕರ್ಮಗಳಿಗೆ ಶುಭದಿನಗಳಾಗಿ ಆಗಲಿ ಎಂದು ಪ್ರಾರ್ಥಿಸಿದೆ.

**ಅಸ್ಮೇ—ಅಸ್ಮಾಕಂ ।** ಯಜಮಾನಾದಿಗಳಾದ ನಮಗೆ ಎಂದರ್ಥ. ನಮಗೆಲ್ಲಾ ಧನಲಾಭವಾಗುವಂತೆ ಮಾಡು ಎಂದರ್ಥ. **ಅಸ್ಮೇ** ಎಂಬ ಪದವು ರೂಪದಲ್ಲಿ ಒಂದೇ ವಿಧವಾಗಿದ್ದರೂ ಎಲ್ಲಾ ವಿಭಕ್ತ್ಯರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆಯೆಂದು ತಿಳಿಸಿದ್ದಾರೆ. (ನಿ ೬–೭) (ಈ ಪದದಂತೆಯೇ **ಅಸ್ಮಾಕಂ** ಎಂಬ ಪದವೂ ಸಹ ಸರ್ವ ವಿಭಕ್ತಿಗಳಲ್ಲಿಯೂ ಪ್ರಯೋಗಿಸಲ್ಪಟ್ಟಿರುವುದನ್ನು ಹಿಂದೆ ತಿಳಿಸಿದೆ.)

**ಅಸ್ಮೇ ತೇ ಬಂಧುಃ—ವಯಮಿತ್ಯರ್ಥಃ ।** ಇದಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನವನ್ನು ಮಾಡುತ್ತಾ **ಅಸ್ಮೇ ಇತ್ಯೇತ್ಪದಂ ಸರ್ವವಿಭಕ್ತ್ಯಂತಂ । ತಸ್ಮಾದನೇಕಾರ್ಥಂ । ಏಕಮೇವ ಹ್ಯೇತಚ್ಛಬ್ದರೂಪಂ**

**ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ । ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ । ತದ್ಯಥಾ— ಪ್ರಥಮಾಯಾಸ್ತಾವತ್ ।—ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ।** ಏಳು ವಿಭಕ್ತಿಗಳಲ್ಲಿಯೂ ಪ್ರಯೋಗ ವಿರತಕ್ಕ ಈ **ಅಸ್ಮೇ** ಎಂಬ ಪದವನ್ನು ಆಯಾ ಪ್ರಕರಣಾನುಸಾರವಾಗಿ ಅರ್ಥಮಾಡಬೇಕೆಂದು ತಿಳಿಸಿದ್ದಾರೆ. ಅದರಲ್ಲಿ **ಅಸ್ಮೇ ತೇ ಬಂಧುಃ** ಎಂಬುದು ಪ್ರಥಮಾ ವಿಭಕ್ತಿಗೆ ಉದಾಹರಣೆ. ಮತ್ತು

**ಆ ಶ್ಯೇನಸ್ಯ ಜವಸಾ ನೂತನೇನಾಸ್ಮೇ ಯಾತಂ ನಾಸತ್ಯಾ ಸಜೋಷಾಃ ।**
**ಹವೇ ಹಿ ವಾಮಶ್ವಿನಾ ರಾತಹವ್ಯಃ ಶಶ್ವತ್ತಮಾಯಾ ಉಷಸೋ ವ್ಯುಷ್ಟೌ ।**
(ಋ. ಸಂ. ೧-೧೧೮-೧೧)

ಎಂಬ ಋಕ್ಕನ್ನುದಹರಿಸಿ **ಅಸ್ಮೇ ಯಾತಂ ನಾಸತ್ಯಾ ಸಜೋಷಾಃ । ಅಸ್ಮಾನಿತ್ಯರ್ಥಃ ।** ಅಸ್ಮೇ ಎಂಬ ಶಬ್ದಕ್ಕೆ ದ್ವಿತೀಯಾರ್ಥದಲ್ಲಿ ಪ್ರಯೋಗವೆಂದೂ,

**ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।**
**ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥**
(ಋ. ಸಂ. ೧-೧೬೫-೭)

ಎಂಬ ಋಕ್ಕನ್ನುದಹರಿಸಿ ಅಲ್ಲಿ ತೃತೀಯಾ ವಿಭಕ್ತಿಯಲ್ಲಿ **ಅಸ್ಮಾಭಿಃ** ಎಂಬರ್ಥವೆಂದೂ,

**ಅಸ್ಮೇ ಪ್ರ ಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।**
**ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥**
(ಋ. ಸಂ ೩-೩೬-೧೦)

ಎಂಬ ಋಕ್ಕನ್ನುದಹರಿಸಿ **ಅಸ್ಮಭ್ಯಂ** ನಮಗಾಗಿ ಎಂದರ್ಥವೆಂದೂ,

**ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।**
**ಸ ಸುತ್ರಾಮಾ ಸ್ವವಾಁ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥**
(ಋ. ಸಂ. ೬-೪೭-೧೩)

ಎಂಬ ಋಕ್ಕಿನಲ್ಲಿ **ಅಸ್ಮತ್** ನಮ್ಮ ದೆಸೆಯಿಂದ ಎಂದೂ,

**ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।**
**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸೂಪತೇ ವಸೂನಾಂ ॥**
(ಋ. ಸಂ. ೩-೩೦-೧೯)

ಎಂಬಲ್ಲಿ **ಅಸ್ಮಾಕಂ** ನಮ್ಮ ಎಂದು ಷಷ್ಠಿಯೆಂದೂ, ಹೀಗೆಯೇ,

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥**
(ಋ. ಸಂ ೧-೭೯-೪)

ಎಂಬಲ್ಲಿ ಸಪ್ತಮೀ ವಿಭಕ್ತಿಯೂ ಆಗಿರುವುವೆಂದು ಎಲ್ಲಾ ವಿಭಕ್ತಿಗಳಿಗೂ ಉದಾಹರಣೆಯನ್ನು ಒಂದೇ ರೂಪದಿಂದಿರುವುದೆಂದು ತೋರಿಸಿದ್ದಾರೆ. (ನಿ. ೬-೭).

॥ ವ್ಯಾಕರಣಪ್ರಕ್ರಿಯಾ ॥

**ಆಸಾಮ್**—ಆಸು ಉಪವೇಶನೇ ಧಾತು. **ಕ್ವಿಪ್ ಚ**—ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ**—(ಪಾ ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಹಸು**—ಅಹಃಸು ಎಂದು ರೂಪವಾದಾಗ ಶಬ್ದದ ಅಂತ್ಯಕ್ಕೆ ಛಾಂದಸವಾಗಿ ಲೋಪ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ಏತಿ**—ಇಣ್ ಗತೌ ಧಾತು. ಅದಾದಿ ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪಶ್ಚಾತ್**—**ಪಶ್ಚಾತ್** (ಪಾ. ಸೂ. ೫-೩-೩೨) ಎಂಬುದರಿಂದ ಅಪರಶಬ್ದಕ್ಕೆ ಪಶ್ಚಭಾವವೂ ಅಸ್ತಾತಿ ಪ್ರತ್ಯಯ ವಿಷಯದಲ್ಲಿ ಆತಿ ಪ್ರತ್ಯಯವೂ ನಿಪಾತಿತವಾಗಿದೆ. ಪ್ರತ್ಯಯಸ್ವರದಿಂದ ಆಕಾರ ಉದಾತ್ತವಾಗುತ್ತದೆ.

**ಪ್ರತ್ನವತ್**—ಪ್ರತ್ನ ಇವ ಪ್ರತ್ನವತ್. **ನಶ್ಚ ಪುರಾಣೇ ಪ್ರಾತ್**—ಎಂಬುದರಿಂದ ಪುರಾಣಾರ್ಥದಲ್ಲಿರುವ ಪ್ರ ಶಬ್ದಕ್ಕೆ ತ್ನಪ್ ಪ್ರತ್ಯಯ. ಪ್ರತ್ನ ಎಂದು ರೂಪವಾಗುತ್ತದೆ. ಆಮೇಲೆ **ತತ್ರ ತಸ್ಯೇವ** (ಪಾ. ಸೂ. ೫-೧-೧೧೬) ಎಂಬುದರಿಂದ ವತಿ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ನವ್ಯಸೀಃ**—ಅತಿಶಯೇನ ನವಾಃ ನವೀಯಸ್ಯಃ. ಅತಿಶಯಾರ್ಥ ತೋರುವಾಗ ಈಯಸುನ್ ಪ್ರತ್ಯಯ. **ಉಗಿತಶ್ಚ**—ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ಛಾಂದಸವಾಗಿ ಈಯಸುವಿನ ಈಕಾರಕ್ಕೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇದಕ್ಕೆ ಜಸ್ ಪರವಾದಾಗ **ಸುಪಾಂ ಸುಲುಕ್**—(ಪಾ.ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ.

**ಅಸ್ಮೇ**—ಅಸ್ಮದ್ ಶಬ್ದ. ಇದಕ್ಕೆ ಷಷ್ಠೀ ಬಹುವಚನ ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಶೇಆದೇಶ. **ಶೇಷೇ ಲೋಪಃ**—ಎಂಬುದರಿಂದ ಅದಿಗೆ ಲೋಪ.

**ರೇವತ್**—ರಯಿಃ ಅಸ್ಯ ಅಸ್ತಿ ಇತಿ ರೇವತ್. **ರಯೇರ್ಮತೌ ಬಹುಲಂ**—ಎಂಬುದರಿಂದ ಮತುಪ್ ಪರವಾದಾಗ ರಯಿಶಬ್ದಕ್ಕೆ ಸಂಪ್ರಸಾರಣ. **ನ ಸಂಪ್ರಸಾರಣೇ ಸಂಪ್ರಸಾರಣಮ್**—ಎಂದು ನಿಷೇಧ ಮಾಡಿರುವುದರಿಂದ ಯಕಾರಕ್ಕೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಗುಣ, ಮತುಪಿನ ಮಕಾರಕ್ಕೆ **ಛಂದಸೀರಃ**—(ಪಾ ಸೂ. ೮-೨-೧೫) ಎಂಬುದರಿಂದ ವತ್ವ. **ರೇ ಶಬ್ದಾಚ್ಚ ಮತುಪ ಉದಾತ್ತತ್ವಂ ವಕ್ತವ್ಯಮ್**—(ಕಾ. ೬-೧-೧೭೬-೧)ಎಂಬುದರಿಂದ ಮತುಪ್ ಪಿತ್ತಾದರೂ ಉದಾತ್ತಸ್ವರ ಬರುತ್ತದೆ.

**ಉಚ್ಛಂತು**—ಉಛೀ ವಿವಾಸೇ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುದಿನಾಃ—ಆದ್ಯುದಾತ್ತಂ ದ್ವಚ್ ಛಂದಸಿ—**(ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಉಷಸಃ**—ಉಷಸ್ ಶಬ್ದ. ಪ್ರಥಮಾ ಬಹುವಚನಾಂತರೂಪ. ವ್ಯತ್ಯಯದಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ಪ್ರ ಬೋಧಯೋಷಃ ಪೃಣತೋ ಮಘೋನ್ಯಬುಧ್ಯಮಾನಾಃ ಪಣಯಃ ಸಸಂತು ।
ರೇವದುಚ್ಛ ಮಘವದ್ಭ್ಯೋ ಮಘೋನಿ ರೇವತ್ಸ್ತೋತ್ರೇ ಸೂನೃತೇ ಜಾರ-
ಯಂತೀ ॥ ೧೦ ॥

॥ ಪದಪಾಠಃ ॥

ಪ್ರ । ಬೋಧಯ । ಉಷಃ । ಪೃಣತಃ । ಮಘೋನಿ । ಅಬುಧ್ಯಮಾನಾಃ । ಪಣಯಃ । ಸಸಂತು ।
ರೇವತ್ । ಉಚ್ಛ । ಮಘವತ್ಽಭ್ಯಃ । ಮಘೋನಿ । ರೇವತ್ । ಸ್ತೋತ್ರೇ । ಸೂನೃತೇ
ಜರಯಂತೀ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಮಘೋನಿ ಮಘವತ್ಯಸ್ಮಭ್ಯಂ ದಾತವ್ಯೈರ್ಬಹುಭಿರ್ಧನೈಸ್ತದ್ವತ್ಯುಷೋ ಹೇ ಉಷೋ-ದೇವಿ ಪೃಣತೋ ಹವಿಷ್ಪ್ರದಾನಸ್ಮಾನ್ಯಜಮಾನಾನ್ಪ್ರ ಬೋಧಯ । ಪ್ರಜ್ಞಾಪಯ । ಪ್ರತಿಬುದ್ಧಾನ್ಕುರು । ಕಿಂಚ ಪಣಯೋ ವ್ಯಯಾಸಹಿಷ್ಣವೋ ವಣಿಜಃ । ಪಣಿರ್ವಣಿಗ್ಭವತೀತಿ ಯಾಸ್ಕಃ । ನಿ. ೨-೧೭ । ಪಣಯ ಇತಿ ಲುಬ್ಧಕಾ ಅಬುಧ್ಯಮಾನಾ ಯಾಗಾದೀನಕುರ್ವಾಣಾ ಅದಾನಶೀಲಾ ಅಸ್ಮಚ್ಛತ್ರವಃ ಸಸಂತು । ಸ್ವಪಂತು । ದೀರ್ಘನಿದ್ರಾ ಭವಂತು । ಮ್ರಿಯಂತಾಮಿತ್ಯರ್ಥಃ । ತಥಾ ಚ ಮಂತ್ರಾಂತರಂ । ಸಸಂತು ತ್ಯಾ ಅರಾತಯೋ ಬೋಧಂತು ಶೂರ ರಾತಯಃ । ಋ. ೧-೨೯-೪ । ಇತಿ । ಕಿಂಚ ಹೇ ಮಘೋನ್ಯಸ್ಮದ್ದತ್ತ-ಹವಿರ್ಭಿಸ್ತದ್ವತಿ ಹೇ ಉಷಃ ಮಘವದ್ಭ್ಯೋ ಹವಿರ್ಲಕ್ಷಣಾನ್ನವದ್ಭ್ಯೋ ಯಜಮಾನೇಭ್ಯಸ್ತೇಷಾಮರ್ಥಂ ರೇವದ್ಧನವತ್ಸಮೃದ್ಧಿಮದುಚ್ಛ । ವಿಭಾಹಿ । ಕಿಂಚ ಹೇ ಸೂನೃತೇ ಸುಷ್ಠು ಮನುಷ್ಯಾಣಾಂ ನೇತ್ರಿ ದೇವಿ ಜರಯಂತೀ ಸರ್ವಪ್ರಾಣಿನಃ ಕ್ಷಪಯಂತೀ ತ್ವಂ ಸ್ತೋತ್ರೇ ಸ್ತುತಿಕರ್ತ್ರೇ ಯಜಮಾನಾಯ ತದರ್ಥಂ ರೇವದ್ಧನವತ್ಸಮೃದ್ಧ್ಯರ್ಥಮುಚ್ಛೇತಿ ಶೇಷಃ ॥

॥ ಪ್ರತಿಪದಾರ್ಥ ॥

**ಮಘೋನಿ**—(ನಮಗೆ ದಾತವ್ಯವಾದ) ಹವೀರೂಪವಾದ ಧನವುಳ್ಳ | (**ಹೇ**) **ಉಷಃ**—ಎಲೈ ಉಷೋದೇವಿಯೇ | **ಪೃಣತಃ**—ಹವಿಷ್ಪ್ರದರಾದ (ಯಾಗಕರ್ತೃಗಳನ್ನು) | **ಪ್ರ ಬೋಧಯ**—ಪ್ರಬುದ್ಧರನ್ನಾಗಿ ಮಾಡು | **ಪಣಯಃ**—ವಣಿಜರಂತೆ (ಲುಬ್ಧರಾಗಿ) | **ಅಬುಧ್ಯಮಾನಾಃ**—ಯಾಗಾದಿಗಳನ್ನು ಮಾಡದಿರುವವರು (ದಾನಶೀಲರಲ್ಲದೇ ಇರುವ ನಮ್ಮ ಶತ್ರುಗಳು) | **ಸಸಂತು**—(ನಾಶವಾಗಲಿ) ನಿದ್ದೆ ಹೋಗಲಿ | (**ಕಿಂಚ**—ಮತ್ತೂ) | (**ಹೇ**) **ಮಘೋನಿ**—ಎಲೈ ಹವಿರ್ಯುಕ್ತಳಾದ ಉಷೋದೇವಿಯೇ | **ಮಘವದ್ಭ್ಯಃ**—ಹವಿರ್ಲಕ್ಷಣ ಅನ್ನವುಳ್ಳ ಯಜಮಾನರುಗಳಿಗೆ | **ರೇವತ್**—ಧನಾದಿಲಾಭವಾಗುವಂತೆ | **ಉಚ್ಛ**—ಪ್ರಕಾಶಿಸು | **ಸೂನೃತೇ**—ಉತ್ತಮ ನೇತ್ರಿಯಾದ ಎಲೈ ದೇವಿಯೇ | **ಜಾರಯಂತೀ**—(ಸರ್ವಪ್ರಾಣಿಗಳಿಗೂ) ಜರೆ (ಮುಪ್ಪು) ಯನ್ನುಂಟುಮಾಡುವ (ನೀನು) | **ಸ್ತೋತ್ರೇ**—ಸ್ತುತಿಕರ್ತೃವಾದ ಯಜಮಾನನಿಗೆ | **ರೇವತ್**—ಐಶ್ವರ್ಯವುಂಟಾಗುವಂತೆ | (**ಉಚ್ಛ**—ಪ್ರಕಾಶಿಸು).

॥ ಭಾವಾರ್ಥ ॥

(ನಮಗೆ ದೇಯವಾದ) ಹವೀರೂಪವಾದ ಧನಯುಕ್ತಳಾದ ಎಲೈ ಉಷೋದೇವಿಯೇ, ಹವಿಷ್ಪ್ರದರಾದ ಯಾಗಕರ್ತೃಗಳನ್ನು ಪ್ರಬುದ್ಧರನ್ನಾಗಿಯೂ, ಯಾಗಾದಿಗಳನ್ನು ಮಾಡದೇ ಲುಬ್ಧರಾಗಿರುವವರನ್ನು ಸುಪ್ತರನ್ನಾಗಿಯೂ (ದೀರ್ಘನಿದ್ರರನ್ನಾಗಿಯೂ) ಮಾಡು; (ಹೇ ಜರಯಿತ್ರೀ, ಮುಪ್ಪಿಗೆ ಕಾರಣಳೇ ಹವಿರಾದಿಯುಕ್ತರಾದವರಿಗೆ) ಐಶ್ವರ್ಯಾದಿಗಳುಂಟಾಗುವಂತೆ ಪ್ರಕಾಶಿಸು.

## English Translation.

Awaken, wealth-abounding Ushas, those who delight (in holy offerings): let the (niggard) traders, reluctant to wake (for such a purpose), sleep on. Arise, opulent Ushas, bearing wealth to the liberal (worshipper): speaker of truth, who are the waster away (of living creatures), arise, bearing wealth to him who praises you.

॥ ವಿಶೇಷವಿಷಯಗಳು ॥

**ಪೃಣತಃ—ಹವಿಃಪ್ರದಾನಸ್ಯಾನ್ಯಜಮಾನಾನ್** | ಹವಿಷ್ಪ್ರದರೂ, ಯಜ್ಞಕರ್ತರೂ ಆದ ನಮ್ಮನ್ನು ಎಂದರ್ಥ. **ಪೃಣಾತಿ** ಎಂಬ ಶಬ್ದವು ನಿರುಕ್ತದಲ್ಲಿ **ದಾನಕರ್ಮ**ನಾಮಗಳಲ್ಲಿ ಪಠಿಸಿದೆ. (ನಿ. ೩-೧೯). ಮತ್ತು ನಿರುಕ್ತಕಾರರು,

**ಅಧ್ವರ್ಯವೋ ಯೋ ದಿವ್ಯಸ್ಯ ವಸ್ವೋ ಯಃ ಪಾರ್ಥಿವಸ್ಯ ಕ್ಷಮ್ಯಸ್ಯ ರಾಜಾ |**
**ತಮೂರ್ದರಂ ನ ಪೃಣತಾ ಯವೇನೇಂದ್ರಂ ಸೋಮೇಭಿಸ್ತದಪೋ ವೋ ಅಸ್ತು ||**

(ಋ. ಸಂ. ೨-೧೪-೧೧)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಪೃಣತಾ** ಎಂಬ ಪದಕ್ಕೆ **ಪೂರಯತಿ** ತುಂಬುತ್ತಾನೆ ಎಂದರ್ಥಮಾಡಿದ್ದಾರೆ. ಅಲ್ಲಿಯೂ ದಾನಾರ್ಥದಲ್ಲಿಯೇ ತಾತ್ಪರ್ಯ.

**ಪಣಯಃ—ವ್ಯಯಾಸಹಿಷ್ಣವೋ ವಣಿಜಃ ।** ಖರ್ಚುಮಾಡಲು ಹಿಂಜರಿಯತಕ್ಕ ವೈಶ್ಯರು (ವ್ಯಾಪಾರಿಗಳು) ಎಂದು ಸಾಯಣರು ವಿವರಿಸಿ ಅನಂತರ **ಪಣಿರ್ವಣಿಗ್ಭವತೀತಿ ಯಾಸ್ಕಃ ।** ಎಂದು ಯಾಸ್ಕರ ಮತವನ್ನುದಹರಿಸಿದ್ದಾರೆ. **ಪಣಿಃ ಪಣನಾತ್ । ವಣಿಕ್ ಪಣ್ಯಂ ನೇನೇಕ್ತಿ ।** ವ್ಯಾಪಾರವನ್ನು ಮಾಡುವುದರಿಂದ ವೈಶ್ಯನಿಗೆ ಪಣಿಯೆಂದು ಹೆಸರು. ಮತ್ತು ಆ ವ್ಯಾಪಾರಿಯು ಯಾವಾಗಲೂ ತನ್ನ ಪದಾರ್ಥವು ವ್ಯಾಪಾರಕ್ಕೆ ಯೋಗ್ಯವಾಗಲೆಂದು ಶುದ್ಧವಾಗಿಟ್ಟಿರುತ್ತಾನೆಂದು ವಿವರಿಸಿ,

**ಕದೂ ಮಹೀರಧೃಷ್ಟಾ ಅಸ್ಯ ತವಿಷೀಃ ಕದು ವೃತ್ರಘ್ನೋ ಅಸ್ತೃತಂ ।**
**ಇಂದ್ರೋ ವಿಶ್ವಾನ್‌ಬೇಕನಾಁ ಅಹರ್ದೃಶ ಉತ ಕ್ರತ್ವಾ ಪಣೀಁರಭಿ ॥**
(ಋ. ಸಂ. ೮-೬೬-೧೦)

ಎಂಬ ಋಕ್ಕನ್ನುದಹರಿಸಿ (ನಿ. ೬-೨೬) **ಪಣೀಂಶ್ಚ ವಣಿಜಃ** ಎಂದು ಪಣಿಶಬ್ದದ ಅರ್ಥವನ್ನು ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸಾಯಣರು **ಪಣಯ ಇತಿ ಲುಬ್ಧಕಾ ಅಬುಧ್ಯಮಾನಾ ಯಾಗಾದೀನಕುರ್ವಾಣಾ ಅದಾನಶೀಲಾ ಅಸ್ಮಚ್ಛತ್ರವಃ ।** ಲೋಭಿಗಳೂ, ಯಾಗಾದಿಕರ್ಮಗಳನ್ನು ನೆರವೇರಿಸದವರೂ, ದಾನಾದಿಕರ್ಮರಹಿತರೂ ಆದ ಶತ್ರುಗಳೆಂದರ್ಥವೆಂದು ವಿವರಿಸಿದ್ದಾರೆ. (**ಪಣಿ**ಯೆಂಬ ಅಸುರರ ಗುಂಪಿನ ವಿಷಯವನ್ನು ಹಿಂದೆ ತಿಳಿಸಿದೆ).

**ಸೂನೃತೇ—ಸುಷ್ಠು ಮನುಷ್ಯಾಣಾಂ ನೇತ್ರಿ ।** ಮಾನವರಿಗೆ ಶ್ರೇಷ್ಠವಾದ ಮಾರ್ಗದರ್ಶಕಳಾದವಳೇ ಎಂದು ಉಷಸ್ಸನ್ನು ಸಂಬೋಧಿಸಿದೆ. **ಸೂನೃತಾ, ಸೂನೃತಾವತೀ, ಸೂನೃತಾವರೀ** ಇತ್ಯಾದಿಗಳೆಲ್ಲವೂ ಉಷಸ್ಸಿನ ವಿಶೇಷಣಗಳು ಅಥವಾ ಪರ್ಯಾಯಪದಗಳು (ನಿ. ೨-೧೯). **ಸೂನೃತೇತಿ ವಾಙ್‌ನಾಮ । ನೇತ್ರೀ ಉತ್ಪಾದಯಿತ್ರೀ । ಉಷಸಃ ಪ್ರಾದುರ್ಭಾವಾನಂತರಂ ಹಿ ಪಶುಪಕ್ಷಿಮೃಗಾದಯಃ ಸರ್ವೇ ಶಬ್ದಂ ಕುರ್ವಂತಿ । ಅತ ಏವ ತಾಸಾಂ ವಾಚಾಂ ಪ್ರವರ್ತಯಿತ್ರೀತ್ಯುಚ್ಯತೇ ।** ಎಂದರೆ **ಸೂನೃತೆ**ವೆಂಬ ಪದವು ಸಮಸ್ತ ವಾಗ್ವ್ಯವಹಾರಗಳೆಲ್ಲಕ್ಕೂ ಅನ್ವಯಿಸುತ್ತದೆ. ಉಷಸ್ಸಿನ ಉದಯದನಂತರವೇ ಸಮಸ್ತ ಪಶುಪಕ್ಷ್ಯಾದಿಗಳ ವಾಗ್ವ್ಯವಹಾರಗಳೆಲ್ಲವೂ ಪ್ರವರ್ತಿಸುವುದರಿಂದ ಉಷಸ್ಸೇ ಅವೆಲ್ಲಕ್ಕೂ ಉತ್ಪಾದಕಗಳು ಎಂದರ್ಥ. ಈ ವಿಶೇಷಣವನ್ನು ಕುತ್ಸಋಷಿಯೂ, ವಸಿಷ್ಠಋಷಿಯೂ ತಮ್ಮ ಕೃತಿಗಳಲ್ಲೂ ವಿಶೇಷವಾಗಿ ಉಪಯೋಗಿಸುತ್ತಾರೆ. ಉದಾಹರಣೆಗೆ—

**ಭಾಸ್ವತೀ ನೇತ್ರೀ ಸೂನೃತಾನಾಮಚೇತಿ ಚಿತ್ರಾ ವಿ ದುರೋ ನ ಆವಃ ।**
**ಪ್ರಾರ್ಪ್ಯಾ ಜಗದ್ವ್ಯು ನೋ ರಾಯೋ ಅಖ್ಯದುಷಾ ಅಜೀಗರ್ಭುವನಾನಿ ವಿಶ್ವಾ ॥**
(ಋ. ಸಂ. ೧-೧೧೩-೪)

**ಏಷಾ ನೇತ್ರೀ ರಾಧಸಃ ಸೂನೃತಾನಾಮುಷಾ ಉಚ್ಛಂತೀ ರಿಭ್ಯತೇ ವಸಿಷ್ಠೈಃ ।**
**ದೀರ್ಘಶ್ರುತಂ ರಯಿಮಸ್ಮೇ ದಧಾನಾ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥**
(ಋ. ಸಂ. ೭-೭೬-೭)

ಇತ್ಯಾದಿ ಋಕ್ಕುಗಳಲ್ಲಿ ಸಾಯಣರು **ಸೂನೃತಾನಾಂ** ಎಂಬ ಪದಕ್ಕೆ **ಸ್ತುತೀನಾಂ ನೇತ್ರೀ** ಎಂದೂ ವ್ಯಾಖ್ಯಾನ ಮಾಡಿರುವರು.

**ಜಾರಯಂತೀ—ಸರ್ವಪ್ರಾಣಿನಃ ಕ್ಷಪಯಂತೀ ।** ಎಲ್ಲಾ ಪ್ರಾಣಿಗಳೂ ಸವೆಯುವಂತೆ ಮಾಡುತ್ತಾ ಎಂದು ಉಷಸ್ಸಿಗೆ ವಿಶೇಷಣವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಬೋಧಯ**—ಬುಧ ಅವಗಮನೇ ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಉಷಃ**—ಸಂಬೋಧನಾ ಏಕವಚನಾಂತರೂಪ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪೃಣತಃ**—ಪೃಣ ಪ್ರೀಣನೇ. ಧಾತು. ತುದಾದಿ ಲಡರ್ಥದಲ್ಲಿ ಶತೃಪ್ರತ್ಯಯ. ದ್ವಿತೀಯಾ ಬಹುವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ**—ಎಂಬುದರಿಂದ ಅದು ಉದಾತ್ತವಾಗುತ್ತದೆ.

**ಮಘೋನಿ**—ಮಘಂ ವನತಿ ಸಂಭಜತೇ ಇತಿ ಮಘೋನೀ **ಶ್ವನ್ನುಕ್ಷನ್**—(ಉ. ಸೂ. ೧-೧೫೭) ಎಂಬುದರಿಂದ ಮಘವನ್ ಶಬ್ದವು ಕನಿನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಇದಕ್ಕೆ ಸ್ತ್ರೀತ್ವ ವಿವಕ್ಷನಮಾಡಿದಾಗ ನಾಂತವಾದುದರಿಂದ **ಋನ್ನೇಭ್ಯೋ ಙೀಪ್** ಎಂಬುದರಿಂದ ಙೀಪ್. ಭಸಂಜ್ಞಾ ಇರುವುದರಿಂದ **ಶ್ವಯುವ ಮಘೋನಾಮತದ್ಧಿತೇ** ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪಬಂದಾಗ ಗುಣ. ಸಂಬುದ್ಧಿಯಲ್ಲಿ **ಅಂಬಾರ್ಥನದ್ಯೋರ್ಹ್ರಸ್ವ** ಎಂಬುದರಿಂದ ಹ್ರಸ್ವ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಬುಧ್ಯಮಾನಾಃ**—ನ ಬುಧ್ಯಮಾನಾಃ ಅಬುಧ್ಯಮಾನಾಃ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಙ್ ಪ್ರಕೃತಿಸ್ವರ ಬರುತ್ತದೆ.

**ಸಸಂತು**—ಷಸ ಸ್ವಪ್ನೇ. ಧಾತು. ಅದಾದಿ. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ರೇವತ್**—ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಉಚ್ಛ**—ಉಛೀ ವಿವಾಸೇ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ ತಿಙಂತನಿಘಾತಸ್ವರ ಬರುತ್ತದೆ.

**ಸ್ತೋತ್ರೇ**—ಷ್ಟುಇಞ್ ಸ್ತುತೌ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಚತುರ್ಥೀ ಏಕವಚನಾಂತರೂಪ. **ಉದಾತ್ತಯಣೋಹಲ್ ಪೂರ್ವಾತ್** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜರಯಂತೀ**—ಜೃಷ್ ವಯೋಹಾನೌ, ಧಾತು. ಪ್ರಯೋಜಕ ವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಜನೀಜ್ರ್ಯಷ್ ಕ್ನಸುರಂಜೋಽಮಂತಾಶ್ಚ** ಎಂಬುದರಿಂದ

ಇದಕ್ಕೆ ಮಿತ್ವವಿರುವುದರಿಂದ **ಮಿತಾಂ ಹ್ರಸ್ವಃ** (ಪಾ. ಸೂ. ೬-೪-೯೨) ಎಂಬುದರಿಂದ ಣಿಚ್ ನಿಮಿತ್ತವಾಗಿ ಬಂದ ವೃದ್ಧಿಗೆ ಹ್ರಸ್ವ. ಣಿಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ, ಅಯಾದೇಶ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ ಅದು ಅನುದಾತ್ತವಾಗುವುದರಿಂದ ಣಿಚ್ ಸ್ವರ ಉಳಿಯುತ್ತದೆ. ॥೧೦॥



॥ ಸಂಹಿತಾಪಾಠಃ ॥

ಅವೇಯಮಶ್ವೈದ್ಯುವತಿಃ ಪುರಸ್ತಾದ್ಯುಂಕ್ತೇ ಗವಾಮರುಣಾನಾಮನೀಕಂ ।
ವಿ ನೂನಮುಚ್ಛಾದಸತಿ ಪ್ರ ಕೇತುರ್ಗೃಹಂಗೃಹಮುಪ ತಿಷ್ಠಾತೇ ಅಗ್ನಿಃ ॥

॥ ಪದಪಾಠಃ ॥

ಅವ । ಇಯಂ । ಅಶ್ವೈತ್ । ಯುವತಿಃ । ಪುರಸ್ತಾತ್ । ಯುಂಕ್ತೇ । ಗವಾಂ । ಅರುಣಾನಾಂ । ಅನೀಕಂ ।
ವಿ । ನೂನಂ । ಉಚ್ಛಾತ್ । ಅಸತಿ । ಪ್ರ । ಕೇತುಃ । ಗೃಹಂಽಗೃಹಂ । ಉಪ । ತಿಷ್ಠಾತೇ । ಅಗ್ನಿಃ ॥ ೧೧ ॥

॥ ಸಾಯಣಭಾಷ್ಯಂ ॥

ಇಯಮುಷಾ ಯುವತಿರ್ಯೌವನೋಪೇತಯೋಷಿತ್ಸ್ಥಾನೀಯಾ । ಯದ್ವಾ । ಸರ್ವೇಷು ಭಾವೇಷು ಮಿಶ್ರಯಂತೀ ಪುರಸ್ತಾತ್ಪೂರ್ವಸ್ಯಾಂ ದಿಶ್ಯವಾಶ್ವೈತ್ । ಅತ್ಯರ್ಥಮಾಗಚ್ಛತಿ ವರ್ಧತೇ ವಾ । ಅತ್ರಾವಶಬ್ದೋ ವಿನಿಗ್ರಹಾರ್ಥೀಯೋ ನ್ಯವೇತಿ ವಿನಿಗ್ರಹಾರ್ಥೀಯೌ । ನಿ. ೧-೩ । ಇತಿ ಯಾಸ್ಕೇನೋಕ್ತತ್ವಾತ್ । ತತ್ಕಥಮವಗಮ್ಯತ ಇತಿ ತತ್ರಾಹ । ಇಯಮರುಣಾನಾಮರುಣವರ್ಣಾನಾಂ ಗವಾಂ ಪ್ರಸಿದ್ಧಾನಾಮೇತನ್ನಾಮಕಾನಾಮಶ್ವಾನಾಂ ವಾನೀಕಂ ಸಮೂಹಂ ಯುಂಕ್ತೇ । ರಥೇ ಯೋಜಯತಿ । ಅರುಣ್ಯೋ ಗಾವ ಉಷಸಾಂ ಶ್ಯಾವಾಃ ಸವಿತುಃ । ನಿ. ೧-೧೫ । ಇತಿ । ಯಥಾ ಲೋಕೇ ವಾಹನಸಂನಾಹಂ ದೃಷ್ಟ್ವಾ ಪ್ರಯಾಣಮನುಮೀಯತೇ ತಥಾತ್ರಾಪ್ಯರುಣರಶ್ಮೀನಾಮಶ್ವಾನಾಂ ದರ್ಶನಾದುಷಾ ಆಗಚ್ಛತೀತ್ಯಧ್ಯವಸೀಯತೇ । ಯದ್ವಾ । ಅರುಣಾನಾಂ ರಶ್ಮೀನಾಂ ಸಮೂಹಂ ಯುಂಕ್ತೇ । ತಥಾ ನೂನಂ ನಿಶ್ಚಯಮೇಷಾ ವ್ಯುಚ್ಛಾತ್ । ತಮೋ ವಿವರ್ಜಯಿಷ್ಯತಿ । ಯತ ಇಯಂ ಗಾ ಯುನಕ್ತಿ ಅತ ಏವ ಕಾರಣಾದ್ಯಥಾ ಲೋಕೇಽಶ್ವಸಂನಾಹಂ ದೃಷ್ಟ್ವೋದಯೋಽನುಮೀಯತೇ ತಥಾತ್ರಾಪೀತ್ಯರ್ಥಃ । ತಾದೃಶೀ ಸಾಸತ್ಯಸತ್ತ್ವಾಯೇ ನೀರೂಪೇಽಂತರಿಕ್ಷೇ ತಿರೋಧಾಯಕತ್ವಾದಶೋಭನೇ ತಮಸಿ ವಾ ಕೇತುಃ

**ಕೇತುಸ್ಥಾನೀಯಾ ಜ್ಞಾಪಯಿತ್ರೀ ಪ್ರಕರ್ಷೇಣ ವಿವಿಧಂ ಭಾಸತೆ ಇತಿ ಶೇಷಃ । ಉಪಸರ್ಗವಶಾದ್ಯೋಗ್ಯ-ಕ್ರಿಯಾಧ್ಯಾಹಾರಃ । ಯದ್ವಾ । ಅಸತಿ ತಮೋರೂಪೇಽಂಧಕಾರೇ ಪ್ರ ಕೇತುಃ ಪ್ರಕರ್ಷೇಣ ಜ್ಞಾಪಯಿತ್ರೀ ಸತೀ ನೂನಂ ವ್ಯುಚ್ಛಾದಿತಿ ಪೂರ್ವತ್ರಾನ್ವಯಃ । ತಸ್ಮಿನ್ಕಾಲೇಽಗ್ನಿರಾಹವನೀಯಾದಿರೂಪೋ ಗೃಹಂ ಗೃಹಂ ಸರ್ವಯಜಮಾನಗೃಹಮಗ್ನಿಹೋತ್ರಾದ್ಯರ್ಥಮುಪ ತಿಷ್ಠಾತೇ । ಉಪತಿಷ್ಠತೇ । ದೀಪ್ಯತ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಇಯಂ**—ಈ ಉಷೆಯು । **ಯುವತಿಃ**—ಯೌವನೋಪೇತಳಾಗಿ । **ಪುರಸ್ತಾತ್**—ಪೂರ್ವದಿಕ್ಕಿನಲ್ಲಿ । **ಅವ ಅಶ್ವೈತ್**—ಬರುತ್ತಾಳೆ (ವರ್ಧಿಸುತ್ತಾಳೆ) । (**ಇಯಂ**—ಇವಳು) । **ಅರುಣಾನಾಂ ಗವಾಂ**—'ಕೆಂಪು' ಬಣ್ಣದ ಗೋವುಗಳ(ಅರುಣವರ್ಣವಾದ ಕಿರಣಗಳ) । **ಅನೀಕಂ**—ಸಮೂಹವನ್ನು । **ಯುಂಕ್ತೇ**—ರಥಕ್ಕೆ ಯೋಜಿಸುತ್ತಾಳೆ (ಹೂಡುತ್ತಾಳೆ) । **ನೂನಂ**—ನಿಶ್ಚಯವಾಗಿಯೂ । **ಅಸತಿ**—(ಪದಾರ್ಥಗಳನ್ನು ಕಾಣಿಸದಂತೆ ಮಾಡುವುದರಿಂದ) ಅಸತ್ತಾದ (ತಮಸ್ಸಿನಲ್ಲಿ) ಅಥವಾ ನೀರೂಪವಾದ ಅಂತರಿಕ್ಷದಲ್ಲಿ । **ಪ್ರ ಕೇತುಃ**—(ಪದಾರ್ಥ) ಜ್ಞಾಪಕಳಾಗಿ । **ವಿ ಉಚ್ಛಾತ್**—(ತಮಸ್ಸನ್ನು) ಚೆನ್ನಾಗಿ ನಿವಾರಿಸುತ್ತಾಳೆ । (ಆಗ) **ಅಗ್ನಿಃ**—(ಆಹವನೀಯಾದಿರೂಪನಾದ) ಅಗ್ನಿಯು । **ಗೃಹಂ ಗೃಹಂ**—ಮನೆ ಮನೆಯಲ್ಲಿಯೂ । **ಉಪ ತಿಷ್ಠಾತೇ**—ಸ್ಥಾಪಿಸಲ್ಪಡುತ್ತದೆ.

॥ ಭಾವಾರ್ಥ ॥

ಯುವತಿಯಂತಿರುವ ಈ ಉಷೆಯು ಪೂರ್ವದಿಕ್ಕಿನಲ್ಲಿ ಉದಯಿಸುತ್ತಾಳೆ. (ಈಕೆಯು) ತನ್ನ ರಥಕ್ಕೆ ಕೆಂಪು ಬಣ್ಣದ ಗೋವುಗಳೆಂಬ ಕುದುರೆಗಳನ್ನು ಹೂಡುತ್ತಾಳೆ (ಉಷಃಕಾಲಕ್ಕೆ ಮೊದಲು ಅರುಣವರ್ಣದ ಕಿರಣಗಳು ಗೋಚರಿಸುತ್ತವೆ);ತಮಸ್ಸನ್ನು ನಿವಾರಣೆ ಮಾಡಿ ಅಂಧಕಾರಾವೃತವಾದ ಪದಾರ್ಥಗಳನ್ನು, ಕಾಣುವಂತೆ ಮಾಡುತ್ತಾಳೆ; (ಉಷಃಕಾಲದಲ್ಲಿ) ಪ್ರತಿಮನೆಯಲ್ಲಿಯೂ ಆಹವನೀಯಾದ್ಯಗ್ನಿಗಳು ಪ್ರಜ್ವಲಿಸಲ್ಪಡುತ್ತವೆ.

English Translation.

This youthful (Ushas) approaches from the east: she harnesses her team of purple cows. Assuredly she will disperse the darkness, a manifest sign (of day) in the firmament: the (sacred) fire is kindled in every dwelling.

॥ ವಿಶೇಷವಿಷಯಗಳು ॥

**ಯುವತಿಃ—ಯೌವನೋಪೇತಯೋಷಿತ್ಸ್ಥಾನೀಯಾ । ಯದ್ವಾ । ಸರ್ವೇಷು ಭಾವೇಷು ಮಿಶ್ರಯಂತೀ ।** ಯೌವನದಿಂದ ಕೂಡಿದ ಸ್ತ್ರೀ ಅಥವಾ ಸರ್ವಭಾವ ಪದಾರ್ಥಗಳಲ್ಲಿಯೂ ಮಿಶ್ರವನ್ನು ಹೊಂದುವವಳು ಎಂದು ಉಷಸ್ಸನ್ನು ವರ್ಣಿಸಿದೆ. **ಪುನಃ ಪುನರ್ಜಾಯಮಾನಾ ಪುರಾಣೀ** (ಋ. ಸಂ. ೧-೯೨-೧೦) ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ ಉಷಸ್ಸು ಒಂದೇ ಕಾಲದಲ್ಲಿ "ಅನಾದಿಯಾಗಿಯೂ, ಶಾಶ್ವತಳಾಗಿಯೂ, ಜಗತ್ಸೃಷ್ಟಿ ಕಾಲದಿಂದಲೂ ನಿತ್ಯತರುಣಿಯಾಗಿಯೂ ಇರುತ್ತಾಳೆ" ಎಂಬ ವರ್ಣನೆಯು ಇಲ್ಲೂ ಇದೆ.

**ದಿವೋದುಹಿತಾ ಭಾನುಮಶ್ರೇತ್** (೧-೯೨-೫) ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆ ಉಷಸ್ಸು ಸೂರ್ಯಕಿರಣಗಳೊಡನೆ ಮಿಶ್ರಿತವಾಗಿ ಯಾವ ರೀತಿಯಲ್ಲಿ ಸೂರ್ಯಕಿರಣಗಳು ಸರ್ವತ್ರ ವ್ಯಾಪಿಸಿ ಸಕಲ ಲೋಕದ ಸಂಪರ್ಕವನ್ನೂ ಹೊಂದುವುವೋ ಅದರಂತೆ ಉಷಸ್ಸೂ ಆ ಸೂರ್ಯಪ್ರಭೆಗಳೊಡನೆ, ತಾನೂ ಲೋಕಸಂಪರ್ಕವನ್ನು ಹೊಂದುವಳು ಎಂಬರ್ಥವು ಎರಡನೆಯ ವಿವರಣೆಯನ್ನು ಸಮರ್ಥಿಸುತ್ತದೆ.

**ಅವ ಅಶ್ವೈತ್—ಶ್ವಯತಿರ್ಗತ್ಯರ್ಥಃ । ಅತ್ಯರ್ಥಮಾಗಚ್ಛತಿ ವರ್ಧತೇ ವಾ । ಅತ್ರ ಅವಶಬ್ದೋ ವಿನಿಗ್ರಹಾರ್ಥೀಯಃ । ನ್ಯವೇತಿ ವಿನಿಗ್ರಹಾರ್ಥೀಯೌ** । (ನಿ. ೧-೩) **ಇತಿ ಯಾಸ್ಕೇನೋಕ್ತತ್ವಾತ್ ।** ಇಲ್ಲಿ **ಶ್ವಿ ಗತಿವೃದ್ಧ್ಯೋಃ ।** ಎಂಬ **ಗತ್ಯರ್ಥಕವೂ, ವೃದ್ಧ್ಯರ್ಥಕವೂ** ಆದ **ಶ್ವಿ** ಧಾತುವಿನೊಡನೆ **ಅವ** ಎಂಬ ಉಪಸರ್ಗವು ಸೇರಿದೆ. ಯಾಸ್ಕರು **ನಿ, ಅವ,** ಎಂಬ ಉಪಸರ್ಗಗಳು **ವಿನಿಗ್ರಹಾರ್ಥೀಯವೆಂದು** ಹೇಳಿದ್ದಾರೆ. ಸ್ಥೂಲವಾಗಿ ನೋಡಿದರೆ **ಅವಾಶ್ವೈತ್ ನ್ಯಶ್ವೈತ್** ಎಂಬ ಪ್ರಯೋಗಕ್ಕೆ ಒಂದು ನಿಯಮಿತವಾದ ಗತಿ ಅಥವಾ ಪ್ರಸರವೆಂದು ಅರ್ಥವು ತೋರುತ್ತದೆ. ಆದರೆ ಸಾಯಣರು ಇಲ್ಲಿ ಸಂದರ್ಭಕ್ಕೆ ಉಚಿತವಾಗಿರುವಂತೆ **ಅವ**+ **ಅಶ್ವೈತ್** ಎಂದರೆ **ಅತ್ಯರ್ಥಮಾಗಚ್ಛತಿ ।** ತಡೆಯಿಲ್ಲದೆ ಸ್ವತಂತ್ರವಾಗಿ ಪ್ರಸರಿಸುತ್ತಾಳೆ ಅಥವಾ ತಡೆಯಿಲ್ಲದ ವೃದ್ಧಿಯನ್ನು ಹೊಂದುತ್ತಾಳೆ ಎಂದು ತಾತ್ಪರ್ಯವೆಂದು ನಿರುಕ್ತದ ಆಧಾರವನ್ನು ಉದಹರಿಸಿ ವಿವರಿಸಿದ್ದಾರೆ. ಈ ಋಕ್ಕಿನಲ್ಲಿ **ಅವ ಅಶ್ವೈತ್** ಎಂದಿರುವಂತೆ,

**ಪಶೂನ್ನ ಚಿತ್ರಾ ಸುಭಗಾ ಪ್ರಥಾನಾ ಸಿಂಧುರ್ನ ಕ್ಷೋದ ಉರ್ವಿಯಾ ವ್ಯಶ್ವೈತ್ ।**
**ಅಮಿನತೀ ದೈವ್ಯಾನಿ ವ್ರತಾನಿ ಸೂರ್ಯಸ್ಯ ಚೇತಿ ರಶ್ಮಿಭಿರ್ದೃಶಾನಾ ॥**

(ಋ. ಸಂ. ೧-೯೨-೧೨)

ಎಂಬ ಋಕ್ಕಿನಲ್ಲಿಯೂ ಸಹ **ವಿ ಅಶ್ವೈತ್** ಎಂಬುದಕ್ಕೆ **ಸರ್ವಂ ಜಗದ್ವ್ಯಾಪ್ನೋತ್** । ಸರ್ವಜಗತ್ತನ್ನೂ ವ್ಯಾಪಿಸಿದಳು ಎಂದರ್ಥವಾಗುವುದೆಂದು ಹಿಂದೆ ತಿಳಿಸಿದೆ.

**ಅರುಣಾನಾಂ ಗವಾಂ—ಪ್ರಸಿದ್ಧಾನಾಂ ಏತನ್ನಾಮಕಾನಾಂ ಅಶ್ವಾನಾಂ ವಾ (ಅನೀಕಂ)। ಅರುಣ್ಯೋ ಗಾವ ಉಷಸಾಂ** (ನಿ. ೨-೨೮) ಉಷಸ್ಸುಗಳ ವಾಹನವು ಅರುಣವರ್ಣದ ಗೋವುಗಳು ಎಂದಿರುವುದು. ಉಷಸ್ಸುಗಳಿಗೆ ಅವು ಅಶ್ವಪರ್ಯಾಯವಾದ ವಾಹನಗಳು, ಅವುಗಳ ಸಮೂಹವನ್ನು ತನ್ನ ರಥಕ್ಕೆ ಸೇರಿಸುತ್ತಾಳೆಂದರ್ಥ.

**ಅಸತಿ—ಅಸತ್ಯಾಯೇ ನೀರೂಪೇಽಂತರಿಕ್ಷೇ ತಿರೋಧಾಯಕತ್ವಾತ್ ಅಶೋಭನೇ ತಮಸಿ ವಾ** । ರೂಪರಹಿತವಾದುದೂ ಆದುರಿಂದಲೇ ಸದಾತ್ಮಕವಲ್ಲದುದೂ ಆದ ಅಂತರಿಕ್ಷವೆಂದಾಗಲಿ ಅಥವಾ ಅಶೋಭನಾತ್ಮಕವಾದ ತಮಸ್ಸೆಂದಾಗಲಿ ಅರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವೈತ್—**ಟುಓಶ್ವಿ ಗತಿವೃದ್ಧ್ಯೋಃ ಧಾತು. ಲುಙ್‌ನಲ್ಲಿ ಅಙ್ ಚಙ್ ವಿಕಲ್ಪವಾದುದರಿಂದ **ಚ್ಲೇಃಸಿಚ್**– ಎಂಬುದರಿಂದ ಸಿಚ್. **ಆಗಮಾನುಶಾಸನಮನಿತ್ಯಮ್—**ಎಂಬ ಪರಿಭಾಷೆಯಿಂದ ಇಡಾಗಮ ಬರುವುದಿಲ್ಲ. **ಸಿಚಿವೃದ್ಧಿ—**(ಪಾ ಸೂ. ೭-೨-೧)ಎಂಬುದರಿಂದ ಧಾತುವಿನ ಇಕ್ಕಿಗೆ ವೃದ್ಧಿ. ಇಡಾದಿಸಿಚ್ ಪರದಲ್ಲಿಲ್ಲದಿರುವುದರಿಂದ **ಹ್ಮ್ಯಂತಕ್ಷಣ—**(ಪಾ. ಸೂ. ೭–೨–೫) ಎಂಬುದರಿಂದ ವೃದ್ಧಿ ಪ್ರತಿಷೇಧ ಬರುವುದಿಲ್ಲ. **ಬಹುಲಂ ಛಂದಸಿ** –

(ಪಾ. ಸೂ. ೭-೩-೯೭) ಎಂಬುದರಿಂದ ಪ್ರತ್ಯಯಕ್ಕೆ ಈಡಾಗಮ ಬರುವುದಿಲ್ಲ. **ಸ್ಕೋಃ ಸಂಯೋ—** ಎಂಬುದರಿಂದ ಸಕಾರಕ್ಕೆ ಲೋಪ ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯುವತಿಃ—** ಯುವನ್ ಶಬ್ದ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಯೂನಸ್ತಿಃ**(ಪಾ. ಸೂ. ೪-೧-೭೭) ಎಂಬುದರಿಂದ ತಿ ಪ್ರತ್ಯಯ **ನಲೋಪಃಪ್ರಾತಿಪದಿಕಾಂತಸ್ಯ—** ಎಂಬುದರಿಂದ ನಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪುರಸ್ತಾತ್— ಪೂರ್ವಾಧರಾ**-(ಪಾ. ಸೂ. ೫-೩-೩೯) ಎಂಬುದರಿಂದ ಅಸ್ತಾತಿ ಪ್ರತ್ಯಯ ಪರವಾದಾಗ ಪೂರ್ವ ಶಬ್ದಕ್ಕೆ ಪುರ್ ಆದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಯುಂಕ್ತೇ—** ಯುಜಿರ್ ಯೋಗೇ ಧಾತು. ಅಂತರ್ಭಾವಿತಣ್ಯರ್ಥಕವಾದ ಧಾತು. ಲಟ್ ಪ್ರಥಮ ಪುರುಷ ಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ. **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. **ಮಿದಚೋಂತ್ಯಾತ್ಪರಃ—** ಪರಿಭಾಷೆಯಿಂದ ಅಂತ್ಯಾಚಿನಪರವಾಗಿ ಬರುತ್ತದೆ. **ಚೋಃಕುಃ—** ಎಂಬುದರಿಂದ ಕುತ್ವ. ಚತ್ವರ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅನೀಕಮ್—** ಅನ ಪ್ರಾಣನೇ ಧಾತು. **ಅನಿಹೃಷಿಭ್ಯಾಂ ಕಿಚ್ಚ—**(ಉ. ಸೂ. ೪-೪೫೭)ಎಂಬುದರಿಂದ ಈಕನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್—** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಉಚ್ಛಾತ್—** ಉಛೀ ವಿವಾಸೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ ಪ—**(ಪಾ. ಸೂ. ೩-೪-೯೭)ಎಂಬುದರಿಂದ ಇಕಾರ ಲೋಪ. **ಲೇಟೋಡಾಟೌ—**(ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಅಸತಿ—** ನ ಸತ್ ಅಸತ್, ತಸ್ಮಿನ್ ಅಸತಿ. **ತತ್ಪುರುಷೇ ತುಲ್ಯಾರ್ಥ—**(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಗೃಹಂಗೃಹಮ್— ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ವೀಪ್ಸಾರ್ಥದಲ್ಲಿ ದ್ವಿರ್ವಚನ. ಪರಕ್ಕೆ ಆಮ್ರೇಡಿತಸಂಜ್ಞೆ ಇರುವಾಗ **ಅನುದಾತ್ತಂ ಚ—**(ಪಾ. ಸೂ. ೮-೧-೩)ಎಂಬುದರಿಂದ ಸರ್ವಾನುದಾತ್ತವಾಗುತ್ತದೆ.

**ಉಪ ತಿಷ್ಠಾತೇ—** ಷ್ಠಾ ಗತಿನಿವೃತ್ತೌ ಧಾತು. ಉಪ ಎಂಬ ಉಪಸರ್ಗ ಸಂಬಂಧವಿರುವುದರಿಂದ **ಉಪಾದ್ದೇವಪೂಜಾಸಂ—**(ಪಾ. ಸೂ. ೧-೩-೨೫-೧) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲೇಟ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. **ಟಿತ ಆತ್ಮನೇ** — ಎಂಬುದರಿಂದ ಟಿಗೆ ಏತ್ವ. **ಲೇಟೋಽಡಾಟೌ—** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ||೧೧||



॥ ಸಂಹಿತಾಪಾಠಃ ॥

ಉತ್ತೇ ವಯಶ್ಚಿದ್ವಸತೇರಪಪ್ತನ್ನರಶ್ಚ ಯೇ ಪಿತುಭಾಜೋ ವ್ಯುಷ್ಟೌ ।
ಅಮಾ ಸತೇ ವಹಸಿ ಭೂರಿ ವಾಮಮುಷೋ ದೇವಿ ದಾಶುಷೇ ಮರ್ತ್ಯಾಯ
॥ ೧೨ ॥

॥ ಪದಪಾಠಃ ॥

ಉತ್ । ತೇ । ವಯಃ । ಚಿತ್ । ವಸತೇಃ । ಅಪಪ್ತನ್ । ನರಃ । ಚ । ಯೇ । ಪಿತುऽಭಾಜಃ । ವಿऽಉಷ್ಟೌ ।
ಅಮಾ । ಸತೇ । ವಹಸಿ । ಭೂರಿ । ವಾಮಂ । ಉಷಃ । ದೇವಿ । ದಾಶುಷೇ । ಮರ್ತ್ಯಾಯ ॥ ೧೨ ॥

॥ ಸಾಯಣಭಾಷ್ಯಂ ॥

ತೇ ತವ ವ್ಯುಷ್ಟೌ ಸತ್ಯಾಂ ವಯಶ್ಚಿದ್ಗಮನವಂತಃ ಪಕ್ಷಿಣೋಽಪಿ । ಚಿದಿತ್ಯೇಷೋಽಪಿಶಬ್ದಾರ್ಥೋ ನಿಪಾತಾನಾಮನೇಕಾರ್ಥತ್ವಾತ್ । ಉಚ್ಚಾವಚೇಷ್ವರ್ಥೇಷು ನಿಪತಂತಿ । ನಿ. ೧-೪ । ಇತಿ ಯಾಸ್ಕೇನೋಕ್ತತ್ವಾತ್ । ವಸತೇರ್ನಿವಾಸಸ್ಥಾನಾನ್ನೀಡಾದೇರುದೂರ್ಧ್ವಮಪಪ್ತನ್ । ಪತಂತಿ । ಪೂರ್ವವಾಕ್ಯೇ ಗೃಹಂ ಗೃಹಮುಪ ತಿಷ್ಠಾತೇಽಗ್ನಿರಿತ್ಯುಕ್ತತ್ವಾತ್ತದಪೇಕ್ಷಯಾಪಿಶಬ್ದಃ । ಕಿಂಚ ನರಶ್ಚ ಮನುಷ್ಯಾಶ್ಚ ಪಿತುಭಾಜೋಽನ್ನವಂತೋಽನ್ನಾರ್ಥಿನಃ ಕೃಷಿವಾಣಿಜ್ಯಾದಿಕರ್ತಾರಃ ಸ್ವಸ್ವವ್ಯಾಪಾರಾರ್ಥಮುದುನ್ಮುಖಾ ಅಪಪ್ತನ್ । ಗಚ್ಛಂತಿ । ತಥಾ ಮಂತ್ರಾಂತರಂ । ಪದ್ವದೀಯತ ಉತ್ಪಾತಯತಿ ಪಕ್ಷಿಣಃ । ಋ. ೧-೪೮-೫ । ಇತಿ । ಏವಂ ಸತ್ಯಾಂ ಹೇ ದೇವಿ ದೇವನಶೀಲ ಉಷೋದೇವತೇಽಮಾ ಗೃಹೇ ದೇವಯಜನಾಖ್ಯೇ ಸತೇ ತಿಷ್ಠತೇ ಯಜಮಾನಾಯ ತದರ್ಥಂ । ಅಮೇತಿ ಗೃಹನಾಮ ಅಮಾ ದಮ ಇತಿ ತನ್ನಾಮಸು ಪಠಿತತ್ವಾತ್ । ಯದ್ವಾ । ಅಮಾ ಸಹ ಹೂಯಮಾನೇನಾಗ್ನಿನಾ ಸಹ ನಿವಸತೇ ಯಜಮಾನಾಯ । ಅಮಾ ವಸೇತಾಮಿತ್ಯಾದೌ ಸಹಾರ್ಥೇ ಪ್ರಯೋಗಾತ್ । ಮರ್ತ್ಯಾಯ ಮನುಷ್ಯಾಯ ದಾಶುಷೇ ಹವಿರ್ದತ್ತವತೇ ಯಜಮಾನಾಯ ಭೂರಿ ವಾಮಂ ಬಹು ಶೋಭನಂ ಧನಂ ವಹಸಿ । ಪ್ರಾಪಯಸಿ ॥

॥ ಪ್ರತಿಪದಾರ್ಥ ॥

**ಉಷಃ**—ಎಲೈ ಉಷೋದೇವಿಯೇ । **ತೇ**—ನಿನ್ನ । **ವ್ಯುಷ್ಟೌ**—ಉದಯವಾಗಲು । **ಯೇ ವಯಃ ಚಿತ್ (ತೇ)**—ಪಕ್ಷಿಗಳೆಲ್ಲವೂ । **ವಸತೇಃ**—ತಮ್ಮ ನಿವಾಸಸ್ಥಾನವಾದ ಗೂಡುಗಳಿಂದ । **ಉತ್ ಅಪಪ್ತನ್**—ಮೇಲಕ್ಕೆ ಹಾರುತ್ತವೆ । **ನರಃ ಚ**—ಮನುಷ್ಯರೂ ಕೂಡ । **ಪಿತುಭಾಜಃ**—ಅನ್ನಾದ್ಯರ್ಥಿಗಳಾಗಿ (ಮನೆಗಳಿಂದ ಹೊರಡುತ್ತಾರೆ) । **ದೇವಿ**—ಎಲೈ ಉಷೋದೇವಿಯೇ (ನೀನು) । **ಅಮಾ ಸತೇ**—ಯಾಗಶಾಲೆಯಲ್ಲಿ (ಅಗ್ನಿಯೊಡನೆ) ಇರುವ । **ದಾಶುಷೇ**—ಹವಿರ್ದಾನಮನಸ್ಕನಾದ । **ಮರ್ತ್ಯಾಯ**—ಯಜಮಾನನಿಗೆ । **ಭೂರಿ ವಾಮಂ**—ಹೆಚ್ಚಾದ ಮತ್ತು ಶುಭವಾದ ಧನವನ್ನು । **ವಹಸಿ**—ತರುತ್ತೀಯೇ.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ನೀನು ಉದಿಸಿದ ಕೂಡಲೇ, ಪಕ್ಷಿಗಳೂ ಮನುಷ್ಯರೂ (ತಮ್ಮ ತಮ್ಮ) ವಾಸ ಸ್ಥಳಗಳಿಂದ ಆಹಾರಾರ್ಥಿಗಳಾಗಿ ಹೊರಡುತ್ತಾರೆ. (ನೀನೂ) ಯಾಗಶಾಲೆಯಲ್ಲಿ (ಸಮಿದ್ಧವಾದ) ಅಗ್ನಿಯೊಡನಿರುವ ಹವಿರ್ದಾನ ಮಾಡಬೇಕೆಂದಿರುವ ಯಜಮಾನನಿಗೆ ಹೆಚ್ಚಾದ ಧನವನ್ನು ತಂದುಕೊಡುತ್ತೀಯೆ.

## English Translation.

At your dawning, (Ushas), the various birds rise up from their nests, and men who have to earn their bread (quit their homes). you bring, divine (Ushas), much wealth to the liberal mortal who is present in the chamber (of sacrifice).

॥ ವಿಶೇಷವಿಷಯಗಳು ॥

**ವಯಶ್ಚಿತ್**—ಪಕ್ಷಿಗಳೆಲ್ಲವೂ ಸಹ. **ಚಿತ್** ಎಂಬ ಪದಕ್ಕೆ ಇಲ್ಲಿ ಅಪಿ ಶಬ್ದಾರ್ಥವೆಂದು ಹೇಳಿದೆ. ನಿರುಕ್ತ ಕಾರರು **ವಯಃ** ಎಂಬ ಪದವನ್ನು **ಅನ್ನನಾಮ**ಗಳಲ್ಲಿ ಮಾತ್ರ ಸೇರಿಸಿದ್ದಾರೆ. (೨-೯) ಆದರೆ ಈ ಪದಕ್ಕೆ ಇನ್ನೂ ಬೇರೆ ಬೇರೆ ಅರ್ಥಗಳಿವೆ.

**ಪ್ರ ಸೀಮಾದಿತ್ಯೋ ಅಸೃಜದ್ವಿಧರ್ತಾँ ಋತಂ ಸಿಂಧವೋ ವರುಣಸ್ಯ ಯಂತಿ ।**
**ನ ಶ್ರಾಮ್ಯಂತಿ ನ ವಿ ಮುಚ್ಯಂತ್ಯೇತೇ ವಯೋ ನ ಪಪ್ತೂ ರಘುಯಾ ಪರಿಜ್ಮನ್ ॥**
(ಋ. ಸಂ. ೨-೨೮-೪)

ಇತ್ಯಾದಿ ಋಕ್ಕುಗಳಲ್ಲಿ ಶೀಘ್ರವಾಗಿ ಸಂಚರಿಸುವುದರಿಂದ **ವಯಃ** ಎಂಬ ಪದವು **ಪಕ್ಷಿಪರ್ಯಾಯ**ವಾಗಿಯೂ,

**ತದಿಂದ್ರ ಪ್ರೇವ ವೀರ್ಯಂ ಚಕರ್ಥ ಯತ್ಸಸಂತಂ ವಜ್ರೇಣಾಬೋಧಯೋಽಹಿಂ ।**
**ಅನು ತ್ವಾ ಪತ್ನೀರ್ಹೃಷಿತಂ ವಯಶ್ಚ ವಿಶ್ವೇ ದೇವಾಸೋ ಅಮದನ್ನನು ತ್ವಾ ।**
(ಋ. ಸಂ. ೧-೧೦೩-೭)

ಎಂಬಲ್ಲಿ **ಗಂತೃತ್ವಾತ್ ಪಕ್ಷಿಸಾದೃಶ್ಯಾದ್ವಾ ಮರುತೋಽತ್ರ ವಯ ಉಚ್ಯಂತೇ** ಎಂದು ಪಕ್ಷಿಸಾದೃಶ್ಯವಿರುವುದರಿಂದ **ಮರುತ್ತು**ಗಳಿಗೂ ಪರ್ಯಾಯಪದವಾಗಿಯೂ, ಉಪಯೋಗಿಸಲ್ಪಟ್ಟಿದೆ. ಹೀಗೆಯೇ **ಶಕ್ತಿ ಆಯುಸ್ಸು** ಇತ್ಯಾದ್ಯರ್ಥಗಳೂ ರೂಢಿಯಲ್ಲಿರುವುವು ಮತ್ತು—

**ಯೋನಿಷ್ಟ ಇಂದ್ರ ನಿಷದೇ ಅಕಾರಿ ತಮಾ ನಿ ಷೀದ ಸ್ವಾನೋ ನಾರ್ವಾ ।**
**ವಿಮುಚ್ಯಾ ವಯೋಽವಸಾಯಾಶ್ವಾನ್ದೋಷಾ ವಸ್ತೋರ್ವಹೀಯಸಃ ಪ್ರಪಿತ್ವೇ ॥**
(ಋ. ಸಂ. ೧-೧೦೪-೧)

ಎಂಬಲ್ಲಿ **ಅಶ್ವಬಂಧನಾರ್ಥಾನ್ ರಶ್ಮೀನ್ ।** ಅಶ್ವಬಂಧನಕ್ಕಾಗಿ ಹಿಡಿದಿರುವ ಲಗಾಮೆಂದೂ ಅರ್ಥವಾಗುತ್ತದೆಂದು ಹೇಳಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸಾಧಾರಣವಾದ ಪ್ರಯೋಗವಿರುವಂತೆ **ಪಕ್ಷಿ**ಯೆಂದರ್ಥ.

**ಪಿತುಭಾಜಃ**— **ಪಿತು**ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩.೯) **ಪಿತುಭಾಜಃ** ಎಂದರೆ **ಅನ್ನವಂತಃ ಅನ್ನಾರ್ಥಿನಃ** । ಅನ್ನಕ್ಕಾಗಿ ಪ್ರಯತ್ನಪಡುವವರು ಎಂದರ್ಥ ಮಾಡಿದೆ. **ಕೃಷಿವಾಣಿಜ್ಯಾದಿಕರ್ತಾರಃ ಸ್ವಸ್ವವ್ಯಾಪಾರಾರ್ಥಂ ಉದನ್ಮುಖಾ ಅಪಪ್ತನ್** । ಕೃಷಿ, ವ್ಯಾಪಾರ ಇತ್ಯಾದಿ ವ್ಯವಹಾರಗಳಿಂದ ಜೀವಿಸುವವರು ಉಷಸ್ಸಿನ ಉದಯವಾದೊಡನೆಯೇ ತಮ್ಮ ತಮ್ಮ ಕೆಲಸಗಳನ್ನು ಗುರಿಯಲ್ಲಿಟ್ಟುಕೊಂಡು ಹೊರ ಹೊರಡುವರು ಎಂದು ತಾತ್ಪರ್ಯ.

**ಅಮಾ**—ಗಯಃ ಕೃದರಃ ಇತ್ಯಾದಿ ಗೃಹನಾಮಗಳಲ್ಲಿ ಈ ಪದವು ಪಠಿತವಾಗಿದೆ. (ನಿ. ೩-೧೩) ನಿರುಕ್ತಕಾರರು,

**ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।**
**ಸಾ ನೋ ಅಮಾ ಸೋ ಅರಣೇ ನಿ ಪಾತು ಸ್ವಾವೇಶಾ ಭವತು ದೇವಗೋಪಾ ॥**

(ಋ. ಸಂ. ೧೦-೬೩-೧೬)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಅಮಾ** ಎಂಬ ಶಬ್ದಕ್ಕೆ **ಗೃಹ**ವೆಂಬರ್ಥವೆಂದು ತೋರಿಸಿದ್ದಾರೆ. (ನಿ. ೧೧-೪೬) ಪ್ರಕೃತವಾದ ಋಕ್ಕಿನಲ್ಲಿ **ಅಮಾ ಸತೇ** ಎನ್ನುವುದಕ್ಕೆ **ದೇವಯಜನಾಖ್ಯೇ ಗೃಹೇ** ಯಾಗಶಾಲೆಯಲ್ಲಿ ಎಂದರ್ಥ ಮಾಡಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ವಯಃ**— ವಾ ಗತಿಗಂಧನಯೋಃ. **ವಾತೇರ್ಡಿಚ್ಚ**—(ಉ. ಸೂ. ೪-೫೭೩) ಎಂಬುದರಿಂದ ಇಞ್ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಟಿಗೆ ಲೋಪ. ವಿ ಎಂದು ರೂಪವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ವಸತೇಃ**— ವಸ ನಿವಾಸೇ ಧಾತು. **ವಹಿವಸ್ಯರ್ತಿಭ್ಯಶ್ಚಿತ್**—(ಉ. ಸೂ. ೪-೫೦೦) ಎಂಬುದರಿಂದ ಅತಿಪ್ರತ್ಯಯ. ಚಿತ್ವವಿಧಾನ ಮಾಡಿರುವುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

**ಅಪಪ್ತನ್**— ಪತ್ಲೃ ಗತೌ ಧಾತು. **ಛಂದಸಿ ಲುಙ್ ಲಙ್ ಲಿಟಃ**— ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಇತಶ್ಚ**— ಎಂಬುದರಿಂದ ಇಕಾರಲೋಪ. ಅಂತಾದೇಶ. ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—(ಪಾ. ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ. **ಪತಃ ಪುಮ್**—(ಪಾ. ಸೂ. ೭-೪-೧೯) ಎಂಬುದರಿಂದ ಧಾತುವಿಗೆ ಪುಮಾಗಮ. ಮಿತ್ತಾದುದರಿಂದ ಅಂತ್ಯಾಚಿನಪರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ನರಃ**— ನೄ ನಯೇ ಧಾತು. ಕ್ವಿಪ್ ಪ್ರತ್ಯಯ. ಜಸ್ ಪರವಾದಾಗ **ಋತೋಙಿ ಸರ್ವನಾಮಸ್ಥಾನಯೋಃ**— ಎಂಬುದರಿಂದ ಗುಣ.

**ಪಿತುಭಾಜಃ**— ಪಿತುಂ ಭಜಂತೇ ಇತಿ ಪಿತುಭಾಜಃ. ಭಜ ಸೇವಾಯಾಂ ಧಾತು. **ಭಜೋಣ್ವಿಃ**—(ಪಾ. ಸೂ. ೩-೨-೬೨) ಎಂಬುದರಿಂದ ಣ್ವಿ ಪ್ರತ್ಯಯ. ಣಿತ್ತಾದುದರಿಂದ **ಅತ ಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾ ವೃದ್ಧಿ. ಣ್ವಿಯಲ್ಲಿ ಸರ್ವಲೋಪವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಸತೇ**—ಅಸ ಭುವಿ. ಧಾತು. ಲಟಿಗೆ ಶತೃ ಪ್ರತ್ಯಯ. ಶಪಿಗೆ ಲುಕ್ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಅಕಾರಕ್ಕೆ ಲೋಪ. ಚತುರ್ಥೀ ಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ವಹಸಿ**—ವಹ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ದಾಶುಷೇ**—ದಾಶೃ ದಾನೇ. ಧಾತು. **ದಾಶ್ವಾನ್ ಸಾಹ್ವಾನ್**—(ಪಾ. ಸೂ. ೬-೧-೧೨) ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚತುರ್ಥೀ ಏಕವಚನದಲ್ಲಿ **ವಸೋಃ ಸಂಪ್ರಸಾರಣಮ್** ಎಂಬುದರಿಂದ ಸಂಪ್ರಸಾರಣ. **ಶಾಸಿವಸಿಘಸೀನಾಂ ಚ** ಎಂಬುದರಿಂದ ಷತ್ವ.

**ಮರ್ತ್ಯಾಯ**—ಮೃಙ್ ಪ್ರಾಣತ್ಯಾಗೇ. ಧಾತು. **ಅಸಿಹಸಿಮೃ**—(ಉ. ಸೂ. ೩-೩೬೬) ಎಂಬುದರಿಂದ ಔಣಾದಿಕ ತನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಮರ್ತ ಎಂದು ರೂಪವಾಗುತ್ತದೆ. ಮರ್ತೇಷು ಭವಃ ಮರ್ತ್ಯಃ **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ಯತೋ ನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ. ॥ ೧೨ ॥



॥ ಸಂಹಿತಾಪಾಠಃ ॥

**ಅಸ್ತೋಢ್ವಂ ಸ್ತೋಮ್ಯಾ ಬ್ರಹ್ಮಣಾ ಮೇಽವೀವೃಧಧ್ವಮುಶತೀರುಷಾಸಃ ।**
**ಯುಷ್ಮಾಕಂ ದೇವೀರವಸಾ ಸನೇಮ ಸಹಸ್ರಿಣಂ ಚ ಶತಿನಂ ಚ ವಾಜಂ ॥ ೧೩ ॥**

॥ ಪದಪಾಠಃ ॥

**ಅಸ್ತೋಢ್ವಂ । ಸ್ತೋಮ್ಯಾಃ । ಬ್ರಹ್ಮಣಾ । ಮೇ । ಅವೀವೃಧಧ್ವಂ । ಉಶತೀಃ । ಉಷಸಃ ।**
**ಯುಷ್ಮಾಕಂ । ದೇವೀಃ । ಅವಸಾ । ಸನೇಮ । ಸಹಸ್ರಿಣಂ । ಚ । ಶತಿನಂ । ಚ ।ವಾಜಂ ॥ ೧೩ ॥**

॥ ಸಾಯಣಭಾಷ್ಯಂ ॥

ಏವಂ ಸೂಕ್ತದ್ವಯೋಕ್ತರೀತ್ಯಾ ಬಹುಧಾ ಸ್ತುತ್ವಾ ತಾಂ ಚ ಸ್ತುತಿಮನಯಾ ನಿವೇದಯಿತ್ವಾ ಸ್ವಾಭೀಷ್ಟಂ ಪ್ರಾರ್ಥಯತೇ । ಹೇ ಸ್ತೋಮ್ಯಾಃ । ಸ್ತೋಮಃ ಸ್ತೋತ್ರಂ । ತದರ್ಹಂತೀತಿ ಸ್ತೋಮ್ಯಾಃ ಸ್ತುತ್ಯರ್ಹಾ ಉಷಸಃ । ಯತೋ ಯೂಯಂ ತಾದೃಶ್ಯಃ ಅತೋ ನೋ ಮತ್ಸ್ವಭೂತೇನ ಬ್ರಹ್ಮಣಾ ಸೂಕ್ತದ್ವಯಗತಮಂತ್ರರೂಪೇಣ ಸ್ತೋತ್ರೇಣಾಸ್ತೋಢ್ವಂ । ಸ್ತುತಾ ಭವತ । ಕಿಂಚ ಹೇ ಉಷಾಸ ಉಷಸಃ ಉಶತೀಃ ಸ್ತೋತೄನಸ್ಮಾನ್ ಅಸ್ಮತ್ಸಮೃದ್ಧಿಂ ವಾ ಕಾಮಯಮಾನಾ ಯೂಯಮವೀವೃಧಧ್ವಂ । ಅಸ್ಮಾನ್ಪ್ರವರ್ಧಯತ । ಕಿಂಚ ಹೇ ದೇವೀರ್ದೇವ್ಯೋ ದೇವನಶೀಲಾಃ ಯುಷ್ಮಾಕಮವಸಾ ಯುಷ್ಮತ್ಸಂಬಂಧಿನಾ ರಕ್ಷಣೇನ ವಯಂ ಸಹಸ್ರಿಣಂ ಸಹಸ್ರಸಂಖ್ಯಾಕಮಭೀಷ್ಟಂ ಧನಂ ಸನೇಮ । ಲಭೇಮಹಿ । ತಥಾ ಶತಿನಂ ಚ ವಾಜಂ ಶತಸಂಖ್ಯಾಕಮಪರಿಮಿತಂ ಧನಂ ಸನೇಮ । ಯುಷ್ಮತ್ಕೃತೇನ ಶತಸಹಸ್ರ-ಪರಿಮಿತಧನಾದಿರೂಪರಕ್ಷಣೇನ ವಯಮಪ್ಯರ್ಥಿಭ್ಯಃ ಶತಸಹಸ್ರಪರಿಮಿತಸ್ಯ ಧನಸ್ಯ ಸನಿತಾರೋ ಭವೇಮೇತ್ಯರ್ಥಃ ॥

॥ ಪ್ರತಿಪದಾರ್ಥ ॥

**(ಹೇ) ಸ್ತೋಮ್ಯಾಃ**—ಸ್ತುತ್ಯರಾದ ಎಲೈ ಉಷೋದೇವತೆಗಳೇ । **ನೋ**—ನನ್ನ । **ಬ್ರಹ್ಮಣಾ**—(ಸೂಕ್ತದ್ವಯಗತವಾದ) ಮಂತ್ರದಿಂದ । **ಅಸ್ತೋಢ್ವಂ**—ಸ್ತುತರಾಗಿರಿ । **(ಹೇ) ಉಷಾಸಃ**—ಎಲೈ ಉಷೋದೇವತೆಗಳೇ । **ಉಶತೀಃ**—(ನಮ್ಮ) ಸಮೃದ್ಧಿಯನ್ನು ಅಥವಾ ಸ್ತೋತೃಗಳಾದ ನಮ್ಮನ್ನು ಅಪೇಕ್ಷಿಸುವವರಾಗಿ । **ಅವೀವೃಧಧ್ವಂ**—(ನಮ್ಮನ್ನು) ಅಭಿವೃದ್ಧಿಗೊಳಿಸಿ । **ಹೇ ದೇವೀಃ**—ಎಲೈ ದೇವತೆಗಳೇ । **ಯುಷ್ಮಾಕಂ**—ನಿಮ್ಮ । **ಅವಸಾ**—ರಕ್ಷಣೆಯಿಂದ (ಯುಕ್ತರಾಗಿ ನಾವು)। **ಶತಿನಂ ಚ ಸಹಸ್ರಿಣಂ ಚ**—ನೂರರಷ್ಟು, ಸಾವಿರದಷ್ಟು । **ವಾಜಂ**—ಧನವನ್ನು । **ಸನೇಮ**—ಪಡೆಯೋಣ.

॥ ಭಾವಾರ್ಥ ॥

ಸ್ತುತ್ಯರಾದ ಎಲೈ ಉಷೋದೇವತೆಗಳೇ, ನಮ್ಮ (ಈ ಸೂಕ್ತದ್ವಯಾತ್ಮಕ) ಮಂತ್ರಗಳಿಂದ ಸ್ತುತರಾಗಿ, (ನಮ್ಮ) ಅಭಿವೃದ್ಧಿಯನ್ನೇ ಅಪೇಕ್ಷಿಸುವ (ನೀವು) (ನಮ್ಮನ್ನು) ಅಭಿವೃದ್ಧಿಗೊಳಿಸಿ ; ನಿಮ್ಮಿಂದ ರಕ್ಷಿತರಾಗಿ (ನಾವು) ಅಪರಿಮಿತಧನವನ್ನು ಪಡೆಯುವಂತೆ (ಅನುಗ್ರಹಿಸಿ).

English Translation.

Praiseworthy Ushasas, be glorified by this (my) hymn ; graciously disposed towards us, augment (our prosperity) ; and may we obtain, goddesses, through your favour, wealth, a hundred and a thousand fold.

॥ ವಿಶೇಷವಿಷಯಗಳು ॥

**ಬ್ರಹ್ಮಣಾ—ಸೂಕ್ತದ್ವಯಗತಮಂತ್ರರೂಪೇಣ ಸ್ತೋತ್ರೇಣ ।** ಇದರ ಹಿಂದಿನ ಸೂಕ್ತ (೧-೧೨೩) ಮತ್ತು ಪ್ರಕೃತವಾದ ಸೂಕ್ತ ಈ ಎರಡರಲ್ಲೂ ಅಂತರ್ಗತವಾಗಿರುವುದು ಮತ್ತು ಮಂತ್ರರೂಪವಾಗಿರುವುದೂ ಆದ ಸ್ತೋತ್ರದಿಂದ ಎಂದರ್ಥಮಾಡಿದೆ.

**ಬ್ರಹ್ಮ**ಶಬ್ದಕ್ಕೆ ನಾನಾರ್ಥಗಳಿವೆ. ಈ ಪದವು ಅನ್ನನಾಮಗಳಲ್ಲಿಯೂ (ನಿ. ೩–೯), **ಧನ**ನಾಮಗಳಲ್ಲಿಯೂ (೩–೯) ಪಠಿತವಾಗಿದೆ. ಇಷ್ಟೇ ಅಲ್ಲದೇ **ಸ್ತೋತ್ರ, ಕರ್ಮ** ಈ ಪದಗಳಿಗೆ ಪರ್ಯಾಯಪದವಾಗಿಯೂ ಉಪಯೋಗಿಸಲ್ಪಟ್ಟಿದೆ.

**ಬ್ರಹ್ಮಾ ಕೃಣೋತಿ ವರುಣೋ ಗಾತುವಿದಂ ತಮೀಮಹೇ ।**
**ವ್ಯೂರ್ಣೋತಿ ಹೃದಾ ಮತಿಂ ನವ್ಯೋ ಜಾಯತಾಮೃತಂ ವಿತ್ತಂ ಮೇ ಅಸ್ಯ ರೋದಸೀ ॥**
(ಋ. ಸಂ. ೧-೧೦೫-೧೫)

ಎಂಬ ಋಕ್ಕಿನಲ್ಲಿ **ರಕ್ಷಣರೂಪಂ ಕರ್ಮ**—ಎಂದು ಕರ್ಮವೆಂದರ್ಥಮಾಡಿದೆ. ನಿರುಕ್ತಕಾರರೂ ಸಹ,

**ಯಾಮಥರ್ವಾ ಮನುಷ್ಪಿತಾ ದಧ್ಯಙ್ ಧಿಯಮತ್ನತ ।**
**ತಸ್ಮಿನ್ ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು ಸ್ವರಾಜ್ಯಂ ॥**
(ಋ. ಸಂ ೧-೮೦-೧೬)

ಎಂಬ ಋಕ್ಕನ್ನುದಹರಿಸಿ **ಕರ್ಮಾ**ಣಿ ಎಂದರ್ಥಮಾಡಿದ್ದಾರೆ. ಮತ್ತು

**ಆನ್ಯಂ ದಿವೋ ಮಾತರಿಶ್ವಾ ಜಭಾರಾಮಥ್ನಾದನ್ಯಂ ಪರಿ ಶ್ಯೇನೋ ಅದ್ರೇಃ ।**
**ಅಗ್ನೀಷೋಮಾ ಬ್ರಹ್ಮಣಾ ವಾವೃಧಾನೋರುಂ ಯಜ್ಞಾಯ ಚಕ್ರಥುರು ಲೋಕಂ ।**
(ಋ. ಸಂ. ೧-೯೩-೬)

ಎಂಬಲ್ಲಿ **ಮಂತ್ರರೂಪೇಣ ಸ್ತೋತ್ರೇಣ ಹವಿರ್ಲಕ್ಷಣೇನಾನ್ನೇನ ವಾ** ಮಂತ್ರರೂಪವಾದ ಸ್ತೋತ್ರದಿಂದ ಅಥವಾ ಹವಿಸ್ಸಿನ ರೂಪವಾದ ಅನ್ನದಿಂದ ಎಂದರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ **ಮಂತ್ರ**ರೂಪವಾದ ಸ್ತೋತ್ರದಿಂದ ಎಂಬುದು ಸ್ಪಷ್ಟವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಸ್ತೋಢ್ವಮ್**—ಷ್ಟುಞ್ ಸ್ತುತೌ ಧಾತು. ಕರ್ಮಣಿಯಲ್ಲಿ ಲುಙ್ ಮಧ್ಯಮಪುರುಷ ಬಹುವಚನದಲ್ಲಿ ಧ್ವಮ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಅಂಗಕ್ಕೆ ಅಡಾಗಮ. **ಇಣಃಷೀಧ್ವಂಲುಙ್‌ಲಿಟಾಂಧೋಂಗಾತ್** (ಪಾ. ಸೂ. ೮-೩-೭೮) ಎಂಬುದರಿಂದ ಧಕಾರಕ್ಕೆ ಮೂರ್ಧನ್ಯಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಅಡಾಗಮ ಉದಾತ್ತವಾಗುವುದರಿಂದ ಆದ್ಯುದಾತ್ತವಾಗುತ್ತದೆ.

**ಸ್ತೋಮ್ಯಾಃ**—ಸ್ತೋಮಮರ್ಹಂತಿ ಇತಿ ಸ್ತೋಮ್ಯಾಃ. ಅರ್ಹಾರ್ಥದಲ್ಲಿ ಯತ್ ಪ್ರತ್ಯಯ. ಸಂಬೋಧಾನದಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮–೧–೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅವೀವೃಧಧ್ವಮ್**—ವೃಧು ವೃದ್ಧೌ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** ಸೂತ್ರದಿಂದ ಣಿಚ್. ಛಾಂದಸವಾಗಿ ಲೋಡರ್ಥದಲ್ಲಿ ಣ್ಯಂತದ ಮೇಲೆ ಲುಙ್. ಮಧ್ಯಮಪುರುಷ ಬಹುವಚನದಲ್ಲಿ ಧ್ವಮ್ ಪ್ರತ್ಯಯ. **ಣಿಶ್ರಿದ್ರುಸ್ರುಭ್ಯಃ**—ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** ಎಂಬುದರಿಂದ ಧಾತುವಿಗೆ ದ್ವಿತ್ವ. ಇಲ್ಲಿ **ಉರೃತ್** (ಪಾ. ಸೂ. ೭-೪-೭) ಎಂಬುದರಿಂದ ಧಾತುವಿನ ಉಪಧೆಗೆ ಋಕಾರಕ್ಕೆ ಋಕಾರವನ್ನೇ

ವಿಧಾನಮಾಡಿರುವುದರಿಂದ ಅಂತರಂಗವಾದರೂ ಗುಣ ಬರುವುದಿಲ್ಲ. ದ್ವಿತ್ವಬಂದಾಗ ಆದಿಹಲ್‌ಶೇಷ. **ಸನ್ವಲ್ಲಘುನಿ—** (ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವ ಬರುವುದರಿಂದ **ಸನ್ಯತಃ** (ಪಾ. ಸೂ. ೭-೪-೭೯) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ದೀರ್ಘೋಲಘೋಃ** (ಪಾ. ಸೂ. ೭-೪-೯೪) ಎಂಬುದರಿಂದ ಅದಕ್ಕೆ ದೀರ್ಘ. **ಣೇರನಿಟಿ** ಎಂಬುದರಿಂದ ಣಿಚಿಗೆ ಲೋಪ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಉಶತೀಃ**—ವಶ ಕಾಂತೌ ಧಾತು. ಇದಕ್ಕೆ ಲಟ್ ಬಂದಾಗ ಶತ್ರಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್ **ಸಾರ್ವಧಾತುಕಮಪಿತ್** ಎಂಬುದರಿಂದ ಶತೃ ಙಿತ್ತಾದುದರಿಂದ **ಗ್ರಹಿಜ್ಯಾವಯಿ—** ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. **ಉಗಿತಶ್ಚ** ಎಂಬುದರಿಂದ ಙೀಪ್. ನುಮ್‌ರಹಿತವಾದ ಶತೃವಿನ ಪರದಲ್ಲಿ ಙೀಪ್ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಉಷಾಸಃ**—ಜಸ್ ಪರವಾದಾಗ ಛಾಂದಸವಾಗಿ ಸಂಹಿತಾದಲ್ಲಿ ಧೀರ್ಘ ಬರುತ್ತದೆ.

**ದೇವೀಃ**—ದೇವೀ ಶಬ್ದ. ಸಂಬೋಧನಾ ಬಹುವಚನಪರವಾದಾಗ **ಸುಪಾಂಸುಲುಕ್**—(ಪಾ. ಸೂ. (೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ. **ಆಮಂತ್ರಿತಸ್ಯಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅವಸಾ**—ಅವ ರಕ್ಷಣೇ. ಧಾತು. ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ತೃತೀಯಾಏಕವಚನಾಂತರೂಪ.

**ಸನೇಮ**—ಷಣ ಸಂಭಕ್ತೌ ಧಾತು. **ಧಾತ್ವಾದೇಷಃಸಃ** ಎಂಬುದರಿಂದ ಆದಿಗೆ ಸತ್ವ. ವಿಧಿಲಿಙ್ ಉತ್ತಮ ಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಹಸ್ರಿಣಮ್, ಶತಿನಂ**—ಮತ್ವರ್ಥದಲ್ಲಿ ಇನಿಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ. ॥ ೧೩ ॥

ಇಲ್ಲಿಗೆ ನೂರ ಇಪ್ಪತ್ತನಾಲ್ಕನೇ ಸೂಕ್ತ ಮುಗಿದುದು.



## ನೂರ ಇಪ್ಪತ್ತೈದನೆಯ ಸೂಕ್ತವು

**ಪ್ರಾತಾ ರತ್ನಮಿತಿ ಸಪ್ತರ್ಚಂ ಪಂಚಮಂ ಸೂಕ್ತಂ ಕಾಕ್ಷೀವತಂ । ದಾನಸ್ಯ ಸ್ತೂಯಮಾನತ್ವಾದ್ದಾನದೇವತ್ಯಂ ಯಾ ತೇನೋಚ್ಯತೇ ಸಾ ದೇವತಾ । ಅನು. ೨-೫ । ಇತಿ ಪರಿಭಾಷಿತತ್ವಾತ್ । ತ್ರೈಷ್ಟುಭಂ । ಉಪೇತ್ಯಾದಿಕೇ ದ್ವೇ ಜಗತ್ಯೌ । ಪ್ರಾತಾ ರತ್ನಂ ಸಪ್ತ ಸ್ವನಯಸ್ಯ ದಾನಸ್ತುತಿರುಪೇ ಜಗತ್ಯಾವಿತ್ಯನುಕ್ರಮಣಿಕಾ ॥**

ಅನುವಾದವು—**ಪ್ರಾತಾ ರತ್ನಂ** ಎಂಬ ಈ ಸೂಕ್ತವು ಹದಿನೆಂಟನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕಕ್ಷೀವಾನ್ ದೈರ್ಘತಮಸ ಔಶಿಜಃ ಎಂಬುವನು ಋಷಿಯು. ಈ ಸೂಕ್ತದಲ್ಲಿ ದಾನದ ಪ್ರಶಂಸೆ ಇರುವುದರಿಂದ ಈ ಸೂಕ್ತಕ್ಕೆ ದಾನಸ್ತುತಿಯೇ ದೇವತೆಯೆಂದು ಹೇಳಲ್ಪಡುವುದು. ಏಕೆಂದರೆ ಅನುಕ್ರಮಣಿಕೆಯಲ್ಲಿ **ಯಾ ತೇನೋಚ್ಯತೇ ಸಾ ದೇವತಾ** (ಅನು. ೨-೫) ಎಂದರೆ ಋಕ್ಕುಗಳಲ್ಲಿ ಯಾವ ವಿಷಯವು ಹೇಳಲ್ಪಟ್ಟಿರುವುದೋ ಅದೇ ಆ ಋಕ್ಕಿಗೆ ದೇವತೆಯು ಎಂದು ಹೇಳಿರುವುದರಿಂದ ಈ ಸೂಕ್ತಕ್ಕೆ ದಾನ ಪ್ರಶಂಸೆಯೇ ದೇವತೆಯು. ತ್ರಿಷ್ಟುಪ್ ಛಂದಸ್ಸು. **ಉಪಕ್ಷರಂತಿ** ಎಂದು ಮೊದಲಾಗುವ ಎರಡು ಋಕ್ಕುಗಳು (೪-೫) ಜಗತೀ ಛಂದಸ್ಸಿನವು. ಉಳಿದ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ **ಪ್ರಾತಾ ರತ್ನಂ ಸಪ್ತ ಸ್ವನಯಸ್ಯ ದಾನಸ್ತುತಿರುಪ ಜಗತ್ಯೌ** ಎಂದು ಹೇಳಿರುವುದು.

## ಸೂಕ್ತ—೧೨೫

ಮಂಡಲ—೧ ॥ ಅನುವಾಕ—೧೮ ॥ ಸೂಕ್ತ—೧೨೫ ॥
ಅಷ್ಟಕ—೨ ॥ ಅಧ್ಯಾಯ—೧ ॥ ವರ್ಗ—೧೦ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
॥ ಋಷಿಃ—ಕಕ್ಷೀವಾನ್ ದೈರ್ಘತಮಸ ಔಶಿಜಃ ॥
॥ ದೇವತಾ—ಸ್ವನಯಸ್ಯ ದಾನಸ್ತುತಿಃ ॥
॥ ಛಂದಃ—ತ್ರಿಷ್ಟುಪ್ ೪-೫ ಜಗತೀ ॥

॥ ಸಂಹಿತಾಪಾಠಃ ॥

ಪ್ರಾತಾ ರತ್ನಂ ಪ್ರಾತರಿತ್ವಾ ದಧಾತಿ ತಂ ಚಿಕಿತ್ವಾನ್ಪ್ರತಿಗೃಹ್ಯಾ ನಿ ಧತ್ತೇ ।
ತೇನ ಪ್ರಜಾಂ ವರ್ಧಯಮಾನ ಆಯೂ ರಾಯಸ್ಪೋಷೇಣ ಸಚತೇ ಸುವೀರಃ ॥ ೧ ॥

॥ ಪದಪಾಠಃ ॥

ಪ್ರಾತರಿತಿ । ರತ್ನಂ । ಪ್ರಾತಃಽಇತ್ವಾ । ದಧಾತಿ । ತಂ । ಚಿಕಿತ್ವಾನ್ । ಪ್ರತಿಽಗೃಹ್ಯ । ನಿ । ಧತ್ತೇ ।
ತೇನ । ಪ್ರಽಜಾಂ । ವರ್ಧಯಮಾನಃ । ಆಯುಃ । ರಾಯಃ । ಪೋಷೇಣ । ಸಚತೇ । ಸುಽವೀರಃ ॥ ೧ ॥

॥ ಸಾಯಣಭಾಷ್ಯಂ ॥

ಅತ್ರೇತಿಹಾಸಮಾಚಕ್ಷತೇ । ದೈರ್ಘತಮಸಃ ಕಕ್ಷೀವಾನ್ನಾಮ ಋಷಿರ್ಬ್ರಹ್ಮಚರ್ಯಂ ಚರಿಷ್ಯನ್ವೇದಾಭ್ಯಾಸಾಯ ಗುರುಕುಲೇ ಚಿರಕಾಲಮುಷಿತ್ವಾ ವೇದಾನ್ಸಮ್ಯಗಧೀತ್ಯ ವ್ರತಾನಿ ಚ ಚರಿತ್ವಾ ತೇನಾನುಜ್ಞಾತಃ ಪುನಃ ಸ್ವಗೃಹಂ ಪ್ರತಿ ಪ್ರಯಾಸ್ಯನ್ ಮಧ್ಯೇ ಮಾರ್ಗೇ ರಾತ್ರೌ ವಿಶ್ರಾಂತಃ । ಪ್ರಭಾತೇ ಭಾವಯವ್ಯಸ್ಯ ಪುತ್ರಃ ಸ್ವನಯೋ ನಾಮ ರಾಜಾನುಚರೈಃ ಸಂಕ್ರೀಡಮಾನೋಽಕಸ್ಮಾತ್ಕಕ್ಷೀವತೋಽಂತಿಕಮಾಸಸಾದ । ಸ ಚ ರಭಸಾ ಪ್ರತಿಬುದ್ಧಃ ಸಹಸೋತ್ತಸ್ಥೌ । ತಂ ಚ ರಾಜಾ ಪಾಣಿಂ ಗೃಹೀತ್ವಾ ಸ್ವಕೀಯ ಆಸನ ಉಪವೇಶ್ಯಾಸ್ಯ ಸೌಂದರ್ಯಮವಗತ್ಯ ಸ್ವಕನ್ಯಾಪ್ರದಾನಮನಾಃ ಪಪ್ರಚ್ಛ ಭಗವನ್ ಕಸ್ಯ ಪುತ್ರಃ ಕಿಂನಾಮಾ ತ್ವಮಿತಿ । ಸ ಚ ಪೃಷ್ಟೋ ಮಾತರಂ ಪಿತರಂ ಚ ಸ್ವವೃತ್ತಾಂತಂ ಚಾಚಚಕ್ಷೇ । ಸ ಚ ರಾಜಾ ಸಂಭಾವ್ಯ ಇತ್ಯವಗತ್ಯ ಮುದಿತಮನಾಃ ಸ್ವಗೃಹಂ ಪ್ರಾಪ್ಯಾಸ್ಮೈ ಮಧುಪರ್ಕಮಾರಚಯ್ಯ ವಸ್ತ್ರಮಾಲ್ಯಾದಿಭಿಃ ಪೂಜಯಿತ್ವಾ ಸರಥಾ ದಶಕನ್ಯಾಃ ಶತನಿಷ್ಕಾನಶ್ವಶತಂ ಪುಂಗವಾನಾಂ ಶತಂ ಗವಾಂ ಷಷ್ಟ್ಯುತ್ತರಸಹಸ್ರಂ ಪುನರೇಕಾದಶ ರಥಾಂಶ್ಚ ಪ್ರಾದಾತ್ । ಸ ಚ ಸರ್ವಮನುಕ್ರಮೇಣ ಪ್ರತಿಗೃಹ್ಯ ದೀರ್ಘತಮಸೋಽಂತಿಕಮಾಗತ್ಯ ತಸ್ಮೈ ಪ್ರಾದರ್ಶಯತ್ ॥ ನನು ಕಕ್ಷ್ಯಾ ನಾಮಾಶ್ವಬಂಧನೀ ರಜ್ಜುಃ । ತದ್ವಾನ್ಕಕ್ಷೀವಾನ್ । ಅಶ್ವಬಂಧನಂ ಚ ರಾಜ್ಞ ಏವೋಚಿತಂ । ಅತೋಽಸ್ಯ ರಾಜನ್ಯತ್ವಾತ್ಪ್ರತಿಗ್ರಹೋ ನೋಪಪದ್ಯತೇ । ಯಾಜನಾಧ್ಯಾಪನೇ ಚೈವ ವಿಶುದ್ಧಾಚ್ಚ ಪ್ರತಿಗ್ರಹ ಇತ್ಯುಕ್ತತ್ವಾತ್ । ಮನು. ೧೦-೭೬ । ತಸ್ಮಾದ್ಬ್ರಾಹ್ಮಣಸ್ಯೈವಾಧಿಕಾರೋ ನ ತು ಕ್ಷತ್ರಿಯಸ್ಯೇತಿ । ನೈಷ ದೋಷಃ । ಯದ್ಯಪ್ಯಸೌ ಕಲಿಂಗಾಖ್ಯಸ್ಯ ರಾಜ್ಞಃ ಪುತ್ರಸ್ತಥಾಪಿ ತೇನ ಕಲಿಂಗೇನ ಸ್ವಯಂ ವೃದ್ಧತ್ವಾದಪತ್ಯೋತ್ಪಾದನಾಯ ಸಾಮರ್ಥ್ಯಮಲಭಮಾನೇನ ತದುತ್ಪಾದನಾಯ ಯಾಚಿತೋ ದೀರ್ಘತಮಾ ಋಷಿರುಶಿಗ್ನಾಮಿಕಾಮಪತ್ಯೋತ್ಪಾದನಾಯ ಪ್ರೇಷಿತಯಾ ರಾಜಮಹಿಷ್ಯಾತಿಜರಠೇನ ಮಹರ್ಷಿಣಾ ಸಹ ರಂತುಂ ಲಜ್ಜಮಾನಯಾ ಸ್ವವಸ್ತ್ರಾಭರಣೈರಲಂಕೃತ್ಯ ಸ್ವಪ್ರತಿನಿಧಿತ್ವೇನ ಪ್ರೇಷಿತಾಮುಶಿಗ್ನಾಮಿಕಾಂ ಯೋಷಿತಂ ದಾಸೀಮಿತ್ಯವಗತ್ಯ ಮಂತ್ರಪೂತೇನ ಜಲೇನಾಭಿಷಿಚ್ಯ ಋಷಿಪುತ್ರೀಂ ಕೃತ್ವಾ ತಯಾ ಸಹ ರೇಮೇ । ತದುತ್ಪನ್ನಃ ಕಕ್ಷೀವಾನ್ನಾಮ ಋಷಿಃ । ಏತತ್ಸರ್ವಮಸ್ಮಾಭಿಃ ಪೂರ್ವಾಧ್ಯಾಯೇ ನಾಸತ್ಯಾಭ್ಯಾಂ । ಋ. ೧-೧೧೬ । ಇತ್ಯತ್ರ ಸೂಕ್ತೇ ವಿಸ್ತರೇಣ ಪ್ರತಿಪಾದಿತಂ । ಅತೋಽಸ್ಯ ಕ್ಷತ್ರಿಯಸಂಬಂಧಾತ್ಕಕ್ಷೀವಾನಿತಿ ನಾಮೋಪಪನ್ನಂ । ದೀರ್ಘತಮಸಃ ಪರಮರ್ಷೇರುತ್ಪನ್ನತ್ವೇನ ಬ್ರಾಹ್ಮಣತ್ವಾತ್ಪ್ರತಿಗ್ರಹೋಽಪ್ಯುಪಪನ್ನ ಏವ ॥ ಇದಮಾದಿ ಸೂಕ್ತದ್ವಯಂ ಸ್ವನಯಸ್ಯ ರಾಜ್ಞೋ ದಾನಪ್ರಶಂಸಾಖ್ಯಾನಪ್ರತಿಪಾದಕಂ । ನನ್ವನುಕ್ರಮಣ್ಯಾಂ ಸ್ವನಯಸ್ಯ ದಾನಸ್ತುತಿರಿತಿ ದಾನತುಷ್ಟೋ ಭಾವಯವ್ಯಂ ತುಷ್ಟಾವೇತಿ ಚೋಭಯತ್ರ ಸ್ತೋತವ್ಯಂ ಭಿನ್ನಮೇವಾನುಗಮ್ಯತ ಇತ್ಯುಚ್ಯತೇ । ಉತ್ತರಸೂಕ್ತಸ್ಯ ಪ್ರಥಮಾಯಾಮೃಚ್ಯಧಿಕ್ಷಿಯತೋ ಭಾವ್ಯಸ್ಯೇತಿ ದಾತುರ್ಭಾವಯವ್ಯಸ್ಯ ಶ್ರೂಯಮಾಣತ್ವಾತ್ಪ್ರಾಥಮ್ಯಮುಪಜೀವ್ಯ ಪೃಥಗುಪಾತ್ತಂ । ವಸ್ತುತಸ್ತು ಪಿತುರ್ನಾಮ್ನಾ ಪುತ್ರಸ್ಯ ವ್ಯವಹರ್ತವ್ಯತ್ವಾತ್ ತಥಾ ಆ ರುದ್ರಾಸ ಇತ್ಯಾದೌ ಬಹುಶಃ ಪ್ರಯೋಗದರ್ಶನಾತ್ಸ್ವನಯೇನ ದತ್ತಾ ಇತಿ ತತ್ರೈವ ಸೂಕ್ತೇ ಸ್ವನಯಸ್ಯಾಪಿ ಶ್ರೂಯಮಾಣತ್ವಾಚ್ಚೋಭಯತ್ರಾಪಿ ದಾತೃಪ್ರತಿಗೃಹೀತ್ರೋರೇಕತ್ವೇನೈಕಮೇವ ದಾನಪ್ರಶಂಸಾರೂಪಮಾಖ್ಯಾನಮಿತಿ ಪ್ರಸಿದ್ಧಂ ॥ ಸ ಚ ಕಕ್ಷೀವಾನಾನೀತಂ ಸರ್ವಂ ಪಿತುರ್ನಿವೇದಯನ್ ಪರೋಕ್ಷೇಣೈವ ದಾನಪ್ರಕಾರಂ ಪ್ರಶಂಸತಿ । ಸ್ವನಯೋ

**ನಾಮ ರಾಜಾ ಪ್ರಾತರಿತ್ವಾ ಪ್ರಾತರೇವಾತ್ಮನಃ ಸಕಾಶಮಾಗತಃ ಸನ್ ರತ್ನಂ ರಮಣೀಯಂ ನಿಷ್ಕಾದಿಕಂ ಪ್ರಾತಃ ಪ್ರಭಾತಕಾಲೇ ದಧಾತಿ। ಅಸ್ಮತ್ಸನ್ನಿಧೌ ಸ್ಥಾಪಯತಿ। ದದಾತಿ। ತಂ ಸ್ಥಾಪಿತಂ ಸರ್ವಂ ಚಿಕಿತ್ವಾಂಶ್ಚೇತನಾವಾನ್ ಅದುಷ್ಟಮಿತ್ಯೆವಗತವಾನ್ಪ್ರತಿಗೃಹ್ಯ ಸ್ವೀಕೃತ್ಯ ನಿ ಧತ್ತೇ। ಪಿತುಃ ಸಮೀಪೇ ಸ್ಥಾಪಯತಿ। ಅನಂತರಂ ತೇನ ದತ್ತೇನ ನಿಷ್ಕಾದಿನಾ ಪ್ರಜಾಂ ಪುತ್ರಭೃತ್ಯಾದಿರೂಪಾಂ ವರ್ಧಯಮಾನಃ ಪೋಷಯನ್ ಆಯುರ್ಜೀವಿತಂ ಚ ವರ್ಧಯನ್ ಸುವೀರಃ ಶೋಭನೈರ್ವೀರೈಃ ಪುತ್ರಭೃತ್ಯಾದಿಭಿರುಪೇತಃ ಸನ್ ರಾಯಸ್ಪೋಷೇಣ ಧನಾನಾಂ ಪುನಃ ಪುನರ್ವರ್ಧನೇನ ಸಚತೇ। ಅಸೌ ರಾಜಾ ಸಂಗಚ್ಛತಾಮಿತಿ ತವ ದಾತುರಾಶಿಷಂ ಪ್ರಾರ್ಥಯತೇ॥**

॥ ಪ್ರತಿಪದಾರ್ಥ ॥

**ಪ್ರಾತಃ ಇತ್ವಾ**—(ಸ್ವನಯನೆಂಬ ರಾಜನು) ಪ್ರಾತಃಕಾಲದಲ್ಲಿ (ತನ್ನ ಬಳಿಗೆ) ಬಂದು। **ರತ್ನಂ**—ರತ್ನಾದಿಗಳನ್ನು। **ಪ್ರಾತಃ**—ಬೆಳಗಿನವೇಳೆ। **ದಧಾತಿ**—(ಕಕ್ಷೀವಂತನ ಸನ್ನಿಧಿಯಲ್ಲಿ) ಇಡುತ್ತಾನೆ। **ತಂ**—(ಅರ್ಪಿತವಾದ) ಅದೆಲ್ಲವನ್ನೂ। **ಚಿಕಿತ್ವಾನ್**—(ಅದುಷ್ಟವೆಂದು) ತಿಳಿದವನಾಗಿ। **ಪ್ರತಿಗೃಹ್ಯ**—ಸ್ವೀಕರಿಸಿ। **ನಿ ಧತ್ತೇ**—(ತನ್ನ ಪಿತೃವಿನ ಸನ್ನಿಧಿಯಲ್ಲಿ) ಇಡುತ್ತಾನೆ। (ಅನಂತರ) **ತೇನ**—(ಪಿತೃದತ್ತವಾದ ಆ ನಿಷ್ಕಾದಿಗಳಿಂದ) ಅದರಿಂದ। **ಪ್ರಜಾಂ**—(ಪುತ್ರಭೃತ್ಯಾದಿ) ಪ್ರಜೆಗಳನ್ನು। **ವರ್ಧಯಮಾನಃ**—ಪೋಷಿಸುತ್ತಾ। **ಆಯುಃ**—(ದೀರ್ಘ) ಆಯುಸ್ಸುಳ್ಳವನಾಗಿ। **ಸುವೀರಃ**—ಉತ್ತಮ ವೀರರಾದ ಪುತ್ರಯುಕ್ತನಾಗಿ। **ರಾಯಃ ಪೋಷೇಣ**—ಧನಾಭಿವೃದ್ಧಿಯಿಂದ। **ಸಚತೇ**—(ತಾನು) ಯುಕ್ತನಾಗಿರುತ್ತಾನೆ.

॥ ಭಾವಾರ್ಥ ॥

(ಸ್ವನಯರಾಜನಿಂದ) ಪ್ರಾತಃಕಾಲದಲ್ಲಿ ಅರ್ಪಿತವಾದ ರತ್ನಾದಿಗಳನ್ನು, (ಕಕ್ಷೀವಂತನು) ಅದುಷ್ಟವೆಂದು ತಿಳಿದು, ಸ್ವೀಕರಿಸಿ, ಅದನ್ನು ತನ್ನ ಪಿತೃವಿಗೆ ಸಮರ್ಪಿಸಿ, (ಅನಂತರ ಪಿತೃವಿನಿಂದ ದತ್ತವಾದ) ಧನದಿಂದ ಪುತ್ರಭೃತ್ಯಾದಿಗಳನ್ನು ಪೋಷಿಸುತ್ತಾ, ಧೀರ್ಘಾಯುವೂ ಉತ್ತಮ ಸಂತಾನವುಳ್ಳವನೂ ಆಗಿ, ಐಶ್ವರ್ಯಯುಕ್ತನಾಗಿರುತ್ತಾನೆ.

## English Translation.

Having come in the early morning, (Swanaya) presents precious (wealth), knowing it (to be worthy of acceptance); and having, (therefore) accepted it, (Kashivat) brings it (to his father): wherewith the parent of excellent sons, maintaining his progeny, passes his life in the enjoyment of affluence.

॥ ವಿಶೇಷವಿಷಯಗಳು ॥

**ಪ್ರಾತಾ ರತ್ನಂ ಸಪ್ತ ಸ್ವನಯಸ್ಯ ದಾನಸ್ತುತಿರುಪಜಗತ್ಯಾ।**

(ಅನುಕ್ರಮಣಿಕಾ)

**ಋಷಿರ್ದಾನಂ ಚ ಭಾವ್ಯಸ್ಯ ಪ್ರಾತರಿತ್ಯತ್ರ ಶಂಸತಿ।**

(ಬೃ. ದೇ. ೩-೧೪೦)

**ಪ್ರಾತಾ ರತ್ನಂ** ಎಂಬ ಋಕ್ಕಿನಿಂದ ಪ್ರಾರಂಭವಾಗುವ ೧-೧೨೫ನೇ ಸೂಕ್ತವೂ ಇದರ ಮುಂದಿನ ೧-೧೨೬ನೇ ಸೂಕ್ತವೂ ಸಹ ದೀರ್ಘತಮಸ್ಸಿನ ಪುತ್ರನಾದ ಕಕ್ಷೀವಂತನಿಂದ ದೃಷ್ಟವಾದದ್ದು. ಸ್ವನಯನೆಂಬ ದೊರೆಯು ಕಕ್ಷೀವಂತ

ನಿಗೆ ಬಳುವಳಿಯಾಗಿ ಕೊಟ್ಟ ದಾನಗಳ ಪ್ರಶಂಸಾತ್ಮಕವಾಗಿವೆ. ಈ ಸಂದರ್ಭದಲ್ಲಿ ಸಾಯಣರು ಇದರ ಇತಿಹಾಸವನ್ನು ಈ ರೀತಿ ಹೇಳಿದ್ದಾರೆ.

**ದೈರ್ಘತಮಸಃ ಕಕ್ಷೀವಾನ್ನಾಮ..............................................ದಾನಮಿತಿ ಪ್ರಸಿದ್ಧಂ ||**

ದೀರ್ಘತಮಸ್ಸಿನ ಪುತ್ರನಾದ ಕಕ್ಷೀವಂತನೆಂಬ ಋಷಿಕುಮಾರನು ಬ್ರಹ್ಮಚರ್ಯವ್ರತದಿಂದ ಗುರುಕುಲದಲ್ಲಿ ವೇದಾಭ್ಯಾಸವನ್ನು ಮುಗಿಸಿ ಅಲ್ಲಿಯ ವ್ರತಗಳನ್ನೆಲ್ಲಾ ನೆರವೇರಿಸಿಕೊಂಡು ಗುರುವಿನ ಅನುಜ್ಞೆಯನ್ನು ಪಡೆದು ತನ್ನ ಸ್ವಗೃಹಕ್ಕೆ ಹಿಂತಿರುಗುತ್ತಿರುವಾಗ ಮಾರ್ಗಮಧ್ಯದಲ್ಲಿ ಬಳಲಿ ವಿಶ್ರಾಂತಿಗಾಗಿ ರಾತ್ರಿಯಲ್ಲಿ ಮಲಗಿ ನಿದ್ರೆಮಾಡಿದನು, ಪ್ರಾತಃಕಾಲದಲ್ಲಿ ಭಾವಯವ್ಯನ ಪುತ್ರನಾದ ಸ್ವನಯನೆಂಬ ರಾಜನು ಅನುಚರರೊಡನೆ ಕ್ರೀಡಿಸುತ್ತಾ ಅಕಸ್ಮಾತ್ತಾಗಿ ಕಕ್ಷೀವಂತನ ಹತ್ತಿರ ಬಂದನು. ಅವನು ಎಚ್ಚರಗೊಂಡು ಬೇಗನೆ ಎದ್ದನು. ಆಗ ದೊರೆಯು ಅವನ ಕೈಯನ್ನು ಹಿಡಿದುಕೊಂಡು ತನ್ನ ಆಸನದಲ್ಲಿ ಕುಳ್ಳಿರಿಸಿಕೊಂಡು ಅವನು ಸೌಂದರ್ಯಪೂರಿತನಾದ ಯುವಕನೆಂದು ತಿಳಿದು ತನ್ನ ಮಗಳನ್ನು ಇವನಿಗೆ ಕೊಡಬೇಕೆಂದಿಚ್ಛಿಸಿ, ಪೂಜ್ಯನೇ, ನೀನು ಯಾರು, ಯಾರ ಪುತ್ರನು ಎಂದು ಪ್ರಶ್ನಿಸಿದಾಗ ಕಕ್ಷೀವಂತನು ತನ್ನ ಕಥೆಯನ್ನೆಲ್ಲಾ ವಿಸ್ತಾರವಾಗಿ ಹೇಳಿದನು. ಆಗ ಸ್ವನಯನು ಅವನನ್ನು ತನ್ನ ಮನೆಗೆ ಕರೆದು ಕೊಂಡು ಹೋಗಿ ಮಧುಪರ್ಕವನ್ನು ಸಿದ್ಧಪಡಿಸಿ ವಸ್ತ್ರಮಾಲ್ಯಾದಿಗಳಿಂದ ಪೂಜಿಸಿ ರಥಗಳು, ನೂರು ಸುವರ್ಣದ್ರವ್ಯಗಳು, ನೂರು ಕುದುರೆಗಳು, ನೂರು ಎತ್ತುಗಳು, ಸಾವಿರದ ಅರವತ್ತು ಹಸುಗಳು ಮತ್ತೆ ಹನ್ನೊಂದು ರಥಗಳು ಇವುಗಳನ್ನೆಲ್ಲಾ ಬಳುವಳಿಯಾಗಿ ಕೊಟ್ಟು ತನ್ನ ಹತ್ತು ಕನ್ಯೆಯರನ್ನು ಆ ಕಕ್ಷೀವಂತನಿಗೆ ಮದುವೆಮಾಡಿಕೊಟ್ಟನು. ಬಳಿಕ ಕಕ್ಷೀವಂತನು ಅವೆಲ್ಲವನ್ನೂ ಕ್ರಮವಾಗಿ ಸ್ವೀಕರಿಸಿ, ತನ್ನ ತಂದೆಯಾದ ದೀರ್ಘತಮಾಃ ಎಂಬ ಋಷಿಯ ಸಮೀಪಕ್ಕೆ ಹೋಗಿ ಅವನಿಗೆ ರಾಜನು ಕೊಟ್ಟ ವಸ್ತುಗಳೆಲ್ಲವನ್ನೂ ತೋರಿಸಿದನು.

ಈಗ ಇಲ್ಲಿ ಒಂದು ಸಮಸ್ಯೆಯು ತಲೆದೋರುವುದು. ಕಕ್ಷ್ಯಾ ಎಂದರೆ ಕುದುರೆಯನ್ನು ಕಟ್ಟುವ ಹಗ್ಗವೆಂದು ಅರ್ಥವು. **ಕಕ್ಷ್ಯಾ ರಜ್ಜುರಶ್ವಸ್ಯ** (ನಿ. ೨-೨) ಎಂದು ನಿರುಕ್ತವಚನವಿರುವುದು. ಅಂತಹ ಹಗ್ಗವುಳ್ಳವನಾದುದರಿಂದ ಕಕ್ಷೀವಂತನಿಗೆ ಕಕ್ಷೀವಾನ್ ಅಥವಾ ಕಕ್ಷ್ಯಾವಾನ್ ಎಂದು ಹೆಸರು ಬಂದಿರುವುದು. ಕುದುರೆಗಳೂ, ಕುದುರೆಗಳನ್ನು ಕಟ್ಟುವ ಹಗ್ಗಗಳೂ ರಾಜರಿಗೆ ಉಪಯೋಗವಾಗುವ ವಸ್ತುಗಳಾಗಿರುವುದರಿಂದ ಇವುಗಳು ರಾಜರ ಬಳಿ ಇರುವವು. ಬ್ರಾಹ್ಮಣರ ಬಳಿ ಇರಲು ಕಾರಣವಿಲ್ಲ. ಕಕ್ಷೀವಂತನ ಬಳಿ ಈ ಹಗ್ಗಗಳು ಇದ್ದವೆಂದ ಮೇಲೆ ಇವನು ಕ್ಷತ್ರಿಯನಾಗ ಬೇಕಾಯಿತು. ಕ್ಷತ್ರಿಯನಿಗೆ ದಾನಸ್ವೀಕಾರ ಅಥವಾ ಪ್ರತಿಗ್ರಹವು ಕರ್ತವ್ಯವಲ್ಲವೆಂದು—**ಯಾಜನಾಧ್ಯಾಪನೇ ಚೈವ ವಿಶುದ್ಧಾಚ್ಚ ಪ್ರತಿಗ್ರಹಃ ||** (ಮನುಸ್ಮೃತಿ. ೧೦-೭೬)ಎಂದರೆ— ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ, (ತಾವೇ ಯಜ್ಞಮಾಡುವುದು, ಇತರರಿಗೆ ಪುರೋಹಿತರಾಗಿ ಯಜ್ಞಮಾಡಿಸುವುದು, ಅಧ್ಯಯನ ಮಾಡುವುದು, ಇತರರಿಗೆ ಪಾಠಹೇಳಿ ಅಧ್ಯಯನಮಾಡಿಸುವುದು, ದಾನಕೊಡುವುದು, ಇತರರು ಕೊಡುವ ದಾನವನ್ನು ಸ್ವೀಕರಿಸುವುದು ಎಂಬಿವು ಬ್ರಾಹ್ಮಣರಿಗೆ ಉಕ್ತವಾದ ಷಟ್ಕರ್ಮಗಳು.) ಎಂಬ ಷಟ್ಕರ್ಮಗಳಲ್ಲಿ ಬ್ರಾಹ್ಮಣರಿಗೆ ಈ ಆರು ಕರ್ಮಗಳಲ್ಲಿಯೂ ಅಧಿಕಾರವುಂಟು. ಕ್ಷತ್ರಿಯ ವೈಶ್ಯರಿಗೆ ಯಜನ, ಅಧ್ಯಯನ ದಾನ ಎಂದರೆ ಯಜ್ಞ ಮಾಡುವುದು, ಅಧ್ಯಯನಮಾಡುವುದು, ದಾನಕೊಡುವುದು ಎಂಬ ಮೂರು ಕರ್ಮಗಳಲ್ಲಿ ಮಾತ್ರ ಅಧಿಕಾರವಿರುವುದು. ಉಳಿದ ಮೂರು ಕರ್ಮಗಳಲ್ಲಿ ಎಂದರೆ ಇತರರಿಗೆ ಪುರೋಹಿತರಾಗಿ ಯಜ್ಞಮಾಡಿಸುವುದು, ವೇದವನ್ನು ಪಾಠಹೇಳಿ ಅಧ್ಯಯನಮಾಡಿಸುವುದು, ಕೊಟ್ಟ ದಾನವನ್ನು ಸ್ವೀಕರಿಸುವುದು ಎಂಬ ಈ ಮೂರು ಕರ್ಮಗಳಲ್ಲಿ ಅಧಿಕಾರವಿಲ್ಲ.

ಆದುದರಿಂದ ಕ್ಷತ್ರಿಯನಾದ ಕಕ್ಷೀವಂತನು ಸ್ವನಯನು ಕೊಟ್ಟ ದಾನವನ್ನು ಪ್ರತಿಗ್ರಹಮಾಡಲು (ಸ್ವೀಕರಿಸಲು) ಹೇಗೆ ಅಧಿಕಾರವುಳ್ಳವನು ? ಇದು ಅನುಚಿತವಲ್ಲವೇ ? ಎಂದರೆ ಅದಕ್ಕೆ ಸಮಾಧಾನವನ್ನು ಹೇಳುವುದಕ್ಕಾಗಿ ಕಕ್ಷೀವಂತನ ಜನ್ಮವೃತ್ತಾಂತವನ್ನು ವಿವರಿಸಿರುವರು.

ಕಳಿಂಗನೆಂಬ ರಾಜನಿಗೆ ಮಕ್ಕಳಿರಲಿಲ್ಲ ಅವನು ವೃದ್ಧನಾಗಿದ್ದು ಪುತ್ರೋತ್ಪಾದನೆಮಾಡಲು ಅಶಕ್ತನಾಗಿದ್ದನು. ಹೀಗಿರುವಾಗ ಉಚಥ್ಯಪುತ್ರನಾದ ದೀರ್ಘತಮಾಃ ಎಂಬ ಋಷಿಯು ರಾಜನ ಸಮೀಪಕ್ಕೆ ಬರಲು ರಾಜನು ತನಗೆ ಮಕ್ಕಳಿಲ್ಲದ್ದರಿಂದ ರಾಜಮಹಿಷಿಯಲ್ಲಿ ಓರ್ವ ಪುತ್ರನನ್ನು ಉತ್ಪಾದನೆಮಾಡಬೇಕೆಂದು ಪ್ರಾರ್ಥಿಸಿದನು. ಹಿಂದಿನ ಕಾಲದಲ್ಲಿ ಕಾರಣಾಂತರಗಳಿಂದ ಮಕ್ಕಳಿಲ್ಲದವರು ಯೋಗ್ಯರಾದ ಬ್ರಾಹ್ಮಣರಿಂದ ಸಂತಾನಾಭಿವೃದ್ಧಿಗಾಗಿ ಮಕ್ಕಳನ್ನು ಪಡೆಯುವ ಪದ್ಧತಿ ಇದ್ದಿತು. ಈ ವಿಷಯವು ಪುರಾಣಾದಿಗಳಲ್ಲಿಯೂ, ಮಹಾಭಾರತದಲ್ಲಿಯೂ ಸ್ಪಷ್ಟವಾಗಿ ವರ್ಣಿತವಾಗಿದೆ. ಋಷಿಯು ರಾಜನ ಪ್ರಾರ್ಥನೆಯನ್ನಂಗೀಕರಿಸಲು ರಾಜನು ತನ್ನ ಪಟ್ಟಮಹಿಷಿಯನ್ನು ಋಷಿಯ ಬಳಿಗೆ ಹೋಗುವಂತೆ ಹೇಳಿದನು. ರಾಜಪತ್ನಿಯು ವೃದ್ಧನಾಗಿಯೂ, ಕುರೂಪಿಯಾಗಿಯೂ ಇದ್ದ ಋಷಿಯೊಡನೆ ಸಂಭೋಗಿಸಲು ಲಜ್ಜೆಯಿಂದ ಇಷ್ಟಪಡದೆ ತನಗೆ ಬದಲಾಗಿ ತನ್ನ ದಾಸಿಯಾದ ಉಶಿಕ್ ಎಂಬ ಸ್ತ್ರೀಯನ್ನು ತನ್ನ ವಸ್ತ್ರಾಭರಣಗಳಿಂದ ಚೆನ್ನಾಗಿ ಅಲಂಕರಿಸಿ ಋಷಿಯ ಸಮೀಪಕ್ಕೆ ಕಳುಹಿಸಿದಳು. ತನ್ನ ಬಳಿಗೆ ಬಂದ ಉಶಿಕ್ ಎಂಬ ಸ್ತ್ರೀಯನ್ನು ರಾಜಪತ್ನಿಯಲ್ಲವೆಂದೂ ಅವಳ ದಾಸಿಯೆಂದೂ ತಿಳಿದು ಋಷಿಯು ಅವಳನ್ನು ಮಂತ್ರಪೂತವಾದ ಜಲದಿಂದ ಪ್ರೋಕ್ಷಿಸಿ ಋಷಿಪುತ್ರಿಯಂತೆ ಶುದ್ಧಳನ್ನಾಗಿ ಮಾಡಿ ಬಳಿಕ ಅವಳೊಡನೆ ರಮಿಸಿದನು. ಆ ಋಷಿಯಿಂದ ಉಶಿಕ್ ಎಂಬ ಸ್ತ್ರೀಯಲ್ಲಿ ಉತ್ಪನ್ನನಾದ ಪುತ್ರನೇ ಕಕ್ಷೀವಾನ್ ಎಂಬ ಋಷಿಯು. ಈ ಪುತ್ರನು ಕ್ಷತ್ರಿಯ ಸ್ತ್ರೀಯಲ್ಲಿ ಜನಿಸಿದ್ದರೂ ಬ್ರಾಹ್ಮಣಸಂಪರ್ಕದಿಂದ ಬ್ರಾಹ್ಮಣನೇ ಎಂದು ಪರಿಗಣಿಸಲ್ಪಟ್ಟಿರುವನು. ಈ ರೀತಿ ಇವನಿಗೆ ಬ್ರಹ್ಮಕ್ಷತ್ರಿಯಸಂಬಂಧಗಳಿದ್ದರೂ ಬ್ರಾಹ್ಮಣನಿಂದ ಉತ್ಪನ್ನನಾದ ಕಾರಣ ಇವನು ದಾನಾರ್ಹನೆಂಬ ವಿಷಯದಲ್ಲಿ ಅನುಮಾನಕ್ಕೆ ಕಾರಣವಿಲ್ಲ. ಈ ಕಕ್ಷೀವಂತನ ಜನನವೃತ್ತಾಂತವು ಋ. ಸಂ. ೧–೧೧೬ ನೆಯ ಸೂಕ್ತ ಭಾಷ್ಯದಲ್ಲಿ ಹಿಂದೆಯೇ ವಿವರಿಸಲಾಗಿರುವುದು.

ಈ ಸೂಕ್ತದಲ್ಲಿಯೂ ಮುಂದಿನ ಸೂಕ್ತದಲ್ಲಿಯೂ ಸ್ವನಯನ ದಾನಪ್ರಶಂಸೆಯು ಉಕ್ತವಾಗಿರುವುದು. ಆದರೆ ಅನುಕ್ರಮಣಿಕೆಯಲ್ಲಿ ದಾನದಿಂದ ತುಷ್ಟನಾದ ಕಕ್ಷೀವಂತನು ಭಾವಯವ್ಯನನ್ನೂ (ಸ್ವನಯನ ತಂದೆಯನ್ನೂ) ಪ್ರಶಂಸೆಮಾಡಿದನೆಂದು ಹೇಳಿರುವುದರಿಂದ ಬೇರೆ ಬೇರೆ ಇಬ್ಬರು ವ್ಯಕ್ತಿಗಳನ್ನು ಪ್ರಶಂಸೆಮಾಡಿರುವುದೆಂದು ಸಂಶಯವು ತಲೆದೋರುವುದು ಸ್ವಾಭಾವಿಕವು. ಮುಂದಿನ ಸೂಕ್ತದ ಮೊದಲನೆಯ ಋಕ್ಕಿನಲ್ಲಿ **ಅಧಿ ಕ್ಷಿಯತೋ ಭಾವ್ಯಸ್ಯ** ಎಂದು ಸ್ಪಷ್ಟವಾಗಿ ಹೇಳಿರುವುದು ಈ ಸಂಶಯವನ್ನು ಮತ್ತಷ್ಟು ಸಮರ್ಥಿಸುವುದು. ಆದರೆ ಪುತ್ರನನ್ನು ತಂದೆಯ ಹೆಸರಿನಿಂದಲೇ ಕರೆಯುವುದು ಅನೇಕವೇಳೆ ರೂಢಿಯಲ್ಲಿರುವುದು. ಏಕೆಂದರೆ ಋಗ್ವೇದದಲ್ಲಿಯೇ ರುದ್ರಪುತ್ರರಾದ ಮರುತ್ತುಗಳನ್ನು ಹೇಳುವಾಗ **ರುದ್ರಾಸಃ** ಎಂಬ ತಂದೆಯ ಹೆಸರನ್ನೇ ಉಪಯೋಗಿಸಿರುವುದು ಪ್ರಸಿದ್ಧವಾಗಿರುವುದು. ಅದಲ್ಲದೆ ಅದೇ ಸೂಕ್ತದ ಮೂರನೆಯ ಋಕ್ಕಿನಲ್ಲಿ **ಸ್ವನಯೇನ ದತ್ತಾಃ** ಎಂದು ಸಹ ಹೇಳಿರುವುದು. ಆದುದರಿಂದ ಇಲ್ಲಿಯೂ ಪಿತಾಪುತ್ರರ ನಾಮಗಳನ್ನು ಉಪಯೋಗಿಸಿದ್ದರೂ ಈ ಎರಡು ಸೂಕ್ತಗಳೂ ಒಂದೇ ವ್ಯಕ್ತಿಯ ದಾನಪ್ರಶಂಸೆಯೆಂದು ತಿಳಿಯಬೇಕು.

ಈ ಕಥೆಯನ್ನು ಬೃಹದ್ದೇವತೆಯಲ್ಲಿ ಈ ರೀತಿ ಹೇಳಿದೆ.

**ಅಧಿಗಮ್ಯ ಗುರೋರ್ವಿದ್ಯಾಂ ಗಚ್ಛನ್ ಸ್ವನಿಲಯಂ ಕಿಲ ।**
**ಕಕ್ಷೀವಾನಧ್ವನಿ ಶ್ರಾಂತಃ ಸುಷ್ವಾಪಾರಣ್ಯಗೋಚರಃ ॥**
**ತಂ ರಾಜಾ ಸ್ವನಯೋ ನಾಮ ಭಾವಯವ್ಯಸುತೋ ವ್ರಜನ್ ।**
**ಕ್ರೀಡಾರ್ಥಂ ಸಾನುಗೋಽಪಶ್ಯತ್ಸಭಾರ್ಯಃ ಸಪುರೋಹಿತಃ ॥**
**ಅಥೈನಂ ರೂಪಸಂಪನ್ನಂ ದೃಷ್ಟ್ವಾ ದೇವಸುತೋಪಮಂ ।**
**ಕನ್ಯಾದಾನೇ ಮತಿಂ ಚಕ್ರೇ ವರ್ಣಗೋತ್ರಾವಿರೋಧತಃ ॥**
**ಸಂಬೋಧ್ಯೈನಂ ಸ ಪಪ್ರಚ್ಛ ವರ್ಣಗೋತ್ರಾದಿಕಂ ತತಃ ।**
**ರಾಜನ್ನಾಂಗಿರಸೋಽಸ್ಮೀತಿ ಕುಮಾರಃ ಪ್ರತ್ಯುವಾಚ ತಂ ॥**
**ಪುತ್ರೋಽಹಂ ದೀರ್ಘತಮಸ ಔಚಥ್ಯಸ್ಯ ಋಷೇರ್ನೃಪ ।**
**ಅಥಾಸ್ಮೈ ಸ ದದೌ ಕನ್ಯಾ ದಶಾಭರಣಭೂಷಿತಾಃ ॥**
**ತಾವತಶ್ಚ ರಥಾಞ್ಶ್ವ್ಯವಾನ್ ವೀಡ್ವಂಗಾನ್ಸ್ವೈ ಚತುರ್ಯುಜಃ ।**
**ವಧೂನಾಂ ವಾಹನಾರ್ಥಾಯ ಧನಕುಪ್ಯಮಜಾವಿಕಂ ॥**
**ನಿಷ್ಕಾಣಾಂ ವೃಷಭಾಣಾಂ ಚ ಶತಂ ಶತಮುದಾತ್ಮನಃ**
**ಏತದುತ್ತರಸೂಕ್ತೇನ ಶತಮಿತ್ಯಾದಿನೋದಿತಂ ॥**
**ಶತಮಶ್ವಾಞ್ಛತಂ ನಿಷ್ಕಾನ್ ರಥಾನ್ ದಶ ವಧೂಮತಃ ।**
**ಚತುರ್ಯುಜೋ ಗವಾಂ ಚೈವ ಸಹಸ್ರಂ ಷಷ್ಟ್ಯುಪಾದಿಕಂ ॥**
**ಸ್ವನಯಾದ್ಭಾವಯವ್ಯಾದ್ಯಃ ಕಕ್ಷೀವಾನ್ಪ್ರತ್ಯಪದ್ಯತ ।**
**ಪ್ರತಿಗೃಹ್ಯ ಚ ತುಷ್ಟಾವ ಪ್ರಾತಃ ಪಿತ್ರೇ ಶಶಂಸ ಚ ॥**

(ಬೃ. ದೇ. ೩-೧೪೨ ರಿಂದ ೧೫೦)

ಸಾಯಣರೂ ಈ ಕಥೆಯನ್ನೇ ಮೂಲವಾಗಿಟ್ಟುಕೊಂಡು ಹೇಳಿರುವುದರಿಂದ ಪುನಃ ಇದರ ಅನುವಾದವನ್ನು ಕೊಡಬೇಕಾಗಿಲ್ಲ.

**ಪ್ರಾತರಿತ್ವಾ—ಪ್ರಾತರೇವ ಆತ್ಮನಃ ಸಕಾಶಮಾಗತಃ ಸನ್ ।** ಉದಯಕಾಲದಲ್ಲಿಯೇ ತನ್ನ ಸಮೀಪಕ್ಕೆ ಬಂದು,

**ರಾಯಸ್ಪೋಷೇಣ—ಧನಾನಾಂ ಪುನಃಪುನರ್ವರ್ಧನೇನ ।** ಮೊದಲಿದ್ದ ಧನವು ಹೆಚ್ಚು ಹೆಚ್ಚಾಗಿ ಅಭಿವೃದ್ಧಿಯಾಗುವುದರಿಂದ.

॥ ವ್ಯಾಕರಣಪ್ರಕ್ರಿಯಾ ॥

**ರತ್ನಮ್**—ರಮಯತೀತಿ ರತ್ನಮ್. ರಮು ಕ್ರೀಡಾಯಾಮ್ ಧಾತು. **ರಮೇಸ್ತ ಚ**—(ಉ. ಸೂ. ೨-೨೯೪) ಎಂಬುದರಿಂದ ನಜ್ ಪ್ರತ್ಯಯ. ಧಾತುವಿಗೆ ತಕಾರಾಂತಾದೇಶ. ನಿತ್ ಎಂದು ಅನುವೃತ್ತವಾಗುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರಾತರಿತ್ವಾ**— ಇಣ್ ಗತೌ ಧಾತು. ಪ್ರಾತಃ ಎಂಬುದು ಉಪಪದವಾಗಿರುವಾಗ **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಕ್ವನಿಪ್ ಪ್ರತ್ಯಯ. ಕಿತ್ತ್ವಾದುದರಿಂದ ಗುಣ ಬರುವುದಿಲ್ಲ. ಪಿತ್ತ್ವಾದುದರಿಂದ **ಹ್ರಸ್ವಸ್ಯ ಪಿತಿಕೃತಿ ತುಕ್**—(ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಇತ್ವನ್ ಶಬ್ದವಾಗುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ ಪ್ರಥಮಾ ಏಕವಚನಾಂತರೂಪ.

**ದಧಾತಿ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಚಿಕಿತ್ವಾನ್**—ಕಿತ ಜ್ಞಾನೇ ಧಾತು. **ಕ್ವಸುಶ್ಚ**—ಎಂಬುದರಿಂದ ಲಿಟಿಗೆ ಕ್ವಸುರಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಪ್ರತಿಗೃಹ್ಯ**—ಗ್ರಹ ಉಪಾದಾನೇ ಧಾತು. ಇದಕ್ಕೆ ಕ್ತ್ವಾ ಪ್ರತ್ಯಯ ಬಂದಾಗ **ಸಮಾಸೇ ನಞ್ ಪೂರ್ವೇ ಕ್ತ್ವೋ ಲ್ಯಪ್**—(ಪಾ. ಸೂ. ೭-೧-೩೭) ಎಂಬುದರಿಂದ ಅದಕ್ಕೆ ಲ್ಯಪ್ ಆದೇಶ. ಅದು ಪಿತ್ತ್ವಾದುದರಿಂದ ಧಾತುಸ್ವರ ಉಳಿಯುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪ್ರಜಾಮ್**—ಜನೀ ಪ್ರಾದುರ್ಭಾವೇ ಧಾತು. **ಉಪಸರ್ಗೇ ಚ ಸಂಜ್ಞಾಯಾಮ್**—(ಪಾ. ಸೂ. ೩-೨-೯೯) ಎಂಬುದರಿಂದ ಡ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಟಿಗೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವರ್ಧಯಮಾನಃ**—ವೃಧು ವೃದ್ಧೌ ಧಾತು. **ಹೇತುಮತಿ ಚ**—ಎಂಬುದರಿಂದ ಣಿಚ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಣಿಜಂತದ ಮೇಲೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. ಣಿಚಿಗೆ ಅದನ್ನು ನಿಮಿತ್ತೀಕರಿಸಿ ಗುಣ ಅಯಾದೇಶ. **ಆನೇ ಮುಕ್**—(ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕ ಅನುದಾತ್ತ ವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ.

**ಸಚತೇ**—ಷಚ ಸಮವಾಯೇ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುವೀರಃ—ವೀರ ವೀರ್ಯೌ ಚ**—(ಪಾ. ಸೂ. ೬-೨-೧೨೦) ಎಂಬುದರಿಂದ ಸು ಸ್ವರ ಬಾಧಕವಾಗಿ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. || ೧ ||



॥ ಸಂಹಿತಾಪಾಠಃ ॥

ಸುಗುರಸತ್ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇಂದ್ರೋ ದಧಾತಿ ।
ಯಸ್ತ್ವಾಯಂತಂ ವಸುನಾ ಪ್ರಾತರಿತ್ವೋ ಮುಕ್ಷೀಜಯೇವ ಪದಿಮುತ್ಸಿ-
ನಾತಿ ॥ ೨ ॥

॥ ಪದಪಾಠಃ ॥

ಸುಽಗುಃ । ಅಸತ್ । ಸುಽಹಿರಣ್ಯಃ । ಸುಽಅಶ್ವಃ । ಬೃಹತ್ । ಅಸ್ಮೈ । ವಯಃ । ಇಂದ್ರಃ । ದಧಾತಿ ।
ಯಃ । ತ್ವಾ । ಆಽಯಂತಂ । ವಸುನಾ । ಪ್ರಾತಃಽಇತ್ವಃ । ಮುಕ್ಷೀಜಯಾಽಇವ । ಪದಿಂ । ಉತ್ಽ-
ಸಿನಾತಿ ॥ ೨ ॥

॥ ಸಾಯಣಭಾಷ್ಯಂ ॥

ಅತ್ರ ಕಕ್ಷೀವತಃ ಪಿತಾನೀತೇನ ಧನೇನ ಸಂತುಷ್ಟೋ ರಾಜಾನಂ ಬಹುಪ್ರಕಾರೇಣಾಶಾಸ್ತೇ । ಅಸೌ ಸ್ವನಯೋ ರಾಜಾ ಸುಗುರಸತ್ । ಶೋಭನೈರ್ಬಹುಭಿರ್ಗೋಭಿಸ್ತದ್ವಾನ್ಭವತು । ತಥಾ ಸುಹಿರಣ್ಯಃ ಸುಷ್ಠು ಹಿತರಮಣೀಯೈರ್ಧನೈಸ್ತದ್ವಾನ್ಭವತು । ತಥಾ ಸ್ವಶ್ವಃ ಶೋಭನೈರಶ್ವೈಸ್ತದ್ವಾನ್ ಸನ್ ಅಸ್ಮೈ ರಾಜ್ಞೇ ಪ್ರದಾತ್ರೇ ಬೃಹತ್ ಪ್ರಭೂತಂ ವಯೋಽನ್ನಮಿಂದ್ರಃ ಪರಮೇಶ್ವರೋ ಧರ್ಮದೇವತಾ ದಧಾತಿ । ದಧಾತು । ದದಾತು । ಯತೋಽಯಂ ರಾಜಾಸ್ಮೈ ಗೋಹಿರಣ್ಯಾಶ್ವಾನ್ನಾನಿ ಬಹುಸಂಖ್ಯಾಕಾನಿ ದತ್ತವಾನ್ ಅತಸ್ತೇಷಾಮಭಿವೃದ್ಧಿಪ್ರಾರ್ಥನೋಚಿತೈವ । ಕಸ್ಯೈವಮಾಶೀರಿತಿ ಸ ಉಚ್ಯತೇ । ಯಃ ಯೋ ರಾಜಾ ಪ್ರಾತರಿತ್ವಃ ಪ್ರಾತರಾಗಾಮಿನ್ನತಿಥೇ ಪುತ್ರ ಆಯಂತಂ ಗುರುಕುಲಾದಾಗತಂ ಪದಿಂ ಪಥಿಕಂ ಯದೃಚ್ಛಯಾ ಗಂತಾರಂ ತ್ವಾ ತ್ವಾಂ ವಸುನಾನ್ನಸಾಧನೇನ ಗವಾದಿಧನೇನೋತ್ಸಿನಾತಿ । ಗಮನತ ಉತ್ಕೃಷ್ಟಂ ಬಧ್ನಾತಿ । ಗತಿಂ ನಿರುಣದ್ಧೀತ್ಯರ್ಥಃ । ಪ್ರತಿಬಂಧೇ ದೃಷ್ಟಾಂತ ಉಚ್ಯತೇ । ಮುಕ್ಷೀಜಯೇವ ಪದಿಂ । ಮುಚ್ಯಮಾನಾ ಸತೀ ಬಂಧನಂ ಜನಯತೀತಿ ಮುಕ್ಷೀಜಾ ಮೃಗಪಕ್ಷ್ಯಾದಿಬಂಧಿನೀ ರಜ್ಜುಃ । ತಯಾ ಪಾಶಕೋ ಯಥಾ ಪದಿಂ ಗಂತಾರಂ ಮೃಗಪಕ್ಷ್ಯಾದಿಕಮುತ್ಸಿನಾತಿ ಬಧ್ನಾತಿ ತಥಾ ಮಯಾನನುಜ್ಞಾತಮಪಿ ತ್ವಾಂ ಗಮನಂ ಪ್ರತಿಬಧ್ಯ ಗವಾದೀಷ್ಟದಾನಾದಿನಾ ಯೋ ರಾಜಾ ತೋಷಯತಿ ಸ ಏವಂ ಭವತ್ವಿತಿ । ಪದಿರಿತಿ ಪದಂ ವ್ಯಾಚಕ್ಷಾಣೇನ ಯಾಸ್ಕೇನ ತದುದಾಹರಣಮಯಮಂತ್ರೋ ವ್ಯಾಖ್ಯಾತಃ । ಸುಗುರ್ಭವತಿ ತತನಾಚ್ಚೇತಿ । ನಿ. ೫-೧೯ ॥

॥ ಪ್ರತಿಪದಾರ್ಥ ॥

**ಪ್ರಾತರಿತ್ವಃ**—ಪ್ರಾತಃಕಾಲದಲ್ಲಿ ಬರುತ್ತಿದ್ದ (ಎಳ್ವೈ ಪುತ್ರನೇ)। **ಆಯಂತಂ**—(ಗುರುಕುಲದಿಂದ) ಬರುತ್ತಿದ್ದ । **ಪದಿಂ—**ಪಥಿಕನಾದ । **ತ್ವಾ**—ನಿನ್ನನ್ನು । **ವಸುನಾ**—(ಅನ್ನ ಸಾಧನವಾದ) ಗವಾದಿಧನದಿಂದ । **ಮುಕ್ಷೀಜ ಯೇವ ಪದಿಂ—**ಬಂಧಕರಜ್ಜುವಿನಿಂದ ಪ್ರಾಣಿಯನ್ನು ಕಟ್ಟಿಹಾಕುವಂತೆ । **ಯಃ**—ಯಾವ ರಾಜನು । **ಉತ್ಸಿನಾತಿ**—(ಮುಂದಕ್ಕೆ ಹೋಗದಂತೆ) ಪ್ರತಿಬಂಧಿಸುತ್ತಾನೋ । (**ಸಃ**—ಆ ರಾಜನು) । **ಸುಗುಃ**—ಉತ್ತಮ ಗೋವುಗಳುಳ್ಳವನೂ । **ಸುಹಿರಣ್ಯಃ**—ಶುಭಕರವಾದ ಹಿರಣ್ಯವುಳ್ಳವನೂ । **ಸ್ವಶ್ವಃ**—ಉತ್ತಮವಾಶ್ವಗಳುಳ್ಳವನೂ । **ಅಸತ್**—ಆಗಲಿ । **ಅಸ್ಮೈ**—(ದಾತೃವಾದ ಈ ರಾಜನಿಗೆ)ಇವನಿಗೆ । **ಇಂದ್ರಃ**—ಇಂದ್ರನು । **ಬೃಹತ್**—ಹೆಚ್ಚಾದ । **ವಯಃ**—ಅನ್ನವನ್ನೂ । **ದಧಾತಿ—**ಅನುಗ್ರಹಿಸಲಿ.

॥ ಭಾವಾರ್ಥ ॥

ಎಳ್ವೈ ಪುತ್ರನೇ, ಪ್ರಾತಃಕಾಲದಲ್ಲಿ (ಗುರುಕುಲದಿಂದ) ಬರುತ್ತಿದ್ದ ನಿನ್ನನ್ನು, ಪ್ರಾಣಿಗಳನ್ನು ರಜ್ಜುವಿನಿಂದ ಬಂಧಿಸುವಂತೆ, ಗವಾದಿಧನವನ್ನು (ಕೊಟ್ಟು) ಯಾವ ರಾಜನು ತಡೆದನೋ ಆ ರಾಜನು, ಉತ್ತಮವಾದ ಗೋವುಗಳು, ಅಶ್ವಗಳು, ಹಿರಣ್ಯ ಇವುಗಳಿಂದ ಯುಕ್ತನಾಗಲಿ ; ಇವನಿಗೆ ಇಂದ್ರನು ಪ್ರಭೂತಾನ್ನವನ್ನು ಅನುಗ್ರಹಿಸಲಿ.

English Translation.

May he (the Raja) be rich in cows, in gold, in horses : may Indra grant abundant food to him who delays thee, returning home in the early morning, by costly gifts, as (a hunter arrests the) wandering (animals) by his snares.

॥ ವಿಶೇಷವಿಷಯಗಳು ॥

**ಅಥ ಕಕ್ಷೀವತಃ ಪಿತಾ ಆನೀತೇನ ಧನೇನ ಸಂತುಷ್ಟಃ ರಾಜಾನಂ ಬಹುಪ್ರಕಾರೇಣ ಅಶಾಸ್ತೇ** । ಕಕ್ಷೀವಂತನ ತಂದೆಯು ಸ್ವನಯನಿಂದ ದತ್ತವಾದ ಸಂಪತ್ತುಗಳನ್ನು ನೋಡಿ ಬಹಳವಾಗಿ ಸಂತೋಷಪಟ್ಟು ಸ್ವನಯನನ್ನು ಅನೇಕ ವಿಧದಲ್ಲಿ ಆಶೀರ್ವದಿಸುತ್ತಾನೆ. ಈ ಋಕ್ಕಿನಲ್ಲಿ ಆ ಆಶೀರ್ವಾದದ ಕ್ರಮವನ್ನೂ ತಿಳಿಸಿದೆ. ಈ ಋಕ್ಕಿಗೆ ನಿರುಕ್ತಕಾರರು ಈ ರೀತಿ ವಿವರಣೆಯನ್ನು ಹೇಳಿದ್ದಾರೆ.

> **ಸುಗುರ್ಭವತಿ ಸುಹಿರಣ್ಯಃ ಸ್ವಶ್ವೋ ಮಹಚ್ಚಾಸ್ಮೈ ವಯ ಇಂದ್ರೋ ದಧಾತಿ ಯಸ್ತ್ವಾ-ಯಂತಮನ್ನೇನ ಪ್ರಾತರಾಗಾಮಿನ್ನತಿಥೇ । ಮುಕ್ಷೀಜಯೇವ ಪದಿಮುತ್ಸಿನಾತಿ ಕುಮಾರಃ । ಮುಕ್ಷೀಜಾ ಮೋಚನಾಚ್ಚ ಸಯನಾಚ್ಚ ತತನಾಚ್ಚ ॥** (ನಿ. ೫-೧೯)

ಒಬ್ಬ ಬಾಲಕನು ಬಲೆಯರೂಪವಾದ ಸಾಧನದಿಂದ ಪಕ್ಷಿಯ ಗತಿನಿರೋಧವನ್ನು ಮಾಡುವಂತೆ, ಪ್ರಾತಃ ಕಾಲದಲ್ಲಿ ಅತಿಥಿಯಾಗಿ ಸಂಭವಿಸಿದ ನಿನ್ನನ್ನು ಯಾವ ರಾಜನು ಧನಕನಕಾದಿರೂಪವಾದ ಸಾಧನದಿಂದ ಆಕರ್ಷಿತ ನನ್ನಾಗಿ ಮಾಡಿದನೋ ಅಂತಹ ರಾಜನಿಗೆ ಇಂದ್ರನು ಇನ್ನೂ ಅತಿಶಯವಾಗಿ ಗೋಹಿರಣ್ಯಾದಿ ಸಂಪತ್ತುಗಳನ್ನನು ಗ್ರಹಿಸಲಿ ಎಂದಭಿಪ್ರಾಯವು.

**ಸುಗುಃ ಅಸತ್—ಶೋಭನೈರ್ಬಹುಭಿರ್ಗೋಭಿಸ್ತದ್ವಾನ್ ಭವತು ।** ಶ್ರೇಷ್ಠವಾದ ಗೋವುಗಳನ್ನು ಇನ್ನೂ ಅಧಿಕವಾಗಿ ಪಡೆಯಲಿ ಎಂದು ತಾತ್ಪರ್ಯ.

**ಪ್ರಾತರಿತ್ವಃ—ಪ್ರಾತರಾಗಾಮಿನ್ನತಿಥೇ ಪುತ್ರ ।** ಗುರುಕುಲದಿಂದ ಹಿಂತಿರುಗುತ್ತಿದ್ದಾಗ ಪ್ರಾತಃಕಾಲದಲ್ಲಿಯೇ ಅತಿಥಿಯಾಗಿ ಸಂಭವಿಸಿದವನೇ ಎಂದು ಪುತ್ರನನ್ನು (ಕಕ್ಷೀವಂತನನ್ನು) ಸಂಬೋಧಿಸಿದೆ.

**ಗತ್ಯರ್ಥಕ**ವಾದ ಇ ಧಾತುವಿನಿಂದ **ಇತ್ವನ್** ಎಂಬ ಪದವು ನಿಷ್ಪನ್ನವಾಗಿ ಹೋಗುವವನು ಅಥವಾ ಬರುವವನು ಎಂದರ್ಥವಾಗುತ್ತದೆ. **ಪ್ರಾತರಿತ್ವನ್, ಅಗ್ರೇತ್ವನ್.** ಎಂದರೆ ಪ್ರಾತಃಕಾಲದಲ್ಲಿ ಬರತಕ್ಕವನು, ಮುಂದುಗಡೆ ಹೋಗತಕ್ಕವನು ಎಂದರ್ಥ. ಈ ಋಕ್ಕಿನಲ್ಲಿಯೂ ಇದರ ಹಿಂದಿನ ಋಕ್ಕಿನಲ್ಲಿಯೂ **ಪ್ರಾತರಿತ್ವನ್** ಶಬ್ದವು ಕಕ್ಷೀವಂತನಿಗೂ ಸ್ವನಯನಿಗೂ ವಿಶೇಷಣವಾಗಿದೆ. ಸ್ವನಯನು ಪ್ರಾತಃಕಾಲದಲ್ಲೇ ಕಕ್ಷೀವಂತನಲ್ಲಿಗೆ ಬಂದವನೆಂದೂ, ಕಕ್ಷೀವಂತನು ಪ್ರಾತಃಕಾಲದಲ್ಲಿಯೇ ಅತಿಥಿಯಾಗಿ ಸಂಭವಿಸಿದವನು ಎಂದೂ ಅರ್ಥ.

**ಪದಿಂ—ಪದಿರ್ಗಂತುರ್ಭವತಿ ಯತ್ ಪದ್ಯತೇ ।** (ನಿ. ೫-೧೯) ಹೋಗತಕ್ಕವನಾದ್ದರಿಂದ (ಸಂಚರಿಸುವವನಾದ್ದರಿಂದ) ಚಲಿಸುವ ವ್ಯಕ್ತಿಗೆ **ಪದಿ** ಯೆಂಬ ವಿಶೇಷಣವಿದೆ.

**ಮುಕ್ಷೀಜಯೇವ—ಮುಚ್ಯಮಾನಾ ಸತೀ ಬಂಧನಂ ಜನಯತೀತಿ ಮುಕ್ಷೀಜಾ ಮೃಗಪಕ್ಷ್ಯಾದಿಬಂಧನೀ ರಜ್ಜುಃ ।** ಕೆಳಗೆ ಹರಡಿದ ಮೇಲೆ ಮೃಗಪಕ್ಷ್ಯಾದಿಗಳನ್ನು ಬಂಧಿಸುವ ಬಲೆಯೆಂದರ್ಥ.

**ಮುಕ್ಷೀಜಾ ಮೋಚನಾಚ್ಚ ಸಯನಾಚ್ಚ ತತನಾಚ್ಚ ।**

(ನಿ. ೫-೧೯)

ಕೆಳಗೆ ಹರಡಿಹಾಕುವುದರಿಂದಾಗಲೀ, ನೆಲದ ಮೇಲೆ ಹಾರಾಡುವುದರಿಂದಾಗಲಿ ಅಥವಾ ನೆಲದ ಮೇಲೆ ವಿಸ್ತೃತವಾಗಿ ಬೀಸುವುದರಿಂದಾಗಲಿ **ಬಲೆಗೆ ಮುಕ್ಷೀಜ**ವೆಂದು ಹೆಸರು.

**ಉತ್ಸಿನಾತಿ—ಉದ್ಗಮ್ಯ ಸಿನಾತಿ । ಬಧ್ನಾತಿ ।** ಬಂಧಿಸುತ್ತಾನೆ. ದಾರಿಯಲ್ಲಿ ಧನಕನಕಾದಿಗಳಿಂದ ಆಕರ್ಷಿಸಿ ಪ್ರಯಾಣವನ್ನು ತಡೆದನು. ಆದ್ದರಿಂದ ಬಂಧಿಸಿದನು ಎಂದು ತಾತ್ಪರ್ಯ. ಧನಕನಕಾದಿ ಸಂಪತ್ತುಗಳನ್ನು **ಮುಕ್ಷೀಜಕ್ಕೂ, ಕಕ್ಷೀವಂತನನ್ನು** ಪಕ್ಷ್ಯಾದಿಗಳಿಗೂ ಹೋಲಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸುಗುಃ**—ಶೋಭನಾಃ ಗಾವಃ ಯಸ್ಯ ಸಃ. **ಗೋಸ್ತ್ರಿಯೋರುಪಸರ್ಜನಸ್ಯ** (ಪಾ. ಸೂ. ೧-೨-೪೮) ಎಂಬುದರಿಂದ ಹ್ರಸ್ವ. **ಏಚ ಇಕ್ ಹ್ರಸ್ವಾದೇಶೇ**—ಎಂಬುದರಿಂದ ಹ್ರಸ್ವ ಉಕಾರ ಬರುತ್ತದೆ. **ನಞ್ಸುಭ್ಯಾಮ್**— (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅಸತ್**—ಅಸ ಭುವಿ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಲೋಪ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಶಪಿಗೆ ಲುಕ್. ತಿಙಂತ ನಿಘಾತಸ್ವರ ಬರುತ್ತದೆ.

**ಸುಹಿರಣ್ಯಃ**—ಶೋಭನಂ ಹಿರಣ್ಯಂ ಯಸ್ಯ ಸಃ. ಹಿಂದಿನಂತೆ **ನಞ್ಸುಭ್ಯಾಮ್**—ಎಂಬುದರಿಂದ ಉತ್ತರ ಪದಾಂತೋದಾತ್ತಸ್ವರ ಬರುತ್ತದೆ.

**ದಧಾತಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲೇಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಆಯಂತಮ್**—ಆಙ್ ಉಪಸರ್ಗ. ಇಣ್ ಗತೌ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ಇಣೋ ಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಇಣಿನ ಇಕಾರಕ್ಕೆ ಯಣಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪ್ರಾತರಿತ್ವಃ**—ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ಸಂಬೋಧನೆಯಲ್ಲಿ **ಆಮಂತ್ರಿತಸ್ಯ ಚ**— ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಉತ್ ಸಿನಾತಿ**—ಷಿಞ್ ಬಂಧನೇ ಧಾತು. ಕ್ರ್ಯಾದಿ **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ**—ಎಂಬುದರಿಂದ ಶ್ನಾ ವಿಕರಣ ಯಃ ಎಂಬ ಯಚ್ಛಬ್ದದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣ ಸ್ವರ ಉಳಿಯುತ್ತದೆ ॥ ೧ ॥



॥ ಸಂಹಿತಾಪಾಠಃ ॥

ಆಯಮದ್ಯ ಸುಕೃತಂ ಪ್ರಾತರಿಚ್ಛನ್ನಿಷ್ಟೇಃ ಪುತ್ರಂ ವಸುಮತಾ ರಥೇನ ।
ಅಂಶೋಃ ಸುತಂ ಪಾಯಯ ಮತ್ಸರಸ್ಯ ಕ್ಷಯದ್ವೀರಂ ವರ್ಧಯ ಸೂನೃತಾಭಿಃ ॥ ೨ ॥

॥ ಪದಪಾಠಃ ॥

ಆಯಂ । ಅದ್ಯ । ಸುಽಕೃತಂ । ಪ್ರಾತಃ । ಇಚ್ಛನ್ । ಇಷ್ಟೇಃ । ಪುತ್ರಂ । ವಸುಽಮತಾ । ರಥೇನ ।
ಅಂಶೋಃ । ಸುತಂ । ಪಾಯಯ । ಮತ್ಸರಸ್ಯ । ಕ್ಷಯತ್ಽವೀರಂ । ವರ್ಧಯ । ಸೂನೃತಾಭಿಃ ॥ ೨ ॥

॥ ಸಾಯಣಭಾಷ್ಯಂ ॥

ಪ್ರಾತಃ ಪೂರ್ವೇದ್ಯುಃ ಪ್ರಭಾತಕಾಲೇಽಯಂ ಧನಂ ದತ್ತವಾನ್ ತಸ್ಮಿನ್ನೇವ ಕಾಲೇ ಸುಕೃತಂ ಶೋಭನಸ್ಯ ಕರ್ತಾರಂ ತ್ವಾಮಿಚ್ಛನ್ ಪ್ರಾಪ್ತುಮಿಚ್ಛನ್ ಕದಾ ದ್ರಕ್ಷ್ಯಾಮೀತಿ ಕಾಮಯಮಾನೋಽಹಮದ್ಯಾಸ್ಮಿನ್ದಿನ ಇದಾನೀಮಾಯಂ । ಪ್ರಾಪ್ತೋಽಸ್ಮಿ । ಅತ್ರ ಯದ್ಯಪಿ ಕೇವಲಂ ಪ್ರಾತರಿತ್ಯೇವ ಶ್ರುತಂ ನ ಪೂರ್ವೇದ್ಯುರಿತಿ ತಥಾಪ್ಯದ್ಯಾಯಮಿತ್ಯುಕ್ತತ್ವಾದರ್ಥಾತ್ಪೂರ್ವೇದ್ಯುಃ ಪ್ರಾತರಿತಿ ಗಮ್ಯತೇ । ಕೀದೃಶಂ । ಇಷ್ಟೇರಿಷ್ಟಸ್ಯೇಷ್ಟಸಾಧನಸ್ಯ ಯಾಗಸ್ಯ ವಾ ಪುತ್ರಂ ಪುರು ತ್ರಾತಾರಂ । ಪುತ್ರಃ ಪುರು ತ್ರಾಯತೇ । ನಿ. ೨-೧೧ । ಇತಿ ಯಾಸ್ಕಃ । ಕರ್ತಾರಮಿತ್ಯರ್ಥಃ । ಕೇನ ಸಾಧನೇನೇತಿ ತದುಚ್ಯತೇ । ವಸುಮತಾ ರಥೇನ ಸಮೃದ್ಧಧನವತಾ ರಥೇನ ಸಾಧನೇನ । ಯದ್ವಾ ತೇನ ಸಹಿತ ಇತಿ ಸಹಾರ್ಥೇ ತೃತೀಯಾ । ಕಿಂಚ ಮದಾನೀತೇನ ಸಮೃದ್ಧೇನ ಧನೇನಾಂಶೋರಂಶುಮತೋ ವಲ್ಲೀರೂಪಸ್ಯ ಮತ್ಸರಸ್ಯ ಮಾದನಸಾಧನಸ್ಯ ಸೋಮಸ್ಯ । ಮತ್ಸರಃ ಸೋಮೋ ಮಂದತೇಸ್ತೃಪ್ತಿಕರ್ಮಣ ಇತಿ ನಿರುಕ್ತಂ । ೨-೫ । ತಸ್ಯ ಸುತಮಭಿಷುತಂ ರಸಂ ಪಾಯಯ । ಆತ್ಮಾನಂ ಪಾಯಯ । ಇಷ್ಟಸಾಧನಂ ಸೋಮಯಾಗಂ ಕುರ್ವಿತ್ಯರ್ಥಃ । ಕೃತ್ವಾ ಚ ಕ್ಷಯದ್ವೀರಂ ಕ್ಷಯಂತೋ ನಿವಸಂತೋ ವೀರಾಃ ಪುತ್ರಭೃತ್ಯಾದಯೋ ಯಸ್ಯ ತಂ ತಾದೃಶಂ ತ್ವದಿಷ್ಟಸಾಧನಬಹುಧನಪ್ರದಾತಾರಂ ಸೂನೃತಾಭಿಃ ಪ್ರಿಯಸತ್ಯಾತ್ಮಿಕಾಭಿರ್ವಾಗ್ಭಿರ್ವರ್ಧಯ । ಸಮೃದ್ಧಂ ಕುರು । ಪುತ್ರಭೃತ್ಯಾದಿವೀರೈರ್ಯಥಾ ಪ್ರವೃದ್ಧೋ ಭವತಿ ತಥಾ ಕಾಮಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಪ್ರಾತಃ**—(ನೆನ್ನೆಯ ದಿನ) ಪ್ರಾತಃಕಾಲದಲ್ಲಿ । **ಸುಕೃತಂ**—ಶುಭಕರ್ಮಗಳನ್ನು ಮಾಡಿದ (ಮತ್ತು) । **ವಸುಮತಾ**—ಧನಯುಕ್ತವಾದ । **ರಥೇನ**—ರಥರೂಪವಾದ ಸಾಧನದಿಂದ (ಸಾಧನಯುಕ್ತನಾಗಿ) । **ಇಷ್ಟೇಃ**—ಇಷ್ಟವಾದುದನ್ನು (ಇಷ್ಟಸಾಧನವಾದ ಯಾಗವನ್ನು । **ಪುತ್ರಂ**—ಚೆನ್ನಾಗಿ ರಕ್ಷಿಸಿದ (ನಿನ್ನನ್ನು) । **ಇಚ್ಛನ್**—(ನೋಡಲು) ಇಚ್ಛಿಸಿದ (ನಾನು) । **ಅದ್ಯ**—ಈಗ (ಈ ದಿವಸ) । **ಆಯಂ**—ಬಂದಿದ್ದೇನೆ । (**ಕಿಂಚ**—ಮತ್ತು) **ಅಂಶೋಃ**—ಬಳ್ಳಿಯ ರೂಪವಾಗಿರುವ । **ಮತ್ಸರಸ್ಯ**—ಮದವನ್ನುಂಟುಮಾಡುವ ಸೋಮಲತೆಯ । **ಸುತಂ**—ಹಿಂಡಲ್ಪಟ್ಟ (ರಸವನ್ನು) । **ಪಾಯಯ**—ನಿನಗೆ ನೀನೇ ಪಾನಪಾಡಿಸು (ಇಷ್ಟಸಾಧನವಾದ ಸೋಮಯಾಗವನ್ನು ಮಾಡು) (ಸೋಮಯಾಗವನ್ನಾಚರಿಸಿ) । **ಕ್ಷಯದ್ವೀರಂ**—ಜೀವಂತರಾದ ಪುತ್ರಭೃತ್ಯಾದಿಗಳಿಂದ ಯುಕ್ತನಾದವನನ್ನು (ದಾತೃವನ್ನು) । **ಸೂನೃತಾಭಿಃ**—ಪ್ರಿಯ ಮತ್ತು ಸತ್ಯವಾದ ವಾಕ್ಕುಗಳಿಂದ । **ವರ್ಧಯ**—ಸಮೃದ್ಧನನ್ನಾಗಿ ಮಾಡು (ಸಮೃದ್ಧನಾಗಲೆಂದು ಹಾರೈಸು).

॥ ಭಾವಾರ್ಥ ॥

(ನೆನ್ನೆ) ಬೆಳಿಗ್ಗೆಯೇ ಶುಭಕರ್ಮಗಳ ಕರ್ತೃವೂ, ಧನಯುಕ್ತವಾದ ರಥಸಾಧನನಾಗಿ ಯಾಗರಕ್ಷಣೆ ಮಾಡಿದವನೂ ಆದ (ನಿನ್ನನ್ನು) ನೋಡಲಿಚ್ಛಿಸಿದ (ನಾನು, ಕಕ್ಷೀವಂತನು) ಈಗ ಬಂದಿದ್ದೇನೆ; (ಈಗ ನಾನು ತಂದಿರುವ ಧನದಿಂದ ಸೋಮಯಾಗ ಮಾಡಿ) ಸೋಮಲತೆಯ ಮದಕಾರಿಯಾದ ರಸವನ್ನು ಪಾನಮಾಡಿ, ಪುತ್ರಭೃತ್ಯಾದಿ ಯುಕ್ತನಾದ (ದಾತೃವನ್ನು) ಸಮೃದ್ಧಿ ಹೊಂದಲೆಂದು ಸದ್ವಾಕ್ಯಗಳಿಂದ ಹಾರೈಸು.

## English Translation.

Desirous (of again beholding thee), I have this day obtained thee, who hast done in the morning a good deed; the performer of a sacrifice. with a wealth-laden car, refresh thyself with the effused juice of the exhilarating (Soma) creeper, and augment with sincere prayers (the prosperity) of the chief of a flourishing race.

॥ ವಿಶೇಷವಿಷಯಗಳು ॥

**ರಥೇನ**—**ರಂಹಣಶೀಲೇನ ಅಥವಾ ರಥಾಯ್ಯೈವ ವಾ ರಥಃ ರಂಹತೇರ್ಗತಿಕರ್ಮಣಃ। ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ। ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ। ರಪತೇರ್ವಾ ರಸತೇರ್ವಾ। (ನಿ. ೯-೧೧)** ಗತಿ ಅಥವಾ **ವೇಗ**ವೆಂದು ಅರ್ಥವನ್ನು ಕೊಡುವ **ರಂಹ್** ಧಾತುವಿನಿಂದಾಗಲಿ ಅಥವಾ ವರ್ಣವ್ಯತ್ಯಯವಾಗಿ ಸ್ಥಿರ ಎಂಬುದರಿಂದಾಗಲಿ, ಇದರಲ್ಲಿ ಕುಳಿತು ಹರ್ಷವನ್ನನುಭವಿಸು ಎಂದರ್ಥವನ್ನು ಕೊಡುವ **ರಮ್** ಧಾತುವಿನಿಂದಾಗಲಿ, ಅಥವಾ ಶಬ್ದಮಾಡು ಎಂದರ್ಥವನ್ನು ತೋರಿಸುವ **ರಪ್** ಅಥವಾ **ರಸ್** ಧಾತುವಿನಿಂದಾಗಲಿ ನಿಷ್ಪನ್ನವಾಗಿರಬೇಕೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸಿದ್ದಾರೆ. ಮತ್ತು

**ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ।**
**ಗೋಭಿಃ ಸಂನದ್ಧೋ ಅಸಿ ವೀಳಯಸ್ವಾಸ್ಥಾತಾ ತೇ ಜಯತು ಜೇತ್ವಾನಿ ॥**

(ಋ. ಸಂ. ೬-೪೭-೨೬)

ಎಂಬ ಋಕ್ಕನ್ನುದಹರಿಸಿ **ರಥದ** ಸ್ವರೂಪವನ್ನು ತೋರಿಸಿದ್ದಾರೆ.

**ಕ್ಷಯದ್ವೀರಂ**—**ಅತಿಬಲಿನಂ ಯಸ್ಮಿನ್ ಸರ್ವೇ ವೀರಾಃ ಕ್ಷೀಯಂತೇ।** ಯಾವನ ಕೈಯಿನಿಂದ ಶತ್ರುಗಳ ಕಡೆಯ ಸಕಲ ವೀರರೂ ನಾಶವನ್ನು ಹೊಂದುವರೋ ಅಂತಹ ಪರಾಕ್ರಮವುಳ್ಳವನೆಂದಾಗಲಿ, **ಕ್ಷಿ ನಿವಾಸಗತ್ಯೋಃ ವೀರಾಣಾಂ ನಿವಾಸಯಿತಾ ಕ್ಷಯದ್ವೀರಃ। ಪೂಷಾಹ್ಯಸ್ತಂ ಗಚ್ಛನ್ ಸರ್ವವೀರಾನ್ ಸ್ವೇ ಸ್ವೇ ಸ್ಥಾನೇ ನಿವಾಸಯತಿ। ತೇನಾಸೌ ಕ್ಷಯದ್ವೀರ ಇತ್ಯುಚ್ಯತೇ। ಕ್ಷಿ** ಶಬ್ದಕ್ಕೆ ವಾಸಸ್ಥಾನವೆಂದೂ ಪೂಷನು ಅಸ್ತನಾಗುವ ಕಾಲದಲ್ಲಿ ಸಕಲ ವೀರರನ್ನೂ ಅವರವರ ವಾಸಸ್ಥಾನದಲ್ಲಿರಿಸುವನೆಂದೂ ಆದುದರಿಂದ ಅವನಿಗೆ ಕ್ಷಯದ್ವೀರನೆಂಬ ಹೆಸರೆಂದೂ ಸ್ಕಂದಸ್ವಾಮಿಗಳು ವಿವರಿಸುವುದನ್ನು ಹಿಂದೆ (೧-೧೦೬-೪) ತಿಳಿಸಿದ್ದೇವೆ. ಪ್ರಕೃತವಾದ ಋಕ್ಕಿನಲ್ಲಿ **ಕ್ಷಿಯಂತೋ ನಿವಸಂತೋ ವೀರಾಃ ಪುತ್ರಭೃತ್ಯಾದಯೋ ಯಸ್ಯ ತಂ ತಾದೃಶಂ ತ್ವದಿಷ್ಟಸಾಧನಬಹುಧನಪ್ರದಾತಾರಂ** ನಿನಗೆ ಉದಾರವಾಗಿ ದಾನಮಾಡಿದವನು ಪುತ್ರಭೃತ್ಯಾದಿಗಳೊಂದಿಗೆ ಸುಖವಾಗಿ ವಾಸಿಸಲೆಂದು ಪ್ರಾರ್ಥಿಸು ಎಂದರ್ಥವಾಗುವುದಾಗಿ ಹೇಳಿದ್ದಾರೆ. ಹೀಗೆ ಮೇಲಿನ ಎರಡರ್ಥಗಳಲ್ಲೂ ಈ ಪದದ ಪ್ರಯೋಗವಿದೆ.

**ಸ್ತೋಮಂ ವೋ ಅದ್ಯ ರುದ್ರಾಯ ಶಿಕ್ವಸೇ ಕ್ಷಯದ್ವೀರಾಯ ನಮಸಾ ದಿದಿಷ್ಟನ ।**
**ಯೇಭಿಃ ಶಿವಃ ಸ್ವವಾ ಏವಯಾವಭಿರ್ದಿವಃ ಸಿಷಕ್ತಿ ಸ್ವಯಶಾ ನಿಕಾಮಭಿಃ ॥**

(ಋ. ಸಂ. ೧೦-೯೨-೯)

ಇತ್ಯಾದಿ (೧-೧೧೪-೧ ; ೧-೧೧೪-೩) ಋಕ್ಕುಗಳಲ್ಲಿ **ಕ್ಷಯದ್ವೀರಾಯ ರುದ್ರಾಯ । ಕ್ಷಿತಶತ್ರವೇ ರುದ್ರಾಯ** ಶತ್ರುನಾಶಕನಾದ ರುದ್ರನಿಗೆ ಎಂದೂ, ಪ್ರಕೃತವಾದ ಋಕ್ಕಿನಲ್ಲಿ ಪುತ್ರಾದಿಗಳೊಡನೆ ವಾಸಮಾಡುವವನಾಗಿರುವಂತೆ ಎಂದೂ ತಾತ್ಪರ್ಯವಾಗುತ್ತದೆ.

**ಅಂಶೋಃ**- ಸಾಧಾರಣವಾಗಿ **ಅಂಶು**ವೆಂದರೆ **ಕಿರಣ**ವೆಂದರ್ಥ. ಆದರೆ ಇಲ್ಲಿ ಸೋಮಲತೆಯ ಅವಯವಗಳು ಪ್ರಕಾಶಮಾನವಾಗಿಯೂ ಸೂಕ್ಷ್ಮವಾಗಿಯೂ ಕಿರಣಗಳಂತೆ ನಾನಾ ದಿಕ್ಕುಗಳಿಗೂ ಹರಡಿರುವುದರಿಂದ ಈ ಲತೆಯ ಅವಯವಗಳಿಗೆ **ಅಂಶು**ವೆಂದು ಹೇಳಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸಾಯಣರು **ಅಂಶೋಃ ವಲ್ಲೀರೂಪಸ್ಯ** (ಸೋಮಸ್ಯ) ಎಂದು ವಿವರಿಸಿದ್ದಾರೆ. ರಸಪೂರಿತವಾದ ಸೋಮಲತೆಯ ಬಳ್ಳಿಯೆಂದರ್ಥ. ನಿರುಕ್ತಕಾರರು ಈ ಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾ **ಅಂಶುಃ ಶಮಷ್ಟಿಮಾತ್ರೋ ಭವತಿ । ಅನನಾಯ ಶಂ ಭವತೀತಿ ವಾ ।** (ನಿ. ೨-೫) ಅದು ದೇಹದೊಳಕ್ಕೆ ಪ್ರವೇಶಿಸಿದೊಡನೆಯೇ ಹಿತಕರವಾಗಿರುತ್ತದೆ ಅಥವಾ ಜೀವಕ್ಕೆ ತಂಪಾಗಿರುತ್ತದೆ. ಆದುದರಿಂದ ಅದಕ್ಕೆ **ಅಂಶು**ವೆಂದು ಹೆಸರು ಎಂದು ಹೇಳಿ,

**ತೇ ಸೋಮಾದೋ ಹರೀ ಇಂದ್ರಸ್ಯ ನಿಂಸತೇಽಂಶುಂ ದುಹಂತೋ ಅಧ್ಯಾಸತೇ ಗವಿ ।**
**ತೇಭಿರ್ದುಗ್ಧಂ ಪಪಿವಾನ್ಸೋಮ್ಯಂ ಮಧ್ವಿಂದ್ರೋ ವರ್ಧತೇ ಪ್ರಥತೇ ವೃಷಾಯತೇ ॥**

(ಋ. ಸಂ. ೧೦-೯೪-೯)

ಎಂಬ ಋಕ್ಕನ್ನುದಹರಿಸಿದ್ದಾರೆ. ಆದರೆ ಇಲ್ಲಿ ಅಂಶು ಶಬ್ದಕ್ಕೆ **ಸೋಮರಸ**ವೆಂದರ್ಥ. ಇದರಂತೆಯೇ

**ಅಸಾವ್ಯಂಶುರ್ಮದಾಯಾಪ್ಸು ದಕ್ಷೋ ಗಿರಿಷ್ಠಾಃ । ಶ್ಯೇನೋ ನ ಯೋನಿಮಾಸದತ್ ।**

(ಋ ಸಂ. ೯-೬೨-೪)

ಇತ್ಯಾದಿ ಋಕ್ಕುಗಳಲ್ಲಿಯೂ ಸೋಮರಸವೆಂದೇ ಅರ್ಥ. **ಅಂಶು** ಶಬ್ದವು **ಸೋಮ** ಶಬ್ದಕ್ಕೆ ವಿಶೇಷಣವಾಗಿ ಬಂದಾಗ ಖಂಡಾತ್ಮಕವಾದ ಸೋಮದ ಬಳ್ಳಿಯೆಂದರ್ಥವಾಗುತ್ತದೆ.

**ಪ್ರ ಯತ್ಸಿಂಧವಃ ಪ್ರಸವಂ ಯಥಾಯನ್ನಾಪಃ ಸಮುದ್ರಂ ರಥ್ಯೇವ ಜಗ್ಮುಃ ।**
**ಅತಶ್ಚಿದಿಂದ್ರಃ ಸದಸೋ ವರೀಯಾನ್ಯದೀಂ ಸೋಮಃ ಪೃಣತಿ ದುಗ್ಧೋ ಅಂಶುಃ ॥**

(ಋ. ಸಂ. ೩-೩೬-೬)

**ಸಮುದ್ರೇಣ ಸಿಂಧವೋ ಯಾದಮಾನಾ ಇಂದ್ರಾಯ ಸೋಮಂ ಸುಷುತಂ ಭರಂತಃ ।**
**ಅಂಶುಂ ದುಹಂತಿ ಹಸ್ತಿನೋ ಭರಿತ್ರೈರ್ಮಧ್ವಃ ಪುನಂತಿ ಧಾರಯಾ ಪವಿತ್ರೈಃ ॥**

(ಋ. ಸಂ. ೩-೩೬-೭)

ಇತ್ಯಾದಿ ಋಕ್ಕುಗಳಲ್ಲಿ ಸೋಮಶಬ್ದಕ್ಕೆ ವಿಶೇಷಣವಾಗಿರುವುದರಿಂದ **ಲತಾಖಂಡರೂಪಃ ಅಲ್ಪಃ ಸೋಮಃ ।** ಲತಾಖಂಡರೂಪವೂ ಅಲ್ಪವಾದದ್ದೂ ಆದ ಸೋಮವೆಂದು ಸೋಮದ ನ್ಯೂನವಾದ ಪರಿಮಾಣವನ್ನು ಹೇಳಿದೆ.

ಆದರೂ **ಅಲ್ಪತರೋಽಂಶುಭೂತಃ ಸೋಮಃ ವರೀಯಾಂಸಮಿಂದ್ರಂ ಪ್ರೀಣಯತಿ** | **ಇಂದ್ರನು** ಮಹತ್ತಾದ ದೇಹವುಳ್ಳವನಾದರೂ ಅಲ್ಪವಾದ ಸೋಮವು ಅವನನ್ನು ತೃಪ್ತಿಗೊಳಿಸುತ್ತದೆ ಎಂದು ಅರ್ಥವಾಗುವುದು. ಪ್ರಕೃತವಾದ ಸೂಕ್ತದಲ್ಲಿ ಇಂದ್ರನು ತೃಪ್ತನಾಗಿ ಸ್ವನಯನ ಐಶ್ವರ್ಯವನ್ನು ವೃದ್ಧಿಪಡಿಸಲಿ ಎಂದು ಪ್ರಾರ್ಥಿಸಿದೆ.

**ಮತ್ಸರಸ್ಯ—ಮಾದನಸಾಧನಸ್ಯ ಸೋಮಸ್ಯ |** ಹರ್ಷಹೇತುವೆಂದರ್ಥ. ನಿರುಕ್ತಕಾರರು ಈ ಪದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. **ಮತ್ಸರಃ ಸೋಮೋ ಮಂದತೇಸ್ತೃಪ್ತಿಕರ್ಮಣಃ | (ನಿ. ೨-೨೫)** ತೃಪ್ತಿಯನ್ನುಂಟುಮಾಡು ಎಂಬರ್ಥವನ್ನು ಕೊಡುವ **ಮಂದ್** ಧಾತುವಿನಿಂದ ನಿಷ್ಪನ್ನವಾಗಿ ಸೋಮರಸಕ್ಕೆ ಪರ್ಯಾಯವಾಗಿದೆಯೆಂದೂ ಅಥವಾ **ಮತ್ಸರ ಇತಿ ಲೋಭನಾಮ |** ಅತ್ಯಾಶೆಯನ್ನಾಗಲಿ ಅಹಮಹಮಿಕೆಯನ್ನಾಗಲಿ ತೋರಿಸತಕ್ಕದ್ದಾದ್ದರಿಂದ ಮತ್ಸರವೆಂಬ ಹೆಸರೆಂದೂ ನಿರ್ವಚನವನ್ನು ತೋರಿಸಿದ್ದಾರೆ. ಈ ಎರಡರ್ಥಗಳಲ್ಲೂ ಈ ಪದದ ಪ್ರಯೋಗವಿದೆ. ಉದಾಹರಣೆಗೆ:—

**ಸುಷುಮಾ ಯಾತಮದ್ರಿಭಿರ್ಗೋಶ್ರೀತಾ ಮತ್ಸರಾ ಇಮೇ ಸೋಮಾಸೋ ಮತ್ಸರಾ ಇಮೇ |**
(ಋ. ಸಂ ೧-೧೩೭-೧)

ಎಂಬಲ್ಲಿ ಪ್ರಕೃತವಾದ ಸೋಮರಸಗಳು ಇತರ ಯಜ್ಞಗಳ **ಸೋಮ**ರಸಗಳೊಂದಿಗೆ ಸ್ಪರ್ಧಿಸಿ ಉತ್ಕೃಷ್ಟವಾಗಿವೆಯೆಂದು ತೋರಿಸಲು **ಮತ್ಸರ**ವೆಂಬ ಪದವು ಉಪಯೋಗಿಸಲ್ಪಟ್ಟಿದೆ.

**ಮತ್ಸಿ ಸೋಮ ವರುಣಂ ಮತ್ಸಿ ಮಿತ್ರಂ ಮತ್ಸೀಂದ್ರಮಿಂದೋ ಪವಮಾನ ವಿಷ್ಣುಂ |**
**ಮತ್ಸಿ ಶರ್ಧೋ ಮಾರುತಂ ಮತ್ಸಿ ದೇವಾನ್ಮತ್ಸಿ ಮಹಾಮಿಂದ್ರಮಿಂದೋ ಮದಾಯ ||**
(ಋ. ಸಂ. ೯-೯೦-೫)

ಇತ್ಯಾದಿ ಋಕ್ಕುಗಳಲ್ಲಿ ತೃಪ್ತಿಯನ್ನು ಕೊಡತಕ್ಕದ್ದೆಂಬುದಾಗಿ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಹರ್ಷದಾಯಕವಾದ ತೃಪ್ತಿಸಾಧನವಾದ ರಸವೆಂದರ್ಥ.

**ಪುತ್ರಂ—ಪುತ್ರಃ ಪುರು ತ್ರಾಯತೇ** (ನಿ. ೨-೧೧) ಅತಿಶಯವಾಗಿ ರಕ್ಷಿಸುವುದರಿಂದ ಪುತ್ರನೆಂಬ ಹೆಸರು. ಪ್ರಕೃತದಲ್ಲಿ ಯಜ್ಞಕರ್ತನೆಂದರ್ಥ. ಸಾಯಣರೂ ಯಾಸ್ಕರ ನಿರ್ವಚನವನ್ನುದಹರಿಸಿ **ಕರ್ತಾರಮಿತ್ಯರ್ಥಃ** ಯಜ್ಞಕರ್ತನೆಂದರ್ಥವೆಂದು ತಿಳಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಆಯಮ್**— ಇಣ್ ಗತೌ ಧಾತು. ಲಜ್ ಉತ್ತಮಪುರುಷ ಏಕವಚನದಲ್ಲಿ ಮಿಪ್ಪಿಗೆ **ತಸ್ ಥಸ್ ಥಮಿಪಾಂ**—(ಪಾ. ಸೂ. ೩-೪-೧೦೧) ಎಂಬುದರಿಂದ ಅಮಾದೇಶ. **ಆಡಜಾದೀನಾಮ್**—(ಪಾ. ಸೂ. ೬-೪-೭೨) ಎಂಬುದರಿಂದ ಅಂಗಕ್ಕೆ ಆಡಾಗಮ. **ಆಟಶ್ಚ** (ಪಾ. ಸೂ. ೬-೧-೯೦) ಎಂಬುದರಿಂದ ವೃದ್ಧಿ. **ಏಚೋಽಯವಾ**— ಎಂಬುದರಿಂದ ಆಯಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಸುಕೃತಮ್**— ಶೋಭನಂ ಕರೋತಿ ಇತಿ ಸುಕೃತ್. ಡುಕೃಇ್ ಕರಣೇ ಧಾತು. ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿಕೃತಿ ತುಕ್**—(ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಪ್ರಾದಿಸಮಾಸ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಇಚ್ಛನ್**—ಇಷು ಇಚ್ಛಾಯಾಂ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶ ವಿಕರಣ. **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಧಾತುವಿಗೆ ಛತ್ವ. ವಿಕರಣ ಸ್ವರ ಉಳಿಯುತ್ತದೆ. ಪ್ರಥಮಾ ಏಕ ವಚನಾಂತರೂಪ.

**ಇಷ್ಟೇಃ**—ಪೂರ್ವೋಕ್ತವಾದ ಧಾತು. **ಮಂತ್ರೇ ಷಪಚ**—(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ.

**ಪುತ್ರಮ್**—ಪೂಞ್ ಪವನೇ ಧಾತು. **ಪುವೋ ಹ್ರಸ್ವಶ್ಚ**—(ಉ. ಸೂ. ೪-೬೦೪) ಎಂಬುದರಿಂದ ಕ್ತ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ದ್ವಿತೀಯಾ ಏಕವಚನಾಂತರೂಪ.

**ಪಾಯಯ**—ಪಾ ಪಾನೇ . ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಇದು ಪರವಾದಾಗ **ಶಾಚ್ಛಾಸಾಹ್ವಾವ್ಯಾ**—(ಪಾ. ಸೂ. ೭-೩-೩೭) ಎಂಬುದರಿಂದ ಯುಕಾಗಮ. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಕ್ಷಯದ್ವೀರಮ್**—ಕ್ಷಿ ನಿವಾಸಗತ್ಯೋಃ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ವ್ಯತ್ಯಯದಿಂದ ಧಾತು ವಿಗೆ ಗುಣ. ಅಯಾದೇಶ. ಕ್ಷಯಂತಃ ವೀರಾಃ ಯಸ್ಯ ಸಃ. ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವರ್ಧಯ**—ವೃಧು ವೃದ್ಧೌ ಧಾತು. ಹಿಂದಿನಂತೆ ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚ ನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಉಪ ಕ್ಷರಂತಿ ಸಿಂಧವೋ ಮಯೋಭುವ ಈಜಾನಂ ಚ ಯಕ್ಷ್ಯಮಾಣಂ ಚ ಧೇನವಃ ।

ಪೃಣಂತಂ ಚ ಪಪುರಿಂ ಚ ಶ್ರವಸ್ಯವೋ ಘೃತಸ್ಯ ಧಾರಾ ಉಪ ಯಂತಿ ವಿಶ್ವತಃ ॥ ೪ ॥

॥ ಪದಪಾಠಃ ॥

ಉಪ । ಕ್ಷರಂತಿ । ಸಿಂಧವಃ । ಮಯಃಽಭುವಃ । ಈಜಾನಂ । ಚ । ಯಕ್ಷ್ಯಮಾಣಂ । ಚ । ಧೇನವಃ ।

ಪೃಣಂತಂ । ಚ । ಪಪುರಿಂ । ಚ । ಶ್ರವಸ್ಯವಃ । ಘೃತಸ್ಯ । ಧಾರಾಃ । ಉಪ । ಯಂತಿ । ವಿಶ್ವತಃ ॥ ೪ ॥

॥ ಸಾಯಣಭಾಷ್ಯಂ ॥

ಪೂರ್ವಸ್ಯಾಮೃಚ್ಯಾನೀತೇನ ಧನೇನ ಸೋಮಯಾಗಂ ಕುರ್ವಿತ್ಯುಕ್ತಂ । ತಮೇವ ಸೋಮಯಾಗಂ ಫಲಪ್ರದರ್ಶನೇನ ಸ್ತೌತಿ । ಸಿಂಧವಃ ಸ್ಯಂದನಶೀಲಾಃ ಪ್ರಸ್ರುತಪಯೋಧರಾಃ । ಸಿಂಧುಃ ಸ್ಯಂದನಾದಿತಿ ಯಾಸ್ಕಃ । ನಿ. ೯-೨೬ । ಮಯೋಭುವಃ ಸುಖಭಾವಯಿತ್ರ್ಯಃ । ಮಯ ಇತಿ ಸುಖನಾಮ ಮಯಃ ಸ್ಯೂಮಕಮಿತಿ ತನ್ನಾಮಸು ಪಾಠಾತ್ । ಧೇನವಃ ಪ್ರೀಣಯಿತ್ರ್ಯೋ ಗಾವ ಈಜಾನಂ ಸೋಮಯಾಗಮನುತಿಷ್ಠಂತಂ ತಥಾ ಯಕ್ಷ್ಯಮಾಣಂ ಯಕ್ಷ್ಯ ಇತಿ ಪ್ರಣತಿಂ ಕುರ್ವಂತಂ ಚ । ನ ಕೇವಲಮೀಜಾನಂ ಅಪಿ ತು ಯಕ್ಷ್ಯ ಇತ್ಯಧ್ಯವಸಿತವಂತಮಪ್ಯುಪ ಉಪೇತ್ಯ ಕ್ಷರಂತಿ । ಸ್ರವಂತಿ । ಪ್ರೀಣಯಂತೀತ್ಯರ್ಥಃ । ನ ಚ ಪೂರ್ವಸ್ಯಾಮೃಚಿ ಸೋಮಂ ಪಿಬೇತ್ಯುಕ್ತತ್ವಾತ್ ಸರ್ವೇಷಾಂ ಸೋಮ-ಯಾಗಾನಾಮಗ್ನಿಷ್ಟೋಮಾತ್ಮಕಜ್ಯೋತಿಷ್ಟೋಮಸ್ಯ ಪ್ರಕೃತಸ್ಯ ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತೀತಿ ಸ್ವರ್ಗ ಏವ ಫಲತ್ವೇನ ಶ್ರುತೇಃ ನ ಗವಾದಿಕಮಿತಿ ವಾಚ್ಯಂ । ಸ್ವರ್ಗವದ್ಗವಾದಿಕಾಮನಯಾಪಿ ಸೋಮಯಾಗಸ್ಯ ಕರ್ತುಂ ಶಕ್ಯತ್ವಾತ್ । ನ ಕೇವಲಂ ಸೋಮಯಾಗಮನುತಿಷ್ಠತಾಮೇವ ಮಹತ್ಫಲಂ ಅಪಿ ತು ಸುಕೃತಸಾಧನಾನಿ ಕರ್ಮಾಂತರಾಣ್ಯಧಿತಿಷ್ಠತಾಮಪಿ ಮಹತ್ಫಲಮಸ್ತ್ಯೇವೇತಿ ದರ್ಶಯತಿ । ಪೃಣಂತಂ ಪಿತೄನ್ಪ್ರೀಣಯಂತಂ ಪಪುರಿಂ ಪ್ರೀಣನಶೀಲಮಿಷ್ಟದಾತಾರಂ ಪ್ರಾಣಿನಃ ಸರ್ವದಾ ಪ್ರೀಣಯಂತಂ ಚ ಪುರುಷಂ ಶ್ರವಸ್ಯವೋಽನ್ನಮಿಚ್ಛಂತ್ಯೋಽನ್ನಸಮೃದ್ಧಿಹೇತವೋ ಘೃತಸ್ಯ ಧಾರಾಃ । ಯದ್ವಾ । ಘೃತಕುಲ್ಯಾಃ । ವಿಶ್ವತಃ ಸರ್ವತ ಉಪ ಉಪೇತ್ಯ ಯಂತಿ । ಪ್ರಾಪ್ನುವಂತಿ । ಪ್ರೀಣಯಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸಿಂಧವಃ**—(ಕ್ಷೀರವನ್ನು) ಧಾರಾಕಾರವಾಗಿ ಸುರಿಸುವ । **ಮಯೋಭುವಃ**—(ಮತ್ತು) ಸುಖ ಸಾಧನಗಳಾದ । **ಧೇನವಃ**—ಗೋವುಗಳು । **ಈಜಾನಂ ಚ**—(ಸೋಮ) ಯಾಗ ಮಾಡುವವನನ್ನೂ । **ಯಕ್ಷ್ಯಮಾಣಂ ಚ**—(ಸೋಮ) ಯಾಗ ಮಾಡುವೆನೆಂದು ದೀಕ್ಷೆ ಸ್ವೀಕರಿಸುವವನನ್ನೂ । **ಉಪ**—ಸಮೀಪಿಸಿ । **ಕ್ಷರಂತಿ**—(ಕ್ಷೀರವನ್ನು) ಸುರಿಸುತ್ತವೆ । **ಪೃಣಂತಂ ಚ**—(ಪಿತೃಗಳಿಗೆ) ತೃಪ್ತಿಯನ್ನುಂಟುಮಾಡುವವನನ್ನೂ । **ಪಪುರಿಂ ಚ**—(ಪ್ರಾಣಿಗಳಿಗೆ) ಸಂತೋಷಕಾರಕನನ್ನೂ । **ಶ್ರವಸ್ಯವಃ**—ಅನ್ನಸಮೃದ್ಧಿಕಾರಣಗಳಾದ । **ಘೃತಸ್ಯ ಧಾರಾಃ**—ಘೃತಧಾರೆಗಳು । **ವಿಶ್ವತಃ**—ಎಲ್ಲಾ ಕಡೆಗಳಿಂದಲೂ । **ಉಪ ಯಂತಿ**—ಸಮೀಪಿಸುತ್ತವೆ (ಸಂತೋಷ ಪಡಿಸುತ್ತವೆ).

‖ ಭಾವಾರ್ಥ ‖

ಧಾರಾಕಾರವಾಗಿ ಕ್ಷೀರವನ್ನು ಸುರಿಸುವ ಮತ್ತು ಸುಖಸಾಧನಗಳಾದ ಗೋವುಗಳು ಸೋಮಯಾಗ ಮಾಡುವವನಿಗೂ ಮತ್ತು ಮಾಡುತ್ತೇನೆಂದು ದೀಕ್ಷೆ ವಹಿಸಿದವನಿಗೂ ಕ್ಷೀರವನ್ನು ಕೊಟ್ಟು ತುಷ್ಟಿಪಡಿಸುತ್ತವೆ; (ಇವರಿಗೆ ಮಾತ್ರವೇ ಅಲ್ಲ) ಪಿತೃಗಳು ಮತ್ತು ಸಕಲ ಪ್ರಾಣಿಗಳನ್ನು ಸಂತೋಷಪಡಿಸುವವರಿಗೆ ಘೃತವು ಧಾರಾಕಾರ ವಾಗಿ ಒದಗಿ (ಸಂತೋಷಕಾರಣವಾಗುತ್ತದೆ).

English Translation.

The copiously-yielding and joy-conferring cows, distil (their milk) for the celebration of the (Soma) sacrifice, and for him who has undertaken its celebration: the nutritious streams of butter converge from every quarter towards him, who both propitiates (his progenitors), and benefits (mankind).

‖ ವಿಶೇಷವಿಷಯಗಳು ‖

**ಸಿಂಧವಃ**—**ಅವನಯಃ, ಯಹ್ವ್ಯಃ** ಇತ್ಯಾದಿ ನದೀ ನಾಮಗಳಲ್ಲಿ ಈ ಪದವು ಪಠಿತವಾಗಿದೆ. (ನಿ. ೨-೨೪ ನಿರುಕ್ತಕಾರರು,

**ಸುದೇವೋ ಅಸಿ ವರುಣ ಯಸ್ಯ ತೇ ಸಪ್ತ ಸಿಂಧವಃ ।**
**ಅನುಕ್ಷರಂತಿ ಕಾಕುದಂ ಸೂರ್ಮ್ಯಂ ಸುಷಿರಾಮಿವ ॥**

(**ಋ. ಸಂ. ೮-೬೯-೧೨**)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಸಿಂಧುಃ ಸ್ರವಣಾತ್ (ಸಿಂಧುಃ ಸ್ಯಂದನಾತ್ ನಿ ೯-೨೬)** ಸ್ರವಿಸುವುದರಿಂದ ಗಂಗಾದಿಸಪ್ತನದಿಗಳೂ ಸಿಂಧುಗಳೆಂದು ಕರೆಯಲ್ಪಡುತ್ತವೆಯೆಂದು ಈ ಪದದ ನಿರ್ವಚನವನ್ನು ತೋರಿಸಿದ್ದಾರೆ. ಈ ಪದವು ನದಿಯ ಪರ್ಯಾಯವಾಗಿ ಮಾತ್ರವಲ್ಲದೆ, ಸ್ರವಿಸತಕ್ಕ ಕ್ಷೀರಾದಿಗಳಿಗೂ ವಿಶೇಷಣವಾಗಿ ಉಪಯೋಗಿಸ ಲ್ಪಡುತ್ತದೆ.

**ಶ್ರುಧೀ ಹವಮಿಂದ್ರ ಮಾ ರಿಷಣ್ಯಃ ಸ್ಯಾಮ ತೇ ದಾವನೇ ವಸೂನಾಂ ।**
**ಇಮಾ ಹಿ ತ್ವಾಮೂರ್ಜೋ ವರ್ಧಯಂತಿ ವಸೂಯವಃ ಸಿಂಧವೋ ನ ಕ್ಷರಂತಃ ॥**

(ಋ. ಸಂ. ೨-೧೧-೧)

ಇತ್ಯಾದಿ ಋಕ್ಕುಗಳಲ್ಲಿ **ಆಜ್ಯ ಕ್ಷೀರ** ಎಂಬರ್ಥಗಳನ್ನು ಕೊಡುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಧೇನುಗಳ** ಕ್ಷೀರಗಳಿಗೆ ಪರ್ಯಾಯಪದವಾಗಿ ಪ್ರಯೋಗಿಸಲ್ಪಟ್ಟಿದೆ.

**ಮಯೋಭುವಃ**—**ಮಯಸ್** ಶಬ್ದವು ಸುಖನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೩). **ಮಯೋಭುವಃ** ಎಂದರೆ ಸುಖಕಾರಕರು ಎಂದರ್ಥ. ಈ ಪದವು ಸಾಧಾರಣವಾಗಿ ದೇವತೆಗಳಿಗೆ ವಿಶೇಷಣವಾಗಿ ಉಪಯೋಗಿಸ

ಲ್ಪಡುತ್ತದೆ. ಆದರೆ ಕೆಲವೆಡೆಗಳಲ್ಲಿ ಸುಖದಾಯಕವಾದ ಯಜ್ಞ ಮತ್ತು ಯಜ್ಞಸಾಮಗ್ರಿಗಳ ಸ್ವರೂಪವನ್ನೂ ತೋರಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಕ್ಷೀರಗಳನ್ನು ಕೊಡತಕ್ಕ ಗೋವುಗಳಿಗೆ ವಿಶೇಷಣವಾಗಿದೆ.

**ಪಪುರಿಂ**—**ಪಿಪರ್ತಿ ಪಪುರಿರಿತಿ ಪೃಣಾತಿ ನಿಗಮೌ ವಾ ಪ್ರೀಣಾತಿ ನಿಗಮೌ ವಾ । ಪಿಪರ್ತಿ** ಮತ್ತು **ಪಪುರಿ** ಎಂಬ ಪದಗಳು **ತುಂಬು** ಅಥವಾ **ತೃಪ್ತಿಪಡಿಸು** ಎಂಬರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿವೆ, (ನಿ. ೫-೨೪) ಎಂದು ನಿರುಕ್ತಕಾರರು ವಿವರಿಸಿ,

**ಹವಿಷಾ ಜಾರೋ ಅಪಾಂ ಪಿಪರ್ತಿ ಪಪುರಿರ್ನರಾ । ಪಿತಾ ಕುಟಸ್ಯ ಚರ್ಷಣಿಃ ।**

(ಋ. ಸಂ. ೧-೪೬-೪)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಪಪುರಿ** ಶಬ್ದಕ್ಕೆ ಮೇಲ್ಕಂಡಂತೆ ಅರ್ಥವನ್ನು ಹೇಳಿದ್ದಾರೆ. ಇದರಂತೆಯೇ,

**ಕಥಾ ಶೃಣೋತಿ ಹೂಯಮಾನಮಿಂದ್ರಃ ಕಥಾ ಶೃಣ್ವನ್ನವಸಾಮಸ್ಯ ವೇದ ।**
**ಕಾ ಅಸ್ಯ ಪೂರ್ವೀರುಪಮಾತಯೋ ಹ ಕಥೈನಮಾಹುಃ ಪಪುರಿಂ ಜರಿತ್ರೇ ॥**

(ಋ. ಸಂ ೪-೨೩-೩)

ಎಂಬ ಋಕ್ಕಿನಲ್ಲಿಯೂ ಸಹ **ಜರಿತ್ರೇ ಸ್ತೋತುಃ ಸಂಬಂಧಿನಾಂ ಕಾಮಾನಾಂ ಪಪುರಿಂ ಪೂರಯಿತಾರಂ ಏನಂ ಇಂದ್ರಂ ।** ಸ್ತೋತೃವಿನ ಇಷ್ಟಾರ್ಥಗಳನ್ನು ತುಂಬಿಕೊಟ್ಟು ತೃಪ್ತಿಯನ್ನುಂಟುಮಾಡತಕ್ಕ ಇಂದ್ರನನ್ನು ಎಂದು ವಿವರಿಸಿ **ಪಪುರಿ** ಶಬ್ದದ ಅರ್ಥವನ್ನು ತೋರಿಸಿದೆ. **ತುಂಬು** ಅಥವಾ **ತೃಪ್ತಿಪಡಿಸು** ಎಂದರ್ಥವಾದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಹವಿರಾದಿ ದಾನಗಳಿಂದ ದೇವತೆಗಳನ್ನು ತೃಪ್ತಿಗೊಳಿಸತಕ್ಕ ಯಜಮಾನನನ್ನು ಎಂದು ಅನ್ವಯವಾಗಿದೆ.

**ಪೃಣಂತಂ**—ಈ ಪದವು **ದಾನಕರ್ಮ** ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯) ಈ ಋಕ್ಕಿನಲ್ಲಿ **ಪಿತೄನ್ ಪ್ರೀಣಯಂತಂ ।** ಪಿತೃಗಳನ್ನು ತೃಪ್ತಿಪಡಿಸುವವನನ್ನು ಎಂದು ಸಾಯಣರು ಅರ್ಥಮಾಡಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಕ್ಷರಂತಿ**—ಕ್ಷರ ಪ್ರಸ್ರವಣೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಿಂಧವಃ**—ಸ್ಯಂದೂ ಪ್ರಸ್ರವಣೇ. ಧಾತು. **ಸ್ಯಂದೇಃ ಸಂಪ್ರಸಾರಣಂ ಧಶ್ಚ** (ಉ ಸೂ. ೧-೧೧) ಎಂಬುದರಿಂದ ಸಂಪ್ರಸಾರಣ ಧಕಾರಪೂರ್ವಕವಾಗಿ ಉ ಪ್ರತ್ಯಯ. ಪ್ರಥಮಾ ಬಹುವಚನಾಂತರೂಪ.

**ಮಯೋಭುವಃ**—ಮಯಸ್ ಎಂಬುದು ಸುಖದ ಹೆಸರು. ಇದು ಉಪಪದವಾಗಿರುವಾಗ ಅಂತರ್ಭಾವಿತ ಣ್ಯರ್ಥಕವಾದ ಭೂಧಾತುವಿಗೆ ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಈಜಾನಮ್**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಛಾಂದಸವಾದ ಲಿಡರ್ಥದಲ್ಲಿ ಕಾನಚ್ ಪ್ರತ್ಯಯ. ಕಿತ್ತಾದುದರಿಂದ **ವಚಿಸ್ವಪಿ ಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ

ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಧಾತುವಿಗೆ ದ್ವಿತ್ವಾದಿ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಯಕ್ಷ್ಯಮಾಣಮ್**—ಪೂರ್ವೋಕ್ತವಾದ ಧಾತು. ಲೃಟ್ ಬಂದಾಗ **ಲೃಟಃ ಸದ್ವಾ** (೩-೩-೧೪) ಎಂಬುದರಿಂದ ಅದಕ್ಕೆ ಶಾನಚಾದೇಶ. **ಸ್ಯತಾಸೀ ಲೃಲುಟೋಃ** (ಪಾ. ಸೂ. ೩-೧-೩೩) ಸೂತ್ರದಿಂದ ಸ್ಯ ವಿಕರಣ. **ವ್ರಶ್ಚಭ್ರಸ್ಜ**—ಎಂಬುದರಿಂದ ಜಕಾರಕ್ಕೆ ಷತ್ವ. **ಷಢೋಃ ಕಃ ಸಿ** ಎಂಬುದರಿಂದ ಅದಕ್ಕೆ ಕತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯ ಸಕಾರಕ್ಕೆ ಷತ್ವ. **ಆನೇಮುಕ್** ಸೂತ್ರದಿಂದ ಅದಂತಾಂಗಕ್ಕೆ ಮುಕಾಗಮ. ಸ್ಯ ವಿಕರಣ ಸ್ವರ ಉಳಿಯುತ್ತದೆ.

**ಪೃಣಂತಮ್**—ಪೄ ಪಾಲನ ಪೂರಣಯೋಃ ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶತೃಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾವಿಕರಣ **ಪ್ವಾದೀನಾಂ ಹ್ರಸ್ವಃ** (ಪಾ ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. **ಋವರ್ಣಾನ್ನಸ್ಯ ಣತ್ವಂ ವಾಚ್ಯಮ್** ಎಂಬ ವಚನದಿಂದ ಣತ್ವ. ಪ್ರತ್ಯಯದ ಆದ್ಯುದಾತ್ತಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಪಪುರಿಮ್**—ಪೄ ಪಾಲನಪೂರಣಯೋಃ ಧಾತು. ಜುಹೋತ್ಯಾದಿ. **ಆದೃಗಮುಹನ**—(ಪಾ. ಸೂ. ೩-೨-೧೭೧) ಎಂಬುದರಿಂದ ಕಿನ್ ಪ್ರತ್ಯಯ. ಇದಕ್ಕೆ ಲಿಡ್ವದ್ಭಾವವಿರುವುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ **ಉರತ್** ಎಂಬುದರಿಂದ ಅತ್ವ ರಪರವಾಗಿ ಬಂದಾಗ ಆದಿಹಲ್‌ಶೇಷ. **ಉದೋಷ್ಠ್ಯಪೂರ್ವಸ್ಯ** (ಪಾ. ಸೂ. ೭-೧-೧೦೨) ಎಂಬುದರಿಂದ ಅಂಗಾವಯವಕ್ಕೆ ಉತ್ವ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶ್ರವಸ್ಯವಃ**—ಶ್ರವಃ ಆತ್ಮನಃ ಇಚ್ಛಂತಿ ಇತಿ ಶ್ರವಸ್ಯವಃ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದಮೇಲೆ ಉಪ್ರತ್ಯಯ. **ಅತೋ ಲೋಪಃ** ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಯಂತಿ**—ಇಣ್ ಗತೌ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವಿಶ್ವತಃ**—**ಪಂಚಮ್ಯಾಸ್ತಸಿಲ್** (ಪಾ. ಸೂ. ೫-೩-೭) ಎಂಬುದರಿಂದ ಪಂಚಮ್ಯರ್ಥದಲ್ಲಿ ವಿಶ್ವ ಶಬ್ದಕ್ಕೆ ತಸಿಲ್ **ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ‖ ೪ ‖



॥ ಸಂಹಿತಾಪಾಠಃ ॥

ನಾಕಸ್ಯ ಪೃಷ್ಠೇ ಅಧಿ ತಿಷ್ಠತಿ ಶ್ರಿತೋ ಯಃ ಪೃಣಾತಿ ಸ ಹ ದೇವೇಷು ಗಚ್ಛತಿ ।
ತಸ್ಮಾ ಆಪೋ ಘೃತಮರ್ಷಂತಿ ಸಿಂಧವಸ್ತಸ್ಮಾ ಇಯಂ ದಕ್ಷಿಣಾ ಪಿನ್ವತೇ ಸದಾ ॥ ೫ ॥

॥ ಪದಪಾಠಃ ॥

ನಾಕಸ್ಯ । ಪೃಷ್ಠೇ । ಅಧಿ । ತಿಷ್ಠತಿ । ಶ್ರಿತಃ । ಯಃ । ಪೃಣಾತಿ । ಸಃ । ಹ । ದೇವೇಷು । ಗಚ್ಛತಿ ।
ತಸ್ಮೈ । ಆಪಃ । ಘೃತಂ । ಅರ್ಷಂತಿ । ಸಿಂಧವಃ । ತಸ್ಮೈ । ಇಯಂ । ದಕ್ಷಿಣಾ । ಪಿನ್ವತೇ । ಸದಾ ॥ ೫ ॥

॥ ಸಾಯಣಭಾಷ್ಯಂ ॥

ಸೋಮಯಾಗಪ್ರಶಂಸಾಪ್ರಸಂಗೇನ ಸಾಮಾನ್ಯತೋ ದಾನಮೇತದಾದಿಭಿಸ್ತ್ರಿಭಿಃ ಪ್ರಶಂಸತಿ । ಯದ್ವಾ । ಸೋಮಸ್ಯೈವ ಸ್ತುತತ್ವಾದ್ದಕ್ಷಿಣಾಶಬ್ದಸ್ಯ ಯಾಗ ಏವ ಪ್ರಸಿದ್ಧತ್ವಾಚ್ಚಾ ಸೂಕ್ತಪರಿಸಮಾಪ್ತೇಃ ಸೋಮಯಾಗ ಏವ ಪ್ರಸ್ತೂಯತೇ । ಯಃ ಯೋ ಮರ್ತ್ಯಃ ಪೃಣಾತಿ ಹವಿರಾದಿದಾನೇನ ದೇವಾದೀನ್ ಪ್ರೀಣಾತಿ ಸ ನಾಕಸ್ಯ । ಕಮಿತಿ ಸುಖನಾಮ । ತದ್ವಿರುದ್ಧಮಕಂ । ನ ವಿದ್ಯತೇಽಕಂ ದುಃಖಂ ತತ್ಸಾಧನಂ ಪಾಪಂ ವೇತಿ ನಾಕೋ ದ್ಯುಲೋಕಃ । ತಥಾ ಶ್ರೂಯತೇ । ನ ವಾ ಅಮುಂ ಲೋಕಂ ಜಗ್ಮುಷೇ ಕಿಂ ಚ ನಾಕಮಿತಿ । ನಿ. ೨-೧೪ । ತಸ್ಯ ಪೃಷ್ಠ ಉನ್ನತ ಉಪರಿದೇಶೇ ಶ್ರಿತಃ ಸನ್ನಧ್ಯಧಿಕಮಾ ಕಲ್ಪಾಂತಂ ತಿಷ್ಠತಿ । ಯದ್ವಾ । ಅಧಿ ತಿಷ್ಠತಿ । ಅಧಿಷ್ಠಾಯ ಪ್ರಮುಖೋ ಭೂತ್ವಾ ತಿಷ್ಠತಿ । ನ ಕೇವಲಂ ಸ್ವರ್ಗಾಶ್ರಯಣಂ ಕಿಂತು ದೇವೇಷು ಮಧ್ಯೇ ಗಚ್ಛತಿ । ವರ್ತತೇ । ಸ್ವಯಮೇವ ದೇವೋ ಭವತೀತ್ಯರ್ಥಃ । ಹೇತಿ ಪ್ರಸಿದ್ಧೌ । ತಸ್ಮೈ ಪ್ರೀಣಯಿತ್ರೇ ಪುರುಷಾಯ ಸಿಂಧವಃ ಸ್ಯಂದನಶೀಲಾ ಆಪೋ ಘೃತಂ ತೇಜೋವತ್ಸಾರಮರ್ಷಂತಿ । ಗಚ್ಛಂತಿ । ರಸವತ್ಯೋ ಭವಂತೀತ್ಯರ್ಥಃ । ಕಿಂಚೇಯಂ ಭೂಮಿರಪಿ ದಕ್ಷಿಣಾ ಸಸ್ಯಾದಿಫಲಸಂಪಾದನದಕ್ಷಾ ಸತೀ ಸದಾ ಸರ್ವಕಾಲಂ ಪಿನ್ವತೇ । ಸೇಚಯತಿ । ತೋಷಯತೀತ್ಯರ್ಥಃ । ದಾತುರ್ಜೀವನಸಾಧಕಾನ್ಯೋದಕಾನಿ ರುಚಿರಾಣಿ ಸಮೃದ್ಧಾನಿ ಭವಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಮನುಷ್ಯನು । **ಪೃಣಾತಿ**—ಹವಿರಾದಿಗಳಿಂದ (ದೇವತೆಗಳೇ ಮೊದಲಾದವರನ್ನು) ತೃಪ್ತಿಪಡಿಸುತ್ತಾನೋ । **ಸಃ**—ಆ ಮನುಷ್ಯನು । **ನಾಕಸ್ಯ ಪೃಷ್ಠೇ**—ಸ್ವರ್ಗಲೋಕದ ಉನ್ನತ ಪ್ರದೇಶವನ್ನು । **ಶ್ರಿತಃ**—ಆಶ್ರಯಿಸಿದವನಾಗಿ । **ಅಧಿ ತಿಷ್ಠತಿ**—ಶಾಶ್ವತವಾಗಿ (ಪ್ರಾಮುಖ್ಯತೆಯನ್ನು ಪಡೆದು) ವಾಸಿಸುತ್ತಾನೆ । **ದೇವೇಷು**—ದೇವತೆಗಳಲ್ಲಿ । **ಗಚ್ಛತಿ**—(ಸೇರಿ) ಹೋಗುತ್ತಾನೆ । **ಹ**—(ಇದು) ಪ್ರಸಿದ್ಧವೇ ಆಗಿದೆ । **ತಸ್ಮೈ**—(ದೇವತೆಗಳನ್ನು ತೃಪ್ತಿಪಡಿಸಿದ) ಅವನಿಗೆ । **ಸಿಂಧವಃ**—ಪ್ರವಹಿಸುವ ಸ್ವಭಾವವಾದ । **ಆಪಃ**—ಉದಕಗಳು । **ಘೃತಂ** - ರಸವತ್ತಾಗಿ (ತೇಜೋವಿಶಿಷ್ಟಗಳಾಗಿ) । **ಅರ್ಷಂತಿ**—ಆಗುತ್ತವೆ (ಮತ್ತು) । **ತಸ್ಮೈ**—ಅಂಥವನಿಗೆ । **ಇಯಂ**—ಈ ಭೂಮಿಯೂ । **ದಕ್ಷಿಣಾ**—(ಸಸ್ಯಾದಿ ಫಲಸಂಪಾದನೆಯಲ್ಲಿ) ದಕ್ಷಳಾಗಿ । **ಸದಾ**—ಸರ್ವಕಾಲದಲ್ಲಿಯೂ । **ಪಿನ್ವತೇ**—ಸಂತೋಷಪಡಿಸುತ್ತಾಳೆ.

॥ ಭಾವಾರ್ಥ ॥

ದೇವತೆಗಳನ್ನು ಹವಿರಾದಿಗಳಿಂದ ತೃಪ್ತಿಪಡಿಸಿದರೆ ಮನುಷ್ಯನು ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ; (ಅಲ್ಲದೇ) ದೇವತೆಗಳಲ್ಲಿ ಒಬ್ಬನಾಗುತ್ತಾನೆ; ಅಂಥವನಿಗೆ ಪ್ರವಾಹಸ್ವಭಾವದ ನೀರೂ (ತೇಜೋವಿಶಿಷ್ಟವಾಗುತ್ತದೆ) ರಸವತ್ತಾಗುತ್ತದೆ; ಭೂಮಿಯೂ ಸಸ್ಯಾದಿಫಲಗಳನ್ನು ಕೊಟ್ಟು ಸರ್ವಕಾಲದಲ್ಲಿಯೂ ಸಂತೋಷವನ್ನು ಕೊಡುತ್ತಾಳೆ.

English Translation

He who propitiates (the gods), gives to the gods, and sits at ease upon the summit of heaven : to him the flowing waters bear their essence ; to him this fertile (earth) every yields abundance.

॥ ವಿಶೇಷವಿಷಯಗಳು ॥

**ನಾಕಸ್ಯ**—ನಿರುಕ್ತಕಾರರು **ನಾಕ** ಶಬ್ದವನ್ನು ೬ **ಸಾಧಾರಣ** ನಾಮಗಳಲ್ಲಿ ಸೇರಿಸಿ ಅವುಗಳ ಅರ್ಥವನ್ನು ಸಾಧಾರಣವೆಂದು ವಿವರಿಸುತ್ತಾ **ಸಾಧಾರಣಾನ್ಯುತ್ತರಾಣಿ ಷಟ್ ದಿವಶ್ಚಾದಿತ್ಯಸ್ಯ ಚ । ದ್ಯುಲೋಕಕ್ಕೂ ಆದಿತ್ಯನಿಗೂ** ಸಾಧಾರಣವಾದ ಪರ್ಯಾಯಪದಗಳೆಂದೂ ತಿಳಿಸಿದ್ದಾರೆ. (ನಿ. ೨-೧೩) ಅನಂತರ ಈ ಶಬ್ದದ ನಿರ್ವಚನವನ್ನು ತೋರಿಸುತ್ತಾ—**ನಾಕ ಆದಿತ್ಯೋಭವತಿ—ನೇತಾ ರಸಾನಾಂ । ನೇತಾ ಭಾಸಾಂ ಜ್ಯೋತಿಷಾಂ ಪ್ರಣಯಃ** (ನಿ. ೨-೧೪) ರಸದ ವಾಹಕನೂ ಮತ್ತು ತೇಜೋವಾಹಕನೂ ಆದ **ಆದಿತ್ಯ**ನಿಗೆ **ನಾಕ**ವೆಂದು ಹೆಸರು ಎಂದು **ಆದಿತ್ಯನ** ಪರ್ಯಾಯವಾಗಿರುವುದನ್ನು ತಿಳಿಸಿ **ಅಥ ದ್ಯೌಃ ಕಮಿತಿ ಸುಖನಾಮ ತತ್ಪ್ರತಿಷಿದ್ಧಂ ಪ್ರತಿಷಿಧ್ಯೇತ । ಕಂ** ಎಂಬುದು ಸುಖದ ಪರ್ಯಾಯನಾಮ । ಸುಖವಿಲ್ಲದಿರುವುದು **ಅಕಂ** ಅದರ ಅಭಾವ ಎಂದರೆ ಸುಖಾಭಾವವಿಲ್ಲದಿರುವುದು ; ದುಃಖರಹಿತವಾದುದು ಎಂದರ್ಥವೆಂದು ವಿವರಿಸಿ,

**ನ ವಾ ಅಮುಂ ಲೋಕಂ ಜಗ್ಮುಷೇ ಕಿಂ ಚ ನಾಕಂ ।**

(ಕಾಠಕ. ಸಂ. ೨೧-೨)

ಎಂಬ ವಾಕ್ಯವನ್ನುದಹರಿಸಿ **ನ ವಾ ಅಮುಂ ಲೋಕಂ ಗತವತೇ ಕಿಂ ಚ ನಾಸುಖಂ; ಪುಣ್ಯಕೃತೋಹ್ಯೇವ ತತ್ರ ಗಚ್ಛಂತಿ ।** ಈ ಲೋಕಕ್ಕೆ ಹೋದವರಿಗೆ ದುಃಖವೇ ಇಲ್ಲ. ಸುಕೃತಿಗಳಿಗೆ ಮಾತ್ರ ಈ ಲೋಕಕ್ಕೆ ಪ್ರವೇಶವುಂಟು

ಎಂದು **ನಾಕ** ಶಬ್ದದ ಅರ್ಥವನ್ನು ತಿಳಿಸಿದ್ದಾರೆ. ಋಕ್ಸಂಹಿತೆಯಲ್ಲಿ ಈ ಪದವು **ಆದಿತ್ಯನ** ಪರ್ಯಾಯವಾಗಿ ಕೆಲವು ಕಡೆಯೂ, **ಸ್ವರ್ಗದ** ಪರ್ಯಾಯವಾಗಿ ಕೆಲವು ಕಡೆಯೂ ಉಪಯೋಗಿಸಲ್ಪಟ್ಟಿದೆ.

**ತ್ರಿರಶ್ವಿನಾ ಸಿಂಧುಭಿಃ ಸಪ್ತಮಾತೃಭಿಸ್ತ್ರಯ ಆಹಾವಾಸ್ತ್ರೇಧಾ ಹವಿಷ್ಕೃತಂ ।**
**ತಿಸ್ರಃ ಪೃಥಿವೀರುಪರಿ ಪ್ರವಾ ದಿವೋ ನಾಕಂ ರಕ್ಷೇಥೇ ದ್ಯುಭಿರಕ್ತುಭಿರ್ಹಿತಂ ॥**

(ಋ. ಸಂ. ೧-೩೪-೮)

**ಯೇ ನಾಕಸ್ಯಾಧಿ ರೋಚನೇ ದಿವಿ ದೇವಾಸ ಆಸತೇ । ಮರುದ್ಭಿರಗ್ನ ಆ ಗಹಿ ॥**

(ಋ. ಸಂ. ೧-೧೯-೬)

ಇತ್ಯಾದಿ ಋಕ್ಕುಗಳಲ್ಲಿ **ಆದಿತ್ಯನ** ಪರ್ಯಾಯವಾಗಿಯೂ,

**ತೇಽವರ್ಧಂತ ಸ್ವತವಸೋ ಮಹಿತ್ವನಾ ನಾಕಂ ತಸ್ಥುರುರು ಚಕ್ರಿರೇ ಸದಃ ।**
**ವಿಷ್ಣುರ್ಯದ್ಧಾವದ್ವೃಷಣಂ ಮದಚ್ಯುತಂ ವಯೋ ನ ಸೀದನ್ನಧಿ ಬರ್ಹಿಷಿ ಪ್ರಿಯೇ ॥**

(ಋ. ಸಂ ೧-೮೫-೭)

**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।**
**ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥**

(ಋ. ಸಂ. ೧-೧೬೪-೫೦)

ಇತ್ಯಾದಿ ಋಕ್ಕುಗಳಲ್ಲಿ ಸ್ವರ್ಗಪರ್ಯಾಯವಾಗಿಯೂ ಇದೆ.

**ವೃಷೈವ ಕಪಿಲೋ ಭೂತ್ವಾ ಯನ್ನಾಕಮಧಿರೋಹತಿ ।**

(ಬೃ. ದೇ. ೨-೬೬)

ಎಂಬ ಬೃಹದ್ದೇವತಾವಾಕ್ಯದಲ್ಲಿ **ಅಂತರಿಕ್ಷವೆಂಬುದು** ಸ್ಪಷ್ಟವಾಗಿದೆ.

**ಇತೋಽಸಾವಾದಿತ್ಯೋ ದ್ವಾವಿಂಶೇನ ಪರಮಾದಿತ್ಯಾಜ್ಜಯತಿ ತನ್ನಾಕಂ ತದ್ವಿಶೋಕಂ ॥**

(ಛಾ. ಉ. ೨-೧೦-೫)

ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯದಲ್ಲಿ **ಶೋಕರಹಿತವಾದ ಸ್ವರ್ಗಲೋಕವು ಆದಿತ್ಯನ** ಲೋಕಕ್ಕಿಂತ ಪರವಾದುದೆಂದು ಹೇಳಿದೆ.

[ಶತಪಥ ಬ್ರಾಹ್ಮಣದಲ್ಲೂ ತೈತ್ತಿರೀಯ ಉಪನಿಷತ್ತಿನಲ್ಲೂ ಬ್ರಹ್ಮವಿತ್ತಾದ ಮುದ್ಗಲಪುತ್ರನಿಗೆ **ನಾಕ** ಎಂಬ ಹೆಸರು ಪ್ರಸಿದ್ಧವಾಗಿದೆ]. ಅಲ್ಲಿ ದುಃಖರಹಿತನೆಂದರ್ಥ.

ಪ್ರಕೃತವಾದ ಋಕ್ಕಿನಲ್ಲಿ **ನ ವಿದ್ಯತೇ ಅಕಂ ದುಃಖಂ ತತ್ಸಾಧನಂ ಪಾಪಂ ವೇತಿ ನಾಕೋ ದ್ಯುಲೋಕಃ ।** ದುಃಖವಾಗಲಿ ಅದಕ್ಕೆ ಹೇತುವಾದ ಪಾಪವಾಗಲಿ ಇಲ್ಲದಿರುವ ದ್ಯುಲೋಕವೆಂದರ್ಥ ಮಾಡಿದ್ದಾರೆ. ಅಂತಹ **ನಾಕಸ್ಯ ಪೃಷ್ಠೇ ಉನ್ನತೇ ಉಪರಿಪ್ರದೇಶೇ.**

**ಅರ್ಷಂತಿ**— ಗತ್ಯರ್ಥಕವಾದ ಈ ಪದವು **ಗಚ್ಛಂತಿ** ಹೋಗಿ ಸೇರುತ್ತವೆ ಎಂದರ್ಥವನ್ನು ಕೊಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಪಾಕಾವಸ್ಥೆಯನ್ನು ಹೊಂದುತ್ತವೆ ಎಂದರ್ಥ.

**ಪಿನ್ವತೇ— ಸೇಚಯತಿ ತೋಷಯತೀತ್ಯರ್ಥಃ** । ದಾತೃವಿನ ಜೀವನಸಾಧನಗಳಾದ ಉದಕಗಳನ್ನು ಸಮೃದ್ಧಿಯಾಗಿ ಸುರಿಸಿ ಅವನಿಗೆ ತೃಪ್ತಿಯುಂಟಾಗುವುದೆಂದು ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ನಾಕಸ್ಯ**— ನ ಅಕಃ ನಾಕಃ. **ನಭ್ರಾಣ್ನಪಾತ್**—(ಪಾ. ಸೂ. ೬-೩-೭೫) ಎಂಬುದರಿಂದ ನಞ್‌ಗೆ ಪ್ರಕೃತಿಭಾವ ಬರುತ್ತದೆ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ತಿಷ್ಠತಿ**— ಷ್ಠಾ ಗತಿನಿವೃತ್ತೌ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಶ್ರಿತಃ**—ಶ್ರಿಞ್ ಸೇವಾಯಾಂ ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪೃಣಾತಿ**—**ಪೄ** ಪಾಲನಪೂರಣಯೋಃ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯಃ ಎಂಬುದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತ ಸ್ವರ ಬರುತ್ತದೆ. ವಿಕರಣ ಸ್ವರ ಉಳಿಯುತ್ತದೆ.

**ಗಚ್ಛತಿ**—ಗಮ್ಲೃ ಗತೌ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅರ್ಷಂತಿ** ಋ ಗತೌ ಧಾತು. ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ. **ಸಿಬ್ಬಹುಲಂ ಲೇಟಿ** (ಪಾ ಸೂ. ೩-೧-೩೪) ಎಂಬುದರಿಂದ ಸಿಪ್. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

**ದಕ್ಷಿಣಾ**—ದಕ್ಷ ವೃದ್ಧೌ ಧಾತು. **ದ್ರುದಕ್ಷಿಭ್ಯಾಮಿನನ್** (ಉ. ಸೂ. ೨-೨೦೮) ಎಂಬುದರಿಂದ ಇನನ್ ಪ್ರತ್ಯಯ. **ಅಟ್‌ಕುಪ್ವಾಙ್**—ಎಂಬುದರಿಂದ ಣತ್ವ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪಿನ್ವತೇ**—ಪಿವಿ ಸೇಚನೇ. ಧಾತು. **ಇದಿತೋ ನುಮ್ ಧಾತೋಃ**—(ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ದಕ್ಷಿಣಾವತಾಮಿದಿಮಾನಿ ಚಿತ್ರಾ ದಕ್ಷಿಣಾವತಾಂ ದಿವಿ ಸೂರ್ಯಾಸಃ ।
ದಕ್ಷಿಣಾವಂತೋ ಅಮೃತಂ ಭಜಂತೇ ದಕ್ಷಿಣಾವಂತಃ ಪ್ರ ತಿರಂತ
ಆಯುಃ ॥ ೬ ॥

॥ ಪದಪಾಠಃ ॥

ದಕ್ಷಿಣಾ ऽ ವತಾಂ । ಇತ್ । ಇಮಾನಿ । ಚಿತ್ರಾ । ದಕ್ಷಿಣಾ ऽ ವತಾಂ । ದಿವಿ । ಸೂರ್ಯಾಸಃ ।
ದಕ್ಷಿಣಾऽವಂತಃ । ಅಮೃತಂ । ಭಜಂತೇ । ದಕ್ಷಿಣಾऽವಂತಃ । ಪ್ರ । ತಿರಂತೇ । ಆಯುಃ ॥ ೬ ॥

॥ ಸಾಯಣಭಾಷ್ಯಂ ॥

ದಕ್ಷಿಣಾವತಾಂ ಬಹುವಿಧಗೋಹಿರಣ್ಯಾದಿರೂಪದಕ್ಷಿಣಾಪ್ರದಾತ್ೃಣಾಂ । ಇಚ್ಛಬ್ದ ಏವಕಾರಾರ್ಥಃ । ತೇಷಾಮೇವಾರ್ಥ ಇಮಾನಿ ಭೂಮೌ ದೃಶ್ಯಮಾನಾನಿ ಚಿತ್ರಾಣಿ ಚಾಯನೀಯಾನಿ ಸ್ರಕ್ಚಂದನಮಣಿಮುಕ್ತಾದಿರೂಪಾಣಿ ಸಮೃದ್ಧಾನಿ ಭವಂತೀತಿ ಶೇಷಃ । ಕಿಂಚ ದಕ್ಷಿಣಾವತಾಮೇವ ದಿವಿ ದ್ಯುಲೋಕೇ ಸೂರ್ಯಾಸಃ ಸೂರ್ಯಸಂಬಂಧಿನೋ ಲೋಕಾಸ್ತದನುಗೃಹೀತಾ ಭೋಗಾ ವಾ ಸಮೃದ್ಧಾ ಭವಂತಿ । ಕಿಂಚ ದಕ್ಷಿಣಾವಂತ ಏವಾಮೃತಂ ಜರಾಮರಣರಹಿತಂ ಸ್ಥಾನಂ ಭಜಂತೇ । ಸೇವಂತೇ । ಯದ್ವಾ । ದಾನೇನಾಪಹತಪಾಪ್ಮಾನ ಆತ್ಮಾನಂ ವಿದಿತ್ವಾಮೃತಮವಿನಾಶಂ ಮೋಕ್ಷಂ ಭಜಂತೇ । ಪ್ರಾಪ್ನುವಂತಿ । ಯಜ್ಞೇನ ದಾನೇನೇತಿ ಶ್ರುತೇಃ । ಕಿಂಚ ದಕ್ಷಿಣಾವಂತ ಏವಾಯುಃ ಪ್ರ ತಿರಂತೇ । ಅತಿದೀರ್ಘಮೇವಮಾಯುಷ್ಯಂ ಲಭಂತೇ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ । ಇದಿತಿ ಸರ್ವತ್ರ ಸಂಬಧ್ಯತೇ ॥

॥ ಪ್ರತಿಪದಾರ್ಥ ॥

**ದಕ್ಷಿಣಾವತಾಂ ಇತ್**—(ಗೋಹಿರಣ್ಯರೂಪವಾದ) ದಕ್ಷಿಣೆಯನ್ನು ಕೊಡುವವರಿಗೇ । **ಚಿತ್ರಾ**—ಅಪೇಕ್ಷಣೀಯವಾದ । **ಇಮಾನಿ**—ಇವುಗಳು ಈ (ಭೂಮಿಯಲ್ಲಿ ಸಿಗುವ ಸ್ರಕ್ಚಂದನಾದಿಗಳೂ) । **ದಕ್ಷಿಣಾವತಾಂ**—ದಕ್ಷಿಣಾದಾತೃಗಳಿಗೇ । **ದಿವಿ**—ಅಂತರಿಕ್ಷದಲ್ಲಿರುವ । **ಸೂರ್ಯಾಸಃ**—ಸೂರ್ಯಸಂಬಂಧವಾದ ಲೋಕಗಳು (ಸೂರ್ಯಾನುಗ್ರಹದಿಂದ ಪ್ರಾಪ್ಯವಾದ ಭೋಗಗಳೂ ದೊರೆಯುವವು) । **ದಕ್ಷಿಣಾವಂತಃ**—ದಕ್ಷಿಣಾದಾತೃಗಳೇ । **ಅಮೃತಂ**—ಜರಾಮರಣರಹಿತವಾದ ಸ್ಥಾನವನ್ನು । **ಭಜಂತೇ**—ಹೊಂದುತ್ತಾರೆ । **ದಕ್ಷಿಣಾವಂತಃ**—ದಕ್ಷಿಣಾದಾತೃಗಳೇ । **ಆಯುಃ**—(ದೀರ್ಘವಾದ) ಆಯುಸ್ಸನ್ನು । **ಪ್ರ ತಿರಂತೇ**—(ಪಡೆಯುತ್ತಾರೆ) ಅಭಿವೃದ್ಧಿಪಡಿಸಿಕೊಳ್ಳುತ್ತಾರೆ.

॥ ಭಾವಾರ್ಥ ॥

(ಸೋಮಯಾಗಾದಿಗಳನ್ನು ಮಾಡಿ, ಗೋಹಿರಣ್ಯಾದಿ) ದಕ್ಷಿಣೆ ಕೊಡುವವರಿಗೇ, ಈ ಭೂಮಿಯಲ್ಲಿ ಸಿಗುವ ಪ್ರಕ್ಷ್ಕಂದನಾದಿ ಕಾಮ್ಯಪದಾರ್ಥಗಳು; ಅವರಿಗೇ ಅಂತರಿಕ್ಷಸ್ಥವಾದ ಸೂರ್ಯಾದಿಲೋಕಗಳು; (ಸೂರ್ಯಾನುಗ್ರಹ ಪ್ರಾಪ್ಯವಾದ ಭೋಗಗಳು ದೊರೆಯುವವು ಮತ್ತು ಅವರೇ ಜರಾಮರಣರಹಿತವಾದ ಲೋಕಗಳನ್ನೂ, (ಇಹಲೋಕದಲ್ಲಿ) ದೀರ್ಘಾಯುಷ್ಯವನ್ನೂ ಪಡೆಯುತ್ತಾರೆ.

## English Translation·

These wonderful (rewards) verily are for those who give (pious) donations : for the donors of (pious) gifts the suns shine in heven : the givers of (pious) donations attain immortality : the givers of (pious) gifts prolong their (wordly) existence.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ದಕ್ಷಿಣಾದಾತೃಗಳಿಗೆ ಲಭಿಸತಕ್ಕ ಉತ್ತಮವಾದ ಸ್ಥಾನದ ಪ್ರಶಂಸೆಯಿದೆ.

**ದಕ್ಷಿಣಾ** ಎಂಬ ಶಬ್ದಕ್ಕೆ ನಿರುಕ್ತಕಾರರು ನಾಲ್ಕು ವಿಧವಾದ ನಿರ್ವಚನವನ್ನು ತೋರಿಸಿದ್ದಾರೆ (ನಿ. ೧-೭).

**ದಕ್ಷಿಣಾ ದಕ್ಷತೇಃ ಸಮರ್ಧಯತಿ ಕರ್ಮಣೋ ವ್ಯೃದ್ಧಂ ಸಮರ್ಧಯತೀತಿ ।**

**ದಕ್ಷತಿ** ಎಂಬ ಧಾತುವಿನಿಂದ ನಿಷ್ಪನ್ನವಾಗಿ ವೃದ್ಧಿಪಡಿಸು ಎಂಬರ್ಥವನ್ನು ಕೊಡುತ್ತದೆ. ಇದೇ ಋಕ್ಕಿನಲ್ಲಿ ಹೇಳಿರುವಂತೆ **ದಕ್ಷಿಣಾವಂತಃ ಆಯುಃ ಪ್ರತಿರಂತೇ ।** ದಕ್ಷಿಣೆಯನ್ನು ದಾನಮಾಡತಕ್ಕವರು ತಮ್ಮ ಆಯುಸ್ಸನ್ನು ದೀರ್ಘವಾಗಿ ವೃದ್ಧಿಪಡಿಸಿಕೊಳ್ಳುತ್ತಾರೆ ಎಂದಿರುವುದರಿಂದ ದಕ್ಷಿಣಾರೂಪವಾದ ದಾನಮಾಡಿದ ದ್ರವ್ಯವು ಇನ್ನೊಂದು ರೂಪದಲ್ಲಿ ವೃದ್ಧಿಯನ್ನುಂಟುಮಾಡುವುದರಿಂದ **ದಕ್ಷಿಣಾ** ಎಂಬ ಹೆಸರೆಂದೂ,

ಎರಡನೆಯದಾಗಿ, **ಅಪಿ ವಾ ಪ್ರದಕ್ಷಿಣಾಗಮನಾತ್ ।** ಯಜ್ಞಸ್ಥಾನಗಳಲ್ಲಿ ಪ್ರದಕ್ಷಿಣಾರೂಪದಿಂದ ಸುತ್ತಿ ಅನಂತರ ತನ್ನ ಕಾರ್ಯವನ್ನು ನಿರ್ವಹಿಸುವುದರಿಂದ ಈ ವಿಧವಾದ ಪ್ರದಕ್ಷಿಣೆಗೆ **ದಕ್ಷಿಣಾ** ಎಂದು ಹೆಸರೆಂದೂ,

ಮೂರನೆಯದಾಗಿ, **ದಿಶಮಭಿಪ್ರೇತ್ಯ ದಿಗ್ಘಸ್ತಪ್ರಕೃತಿಃ ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹಕರ್ಮಣಃ ।** ಶ್ರಮವಹಿಸಿ ಕಾರ್ಯಮಾಡುವ ಶಕ್ತಿಯಿರುವುದರಿಂದ ಬಲಗೈಯಿಗೆ **ದಕ್ಷಿಣೋ ಹಸ್ತಃ** ಎಂದು ಹೇಳುವುದು ಸ್ವಭಾವವಾಗಿದೆಯೆಂದೂ,

ಕೊನೆಯದಾಗಿ, **ದಾಶತೇರ್ವಾ ಸ್ಯಾದ್ದಾನಕರ್ಮಣಃ**—ದಾನಾರ್ಥಕವಾದ **ದಾಶ್** ಧಾತುವಿನಿಂದ ನಿಷ್ಪನ್ನವಾಗಿ ದಾನಮಾಡುವಾಗ ಬಲಗೈಯನ್ನು ಉಪಯೋಗಿಸುವುದರಿಂದ ದಾನಕ್ಕೆ ದಕ್ಷಿಣಾ ಎಂದು ಹೆಸರು ಎಂಬುದಾಗಿ ನಾಲ್ಕು ವಿಧವಾಗಿ ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಎಲ್ಲಾ ಅರ್ಥಗಳೂ ಅಂತರ್ಗತವಾಗಿ ಸೂಚಿತವಾಗಿವೆ.

**ಪ್ರ ತಿರಂತೇ—ಪ್ರತಿರತಿಃ ವೃದ್ಧಿಕರ್ಮಾ** । ಅಭಿವೃದ್ಧಿಯನ್ನು ಹೊಂದುತ್ತಾರೆಂದು ತಾತ್ಪರ್ಯ. ದಕ್ಷಿಣಾರೂಪದ ದಾನದ ಮಹಿಮೆಯನ್ನು ನಾನಾ ಕಡೆಗಳಲ್ಲಿ ಈ ವಿಧವಾಗಿ ಸ್ತುತಿಸಿದೆ.

**ಅಯಮಾತ್ಮಾ ದಕ್ಷಿಣಾನ್ನಂ ವನುತೇ ಯೋ ನ ಆತ್ಮೇತಿ ಹ್ಯಪ್ಯೃಷಿಣಾಭ್ಯುಕ್ತಂ ।**

(ಶ. ಬ್ರಾ. ೧೦-೧-೧-೧೦)

ದಕ್ಷಿಣಾದಾನವು ಅನ್ನವನ್ನು ಸಂಪಾದಿಸುತ್ತದೆಂದೂ,

**ಯ ಏಷ ತಪತಿ ತದ್ಯತ್ತದಾದಿತ್ಯೋ ಯಶೋ ಯಜ್ಞೋ ಹ್ಯೇವ ತದ್ಯಶಸ್ತದ್ಯತ್ತದ್ಯತ್ವಿಜೋ ಯಶೋ ದಕ್ಷಿಣಾ ಹ್ಯೇವ ತದ್ಯಶಸ್ತಸ್ಮಾದ್ಯಾಮಸ್ಮೈ ದಕ್ಷಿಣಾಮಾನಯೇಯುರ್ನ ತಾ ಇತ್ಸದ್ಯೋಽನ್ಯಸ್ಮಾ ಅತಿದಿಶೇತ್ ॥**

(ಶ. ಬ್ರಾ. ೪-೧-೧-೨೨)

ದಕ್ಷಿಣೆಯೇ ಯಶೋರೂಪವಾದ ಶ್ರೇಯಸ್ಸಾದುದರಿಂದ ಅದನ್ನು ತಿರಸ್ಕರಿಸಬಾರದು ಎಂದೂ, ಮತ್ತು ಸಾಯಣರು ಉದಹರಿಸಿರುವಂತೆ,

**ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ।**

(ಬೃ. ಉ. ೪-೪-೨೨)

ಯಜ್ಞದಿಂದಲೂ, ದಾನದಿಂದಲೂ ಸಹ ಬ್ರಹ್ಮವಿತ್ತುಗಳು ಜ್ಞಾನಿಗಳಾಗಲು ಅಪೇಕ್ಷಿಸುತ್ತಾರೆಂದೂ ಹೀಗೆಯೇ ಇನ್ನೂ ಇತರ ವಿಧವಾಗಿಯೂ **ದಕ್ಷಿಣೆಯು** ಪ್ರಶಂಸೆಯಿದೆ.

॥ ವ್ಯಾಕರಣಪ್ರಕ್ರಿಯಾ ॥

**ದಕ್ಷಿಣಾವತಾಮ್**—ದಕ್ಷಿಣಾ ಯೇಷಾಮಸ್ತಿ ಇತಿ ದಕ್ಷಿಣಾವಂತಃ. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—(ಪಾ. ಸೂ. ೮-೨-೯) ಎಂಬುದರಿಂದ ಮಕಾರಕ್ಕೆ ವತ್ವ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಷಷ್ಠೀ ಬಹುವಚನಾಂತರೂಪ.

**ಚಿತ್ರಾ**—ಚಿಞ್ ಚಯನೇ. ಧಾತು. **ಅಮಿ ಚಿ ಮಿದಿ**—(ಉ. ಸೂ. ೪-೬೦೩) ಎಂಬುದರಿಂದ ಕ್ತ್ರ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ- ೬-೧-೭೦) ಎಂಬುದರಿಂದ ಶಿಗೆ ಲೋಪ.

**ದಿವಿ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ಸಪ್ತಮೀ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸೂರ್ಯಾಸಃ**—ಸೃ ಗತೌ ಧಾತು **ರಾಜಸೂಯಸೂರ್ಯ**—(ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಇದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಅಮೃತೆಮ್**—**ನಞೋ ಜರಮರಮಿತ್ರಮೃತಾಃ** (ಪಾ. ಸೂ. ೬-೨-೧೧೬) ಎಂಬುದರಿಂದ ನಞ್ ಸ್ವರಕ್ಕೆ ಅಪವಾದವಾಗಿ ಉತ್ತರಪದ ಆದ್ಯುದಾತ್ತ ಸ್ವರ ಬರುತ್ತದೆ.

**ಭಜಂತೇ**—ಭಜ ಸೇವಾಯಾಂ ಧಾತು· ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತಿರಂತೇ**—ಪ್ರ ಪೂರ್ವಕವಾದ ತಿರ ಧಾತುವು ವೃದ್ಧ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಆಯುಃ**—ಇಣ್ ಗತೌ ಧಾತು. **ಛಂದಸೀಣಃ** (ಉ. ಸೂ. ೧-೨-) ಎಂಬುದರಿಂದ ಉಣ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ವೃದ್ಧಿ ಬರುತ್ತದೆ. ಅಚ್ ಪರವಾದುದರಿಂದ ಆಯಾದೇಶ- ॥ ೬ ॥



॥ ಸಂಹಿತಾಪಾಠಃ ॥

ಮಾ ಪೃಣಂತೋ ದುರಿತಮೇನ ಆರನ್ಮಾ ಜಾರಿಷುಃ ಸೂರಯಃ ಸುವ್ರತಾಸಃ ।
ಅನ್ಯಸ್ತೇಷಾಂ ಪರಿಧಿರಸ್ತು ಕಶ್ಚಿದಪೃಣಂತಮಭಿ ಸಂ ಯಂತು ಶೋಕಾಃ ॥ ೭ ॥

॥ ಪದಪಾಠಃ ॥

ಮಾ । ಪೃಣಂತಃ । ದುಃಽಇತಂ । ಏನಃ । ಆ । ಅರನ್ । ಮಾ । ಜಾರಿಷುಃ । ಸೂರಯಃ । ಸುಽವ್ರತಾಸಃ ।
ಅನ್ಯಃ । ತೇಷಾಂ । ಪರಿಽಧಿಃ । ಅಸ್ತು । ಕಃ । ಚಿತ್ । ಅಪೃಣಂತಂ । ಅಭಿ । ಸಂ । ಯಂತು । ಶೋಕಾಃ ॥ ೭ ॥

॥ ಸಾಯಣಭಾಷ್ಯಂ ॥

ಅನ್ವಯವ್ಯತಿರೇಕಾಭ್ಯಾಂ ದಾನಂ ಪ್ರಶಂಸಿತುಮಾಹ । ಪೃಣಂತೋ ದೇವಾದೀನ್ಹವಿರಾದಿನಾ ಪ್ರೀಣಯಂತಃ ಸಂತೋ ದುರಿತಂ ದುಷ್ಟಂ ಯಥಾ ಭವತಿ ತಥಾ ಪ್ರಾಪ್ತಂ ದುಃಖಮೇನಸ್ತತ್ಸಾಧನಂ ಪಾಪಂ ಚ ಮಾರನ್ । ಮಾ ಪ್ರಾಪ್ನುವನ್ । ನ ಕೇವಲಂ ದಾತಾರ ಏವ ಅಪಿ ತು ಸೂರಯೋ ದೇವಾನಾಂ ಸ್ತೋತಾರೋ ವಿದ್ವಾಂಸೋ ಮಾ ಜಾರಿಷುಃ । ಜರಯಾ ನ ಜೀರ್ಣಾ ಭವೇಯುಃ । ತಥಾ ಸುವ್ರತಾಸಃ

**ಶೋಭನಕೃಚ್ಛ್ರಚಾಂದ್ರಾಯಣಾದಿನಿಯಮವಂತೋऽಪಿ ಮಾ ಜಾರಿಷುಃ । ತರ್ಹ್ಯೇಷಾಮನ್ಯೋ ಜನಃ ಕ ಇತಿ ಸ ಉಚ್ಯತೇ । ತೇಷಾಂ ದಾತ್ೃಣಾಂ ಸ್ತೋತ್ೃಣಾಂ ವಾನ್ಯಸ್ತೇಭ್ಯೋऽನ್ಯೋ ಯಃ ಕೋऽಪಿ ಪುರುಷಃ ಪರಿಧಿಃ ಪಾಪಸ್ಯ ಪರಿತೋ ಧಾರಕೋऽಸ್ತು । ಯದ್ವಾ । ಅನ್ಯೋ ಯಃ ಕಶ್ಚನ ಪಾಪದೇವಸ್ತೇಷಾಂ ಪರಿಧಿಸ್ಥಾನೀಯೋ ವ್ಯವಧಾಯಕೋऽಸ್ತು । ಯಥಾऽಗ್ನೇಃ ಪರಿಧಿಃ ಸ್ವಯಂ ರಕ್ಷಃಪ್ರಭೃತಿಭಿರ್ಬಾಧ್ಯಮಾನಃ ಸ್ವಾಂತರ್ಹಿತಮಗ್ನಿಂ ರಕ್ಷತಿ । ತದ್ವತ್ । ಅಥವಾ । ಅನ್ಯೋ ಧರ್ಮವಿಶೇಷಸ್ತೇಷಾಂ ಪರಿಧಿಃ ಪರಿಧಾನಮಸ್ತು । ಕವಚಸ್ಥಾನೀಯೋऽಸ್ತು । ತರ್ಹಿ ಕಿಂ ಪ್ರಾಪ್ನುಯುರಿತಿ ಉಚ್ಯತೇ । ಅಪೃಣಂತಂ ದೇವಾದೀನಪ್ರೀಣಯಂತಮದಾತಾರಂ ಶೋಕಾಶ್ಚಿತ್ತಪೀಡಾಸ್ತತ್ಸಾಧನಾಃ ಪಾಪ್ಮಾನೋऽಭ್ಯಮಭಿಮುಖಂ ಸಂ ಯಂತು । ಸಮ್ಯಕ್ಪ್ರಾಪ್ನುವಂತು । ವಯಂ ಸುಖಿನೋ ಭವೇಮೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಪೃಣಂತಃ**—(ದೇವತೆಗಳನ್ನು ಹವಿರಾದಿಗಳಿಂದ) ಪ್ರೀತಿಪಡಿಸಿದವರು । **ದುರಿತಂ**—ದುಃಖವನ್ನೂ । **ಏನಃ**—(ದುಃಖಸಾಧಕವಾದ) ಪಾಪವನ್ನೂ । **ಮಾ ಆ ಅರನ್**—ಹೊಂದುವುದಿಲ್ಲ; । **ಸೂರಯಃ**—ಸ್ತೋತೃಗಳೂ (ಮತ್ತು) । **ಸುವ್ರತಾಸಃ**—ಉತ್ತಮ ವ್ರತಗಳನ್ನಾಚರಿಸುವವರೂ । **ಮಾ ಜಾರಿಷುಃ**—ಜರಾಪೀಡಿತರಾಗುವುದಿಲ್ಲ **ತೇಷಾಂ**—(ದಾತೃ ಮತ್ತು ಸ್ತೋತೃಗಳಿಗೆ) ಅವರಿಗೆ । **ಅನ್ಯಃ ಕಃ ಚಿತ್**—ಬೇರೆ ಯಾವನಾದರೊಬ್ಬನು । **ಪರಿಧಿಃ**—(ಪಾಪಪರಿಹಾರಕನು) ಅಥವಾ (ಪಾಪವನ್ನು) ತಡೆಯುವವನು । **ಅಸ್ತು**—ಆಗಲಿ । **ಅಪೃಣಂತಂ**—ದೇವಾದಿಗಳನ್ನು ತೃಪ್ತಿಪಡಿಸದೇ ಇರುವವನನ್ನು ದಾನಮಾಡದೇ ಇರುವವನಿಗೆ) । **ಶೋಕಃ**—ಪೀಡೆಗಳು (ಪಾಪಗಳು ಅಥವಾ ಪಾಪಿಷ್ಠರು) । **ಅಭಿ**—ಎದುರಾಗಿ । **ಸಂ ಯಂತು**—ಬರಲಿ.

॥ ಭಾವಾರ್ಥ ॥

ಹವಿರಾದಿಗಳಿಂದ ದೇವತೆಗಳನ್ನು ತೃಪ್ತಿಪಡಿಸುವವರಿಗೆ ದುಃಖ ಅಥವಾ ಪಾಪಗಳಿಲ್ಲ; ಸ್ತೋತೃಗಳೂ, ಇತರ (ಕೃಚ್ಛ್ರಚಾಂದ್ರಾಯಣಾದಿ) ವ್ರತಾದಿಗಳನ್ನು ಆಚರಿಸುವವರಿಗೂ ಮುಪ್ಪಿಲ್ಲ; ಬೇರೆ ಒಬ್ಬನು ಅವರನ್ನು ಪಾಪಗಳಿಂದ ರಕ್ಷಿಸಲಿ; ದೇವತೆಗಳಿಗೆ ತೃಪ್ತಿಯನ್ನುಂಟುಮಾಡದೇ ಇರುವವನು ಶೋಕಗಳಿಗೆ ಈಡಾಗಲಿ.

## English Translation.

May those who propitiate (the gods), never commit degrading sin; may those who praise the gods and observe holy vows, never experience decay: may some (honorable) individual ever be their defence; and may afflictions fall upon him who does not propitiate (the gods).

॥ ವಿಶೇಷವಿಷಯಗಳು ॥

**ಸೂರಯಃ—ರೇಭಃ, ಜರಿತಾ, ಕಾರುಃ,** ಇತ್ಯಾದಿ **ಸ್ತೋತೃ** ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೯) **ಸೂರಯಃ** ಎಂದರೆ ಸ್ತುತಿಕಾರರು, ಸ್ತೋತ್ರವನ್ನು ಮಾಡತಕ್ಕ ಭಕ್ತರು ಎಂದರ್ಥ. ಪ್ರಾಜ್ಞರು ವಿವೇಕಿಗಳು, ಮೇಧಾವಿಗಳು ಎನ್ನುವ ಅರ್ಥವನ್ನು ಕೊಡತಕ್ಕ ಸಂದರ್ಭಗಳಲ್ಲಿ **ಸೂರಿ** ಶಬ್ದವನ್ನು ಅನೇಕ ಕಡೆ

ಉಪಯೋಗಿಸಿದೆ. ದೇವತೆಗಳ ತತ್ತ್ವಸ್ವರೂಪಗಳನ್ನೂ ವಿಶ್ವದ ರಹಸ್ಯ ತತ್ತ್ವಗಳನ್ನೂ ಗ್ರಹಿಸುವ ಅಲೌಕಿಕವಾದ ಚಾಕ್ಷುಷವೂ ಮಾನಸಿಕವೂ ಆದ ದರ್ಶನಶಕ್ತಿಯನ್ನು ಪಡೆದಿರುವ ಋಷಿಗಳ ಪರವಾಗಿ ಉಪಯೋಗಿಸಿದಾಗ ಈ ವಿಶೇಷಣವು ಒಂದು ವಿಶೇಷಾರ್ಥವನ್ನು ಕೊಡುತ್ತದೆ.

**ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ ॥**

(ಋ. ಸಂ. ೧-೨೨-೨೦)

ಇತ್ಯಾದಿ ಸನ್ನಿವೇಶಗಳಲ್ಲಿ ಕೇವಲ ಸ್ತೋತ್ರಮಾಡತಕ್ಕವರೆಂದು ಮಾತ್ರವಾಗದೆ, ಋಷಿಗಳ ಅಸಾಧಾರಣವಾದ ದರ್ಶನಶಕ್ತಿಯನ್ನೂ ಸೂಚಿಸುತ್ತದೆ. ಮತ್ತು ಋಷಿಗಳ ಪರವಾಗಿ ಮಾತ್ರವಲ್ಲದೆ ಇಂದ್ರಾದಿದೇವತೆಗಳಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

**ಅಸ್ಮಾ ಇದು ತ್ಯಮುಪಮಂ ಸ್ವರ್ಷಾಂ ಭರಾಮ್ಯಾಂಗೂಷಮಾಸ್ಯೇನ ।**
**ಮಂಹಿಷ್ಠಮಚ್ಛೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ ವಾವೃಧಧ್ಯೈ ॥**

ಇತ್ಯಾದಿ ಋಕ್ಕುಗಳಲ್ಲಿ **ವಿಪಶ್ಚಿತಮಿಂದ್ರಂ** ಎಂದು **ಇಂದ್ರಾದಿ**ದೇವತೆಗಳ ಪ್ರಾಜ್ಞತ್ವವನ್ನೂ ತಿಳಿಸುತ್ತದೆ, ಇದಲ್ಲದೆ ಪ್ರಭು, ಪ್ರೇರಕ, ಸನ್ಮಾರ್ಗಪ್ರವರ್ತಕ ಎಂಬ ಅರ್ಥವನ್ನು ಸೂಚಿಸುವಾಗಲೂ **ಸೂರಿ**ಶಬ್ದದ ಪ್ರಯೋಗವಿದೆ.

**ಅಸ್ಯ ಸ್ತುಷೇ ಮಹಿಮಘಸ್ಯ ರಾಧಃ ಸಚಾ ಸನೇಮ ನಹುಷಃ ಸುವೀರಾಃ ।**
**ಜನೋ ಯಃ ಪಜ್ರೇಭ್ಯೋ ವಾಜಿನೀವಾನಶ್ವಾವತೋ ರಥಿನೋ ಮಹ್ಯಂ ಸೂರಿಃ ॥**

(ಋ. ಸಂ. ೧-೧೨೨-೮)

**ಏವೇದಿಂದ್ರಃ ಸುತೇ ಅಸ್ತಾವಿ ಸೋಮೇ ಭರದ್ವಾಜೇಷು ಕ್ಷಯದಿನ್ಮಘೋನಃ ।**
**ಅಸದ್ಯಥಾ ಜರಿತ್ರ ಉತ ಸೂರಿರಿಂದ್ರೋ ರಾಯೋ ವಿಶ್ವವಾರಸ್ಯ ದಾತಾ ।**

(ಋ. ಸಂ. ೬-೨೩-೧೦)

**ವಿಶ್ವಕರ್ಮನ್ ಹವಿಷಾ ವಾವೃಧಾನಃ ಸ್ವಯಂ ಯಜಸ್ವ ಪೃಥಿವೀಮುತ ದ್ಯಾಂ ।**
**ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು ।**

(ಋ. ಸಂ. ೧೦-೮೧-೬)

ಎಂಬಿವೇ ಮುಂತಾದ ಸನ್ನಿವೇಶಗಳಲ್ಲಿ ಪ್ರಭುಗಳೂ, ಸನ್ಮಾರ್ಗಪ್ರವರ್ತಕರೂ ಆದ ದೇವತೆಗಳನ್ನು ಕುರಿತು ಅವರ ಗುಣಗಳನ್ನು ವರ್ಣಿಸುತ್ತವೆ. ಮತ್ತು,

**ರಥೋ ನ ಯಾತಃ ಶಿಕ್ವಭಿಃ ಕೃತೋ ದ್ಯಾಮಂಗೇಭಿರರುಷೇಭಿರೀಯತೇ ।**
**ಆದಸ್ಯ ತೇ ಕೃಷ್ಣಾಸೋ ದಕ್ಷಿ ಸೂರಯಃ ಶೂರಸ್ಯೇವ ತ್ವೇಷಥಾದೀಷತೇ ವಯಃ ।**

(ಋ. ಸಂ. ೧-೧೪೧-೮)

ಇತ್ಯಾದಿ ಕೆಲವು ಕಡೆಗಳಲ್ಲಿ ಬಹಳ ಅಪರೂಪವಾಗಿ **ಮಾರ್ಗ**ವೆಂಬ ಅರ್ಥವನ್ನೂ ಕೊಡುತ್ತದೆ.

ಪ್ರಕೃತವಾದ ಋಕ್ಕಿನಲ್ಲಿ ಉತ್ತಮವಾದ ಭಕ್ತಿಯಿಂದೊಡಗೂಡಿದವರೂ ಮೇಧಾವಿಗಳೂ ಆದ ಸ್ತೋತೃಗಳೆಂದು ಅರ್ಥ.

**ಪರಿಧಿಃ—ಪಾಪಸ್ಯ ಪರಿತಃ ಧಾರಕಃ** । ಸುತ್ತಲೂ ಪಾಪವನ್ನು ತಡೆದು ನಿಲ್ಲಿಸುವ ಶಕ್ತಿಯುಳ್ಳವನೆಂದಾಗಲಿ, ಅಥವಾ **ಯಥಾ ಅಗ್ನೇಃ ಪರಿಧಿಃ ಸ್ವಯಂ ರಕ್ಷಃಪ್ರಭೃತಿಭಿರ್ಬಾಧ್ಯಮಾನಃ ಸ್ವಾಂತರ್ಹಿತಮಗ್ನಿಂ ರಕ್ಷತಿ ತದ್ವತ್** । ಅಗ್ನಿಯ ಪರಿಧಿಯು ತಾನು ರಾಕ್ಷಸಾದಿಗಳಿಂದ ಹಿಂಸಿಸಲ್ಪಟ್ಟರೂ ಸಹ ತನ್ನೊಳಗೆ ಇರತಕ್ಕ ಅಗ್ನಿಯನ್ನು ರಕ್ಷಿಸುವಂತೆ ಶ್ರೇಷ್ಠನಾದ ಸೂರಿಯು ತಾನು ಪಾಪವನ್ನು ತಡೆದು ನಿಲ್ಲಿಸಿ ತನ್ನ ರಕ್ಷಣೆಗೆ ಒಳಗಾದವರನ್ನು **ರಕ್ಷಿಸುತ್ತಾನೆಂದು** ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ಪೃಣಂತಃ**—ಪೃ ಪಾಲನಪೂರಣಯೋಃ ಧಾತು. ಲಟಿಗೆ ಶತ್ರಾದೇಶ. ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** ಎಂಬುದರಿಂದ ಧಾತುವಿಗೆ ಹ್ರಸ್ವ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ದುರಿತಮ್—**ದುರ್ ಉಪಸರ್ಗ. ಇಣ್ ಗತೌ ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ಗತಿರನಂತರಃ—**(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ದುರ್) ಪ್ರಕೃತಿಸ್ವರ ಬರುತ್ತದೆ.

**ಏನಃ**—ಇಣ್ ಗತೌ ಧಾತು. **ಇಣ ಆಗಸಿ** (ಉ. ಸೂ. ೪-೬೩೭) ಎಂಬುದರಿಂದ ಅಸುನ್ ಪ್ರತ್ಯಯ. ಅದಕ್ಕೆ ನುಟಾಗಮ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕ್ಕಿಗೆ ಗುಣ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅರನ್**—ಋ ಗತೌ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. ಅಂತಾದೇಶ. ಸಂಯೋಗಾಂತ ಲೋಪದಿಂದ ಅಂತ್ಯಲೋಪ. **ಸರ್ತಿ ಶಾಸ್ತ್ಯರ್ತಿಭ್ಯಶ್ಚ** (ಪಾ. ಸೂ. ೩-೧-೫೬) ಎಂಬುದರಿಂದ ಚ್ಲಿಗೆ ಅಙಾದೇಶ **ಋದೃಶೋಙಿ ಗುಣಃ** (ಪಾ. ಸೂ. ೭-೪-೧೬) ಎಂಬುದರಿಂದ ಅಙ್ ನಿಮಿತ್ತವಾಗಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ಮಾಙ್ ಸಂಬಂಧವಿರುವುದರಿಂದ **ನ ಮಾಙ್ ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಜಾರಿಷುಃ**—ಜೄಷ್ ವಯೋಹಾನೌ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಚ್ಲಿಗೆ ಸಿಜಾದೇಶ. ಅದಕ್ಕೆ ಇಡಾಗಮ. **ಸಿಜಭ್ಯಸ್ತವಿದಿಭ್ಯಶ್ಚ** (ಪಾ. ಸೂ. ೭-೨-೧) ಎಂಬುದರಿಂದ ಝಿಗೆ ಜುಸಾದೇಶ. **ಸಿಚಿವೃದ್ಧಿಃ ಪರಸ್ಮೈಪದೇಷು** (ಪಾ. ಸೂ. ೩-೪-೧೧೯) ಎಂಬುದರಿಂದ ಧಾತುವಿಗೆ ವೃದ್ಧಿ, ರಪರವಾಗಿ ಬರುತ್ತದೆ. ಸಿಚಿಗೆ ಷತ್ವ. ಹಿಂದಿನಂತೆ ಮಾಙ್ ಸಂಬಂಧವಿರುವುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಸುವ್ರತಾಸಃ—**ಶೋಭನಾನಿ ವ್ರತಾನಿ ಯೇಷಾಂ ತೇ. ಸುವ್ರತಾಸಃ. **ನೇಞ್ ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತ ಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಪರಿಧಿಃ**—ಡುಧಾಞ್ ಧಾರಣಪೋಷಣಯೋಃ ಧಾತು. ಪರಿ ಎಂಬುದು ಉಪಪದವಾಗಿರುವಾಗ **ಉಪಸರ್ಗೇ ಘೋಃ ಕಿಃ** (ಪಾ. ಸೂ. ೩-೩-೯೨) ಎಂಬುದರಿಂದ ಕಿ ಪ್ರತ್ಯಯ. **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಪೃಣಂತಮ್**—ನ ಪೃಣತ್ ಅಪೃಣತ್ ತಮ್. ಅಪೃಣಂತಮ್. **ತತ್ಪುರುಷೇ ತುಲ್ಯಾರ್ಥ**— (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವ ಪದ ಪ್ರಕೃತಿಸ್ವರ ಬರುತ್ತದೆ.

**ಯಂತು**—ಇಣ್ ಗತೌ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೭ ॥

ನೂರ ಇಪ್ಪತ್ತೈದನೇ ಸೂಕ್ತ ಮುಗಿದುದು.



## ನೂರ ಇಪ್ಪತ್ತಾರನೆಯ ಸೂಕ್ತವು

**ಅಮಂದಾನಿತಿ ಷಷ್ಠಂ ಸೂಕ್ತಂ ಸಪ್ತರ್ಚ್ಯನುವರ್ತಮಾನಾತ್ಸಪ್ತರ್ಚಂ । ಆದಿತಃ ಪಂಚಾನಾಂ ಕಕ್ಷೀವಾನೃಷಿಃ ಷಷ್ಠ್ಯಾ ಭಾವಯವ್ಯಃ ಸಪ್ತಮ್ಯಾ ರೋಮಶಾ ನಾಮ ಬ್ರಹ್ಮವಾದಿನೀ । ಆದಿತಃ ಪಂಚಾನಾಂ ಭಾವಯವ್ಯಸ್ಯ ಸ್ತುತಿರೂಪತ್ವಾತ್ಸ ಏವ ದೇವತಾ ಯಾ ತೇನೋಚ್ಯತೇ । ಅನು. ೨-೫ । ಇತಿ ನ್ಯಾಯಾತ್ । ಅಂತ್ಯಯೋಃ ಷಷ್ಠೀಸಪ್ತಮ್ಯೋಸ್ತು ಭಾವಯವ್ಯರೋಮಶಯೋಃ ಸಂವಾದಃ । ಷಷ್ಠ್ಯಾ ಭಾವಯವ್ಯಃ ಸಪ್ತಮ್ಯಾ ರೋಮಶಾ । ಯದ್ಯಪಿ ಸ್ವನಯೇನ ದತ್ತಾ ಇತಿ ಶ್ರೂಯಮಾಣತ್ವಾತ್ತಸ್ಯೈವ ಸ್ತುತ್ಯಾ ಭಾವ್ಯಂ ತಥಾಪಿ ಪಿತೃಪುತ್ರಯೋರಭೇದಾತ್ ಆ ರುದ್ರಾಸ ಇತಿವತ್ ಪಿತೃನಾಮ್ನಾ ವ್ಯವಹರ್ತುಂ ಶಕ್ಯತ್ವಾತ್ ಪ್ರಥಮಾಯಾಮೃಚಿ ಭಾವ್ಯಸ್ಯೇತ್ಯುಕ್ತತ್ವಾಚ್ಚ ಭಾವಯವ್ಯಂ ತುಷ್ಟಾವೇತ್ಯೇದವಿರುದ್ಧ-ಮಿತ್ಯುಕ್ತಂ ಪೂರ್ವಸೂಕ್ತ ಏವ । ಆದಿತಃ ಪಂಚ ತ್ರಿಷ್ಟುಭಃ । ಅಂತ್ಯೇ ಅನುಷ್ಟುಭೌ । ತಥಾ ಚಾನುಕ್ರಾಂತಂ । ಅಮಂದಾನಿತಿ ಕಕ್ಷೀವಾನ್ಭಾನತುಷ್ಟ್ವಃ ಪಂಚಭಿರ್ಭಾವಯವ್ಯಂ ತುಷ್ಟಾವಾಂತ್ಯೇ ಅನುಷ್ಟುಭೌ ಭಾವಯವ್ಯರೋಮಶಯೋರ್ದಂಪತ್ಯೋಃ ಸಂವಾದ ಇತಿ ॥ ಉಕ್ತೋ ವಿನಿಯೋಗಃ ॥**

ಅನುವಾದವು—**ಅಮಂದಾನ್** ಎಂಬ ಈ ಸೂಕ್ತವು ಹದಿನೆಂಟನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತದಲ್ಲಿ ಮೊದಲಿನ ಐದು ಋಕ್ಕುಗಳಿಗೆ ಕಕ್ಷೀವಾನ್ ಎಂಬುವನೂ ಆರನೆಯ ಋಕ್ಕಿಗೆ ಭಾವಯವ್ಯನೂ, ಏಳನೆಯ ಋಕ್ಕಿಗೆ ರೋಮಶಾ ಎಂಬ ಹೆಸರಿನ ಬ್ರಹ್ಮವಾದಿನಿಯೂ ಋಷಿಗಳು. ಮೊದಲಿನ ಐದು ಋಕ್ಕುಗಳಲ್ಲಿ ಭಾವಯವ್ಯನ ಸ್ತುತಿಯು ಇರುವುದರಿಂದ **ಸ ಏವ ದೇತಾ ಯಾ ತೇನೋಚ್ಯತೇ** ಎಂಬ ಅನುಕ್ರಮಣಿಕೆಯ (ಅನು. ೨-೫) ನಿಯಮಾನುಸಾರವಾಗಿ ಆ ಸ್ತುತಿಯೇ ದೇವತೆಯು. ಕೊನೆಯ ಋಕ್ಕುಗಳಾದ

ಆರು ಮತ್ತು ಏಳನೆಯ ಋಕ್ಕುಗಳಲ್ಲಿ ಭಾವಯವ್ಯ ಮತ್ತು ರೋಮಶಾ ಎಂಬುವರ ಸಂವಾದವಿರುವುದರಿಂದ ಆರನೆಯ ಋಕ್ಕಿಗೆ ರೋಮಶಾ ಏಳನೆಯ ಋಕ್ಕಿಗೆ ಭಾವಯವ್ಯನೂ ದೇವತೆಗಳು. ಆದರೆ ಮೂರನೆಯ ಋಕ್ಕಿನಲ್ಲಿ **ಸ್ವನಯೇನ ದತ್ತಾಃ** ಎಂಬ ವಾಕ್ಯವಿರುವುದರಿಂದ ಸ್ವನಯನ ಸ್ತುತಿಯೇ ಇರಬಹುದೆಂಬ ಶಂಕೆಯು ಉದ್ಭವಿಸುವುದು. ಆದರೂ ರುದ್ರಪುತ್ರರಾದ ಮರುದ್ದೇವತೆಗಳನ್ನು ಪಿತೃಶಬ್ದವಾಚ್ಯವಾದ **ರುದ್ರಾಸಃ** ಎಂಬ ಶಬ್ದದಿಂದಲೇ ಸಂಬೋಧಿಸುವ ರೂಢಿಯಿರುವಂತೆ ಇಲ್ಲಿಯೂ ಪಿತಾಪುತ್ರರ ವಿಷಯದಲ್ಲಿ ಭಾವಯವ್ಯ ಮತ್ತು ಸ್ವನಯ ಎಂಬ ಯಾವ ಶಬ್ದವನ್ನಾದರೂ ಉಪಯೋಗಿಸಿರುವುದು ಸಹಜವೆಂದು ಹೇಳುವರು. ಇದಲ್ಲದೆ ಮೊದಲನೆಯ ಋಕ್ಕಿನಲ್ಲಿ **ಭಾವ್ಯಸ್ಯ** ಎಂದು ಭಾವಯವ್ಯನ ಹೆಸರೇ ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ಈ ಸೂಕ್ತದಲ್ಲಿ ಋಷಿಯು ಭಾವಯವ್ಯನನ್ನೇ ಸ್ತುತಿಸಿರುವನೆಂದು ತಿಳಿಯಬೇಕು. ಆದುದರಿಂದ ಪರಸ್ಪರ ವಿರುದ್ಧಾರ್ಥವು ಪರಿಹಾರವಾಗುವುದು. ಇದನ್ನು ಹಿಂದಿನ ಸೂಕ್ತದಲ್ಲಿಯೇ ಹೇಳಲಾಗಿರುವುದು. ಈ ಸೂಕ್ತದ ಮೊದಲಿನ ಐದು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಕೊನೆಯ ಎರಡು ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—**ಅಮಂದಾನಿತಿ ಕಕ್ಷೀವಾನ್ ದಾನತುಷ್ಟಃ ಪಂಚಭಿರ್ಭಾವಯವ್ಯಂ ತುಷ್ಟಾವಾಂತ್ಯೇ ಅನುಷ್ಟುಭೌ ಭಾವಯವ್ಯರೋಮಶಯೋರ್ದಂಪತ್ಯೋಃ ಸಂವಾದಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಿರುವುದು.

## ಸೂಕ್ತ—೧೨೬

ಮಂಡಲ—೧ ॥ ಅನುವಾಕ—೧೮ ॥ ಸೂಕ್ತ—೧೨೬ ॥
ಅಷ್ಟಕ.—೨ ॥ ಅಧ್ಯಾಯ—೧ ॥ ವರ್ಗ—೧೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥

॥ ಋಷಿಃ—೧–೫ ಕಕ್ಷೀವಾನ್ ದೈರ್ಘತಮಸ ಔಶಿಜಃ । ೬ ಭಾವಯವ್ಯಃ ।
೭ ರೋಮಶಾ ॥

॥ ದೇವತಾ—೧–೫, ೭ ಭಾವಯವ್ಯಃ । ೬. ರೋಮಶಾ ॥

॥ ಛಂದಃ—೧–೫ ತ್ರಿಷ್ಟುಪ್ । ೬–೭ ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಅಮಂದಾನ್ಸ್ತೋಮಾನ್ಪ್ರ ಭರೇ ಮನೀಷಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ।
ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ॥ ೧ ॥

॥ ಪದಪಾಠಃ ॥

ಅಮಂದಾನ್ । ಸ್ತೋಮಾನ್ । ಪ್ರ । ಭರೇ । ಮನೀಷಾ । ಸಿಂಧೌ । ಅಧಿ । ಕ್ಷಿಯತಃ । ಭಾವ್ಯಸ್ಯ ।

ಯಃ । ಮೇ । ಸಹಸ್ರಂ । ಅಮಿಮೀತ । ಸವಾನ್ । ಅತೂರ್ತಃ । ರಾಜಾ । ಶ್ರವಃ । ಇಚ್ಛಮಾನಃ ॥ ೧ ॥

॥ ಸಾಯಣಭಾಷ್ಯಂ ॥

ಸಿಂಧೌ ಸಿಂಧುದೇಶೇ ಯದ್ವಾ ಲಕ್ಷಣಯಾ ಸಿಂಧುತೀರೇ ಸಮುದ್ರತೀರೇಽಧಿ ಕ್ಷಿಯತೋಽಧಿನಿವಸತೋ ಭಾವ್ಯಸ್ಯ ಭಾವಯವ್ಯಸ್ಯ । ತತ್ಪುತ್ರಸ್ಯ ಸ್ವನಯಸ್ಯೇತ್ಯರ್ಥಃ । ತಸ್ಯಾಮಂದಾನನಲ್ಪಾನ್ ಸ್ತೋಮಾನ್ ಸ್ತೋತ್ರಾಣಿ ತನ್ನಿಷ್ಠಬಹುವಿಧದಾನಾದೀನಾಂ ಕೀರ್ತನಾನಿ ಮನೀಷಾ ಮನೀಷಯಾ ಪ್ರಿಯಾತಿಶಯಬುದ್ಧ್ಯಾ ಪ್ರ ಭರೇ । ಪ್ರಕರ್ಷೇಣ ಸಂಪಾದಯಾಮಿ । ಕಸ್ತಸ್ಯ ವಿಶೇಷ ಇತಿ ತತ್ರಾಹ । ಅತೂರ್ತಃ ಕೇನಾಪ್ಯಹಿಂಸಿತೋ ಯೋ ರಾಜಾ ಮೇ ಮದರ್ಥಂ ಸಹಸ್ರಂ ತತ್ಸಂಖ್ಯಾಕಾನ್ ಸವಾನ್ । ಸೂಯಂತೇ ಸೋಮಾ ಏಷ್ವಿತಿ ಸವಾಃ ಸೋಮಯಾಗಾಃ । ತಾನಮಿಮೀತ ಸಂಪೂರ್ಣಧನಪ್ರದಾನೇನ ನಿರ್ಮಿತವಾನ್ ।ಕಿಮಿಚ್ಛನ್ । ಶ್ರವಃ ಸರ್ವೈಃ ಶ್ರೂಯಮಾಣಾಂ ಕೀರ್ತಿಮಾತ್ಮನ ಇಚ್ಛಮಾನಃ ಕಾಮಯಮಾನಃ । ಯತೋಽಯಮಾರ್ತ್ವಿಜ್ಯಾದ್ಯುಪಾಧಿನಾ ವಿನಾ ಕೀರ್ತ್ಯರ್ಥಮೇವ ಬಹು ಧನಂ ಪ್ರಾದಾತ್ ಅತಸ್ತಂ ಸ್ತೌಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅತೂರ್ತಃ**—ಅಹಿಂಸಿತನಾದ । **ಯಃ ರಾಜಾ** – ಯಾವ (ಸ್ವನಯನೆಂಬ) ರಾಜನು । **ಮೇ**—ನನಗೋಸ್ಕರ । **ಸಹಸ್ರಂ**—ಒಂದುಸಾವಿರ । **ಸವಾನ್**—(ಸೋಮ) ಯಾಗಗಳನ್ನು । **ಶ್ರವಃ**—(ಕೇವಲ) ಕೀರ್ತಿಯನ್ನು । **ಇಚ್ಛಮಾನಃ**—ಅಪೇಕ್ಷಿಸುವವನಾಗಿ । **ಅಮಿಮೀತ**—(ಧನದಾನಮಾಡಿ) ಏರ್ಪಡಿಸಿದನೋ । **ತಸ್ಯ**—ಆ । **ಸಿಂಧೌ**— ಸಿಂಧು (ಸಮುದ್ರ) ತೀರದಲ್ಲಿ । **ಅಧಿ ಕ್ಷಿಯತಃ**—ವಾಸಮಾಡುತ್ತಿರುವ । **ಭಾವ್ಯಸ್ಯ**—ಭಾವಯವ್ಯನ ಮಗನಾದ ಸ್ವನಯ ಎಂಬುವನ । **ಅಮಂದಾನ್**—ಅಮಿತವಾದ । **ಸ್ತೋಮಾನ್**—ಸ್ತುತಿಗಳನ್ನು । **ಮನೀಷಾ**— ಮನಃ ಪೂರ್ವಕವಾಗಿ । **ಪ್ರ ಭರೇ**—ಸಂಪಾದಿಸುತ್ತೇನೆ (ಪ್ರಶಂಸಿಸುತ್ತೇನೆ).

॥ ಭಾವಾರ್ಥ ॥

(ಧನದಾನಮಾಡಿ) ಒಂದುಸಾವಿರ ಸೋಮಯಾಗಮಾಡಲು, ಕೇವಲ ಕೀರ್ತ್ಯಪೇಕ್ಷೆಯಿಂದ ನನಗೆ ಅನುಕೂಲ ಮಾಡಿಕೊಟ್ಟವನೂ, ಸಮುದ್ರತೀರದಲ್ಲಿ ವಾಸಿಸುವವನೂ, ಆದ (ಭಾವಯವ್ಯನ ಪುತ್ರ) ಸ್ವನಯನೆಂಬ ರಾಜನನ್ನು ಮನಃ ಪೂರ್ವಕವಾಗಿ, ಸ್ತುತಿಸುತ್ತೇನೆ.

## English Translation.

I repeat with a (willing) mind, the unreluctant praises of Bhavya, dwelling on the banks of the Sindhu: a prince of unequalled (might), desirous of renown, who has enabled me to celebrate a thousand sacrifices.

॥ ವಿಶೇಷವಿಷಯಗಳು ॥

**ಅಮಂದಾನ್ ಸ್ತೋಮಾನ್—ಅನಲ್ಪಾನ್ ಕೀರ್ತನಾನಿ ।** ಅಮಿತವಾದುದೂ ನಾನಾವಿಧವಾದುದೂ ಆದ ಸ್ತೋಮರೂಪವಾದ ಸ್ತುತಿಗಳನ್ನು **ಪ್ರಭರೇ** ಸಂಪಾದಿಸುತ್ತೇನೆ ಎಂದು ಸಂಕಲ್ಪವನ್ನು ಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಸ್ತೋಮವೆಂದರೆ ಪ್ರಶಂಸೆಯೆಂದು ಅರ್ಥವಾದರೂ ನಾನಾವಿಧ ಸ್ತೋಮಗಳ ವಿವರಣೆಯನ್ನು ಸೂಕ್ಷ್ಮವಾಗಿ ಪರಿಶೀಲಿಸುವೆವು.

ಸ್ತೋಮಗಳಲ್ಲಿ ತ್ರಿವೃತ್ಸ್ತೋಮ, ಪಂಚದಶಸ್ತೋಮ, ಸಪ್ತದಶಸ್ತೋಮ, ಏಕವಿಂಶ ಸ್ತೋಮ, ತ್ರಿಣವ ಸ್ತೋಮ, ತ್ರಯಸ್ತ್ರಿಂಶಸ್ತೋಮ, ಚತುರ್ವಿಂಶಸ್ತೋಮ, ಚತುಶ್ಚತ್ವಾರಿಂಶಸ್ತೋಮ, ಅಷ್ಟ ಚತ್ವಾರಿಂಶಸ್ತೋಮ ಎಂದು ೯ ಮುಖ್ಯ ವಿಭಾಗಗಳಿರುವುವು. ಮತ್ತು ೯ ಸ್ತೋಮಗಳ ಋಕ್ಸಂಖ್ಯೆಗಳು ಆಯಾ ಸ್ತೋಮದ ಹೆಸರಿಗೆ ತಕ್ಕಂತೆ ಇರುವುವು. ಈ ಸಂಖ್ಯೆಯು ಸ್ತೋಮದಲ್ಲಿರುವ ಒಂದೊಂದು ವಿಷ್ಟುತಿಗೆ ಅನ್ವಯಿಸುವುದೆಂದು ತಿಳಿಯಬೇಕು. ಇದರ ವಿವರಣೆಗಳನ್ನು ಋಗ್ವೇದಸಂಹಿತೆಯ ೨ ನೇ ಭಾಗದ ೧೩೯ ರಿಂದ ೧೪೯ ನೇ ಪೇಜುಗಳಲ್ಲಿ ವಿಶದವಾಗಿ ಕೊಟ್ಟಿದೆ.

ಈ ವಿಧವಾದ ಸ್ತೋಮಗಳಲ್ಲಿ ತ್ರಿವೃತ್‌ಸ್ತೋಮವು ಪ್ರಾತಸ್ಸವನ ಕಾಲದಲ್ಲಿಯೂ ಪಂಚದಶಸ್ತೋಮವು ಮಾಧ್ಯಂದಿನ ಸವನದಲ್ಲಿಯೂ ಸಪ್ತದಶಸ್ತೋಮವು ತೃತೀಯ ಸವನದಲ್ಲಿಯೂ ಪಠಿಸಲ್ಪಡುವುವು. ಅಭಿಪ್ಲವಷಡಹ ಮೊದಲಾದ ಯಾಗಗಳಲ್ಲಿ ಪ್ರಾತಃಸವನಾದಿ ಕರ್ಮಗಳಲ್ಲಿ ಗಾನಮಾಡಲ್ಪಡಬೇಕಾದ ತ್ರಿವೃದಾದಿಸ್ತೋಮಗಳನ್ನು ಗಾನ ಮಾಡಿದನಂತರ ಅವುಗಳ ಜೊತೆಗೆ ಕೆಲವು ಸಂದರ್ಭಗಳಲ್ಲಿ ಉತ್ತರಸ್ತೋಮಗಳೆಂದು ಹೇಳಲ್ಪಡುವ ಇನ್ನೂ ಕೆಲವು ಸ್ತೋಮಗಳನ್ನು ಗಾನಮಾಡುವುದಕ್ಕೆ ಸ್ತೋಮವೃದ್ಧಿಯೆಂದು ಹೆಸರು. ಈ ಸ್ತೋಮವೃದ್ಧಿಯ ಗಾನಗಳನ್ನು ಉದ್ಗಾತೃ ಮೊದಲಾದವರು ಮಾಡಿದ ಮೇಲೆ ಅದಕ್ಕೆ ಅನುಸಾರವಾಗಿ ಎಂದರೆ ಸ್ತೋಮವೃದ್ಧಿಗೆ ಸಮನಾಗುವಂತೆ ಕೆಲವು ಅಧಿಕಸಂಖ್ಯೆಯ ಋಕ್ಕುಗಳನ್ನು ಹೋತೃವರ್ಗದ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಋತ್ವಿಕ್ಕುಗಳು ಪಠಿಸಬೇಕು.

ಹೀಗೆ ಮೇಲೆ ಹೇಳಿರುವ ಒಂಭತ್ತು ವಿಭಾಗಗಳನ್ನೂ ಸಹ ತ್ರಯೋದಶ, ಚತುರ್ದಶ, ಷೋಡಶ ಇತ್ಯಾದಿ ಆವಾಪಕ್ರಮದಿಂದ ಹೆಚ್ಚು ಮಾಡಿಕೊಳ್ಳಬಹುದು. ಉದಾಹರಣೆಗೆ—

> **ವಸವಸ್ತ್ರಯೋದಶಾಕ್ಷರೇಣ ತ್ರಯೋದಶಗ್ಂ ಸ್ತೋಮಮುದಜಯನ್ರುದ್ರಾಶ್ಚತುರ್ದಶಾಕ್ಷರೇಣ ಚತುರ್ದಶಗ್ಂ ಸ್ತೋಮಮುದಜಯನ್ನಾದಿತ್ಯಾಃ ಪಂಚದಶಾಕ್ಷರೇಣ ಪಂಚದಶಗ್ಂ ಸ್ತೋಮಮುದಜಯನ್ನದಿತಿಷ್ಷೋಡಶಾಕ್ಷರೇಣ ಷೋಡಶಗ್ಂ ಸ್ತೋಮಮುದಜಯತ್ಪ್ರಜಾಪತಿಸ್ಸಪ್ತದಶಾಕ್ಷರೇಣ ಸಪ್ತದಶಗ್ಂ ಸ್ತೋಮಮುದಜಯತ್ ॥**

(ತೈ. ಸಂ. ೧-೭-೧೧-೪೪)

ಎಂಬ ತೈತ್ತಿರೀಯಸಂಹಿತಾವಾಕ್ಯಗಳಿಂದ **ವಸುರುದ್ರಾದಿತ್ಯರೂ, ಅದಿತಿಯೂ ಪ್ರಜಾಪತಿಯೂ** ಕ್ರಮವಾಗಿ **ತ್ರಯೋದಶ, ಚತುರ್ದಶ, ಪಂಚದಶ, ಷೋಡಶ, ಸಪ್ತ**ದಶ ಸ್ತೋಮಗಳನ್ನು ಗಳಿಸಿಕೊಂಡ ಕ್ರಮವನು

ಹೇಳಿದೆ. ಸ್ತೋಮಗಳ ಪ್ರಭಾವವು ಅತ್ಯಧಿಕವಾದುದು. ಇವುಗಳ ಪಠಣದಿಂದ ಸಕಲವಾದ ಇಷ್ಟಾರ್ಥಗಳನ್ನೂ ಗಳಿಸಬಹುದು ಎಂಬ ವಿಷಯವೂ ತೈತ್ತಿರೀಯಸಂಹಿತೆಯಲ್ಲಿಯೇ ಪಠಿಸಲ್ಪಟ್ಟಿದೆ.

**ಪ್ರಾತಸ್ಸವನೇ ವೈ ಗಾಯತ್ರೇಣ ಛಂದಸಾ ತ್ರಿವೃತೇ ಸ್ತೋಮಾಯ ಜ್ಯೋತಿರ್ದಧದೇತಿ ತ್ರಿವೃತಾ ಬ್ರಹ್ಮವರ್ಚಸೇನ ಪಂಚದಶಾಯ ಜ್ಯೋತಿರ್ದಧದೇತಿ ಪಂಚದಶೇನೌಜಸಾ ವೀರ್ಯೇಣ ಸಪ್ತದಶಾಯ ಜ್ಯೋತಿರ್ದಧದೇತಿ ಸಪ್ತದಶೇನ ಪ್ರಾಜಾಪತ್ಯೇನ ಪ್ರಜನನೇನೈಕವಿಗ್ಂಶಾಯ ಜ್ಯೋತಿರ್ದಧದೇತಿ ಸ್ತೋಮ ಏವ ತತ್ ಸ್ತೋಮಾಯ ಜ್ಯೋತಿರ್ದಧದೇತ್ಯಥೋ ಸ್ತೋಮ ಏವ ಸ್ತೋಮಮಭಿ ಪ್ರಣಯತಿ ಯಾವಂತೋ ವೈ ಸ್ತೋಮಾಸ್ತಾವಂತಃ ಕಾಮಾಸ್ತಾವಂತೋ ಲೋಕಾಸ್ತಾವಂತಿ ಜ್ಯೋತೀಗ್ಂಷ್ಯೇತಾವತ ಏವ ಸ್ತೋಮಾನೇತಾವತಃ ಕಾಮಾನೇತಾವತೋ ಲೋಕಾನೇತಾವಂತಿ ಜ್ಯೋತೀಗ್ಂಷ್ಯವರುಂಧೇ ॥**

(ತೈ. ಸಂ. ೭-೧-೨-೭)

ಈ ವಾಕ್ಯಗಳಲ್ಲಿ ನಾಲ್ಕು ವಿಧವಾದ ಸ್ತೋಮಗಳ ಪ್ರಭಾವವನ್ನು ತಿಳಿಸಿದೆ. ಯಜ್ಞಕರ್ತನು ಪ್ರಾತಃಸವನ ಕಾಲದಲ್ಲಿ ಗಾಯತ್ರೀಛಂದಸ್ಸಿನಿಂದ ತ್ರಿವೃತ್‌ಸ್ತೋಮವನ್ನು ಮಹತ್ತ್ವದ ಸ್ಥಾನದಲ್ಲಿರಿಸುತ್ತಾನೆ. ಹೀಗೆಯೇ ಜ್ಯೋತೀರೂಪ ವಾದ ತ್ರಿವೃತದಿಂದ ಪಂಚದಶಸ್ತೋಮವನ್ನೂ ವೀರ್ಯಯುತವಾದ ಪಂಚದಶಸ್ತೋಮವನ್ನೂ, ಪ್ರಜಾಪತಿಯೊಡನೆ ಸಂಬಂಧವನ್ನು ಹೊಂದಿ ಪ್ರಜನನಕ್ಕೆ ಸಾಧಕವಾದ ಸಪ್ತದಶಸ್ತೋಮದಿಂದ ಏಕವಿಂಶಸ್ತೋಮವನ್ನೂ ತೇಜೋಯುತ ವಾಗುವಂತೆ ಮಾಡುತ್ತಾನೆ. ಹೀಗೆಯೇ ಒಂದು ಬಗೆಯ ಸ್ತೋಮವು ಇನ್ನೊಂದು ವಿಧವಾದ ಸ್ತೋಮಕ್ಕೆ ಪ್ರಭಾವ ವನ್ನೂ ತೇಜಸ್ಸನ್ನೂ ಉಂಟುಮಾಡುತ್ತದೆ. ಸ್ತೋಮದಲ್ಲಿ ಎಷ್ಟು ಬಗೆಗಳಿವೆಯೋ ಅಷ್ಟು ಲೋಕಗಳೂ, ಅಷ್ಟು ಬಗೆಯ ತೇಜಸ್ಸುಗಳೂ ಅಷ್ಟು ವಿಧವಾದ ಇಷ್ಟಾರ್ಥಗಳೂ ಇವೆ. ಮತ್ತು ಸ್ತೋಮಪಠನದಿಂದ ಯಜಮಾನನು ಅಷ್ಟು ವಿಧವಾದ ಲೋಕಗಳನ್ನೂ, ತೇಜಸ್ಸುಗಳನ್ನೂ, ಇಷ್ಟಾರ್ಥಗಳನ್ನೂ ಪಡೆಯುವನು ಎಂದು ಸ್ತೋಮದ ಪ್ರಭಾವವನ್ನೂ ತಿಳಿಸಿ ಅನಂತರ ಸ್ತೋಮಪಠನವಿಲ್ಲದಿರುವುದರಿಂದ ಆಗುವ ನಷ್ಟವನ್ನೂ ತಿಳಿಸಿದೆ.

**ಬ್ರಹ್ಮವಾದಿನೋ ವದಂತಿ ಸ ತ್ವೈ ಯಜೇತ ಯೋಽಗ್ನಿಷ್ಟೋಮೇನ ಯಜಮಾನೋಽಥ ಸರ್ವಸ್ತೋಮೇನ ಯಜೇತೇತಿ ಯಸ್ಯ ತ್ರಿವೃತಮಂತರ್ಯಂತಿ ಪ್ರಾಣಾಗ್ಂಸ್ತಸ್ಯಾಂತರ್ಯಂತಿ ಪ್ರಾಣೇಷು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಪಂಚದಶಮಂತರ್ಯಂತಿ ವೀರ್ಯಂ ತಸ್ಯಾಂತರ್ಯಂತಿ ವೀರ್ಯೇ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಸಪ್ತದಶಮಂತರ್ಯಂತಿ ಪ್ರಜಾಂ ತಸ್ಯಾಂತರ್ಯಂತಿ ಪ್ರಜಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯೈಕವಿಗ್ಂಶಮಂತರ್ಯಂತಿ ಪ್ರತಿಷ್ಠಾಂ ತಸ್ಯಾಂತರ್ಯಂತಿ ಪ್ರತಿಷ್ಠಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಿಣವಮಂತರ್ಯಂತ್ಯೃತೂಗ್ಂಶ್ಚ ತಸ್ಯ ನಕ್ಷತ್ರಿಯಾಂ ಚ ವಿರಾಜಮಂತರ್ಯಂತ್ಯೃತುಷು ಮೇಽಪ್ಯಸನ್ನಕ್ಷತ್ರಿಯಾಯಾಂ ಚ ವಿರಾಜೀತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಯಸ್ತ್ರಿಗ್ಂಶಮಂತರ್ಯಂತಿ ದೇವತಾಸ್ತಸ್ಯಾಂತರ್ಯಂತಿ ದೇವತಾಸು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ**

**ಯಜತೇ ಯೋ ವೈ ಸ್ತೋಮಾನಾಮವಮಂ ಪರಮತಾಂ ಗಚ್ಛಂತಂ ವೇದ ಪರಮತಾ-ಮೇವ ಗಚ್ಛತಿ ತ್ರಿವೃದ್ವೈ ಸ್ತೋಮಾನಾಮವಮಸ್ತ್ರಿವೃತ್ಪರಮೋ ಯ ಏವಂ ವೇದ ಪರಮತಾಮೇವ ಗಚ್ಛತಿ ॥**

(ತೈ. ಸಂ. ೭-೧-೨-೮ ರಿಂದ ೧೦)

ಅಗ್ನಿಷ್ಟೋಮನಿಂದ ಯಜ್ಞಮಾಡತಕ್ಕವರು **ಸರ್ವ**ಸ್ತೋಮದಿಂದಲೂ ಮಾಡಬೇಕೆಂದು ಶಾಸ್ತ್ರಜ್ಞರು ವಿಧಿಸಿದ್ದಾರೆ. ಈ ವಿಧಿಯಲ್ಲಿ **ತ್ರಿವೃತ್**ಸ್ತೋಮವನ್ನು ಬಿಟ್ಟರೆ ಅವನ ಮುಖ್ಯಪ್ರಾಣವೇ ಮಾಯವಾಗುವುದರಿಂದ ಯಜಮಾನನು ಈ ಯಜ್ಞವು ನನ್ನ ಮುಖ್ಯಪ್ರಾಣದಲ್ಲಿ ಅಂತರ್ಗತವಾಗಲಿ ಎಂಬ ಉದ್ದೇಶ್ಯದಿಂದ ಯಾಗಮಾಡುತ್ತಾನೆ. ಹೀಗೆಯೇ ಪಂಚದಶಸ್ತೋಮವನ್ನು ಬಿಟ್ಟರೆ ಶಕ್ತ್ಯಭಾವವಾಗುವುದರಿಂದಲೂ, ಸಪ್ತದಶಸ್ತೋಮವನ್ನು ಬಿಟ್ಟರೆ ಸಂತತಿಯಿಲ್ಲದೇ ಹೋಗುವುದರಿಂದಲೂ, ಏಕವಿಂಶಸ್ತೋಮವನ್ನು ಬಿಟ್ಟರೆ ತನ್ನ ಜೀವನಾಧಾರವೇ ಕಳಚಿಹೋಗುವುದರಿಂದಲೂ, ತ್ರಿಣವಸ್ತೋಮವನ್ನು ಬಿಟ್ಟರೆ ತನ್ನ ಪ್ರಯೋಜನಕ್ಕಾಗಿ ಇರತಕ್ಕ ಋತುಗಳೂ, ನಕ್ಷತ್ರಗಳ ಶಕ್ತಿಗಳೂ ತನ್ನ ಭಾಗಕ್ಕೆ ಸಹಾಯಕವಾಗದಿರುವುದರಿಂದಲೂ, ತ್ರಯಸ್ತ್ರಿಂಶಸ್ತೋಮವನ್ನು ಬಿಟ್ಟರೆ ಮುಖ್ಯವಾದ ದೇವತಾಸಾನ್ನಿಧ್ಯವೇ ಇಲ್ಲದಿರುವುದರಿಂದಲೂ ಸಹ ಯಜಮಾನನು ಶಕ್ತಿಸಂಪಾದನೆಗಾಗಿ ಪಂಚದಶಸ್ತೋಮದಿಂದಲೂ, ಸಂತತಿ ಲಾಭಕ್ಕಾಗಿ ಸಪ್ತದಶಸ್ತೋಮದಿಂದಲೂ, ಜೀವನಾಧಾರಕ್ಕಾಗಿ ಏಕವಿಂಶಸ್ತೋಮದಿಂದಲೂ, ಋತುಗಳ ಮತ್ತು ನಕ್ಷತ್ರಗಳ ಪ್ರಭಾವಗಳ ಪ್ರಯೋಜನವನ್ನು ಪಡೆಯುವುದಕ್ಕಾಗಿ ತ್ರಿಣವಸ್ತೋಮದಿಂದಲೂ, ತನ್ನ ಮುಖ್ಯದೇವತಾಸಾನ್ನಿಧ್ಯದ ಲಾಭಕ್ಕಾಗಿ ತ್ರಯಸ್ತ್ರಿಂಶಸ್ತೋಮದ ಪಠನದಿಂದಲೂ ಯಾಗವನ್ನು ನೆರವೇರಿಸುತ್ತಾನೆ. ಯಾವ ಯಜಮಾನನು ಸ್ತೋಮಗಳಲ್ಲೆಲ್ಲಾ ಪ್ರಥಮಸ್ಥಾನವನ್ನು ಪಡೆದಿರುವ ತ್ರಿವೃತ್ಸ್ತೋಮದ ಮಹಿಮೆಯನ್ನು ತಿಳಿಯುತ್ತಾನೆಯೋ ಆ ಯಜಮಾನನು ಯಜ್ಞಕರ್ತರಲ್ಲಿ ಮೊದಲನೆಯ ಸ್ಥಾನವನ್ನು ಪಡೆಯುತ್ತಾನೆ.

ಹೀಗೆಯೇ **ತ್ರಿವೃದಾದಿಸ್ತೋಮಗಳ** ಮಹಿಮೆಯನ್ನು ವರ್ಣಿಸುತ್ತಾ,

**ತ್ರಿವೃದಗ್ನಿಷ್ಟೋಮೋ ಭವತಿ ತೇಜ ಏವಾವರುಂಧತೇ ಪಂಚದಶೋ ಭವತೀಂದ್ರಿಯಮೇವಾವ-ರುಂಧತೇ ಸಪ್ತದಶೋ ಭವತ್ಯನ್ನಾದ್ಯಸ್ಯಾವರುದ್ಧ್ಯಾ ಅಥೋ ಪ್ರೈವ ತೇನ ಜಾಯಂತೆ ಏಕವಿಗ್ಂಶೋ ಭವತಿ ಪ್ರತಿಷ್ಠಿತ್ಯಾ ಅಥೋ ರುಚಮೇವಾತ್ಮನ್ದಧತೇ ತ್ರಿಣವೋ ಭವತಿ ವಿಜಿತ್ಯೈ ತ್ರಯಸ್ತ್ರಿಗ್ಂಶೋ ಭವತಿ ಪ್ರತಿಷ್ಠಿತ್ಯೈ ॥** (ತೈ. ಸಂ. ೭-೨-೧-೨)

ತ್ರಿವೃತ್ಸ್ತೋಮದೊಡನೆ ಕೂಡಿದ ಅಗ್ನಿಷ್ಟೋಮದಿಂದ ತೇಜಸ್ಸನ್ನೂ, ಪಂಚದಶಸ್ತೋಮದಿಂದ ವೀರ್ಯವನ್ನೂ, ಸಪ್ತದಶದಿಂದ ಅನ್ನವನ್ನೂ, ಏಕವಿಂಶದಿಂದ ಪ್ರತಿಷ್ಠೆಯನ್ನೂ, ತ್ರಿಣವದಿಂದ ಜಯವನ್ನೂ, ತ್ರಯಸ್ತ್ರಿಂಶದಿಂದ ಮಹತ್ತ್ವವನ್ನೂ ಪಡೆಯುತ್ತಾನೆ ಎಂದೂ ಸಹ ಸ್ತೋಮಪಠನದ ಪ್ರಯೋಜನಗಳನ್ನು ತಿಳಿಸಿದೆ. ಕಠೋಪನಿಷತ್ತಿನಲ್ಲಿಯೂ ಸಹ,

**ಸ್ತೋಮಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥**

(ಕ. ಉ. ೨-೧೦)

ಎಂಬ ವಾಕ್ಯದಿಂದ **ಸ್ತೋಮದ** ಮಹತ್ತ್ವವನ್ನೂ, ಅದರಿಂದ ಲಭಿಸತಕ್ಕ ಆಧ್ಯಾತ್ಮಿಕವಾದ ಶಾಂತಿಯನ್ನೂ ತೋರಿಸಿದೆ. ಛಾಂದೋಗ್ಯೋಪನಿಷತ್ತಿನಲ್ಲಿ,

**ಯೇನ ಛಂದಸಾ ಸ್ತೋಷ್ಯನ್ ಸ್ಯಾತ್ತಚ್ಛಂದ ಉಪಧಾವೇದ್ಯೇನ ಸ್ತೋಮೇನ ಸ್ತೋಷ್ಯಮಾಣಃ ಸ್ಯಾತ್ತಂ ಸ್ತೋಮಮುಪಧಾವೇತ್ ।**

(ಛಾ. ಉ. ೧-೩-೧೦)

ಎಂಬ ವಾಕ್ಯದಿಂದ **ಉದ್ಗೀಥದ** ಮಹತ್ವವನ್ನು ವರ್ಣಿಸುತ್ತಾ ಯಾವ ಸ್ತೋಮದಿಂದ ಆಯಾ ಸನ್ನಿವೇಶಕ್ಕನುಗುಣವಾಗಿ ಸ್ತೋತ್ರವು ಪೂರ್ಣವಾಗುತ್ತದೆಯೋ ಆ ಸ್ತೋಮವನ್ನಾಶ್ರಯಿಸಿ ಧ್ಯಾನ ಮಾಡಬೇಕೆಂದು ವಿಧಿಸಿದೆ.

ಇದೇ ರೀತಿ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಸ್ತೋಮಾನ್** ಎನ್ನುವುದರಿಂದ ಗಾನಾತ್ಮಕವಾದುದೂ, ಪ್ರಶಂಸಾರೂಪವಾದುದೂ ಮತ್ತು ಅತಿಶಯವಾದ ಪ್ರಯೋಜನಕಾರಿಯಾದುದೂ ಆದ ಸ್ತೋತ್ರವೆಂದರ್ಥ.

ಇದೇ ಋಕ್ಕನ್ನು ನಿರುಕ್ತಕಾರರು ಈ ರೀತಿ ವಿವರಿಸಿದ್ದಾರೆ.

**ಅಮಂದಾನ್ ಸ್ತೋಮಾನಬಾಲಿಶಾನನಲ್ಪಾನ್ ವಾ । ಬಾಲೋ ಬಲವರ್ತೀ ಭರ್ತವ್ಯೋ ಭವತ್ಯಂಬಾಸ್ಮಾ ಅಲಂ ಭವತೀತಿ ವಾಂಬಾಸ್ಮೈ ಬಲಂ ಭವತೀತಿ ವಾ ಬಲೋ ವಾ ಪ್ರತಿಷೇದವ್ಯವಹಿತಃ ಪ್ರಭರೇ ಮನೀಷಯಾ ಮನಸ ಈಷಯಾ ಸ್ತುತ್ಯಾ ಪ್ರಜ್ಞಯಾ ವಾ । ಸಿಂಧಾವಧಿ ನಿವಸತೋ ಭಾವಯವ್ಯಸ್ಯ ರಾಜ್ಞೋ ಯೋ ಮೇ ಸಹಸ್ರಂ ನಿರಮಿಮೀತ ಸವಾನತೂರ್ತೋ ರಾಜಾತೂರ್ಣ ಇತಿ ವಾ ಅತ್ವರಮಾಣ ಇತಿ ವಾ ಪ್ರಶಂಸಾಮಿಚ್ಛಮಾನಃ ॥**

(ನಿ. ೯-೧೦)

ಇಲ್ಲಿ **ಅತೂರ್ತ** ಶಬ್ದಕ್ಕೆ **ಅತೂರ್ಣಃ ಅತ್ವರಮಾಣಃ** ಎಂಬ ಅರ್ಥಗಳನ್ನು ಪರ್ಯಾಯರೂಪದಲ್ಲಿ ಹೇಳಿದೆ. ಎಂದರೆ ಯಾರಿಂದಲೂ ಜಿತನಲ್ಲದವನು ಅಥವಾ ಅವಸರವಿಲ್ಲದ ವ್ಯವಹಾರವುಳ್ಳವನು ಎಂದರ್ಥ. ಇದೇ ಪದವು ಬರತಕ್ಕ,

**ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭನೇ ಸವಿತಾ ದ್ಯಾಮದೃಂಹತ್ ।**
**ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಂ ॥**

(ಋ. ಸಂ. ೧೦-೧೪೯-೧)

ಎಂಬ ಋಕ್ಕನ್ನು ನಿರುಕ್ತಕಾರರು ಉದಹರಿಸಿ (ನಿ. ೧೦-೩೨) ಅಲ್ಲಿಯೂ ಸಹ **ಅತೂರ್ಣ ಇತಿ ವಾತ್ವರಮಾಣ** ಇತಿ ವಾ ಎಂಬ ಮೇಲಿನ ಅರ್ಥವನ್ನು ಹೇಳಿದ್ದಾರೆ. ಇಲ್ಲಿ **ಭಾವಯವ್ಯನ** ಎರಡು ವಿಧವಾದ ಗುಣಗಳೂ ತೋರುವುವು. ಮೊದಲನೆಯದಾಗಿ ಅವನು ಅತಿಶಯವಾದ ಪರಾಕ್ರಮವನ್ನು ಹೊಂದಿದುದರಿಂದ ಯಾರಿಂದಲೂ ಜಯಿಸಲ್ಪಡತಕ್ಕವನಲ್ಲವೆಂದೂ, ಹಿಂಸಿಸಲ್ಪಡತಕ್ಕವನಲ್ಲವೆಂದೂ ಎರಡನೆಯದಾಗಿ, ಅವನು ಪ್ರಾಜ್ಞನಾದುದರಿಂದ ಅವಸರದ ವ್ಯವಹಾರವಿಲ್ಲದೆ ವಿವೇಕಪೂರಿತವಾದ ವ್ಯವಹಾರವುಳ್ಳವನೆಂದೂ ತಿಳಿಯುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಅಮಂದಾನ್**—ನ ಮಂದಾಃ ಅಮಂದಾಃ ತಾನ್ ಅಮಂದಾನ್. **ತತ್ಪುರುಷೇ ತುಲ್ಯಾರ್ಥ**— (ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಭರೇ**—ಭೃಞ್ ಭರಣೇ. ಧಾತು. ಭ್ವಾದಿ ಲಟ್ ಉತ್ತಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮನೀಷಾ—ಸುಪಾಂ ಸುಲುಕ್—**(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಟಾ) ಲುಕ್.

**ಕ್ಷಿಯಂತಃ**— ಕ್ಷಿ ನಿವಾಸಗತ್ಯೋಃ ಧಾತು. ತುದಾದಿ. ಲಡರ್ಥದಲ್ಲಿ ಶತೃಪ್ರತ್ಯಯ. ಶ ವಿಕರಣ. **ಅಚಿಶ್ನುಧಾತು**— ಎಂಬುದರಿಂದ ಇಯಙಾದೇಶ. ನುಮ್ ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ (ಜಸ್) ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ

**ಭಾವ್ಯಸ್ಯ**—ಭಾವಯವ್ಯಸ್ಯ ಎಂದು ರೂಪವಾದಾಗ ಛಾಂದಸವಾಗಿ ವರ್ಣಲೋಪ ಬರುತ್ತದೆ.

**ಅಮಿಮೀತ**—ಮಾಙ್ ಮಾನೇ. ಧಾತು. ಜುಹೋತ್ಯಾದಿ. ಲಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಎಂಬುದರಿಂದ ಶ್ಲು ವಿಕರಣ **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ಅಭ್ಯಸ್ತಸಂಜ್ಞಾ ಇರುವುದರಿಂದ ಧಾತುವಿನ ಆಕಾರಕ್ಕೆ ಈತ್ವ. ಅಂಗಕ್ಕೆ ಅಡಾಗಮ. ಯಃ ಎಂದು ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತ ಪದವಾಗುತ್ತದೆ.

**ಸವಾನ್**—ಷುಞ್ ಅಭಿಷವೇ. ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ **ಛಂದಸಿ ಜವಸವೌ ವಕ್ತವ್ಯೌ** (ಪಾ. ಸೂ. ೩-೩-೫೬-೪) ಎಂಬುದರಿಂದ ನಿಪಾತ ಮಾಡಿರುವುದರಿಂದ ಅಚ್ ಪ್ರತ್ಯಯ ಅದು ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಅತೂರ್ತಃ**—ತುರ್ವೀ ಹಿಂಸಾಯಾಂ ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ **ರಾಲ್ಲೋಪಃ** (ಪಾ. ಸೂ. ೬-೪-೨೧) ಎಂಬುದರಿಂದ ರೇಫದ ಪರವಾದ ವಕಾರಕ್ಕೆ ಲೋಪ. **ಹಲಿ ಚ.**(ಪಾ. ಸೂ. ೮-೨-೭೭) ಎಂಬುದರಿಂದ ಉಪಧಾದೀರ್ಘ. ನ ತೂರ್ತಃ ಅತೂರ್ತಃ. ವ್ಯತ್ಯಯದಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಇಚ್ಛಮಾನಃ**—ಇಷು ಇಚ್ಛಾಯಾಂ ಧಾತು. ವ್ಯತ್ಯಯದಿಂದ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶ ವಿಕರಣ. **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಛತ್ವ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ವಿಕರಣಸ್ವರ ಉಳಿಯುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ಶತಂ ರಾಜ್ಞೋ ನಾಧಮಾನಸ್ಯ ನಿಷ್ಕಾಞ್ಛತಮಶ್ವಾನ್ಪ್ರಯತಾನ್ತ್ಸದ್ಯ ಆದಂ ।

ಶತಂ ಕಕ್ಷೀವಾಁ ಅಸುರಸ್ಯ ಗೋನಾಂ ದಿವಿ ಶ್ರವೋಽಜರಮಾ ತತಾನ ॥ ೨ ॥

॥ ಪದಪಾಠಃ ॥

ಶತಂ । ರಾಜ್ಞಃ । ನಾಧಮಾನಸ್ಯ । ನಿಷ್ಕಾನ್ । ಶತಂ । ಅಶ್ವಾನ್ । ಪ್ರಯತಾನ್ । ಸದ್ಯಃ । ಆದಂ ।

ಶತಂ । ಕಕ್ಷೀವಾನ್ । ಅಸುರಸ್ಯ । ಗೋನಾಂ । ದಿವಿ । ಶ್ರವಃ । ಅಜರಂ । ಆ । ತತಾನ ॥ ೨ ॥

॥ ಸಾಯಣಭಾಷ್ಯಂ ॥

ನಾಧಮಾನಸ್ಯ ಸ್ವೀಕರ್ತವ್ಯಮಿತ್ಯುಚ್ಚೈರ್ಯಾಚಮಾನಸ್ಯಾಸುರಸ್ಯ ಧನಾನಾಂ ನಿರಸಿತುರ್ದಾನಶೀಲಸ್ಯ ರಾಜ್ಞಃ ಸ್ವತೇಜಸಾ ದೀಪ್ಯಮಾನಸ್ಯ ಸ್ವನಯಸ್ಯ ನಿಷ್ಕಾನಾಭರಣವಿಶೇಷಾನ್ ಇಯತ್ತಾವಿಶೇಷವಿಶಿಷ್ಟಾನಿ ವಾ ಸುವರ್ಣಾನಿ ಶತಸಂಖ್ಯಾಕಾನಿ । ಶತಂ ಸಹಸ್ರಮಿತ್ಯಪರಿಮಿತವಚನಃ । ಅಪರಿಮಿತಾನ್ ಸದ್ಯಃ ಪ್ರಾರ್ಥನಾನಂತರಮೇವ ಕಕ್ಷೀವಾನಹಮಾದಂ । ಆತ್ತವಾನಸ್ಮಿ । ಸ್ವೀಕೃತವಾನಸ್ಮೀತ್ಯರ್ಥಃ । ತಥಾ ಪ್ರಯತಾನ್ ಶುದ್ಧಾನ್ ಲಕ್ಷಣೋಪೇತಾನಶ್ವಾನಧ್ವಗಮನ ಸಮರ್ಥಾನ್ ಹಯಾನಾದಂ । ಆತ್ತವಾನ್ । ತಥಾ ಗೋನಾಂ ಪುಂಗವಾನಾಂ । ಬಲೀವರ್ದಾನಾಮಿತ್ಯರ್ಥಃ ಉತ್ತರಮಂತ್ರೇ ಸ್ತ್ರೀಗವೀನಾಮಭಿಧಾನಾತ್ । ತೇಷಾಂ ಶತಮಾದಂ । ಏವಂ ಪ್ರದಾತಾ ರಾಜಾ ದಿವಿ ದ್ಯುಲೋಕೇ ಶ್ರವಃ ಕೀರ್ತಿಮಜರಂ ಶಾಶ್ವತೀಮಾ ತತಾನ । ವಿಸ್ತಾರಿತವಾನ್ । ಗವಾದಿಪ್ರತಿಗ್ರಹೀತಾಹಂ ಸ್ವರ್ಗೇ ಕೀರ್ತಿಮುಕರವಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಕಕ್ಷೀವಾನ್**—ಕಕ್ಷೀವಂತನು (ನಾನು) । **ನಾಧಮಾನಸ್ಯ**—(ಸ್ವೀಕರಿಸಬೇಕೆಂದು) ಗಟ್ಟಿಯಾಗಿ ಕೇಳಿಕೊಳ್ಳುತ್ತಿರುವ । **ಅಸುರಸ್ಯ**—ದ್ರವ್ಯದಾನಶೀಲನಾದ । **ರಾಜ್ಞಃ**—(ಸ್ವನಯನೆಂಬ) ರಾಜನ । **ಶತಂ**—ಅಸಂಖ್ಯಾತವಾದ । **ನಿಷ್ಕಾನ್**—ನಿಷ್ಕಗಳನ್ನೂ । **ಪ್ರಯತಾನ್**—ಶುದ್ಧವಾದ ಒಳ್ಳೆಯ ಲಕ್ಷಣಗಳುಳ್ಳ । **ಶತಂ**—ಒಂದುನೂರು । **ಅಶ್ವಾನ್**—ಕುದುರೆಗಳನ್ನೂ (ಮತ್ತು) । **ಗೋನಾಂ**—ಎತ್ತುಗಳ । **ಶತಂ**—ನೂರನ್ನೂ । **ಸದ್ಯಃ**—ಕೂಡಲೇ (ಅವನ ಪ್ರಾರ್ಥನಾನಂತರವೇ) । **ಆದಂ**—ಸ್ವೀಕರಿಸಿದೆನು (ದಾನಮಾಡಿ ರಾಜನು) । **ದಿವಿ**—ಸ್ವರ್ಗಲೋಕದಲ್ಲಿ । **ಅಜರಂ**—ಶಾಶ್ವತವಾದ । **ಶ್ರವಃ**—(ತನ್ನ) ಕೀರ್ತಿಯನ್ನು । **ಆ ತತಾನ**—ವಿಸ್ತರಿಸುವಂತೆ ಮಾಡಿದನು.

॥ ಭಾವಾರ್ಥ ॥

(ಸ್ವನಯ) ರಾಜನು (ಸ್ವೀಕರಿಸಬೇಕೆಂದು) ಪ್ರಾರ್ಥಿಸಿದ ಕೂಡಲೇ (ಅವನು ಕೊಟ್ಟ ಅಪರಿಮಿತ) ನಿಷ್ಕಗಳನ್ನೂ, ಶುದ್ಧವಾದ ನೂರು ಅಶ್ವಗಳನ್ನೂ, ನೂರು ಎತ್ತುಗಳನ್ನೂ ಸ್ವೀಕರಿಸಿದೆನು; (ನನಗೆ ಈ ರೀತಿ ದಾನಮಾಡಿ) ರಾಜನು ಸ್ವರ್ಗಲೋಕದಲ್ಲಿ (ತನ್ನ) ಕೀರ್ತಿಯು ಶಾಶ್ವತವಾಗಿ ಹರಡುವಂತೆ ಮಾಡಿಕೊಂಡನು (ದಾನವನ್ನು ಸ್ವೀಕರಿಸಿದ ನಾನು ಸ್ವರ್ಗಲೋಕದಲ್ಲಿ ಅವನ ಕೀರ್ತಿಯು ಶಾಶ್ವತವಾಗಿರುವಂತೆ ಮಾಡಿದೆನು).

## English Translation.

From which generous prince, soliciting (my acceptance), I Kakshivat, unhesitatingly accepted a hundred nishkas, a hundred vigorous steeds, and a hundred bulls, whereby he has spread his imperishable fame through heaven.

॥ ವಿಶೇಷವಿಷಯಗಳು ॥

**ನಾಧಮಾನಸ್ಯ** — **ನಾಧಮಾನಾಃ** ಎನ್ನುವ ಪದಕ್ಕೆ ನಿರುಕ್ತಕಾರರು **ಯಾಚಮಾನಾಃ ।** ಪ್ರಾರ್ಥಿಸುವವರು ಎಂಬರ್ಥವನ್ನು ಮಾಡಿದ್ದಾರೆ (ನಿ. ೪-೩). ಪ್ರಕೃತವಾದ ಋಕ್ಕಿನಲ್ಲಿ **ಸ್ವೀಕರ್ತವ್ಯಂ ಇತ್ಯುಚ್ಚೈಃ ಯಾಚಮಾನಸ್ಯ ।** ಸ್ವೀಕರಿಸಬೇಕೆಂದು ಗಟ್ಟಿಯಾಗಿ ಬೇಡುತ್ತಿರುವ ಎಂದು **ರಾಜ್ಞಃ** ಎನ್ನುವುದಕ್ಕೆ ವಿಶೇಷಣವಾಗಿದೆ.

**ಅಸುರಸ್ಯ**—**ಅಸುರ** ಶಬ್ದಕ್ಕೆ ಅನೇಕ ಅರ್ಥಗಳು ಸಾಧ್ಯವಾಗುವುದೆಂದು ಋ. ಸಂ. ೧-೧೦೮-೬ (ಋಗ್ವೇದ ಸಂಹಿತಾ ಭಾಗ ೮, ಪೇ. ೫೭೭) ಮತ್ತು ೧-೧೨೨-೧ ; ೧-೧೫೧-೪ ನೇ ಋಕ್ಕುಗಳ ವಿಶೇಷವಿಷಯಗಳಲ್ಲಿಯೂ ತಿಳಿಸಿದೆ. ಅವುಗಳಲ್ಲಿ **ದಾನಶೀಲ**ನೆಂದೂ ಒಂದು ಮುಖ್ಯವಾದ ಅರ್ಥವಿದೆ. ಪ್ರಕೃತವಾದ ಋಕ್ಕಿನಲ್ಲಿ **ಧನಾನಾಂ ನಿರಸಿತುರ್ದಾನಶೀಲಸ್ಯ ।** ಧನದಾತೃವಾದ ಎಂದರ್ಥವಾಗಿ **ರಾಜ್ಞಃ** ಎಂಬ ಪದಕ್ಕೆ (ಸ್ವನಯನಿಗೆ) ವಿಶೇಷಣವಾಗಿದೆ.

**ಗೋನಾಂ**—**ಪುಂಗವಾನಾಂ । ಬಲೀವರ್ದಾನಾಮಿತ್ಯರ್ಥಃ ।** ಎತ್ತುಗಳ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ನಾಧಮಾನಸ್ಯ**—ನಾಧೃ ಯಾಚ್ಞಾಯಾಂ ಧಾತು. ಭ್ವಾದಿ. ಲಡರ್ಥದಲ್ಲಿ ಶಾನಚ್‌ಪ್ರತ್ಯಯ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಷಷ್ಠೀ ಏಕವಚನಾಂತರೂಪ.

**ನಿಷ್ಕಾನ್**—ಷದ್ಲೃ ವಿಶರಣಗತ್ಯವಸಾದನೇಷು ಧಾತು. **ನೌ ಸದೇರ್ಡಿಚ್ಚ** (ಉ. ಸೂ. ೨-೩೨೫) ಎಂಬುದರಿಂದ ನಿ ಉಪಪದವಾಗಿರುವಾಗ ಕ ಪ್ರತ್ಯಯ. ಡಿತ್ವವಿಧಾನಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತ.

**ಪ್ರಯತಾನ್**—ಯಮು ಉಪರಮೇ. ಧಾತು. ಕ್ತ ಪ್ರತ್ಯಯ. **ಅನುದಾತ್ತೋಪದೇಶವ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕ ಮಕಾರಕ್ಕೆ ಲೋಪ. **ಗತಿರನಂತರಃ** (ಪಾ ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಆದದಮ್**—ಡುದಾಞ್ ದಾನೇ. ಧಾತು. ಜುಹೋತ್ಯಾದಿ. ಇದಕ್ಕೆ ಆಙ್ ಉಪಪದವಾಗಿರುವಾಗ **ಆಙೋ ದೋನಾಸ್ಯವಿಹರಣೇ** (ಪಾ. ಸೂ. ೧-೩-೨೦) ಎಂಬುದರಿಂದ ಆತ್ಮನೇ ಪದ ಬರಬೇಕಾದುದು ಛಾಂದಸವಾಗಿ ಇಲ್ಲಿ ಬರುವುದಿಲ್ಲ. ಲೇಟ್ ಉತ್ತಮಪುರುಷ ಏಕವಚನದಲ್ಲಿ ಮಿಪ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಪ್ರತ್ಯಯದ ಇಕಾರಕ್ಕೆ ಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ.

**ಅಸುರಸ್ಯ**—ಅಸು ಕ್ಷೇಪಣೇ ಧಾತು. **ಅಸೇರುರನ್** (ಉ. ಸೂ. ೧-೪೨) ಎಂಬುದರಿಂದ ಉರನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಗೋನಾಮ್**—ಗೋ ಶಬ್ದ. ಇದಕ್ಕೆ ಷಷ್ಠೀ ಬಹುವಚನ ಪರವಾದಾಗ ಪದಾಂತತ್ವವಿಲ್ಲದಿದ್ದರೂ ಛಾಂದಸವಾಗಿ **ಗೋಃ ಪಾದಾಂತೇ** (ಪಾ. ಸೂ. ೭-೧-೫೭) ಎಂಬುದರಿಂದ ವಿಧಿಸಲ್ಪಡುವ ನುಟ್ ಇಲ್ಲಿಯೂ ಬರುತ್ತದೆ.

**ದಿವಿ—ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಅಜರಮ್**—ನ ವಿದ್ಯತೇ ಜರಾ ಯಸ್ಯ. ತಮ್. ನಞ್‌ಸ್ವರಕ್ಕೆ ಬಾಧಕವಾಗಿ **ನಞೋ ಜರಮರ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ತತಾನ**—ತನು ವಿಸ್ತಾರೇ, ಧಾತು. ಲಿಟ್. ಉತ್ತಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಉಪ ಮಾ ಶ್ಯಾವಾಃ ಸ್ವನಯೇನ ದತ್ತಾ ವಧೂಮಂತೋ ದಶ ರಥಾಸೋ ಅಸ್ಥುಃ ।
ಷಷ್ಟಿಃ ಸಹಸ್ರಮನು ಗವ್ಯಮಾಗಾತ್ಸನತ್ಕಕ್ಷೀವಾँ ಅಭಿಪಿತ್ವೇ ಅಹ್ನಾಂ ॥ ೩ ॥

॥ ಪದಪಾಠಃ ॥

ಉಪ । ಮಾ । ಶ್ಯಾವಾಃ । ಸ್ವನಯೇನ । ದತ್ತಾಃ । ವಧೂಽಮಂತಃ । ದಶ । ರಥಾಸಃ । ಅಸ್ಥುಃ ।
ಷಷ್ಟಿಃ । ಸಹಸ್ರಂ । ಅನು । ಗವ್ಯಂ । ಆ । ಅಗಾತ್ । ಸನತ್ । ಕಕ್ಷೀವಾನ್ । ಅಭಿಽಪಿತ್ವೇ । ಅಹ್ನಾಂ ॥೩॥

॥ ಸಾಯಣಭಾಷ್ಯಂ ॥

ಸ್ವನಯೇನ ದತ್ತಾಃ ಶ್ಯಾವಾಸ್ತದ್ವರ್ಣಾಶ್ವೈರ್ಯುಕ್ತತ್ವಾತ್ ಶ್ಯಾವಾ ವಧೂಮಂತ ಆರೂಢಾಭಿರ್ವಧೂಭಿಸ್ತದ್ವಂತೋ ದಶೈತತ್ಸಂಖ್ಯಾಕಾಃ ರಥಾಸೋ ರಥಾ ಉಪಾಸ್ಥುಃ । ಉಪಸ್ಥಿತಾಃ । ಗವ್ಯಶಬ್ದೋ ಗೋಸಮೂಹವಾಚೀ । ಷಷ್ಟಿಃ ಸಹಸ್ರಮನು ಗವ್ಯಂ ಷಷ್ಟ್ಯಧಿಕಸಹಸ್ರಂ ಗವಾಂ ಸಮೂಹೋಽನ್ವಾಗಾತ್ । ಆಗತಃ । ತತ ಆತ್ಮಾನಂ ಪರೋಕ್ಷೇಣ ಬ್ರವೀತಿ । ತತ್ಸರ್ವಂ ಪ್ರತಿಗೃಹ್ಯಾಯಂ

**ಕಕ್ಷೀವಾನಹ್ನಾಂ ದಿವಸಾನಾಂ ಮಧ್ಯೇಽಭಿಪಿತ್ವೇ ಸನ್ನಿಹಿತೇಽಹನಿ ಸನತ್ । ಸ್ವೀಕೃತಂ ರಥವಧ್ವಾದಿಕಂ ಸ್ವಪಿತ್ರೇ ಸಮರ್ಪಯತಿ ಸ್ವಯಂ ವಾ ಸ್ವೀಕರೋತಿ । ಅಭಿಪಿತ್ವಶಬ್ದ ಆಸನ್ನಕಾಲವಾಚೀ ಪ್ರಪಿತ್ವಶಬ್ದ ಇತಿವತ್ । ಸ ಚ ಪ್ರಪಿತ್ವೇಽಭೀಕ ಇತ್ಯಾಸನ್ನಸ್ಯೇತಿ ಯಾಸ್ಕೇನೋಕ್ತತ್ವಾದಾಸನ್ನವಚನಃ । ನಿ. ೩-೨೦ ಉಪಸರ್ಗಭೇದೇಽಪ್ಯರ್ಥಾಭೇದಃ ॥**

॥ ಪ್ರತಿಪದಾರ್ಥ ॥

**ಸ್ವನಯೇನ ದತ್ತಾಃ**—ಸ್ವನಯನಿಂದ ದತ್ತವಾದ । **ಶ್ಯಾವಾಃ**—ಶ್ಯಾಮವರ್ಣದ (ಆವರ್ಣದ ಅಶ್ವಗಳಿಂದ ಯುಕ್ತವಾದ) (ಮತ್ತು) । **ವಧೂಮಂತಃ**—(ನನ್ನ) ಪತ್ನಿಯರಿಂದ ಯುಕ್ತವಾದ । **ದಶ**—ಹತ್ತು । **ರಥಾಸಃ**—ರಥಗಳು । **ಮಾ**—ನನ್ನನ್ನು । **ಉಪ ಅಸ್ಥುಃ**—ಸಮೀಪಿಸಿದುವು । **ಷಷ್ಟಿಃ ಸಹಸ್ರಂ**—ಒಂದುಸಾವಿರದ ಅರವತ್ತು । **ಗವ್ಯಂ**—ಗೋವುಗಳ ಸಮೂಹವೂ । **ಅನು ಅ ಅಗಾತ್**—ಅನುಸರಿಸಿತು । **ಕಕ್ಷೀವಾನ್**—ಕಕ್ಷೀವಂತನಾದ (ನಾನು) । **ಅಹ್ನಾಂ**—ದಿನಗಳಲ್ಲಿ । **ಅಭಿಪಿತ್ವೇ**—ಸನ್ನಿಹಿತವಾದ ಈದಿನ । **ಸನತ್**—(ತಂದೆಗೆ) ಅರ್ಪಿಸಿದೆನು (ಸ್ವೀಕರಿಸಿದೆನು).

॥ ಭಾವಾರ್ಥ ॥

ಸ್ವನಯರಾಜನು (ನನಗೆ) ಶ್ಯಾಮವರ್ಣದ ಅಶ್ವಗಳಿಂದ ಮತ್ತು ನನ್ನ ಪತ್ನಿಯರಿಂದ ಯುಕ್ತವಾದ ಹತ್ತು ರಥಗಳನ್ನೂ, ಒಂದುಸಾವಿರದರವತ್ತು ಗೋವುಗಳನ್ನೂ ಕೊಟ್ಟನು ; (ಅವುಗಳೆಲ್ಲವನ್ನೂ) ಈ ದಿನ (ನಿಮಗೆ ಅಂದರೆ ತಂದೆಗೆ) ನಾನು ಅರ್ಪಿಸಿದೆನು (ಸ್ವೀಕರಿಸಿದೆನು).

## English Translation.

Ten chariots drawn by bay steeds, and carrying my wives, stood near me, given me by Swanaya ; and a thousand and sixty cows followed : these, after a short interval of time, did Kakshivat deliver (to his father).

॥ ವಿಶೇಷವಿಷಯಗಳು ॥

**ಅಭಿಪಿತ್ವೇ—ಅಭಿಪಿತ್ವಶಬ್ದಃ ಆಸನ್ನಕಾಲವಾಚೀ ಪ್ರಪಿತ್ವಶಬ್ದಃ ಇತಿವತ್ । ಸ ಚ ಪ್ರಪಿತ್ವೇಽಭೀಕ ಇತ್ಯಾಸನ್ನಸ್ಯ ।** (ನಿ. ೩. ೨೦) **ಅಭಿಪಿತ್ವ, ಪ್ರಪಿತ್ವ** ಎಂಬ ಎರಡು ಶಬ್ದಗಳೂ ಸನ್ನಿಹಿತವಾದ, ಪ್ರಾಪ್ತವಾದ ಎಂಬ ಅರ್ಥವನ್ನು ಕೊಡುತ್ತವೆ. ನಿರುಕ್ತಕಾರರು **ಪ್ರಪಿತ್ವೇ** ಎಂಬ ಶಬ್ದಕ್ಕೆ **ಅಭೀಕೇ** (ಸನ್ನಿಹಿತ) ಎಂದರ್ಥ ಮಾಡಿರುವುದರಿಂದಲೂ **ಅಭಿಪಿತ್ವೇ** ಎಂಬ ಪದಕ್ಕೂ ಅದೇ ಅರ್ಥವಿರುವುದರಿಂದಲೂ ಸಹ ಇಲ್ಲಿ **ಅಭಿಪಿತ್ವೇ** ಎಂದರೆ ಸನ್ನಿಹಿತವಾದ ಎಂದರ್ಥ. **ಅಹ್ನಾಂ ಅಭಿಪಿತ್ವೇ** ಎಂದರೆ ಅನೇಕ ದಿನಗಳಮಧ್ಯೆ ಪ್ರಕೃತವಾದುದೂ, ಕಕ್ಷೀವಂತನು ತನ್ನ ತಂದೆಗೆ ಸ್ವನಯದತ್ತವಾದ ಉದಾರವಾದ ದಾನಗಳನ್ನು ಸಮರ್ಪಿಸಿದುದೂ ಆದ ದಿನವು ಪ್ರಾಪ್ತವಾಗಲು ಎಂದು ತಾತ್ಪರ್ಯ. ಆದರೆ **ಅಭಿಪಿತ್ವೇ ಅಹ್ನಾಂ** ಎನ್ನುವುದಕ್ಕೆ ಅಹಸ್ಸಿನ ಕೊನೆಯು ಪ್ರಾಪ್ತವಾಗಲು ಎಂದರೆ ಸಾಯಂಕಾಲದ ವೇಳೆಯಲ್ಲಿ ತಂದೆಗೆ ಸಮರ್ಪಿಸಿದನು ಎಂದೇಕೆ ಅರ್ಥವಾಗಬಾರದೆಂದು ಕೆಲವರ ಆಶಂಕೆ

ಯಾಗಿದೆ. **ಪ್ರಾತ ರತ್ನಂ ಪ್ರಾತಾರಿತ್ವಾ ದಧಾತಿ** । ಎಂದು ಪ್ರಾತಃಕಾಲದಲ್ಲಿ ಸ್ವನಯನಿಂದ ದತ್ತವಾದ ದಾನಗಳನ್ನು ಸಾಯಂಕಾಲದಲ್ಲಿ ಒಪ್ಪಿಸಿದನು ಎಂಬುದೂ ಕ್ರಮವಾಗಿದೆ. ಇದಕ್ಕೆ ಆಧಾರವೇನೆಂದು ಕೇಳಿದರೆ, **ಅಭಿಪಿತ್ವೇ** ಎಂಬ ಶಬ್ದಕ್ಕೇ ಸಾಯಣರು ಈ ಅರ್ಥವನ್ನು ಮಾಡಿರುತ್ತಾರೆ.

**ಆ ವಾಜಾ ಯಾತೋಪ ನ ಋಭುಕ್ಷಾ ಮಹೋ ನರೋ ದ್ರವಿಣಸೋ ಗೃಣಾನಾಃ ।**
**ಆ ವಃ ಪೀತಯೋಽಭಿಪಿತ್ವೇ ಅಹ್ನಾಮಿಮಾ ಅಸ್ತಂ ನವಸ್ವ ಇವ ಗ್ಮನ್ ॥**
(ಋ. ಸಂ. ೪-೩೪-೫)

ಎಂಬ ಋಕ್ಕಿನಲ್ಲಿ **ಅಭಿಪಿತ್ವೇ ಅಭಿಪತನೇ ಸಮಾಪ್ತೌ । ತೃತೀಯೇ ಸವನೇ** ॥ ತೃತೀಯ ಸವನದ ಕಾಲದಲ್ಲಿ ಎಂದರೆ ಸಾಯಂಕಾಲದ ವೇಳೆಯಲ್ಲಿ ಎಂದರ್ಥ ಮಾಡಿದ್ದಾರೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಇದೇ ಅರ್ಥವನ್ನು ಮಾಡಬಹುದೆಂದು ಕೆಲವರ ಮತ. ನಿರುಕ್ತದಲ್ಲೂ ಸಹ, ನಿರುಕ್ತಕಾರರು,

**ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ ।**
**ಕೋ ವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸಧಸ್ಥ ಆ ॥**
(ಋ. ಸಂ. ೧೦-೪೦-೨)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಅಭಿಪಿತ್ವಂ** ಎನ್ನುವುದಕ್ಕೆ **ಅಭಿಪ್ರಾಪ್ತಿಂ** । ಹೊಂದುವುದು, ಸನ್ನಿಹಿತವಾಗುವುದು, ಆಗಮಿಸುವುದು ಎಂಬರ್ಥವಾಗುವುದೆಂದು ತೋರಿಸಿದ್ದಾರೆ (ನಿ. ೩-೧೫). ಆದುದರಿಂದ ಪ್ರಾತಃಕಾಲದ ಅಭಿಪ್ರಾಪ್ತಿಯಾಗಬಹುದು. ಸಾಯಂಕಾಲದ ಅಭಿಪ್ರಾಪ್ತಿಯಾಗಬಹುದು.

ಇದರಲ್ಲಿ ಇನ್ನೊಂದು ಸಂಶಯಕ್ಕೂ ಅವಕಾಶವಿದೆ. **ಅಭಿಪಿತ್ವ, ಪ್ರಪಿತ್ವ** ಎಂಬ ಪದಗಳಲ್ಲಿ **ಪತ್** ಧಾತುವೇ ಅಥವಾ **ಆಪ್** ಧಾತುವೇ ಎಂಬ ವಿಷಯದಲ್ಲಿಯೂ ಚರ್ಚೆಯಿದೆ. Monier Williams ನ Dictionary ಯಲ್ಲಿ **ಅಭಿ+ಪತ್** ಎಂದು ನಿರ್ವಚನವನ್ನು ತೋರಿಸಿ Approaching, ಎಂಬ ಒಂದರ್ಥವನ್ನೂ, Close or departure of the day ಎಂದಿನ್ನೊಂದರ್ಥವನ್ನೂ ಮಾಡಿದೆ. ನಿರುಕ್ತದ ಪ್ರಕಾರ **ಅಭಿ+ಆಪ್** ಎಂಬ ನಿರ್ವಚನವಿರಬೇಕಾಗುತ್ತದೆ. ಸಾಯಣರು ಎರಡು ವಿಧವಾಗಿಯೂ ಈ ಪದಕ್ಕೆ ಅರ್ಥಮಾಡಿರುವುದರಿಂದ **ಪತ್** ಮತ್ತು **ಆಪ್** ಎಂಬ ಎರಡು ಧಾತುಗಳಿಂದಲೂ ಈ ಪದವು ನಿಷ್ಪನ್ನವಾಗಬಹುದೆಂದು ತೋರುತ್ತದೆ.

ಸಾಯಣರು ಹೇಳಿರುವಂತೆ (೧-೧೨೬-೩) **ಅಭಿಪಿತ್ವ** ಮತ್ತು **ಪ್ರಪಿತ್ವ** ಎಂಬ ಎರಡು ಪದಗಳಿಗೂ ತಾದಾತ್ಮ್ಯವನ್ನು ಹೇಳಲಾಗುವುದಿಲ್ಲವೆಂದೂ ಕೆಲವರ ಮತ. ಮತ್ತು **ಅಭಿಪಿತ್ವ** ಶಬ್ದಕ್ಕೂ ಇವರು ನಿಷ್ಕೃಷ್ಟವಾದ ಒಂದೇ ಅರ್ಥವನ್ನೂ ಹೇಳಿಲ್ಲ ಎಂದೂ ಸಹ ವಿಮರ್ಶಕರ ಅಭಿಪ್ರಾಯವಾಗಿದೆ. ಈ ಸಂದರ್ಭದಲ್ಲಿ Bloomfield ಎಂಬ ಪಂಡಿತನು ಮಾಡಿರುವ ವಿಮರ್ಶೆಯು ಗಮನಾರ್ಹವಾದುದು. ಅವನ ಪರಿಶೀಲನೆಯು ಈ ರೀತಿಯಿದೆ.

The first explanation of ಅಭಿಪಿತ್ವ occurs at Nir. III. 15; it is ಅಭಿಪ್ರಾಪ್ತಿ 'arrival', and so the word is explained by Sayana at R. V. I. 189·7;

IV. 16·1; VII. 18·9; VIII. 4·21; X. 40·2, Similarly at R. V. I. 186 1; ಅಭಿಪಿತ್ವೇಽಭಿಗಂತವ್ಯೇ ಯಜ್ಞೇ.

At I. 126·3, Sayana again exhibits his perplexity by making **ಅಭಿಪಿತ್ವೆ** the direct equivalent of **ಪ್ರಪಿತ್ವೆ**. And it would seem indeed that this perplexity drives him to extremes, since he translates **ಅಭಿಪಿತ್ವೆ** at R. V. IV. 34·5 by 'Evening' and in the same breath, as it were the word is rendered by 'forenoon' **ದಿವಸಸ್ಯಾಭಿಪತನೇ ಪ್ರಾತಃಕಾಲೇ।**

(Journal of American Oriental Society, Vol. XVI. P. 25–26).

ಈ ಅಭಿಪ್ರಾಯದ ಸಾರಾಂಶವೇನೆಂದರೆ, **ಅಭಿಪಿತ್ವ** ಮತ್ತು **ಪ್ರಪಿತ್ವ** ಶಬ್ದಗಳನ್ನು ಅರ್ಥಮಾಡುವಾಗ ಸಾಯಣರು ಕೊಂಚ ಭ್ರಾಂತರಾಗುತ್ತಾರೆ. ಉದಾಹರಣೆಗೆ ಋ. ಸಂ. ೪-೩೪-೫ ನೇ ಋಕ್ಕಿನಲ್ಲಿ (ಮೇಲೆ ಈ ಋಕ್ಕನ್ನುದಹರಿಸಿದೆ) ಈ ಪದಕ್ಕೆ ಸಾಯಂಕಾಲವೆಂದು ಅರ್ಥಮಾಡಿ ಅದೇ ಸಾಯಣರು,

**ನ ಸಂಸ್ಕೃತಂ ಪ್ರ ಮಿಮೀತೋ ಗಮಿಷ್ಠಾಂತಿ ನೂನಮಶ್ವಿನೋಪಸ್ತುತೇಹ ।**
**ದಿವಾಭಿಪಿತ್ವೇಽವಸಾಗಮಿಷ್ಠಾ ಪ್ರತ್ಯವರ್ತಿಂ ದಾಶುಷೇ ಶಂಭವಿಷ್ಠಾ ॥**

(ಋ. ಸಂ. ೫-೭೬-೨)

ಎಂಬ ಋಕ್ಕಿನಲ್ಲಿರುವ ಪದಕ್ಕೆ ಪ್ರಾತಃಕಾಲವೆಂದು ಅರ್ಥಮಾಡಿದ್ದಾರೆ, ಎಂಬುದೇ ಈ ವಿಮರ್ಶಕನ ಟೀಕೆ.

ಇದೇ ರೀತಿಯಲ್ಲಿ **ಅಪಪಿತ್ವ** ಮತ್ತು **ಸಪಿತ್ವ** ಎಂಬ ಪದಗಳೂ ಇವೆ. **ಪಿತ್ವ** ಪದದೊಡನೆ ಉಪಸರ್ಗಗಳು ಸೇರಿ ಈ ನಾಲ್ಕು ಪದಗಳ ನಿಷ್ಪತ್ತಿಗಳನ್ನೂ, ಸಂದರ್ಭಾನುಸಾರವಾದ ಅವುಗಳ ಅರ್ಥಗಳನ್ನೂ ಮುಂದಕ್ಕೆ ವಿವರಿಸಲಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ದತ್ತಾಃ**—ಡುದಾಞ್ ದಾನೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ದೋ ದದ್ಘೋಃ** (ಪಾ. ಸೂ. ೭-೪-೪೬) ಎಂಬುದರಿಂದ ಧಾತುವಿಗೆ ದಥ್ ಆದೇಶ. **ಖರಿ ಚ** ಎಂಬುದರಿಂದ ಚರ್ತ್ವ. ದತ್ತಃ ಎಂದು ರೂಪವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ವಧೂಮಂತಃ**—ವಧ್ವಃ ಯೇಷಾಂ ಸಂತಿ ಇತಿ ವಧೂಮಂತಃ. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ರಥಾಸಃ**—ರಥ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಅಸ್ಥುಃ**—ಷ್ಠಾ ಗತಿನಿವೃತ್ತೌ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಚ್ಲಿಗೆ ಸಿಚಾದೇಶ **ಗತಿಸ್ಥಾ ಸಿಚಾಘು—**(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲುಕ್. **ಆತಃ** (ಪಾ. ಸೂ. ೩-೪-೧೧೦) ಎಂಬುದರಿಂದ ಝಿಗೆ ಜುಸಾದೇಸ. **ಉಸ್ಯಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಗವ್ಯಮ್**—ಗವಾಂ ಸಮುದಾಯಃ ಗವ್ಯಮ್. ಸಮೂಹಾರ್ಥದಲ್ಲಿ **ಖಲಘೋರಥಾತ್** (ಪಾ. ಸೂ. ೪-೨-೫೦) ಎಂಬುದರಿಂದ ಯ ಪ್ರತ್ಯಯ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. **ವಾಂತೋ ಯಿ ಪ್ರತ್ಯಯೇ** ಎಂಬುದರಿಂದ ಅವಾದೇಶ.

**ಅಗಾತ್**—ಇಣ್ ಗತೌ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ **ಇಣೋ ಗಾ ಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಸನತ್**—ಷಣ ಸಂಭಕ್ತೌ. ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಲಙ್ ಪ್ರಥಮ ಪುರುಷ ಏಕವಚನಾಂತರೂಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. **ಅತಿಙಃ** ಎಂದು ನಿಷೇಧ ಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

**ಚತ್ವಾರಿಂಶದ್ದಶರಥಸ್ಯ ಶೋಣಾಃ ಸಹಸ್ರಸ್ಯಾಗ್ರೇ ಶ್ರೇಣಿಂ ನಯಂತಿ ।**
**ಮದಚ್ಯುತಃ ಕೃಶನಾವತೋ ಅತ್ಯಾನ್ಕಕ್ಷೀವಂತ ಉದಮೃಕ್ಷಂತ ಪಜ್ರಾಃ ॥ ೪ ॥**

॥ ಪದಪಾಠಃ ॥

**ಚತ್ವಾರಿಂಶತ್ । ದಶऽರಥಸ್ಯ । ಶೋಣಾಃ । ಸಹಸ್ರಸ್ಯ । ಅಗ್ರೇ । ಶ್ರೇಣಿಂ । ನಯಂತಿ ।**
**ಮದऽಚ್ಯುತಃ । ಕೃಶನऽವತಃ । ಅತ್ಯಾನ್ । ಕಕ್ಷೀವಂತಃ । ಉತ್ । ಅಮೃಕ್ಷಂತ । ಪಜ್ರಾಃ ॥ ೪ ॥**

॥ ಸಾಯಣಭಾಷ್ಯಂ ॥

**ದಶರಥಸ್ಯ ದಶಸಂಖ್ಯಾಕರಥವತಃ ಸಹಸ್ರಸ್ಯ ಸಹಸ್ರಸಂಖ್ಯಾಕಾನುಚರೋಪೇತಸ್ಯ ಕಕ್ಷೀವತೋ ಗೋಯೂಥಸಹಸ್ರಸ್ಯ ವಾಗ್ರೇ ಪುರಸ್ತಾತ್ ಶೋಣಾಃ ಶೋಣವರ್ಣೋಪೇತಾ ಅಶ್ವಾಶ್ಚತ್ವಾರಿಂಶತ್ ಏಕೈಕಸ್ಯ ರಥಸ್ಯ ಚತುಷ್ಟಯೇ ಸತಿ ದಶರಥಾನಾಂ ಮಿಲಿತ್ವಾ ಚತ್ವಾರಿಂಶದಶ್ವಾ ಭವಂತಿ । ತೇಽಪಿ ಶ್ರೇಣಿಂ ಪಂಕ್ತಿಮಾಶ್ರಿತ್ಯ ನಯಂತಿ । ರಥಾನಭಿಮತದೇಶಂ ಪ್ರಾಪಯಂತಿ । ಯದ್ವಾ । ಅಶ್ವನಿಯುಕ್ತಾನ್ ರಥಾನ್ ಶ್ರೇಣಿಂ ಶ್ರೇಣೀಭಾವಂ ನಯಂತಿ । ಪ್ರಾಪಯಂತಿ । ಏಕೈಕಂ ರಥಂ ಚತ್ವಾರಶ್ಚತ್ವಾರಃ ಪಂಕ್ತ್ಯಾಕಾರೇಣ ವಹಂತೀತ್ಯರ್ಥಃ । ಅಥ ತಾನ್ ಕಕ್ಷೀವಂತಃ । ಕಕ್ಷ್ಯಾ ಅಶ್ವಸಂಬಂಧಿನೀ ರಜ್ಜುಃ । ಕಕ್ಷ್ಯಾ ರಜ್ಜುರಶ್ವಸ್ಯೇತಿ ಯಾಸ್ಕೇನೋಕ್ತತ್ವಾತ್। ನಿ. ೨-೨। ತಾಭಿಸ್ತದ್ವಂತಃ। ಯದ್ವಾ। ಅಂಗಿರಸಃಪುತ್ರಾಃ ಸರ್ವೇಽಪಿಕಕ್ಷೀವಂತಃ। ಅಥವಾ ಕಕ್ಷೀವದನುಚರಾಃ ಸರ್ವೇಽಪಿ ಛತ್ರಿನ್ಯಾಯೇನ ಕಕ್ಷೀವಂತಃ । ಪಜ್ರಾ ಘಾಸಾದ್ಯನ್ನವಂತಃ ಸಂತೋ ಮದಚ್ಯುತೋ ಮದಸ್ರಾವಿಣ ಉದ್ಧೃತ್ಯಾನ್ ಶತ್ರೂಣಾಂ ಮದಸ್ಯ ಚ್ಯಾವಯಿತೄನ್ವಾ ಕೃಶನಾ- ವತಃ ಸುವರ್ಣಮಯನಾನಾಭರಣಯುಕ್ತಾನ್ । ಕೃಶನಮಿತಿ ಹಿರಣ್ಯನಾಮ ಕೃಶನಂ ಲೋಹಮಿತಿ ತನ್ನಾಮಸು ಪಾಠಾತ್ । ಸುವರ್ಣಾಭರಣೋಪೇತಾನತ್ಯಾನ್ ಸತತಗಮನಶೀಲಾನಶ್ವಾನುದಮೃಕ್ಷಂತ । ಅಧ್ವಶ್ರಮಜನಿತಸ್ವೇದಾಪನಯನಾಯೋತ್ಕೃಷ್ಟಂ ಮಾರ್ಜಯಂತಿ ॥**

॥ ಪ್ರತಿಪದಾರ್ಥ ॥

**ದಶರಥಸ್ಯ**—ಹತ್ತು ರಥಗಳಿಂದ ಯುಕ್ತನೂ । **ಸಹಸ್ರಸ್ಯ**—ಸಹಸ್ರಸಂಖ್ಯಾಕರಾದ (ಅನುಚರ ವಿಶಿಷ್ಟನೂ) ಅಥವಾ ಸಹಸ್ರ ಗೋವಿಶಿಷ್ಟನೂ (ಆದ ಕಕ್ಷೀವಂತನ) । **ಅಗ್ರೇ**—ಮುಂಭಾಗದಲ್ಲಿ । **ಶೋಣಾಃ**— ಮಾಸಲು ಕೆಂಪುಬಣ್ಣದ । **ಚತ್ವಾರಿಂಶತ್**—ನಲವತ್ತು (ಅಶ್ವಗಳು) । **ಶ್ರೇಣಿಂ**—ಸಾಲನ್ನು (ಹಿಡಿದು) । **ನಯಂತಿ**—(ರಥಗಳನ್ನು) ಎಳೆದುಕೊಂಡು ಹೋಗುತ್ತವೆ । (**ಅಥ**—ಅನಂತರ) । **ಕಕ್ಷೀವಂತಃ**—ಕಕ್ಷೀವಂತನ ಅನುಚರರು । **ಪ್ರಜಾಃ**—ಆಹಾರವಿಶಿಷ್ಟರಾಗಿ । (**ಕಕ್ಷೀವಂತಃ**—ರಜ್ಜು ಯುಕ್ತಗಳೂ) । **ಮದಚ್ಯುತಃ**— ಸುರಿಯುತ್ತಿರುವ ಮದೋದಕ ವಿಶಿಷ್ಟಗಳೂ । **ಕೃಶನಾವತಃ**—ಸುವರ್ಣಾಭರಣೋಪೇತಗಳೂ । **ಅತ್ಯಾನ್**— ಸರ್ವದಾ ಗಮನಸ್ವಭಾವದವುಗಳೂ (ಆದ ಅಶ್ವಗಳನ್ನು) । **ಉತ್ ಅಮೃಕ್ಷಂತ**—(ಅಂಗಾಂಗಗಳನ್ನು) ಚೆನ್ನಾಗಿ ಉಜ್ಜಿದರು.

॥ ಭಾವಾರ್ಥ ॥

ಸಹಸ್ರಾರು ಅನುಚರರೂ (ಗೋವುಗಳು) ಮತ್ತು ಹತ್ತು ರಥಗಳೂ ಉಳ್ಳ ಕಕ್ಷೀವಂತನ ಮುಂಭಾಗದಲ್ಲಿ ನಲವತ್ತು ಮಾಸಲುಗೆಂಪುಬಣ್ಣದ ಅಶ್ವಗಳು (ಆ ರಥಗಳನ್ನು) ಸಾಲಾಗಿ ಎಳೆದುಕೊಂಡು ಹೋಗುತ್ತವೆ; (ಅನಂತರ) ಹುಲ್ಲು ಮೊದಲಾದ ಆಹಾರಪದಾರ್ಥವಿಶಿಷ್ಟರಾಗಿ, ಅವನ ಅನುಚರರು, ಸುವರ್ಣಾಭರಣವಿಶಿಷ್ಟಗಳೂ, ಮತ್ತು ಗಮನಶೀಲಗಳೂ ಆದ, ಮದೋದಕವನ್ನು ಸುರಿಸುತ್ತಿರುವ ಅಶ್ವಗಳನ್ನು ಹಗ್ಗಗಳಿಂದ ಕಟ್ಟಿ, ಚೆನ್ನಾಗಿ ಉಜ್ಜುತ್ತಾರೆ.

## English Translation·

Forty bay horses, (harnessed) to the chariots, lead the procession in front of a thousand (followers). The Pajras, the kinsmen of Kakshivat, rub down the high-spirited steeds, decorated with golden trappings.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಗಳ ಸಂಖ್ಯೆಯನ್ನೂ ರಥಗಳ ಸಂಖ್ಯೆಯನ್ನೂ ಹೇಳಿದೆ.

**ಶತಮಶ್ವಾನ್ಪೀತಂ ನಿಷ್ಕಾನ್ ರಥಾನ್ ದಶ ವಧೂಮತಃ ।**
**ಚತುರ್ಯುಜೋ ಗವಾಂ ಚೈವ ಸಹಸ್ರಂ ಷಷ್ಟ್ಯಾಧಿಕಂ ।**

(ಬೃ, ದೇ. ೩-೧೪೯)

ಎಂದು ವರ್ಣಿಸಿರುವಂತೆ ದಶರಥಗಳೂ, ನೂರಾರು ಕುದುರೆಗಳೂ, ಸಾವಿರದರವತ್ತು ಗೋವುಗಳೂ ಕಕ್ಷೀವಂತನ ಮುಂದೆ ಕಂಗೊಳಿಸಿದವು ಎಂದು ವಿವರಿಸಿದೆ.

**ಪ್ರಜಾಃ**— ಈ ಪದದ ಅರ್ಥವನ್ನು ಇದರ ಮುಂದಿನ ಋಕ್ಕಿನಲ್ಲಿ ವಿವರಿಸಲಾಗುತ್ತದೆ.

**ಕಕ್ಷೀವಂತಃ**— ಈ ಪದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದೆ. ಮೊದಲನೆಯದಾಗಿ **ಕಕ್ಷ್ಯಾ ರಜ್ಜುರಶ್ವಸ್ಯ** (ನಿ. ೨-೨) ಕುದುರೆಯ ಹಗ್ಗಕ್ಕೆ (ಕಡಿವಾಣ) ಕಕ್ಷ್ಯೆಯೆಂಬ ಹೆಸರೆಂದು ನಿರುಕ್ತಕಾರರ ನಿರ್ವಚನವನ್ನನುಸರಿಸಿದರೆ ಅಶ್ವಗಳನ್ನು ಹಿಡಿದಿರುವ ಕಕ್ಷೀವಂತನ ಅನುಚರರು ಎಂದರ್ಥವಾಗುತ್ತದೆ. ಎರಡನೆಯದಾಗಿ ಅಂಗಿರಾ ಋಷಿಯ ಪುತ್ರರೆಲ್ಲರೂ ಈ ಹೆಸರಿನಿಂದ ಕರೆಯಲ್ಪಡುವುದರಿಂದ ಅಂಗಿರಸ್ಸಿನ ಪುತ್ರರೆಂದರ್ಥವಾಗುತ್ತದೆ. ದೀರ್ಘತಮಸ್ಸಿನ ಪುತ್ರನಿಗೂ ಸಹ ಈ ಕಾರಣದಿಂದಲೇ (ಅಶ್ವದ ರಜ್ಜುವಿನೊಡನೆ ಕೂಡಿದ ಎಂದರೆ ಅಶ್ವಯುಕ್ತನಾದ) ಈ ಹೆಸರು ಪ್ರಸಿದ್ಧವಾಗಿದೆಯೆಂದು,

**ತ್ಯಂ ಚಿದತ್ರಿಮೃತಜುರಮರ್ಥಮಶ್ವಂ ನ ಯಾತವೇ ।**
**ಕಕ್ಷೀವಂತಂ ಯದೀ ಪುನಾ ರಥಂ ನ ಕೃಣುಥೋ ನವಂ ।**

(ಋ ಸಂ. ೧೦-೧೪೩-೧)

ಎಂಬ ಋಕ್ಕನ್ನು ವಿವರಿಸುವಾಗ ಸಾಯಣರು ತಿಳಿಸಿದ್ದಾರೆ. ಇಲ್ಲಿ **ಕಕ್ಷೀವಂತನು** ಎಂಬ ಪದಕ್ಕೆ **ಕಕ್ಷ್ಯಾ ರಜ್ಜುರಶ್ವಸ್ಯ ತದ್ವಂತಂ । ದೀರ್ಘತಮಸಃ ಪುತ್ರಂ ಉಶಿಕ್ಸೂತಮೃಷಿಂ ।**
ಎಂದು ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಕಕ್ಷೀವಂತನ ಅನುಚರರೆಂಬ ಅರ್ಥವು ಸಮಂಜಸವಾಗಿದೆ.

**ಕೃಶನಾವತಃ—ಕೃಶನ** ಶಬ್ದವು **ಹಿರಣ್ಯ**ನಾಮಗಳಲ್ಲಿಯೂ (೨-೧೦) ಮತ್ತು **ರೂಪ**ನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ. ಆದುದರಿಂದ ಸುವರ್ಣಾಭರಣಗಳಿಂದ ಯುಕ್ತವಾದವೆಂದಾಗಲಿ ಅಥವಾ ಸುಂದರವಾದ ರೂಪಗಳುಳ್ಳವೆಂದಾಗಲಿ ಅರ್ಥಮಾಡಬಹುದು. ಆದರೆ ಸುವರ್ಣಾಭರಣಗಳಿಂದ ಕೂಡಿದುದು ಎಂಬರ್ಥದಲ್ಲಿಯೇ ಈ ಪದದ ಪ್ರಯೋಗವು ಅಧಿಕವಾಗಿದೆ.

**ಅತ್ಯಾನ್— ಸತತಗಮನಶೀಲಾನಶ್ವಾನ್** । ಅವಿಚ್ಛಿನ್ನವಾಗಿ ಸಂಚರಿಸುವ ಸ್ವಭಾವವುಳ್ಳ ಕುದುರೆಗಳನ್ನು,

॥ ವ್ಯಾಕರಣಪ್ರಕ್ರಿಯಾ ॥

**ದಶರಥಸ್ಯ**—ದಶ ರಥಾ ಯಸ್ಯ ಸಃ ದಶರಥಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ನಯಂತಿ**—ಣೀಞ್ ಪ್ರಾಪಣೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಮದಚ್ಯುತಃ**—ಮದಂ ಚ್ಯೋತಯಂತಿ ಇತಿ ಮದಚ್ಯುತಃ. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್‌ಪ್ರತ್ಯಯ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಕೃಶನವತಃ**—ಕೃಶನಾನಿ ಹಿರಣ್ಯಾನಿ ಯೇಷಾಂ ಸಂತಿ ಇತಿ ಕೃಶನವಂತಃ. **ತದಸ್ಯಾಸ್ತಿ**—ಸೂತ್ರದಿಂದ ಮತುಪ್‌ಪ್ರತ್ಯಯ. **ಮಾದುಪಧಾಯಾಶ್ಚ**—ಎಂಬುದರಿಂದ ಮಕಾರಕ್ಕೆ ವತ್ವ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. **ಅನ್ಯೇಷಾಮಪಿದೃಶ್ಯತೇ** ಎಂಬುದರಿಂದ ಪ್ರತ್ಯಯಪೂರ್ವಕ್ಕೆ ಸಂಹಿತಾದಲ್ಲಿ ದೀರ್ಘ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಕಕ್ಷೀವಂತಃ**—ಕಕ್ಷೇ ಭವಾ ಕಕ್ಷ್ಯಾ. ಕುದುರೆಯ ಉದರಸಂಬಂಧವಾದ ಒಂದು ಹಗ್ಗ. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯ ಪ್ರತ್ಯಯ. ಕಕ್ಷ್ಯಾ ಅಸ್ಯ ಅಸ್ತಿ ಎಂದು ಅರ್ಥ ವಿವಕ್ಷಾಮಾಡಿದಾಗ **ಆಸಂದೀವದಷ್ಠೀವತ್**—(ಪಾ ಸೂ. ೮-೨-೧೨) ಎಂಬುದರಿಂದ ಕಕ್ಷೀವತ್ ಶಬ್ದವು ಋಷಿವಿಶೇಷಾರ್ಥದಲ್ಲಿ ನಿಪಾತಿತವಾಗಿದೆ. ಯ ಪ್ರತ್ಯಯಸ್ವರದಿಂದ ಅದರ ಆದೇಶವಾಗಿ ನಿಪಾತಿತವಾದ ಈಕಾರವು ಉದಾತ್ತನಾಗುತ್ತದೆ. ಮತುಪ್ ಸುಪ್. ಪಿತ್ತಾದುದರಿಂದ ಅನುದಾತ್ತವಾಗುತ್ತವೆ.

**ಅಮೃಕ್ಷಂತ**—ಮೃಜೂಷ್ ಶುದ್ಧೌ. ಧಾತು. ಪ್ರಯೋಜಕವ್ಯಾಪಾರವು ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. **ಛಂದಸಿ ಲುಙ್**—ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್ ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ. ಚ್ಲಿಗೆ ಸಿಚ್. **ವ್ರಶ್ಚಭ್ರಸ್ಜ**—ಎಂಬುದರಿಂದ ಜಕಾರಕ್ಕೆ ಷತ್ವ. **ಷಢೋಃಕಃ ಸಿ** ಎಂಬುದರಿಂದ ಅದಕ್ಕೆ ಕತ್ವ ಅದನ್ನು ನಿಮಿತ್ತೀಕರಿಸಿ ಸಿಚಿನ ಸಕಾರಕ್ಕೆ ಷತ್ವ. ಅಂಗಕ್ಕೆ ಅಡಾಗಮ. ತಿಙಂತ ನಿಘಾತಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಪೂರ್ವಾಮನು ಪ್ರಯತಿಮಾದದೇ ವಸ್ತ್ರೀನ್ಯುಕ್ತಾ ಅಷ್ಟಾವರಿಧಾಯಸೋ
ಗಾಃ ।
ಸುಬಂಧವೋ ಯೇ ವಿಶ್ಯಾ ಇವ ವ್ರಾ ಅನಸ್ವಂತಃ ಶ್ರವ ಐಷಂತ
ಪಜ್ರಾಃ ॥ ೫ ॥

॥ ಪದಪಾಠಃ ॥

ಪೂರ್ವಾಂ । ಅನು । ಪ್ರಽಯತಿಂ । ಆ । ದದೇ । ವಃ । ತ್ರೀನ್ । ಯುಕ್ತಾನ್ । ಅಷ್ಟೌ ।
ಅರಿಽಧಾಯಸಃ । ಗಾಃ ।

ಸುಽಬಂಧವಃ । ಯೇ । ವಿಶ್ಯಾಃಽಇವ । ವ್ರಾಃ । ಅನಸ್ವಂತಃ । ಶ್ರವಃ । ಐಷಂತ । ಪಜ್ರಾಃ ॥ ೫ ॥

॥ ಸಾಯಣಭಾಷ್ಯಂ ॥

ಇದಾನೀಮಾನೀತಂ ಧನಂ ಬಂಧುಭ್ಯೋ ನಿವೇದಯನ್ನಾಹ । ಹೇ ಸುಬಂಧವಃ ಪೂರ್ವಾಂ ಪ್ರಯತಿಂ ಪೂರ್ವಪ್ರದಾನಮನು ತಮನುಸೃತ್ಯ ವಕ್ಷ್ಯಮಾಣಾನಿ ರಥಾದೀನಿ ವೋ ಯುಷ್ಮದರ್ಥಮಾದದೇ । ಸ್ವೀಕೃತವಾನಸ್ಮಿ । ಯದ್ವಾ । ಪೂರ್ವಾಂ ಪ್ರಯತಿಂ ಪ್ರದೇಯಂ ರಥಾದಿಕಮನು ದಾನಕ್ರಮೇಣೈವಾದದೇ । ಪ್ರತಿಗೃಹೀತವಾನಸ್ಮಿ । ಕಾನಿ ತಾನೀತಿ । ತ್ರೀನಷ್ಟೌ ಚ ಯುಕ್ತಾನ್ ಚತುರ್ಭಿಶ್ಚತುರ್ಭಿರಶ್ವೈರ್ಧನೈರ್ವಾ ಯುಕ್ತಾನ್ ರಥಾನಿತಿ ಶೇಷಃ । ಅತ್ರ ಸಂಖ್ಯಾಪೃಥಙ್ನಿರ್ದೇಶೋ ನ ವಿವಕ್ಷಿತಃ । ತಥಾರಿಧಾಯಸೋಽರಿಭಿರೀಶ್ವರೈರ್ಧಾರಣೀಯಾ ಬಹುಮೂಲ್ಯಾ ಅಸಂಖ್ಯಾತಾ ಗಾಶ್ಚಾದದೇ । ಅತ್ರ ವಕ್ಷ್ಯಮಾಣಾನಿ ಪೂರ್ವಂ ಪ್ರತಿಗೃಹೀತಾದಧಿಕಾನೀತಿ ಯುಕ್ತಂ । ಪೂರ್ವಮೇವ ಪಿತ್ರೇ ನಿವೇದಿತಾನಾಂ ಪುನರ್ಬಂಧುಭ್ಯೋ ನಿವೇದನಾಸಂಭವಾತ್ ವಧೂಮಂತೋ ದಶ ರಥಾಸೋ ಅಸ್ಥುರಿತಿ ದಶಾನಾಂ ರಥಾನಾಮುಕ್ತತ್ವಾದತ್ರ ಚ ತ್ರೀನಷ್ಟಾವಿತ್ಯೇಕಾದಶಾನಾಂ ವಕ್ಷ್ಯಮಾಣತ್ವಾದ್ವಧೂವಿಶಿಷ್ಟಾನಾಮನ್ಯೇಭ್ಯೋ ದಾತುಮನುಚಿತತ್ವಾಚ್ಚಾನ್ಯಾನೀತಿ ಯುಕ್ತಂ । ಉಕ್ತಾನಾಮೇವಾನುವದನಪಕ್ಷೇ ದಶ ವಧೂಯುಕ್ತಾ ರಥಾ ಏಕೋ ಧನಪೂರ್ಣ ಇತಿ ವಿವೇಕಃ । ಉಕ್ತಾನಾಮೇವ ರಥಾದೀನಾಂ ಪುನರಭಿಧಾನಂ ಪ್ರಕೃಷ್ಟತ್ವಜ್ಞಾಪನಾರ್ಥಂ ಸರ್ವೇ ಬ್ರಾಹ್ಮಣಾ ಆಗತಾ ವಸಿಷ್ಠಶ್ಚಾಗತ ಇತಿವತ್ । ಇದಾನೀಂ ಪರೋಕ್ಷೇಣಾಹ । ಸುಬಂಧವಃ ಶೋಭನಾ ವಿದ್ಯಾಯೋನಿಸಂಬಂಧಿನೋ ಯೇಷಾಂ ತೇ ತಥೋಕ್ತಾಃ । ಯದ್ವಾ । ಶೋಭನಬಾಂಧವೋಪೇತಾಃ ಪರಸ್ಪರಮನುರಾಗಯುಕ್ತಾ ಇತ್ಯರ್ಥಃ । ವಿಶಃ ಪ್ರಜಾಃ । ತತ್ರ ಭವಾ ವಿಶ್ಯಾಃ । ವ್ರಿಯಂತ ಇತಿ ವಾ ವ್ರಾತಾಃ ॥ ತಕಾರಲೋಪಶ್ಛಾಂದಸಃ ॥ ವಿಶಾಂ ವ್ರಾತಾ ಯಥಾ ಪರಸ್ಪರಮನುರಾಗವಂತಸ್ತಥೈತೇಽಪೀತ್ಯರ್ಥಃ । ಪಜ್ರಾ ಅನ್ನವಂತೋಽಂಗಿರಸಃ ಸಂತಾನಪ್ರಭವಾ ಯೇ ಸಂತಿ ತೇ ಸರ್ವೇ ಸುಬಂಧವೋಽನಸ್ವಂತಃ ಶಕಟವಂತೋ ಹವಿರ್ಧಾನಶಕಟೋಪಲಕ್ಷಿತಸೋಮಯಾಗವಂತಃ ಸಂತಃ ಶ್ರವಃ ಸರ್ವತ್ರ ಶ್ರೂಯಮಾಣಾಂ ಕೀರ್ತಿಮೈಷಂತ । ಇಚ್ಛಂತಿ ಇಚ್ಛಂತು ವಾ । ತದರ್ಥಮಾ ದದ ಇತಿ ಶೇಷಃ ॥

॥ ಪ್ರತಿಪದಾರ್ಥ ॥

ಹೇ ಸುಬಂಧವಃ ಎಲೈ ಬಾಂಧವರೇ । ಪೂರ್ವಾಂ—ಪೂರ್ವದಲ್ಲಿ ಉಕ್ತವಾದ । ಪ್ರಯತಿಂ ಅನು—ದಾನವನ್ನನುಸರಿಸಿ (ದಾನದ ಕ್ರಮವನ್ನನುಸರಿಸಿಯೇ) । ತ್ರೀನ್ ಅಷ್ಟೌ (ಚ)—ಹನ್ನೊಂದು । ಯುಕ್ತಾನ್—(ಅಶ್ವಗಳಿಂದ ಅಥವಾ ಧನದಿಂದ) ಯುಕ್ತವಾದ (ರಥಗಳನ್ನೂ) । ಅರಿಧಾಯಸಃ—ಅಧೀಶ್ವರರು

ಗಳಿಂದ ಧರಿಸಲು (ಉಪಯೋಗಿಸಲ್ಪಡಲು) ಅರ್ಹವಾದ (ಅಸಂಖ್ಯಾತವೂ ಅಮೂಲ್ಯವೂ ಆದ) | **ಗಾಃ (ಚ)**— ಗೋವುಗಳನ್ನೂ | **ವಃ**—ನಿಮಗೋಸ್ಕರವಾಗಿ | **ಆ ದದೇ**—ಸ್ವೀಕರಿಸಿದೆನು | **ಯೇ ಪಜ್ರಾಃ**—ಯಾವ ಅಶ್ವ ವಿಶಿಷ್ಟರಾದ) ಅಂಗಿರಸರೆಂಬುವರು | (**ಸುಬಂಧವಃ**—ಒಳ್ಳೆಯ ಬಾಂಧವ್ಯ ವಿಶಿಷ್ಟರೂ | **ವ್ರಾಃ**—ಒಂದು ಪಂಗಡ ದಲ್ಲಿರುವ | **ವಿಶ್ಯಾಃ ಇವ**—ಪ್ರಜೆಗಳಂತೆ ಪರಸ್ಪರಾನುರಾಗಿಗಳೂ (ಆಗಿದಾರೆಯೋ ಆ) | (**ಸುಬಂಧವಃ**— ಆ ನನ್ನ ಬಾಂಧವರೆಲ್ಲರೂ) | **ಅನಸ್ವಂತಃ**—ಶಕಟ ವಿಶಿಷ್ಟರಾಗಿ (ಸೋಮಯಾಗಕ್ಕೆ ಉಪಯುಕ್ತವಾದ ಹವಿರಾದಿ ಗಳನ್ನಿಡುವ ಶಕಟಗಳುಳ್ಳವರಾಗಿ) | **ಶ್ರವಃ**—(ಸರ್ವತಃ ಶ್ರೂಯಮಾಣವಾದ) ಕೀರ್ತಿಯನ್ನು | **ಐಷಂತ**— ಇಚ್ಛಿಸುತ್ತಾರೆ (ಇಚ್ಛಿಸಲಿ).

|| ಭಾವಾರ್ಥ ||

ಎಲೈ ಬಾಂಧವರೇ, ನಿಮಗೋಸ್ಕರ, ನಾನು, ರಾಜರುಗಳಿಗೆ ಯೋಗ್ಯವಾದ ಗೋವುಗಳು, ಅಶ್ವ (ಧನ) ವಿಶಿಷ್ಟವಾದ ಹನ್ನೊಂದು ರಥಗಳು, ಈ ರೂಪವಾದ, ಪೂರ್ವದಲ್ಲಿ ಉಕ್ತವಾದ ದಾನವನ್ನು ಸ್ವೀಕರಿಸಿದೆನು: (ಈ ಪದಾರ್ಥಗಳನ್ನು ಸ್ವೀಕರಿಸಿ) ನನ್ನ ಬಾಂಧವರೆಲ್ಲರೂ, ಪರಸ್ಪರಾನುರಾಗವುಳ್ಳವರಾಗಿ, ಸೋಮಯಾಗಗಳನ್ನು ಮಾಡಿ, ಕೀರ್ತಿಯನ್ನು ಗಳಿಸಲಿ.

## English Translation

I have accepted a prior grant, (kinsmen), for you: three and eight harnessed chariots and cattle of incalculable value: may the kindred Pajras, like well-disposed relations, be desirous of acqiring renown by their abundant offerings.

|| ವಿಶೇಷವಿಷಯಗಳು ||

**ಅರಿಧಾಯಸಃ—ಅರಿಭಿರೀಶ್ವರೈರ್ಧರಣೀಯಾಃ ಬಹುಮೂಲ್ಯಾಃ ಅಸಂಖ್ಯಾತಾಃ |** ಈಶ್ವರರು ಎಂದರೆ ಶ್ರೀಮಂತರಿಂದ ಹೊಂದಲ್ಪಡಲು ಯೋಗ್ಯವಾದವೂ ಬಹಳ ಬೆಲೆಯುಳ್ಳವೂ ಅಸಂಖ್ಯಾತವಾದವೂ ಆದ ಎಂದು ಗೋವುಗಳಿಗೆ ವಿಶೇಷಣವಾಗಿವೆ. **ಅರಿ** ಶಬ್ದಕ್ಕೆ ಒಡೆಯನೆಂಬರ್ಥವು ಹೇಗೆ ಬಂದಿತೆಂಬುದನ್ನು ನಿರುಕ್ತಕಾರರು ಈ ರೀತಿ ವಿವರಿಸಿದ್ದಾರೆ. **ಅರಿರಮಿತ್ರ ಋಚ್ಛತೇಃ | ಈಶ್ವರೋಽಪ್ಯರಿರೇತಸ್ಮಾದೇವ |** (ನಿ. ೫-೭) ಹಿಂಸಾರ್ಥಕವಾದ **ಋ** ಧಾತುವಿನಿಂದ ನಿಷ್ಪನ್ನವಾದ **ಅರಿ**ಯೆಂಬ ಪದಕ್ಕೆ **ಅಮಿತ್ರ**ನೆಂದರ್ಥವಾಗುವಂತೆಯೇ ಸೇವಕನ ಮೇಲೆ ಅಧಿಕಾರವನ್ನು ಮಾಡತಕ್ಕ ಯಜಮಾನನಿಗೂ **ಅರಿ**ಯೆಂದು ಹೆಸರು. ನಿರುಕ್ತಕಾರರು,

**ಪುರು ತ್ವಾ ದಾಶ್ವಾನ್ವೋಚೇಽರಿರಗ್ನೇ ತವ ಸ್ವಿದಾ | ತೋದಸ್ಯೇವ ಶರಣ ಆ ಮಹಸ್ಯ ||**

(ಋ. ಸಂ. ೧-೧೫೦-೧)

ಎಂಬ ಋಕ್ಕನ್ನುದಹರಿಸಿ **ಅರಿ** ಶಬ್ದಕ್ಕೆ ಈಶ್ವರನೆಂದರ್ಥವೆಂದು ಹೇಳಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವಾಗುತ್ತದೆ. ಅಂದರೆ ಅಮೂಲ್ಯವಾದ ಗೋವುಗಳನ್ನು ಹೊಂದಿರಲು ಯೋಗ್ಯವಾದ ಶ್ರೀಮಂತನೆಂದು ತಾತ್ಪರ್ಯ.

**ಪಜ್ರಾಃ**—**ಪಜ್ರ** ಶಬ್ದವು ಹಿಂದಿನ ಋಕ್ಕಿನಲ್ಲಿಯೂ, ಈ ಋಕ್ಕಿನಲ್ಲಿಯೂ ಒಂದೇ ಅರ್ಥವನ್ನು ಕೊಡುತ್ತದೆ. ಇಲ್ಲಿ **ಪಜ್ರ**ರೆಂದರೆ ಅಂಗಿರಸ್ಸುಗಳೆಂದು ತಾತ್ಪರ್ಯವಾದರೂ ಸಹ ಪ್ರಭೂತವಾದ ಅನ್ನವುಳ್ಳವರೆಂಬರ್ಥದಲ್ಲಿ ಈ ಪದದ ಪ್ರಯೋಗವಿದೆ. ಹಿಂದಿನ ಋಕ್ಕಿನಲ್ಲಿ ಈ ಪದಕ್ಕೆ **ಘಾಸಾಖ್ಯನ್ನವಂತಃ ಸಂತಃ** । ಅನ್ನವುಳ್ಳವರಾದ ಎಂದರ್ಥವಾಗುವಂತೆ ಈ ಋಕ್ಕಿನಲ್ಲಿಯೂ ಸಹ **ಅನ್ನವಂತೋಽಂಗಿರಸಃ** । ಪ್ರಭೂತವಾದ ಅನ್ನವುಳ್ಳ ಅಂಗಿರಸ್ಸುಗಳು ಎಂದರ್ಥಮಾಡಿದ್ದಾರೆ. ನಿರುಕ್ತಕಾರರು,

**ಯ ಇಂದ್ರಾಗ್ನೀ ಸುತೇಷು ವಾಂ ಸ್ತವತ್ತೇಷ್ಟೃತಾವೃಧಾ ।**
**ಜೋಷವಾಕಂ ವದತಃ ಪಜ್ರಹೋಷಿಣಾ ನ ದೇವಾ ಭಸಥಶ್ಚನ ॥**
(ಋ. ಸಂ. ೬-೫೯-೪)

ಎಂಬ ಋಕ್ಕಿನಲ್ಲಿಯೂ **ಪಜ್ರಹೋಷಿಣಾ** ಎಂಬ ಪದಕ್ಕೆ **ಪ್ರಾರ್ಜಿತಹೋಷಿಣೌ** ಎಂದರ್ಥಮಾಡಿದ್ದಾರೆ. ಇದಕ್ಕೆ ದುರ್ಗಾಚಾರ್ಯರು **ಪ್ರಭೂತಯಾಗೌ** । ಎಂದು ವಿವರಿಸಿದ್ದಾರೆ. **ಪಜ್ರ**ವೆನ್ನುವುದಕ್ಕೆ ಅಂಗಿರಸ್ಸುಗಳ ಸಂತತಿಯವರೆಂದಾದರೂ ಸಹ ಪ್ರಭೂತವಾದ ಸಂಪತ್ತುಳ್ಳವರೆಂದೇ ತಾತ್ಪರ್ಯ. **ಪಜ್ರ** ಸಂತತಿಯು ಋಕ್ಸಂಹಿತೆಯಲ್ಲಿ ಪ್ರಸಿದ್ಧವಾದ ಹೆಸರಾಗಿದೆ.

**ಏತಾನಿ ವಾಂ ಶ್ರವಸ್ಯಾ ಸುದಾನೂ ಬ್ರಹ್ಮಾಂಗೂಷಂ ಸದನಂ ರೋದಸ್ಯೋಃ ।**
**ಯದ್ವಾಂ ಪಜ್ರಾಸೋ ಅಶ್ವಿನಾ ಹವಂತೇ ಯಾತಮಿಷಾ ಚ ವಿದುಷೇ ಚ ವಾಜಂ ॥**
(ಋ. ಸಂ. ೧-೧೧೬-೧೦)

ಇತ್ಯಾದಿ ಋಕ್ಕುಗಳಲ್ಲಿ **ಪಜ್ರ** ಸಂತತಿಯ ಹೆಸರು ಪ್ರಶಂಸಿಸಲ್ಪಟ್ಟಿದೆ. ಇದೇ ಸಂತತಿಯಲ್ಲಿ ಹುಟ್ಟಿದುದರಿಂದ ಕಕ್ಷೀವಂತನಿಗೂ ಸಹ **ಪಜ್ರಿಯ**ನೆಂದೇ ಹೆಸರಾಗಿದೆ.

**ಪ್ರ ಯಾ ಘೋಷೇ ಭೃಗವಾಣೇ ನ ಶೋಭೇ ಯಯಾ ವಾಚಾ ಯಜತಿ ಪಜ್ರಿಯೋ ವಾಂ ।**
**ಪ್ರೈಷಯುರ್ನ ವಿದ್ವಾನ್ ॥**
(ಋ. ಸಂ. ೧-೧೨೦-೫)

ಎಂಬ ಋಕ್ಕಿನಲ್ಲಿ **ಪಜ್ರಿಯಃ** ಎಂಬುದಕ್ಕೆ **ಪಜ್ರಾ ಅಂಗಿರಸಃ ತೇಷಾಂ ಕುಲೋತ್ಪನ್ನಃ ಕಕ್ಷೀವಾನ್** । ಎಂದು ವಿವರಿಸಿದೆ.

**ಸ್ತುಷೇ ಸಾ ವಾಂ ವರುಣ ಮಿತ್ರ ರಾತಿರ್ಗವಾಂ ಶತಾ ಪೃಕ್ಷಯಾಮೇಷು ಪಜ್ರೇ ।**
**ಶ್ರುತರಥೇ ಪ್ರಿಯರಥೇ ದಧಾನಾಃ ಸದ್ಯಃ ಪುಷ್ಟಿಂ ನಿರುಂಧಾನಾಸೋ ಅಗ್ಮನ್ ॥**
(ಋ. ಸಂ ೧-೧೨೨-೭)

ಎಂಬಲ್ಲಿಯೂ ಸಹ **ಕಕ್ಷೀವಂತ**ನು ತಾನು **ಪಜ್ರ** ಸಂತತಿಗೆ ಸೇರಿದವನೆಂದೂ ಮತ್ತು ಪ್ರಭೂತವಾದ ಅನ್ನದಾನಾದಿಗಳುಳ್ಳ ಯೋಗನಿರ್ವಹಣೆಯಲ್ಲಿ ತಾನು ಶಕ್ತನೆಂದೂ ಹೇಳಿಕೊಂಡಿದ್ದಾನೆ. ಇದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಪಜ್ರಾಃ** ಎನ್ನುವುದಕ್ಕೆ **ಅನ್ನವಂತಃ ಅಂಗಿರಸಃ** ಎಂದರ್ಥಮಾಡಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪ್ರಮತಿಮ್**—ಯಮ ಉಪರಮೇ. ಧಾತು. ಕ್ತಿನ್ ಪ್ರತ್ಯಯ. **ಅನುದಾತ್ತೋಪದೇಶ**—ಎಂಬುದರಿಂದ ಧಾತುವಿನ ಅನುನಾಸಿಕ ಮಕಾರಕ್ಕೆ ಲೋಪ. ಪ್ರಾದಿಸಮಾಸದಲ್ಲಿ **ತಾದೌ ಚ ನಿತಿ**—(ಪಾ. ಸೂ. ೬-೨-೫೦) ಎಂಬುದರಿಂದ ಕೃದುತ್ತರಪದ ಸ್ವರಕ್ಕೆ ಅಪವಾದವಾಗಿ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತ ರೂಪ.

**ದದೇ**—ಡುದಾಞ್ ದಾನೇ ಧಾತು. ಲಿಟ್ ಉತ್ತಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯುಕ್ತಾನ್**—ಯುಜಿರ್ ಯೋಗೇ ಧಾತು. **ನಿಷ್ಠಾ**—ಎಂಬುದರಿಂದ ಕ್ತ ಪ್ರತ್ಯಯ. **ಚೋಃಕುಃ**—ಎಂಬುದರಿಂದ ಧಾತು ಜಕಾರಕ್ಕೆ ಕುತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಅರಿಧಾಯಸಃ**—ಅರಿಭಿಃ ಧರಣೀಯಾಃ ಅರಿಧಾಯಸಃ ತಾನ್. ಡುಧಾಞ್ ಧಾರಣಪೋಷಣಯೋಃ ಧಾತು. **ವಹಿಹಾಧಾಞ್ಭ್ಯಶ್ಛಂದಸಿ**—(ಉ. ಸೂ. ೪-೬೭೦) ಎಂಬುದರಿಂದ ಅಸುನ್ ಪ್ರತ್ಯಯ. ಪೂರ್ವಸೂತ್ರದಿಂದ ಣಿತ್ ಎಂದು ಅನುವೃತ್ತವಾಗುವುದರಿಂದ **ಆತೋ ಯುಕ್ ಚಿಣ್ ಕೃತೋಃ**—(ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಧಾಯಸ್ ಶಬ್ದವಾಗುತ್ತದೆ.

**ಸುಬಂಧವಃ**—ಶೋಭನಾಃ ಬಂಧವಃ ಯೇಷಾಂ ತೇ ಸುಬಂಧವಃ, **ನಞ್ಸುಭ್ಯಾಮ್**—ಎಂಬುದರಿಂದ ಅಂತೋದಾತ್ತಸ್ವರ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ **ಬಹುವ್ರೀಹೌ ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯)ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತ ರೂಪ.

**ವಿಶ್ಯಾಃ**—ವಿಟ್ಸು ಭವಾಃ ವಿಶ್ಯಾಃ ಭವಾರ್ಥದಲ್ಲಿ ಯತ್‌ಪ್ರತ್ಯಯ. **ತಿತ್ ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ವ್ರಾಃ**—ವ್ರಿಯಂತೇ ಇತಿ ವ್ರಾಃ. ವ್ರಾತಾಃ—ಛಾಂದಸವಾಗಿ ತಕಾರಲೋಪ ಬರುತ್ತದೆ. ಅಥವಾ **ಘಞರ್ಥೇ ಕವಿಧಾನಮ್** ಎಂಬ ವಚನದಿಂದ ಕ ಪ್ರತ್ಯಯ

**ಅನಸ್ವಂತಃ**—ಅನಃ ಎಂದರೆ ಗಾಡಿ. ಅನಾಂಸಿ ಯೇಷಾಂ ಸಂತಿ ಇತಿ ಅನಸ್ವಂತಃ. **ಮಾದುಪಧಾಯಾಶ್ಚ**—ಎಂಬುದರಿಂದ ಅದುಪಧೆಯ ಪರವಾದುದರಿಂದ ಮತುಪಿನ ಮಕಾರಕ್ಕೆ ವತ್ವ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಐಷಂತ** – ಇಷು ಇಚ್ಛಾಯಾಂ ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಙ್ ವರ್ತಮಾನಾರ್ಥದಲ್ಲಿ ಬರುತ್ತದೆ. ವ್ಯತ್ಯಯದಿಂದ ಆತ್ಮನೇಪದಿಯಾಗುತ್ತದೆ. ಹಾಗೆಯೇ ಛಾಂದಸವಾಗಿ **ಇಷುಗಮಿಯಮಾಂ ಛಃ** ಎಂಬುದರಿಂದ ಬರಬೇಕಾದ ಛತ್ವವೂ ಬರುವುದಿಲ್ಲ. ಪ್ರಥಮಪುರುಷ ಬಹುವಚನದಲ್ಲಿ

ಅಂತಾದೇಶ. **ಆಡಜಾದೀನಾಮ್** (ಪಾ. ಸೂ. ೬-೪-೭೨) ಎಂಬುದರಿಂದ ಅಂಗಕ್ಕೆ ಆಡಾಗಮ. **ಆಟಶ್ಚ** ಎಂಬುದರಿಂದ ವೃದ್ಧಿ. ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಆದ್ಯುದಾತ್ತವಾಗುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಆಗಧಿತಾ ಪರಿಗಧಿತಾ ಯಾ ಕಶೀಕೇವ ಜಂಗಹೇ ।

ದದಾತಿ ಮಹ್ಯಂ ಯಾದುರೀ ಯಾಶೂನಾಂ ಭೋಜ್ಯಾ ಶತಾ ॥ ೬ ॥

॥ ಪದಪಾಠಃ ॥

ಆऽಗಧಿತಾ । ಪರಿऽಗಧಿತಾ । ಯಾ । ಕಶೀಕಾऽಇವ । ಜಂಗಹೇ ।

ದದಾತಿ । ಮಹ್ಯಂ । ಯಾದುರೀ । ಯಾಶೂನಾಂ । ಭೋಜ್ಯಾ । ಶತಾ ॥ ೬ ॥

॥ ಸಾಯಣಭಾಷ್ಯಂ ॥

ಸಂಭೋಗಾಯ ಪ್ರಾರ್ಥಿತೋ ಭಾವಯವ್ಯಃ ಸ್ವಭಾರ್ಯಾಂ ರೋಮಶಾಮಪ್ರೌಢೇತಿ ಬುದ್ಧ್ವಾ ಪರಿಹಸನ್ನಾಹ । ಭೋಜ್ಯಾ ಭೋಗಯೋಗ್ಯೈಷಾಗಧಿತಾ ಆ ಸಮಂತಾದ್ಗೃಹೀತಾ ಸ್ವೀಕೃತಾ । ತಥಾ ಪರಿಗಧಿತಾ ಪರಿತೋ ಗೃಹೀತಾ । ಆದರಾತಿಶಯಾಯ ಪುನರ್ವಚನಂ । ಗಧ್ಯಂ ಗೃಹ್ಣಾತೇರಿತಿ ಯಾಸ್ಕಃ । ನಿ. ೫-೧೫ । ಯದ್ವಾ । ಆಗಧಿತಾ ಆಸಮಂತಾನ್ಮಿಶ್ರಯಂತೀ । ಅಂತರಂ ಪ್ರಜನನೇನ ವಾಹ್ಯಂ ಭುಜಾದಿಭಿರಿತ್ಯರ್ಥಃ । ಗಧ್ಯತಿರ್ಮಿಶ್ರೀಭಾವಕರ್ಮೇತಿ ಯಾಸ್ಕಃ । ನಿ.೫-೧೫ । ಪೂರ್ವಸ್ಮಿನ್ ಪಕ್ಷೇ ಪುರುಷಸ್ಯ ಪ್ರಾಧಾನ್ಯಂ ಉತ್ತರಸ್ಮಿಂಸ್ತು ಯೋಷಿತ ಇತಿ ಭೇದಃ । ಕೀದೃಶೀ ಸಾ । ಯಾ ಜಂಗಹೇ ಅತ್ಯರ್ಥಂ ಗೃಹ್ಣಾತಿ ಕದಾಚಿದಪಿ ನ ಮುಂಚತಿ । ಅತ್ರಾಗೇ ದೃಷ್ಟಾಂತಃ । ಕಶೀಕೇವ । ಕಶೀಕಾ ನಾಮ ಸೂತವತ್ಸಾ ನಕುಲೀ । ಸಾ ಯಥಾ ಪಥ್ಯಾ ಸಹ ಚಿರಕಾಲಂ ಕ್ರೀಡತಿ ನ ಕದಾಚಿದಪಿ ವಿಮುಂಚತಿ ತಥೈಷಾಪಿ । ಕಿಂಚ ಭೋಜ್ಯೈಷಾ ಯಾದುರೀ । ಯಾದುರಿತ್ಯುದಕನಾಮ । ರೇತೋಲಕ್ಷಣಮುದಕಂ ಪ್ರಭೂತಂ ದದಾತೀತಿ ಯಾದುರೀ । ಬಹುರೇತೋಯುಕ್ತೇತ್ಯರ್ಥಃ । ತಾದೃಶೀ ಸತೀ ಯಾಶೂನಾಂ ಸಂಭೋಗಾನಾಂ । ಯಶ ಇತಿ ಪ್ರಜನನ ನಾಮ ತತ್ಸಂಬಂಧೀನಿ ಕರ್ಮಾಣಿ ಯಾಶೂನಿ ಭೋಗಾಃ ತೇಷಾಂ ಶತಾ ಶತಾನ್ಯಸಂಖ್ಯಾತಾನಿ ಮಹ್ಯಂ ದದಾತಿ ॥

॥ ಪ್ರತಿಪದಾರ್ಥ ॥

**ಭೋಜ್ಯಾ**—ಸಂಭೋಗಯೋಗ್ಯಳಾದ | **ಯಾ**—ಯಾವ (ರೋಮಶೆಯು) | **ಆಗಧಿತಾ**—ಸ್ವೀಕೃತಳಾಗಿ (ಮತ್ತು) | **ಪರಿಗಧಿತಾ**—ಆಲಿಂಗಿಸಲ್ಪಟ್ಟವಳಾಗಿ | **ಕಶೀಕಾ ಇವ**—ಹೆಣ್ಣುಮುಂಗಸಿಯಂತೆ | **ಜಂಗಹೇ**—ದೃಢವಾಗಿ ಆಲಿಂಗಿಸಿಕೊಳ್ಳುತ್ತಾಳೋ | (**ಸಾ**—ಅವಳು) | **ಯಾದುರೀ**—ಹೆಚ್ಚಾದ ರೇತೋರೂಪೋದಕವುಳ್ಳವಳಾಗಿ | **ಯಾಶೂನಾಂ ಶತಾ**—ನೂರು (ಅಸಂಖ್ಯಾತ) ಸಂಭೋಗಗಳನ್ನು | **ಮಹ್ಯಂ**—ನನಗೆ | **ದದಾತಿ**—ಕೊಡುತ್ತಾಳೆ.

॥ ಭಾವಾರ್ಥ ॥

ಸಂಭೋಗಯೋಗ್ಯಳಾದ ರೋಮಶೆಯು ಸ್ವೀಕೃತಳಾಗಿ, ಹೆಣ್ಣುನಕುಲಿಯಂತೆ ದೃಢವಾಗಿ ಆಲಿಂಗಿಸುತ್ತಾಳೆ; ಮತ್ತು ಪ್ರಭೂತರೇತಸ್ಕಳಾಗಿ ನನಗೆ ಅಮಿತವಾದ ಸಂಭೋಗಸುಖವನ್ನು ಕೊಡುತ್ತಾಳೆ.

English Translation

She, who, when her desires are assented to, clings as tenaciously as a female weasel, and who is ripe for enjoyment, yields me infinite delight.

॥ ವಿಶೇಷವಿಷಯಗಳು ॥

ಈ ಋಕ್ಕೂ ಮುಂದಿನ ಋಕ್ಕೂ ಭಾವಯವ್ಯನಿಗೂ ಅವನ ಪತ್ನಿಯಾದ ರೋಮಶಾ ಎಂಬುವಳಿಗೂ ನಡೆದ ಸಂಭಾಷಣೆಯು. ಈ ರೋಮಶಾ ಎಂಬುವಳು ಬೃಹಸ್ಪತಿಯ ಪುತ್ರಿಯು. ಒಂದಾನೊಂದು ಕಾಲದಲ್ಲಿ ಈ ರೋಮಶೆಯು ಸಂಭೋಗೇಚ್ಛೆಯಿಂದ ತನ್ನ ಪತಿಯಾದ ಭಾವಯವ್ಯನ ಬಳಿಗೆ ಹೋಗಿ ತನ್ನ ಕಾಮವನ್ನು ತೃಪ್ತಿಪಡಿಸಬೇಕೆಂದು ಕೇಳಲು ಅದಕ್ಕೆ ಪ್ರತ್ಯುತ್ತರವಾಗಿ ಭಾವಯವ್ಯನು ಈ ಋಕ್ಕನ್ನು ಹೇಳಿರುವನು. ಈ ಭಾವಯವ್ಯನ ಮಾತಿಗೆ ಪ್ರತ್ಯುತ್ತರವಾಗಿ ರೋಮಶೆಯು ಮುಂದಿನ ಋಕ್ಕನ್ನು ಹೇಳಿರುವಳು. ಈ ಎರಡು ಋಕ್ಕುಗಳಲ್ಲಿಯೂ ಸಂಭೋಗಸಂಬಂಧವಾದ ಸಂಭಾಷಣೆಯಲ್ಲದೆ ಸೂಕ್ತಗಳಲ್ಲಿಯೂ, ಋಕ್ಕುಗಳಲ್ಲಿಯೂ ಸಾಧಾರಣವಾಗಿ ಇರಬೇಕಾದ ದೇವತಾಸ್ತುತಿ ಮೊದಲಾದ ವಿಷಯಗಳಿರುವುದಿಲ್ಲ. ಈ ಋಕ್ಕುಗಳಲ್ಲಿರುವ ಸಂಭೋಗಸಂಬಂಧವಾದ ಸಂಭಾಷಣೆಯು ಅಶ್ಲೀಲವೆಂದೂ ಇದು ಈ ಸೂಕ್ತದ ವಿಷಯಕ್ಕೆ ಸಂಬಂಧಪಟ್ಟಿಲ್ಲವಾದ್ದರಿಂದ ಇದು ಹೇಗೆ ಇಲ್ಲಿ ಸೇರಿಹೋಯಿತೆಂದೂ ಕೆಲವರು ಸಂಶಯಪಡುತ್ತಾರೆ. ಇದಲ್ಲದೆ ಈ ಸೂಕ್ತದಲ್ಲಿರುಲ್ಲಿರುವ ೭ ಋಕ್ಕುಗಳಲ್ಲಿ ಮೊದಲಿನ ೫ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು ಈ ಎರಡು ಋಕ್ಕುಗಳು ಮಾತ್ರ ಅನುಷ್ಟುಪ್ ಛಂದಸ್ಸಿನವು ಆದ್ದರಿಂದ ಇವು ಈ ಸೂಕ್ತದ ಭಾಗವಲ್ಲ. ಏನೋ ಕಾರಣಾಂತರದಿಂದ ಇಲ್ಲಿ ಸೇರಿಹೋಗಿದೆ. ವೇದಕ್ಕೇ ಸಂಬಂಧಪಡದ ಗೃಹಕೃತ್ಯದ ವಿಷಯಗಳು ಋಕ್ಕಿನ ರೂಪದಲ್ಲಿ ರಚಿಸಲ್ಪಟ್ಟು ಇಲ್ಲಿ ಸೇರಿಹೋಗಿರುವುದು ಎಲ್ಲರಿಗೂ ಆಶ್ಚರ್ಯವೇ ಆಗಿರುವುದು.

ಈ ಋಕ್ಕಿನ ಮತ್ತು ಮುಂದಿನ ಋಕ್ಕಿನ ಮುಖ್ಯಾಭಿಪ್ರಾಯವನ್ನು ಈ ರೀತಿ ಹೇಳಬಹುದು. ಭಾವಯವ್ಯನೂ ಅವನ ಪತ್ನಿಯಾದ ರೋಮಶೆಯೂ ಸರಸಸಲ್ಲಾಪಮಾಡುತ್ತಿರುವಾಗ ಭಾವಯವ್ಯನು ವ್ಯಂಗ್ಯವಾಗಿ ಮಾತನಾಡುತ್ತಾ ಈ ರೀತಿ ಹೇಳುವನು—

**ಭಾವಯವ್ಯ**—(ತನ್ನ ಪತ್ನಿಯಾದ ರೋಮಶೆಯನ್ನು ಪರಿಹಾಸ್ಯಮಾಡುತ್ತಾ) ಓಹೋ; ಈ ರೋಮಶೆಯು, ಹೆಣ್ಣು ಮುಂಗಸಿಯು ತನ್ನ ಪ್ರಿಯನಾದ ಗಂಡು ಮುಂಗಸಿಯನ್ನು ಯಾವಾಗಲೂ (ಭೋಗಾರ್ಥವಾಗಿ) ಅಪ್ಪಿಕೊಂಡು ಬಿಡದಿರುವಂತೆ ನನ್ನನ್ನು ನೂರಾರು ಸಲ ಆಲಿಂಗಿಸಲು ಇಚ್ಛಿಸುತ್ತಿರುವಳು. ಇವಳ ಶರೀರವು ರೇತಸ್ಸಿನಿಂದಲೂ (ಅಥವಾ ಜಿವರಿನಿಂದಲೂ) ತೊಯ್ದಿರುವುದು.

**ರೋಮಶಾ**—ಎಲೈ ಪತಿಯೇ, ನಾನು ವಯಸ್ಸಿನಲ್ಲಿ ಚಿಕ್ಕವಳೆಂದೂ ಸಂಭೋಗಾರ್ಹಳಲ್ಲವೆಂದೂ ಹಾಸ್ಯ ಮಾಡಬೇಡ. ನನ್ನ ಸಮೀಪಕ್ಕೆ (ಸಂಭೋಗಾರ್ಥವಾಗಿ) ಬಾ ಮತ್ತು ನನ್ನ ಅವಯವಗಳನ್ನು ಚೆನ್ನಾಗಿ ಅಪ್ಪಿ ಆಲಿಂಗನೆ ಮಾಡು. ನನ್ನ ಅಂಗಗಳು ಇನ್ನೂ ಚೆನ್ನಾಗಿ ಬಲಿತು ಪುಷ್ಟಿಯಾಗಿಲ್ಲವೆಂದೂ ಆದುದರಿಂದ ಸಂಭೋಗಾರ್ಹ ಳಲ್ಲವೆಂದೂ ಭಾವಿಸಬೇಡ. ಏಕೆಂದರೆ, ನನ್ನ ಯೋನಿಯೇ ಮುಂತಾದ ಅವಯವಗಳು ಗಾಂಧಾರದೇಶದ ಮೇಕೆಯ ಶರೀರದಂತೆ ಚೆನ್ನಾಗಿ ಬೆಳೆದಿರುವ ಕೂದಲುಗಳಿಂದ (ರೋಮಗಳಿಂದ) ನಿಬಿಡವಾಗಿದೆ.

ಇಲ್ಲಿ ಮುಖ್ಯವಿಷಯವೇನೆಂದರೆ—ರೋಮಶೆಯು ಕಾಮೇಚ್ಛೆಯಿಂದ ಪತಿಯನ್ನು ಪ್ರಾರ್ಥಿಸಿದಾಗ ಭಾವ ಯವ್ಯನು ತನ್ನ ಪತ್ನಿಯು ವಯಸ್ಸಿನಲ್ಲಿ ಚಿಕ್ಕವಳೆಂದೂ ಸಂಭೋಗಾರ್ಹಳಲ್ಲವೆಂದೂ ಅವಳನ್ನ ಹಾಸ್ಯಮಾಡಿದನು. ಅದಕ್ಕೆ ಪ್ರತ್ಯುತ್ತರವಾಗಿ ರೋಮಶೆಯು ತಾನು ಬಾಲಿಕೆಯಲ್ಲವೆಂದೂ ಸಂಭೋಗಕ್ಕೆ ಅರ್ಹಳಾದ ಪ್ರೌಢಸ್ತ್ರೀಯೆಂದೂ ಹೇಳಿ ಅದನ್ನು ದೃಢಪಡಿಸುವುದಕ್ಕಾಗಿ ಒಂದು ದೃಷ್ಟಾಂತವನ್ನು ಹೇಳಿರುವಳು. ಪುರುಷರ ಯೌವನದೆಶೆಯಲ್ಲಿ ಕರಚರಣಾದ್ಯಂಗಗಳು ರೋಮಗಳಿಂದ ನಿಬಿಡವಾಗಿರುವುದು ಸಹಜವಾಗಿಯೂ, ಅವರು ಬಾಲ್ಯ ವಯಸ್ಸನ್ನು ದಾಟಿ ಯೌವನಾವಸ್ಥೆಯಲ್ಲಿರುವರೆಂಬುದನ್ನು ಸೂಚಿಸುವುದಾಗಿಯೂ ಇರುವುದು. ಆದರೆ ಸ್ತ್ರೀಯರು ಯೌವನದೆಶೆಯಲ್ಲಿರು ವಾಗ ಆರೀತಿ ಕರಚರಣಾದಿಗಳಲ್ಲಿ ರೋಮಗಳಿರುವುದು ಅಪರೂಪ. ಅಸಂಭವವೆಂದೇ ಹೇಳಬಹುದು. ಆದರೆ ಶಿರಸ್ಸಿನಲ್ಲಿಯೂ, ಮುಖ್ಯವಾಗಿ ಯೋನಿಪ್ರದೇಶದಲ್ಲಿಯೂ ನಿಬಿಡವಾಗಿ ಬೆಳೆದಿರುವ ರೋಮಗಳು ಯೌವನಾವಸ್ಥೆಯನ್ನು ಸೂಚಿಸುವುದು. ಆದುದರಿಂದಲೇ ರೋಮಶೆಯು ತಾನು ಯೌವನದೆಶೆಯಲ್ಲಿರುವ ಮತ್ತು ಸಂಭೋಗಕ್ಕೆ ಅರ್ಹಳಾದ ಸ್ತ್ರೀಯೆಂಬ ವಿಷಯವನ್ನು ಸಮರ್ಥಿಸುವುದಕ್ಕಾಗಿ ತನ್ನ ಯೋನಿಪ್ರದೇಶವು ಗಾಂಧಾರದೇಶದ ಹೆಣ್ಣುಮೇಕೆಯಂತೆ ಅಥವಾ ಗರ್ಭವತಿಯಾದ ಸ್ತ್ರೀಯ ಯೋನಿಯಂತೆ ಬಹಳವಾದ ರೋಮಗಳಿಂದ ಕೂಡಿರುವುದೆಂಬ ದೃಷ್ಟಾಂತವನ್ನು ಹೇಳಿರುವಳು ಗಾಂಧಾರದೇಶವೆಂದರೆ ಈಗಿನ Kandahar ಅಥವಾ ಅದರ ಸಮೀಪದ ಪ್ರದೇಶವಾಗಿರಬೇಕು. ಅದು ಶೀತದೇಶವಾಗಿರುವುದರಿಂದ ಅಲ್ಲಿರುವ ಮೇಕೆಯೇಮೊದಲಾದ ಪ್ರಾಣಿಗಳಿಗೆ ತುಂಬಾ ಕೂದಲುಗಳಿರುವುದು ಸಹಜವಾಗಿರುವುದು. ಆದುದರಿಂದ ಆ ದೃಷ್ಟಾಂತವನ್ನು ಇಲ್ಲಿ ಹೇಳಲಾಗಿದೆ.

**ಆಗಧಿತಾ, ಪರಿಗಧಿತಾ**—ಈ ಶಬ್ದಗಳಿಗೆ ಯಾಸ್ಕರು ನಿರ್ವಚನಮಾಡುವಾಗ ಈ ಋಕ್ಕನ್ನೇ ಉದಾಹರಣೆ ಯಾಗಿ ತೆಗೆದುಕೊಂಡು—

**ಗಧ್ಯತಿರ್ಮಿಶ್ರೀಭಾವಕರ್ಮಾ । ಆಗಧಿತಾ ಪರಿಗಧಿತಾ ಇತ್ಯಪಿ ನಿಗಮೋ ಭವತಿ ।**

(ನಿ. ೫–೧೫)

ಎಂದು ಹೇಳಿರುವರು. ಗಧ್ಯತಿಶಬ್ದಕ್ಕೆ ಮಿಶ್ರಮಾಡುವುದು, ಸೇರಿಸುವುದು ಎಂದರ್ಥವು. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಪತಿಪತ್ನಿಯರ ಅವಯವಗಳನ್ನು ಮಿಶ್ರಮಾಡುವುದು ಎಂದರೆ ಇಬ್ಬರ ಅವಯವಗಳೂ ಅಥವಾ ಅಂಗಗಳೂ

ಪರಸ್ಪರ ಸಂಬಂಧಿಸುವಂತೆ ಒಬ್ಬರನ್ನೊಬ್ಬರು ಆಲಿಂಗನಮಾಡಿಕೊಳ್ಳುವುದು ಎಂಬಭಿಪ್ರಾಯವನ್ನು ಭಾಷ್ಯಕಾರರು ಸೂಚಿಸಿರುವರು. ಆದುದರಿಂದ ಆಗಧಿತಾ ಮತ್ತು ಪರಿಗಧಿತಾ ಎಂಬ ಎರಡು ಶಬ್ದಗಳಿಗೂ ಸ್ವಲ್ಪ ಹೆಚ್ಚುಕಡಿಮೆ ಒಂದೇ ವಿಧವಾದ ಅರ್ಥವಿರುವುದೆಂದಭಿಪ್ರಾಯವು. ಈ ವಿಷಯದಲ್ಲಿ ನಿರುಕ್ತದ ವ್ಯಾಖ್ಯಾನಕಾರರಾದ ದುರ್ಗಾಚಾರ್ಯರು ಈ ಋಕ್ಕಿಗೆ ಮಾಡಿರುವ ವಿವರಣೆಯನ್ನು ಇಲ್ಲಿ ಕೊಟ್ಟಿರುವೆವು.—

**ಆಗಧಿತೇತಿ ಭಾವಯವ್ಯಸ್ಯಾರ್ಷಂ । ಆಗಧಿತಾ ಆಗೃಹೀತಾ ಅಭಿಮಿಶ್ರಿತಾ ಚ । ಪರಿಗಧಿತಾ ಚ ಪರಿಮಿಶ್ರಿತಾ ಬಾಹುಭ್ಯಾಂ ಮಯಾ ಪರಿಷ್ವಕ್ತೇತ್ಯರ್ಥಃ । ಯಾ ಕಶೀಕೇವ ಪ್ರತಿಕಶಂ ಕಶೀಕೇವ ಸಾ ಹಿ ನಕುಲಜಾತಿಃ ಕಾಂಚಿದ್ದ್ವಿವೇ ಕಶಾಮಿತಿ ಶ್ರೂಯತೇಽಶ್ವಮೇಧೇ । ಸಾ ಯಥಾ ಮದಕಾಲೇ ಪ್ರತಿಕಶಮತಿತರಾಂ ಪರಿಷ್ವಜತಿ ಸ ಹಿ ತಸ್ಯಾಃ ಪರಿಷ್ವಜನಸ್ವಭಾವಃ ಏವಂ ಯಾ ಮಾಂ ಅಜಂಗಹೇ ಪರಿಗೃಹ್ಣಾತಿ ಬಾಹುಭ್ಯಾಂ । ಪರಿಗೃಹ್ಯ ಚ ದದಾತಿ । ಯಾದುರೀ ಯಾ ಉದರವತೀ, ಅಥವಾ ಯಾದಸಾ ರೇತಃಸೇಕೇನ ತದ್ವತೀ । ಯಾದಃ ಇತ್ಯುದಕನಾಮಸು ಪಠಿತಂ । ಆಹ ಕಿಂ ದದಾತಿ ಮಹ್ಯಂ ? ಇತಿ, ಉಚ್ಯತೇ-ಯಾಶೂನಾಂ ಮೈಥುನಾಖ್ಯಾನಾಂ ಶತಾ ಶತಾನಿ ಬಹೂಶ ಇತ್ಯರ್ಥಃ । ಯಾ ಏವಂಪ್ರಕಾರಾ ಸಾ ಮಮ ಭೋಜ್ಯಾ ಪತ್ನೀತ್ಯಭಿಪ್ರಾಯಃ । ಏವಮತ್ರ ಮೈಥುನಸಂಬಂಧಾತ್ ಶಬ್ದಸಾರೂಪ್ಯಾಚ್ಚ ಗಧ್ಯತಿಃ ಮಿಶ್ರೀಭಾವಕರ್ಮೇತ್ಯುಪಪದ್ಯತೇ ॥**

(ನಿ. ೫-೧೫)

ಇದರ ಮುಖ್ಯಾಭಿಪ್ರಾಯವನ್ನು ನಾವು ವಿವರಿಸಿರುವುದರಿಂದ ಮತ್ತೆ ಹೇಳಬೇಕಾಗಿಲ್ಲ.

**ಕಶೀಕಾ—ಕಶೀಕಾ ನಾಮ ಸೂತವತ್ಸಾ ನಕುಲೀ ।** ಆಗ ತಾನೇ ಪ್ರಸವಿಸಿದ ಹೆಣ್ಣು ಮುಂಗಸಿ. ಇಲ್ಲಿ ಉಪಮೆಯ ಔಚಿತ್ಯವನ್ನು ಸಾಯಣರು ಈ ರೀತಿ ವಿವರಿಸಿದ್ದಾರೆ. **ಸಾ ಯಥಾ ಪತ್ಯಾ ಸಹ ಚಿರಕಾಲಂ ಕ್ರೀಡತಿ ನ ಕದಾಚಿದಪಿ ವಿಮುಂಚತಿ ತಥೈಷಾಪಿ ।** ಪ್ರಸವವಾದ ಮೇಲೆ ಮುಂಗಸಿಯು ತನ್ನ ಪತಿಯೊಡನೆ ಸಂಭೋಗಿಸಲಿಚ್ಛಿಸಿ ಎಡಬಿಡದೆ ಅದರ ಜೊತೆಯಲ್ಲಿಯೇ ಇದ್ದು ಪತಿಯ ಕಾಮವನ್ನು ಪೂರ್ಣವಾಗಿ ತೃಪ್ತಿಗೊಳಿಸುತ್ತದೆ. ಇಲ್ಲಿ ಭಾವಯವ್ಯನ ಪತ್ನಿಯಾದ ರೋಮಶೆಯು ನಕುಲಿಯಂತೆ ಪತಿಯನ್ನು ಎಡಬಿಡದೆ ಆಲಂಗಿಸಿಕೊಳ್ಳುತ್ತಾಳೆಂದು ದೃಷ್ಟಾಂತವನ್ನು ಹೇಳಿದೆ. ಮತ್ತು **ಜಂಗಹೇ** ಎಂದು ದೃಢವಾದುದೂ, ಆಪ್ಯಾಯಮಾನವಾದದೂ ಆದ ಆಲಿಂಗನದ ಸ್ವರೂಪವನ್ನೂ ವರ್ಣಿಸಿದೆ.

**ಯಾದುರೀ—ಯಾದುರೀ** ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ. ಇಲ್ಲಿ ರೇತೋರೂಪವಾದ ಉದಕವೆಂದರ್ಥ.

**ಯಾಶೂನಾಂ—ಯಶ ಇತಿ ಪ್ರಜನನನಾಮ । ತತ್ಸಂಬಂಧೀನಿ ಕರ್ಮಾಣಿ ಯಾಶೂನಿ ಭೋಗಾಃ ।** ಸಂತಾನೋತ್ಪತ್ತಿಗೆ ಸಾಧನಗಳಾದ ಸಂಭೋಗಾದಿಗಳೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಆಗಧಿತಾ**—ಗಧ ಧಾತುವು ಗ್ರಹಣಾರ್ಥದಲ್ಲಿ ಪ್ರಯುಕ್ತವಾಗಿದೆ. **ಗಧ್ಯಂ ಗೃಹ್ಣಾತೇಃ**—(ನಿರು. ೫-೧೫) ಎಂದು ಯಾಸ್ಕರು ಹೇಳಿರುತ್ತಾರೆ. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಅದಕ್ಕೆ ಇಡಾಗಮ. **ಗತಿರನಂತರಃ** (ಪಾ. ಸೂ.

೬-೨-೪೯) ಎಂಬುದರಿಂದ ಗತಿಗೆ (ಆ) ಪ್ರಕೃತಿಸ್ವರ ಬರುತ್ತದೆ. ಹೀಗೆಯೇ ಪರಿಗಧಿತಾ ಎಂಬಲ್ಲಿಯೂ ಪ್ರಕ್ರಿಯೆ. ಸ್ತ್ರೀತ್ವದಲ್ಲಿ ಅದಂತ ನಿಬಂಧನವಾದ ಟಾಪ್.

**ಜಙ್ಘಹೇ**—ಗ್ರಹ ಉಪಾದಾನೇ. ಧಾತು. ಅತಿಶಯಾರ್ಥ ತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಬಂದಾಗ **ಯಙೋಚಿ ಚ** (ಪಾ. ಸೂ. ೨-೪-೭೪) ಎಂಬುದರಿಂದ ಅನೈಮಿತ್ತವಾಗಿ ಅದಕ್ಕೆ ಲುಕ್. **ವ್ಯತ್ಯಯೋ ಬಹುಲಮ್** ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಛಾಂದಸವಾಗಿ ಅಭ್ಯಾಸಕ್ಕೆ ನುಕಾಗಮ ರೇಫಲೋಪ. ಯಙ್‌ಲುಙಂತದ ಮೇಲೆ ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದದಾತಿ**—ಡುದಾಞ್ ದಾನೇ. ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಹಿಂದಿನಂತೇ ಆದ್ಯುದಾತ್ತಸ್ವರ ಬರುತ್ತದೆ.

**ಯಾದುರೀ**—ರಾ ದಾನೇ ಧಾತು. ಯಾದುಂ ದದಾತಿ ಇತಿ. **ಆತೋಽನುಪಸರ್ಗೇ ಕಃ**—(ಪಾ. ಸೂ. ೩-೨-೩) ಎಂಬುದರಿಂದ ಕ ಪ್ರತ್ಯಯ. ಸ್ತ್ರೀತ್ವದಲ್ಲಿ ಛಾಂದಸವಾಗಿ ಈಕಾರ ಪ್ರತ್ಯಯ. ಯಾದುರೀ ಮತ್ತು ಯಾಶು ಶಬ್ದಗಳು **ಪೃಷೋದರಾದೀನಿ ಯಥೋಪದಿಷ್ಟಮ್** (ಪಾ. ಸೂ. ೬-೩-೧೦೯) ಎಂಬುದರಿಂದ ಸಿದ್ಧವಾಗುತ್ತವೆ.

**ಭೋಜ್ಯಾ**—ಭೋಕ್ತುಯೋಗ್ಯಾ ಭೋಜ್ಯಾ. ಭುಜ ಪಾಲನಾಭ್ಯವಹಾರಯೋಃ ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧ ಗುಣ. ವ್ಯತ್ಯಯದಿಂದ ಕುತ್ವ ಬರುವುದಿಲ್ಲ. **ತಿತ್ ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಟಾಪ್

**ಶತಾ—ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ನಪುಂಸಕದಲ್ಲಿ ರೂಪವಾದಾಗ ಶಿಗೆ ಲೋಪ. ॥ ೬ ॥



॥ ಸಂಹಿತಾಪಾಠಃ ॥

**ಉಪೋಪ ಮೇ ಪರಾ ಮೃಶ ಮಾ ಮೇ ದಭ್ರಾಣಿ ಮನ್ಯಥಾಃ ।**

**ಸರ್ವಾಹಮಸ್ಮಿ ರೋಮಶಾ ಗಂಧಾರೀಣಾಮಿವಾವಿಕಾ ॥ ೭ ॥**

|| ಪದಪಾಠಃ ||

ಉಪಽಉಪ | ಮೇ | ಪರಾ | ಮೃಶ | ಮಾ | ಮೇ | ದಭ್ರಾಣಿ | ಮನ್ಯಥಾಃ |
ಸರ್ವಾ | ಅಹಂ | ಅಸ್ಮಿ | ರೋಮಶಾ | ಗಂಧಾರೀಣಾಂಽಇವ | ಅವಿಕಾ || ೭ ||

|| ಸಾಯಣಭಾಷ್ಯಂ ||

ರೋಮಶಾ ನಾಮ ಬೃಹಸ್ಪತೇಃ ಪುತ್ರೀ ಬ್ರಹ್ಮವಾದಿನೀ ಪರಿಹಸಂತಂ ಸ್ವಪತಿಂ ಪ್ರತ್ಯಾಹ ||

ಭೋ ಪತೇ ಮೇ ಮಾಂ | ದ್ವಿತೀಯಾರ್ಥೇ ಚತುರ್ಥೀ | ಉಪೋಪ | ದ್ವಿತೀಯ ಉಪಶಬ್ದಃ ಪಾದಪೂರಣಃ | ಉಪೇತ್ಯ ಪರಾ ಮೃಶ | ಸಮ್ಯಕ್ ಸ್ಪೃಶ | ಭೋಗಯೋಗ್ಯಾಮವಗಚ್ಛೇತ್ಯರ್ಥಃ | ಯದ್ವಾ | ಮೇ ಮಮ ಗೋಪನೀಯಮಂಗಮುಪೋಪ ಪರಾಮೃಶ | ಅತ್ಯಂತಮಾಂತರಂ ಸ್ಪೃಶ | ಪರಾಮರ್ಶಾಭಾವಶಂಕಾಂ ನಿವಾರಯತಿ | ಮೇ ಮದಂಗಾನಿ ರೋಮಾಣಿ ದಭ್ರಾಣಿ ಮಾ ಮನ್ಯಥಾಃ | ಅಲ್ಪಾನಿ ಮಾ ಬುಧ್ಯಸ್ವ | ದಭ್ರಮರ್ಭಕಮಿತ್ಯಲ್ಪಸ್ಯೇತಿ ದಭ್ರಂ ದಭ್ನೋತೇರಿತಿ ಯಾಸ್ಕಃ | ನಿ. ೩-೨೦ | ಅದಭ್ರತ್ವಮೇವ ವಿಶದಯತಿ | ಅಹಂ ರೋಮಶಾ ಬಹುರೋಮಯುಕ್ತಾಸ್ಮಿ | ಯತೋಽಹಮೀದೃಶೀ ಅತಃ ಸರ್ವಾ ಸಂಪೂರ್ಣಾವಯವಾಸ್ಮಿ | ರೋಮಶತ್ವೇ ದೃಷ್ಟಾಂತಃ | ಗಂಧಾರೀಣಾಮವಿಕೇವ | ಗಂಧಾರಾ ತೇಷಾಂ ಸಂಬಂಧಿನ್ಯವಿಜಾತಿರಿವ | ತದ್ದೇಶಸ್ಥಾ ಅವಯೋ ಮೇಷಾ ಯಥಾ ರೋಮಶಾಃ ತಥಾಹಮಸ್ಮಿ | ದೇಶಾಃ ಯದ್ವಾ | ಗಂಧಾರೀಣಾಂ ಗರ್ಭಧಾರಿಣೀನಾಂ ಸ್ತ್ರೀಣಾಮವಿಕಾತ್ಯರ್ಥಂ ತರ್ಪಯಂತೀ ಯೋನಿರಿವ | ತಾಸಾಮಾ ಪ್ರಸವಂ ರೋಮಾದಿವಿಕರ್ತನಸ್ಯ ಶಾಸ್ತ್ರೇ ನಿಷಿದ್ಧತ್ವಾದ್ಯೋನೀ ರೋಮಶಾ ಭವತಿ | ಅತಃ ಸೋಪಮೀಯತೇ | ಯತೋಽಯಮೀದೃಶೀ ಅತೋ ಮಾಮಪ್ರೌಢಾಂ ಮಾವಬುಧ್ಯಸ್ವೇತ್ಯರ್ಥಃ ||

|| ಪ್ರತಿಪದಾರ್ಥ ||

(**ಭೋ ಪತೇ**—ಎಲೈ ಪತಿಯೇ) | **ಮೇ**—ನನ್ನನ್ನು | **ಉಪ ಉಪ**—ಚೆನ್ನಾಗಿ ಸಮೀಪಿಸಿ | **ಪರಾ ಮೃಶ**—ಚೆನ್ನಾಗಿ ಸ್ಪರ್ಶಿಸು | **ಮೇ**—ನನ್ನ (ಅಂಗಗಳ)ನ್ನು | **ದಭ್ರಾಣಿ**—ಅಲ್ಪ (ಅಪ್ರೌ)ಢಗಳನ್ನಾಗಿ | **ಮಾ ಮನ್ಯಥಾಃ**—ತಿಳಿಯಬೇಡ | **ಅಹಂ**—ನಾನು | **ಗಂಧಾರೀಣಾಂ**—ಗಾಂಧಾರದೇಶದ | **ಅವಿಕಾ ಇವ**—ಮೇಕೆಯಂತೆ (ಅಥವಾ ಗಂಧರೀಣಾಮವಿಕೇವ—ಗರ್ಭಿಣೀಸ್ತ್ರೀಯ ಯೋನಿಯಂತೆ) | **ರೋಮಶಾ**—ರೋಮಯುಕ್ತಳು (**ಅತಃ**—ಆದುದರಿಂದ) | **ಸರ್ವಾ**—ಪ್ರಬುದ್ಧಾವಯವವುಳ್ಳವಳಾಗಿ | **ಅಸ್ಮಿ**—ಆಗಿದ್ದೇನೆ.

|| ಭಾವಾರ್ಥ ||

(ಎಲೈ ಪತಿಯೇ) ನನ್ನನ್ನು ಸಮೀಪಿಸಿ ನನ್ನ (ಅಂಗಗಳ)ನ್ನು ಸ್ಪರ್ಶಮಾಡು, ನಾನು ಗಾಂಧಾರದೇಶದ ಮೇಕೆಯಂತೆ (ಅಥವಾ ಗರ್ಭಿಣಿಸ್ತ್ರೀಯರ ಯೋನಿಯಂತೆ) ರೋಮಯುಕ್ತಳು: (ಆದುದರಿಂದ) ಪ್ರೌಢಾವಯವಳಾಗಿದ್ದೇನೆ (ಆದಕಾರಣ) ನನ್ನನ್ನು ಅಪ್ರೌಢಳೆಂದು ತಿಳಿಯಬೇಡ.

## English Translation.

Approach me, (husband); deem me not immature: I am covered with down like a ewe of the Gandharins

॥ ವಿಶೇಷವಿಷಯಗಳು ॥

**ದಭ್ರಾಣಿ**—**ದಭ್ರ** ಶಬ್ದವು ಹ್ರಸ್ವನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩). **ದಭ್ರಮರ್ಭಕಮಿತ್ಯಲ್ಪಸ್ಯ । ದಭ್ನೋತೇಃ ಸುದಂಭಂ ಭವತಿ ।** (ನಿ. ೩-೨೦) ನಶಿಸುವಂತೆ ಮಾಡು ಎಂದರ್ಥವನ್ನು ಕೊಡುವ **ದಂಭ್** ಧಾತುವಿನಿಂದ ನಿಷ್ಪನ್ನವಾಗಿ **ದಭ್ರ**ವೆಂಬ ಪದವು **ಅಲ್ಪ, ಸಣ್ಣದು** ಎಂಬರ್ಥವನ್ನು ಕೊಡುತ್ತದೆ. ಸುಲಭವಾಗಿ ನಾಶಮಾಡಲ್ಪಡಲು ಯೋಗ್ಯವಾದುದು ಎಂದು ತಾತ್ಪರ್ಯ. ಪ್ರಕೃತವಾದ ಋಕ್ಕಿನಲ್ಲಿ ಭಾವಯವ್ಯನ ಪತ್ನಿಯು ತಾನು ಅಂತಹ ದಭ್ರಳಲ್ಲವೆಂದೂ, ತಾನು ಭೋಗಿಸಲು ಯೋಗ್ಯಳಾದ ಪ್ರೌಢೆಯೆಂದೂ ಹೇಳಿಕೊಳ್ಳುತ್ತಾಳೆ. ನಿರುಕ್ತಕಾರರು ಈ ಪದಕ್ಕೆ ಅರ್ಥವನ್ನು ಹೇಳುವುದಕ್ಕೆ ಪ್ರಕೃತವಾದ ಋಕ್ಕನ್ನೇ ಉದಹರಿಸಿದ್ದಾರೆ. (೩-೨೦)

**ಗಂಧಾರೀಣಾಂ ಅವಿಕಾ ಇವ ರೋಮಶಾ**—ಎಂಬುದಕ್ಕೆ ಎರಡರ್ಥವಾಗುತ್ತದೆ. ಮೊದಲನೆಯದಾಗಿ **ಗಂಧಾರದೇಶದ್ದೂ** ಅತ್ಯಧಿಕವಾದ ರೋಮವುಳ್ಳದ್ದೂ ಆದ ಮೇಕೆಯೆಂದರ್ಥ. ಎರಡನೆಯದಾಗಿ ಗರ್ಭಧಾರಿಣಿಯಾದ ಸ್ತ್ರೀಯ ಯೋನಿಯಂತೆ ರೋಮಗಳುಳ್ಳವಳು ಎಂದರ್ಥವು.

ಈ ಋಕ್ಕಿನ ಮುಖ್ಯಾಭಿಪ್ರಾಯವನ್ನು ಮತ್ತು ಅದಕ್ಕೆ ಸಂಬಂಧಪಟ್ಟ ವಿವರಗಳನ್ನು ಹಿಂದಿನ ಋಕ್ಕಿನ ವಿಶೇಷ ವಿಷಯಗಳಲ್ಲಿಯೇ ಸೇರಿಸಿ ಅನುವಾದ ಮಾಡಿರುವುದರಿಂದ ನಿರುಕ್ತದ ವ್ಯಾಖ್ಯಾನಕರ್ತೃವಾದ ದುರ್ಗಾಚಾರ್ಯರು ಈ ಋಕ್ಕಿಗೆ ಮಾಡಿರುವ ವ್ಯಾಖ್ಯಾನವನ್ನು ಮಾತ್ರ ಇಲ್ಲಿ ಕೊಡುವೆವು—

**ಉಪೋಪ ಮೇ ಪರಾಮೃಶ..........॥ ಭಾವಯವ್ಯಸ್ಯೇಯಮಾರ್ಷಂ । ಅನುಷ್ಟುಪ್ । ಭಾವಯವ್ಯಮೇವ ಸಾ ಭರ್ತಾರಂ ತೇನಾನುಪೇಯಮಾನಾ ಬ್ರವೀತಿ । ಹೇ ರಾಜನ್ ಉಪಗಮ್ಯ ಉಪಶ್ಲಿಷ್ಯ ಚ ಮೇ ಮಮ ಪರಾಮೃಶ ಯೇ ಪ್ರದೇಶಾಃ ಪುರುಷೇಣ ಸ್ತ್ರಿಯಾ ಪರಾಮ್ರಷ್ಟವ್ಯಾಃ । ಕಿಂಚ "ಮಾ ಮೇ ದಭ್ರಾಣಿ ಮನ್ಯಥಾಃ" ಅಲ್ಪಕಾನಿ ಲೋಮಾನಿ ಮಾ ಮನ್ಯಥಾಃ ಜಾನೇಽಹಮೇತತ್ । ಯಥಾ ಅಲೋಮಿಕಾಯಾ ಉಪಗಮಃ ಪ್ರತಿಷಿದ್ಧಃ ಸ್ಮೃತೌ—"ನಾಜಾತಲೋಮ್ನ್ಯೋಪಹಾಸಮಿಚ್ಛೇತ್" ಇತಿ । ಯತಸ್ತೇ ವೇದಯಾಮಿ ಸರ್ವಾಹಮಸ್ಮಿ ರೋಮಶಾ ಸರ್ವೇಷ್ವವಯವೇಷು ಮಮ ಲೋಮಾನ್ಯುತ್ಪನ್ನಾನಿ ರೋಮಾಣಿ ಯೇಷು ಸ್ತ್ರೀಣಾಮುತ್ಪದ್ಯಂತೇ । ಕಥಂ ಚ ಪುನರಹಮಸ್ಮಿ ರೋಮಶಾ ? ಗಂಧಾರೀಣಾಮಿವಾವಿಕಾ ಗಂಧಾರದೇಶಜಾತಾನಾಮವಿಕಾನಾಂ ಮಧ್ಯೇ ಯಾ ಸುಷ್ಠು ರೋಮಶಾ ಭವೇತ್ ತಥಾಹಮಸ್ಮಿ ರೋಮಶಾ, ನಿಶ್ಶಂಕೋ ಮಾಮುಪಗಚ್ಛೇತ್ಯಭಿಪ್ರಾಯಃ ॥**

ಈ ಋಕ್ಕಿನಲ್ಲಿರುವ ವಿಷಯವನ್ನು ಹಿಂದಿನ ಋಕ್ಕಿನ ವಿವರಣೆಯಲ್ಲಿಯೇ ಪ್ರಸ್ತಾಪಮಾಡಿರುವೆವು. ರೋಮಶೆಯು ತಾನು ಬಾಲಿಕೆಯಲ್ಲವೆಂದೂ, ಸಂಭೋಗಾರ್ಹಳಾದ ಯುವತಿಯೆಂದೂ ಸಮರ್ಥಿಸುವುದಕ್ಕಾಗಿ ಯೌವನಸೂಚಕವಾದ

ರೋಮಗಳು ತನ್ನ ಅವಯವಗಳಲ್ಲಿ ಬೆಳೆದಿರುವುದನ್ನು ಗಂಧಾರದೇಶದ ಹೆಣ್ಣುಮೇಕೆಯ ದೃಷ್ಟಾಂತದಿಂದ ಹೇಳಿರುವಳು. ಇದನ್ನು ವ್ಯಾಖ್ಯಾನಕಾರರು ದೃಢಪಡಿಸುವುದಕ್ಕಾಗಿ **ನಾಜಾತಲೋಮ್ನ್ಯೋಪಹಾಸಮಿಚ್ಛೇತ್** ಎಂದರೆ ಯೋನಿಯೇ ಮೊದಲಾದ ಅವಯವಗಳಲ್ಲಿ ಇನ್ನೂ ರೋಮಗಳು ಹುಟ್ಟದಿರುವ ಕನ್ಯೆಯು ಸಂಭೋಗಾರ್ಹಳಲ್ಲವೆಂಬ ಸ್ಮೃತಿವಾಕ್ಯವನ್ನು ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಮೇ**— **ವಿವಕ್ಷಾತಃ ಕಾರಕಾಣಿ ಭವಂತಿ** ಎಂಬ ವಚನದಿಂದ ದ್ವಿತೀಯಾರ್ಥದಲ್ಲಿ ಚತುರ್ಥೀ ಬಂದಿದೆ.

**ಮೃಶ**—ಮೃಶ ಆಮರ್ಶನೇ ಧಾತು. ತುದಾದಿ (ಆಮರ್ಶನಂ ಸ್ಪರ್ಶಃ) ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಭ್ರಾಣಿ**—ದಂಭು ದಂಭನೇ, ಧಾತು. **ಸ್ಫಾಯಿತಂಚಿವಂಚಿ**—(ಉ. ಸೂ. ೧-೧೭೦) ಎಂಬುದರಿಂದ ರಕ್ ಪ್ರತ್ಯಯ. ಕಿತ್ತಾದುದರಿಂದ **ಅನಿದಿತಾಂ ಹಲ**—ಎಂಬುದರಿಂದ ಉಪಧಾನಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಮನ್ಯಥಾಃ**—ಮನು ಅವಬೋಧನೇ. ಧಾತು. ದಿವಾದಿ. ಲಙ್ ಮಧ್ಯಮಪುರುಷ ಏಕವಚನಾಂತರೂಪ. ಮಾಙ್ ಸಂಬಂಧವಿರುವುದರಿಂದ **ನಮಾಙ್ ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಅಸ್ಮಿ**—ಅಸ ಭುವಿ. ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ರೋಮಶಾ**—ರೋಮಾಣಿ ಅಸ್ಯಾಃ ಸಂತಿ ಇತಿ ರೋಮಶಾ. ಲೋಮಾದಿಯಲ್ಲಿ ಸೇರಿರುವುದರಿಂದ **ಲೋಮಾದಿಪಾಮಾದಿ ಪಿಚ್ಛಾದಿಭ್ಯಃ**—(ಪಾ. ಸೂ. ೫-೨-೧೦೦) ಎಂಬುದರಿಂದ ಶ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸ್ತ್ರೀತ್ವದಲ್ಲಿ ಅದಂತನಿಬಂಧನವಾಗಿ ಟಾಪ್.

**ಅವಿಕಾ**—ಅವಿರೇವ ಅವಿಕಾ. ಸ್ವಾರ್ಥದಲ್ಲಿ ಕ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೭ ॥

ಇಲ್ಲಿಗೆ ನೂರ ಇಪ್ಪತ್ತಾರನೇ ಸೂಕ್ತ ಮುಗಿದುದು.



# ನೂರ ಇಪ್ಪತ್ತೇಳನೆಯ ಸೂಕ್ತವು

ಈ ಸೂಕ್ತದಿಂದ ಪ್ರಥಮಮಂಡಲದ ಹತ್ತೊಂಭತ್ತನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ೧೨೭ ರಿಂದ ೧೩೩ರ ವರೆಗಿನ ೭ ಸೂಕ್ತಗಳಿರುವವು. ಇದರ ಮುಂದಿನ ಅನುವಾಕ ಎಂದರೆ ಇಪ್ಪತ್ತನೆಯ ಅನುವಾಕದಲ್ಲಿ ೧೩೪ ರಿಂದ ೧೩೯ರ ವರೆಗಿನ ೬ ಸೂಕ್ತಗಳಿರುವವು. ಈ ಎರಡು ಅನುವಾಕಗಳಿಂದಾಗುವ ೧೩ ಸೂಕ್ತಗಳಿಗೂ ಪರುಚ್ಛೇಪೋ ದೈವೋದಾಸಿಃ ಎಂದರೆ ದಿವೋದಾಸನ ಮಗನಾದ ಪರುಚ್ಛೇಪನೆಂಬುವನು ಋಷಿಯು. ದಿವೋದಾಸನ ವಿಷಯವನ್ನು ನಾವು ಹಿಂದೆಯೇ ತಿಳಿಸಿದೇವೆ. ದಿವೋದಾಸ ಅಥವಾ ದಿವೋದಾಸ ಅತಿಥಿಗ್ವನೆಂಬುವನು ಬಹುಪ್ರಾಚೀನಕಾಲದ (ವೇದಕಾಲದಲ್ಲಿ) ಹೆಸರುವಾಸಿಯಾದ ಒಬ್ಬ ರಾಜನು. ಇವನು ವಧ್ರ್ಯಶ್ವನೆಂಬುವನ ಮಗನು ಮತ್ತು ಸುದಾಸನೆಂಬುವನಿಗೆ ತಂದೆಯು. ಇವನ ಹೆಸರು ಋಗ್ವೇದದಲ್ಲಿ ಅನೇಕಕಡೆ ಬಂದಿದೆ. ಈ ದಿವೋದಾಸನಿಗೆ ಶಂಬರ ಅಥವಾ ದಾಸನೆಂಬ ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತಿದ್ದ ಕಾಡುಜನರ ನಾಯಕನು ಮುಖ್ಯಶತ್ರುವೆಂದು ಅಲ್ಲಲ್ಲಿ ಹೇಳಿದೆ. ಈ ದಿವೋದಾಸದೃಷ್ಟವಾದ ಸೂಕ್ತಗಳು ಋಗ್ವೇದದಲ್ಲಿ ಎಲ್ಲಿಯೂ ಇರುವುದಿಲ್ಲ. ಆದುದರಿಂದ ಇವನ ಮಗನಾದ ಪರುಚ್ಛೇಪಋಷಿಯೇ ಈ ಸೂಕ್ತಗಳಿಗೆ ದ್ರಷ್ಟೃವೇ ಎಂಬ ವಿಷಯದಲ್ಲಿ ಆಧುನಿಕ ವಿದ್ವಾಂಸರ ಅಭಿಪ್ರಾಯ ಭೇದವಿದೆ. ಅದು ಹೇಗಾದರೂ ಇರಲಿ. ಅನುಕ್ರಮಣಿಕೆಯ ಪ್ರಕಾರ ಎಂದರೆ—**ಅಗ್ನಿಮೇಕಾದಶ ಪರುಚ್ಛೇಪೋ ದೈವೋದಾಸಿರಾಗ್ನೇಯಂ ತು ಪಾರುಚ್ಛೇಪಂ ಸರ್ವಮಾತ್ಯಷ್ಟಂ ತತ್ರಾತಿಧೃತಿಃ ಷಷ್ಠೀತಿ** ಎಂಬ ವಾಕ್ಯಾನುಸಾರವಾಗಿ ಮೇಲೆ ಹೇಳಿದ ೧೩ ಸೂಕ್ತಗಳಿಗೂ (೧೨೭–೧೩೯) ಪರುಚ್ಛೇಪನೇ ಋಷಿಯೆಂದು ನಿರ್ದಿಷ್ಟವಾಗಿರುವುದು. ಯಾಸ್ಕರು ತಮ್ಮ ನಿರುಕ್ತದಲ್ಲಿ—

**ಪರುಚ್ಛೇಪ ಋಷಿಃ । ಪರ್ವವಚ್ಛೇಪಃ ಪರುಷಿಪರುಷಿ ಶೇಪೋಽಸ್ಯೇತಿ ವಾ ।**

(ನಿ. ೧೦-೪೨)

ಎಂದು ಹೇಳಿರುವರು. ಸುಖಾಧಿಕ್ಯದಿಂದ ಬೆಳೆದವನಾದುದರಿಂದ ಸರ್ವಾಂಗ ಸಂಧಿಗಳಲ್ಲಿಯೂ ಚೆನ್ನಾಗಿ ಪುಷ್ಟಿಯಿಂದ ಕೂಡಿರುವ ಎಂದು ಮುಖ್ಯಾಭಿಪ್ರಾಯವು. ಇಲ್ಲಿ ಪರುಚ್ಛೇಪಶಬ್ದದ ಅವಯವಾರ್ಥವು ಅಷ್ಟು ಮುಖ್ಯವೇನಲ್ಲ. ಈ ಋಷಿಯ ವಿಚಾರವು ಐತರೇಯ ಬ್ರಾಹ್ಮಣದಲ್ಲಿಯೂ (ಅಧ್ಯಾಯ ೨೨, ಖಂಡ ೫-೬) ಕೌಷೀತಕೀ ಬ್ರಾಹ್ಮಣ (೧೩–೪-೫) ದಲ್ಲಿಯೂ ಉಕ್ತವಾಗಿರುವುದು. ಈ ಪರುಚ್ಛೇಪಋಷಿದೃಷ್ಟವಾದ ೧೩ ಸೂಕ್ತಗಳಲ್ಲಿ ಒಟ್ಟು ೧೦೦ ಋಕ್ಕುಗಳಿರುವವು. ಈ ಋಷಿಯ ಪುತ್ರನಾದ ಅನಾನತಃ ಪಾರುಚ್ಛೇಪಿಃ ಎಂಬುವನು ೯ ನೇ ಮಂಡಲದ ೧೧೧ ನೇ ಸೂಕ್ತದಲ್ಲಿರುವ ೩ ಋಕ್ಕುಗಳಿಗೆ ದ್ರಷ್ಟೃವಾಗಿರುವನು. ಈ ಋಕ್ಕುಗಳಿಗೆಲ್ಲಾ ಒಂದು ಪ್ರತ್ಯೇಕವಾದ ವೈಶಿಷ್ಟ್ಯವಿರುವುದು. ಇವುಗಳು ಅತ್ಯಷ್ಟಿಃ, ಅತಿಶಕ್ವರೀ, ಅತಿಧೃತಿಃ ಎಂಬ ಹೆಸರಿನ ಛಂದಸ್ಸಿನ ರೂಪದಲ್ಲಿರುವವು. ೧೩೭ ನೇ ಸೂಕ್ತವು ಅತಿಶಕ್ವರೀ ಎಂಬ ಛಂದಸ್ಕವು. ಉಳಿದ ಸೂಕ್ತಗಳು (ಕೆಲವು ಋಕ್ಕುಗಳು ಹೊರತಾಗಿ) ಅತ್ಯಷ್ಟಿ ಎಂಬ ಛಂದಸ್ಸಿನಿಂದ ರಚಿತವಾಗಿರುವವು. ಈ ವಿಧವಾದ ಛಂದಸ್ಸಿಗೆ ೭ ಪಾದಗಳೂ ಒಟ್ಟು ೬೮ ಅಕ್ಷರಗಳೂ ಇರುವವು. ಕೆಲವು ಸಂದರ್ಭಗಳಲ್ಲಿ ಒಂದೆರಡು ಅಕ್ಷರಗಳು ಹೆಚ್ಚು ಕಡಿಮೆ ಇರುವುದೂ ಉಂಟು. ಈ ಛಂದಸ್ಸುಗಳ ಲಕ್ಷಣಾದಿಗಳನ್ನು ನಾವು ಉದಾಹರಣೆಗಳೊಡನೆ ಋ. ಸಂ. ಭಾಗ ೧ ಪೇಜು 221-231 ಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಪರುಚ್ಛೇಪ ಋಷಿದೃಷ್ಟವಾದ ಋಕ್ಕುಗಳ ಮತ್ತೊಂದು ವೈಶಿಷ್ಟ್ಯವನ್ನು ಯಾಸ್ಕರು—

**ಅಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯೇತಿ । ತತ್ಪರುಚ್ಛೇಪಸ್ಯ ಶೀಲಂ ॥**

(ನಿ. ೧೦-೪೨)

ಎಂದರೆ ಈ ಋಷಿದೃಷ್ಟವಾದ ಋಕ್ಕುಗಳಲ್ಲಿ ಅಭ್ಯಾಸ ಎಂದರೆ ದ್ವಿರುಕ್ತಿಯು ವಿಶೇಷವಾಗಿ ಕಂಡುಬರುವುದು. ಸಾಧಾರಣವಾಗಿ ಗಾಯತ್ರೀ ತ್ರಿಷ್ಟುಪ್ ಜಗತೀ ಮೊದಲಾದ ಛಂದಸ್ಸಿನ ಋಕ್ಕುಗಳಲ್ಲಿ ಪೂರ್ವಾರ್ಧ, ಉತ್ತರಾರ್ಧ ವೆಂದು ಎರಡು ಭಾಗಗಳು ಮಾತ್ರ ಇರುವವು. ಆದರೆ ಅತ್ಯಷ್ಟಿ ಮೊದಲಾದ ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳಲ್ಲಿ ಮೂರು ಅರ್ಧಗಳಿರುವವು. ಆ ಮೂರು ಅರ್ಧಗಳಲ್ಲಿ ಮೊದಲನೆಯ ಮತ್ತು ಮೂರನೆಯ ಅರ್ಧಗಳ ಅಂತ್ಯಭಾಗದಲ್ಲಿ ಒಂದೆರಡು ಶಬ್ದಗಳು ಪಲ್ಲವಿಯಂತೆ ಪುನಃ ಪುನಃ ಪಠಿತವಾಗಿರುವುದು. ಉದಾ—

**ಅಗ್ನಿಂ ಹೋತಾರಂ ಮನ್ಯೇ ದಾಸ್ವಂತಂ ವಸುಂ ಸೂನುಂ ಸಹಸೋ ಜಾತವೇದಸಂ ವಿಪ್ರಂ ನ ಜಾತವೇದಸಂ ।**

ಎಂಬ ಋಕ್ಕಿನಲ್ಲಿ **ಜಾತವೇದಸಂ** ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದು. ಈ ಪುನರುಕ್ತಿಯ ಮಧ್ಯದಲ್ಲಿ **ವಿಪ್ರಂ ನ** ಎಂಬ ಶಬ್ದಗಳು ಇರುವವು. ಈ ಅಭ್ಯಾಸಶಬ್ದವು ಯಾವಾಗಲೂ ವಾಕ್ಯದ ಕೊನೆಯಲ್ಲಿಯೇ ಇರುವುದು.

**ನಿಷ್ಷಹಮಾಣೋ ಯಮತೇ ನಾಯತೇ ಧನ್ವಾಸಹಾ ನಾಯತೇ ।**

ಈ ಋಕ್ಕಿನಲ್ಲಿ **ನ ಆಯತೇ** ಎಂಬ ಶಬ್ದಗಳು ಎರಡಾವರ್ತಿ ಪಠಿತವಾಗಿ ಅವುಗಳ ಮಧ್ಯದಲ್ಲಿ **ಧನ್ವಾಸಹಾ** ಎಂಬ ಶಬ್ದವು ಇರುವುದು. ಈ ಅಭ್ಯಾಸ ವಿಷಯವನ್ನು ಯಾಸ್ಕರು **ಅಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯೇತಿ ।** ಎಂದು ಹೇಳಿ ಇದರ ಅರ್ಥವನ್ನು ವಿವರಿಸಿರುವರು. ಈ ವಾಕ್ಯಕ್ಕೆ ನಿರುಕ್ತವ್ಯಾಖ್ಯಾಕಾರರು—

**ಅಭ್ಯಾಸೇ ಭೂಯಾಂಸಂ ಅರ್ಥಂ ಮನ್ಯಂತೇ । ಶಬ್ದಾಭ್ಯಾಸೇ ಯತ್ರಾನ್ಯೋ ವಿಶೇಷೋ ನಾಸ್ತಿ ತತ್ರೈವಂ ವಿಶೇಷಮಾಚಾರ್ಯಾ ಮಂತ್ರಾರ್ಥತತ್ತ್ವವಿದೋ ಮನ್ಯಂತೇ ಯದುತಾರ್ಥಭೂಯಸ್ತ್ವಮಿತಿ । ನಹ್ಯಕಸ್ಮಾತ್ ಸ ಏವ ಶಬ್ದಃ ಪುನರಭ್ಯಸ್ಯತೇ । ಲೋಕೇಽಪಿ ಚೈತತ್ ದೃಷ್ಟಂ ಶಬ್ದಾಭ್ಯಾಸೇಽರ್ಥಭೂಯಸ್ತ್ವಮಿತಿ । ಯಥಾ ಅಹೋ ದರ್ಶನೀಯಃ ! ಅಹೋ ದರ್ಶನೀಯ ! ಇತಿ । ಗುಣಾತಿಶಯೋ ಹಿ ಸ್ತ್ರಿಯಾಃ ಶಬ್ದಾಭ್ಯಾಸಃ ತಸ್ಮಾನ್ಮಂತ್ರೇಷ್ವಪಿ ತದ್ವದೇವೇತಿ ನ್ಯಾಯ್ಯಂ ॥**

ಎಂದರೆ ಒಂದು ಶಬ್ದವನ್ನು ವಾಕ್ಯದಲ್ಲಿ ಎರಡಾವರ್ತಿ ಉಚ್ಚರಿಸುವಾಗ ಆ ಶಬ್ದಕ್ಕೆ ಬೇರೆ ಬೇರೆ ಎರಡರ್ಥಗಳಿಲ್ಲದ ಪಕ್ಷದಲ್ಲಿ, ಶಬ್ದದ ಪುನರುಕ್ತಿಯು ಅರ್ಥಾತಿಶಯವನ್ನು ಸೂಚಿಸುವುದು. ಎಂದರೆ ಹೇಳಿದ ವಿಷಯಕ್ಕೆ ಪ್ರಾಮುಖ್ಯತೆಯನ್ನು ಕೊಡುವುದಕ್ಕಾಗಿ ಅಥವಾ ವಿಷಯವು ಮನಸ್ಸಿಗೆ ಚೆನ್ನಾಗಿ ನಾಟುವಂತೆ ಹೇಳುವುದಕ್ಕಾಗಿ, ಉಪಯೋಗಿಸಲ್ಪಡುವುದು. ಉದಾ—ಸ್ತ್ರೀಯರ ಸೌಂದರ್ಯವನ್ನು ವರ್ಣನೆ ಮಾಡುವಾಗ ಅಹೋ ದರ್ಶನೀಯ ಅಹೋ ದರ್ಶನೀಯ ಎಂದು ಹೇಳುವುದುಂಟು. ಆಗ ದ್ವಿರುಕ್ತಿಗೆ ಆಹಾ ಎಂತಹ ಸೌಂದರ್ಯ, ಎಂತಹ ಸೌಂದರ್ಯವೆಂದು

ಸೌಂದರ್ಯಾತಿಶಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಲೋಕವ್ಯವಹಾರದಲ್ಲಿ ಹೇಳುವ ರೂಢಿ ಇರುವುದು. ಅದರಂತೆ ಇಲ್ಲಿಯೂ ಇರುವುದೆಂದು ಭಾವಿಸಬೇಕು, ಎಂದು ಹೇಳಿರುವರು. ಆದರೆ ಸಾಯಣರು ಸಾಧಾರಣವಾಗಿ ಈ ಋಕ್ಕು ಗಳಲ್ಲಿರುವ ಅಭ್ಯಾಸಶಬ್ದಗಳಿಗೆ ಬೇರೆ ಬೇರೆ ಅರ್ಥಗಳನ್ನು ಹೊಂದಿಸಿ ಅರ್ಥವಿವರಣೆ ಮಾಡಿರುವರು.

ಈ ವಿಧವಾದ ದ್ವಿರುಕ್ತಿಗೆ ಮತ್ತೊಂದು ಪ್ರಯೋಜನವುಂಟು. ಋಗ್ವೇದದ ಅನೇಕ ಋಕ್ಕುಗಳು ಗಾನ ಮಾಡುವುದಕ್ಕೆ ಯೋಗ್ಯವಾಗಿರುವಂತೆಯೇ ರಚಿಸಲ್ಪಟ್ಟಿರುವುವು. ರಾಗಾದಿಗಳಿಂದ ಯುಕ್ತವಾದ ಕೃತಿಗಳನ್ನು ಹಾಡುವಾಗ ಪಲ್ಲವಿಯನ್ನೂ ಅನುಪಲ್ಲವಿಯನ್ನೂ ಮತ್ತೆ ಮತ್ತೆ ಹಾಡುವುದು ಲೋಕದಲ್ಲಿ ಎಲ್ಲರಿಗೂ ತಿಳಿದ ವಿಷಯ ವಾಗಿದೆ. ಆದುದರಿಂದ ಈ ಋಕ್ಕುಗಳೂ ಇನ್ನೂ ಅನೇಕ ಋಕ್ಕುಗಳೂ ಶ್ರಾವ್ಯವಾಗಿರುವಂತೆ ಗಾನಮಾಡುವ ಉದ್ದೇಶ ದಿಂದ ರಚಿಸಲ್ಪಟ್ಟಿರಬೇಕು. ಆದುದರಿಂದಲೇ ಶಸ್ತ್ರಮಂತ್ರಪಠನಕ್ಕಾಗಿ ಈ ಪಾರುಚ್ಛೇಪ ಮಂತ್ರಗಳ ವಿನಿಯೋಗ ವಿರುವುದೆಂದು ಐತರೇಯ ಬ್ರಾಹ್ಮಣದಲ್ಲಿಯೂ ಹೇಳಲ್ಪಟ್ಟಿರುವುದು. ಈ ದೃಷ್ಟಿಯಿಂದಲೇ ಸಾಮವೇದದ ಬಹು ಭಾಗವು ಋಗ್ವೇದದ ಋಕ್ಕುಗಳೇ ಆಗಿರುವುವು.

ವೇದಮಂತ್ರಗಳನ್ನು ಅರ್ಥವತ್ತಾಗಿ ತಿಳಿದುಕೊಂಡು ಅವುಗಳನ್ನು ಭಕ್ತಿಶ್ರದ್ಧೆಗಳಿಂದ ಸ್ವರಸಹಿತವಾಗಿ ಪಠನ ಅಥವಾ ಗಾನವನ್ನು ಮಾಡುವಾಗ ವೇದಮಂತ್ರಪಠನಮಾಡುವವರಿಗೂ, ಅಂತಹ ವೇದಘೋಷವನ್ನು ಕೇಳುವ ಶ್ರೋತ್ರವೃಂದಕ್ಕೂ ಒಂದು ಅನಿರ್ವಚನೀಯವಾದ ಆನಂದವುಂಟಾಗುವುದೆಂಬ ವಿಷಯವು ಅನೇಕರ ಅನುಭವಕ್ಕೆ ಬಂದಿರುವುದು. ಪಾಶ್ಚಾತ್ಯರೇ ಮೊದಲಾದ ಕೆಲವು ಆಧುನಿಕ ವಿದ್ವಾಂಸರು ವೇದಮಂತ್ರಗಳನ್ನು ಅರ್ಥಪ್ರಾಧಾನ್ಯ ದೃಷ್ಟಿಯಿಂದ ಮಾತ್ರವೇ ನೋಡುವುದರಿಂದ ಅವರಿಗೆ ವೇದಮಂತ್ರಗಳ ಸಂಪೂರ್ಣ ಸ್ವಾರಸ್ಯವು ತಿಳಿಯಲು ಅವಕಾಶ ವಿಲ್ಲ. ಅದಕ್ಕಾಗಿ ಅವರು ಪ್ರಯತ್ನಪಡುವುದೂ ಇಲ್ಲ. ಕೆಲವರು ಈ ಋಕ್ಕುಗಳು ಛಂದೋಬದ್ಧವಾಗಿದ್ದರೂ ಅನೇಕ ಲೋಪದೋಷಗಳೂ ವ್ಯಾಕರಣನಿಯಮೋಲ್ಲಂಘನೆಗಳೂ ಇರುವುವೆಂದೂ, ಪ್ರೌಢ ಕವಿತೆಗೆ ಸೇರಿದ್ದಲ್ಲವೆಂದೂ ಅಭಿಪ್ರಾಯಪಡುವರು. ಆದರೆ ಅವರ ಅಭಿಪ್ರಾಯವು ಸಾಧುವಾದುದಲ್ಲ. ಏಕೆಂದರೆ ಆ ಕಾಲದಲ್ಲಿ ಲಿಖಿತಭಾಷೆ ಇರಲಿಲ್ಲ. ಎಲ್ಲವನ್ನೂ ಕಂಠಪಾಠವಾಗಿಯೇ ಅಭ್ಯಾಸಮಾಡಬೇಕಾಗಿತ್ತು. ಆದುದರಿಂದ ಶಬ್ದೋಚ್ಚಾರಣೆಗೂ ಶ್ರಾವ್ಯತ್ವಕ್ಕೂ ಹೆಚ್ಚು ಗಮನ ಕೊಡುವುದು ಸ್ವಾಭಾವಿಕವು. ಮತ್ತು ಲಿಖಿತಭಾಷೆಯೂ ಇಲ್ಲದೆ ವ್ಯಾಕರಣವೂ ಇಲ್ಲದಿರುವಾಗ ಆ ಕಾಲದಲ್ಲಿ ಬಳಕೆಯಲ್ಲಿದ್ದ ಶಬ್ದಗಳನ್ನೂ ಭಾಷಾಶೈಲಿಯನ್ನೂ ಉಪಯೋಗಿಸುವುದು ಸಹಜವೇ ಆಗಿರುವುದು. ಮತ್ತು ಈಚೆಗೆ ಪಾಣಿನಿಯೇ ಮೊದಲಾದವರಿಂದ ರಚಿತವಾದ ವ್ಯಾಕರಣಶಾಸ್ತ್ರಗಳು ವೇದಶಬ್ದಗಳ ಆಧಾರದಿಂದಲೇ ರಚಿಸಲ್ಪಟ್ಟಿರುವುವೆಂಬುದನ್ನು ಮರೆಯಬಾರದು. ಭಾಷೆಯಿಂದ ವ್ಯಾಕರಣವೇ ಹೊರತು ವ್ಯಾಕರಣ ದಿಂದ ಭಾಷೆಯಲ್ಲ. ಭಾಷೆಯೇ ಮೂಲ. ಅದನ್ನನುಸರಿಸಿ ವ್ಯಾಕರಣವಿರುವುದು. ಆದುದರಿಂದ ವೇದಮಂತ್ರಗಳಲ್ಲಿ ಕಂಡು ಬರುವ ಶಬ್ದಾದಿಗಳ ರೂಪಗಳ ವಿಷಯದಲ್ಲಿ **ಈಗಿನ** ವ್ಯಾಕರಣ ನಿಯಮಗಳನ್ನು ಅದಕ್ಕೆ ಕಟ್ಟುನಿಟ್ಟಾಗಿ ಅನ್ವಯಿಸುವುದು ಸಮಂಜಸವಾಗಲಾರದು.

ಗಾನ ದೃಷ್ಟಿಯಿಂದ ಅನೇಕ ಋಕ್ಕುಗಳ ರಚನೆಯಾಗಿರಬಹುದೆಂದು ಹಿಂದೆಯೇ ಹೇಳಿರುವುದಷ್ಟೆ. ಆ ಕಾರಣ ದಿಂದ ಅನೇಕ ಸಂದರ್ಭಗಳಲ್ಲಿ ಹ್ರಸ್ವಾಕ್ಷರಗಳು ದೀರ್ಘಾಕ್ಷರಗಳಾಗಿಯೂ ದೀರ್ಘಾಕ್ಷರಗಳು ಹ್ರಸ್ವಾಕ್ಷರಗಳಾಗಿಯೂ ಉಪಯೋಗಿಸಿರುವುದು ಅಲ್ಲಲ್ಲಿ ಕಂಡುಬರುವುದು ಉದಾ;—**ಅಧ ಘ ಸ್ಮ** ಮೊದಲಾದ ಶಬ್ದಗಳು ಸಂಹಿತಾ ಪಾಠದಲ್ಲಿ ದೀರ್ಘಾಕ್ಷರಗಳಾಗಿರುವುವು. ಇದರಂತೆ **ಋತವೃಧಾ** ಎಂಬುದು **ಋತಾವೃಧಾ** ಎಂದು ಉಚ್ಚರಿಸಲ್ಪಡುವುದು.

**ಇತ್ಯಾದಿ.** ಅನೇಕ ಸಂದರ್ಭಗಳಲ್ಲಿ ಶಬ್ದಗಳ ಒಂದೆರಡು ಅಕ್ಷರಗಳು ಲೋಪವಾಗಿರುವುವು. ಉದಾ;—**ಆತ್ಮನಾ** ಎನ್ನುವುದಕ್ಕೆ ಬದಲಾಗಿ **ತ್ಮನಾ** ಎಂದೂ **ಭಾವಯವ್ಯಸ್ಯ** ಎನ್ನುವುದಕ್ಕೆ ಬದಲಾಗಿ **ಭಾವ್ಯಸ್ಯ** ಎಂದೂ ಇರುವುದು. ಈ ರೀತಿಯಾದ ಲೋಪದೋಷಗಳು ಆಧುನಿಕ ಭಾಷೆಗೂ ಹೊಸದೇನಲ್ಲ. ಉದಾ;—ಕೃತಿಗಳನ್ನು ಹಾಡುವಾಗ ಗಾನಮಾಡುವವರು **ಕೃಷ್ಣಮೂರ್ತಿ** ಎಂಬ ಕಡೆ **ಕೃಷ್ಣಾ ಮೂರುತಿ** ಎಂದೂ, **ಕೀರ್ತಿ** ಎಂಬ ಕಡೆ **ಕೀರುತಿ** ಎಂದೂ ಹಾಡುವುದುಂಟು. ಇಂತಹ ಲೋಪದೋಷಗಳು ಬಹಳವಾಗಿವೆ. ವೇದಮಂತ್ರಗಳು ಕೇವಲ ಉಚ್ಚಾರಣೆಯಿಂದ ಪರಂಪರೆಯಾಗಿ ಉಪದೇಶ ಮಾಡಲ್ಪಟ್ಟು ನಡೆದು ಬಂದಿರುವುದರಿಂದ ಇಂತಹ ಅಲ್ಪದೋಷಗಳು (ಅವು ದೋಷಗಳೇ ಅಲ್ಲ) ಇರುವುದು ಅಸ್ವಾಭಾವಿಕವಲ್ಲ

ಪರುಚ್ಛೇಪಋಷಿದೃಷ್ಟವಾದ ಸೂಕ್ತಗಳು ಬಹು ಪ್ರಾಚೀನವಾದ ಮಂತ್ರಗಳಲ್ಲಿ ಸೇರಿರುವುವು ಎಂಬ ವಿಷಯದಲ್ಲಿ ಸಂಶಯವಿಲ್ಲ ಈ ಋಕ್ಕುಗಳಲ್ಲಿರುವ ಕೆಲವು ಶಬ್ದಗಳ ಮತ್ತು ವಾಕ್ಯಗಳ ಅರ್ಥವು ಬಹು ಕ್ಲಿಷ್ಟವಾಗಿಯೂ, ಅಸ್ಪಷ್ಟವಾಗಿಯೂ ಇರುವುದರಿಂದ ಅರ್ಥವು ಅನೇಕ ಸಂದರ್ಭಗಳಲ್ಲಿ ಸಮಂಜಸವಾಗಿ ಹೊಂದುವುದಿಲ್ಲ. ಈ ಮಂತ್ರಗಳಲ್ಲಿ ಬಹುಭಾಗವು ಶಸ್ತ್ರಮಂತ್ರಗಳಲ್ಲಿ ಸೇರಿಸಲ್ಪಟ್ಟಿರುವುವು. ಅವುಗಳವಿವರಣೆಯು ಐತರೇಯ ಬ್ರಾಹ್ಮಣದಲ್ಲಿ ಈ ರೀತಿಯಾಗಿರುವುದು

**ದೇವಾಸುರಾ ವಾ ಏಷು ಲೋಕೇಷು ಸಮಯತಂತ ತೇ ವೈ ದೇವಾಃ ಷಷ್ಠೇನೈವಾಹ್ನೇಭ್ಯೋ ಲೋಕೇಭ್ಯೋಽಸುರಾನ್ ಪ್ರಾಣುದಂತ ತೇಷಾಂ ಯಾನ್ಯಂತರ್ಹಸ್ತೀನಾನಿ ವಸೂನ್ಯಾ—ಸಂಸ್ತಾನ್ಯಾದಾಯ ಸಮುದ್ರಂ ಪ್ರೌಸ್ಯಂತ ತ ಏತೇನೈವ ಛಂದಸಾನುಹಾಯಾನ್ತರ್ಹಸ್ತೀನಾನಿ ವಸೂನ್ಯಾದದತ ತದ್ಯದೇತತ್ಪದಂ ಪುನಃಪದಂ ಸ ಏವಾಂಕುಶ ಆಸಂಜನಾಯ । ಆ ದ್ವಿಷತೋ ವಸು ದತ್ತೇ ನಿರೇನಮೇಭ್ಯಃ ಸರ್ವೇಭ್ಯೋ ಲೋಕೇಭ್ಯೋ ನುದತೇ ಯ ಏವಂ ವೇದ ॥**

(ಐ. ಬ್ರಾ. ೨೨-೬)

ದೇವತೆಗಳಿಗೂ ಅಸುರರಿಗೂ ಒಂದು ಸಲ ಈ ಲೋಕದಲ್ಲಿ ದೊಡ್ಡ ಯುದ್ಧವಾಯಿತು. ಆಗ ದೇವತೆಗಳು (ದ್ವಾದಶಾಹವೆಂಬ ಯಾಗದ) ಆರನೆಯ ದಿವಸ ಯಜ್ಞಾನುಷ್ಠಾನ ಮಾಡಿ ಅಸುರರನ್ನು ಜಯಿಸಿ ಈ ಲೋಕದಿಂದ ಓಡಿಸಿದರು. ಆಗ ಅಸುರರು ಸೋತುಹೋಗಿ ತಮ್ಮ ಕೈಗೆ ಸಿಕ್ಕಿದ ಧನಕನಕಾದಿ ವಸ್ತುಗಳನ್ನು ರಣರಂಗದಿಂದ ಹೊತ್ತುಕೊಂಡು ಹೋಗಿ ಸಮುದ್ರದಲ್ಲಿ ಬಿಸಾಡಿದರು. ಬಳಿಕ ದೇವತೆಗಳು ಅಸುರರನ್ನು ಅಟ್ಟಿಸಿಕೊಂಡುಹೋಗಿ ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳ ಪಠನಸಾಮರ್ಥ್ಯದಿಂದ ಅಸುರರು ಸಮುದ್ರದಲ್ಲಿ ಹಾಕಿದ್ದ ಧನಗಳನ್ನು ಹಿಂದಕ್ಕೆ ಪಡೆದರು ಹೀಗೆ ಪಡೆಯುವಾಗ ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳಲ್ಲಿರುವ ಏಳನೆಯ ಪಾದವು (ಪುನಃ ಪಠಿತವಾದ ಪಾದವು) ಇವರಿಗೆ ಸಹಾಯಕವಾಯಿತು ಲೋಕದಲ್ಲಿ ಜನರು ತಮಗೆ ನಿಲುಕದ ವಸ್ತುವನ್ನು ಕೊಕ್ಕೆ (hook) ಯಿಂದ ಕೂಡಿದ ಉದ್ದವಾದ ಕೋಲಿನಿಂದ ಎಳೆದುಕೊಳ್ಳುವುದು ಸ್ವಾಭಾವಿಕವು. ಅದರಂತೆ ಈ ಋಷಿದೃಷ್ಟವಾದ ಋಕ್ಕುಗಳಲ್ಲಿನ ಪುನಃ ಪಠಿತವಾಗುವ ಏಳನೆಯ ಪಾದವು (**ಸುಮ್ನೈಳೀಕೋ ನ ಆಗಹಿ** ಎಂಬ ಪಾದದಂತಿರುವ ಏಳನೆಯ ಪಾದವು) ಸಮುದ್ರಮಧ್ಯದಲ್ಲಿದ್ದ ಧನಾದಿವಸ್ತುಗಳನ್ನು ಆಕರ್ಷಿಸಿ ದೇವತೆಗಳಿಗೆ ಸೇರುವಂತೆ ಮಾಡಿತು ಎಂದಭಿಪ್ರಾಯವು ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡು ಅದರಂತೆ ಮಂತ್ರೋಚ್ಚಾರಣೆಮಾಡಿ ಕಾರ್ಯವನ್ನು ನೆರವೇರಿಸುವ ಪುರುಷನು ಶತ್ರುಗಳನ್ನು ಜಯಿಸಿ, ಈ ಲೋಕದಿಂದ ಅವನನ್ನು ಓಡಿಸಿ ಅವನ ಸಂಪತ್ತನ್ನು ತಾನೇ ಪಡೆಯುವನು.

ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳ ವಿನಿಯೋಗ ಮತ್ತು ಅವುಗಳ ಅಂತರಾರ್ಥವಿವರಣೆಯು ಐತರೇಯ ಬ್ರಾಹ್ಮಣದಲ್ಲಿ ಈರೀತಿ ಉಕ್ತವಾಗಿರುವುದು. (ಐ. ಬ್ರಾ. ೨೨-೪)—

**ಪಾರುಚ್ಛೇಪೀರುಪದಧತಿ ಪೂರ್ವಯೋಃ ಸವನಯೋಃ ಪುರಸ್ತಾತ್ಪ್ರಸ್ಥಿತಯಾಜ್ಯಾನಾಂ ರೋಹಿತಂ ವೈ ನಾಮೈತಚ್ಛಂದೋ ಯೆತ್ಪಾರುಚ್ಛೇಪಮೇತೇನ ವಾ ಇಂದ್ರಃ ಸಪ್ತ ಸ್ವರ್ಗಾಂಲ್ಲೋಕಾನ-ರೋಹತ್ । ರೋಹತಿ ಸಪ್ತ ಸ್ವರ್ಗಾಂಲ್ಲೋಕಾನ್ಯ ಏವಂ ವೇದ । ತದಾಹುರ್ಯತ್ಪಂಚಪದಾ ಏವ ಪಂಚಮಸ್ಯಾಹ್ನೋ ರೂಪಂ ಷಟ್ಪದಾಃ ಷಷ್ಠಸ್ಯಾಥ ಕಸ್ಮಾತ್ಸಪ್ತಪದಾಃ ಷಷ್ಠೇSಹಞ್ಛ-ಸ್ಯಂತ ಇತಿ । ಷಡ್ಭಿರೇವ ಪದೈಃ ಷಷ್ಠಮಹರಾಪ್ನುವಂತ್ಯಪಚ್ಛಿದ್ಯೈವೈತದಹರ್ಯತ್ಸಪ್ತಮಂ ತದೇವ ಸಪ್ತಮೇನ ಪದೇನಾಭ್ಯಾರಭ್ಯ ವಸಂತಿ ವಾಚಮೇವ ತತ್ಸ್ವನರುಪಯಂತಿ ಸಂತತ್ಯೈ ॥**

ಪ್ವಾದಶಾಹ ಅಥವಾ ದಶರಾತ್ರ ಎಂಬ ಯಜ್ಞದ ಆರನೆಯ ದಿವಸ ನಡೆಯುವ ಪ್ರಾತಸ್ಸವನ ಮಾಧ್ಯಂದಿನಸವನಗಳಲ್ಲಿ (ಸವನವೆಂದರೆ ಸೋಮವನ್ನು ಲತೆಯಿಂದ ಜಜ್ಜಿ ತೆಗೆದು ಹಿಂಡುವ ಕರ್ಮ) ಹೋತೃವರ್ಗಕ್ಕೆ ಸೇರಿದ ಏಳು ಜನ ಋತ್ವಿಕ್ಕುಗಳು ಪ್ರಸ್ಥಿತಯಾಜ್ಯಾಮಂತ್ರಗಳನ್ನು ಪಠಿಸುವರು. ಎಂದರೆ ಮೊದಲು ಒಂದೊಂದು ಪಾರುಚ್ಛೇಪ ಋಕ್ಕನ್ನು ಪಠಿಸಿ ಅನಂತರ ಒಂದೊಂದು ಪ್ರಸ್ಥಿತ ಯಜ್ಯಾಮಂತ್ರವನ್ನು ಪಠಿಸಬೇಕು. ಈ ಸಂದರ್ಭದಲ್ಲಿ ಪಠಿಸಬೇಕಾದ ಪಾರುಚ್ಛೇಪ ಮಂತ್ರಗಳು ಯಾವವೆಂದರೆ—

**ವೃಷನ್ನಿಂದ್ರ ವೃಷಪಾಣಾಸ ಇಂದವಃ** (ಋ. ಸಂ. ೧-೧೩೯-೬) ಎಂಬ ಋಕ್ಕಿನಿಂದ ಈ ಸೂಕ್ತದ ಕೊನೆಯ ಋಕ್ಕಿನವರಿಗೂ (೧-೧೩೯-೧೧) ಮತ್ತೂ

**ಪಿಬಾ ಸೋಮಮಿಂದ್ರ ಸುವಾನಮದ್ರಿಭಿಃ** (ಋ. ಸಂ. ೧-೧೩೦-೨) ಎಂಬ ಋಕ್ಕಿನಿಂದ ಈ ಸೂಕ್ತದ ಕೊನೆಯವರಿಗೂ (ಋ. ಸಂ. ೧-೧೩೦-೨)

ಇರುವ ಋಕ್ಕುಗಳನ್ನು ಒಂದೊಂದಾಗಿ ಪಠಿಸಬೇಕು. ಈ ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳಿಗೆ ರೋಹಿತ (ಹತ್ತುವುದು)ವೆಂದು ಹೆಸರು. ಏಕೆಂದರೆ ಈ ಋಕ್ಕುಗಳ ಪಠನದಿಂದ ಇಂದ್ರನು ಒಂದಾನೊಂದು ಕಾಲದಲ್ಲಿ ಏಳನೆಯ ಸ್ವರ್ಗಲೋಕವನ್ನು ಏರಿದನು. ಇಲ್ಲಿ ಏಳು ಸ್ವರ್ಗಗಳೆಂದರೆ ಸ್ವರ್ಗಲೋಕದಲ್ಲಿ ಉತ್ತಮಾಧಮಭೇದಗಳಿಂದ ಇರುವ ಏಳು ಸ್ವರ್ಗವಿಭಾಗಗಳು. ಯಾವ ಪುರುಷನು ಈರೀತಿ ಈ ಮಂತ್ರಗಳನ್ನು ಪಠಿಸಿ ಯಜ್ಞಾನುಷ್ಠಾನಮಾಡುವನೋ ಅವನೂ ಸಪ್ತಸ್ವರ್ಗವನ್ನು ಹೊಂದುವನು.

ಇಲ್ಲಿ ಒಂದು ವಿಶೇಷ ವಿಷಯವಿರುವುದು. ಈ ಯಾಗದ ಐದನೆಯ ದಿವಸದಲ್ಲಿ ಸವನಕಾಲಗಳಲ್ಲಿ ಐದು ಪಾದಸಂಖ್ಯೆಯ (ಪಂಕ್ತಿಛಂದಸ್ಸು) ಋಕ್ಕುಗಳನ್ನು ಪಠಿಸುವುದು ರೂಢಿಯು. ಅದರಂತೆ ಆರನೆಯ ದಿವಸದಲ್ಲಿ ಆರು ಪಾದಗಳ ಋಕ್ಕನ್ನು ಪಠಿಸಬೇಕಾಗಿರುವುದು. ಆದರೂ ಏಳು ಪಾದಗಳುಳ್ಳ ಪಾರುಚ್ಛೇಪ ಋಕ್ಕುಗಳನ್ನು ಆ ದಿವಸ ಏತಕ್ಕೆ ಪಠಿಸುವರೆಂದರೆ ಆರು ದಿವಸಗಳಲ್ಲಿಯೂ ಋಕ್ಕಿನ ಆರು ಪಾದಗಳಿಂದ ಆರು ಸ್ವರ್ಗಲೋಕಗಳನ್ನು ದಾಟಿ ಏಳನೆಯ ಪಾದದಿಂದ ಸಪ್ತಮ ಸ್ವರ್ಗವನ್ನು ಏರುವರು ಎಂದು ಹೇಳಿರುವುದು. ಏಕೆಂದರೆ ಏಳನೆಯ ಪಾದವು ಪುನರುಕ್ತಿಯಾಗಿರುವುದರಿಂದ ಋಕ್ಕಿನಲ್ಲಿ ಆರು ಪಾದಗಳಿರುವವು ಎಂದೇ ಗಣನೆ. ಏಳನೆಯ ಪಾದಕ್ಕೆ ಶ್ರೇಷ್ಠವಾದ

ಪ್ರಶಸ್ತಿ ಇರುವುದರಿಂದ ಅದನ್ನು ಪಠಿಸಿ ಉತ್ತಮವಾದ ಸಪ್ತಮಸ್ವರ್ಗವನ್ನು ಪಡೆಯಬಹುದೆಂದು ಹೇಳಿದೆ ಎಂದು ಮುಖ್ಯಾಭಿಪ್ರಾಯವು.

ಪರುಚ್ಛೇಪಋಷಿದೃಷ್ಟವಾದ ಸೂಕ್ತಗಳು ಶಸ್ತ್ರಮಂತ್ರಗಳಲ್ಲಿ ಉಪಯೋಗಿಸಲ್ಪಡುವ ವಿಷಯದಲ್ಲಿ ಐತರೇಯ ಬ್ರಾಹ್ಮಣದಲ್ಲಿ ಹೇಳಿರುವುದನ್ನು ಇಲ್ಲಿ ವಿವರಿಸಲಾಗಿದೆ—

**ದ್ಯೌರ್ದೇವತಾ ಷಷ್ಠಮಹರ್ವಹತಿ ತ್ರಯಸ್ತ್ರಿಂಶಸ್ತೋಮೋ ರೈವತಂ ಸಾಮಾತಿಚ್ಛಂದಾಶ್ಛಂದೋ ಯಥಾದೇವತೇನೋತೇನ ಯಥಾಸ್ತೋಮಂ ಯಥಾಸಾಮ ಯಥಾಚ್ಛಂದಸಂ ರಾಧ್ನೋತಿ ಯ ಏವಂ ವೇದ ||**

(ಐ. ಬ್ರಾ. ೨೨-೭)

ಹಿಂದೆ ಹೇಳಿದ ದಶರಾತ್ರಯಾಗದ ಆರನೆಯ ದಿವಸದ ಕಾರ್ಯಕ್ರಮದಲ್ಲಿ ದೇವತಾದಿ ವಿವರಗಳು ಈರೀತಿ ಇರುವವು— ಆರನೆಯ ದಿವಸ ದ್ಯೌಃ ಎಂಬುದು ದೇವತೆಯು, ತ್ರಯಸ್ತ್ರಿಂಶವೆಂಬ ಸ್ತೋಮವಿಶೇಷವನ್ನು ಆದಿನ ಪಠಿಸಬೇಕು. ತ್ರಯಸ್ತ್ರಿಂಶಸ್ತೋಮದ ವಿವರಣೆಯನ್ನು ನಾವು ಹಿಂದೆಯೇ ವಿವರಿಸಿದ್ದೇವೆ. ಆದರೂ ತಾಂಡ್ಯಬ್ರಾಹ್ಮಣದಲ್ಲಿರುವ ಈ ಸ್ತೋಮದ ವಿವರವು—**ಏಕಾದಶಭ್ಯೋ ಹಿಂಕರೋತಿ ಸ ತಿಸೃಭಿಃ ಸ ಸಪ್ತಭಿಃ ಸ ಏಕಯಾ | ಏಕಾದಶಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ಸಪ್ತಭಿಃ | ಏಕಾದಶಭ್ಯೋ ಹಿಂಕರೋತಿ ಸ ಸಪ್ತಭಿಃ ಸ ಏಕಯಾ ಸ ತಿಸೃಭಿರಂತತೋ ವೈ ತ್ರಯಸ್ತ್ರಿಂಶಃ ||** ಎಂದಿದೆ. ಪಠಿಸಬೇಕಾದ ತೃಚವನ್ನು (ಮೂರು ಋಕ್ಕುಗಳನ್ನು) ಪ್ರಥಮ ಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನು ಮೂರಾವರ್ತಿಯೂ ಎರಡನೆಯ ಋಕ್ಕನ್ನು ಏಳಾವರ್ತಿಯೂ ಪಠಿಸಬೇಕು (ಇದರಿಂದ ಹನ್ನೊಂದು ಋಕ್ಕುಗಳನ್ನು ಪಠಿಸಿದಂತಾಗುವುದು.) ದ್ವಿತೀಯ ಪರ್ಯಾಯದಲ್ಲಿ ತೃಚದ ಮೊದಲನೆಯ ಋಕ್ಕನ್ನು ಒಂದು ಸಲವೂ ಎರಡನೆಯ ಋಕ್ಕನ್ನು ಮೂರು ಸಲವೂ ಮೂರನೆಯ ಋಕ್ಕನ್ನು ಏಳು ಸಲವೂ ಪಠಿಸಬೇಕು. (ಒಟ್ಟು ೧೧ ಋಕ್ಕುಗಳು) ತೃತೀಯ ಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನು ಏಳಾವರ್ತಿಯೂ ಎರಡನೆಯ ಋಕ್ಕನ್ನು ಒಂದಾವರ್ತಿಯೂ ಮೂರನೆಯ ಋಕ್ಕನ್ನು ಮೂರಾವರ್ತಿಯೂ ಪಠಿಸಬೇಕು. (ಒಟ್ಟು ೧೧ ಋಕ್ಕುಗಳು) ಈ ರೀತಿ ಮೂರು ಪರ್ಯಾಯಗಳಲ್ಲಿ ಪಠಿಸುವ ಋಕ್ಕುಗಳ ಸಂಖ್ಯೆಯು ಮೂರಾವರ್ತಿ ಹನ್ನೊಂದು ಅಥವಾ ಮೂವತ್ತಮೂರು ಆಗುವುದರಿಂದ ಈ ಸ್ತೋಮಕ್ಕೆ ತ್ರಯಸ್ತ್ರಿಂಶಸ್ತೋಮವೆಂದು ಹೆಸರು. **ರೇವತೀರ್ನಃ ಸಧಮಾದೇ** (ಋ. ಸಂ. ೧-೩೦-೧೩) ಎಂಬ ಋಕ್ಕಿನಿಂದ ಉತ್ಪನ್ನವಾಗುವ ಸಾಮಮಂತ್ರಕ್ಕೆ ರೈವತವೆಂದು ಹೆಸರು. ಗಾಯತ್ರೀ ಛಂದಸ್ಸಿಗಿಂತ ಹೆಚ್ಚಾಗಿ ಅಕ್ಷರಸಂಖ್ಯೆಯುಳ್ಳ ಛಂದಸ್ಸುಗಳಿಗೆ ಅತಿಛಂದಾಃ ಎಂದು ಹೆಸರು. ಈ ಆರನೆಯ ದಿವಸದಲ್ಲಿ ವಾಕ್, ಗೌಃ ದ್ಯೌಃ ಎಂಬಿವು ದೇವತೆಗಳು. ತ್ರಯಸ್ತ್ರಿಂಶಸ್ತೋಮದಿಂದ ಸ್ತುತಿಸಬೇಕು. ರೈವತವೆಂಬ ಸಾಮದಿಂದ ಗಾನಮಾಡಬೇಕು ಅತಿಚ್ಛಂದಛಂದಸ್ಕವಾದ ಋಕ್ಕುಗಳನ್ನು (ಶಸ್ತ್ರಮಂತ್ರಗಳಿಗಾಗಿ) ಪಠಿಸಬೇಕು. ಇವೇ ಆರನೆಯ ದಿವಸದ ವಿಶೇಷವಾದ ಕಾರ್ಯಕ್ರಮಗಳು.

**ಯದ್ವೈ ಸಮಾನೋದರ್ಕಂ ತತ್ಷಷ್ಠಸ್ಯಾಹ್ನೋ ರೂಪಂ ಯದ್ಧ್ಯೇವ ತೃತೀಯ-ಮಹಸ್ತದೇತತ್ಪುನರ್ಯಜ್ಞಷಷ್ಠಂ ಯದಶ್ವವದ್ಯದಂತವದ್ಯತ್ಪುನರಾವೃತ್ತಂ ಯತ್ಪುನನಿವೃತ್ತಂ ಯದ್ರತವದ್ಯತ್ಪರ್ಯಸ್ತವದ್ಯತ್ರಿವದ್ಯದಂತರೂಪಂ ಯದುತ್ತಮೇ ಪದೇ ದೇವತಾ ನಿರುಚ್ಯತೇ ಯದಸೌ ಲೋಕೋಽಭ್ಯುದಿತಃ ॥**

(ಐ ಬ್ರಾ. ೨೨-೭)

ಈ ಯಾಗದ ಮೂರನೆಯ ದಿವಸದಲ್ಲಿ ಯಾವ ಕಾರ್ಯಕ್ರಮಗಳುಂಟೋ ಆ ಕಾರ್ಯಕ್ರಮಗಳೇ ಆರನೆಯ ದಿವಸದಲ್ಲಿಯೂ ಆಚರಿಸಲ್ಪಡಬೇಕು. ಮೂರನೆಯ ದಿವಸದಲ್ಲಿ ಮಂತ್ರಗಳನ್ನು ಪಠಿಸುವಾಗ ಉಚ್ಚರಿಸಿದ ಅಶ್ವವತ್ ಅಂತವತ್ ಎಂದು ಮೊದಲಾಗಿ ಹೇಳಿದ್ದನ್ನೇ ಆರನೆಯ ದಿವಸದಲ್ಲಿಯೂ ಪುನಃ ಪಠಿಸಬೇಕು. ಆದರೆ ಆರನೆಯ ದಿವಸದಲ್ಲಿ ಒಂದು ವಿಶೇಷ ಕ್ರಮವಿರುವುದು.

**ಯತ್ಪಾರುಚ್ಛೇಪಂ ಯತ್ಸಪ್ತಪದಂ ಯನ್ನಾರಾಶಂಸಂ ಯನ್ನಾಭಾನೇದಿಷ್ಠಂ ಯದ್ರೈವತಂ ಯದತಿಚ್ಛಂದಾ ಯತ್ಕೃತಂ ಯತ್ತೃತೀಯಸ್ಯಾಹ್ನೋರೂಪಮೇತಾನಿ ವೈ ಷಷ್ಠಸ್ಯಾಹ್ನೋ ರೂಪಾಣಿ ।**

ಆ ದಿವಸ ಏಳು ಪಾದಗಳಿಂದ ಸಹಿತವಾದ ಪರುಚ್ಛೇಪಋಷಿದೃಷ್ಟವಾದ ಋಕ್ಕಗಳನ್ನೂ ನಾಭಾನೇದಿಷ್ಟದೃಷ್ಟವಾದ ಋಕ್ಕುಗಳನ್ನೂ ನರಾಶಂಸದೇವತೆಯನ್ನು ಸ್ತುತಿಸುವ ಋಕ್ಕುಗಳನ್ನೂ ಪಠಿಸಬೇಕು. ರೈವತವೆಂಬ ಸಾಮದಿಂದ ಗಾನ ಮಾಡಬೇಕು. ಅತಿಚ್ಛಂದಛಂದಸ್ಸಿನ (ಗಾಯತ್ರಿಛಂದಸ್ಸಿಗಿಂತ ಹೆಚ್ಚು ಅಕ್ಷರಗಳುಳ್ಳ ಛಂದಸ್ಸುಗಳು) ಋಕ್ಕುಗಳನ್ನೇ ಉಪಯೋಗಿಸಬೇಕು. ಭೂತಕಾಲದ ಪ್ರಯೋಗವಿರಬೇಕು. ಈ ವಿಶೇಷ ಕ್ರಮಗಳನ್ನು ಮೂರನೆಯ ದಿವಸ ಮಾಡಬೇಕೆಂದು ಹೇಳಿರುವ ಅಥವಾ ಹೇಳದಿರುವ ಕ್ರಮಗಳನ್ನೆಲ್ಲಾ ಆರನೆಯ ದಿವಸವೂ ಆಚರಿಸಬೇಕು. ಈ ರೀತಿ ಮಾಡುವುದೇ ಎಂದರೆ ಪರುಚ್ಛೇಪಋಷಿದೃಷ್ಟ ಮಂತ್ರಪಠನವೇ ಆರನೆಯ ದಿವಸದ ಕಾರ್ಯಕ್ರಮಗಳಲ್ಲಿ ವಿಶೇಷವು.

**ಅಯಂ ಜಾಯತ ಮನುಷೋ ಧರೀಮಣೀತಿ ಷಷ್ಠಸ್ಯಾಹ್ನ ಆಜ್ಯಂ ಭವತಿ ಪಾರುಚ್ಛೇಪಮತಿ-ಚ್ಛಂದಾಃ ಸಪ್ತಪದಂ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ।**

ಆರನೆಯ ದಿವಸ ಪಠಿಸುವ ಆಜ್ಯಶಸ್ತ್ರವೆಂಬ ಮಂತ್ರವು ಪರುಚ್ಛೇಪಋಷಿದೃಷ್ಟವಾದ **ಅಯಂ ಜಾಯತೆ ಮನುಷೋ ಧರೀಮಣಿ** ಎಂಬ ಸೂಕ್ತದ ಋಕ್ಕುಗಳಾಗಿರಬೇಕು. ಇವುಗಳ ಛಂದಸ್ಸು ಅತಿಛಂದವು. ಎಂದರೆ ಸಾಧಾರಣ ಛಂದಸಿನಲ್ಲಿರುವುದಕ್ಕಿಂತ ಹೆಚ್ಚು ಅಕ್ಷರಗಳು ಇವುಗಳಲ್ಲಿರುವುವು. ಮತ್ತು ಈ ಋಕ್ಕುಗಳಲ್ಲಿ ಏಳು ಪಾದಗಳಿರುವುವು. (ಪೂರ್ವಾರ್ಧದಲ್ಲಿ ೩ ಪಾದಗಳೂ ಮಧ್ಯಮಾರ್ಧದಲ್ಲಿ ೨ ಪಾದಗಳೂ ಉತ್ತರಾರ್ಧದಲ್ಲಿ ೨ ಪಾದಗಳೂ ಒಟ್ಟು ೭ ಪಾದಗಳು). ಇವೆಲ್ಲವೂ ಆರನೆಯ ದಿವಸದಲ್ಲಿನ ವಿಶೇಷಕ್ರಮಗಳು.

**ಸ್ತೀರ್ಣಂ ಬರ್ಹಿರುಪ ನೋ ಯಾಹಿ ವೀತಯೆ ಆ ವಾಂ ರಥೋ ನಿಯುತ್ವಾನ್ವಕ್ಷದವಸೇ ಸುಷುಮಾಯಾತಮದ್ರಿಭಿರ್ಯುವಾಂ ಸ್ತೋಮೇಭಿರ್ದೇವಯಂತೋ ಅಶ್ವಿನಾವರ್ಮಹ ಇಂದ್ರ ವೃಷನ್ನಿಂದ್ರಾಸ್ತು ಶ್ರೌಷಳೋಷೂಣೋ ಅಗ್ನೇ ಶೃಣುಹಿ ತ್ವಮೀಳಿತೋ ಯೇ ದೇವಾಸೋ**

**ದಿವ್ಯೇಕಾದಶಸ್ಥೇಯಮದದಾದ್ಭಭಸಮೃಣಚ್ಯುತಮಿತಿ ಪ್ರಉಗಂ ಪಾರುಚ್ಛೇಪಮತಿಚ್ಛಂದಾಃ ಸಪ್ತಪದಂ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

(ಐ. ಬ್ರಾ. ೨೨-೭)

ಪ್ರಉಗ ಶಸ್ತ್ರಮಂತ್ರಗಳಲ್ಲಿ ಈ ಕೆಳಗಿನ ಋಕ್ಕುಗಳಿರುವುವು. ಇವುಗಳು ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳು; ಹೆಚ್ಚು ಅಕ್ಷರಸಂಖ್ಯೆಯಿರುವ ಅತಿಚ್ಛಂದ ಛಂದಸ್ಸುವು; ಏಳು ಪಾದಗಳಿರುವವು. ಅವುಗಳ ಕ್ರಮವು—

**ಸ್ತೃಣೀತ ಬರ್ಹಿರುಪ ನೋ ಯಾಹಿ ವೀತಯೇ** (ಋ. ಸಂ. ೧-೧೩೫-೧ ರಿಂದ ೩ ಋಕ್ಕುಗಳು)

**ಆ ವಾಂ ರಥೋ ನಿಯುತ್ವಾನ್ವಕ್ಷದವಸೇ** (ಋ. ಸ. ೧-೧೩೫-೪ ರಿಂದ ೬ರ ವರೆಗಿನ ಋಕ್ಕುಗಳು)

**ಸುಷುಮಾ ಯಾತಮದ್ರಿಭಿಃ** (ಋ. ಸಂ. ೧-೧೩೭-೧ ರಿಂದ ೩ ಋಕ್ಕುಗಳು)

**ಯುವಾಂ ಸ್ತೋಮೇಭಿರ್ದೇವಯಂತೋ ಅಶ್ವಿನಾ** (ಋ. ಸಂ. ೧-೧೩೯-೩ ರಿಂದ ೬ರ ವರೆಗಿನ ಋಕ್ಕುಗಳು).

**ಅವರ್ಮಹ ಇಂದ್ರ ದಾದೃಹಿ ಶ್ರುಧೀ ನಃ** (ಋ. ಸಂ. ೧-೧೩೩-೬ ಮತ್ತು ೭ ನೆಯ ಋಕ್ಕುಗಳು)

**ಅಸ್ತು ಶ್ರೌಷಟ್ ಪುರೋ ಅಗ್ನಿಂ ಧಿಯಾ ದಧೇ** (ಋ ಸಂ. ೧-೧೩೯-೧)

**ಓ ಷೂ ಣೋ ಅಗ್ನೇ ಶೃಣುಹಿ ತ್ವಮೀಳಿತಃ** (ಋ. ಸಂ. ೧-೧೩೯-೭)

**ಯೇ ದೇವಾಸೋ ದಿವ್ಯೇಕಾದಶಸ್ಥ** (ಋ. ಸಂ. ೧-೧೩೯-೧೧)

**ಇಯಮದದಾದ್ರಭಸಮೃಣಚ್ಯುತಂ** (ಋ. ಸಂ. ೬-೬೧-೧ರಿಂದ ೩ಋಕ್ಕುಗಳು)

ಮೇಲೆ ಹೇಳಿರುವ ಋಕ್ಕುಗಳು ಸೇರಿ ಪ್ರಉಗಶಸ್ತ್ರಮಂತ್ರಗಳಾಗಿರುವುವು. ಇವುಗಳಲ್ಲಿ ಕೊನೆಯಲ್ಲಿ ಹೇಳಿರುವ **ಇಯಮದದಾತ್** ಎಂಬ ಋಕ್ಕುಗಳು ಮಾತ್ರ ಭರದ್ವಾಜಋಷಿದೃಷ್ಟಗಳು. ಉಳಿದ ಋಕ್ಕುಗಳೆಲ್ಲಾ ಪರುಚ್ಛೇಪಋಷಿದೃಷ್ಟಗಳು.

**ಸ ಪೂರ್ವ್ಯೋ ಮಹಾನಾಂ** (ಋ. ಸಂ. ೮-೬೩-೧)ಎಂಬ ಋಕ್ಕಿನಿಂದ ಪ್ರಾರಂಭವಾಗುವ ಮರುತ್ವತೀಯ ಶಸ್ತ್ರಮಂತ್ರಗಳಲ್ಲಿಯೂ ಪರುಚ್ಛೇಪಋಷಿದೃಷ್ಟವಾದ—

**ಯಂ ತ್ವಂ ರಥಮಿಂದ್ರ ಮೇಧಸಾತಯೇ** (ಋ. ಸಂ. ೧-೧೨೯-೧)

ಎಂಬ ಒಂದು ಋಕ್ಕು ಮಾತ್ರ ಸೇರಿರುವುದು. ಉಳಿದ ಋಕ್ಕುಗಳು ಬೇರೆ ಋಷಿದೃಷ್ಟವಾದವುಗಳಾದುದರಿಂದ ಅವುಗಳನ್ನು ಇಲ್ಲಿ ವಿವರಿಸಿಲ್ಲ.

॥ ಸಾಯಣಭಾಷ್ಯಂ ॥

**ಏಕೋನವಿಂಶೇಽನುವಾಕೇ ಸಪ್ತ ಸೂಕ್ತಾನಿ । ತತ್ರಾಗ್ನಿಂ ಹೋತಾರಮಿತಿ ಪ್ರಥಮಂ ಸೂಕ್ತಮೇಕಾದಶರ್ಚಂ ದಿವೋದಾಸಪುತ್ರಸ್ಯ ಪರುಚ್ಛೇಪಸ್ಯಾರ್ಷಮಾಗ್ನೇಯಮಾತ್ಯಷ್ಟಂ। ಸ ಹಿ**

ಶರ್ಧ ಇತ್ಯಸ್ಯಾಃ ಷಟ್ಸಪ್ತತ್ಯಕ್ಷರಾತಿಧೃತಿಃ । ಉತ್ಕೃತ್ಯಭಿಕೃತಿಸಂಕೃತಿವಿಕೃತ್ಯಾಕೃತಿಪ್ರಕೃತಿಕೃತ್ಯತಿ-ಧೃತಿಧೃತ್ಯತ್ಯಷ್ಟ್ಯಷ್ಟಿಷು ಚತುರುತ್ತರಶತಾಕ್ಷರಮಾರಭ್ಯ ಚತುರ್ಣಾಂ ಪರಿತ್ಯಾಗ ಏಕೈಕಮುಕ್ತಂ ಛಂದೋ ಜಾಯತೇ । ತಥಾ ಸತ್ಯತ್ಯಷ್ಟ್ಯತಿಧೃತೀ ಉಕ್ತಸಂಖ್ಯೋಪೇತೇ ಸ್ಯಾತಾಂ । ಏತತ್ಸರ್ವಂ ಛಂದೋಗ್ರಂಥೇ ಚತುಃಶತಮುತ್ಕೃತಿರಿತ್ಯಾದಿಸೂತ್ರೈಃ ಪ್ರತಿಪಾದಿತಂ । ಪಿಂ. ೪-೧ । ತಥಾ ಚಾನು-ಕ್ರಾಂತಂ । ಅಗ್ನಿಮೇಕಾದಶ ಪರುಚ್ಛೇಪೋ ದೈವೋದಾಸಿರಾಗ್ನೇಯಂ ತು ಪಾರುಚ್ಛೇಪಂ ಸರ್ವಮಾತ್ಯಷ್ಟಂ ತತ್ರಾತಿಧೃತಿಃ ಷಷ್ಠೀತಿ ॥ ಸೂಕ್ತಸ್ಯ ವಿಶೇಷವಿನಿಯೋಗೋ ಲೈಂಗಿಕಃ । ದಶರಾತ್ರಸ್ಯ ಷಷ್ಠೇಽಹನಿ ಪ್ರಾತಃಸವನೇ ಪ್ರಸ್ಥಿತಯಾಜ್ಯಾನಾಂ ಪುರಸ್ತಾದನ್ಯಾ ಋಚಃ ಕೃತ್ವಾ ಪ್ರಾಕೃತೀಭಿಶ್ಚ ಸಹ ಯಷ್ಟವ್ಯಂ । ತತ್ರಾಗ್ನೀಧ್ರಸ್ಯೈಷಾ ಪ್ರಥಮಾ । ಷಷ್ಠಸ್ಯ ಪ್ರಾತಃಸವನ ಇತಿ ಖಂಡೇ ಸೂತ್ರಿತಂ । ಅಗ್ನಿಂ ಹೋತಾರಂ ಮನ್ಯೇ ದಾಸ್ವಂತಂ ವಧ್ಯಶ್ ಹ ಮೇ ಜನುಷಂ ಪೂರ್ವೋ ಅಂಗಿರಾಃ । ಆ. ೮-೧ । ಇತಿ ॥

ಅನುವಾದವು—ಈ ಸೂಕ್ತದಿಂದ ಪ್ರಥಮಮಂಡಲದ ಹತ್ತೊಂಭತ್ತನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಏಳು ಸೂಕ್ತಗಳಿರುವವು. ಈ ಏಳು ಸೂಕ್ತಗಳಲ್ಲಿ **ಅಗ್ನಿಂ ಹೋತಾರಂ** ಎಂಬ ಸೂಕ್ತವು ಮೊದಲನೆಯದು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ದಿವೋದಾಸಪುತ್ರನಾದ ಪರುಚ್ಛೇಪ ನೆಂಬುವನು ಋಷಿಯು, ಅಗ್ನಿಯು ದೇವತೆಯು. ಅತ್ಯಷ್ಟಿಯೆಂಬುದು ಛಂದಸ್ಸು. ಸ ಹಿ ಶರ್ಧಃ ಎಂಬ ಋಕ್ಕು ೭೬ ಅಕ್ಷರಗಳುಳ್ಳ ಅತಿಧೃತಿಯೆಂಬ ಛಂದಸ್ಸಿನದು. ಉತ್ಕೃತಿ, ಅಭಿಕೃತಿ, ಸಂಕೃತಿ, ವಿಕೃತಿ, ಆಕೃತಿ, ಪ್ರಕೃತಿ, ಕೃತಿ, ಅತಿಧೃತಿ, ಧೃತಿ, ಅತ್ಯಷ್ಟಿ, ಅಷ್ಟಿ ಎಂಬ ಋಕ್ಕುಗಳಿಗೆ ೧೦೪ ಅಕ್ಷರಗಳಿಂದ ಪ್ರತಿ ಋಕ್ಕಿಗೂ ನಾಲ್ಕು ಅಕ್ಷರಗಳಂತೆ ಕಡಿಮೆಯಾಗುತ್ತಾ ಕೊನೆಯ ಅಷ್ಟಿಯೆಂಬ ಛಂದಸ್ಸಿಗೆ ೬೪ ಅಕ್ಷರಗಳಿರುವವು. ಎಂದರೆ ಉತ್ಕೃತಿಯಿಂದ ಅಷ್ಟಿ ಎಂಬ ಋಕ್ಕಿನವರಿವಿಗೆ ಕ್ರಮವಾಗಿ ೧೦೪, ೧೦೦, ೯೬, ೯೨, ೮೮, ೮೪, ೮೦, ೭೬, ೭೨, ೬೮, ೬೪, ಅಕ್ಷರಗಳಿರುವವು. ಆದುದರಿಂದ ಈಗ ಹೇಳಿದ ಅತ್ಯಷ್ಟಿ ಮತ್ತು ಅತಿಧೃತಿ ಛಂದಸ್ಸುಗಳಿಗೆ ೬೮ ಮತ್ತು ೭೬ ಅಕ್ಷರಗಳಿದ್ದಂತಾಯಿತು. ಈ ವಿವರಗಳೆಲ್ಲವೂ ಛಂದೋಗ್ರಂಥದಲ್ಲಿ **ಚತುಶ್ಶತಮುತ್ಕೃತಿ** ಎಂದು ಮೊದಲಾದ ಸೂತ್ರಗಳಿಂದ ಪ್ರತಿಪಾದಿತ ವಾಗಿರುವುದು (ಪಿ. ೪-೧) ಅನುಕ್ರಮಣಿಕೆಯಲ್ಲಿ-**ಅಗ್ನಿಮೇಕಾದಶ ಪರುಚ್ಛೇಪೋ ದೈವೋದಾಸಿರಾಗ್ನೇ-ಯಂ ತು ಪಾರುಚ್ಛೇಪಂ ಸರ್ವಮಾತ್ಯಷ್ಟಂ ತತ್ರಾತಿಧೃತಿಃ ಷಷ್ಠೀತಿ** ಎಂದು ಹೇಳಿರುವುದು. ಸೂಕ್ತದ ವಿಶೇಷ ವಿನಿಯೋಗವು ಲೈಂಗಿಕವು. ದಶರಾತ್ರವೆಂಬ ಯಾಗದ ಆರನೆಯ ದಿವಸ ಪಾತ್ರಃಸವನಕರ್ಮದಲ್ಲಿ ಪ್ರಸ್ಥಿತಯಾಜ್ಯಾ ಮಂತ್ರಗಳನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ ಒಂದೊಂದು ಯಾಜ್ಯಾಮಂತ್ರಕ್ಕೆ ಪೂರ್ವದಲ್ಲಿ ಒಂದೊಂದು ಋಕ್ಕನ್ನು ಪಠಿಸಬೇಕೆಂಬ ಕ್ರಮವಿರುವುದು. ಅವುಗಳಲ್ಲಿ ಅಗ್ನಿಂ ಹೋತಾರಂ ಎಂಬ ಮೊದಲನೆಯ ಋಕ್ಕನ್ನು ಅಗ್ನೀಧ್ರನೆಂಬ ಋತ್ವಿಜನು ಪಠಿಸಬೇಕಾಗಿರುವುದು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ **ಷಷ್ಠಸ್ಯ ಪ್ರಾತಃ ಸವನೇ** ಎಂಬ ಖಂಡದಲ್ಲಿ **ಅಗ್ನಿಂ ಹೋತಾರಂ ಮನ್ಯೇ ದಾಸ್ವಂತಂ ವಧ್ಯಶ್ಹ ಮೇ ಜನುಷಂ ಪೂರ್ವೋ ಅಂಗಿರಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧).

## ಸೂಕ್ತ—೧೨೭

ಮಂಡಲ—೧ ॥ ಅನುವಾಕ—೧೯ ॥ ಸೂಕ್ತ—೧೨೭ ॥
ಅಷ್ಟಕ—೨ ॥ ಅಧ್ಯಾಯ—೧ ॥ ವರ್ಗ—೧೨, ೧೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ— ಪರುಚ್ಛೇಪೋ ದೈವೋದಾಸಿಃ ॥
॥ ದೇವತಾ—ಅಗ್ನಿಃ ॥
॥ ಛಂದಃ—೧-೫, ೭-೧೧ ಅತ್ಯಷ್ಟಿಃ । ೬ ಅತಿಧೃತಿಃ ॥

॥ ಸಂಹಿತಾಪಾಠಃ ॥

ಅಗ್ನಿಂ ಹೋತಾರಂ ಮನ್ಯೇ ದಾಸ್ವಂತಂ ವಸುಂ ಸೂನುಂ ಸಹಸೋ
ಜಾತವೇದಸಂ ವಿಪ್ರಂ ನ ಜಾತವೇದಸಂ ।
ಯ ಊರ್ಧ್ವಯಾ ಸ್ವಧ್ವರೋ ದೇವೋ ದೇವಾಚ್ಯಾ ಕೃಪಾ ।
ಘೃತಸ್ಯ ವಿಭ್ರಾಷ್ಟಿಮನು ವಷ್ಟಿ ಶೋಚಿಷಾಜುಹ್ವಾನಸ್ಯ ಸರ್ಪಿಷಃ ॥ ೧ ॥

॥ ಪದಪಾಠಃ ॥

ಅಗ್ನಿಂ । ಹೋತಾರಂ । ಮನ್ಯೇ । ದಾಸ್ವಂತಂ । ವಸುಂ । ಸೂನುಂ । ಸಹಸಃ । ಜಾತಽವೇದಸಂ
ವಿಪ್ರಂ । ನ । ಜಾತಽವೇದಸಂ ।
ಯ । ಊರ್ಧ್ವಯಾ । ಸುಽಅಧ್ವರಃ । ದೇವಃ । ದೇವಾಚ್ಯಾ । ಕೃಪಾ ।
ಘೃತಸ್ಯ । ವಿಽಭ್ರಾಷ್ಟಿಂ । ಅನು । ವಷ್ಟಿ । ಶೋಚಿಷಾ । ಆಽಜುಹ್ವಾನಸ್ಯ । ಸರ್ಪಿಷಃ ॥ ೧ ॥

॥ ಸಾಯಣಭಾಷ್ಯಂ ॥

ಅಗ್ನಿಂ ಸರ್ವಾಸಾಂ ದೇವಸೇನಾನಾಮಗ್ರಣ್ಯಂ ಯಜ್ಞೇಷ್ವಗ್ರಂ ನೀಯಮಾನಂ ವಾ ಹೋತಾರಮಸ್ಮದ್ಯಾಗಂ ಪ್ರತಿ ದೇವಾನಾಮಾಹ್ವಾತಾರಂ । ಯದ್ವಾ । ಹೋಮನಿಷ್ಪಾದಕಂ ಹೋತಾರಂ । ಜುಹೋತೇರ್ಹೋತೇತ್ಯೌರ್ಣವಾಭ ಇತಿ ಯಾಸ್ಕಃ । ನಿ. ೭-೧೫ । ಅಗ್ನಿಮುದ್ಯ ಹೋತಾರಮುವ್ಯ-

ಣೀತ । ತೈ. ಬ್ರಾ. ೨-೬-೧೫-೧ । ಇತಿ ಶ್ರುತೇಃ । ಅಗ್ನಿಮುಗ್ನ ಆವಹೇತಿ ಚಾಗ್ನೇರಾಹ್ವಾತೃತ್ವಂ ಪ್ರಸಿದ್ಧಂ । ಅಗ್ನಿಂ ಹೋತಾರಂ ಮನ್ಯೇ । ಏವಂ ಪ್ರತಿವಿಶೇಷಣಂ ಮನ್ಯೇ ಇತಿ ಸಂಬಂಧಃ । ಯದ್ವಾ । ಯಾಗನಿಷ್ಪತ್ತೇರೇವಾಪೇಕ್ಷಿತತ್ವಾದೇತದೇವ ವಿಧೇಯವಿಶೇಷಣಂ । ಇತರಾಣಿ ವಕ್ಷ್ಯಮಾಣವಿಶೇಷಣಾನಿ ಸ್ತುತಿಪರಾಣಿ । ದಾಸ್ವಂತಮತಿಶಯೇನ ದಾನವಂತಂ ವಸುಂ ಸರ್ವೇಷಾಂ ನಿವಾಸಹೇತುಂ ಸಹಸಃ ಸೂನುಂ ಬಲಸ್ಯ ಪುತ್ರಂ । ಅಗ್ನಿರ್ಮಂಥನಕಾಲೇ ಬಲೇನ ಮಥ್ಯಮಾನ ಉತ್ಪದ್ಯತ ಇತಿ ಪುತ್ರತ್ವಮುಪಚರ್ಯತೇ । ಜಾತವೇದಸಂ ಜಾತಾನಾಂ ವೇದಿತಾರಂ ಜಾತಪ್ರಜ್ಞಂ ಜಾತಬಲಂ ವಾ । ಜಾತವೇದಃಶಬ್ದೋ ಯಾಸ್ಕೇನ ಬಹುಧಾ ನಿರುಕ್ತಃ । ನಿ. ೭-೧೯ । ಅಗ್ನೇರ್ಜಾತವೇದಸ್ತ್ವೇ ದೃಷ್ಟಾಂತಃ । ವಿಪ್ರಂ ನ ಜಾತವೇದಸಂ ಜಾತವಿದ್ಯಂ ಮೇಧಾವಿನಂ ಬ್ರಾಹ್ಮಣಮಿವ । ತಂ ಯಥಾ ಬಹುಮನ್ಯಂತೇ ತಥಾ ತ್ವಾಮಪಿ ಮನ್ಯೇ । ಸ್ತೌಮೀತ್ಯರ್ಥಃ । ಉಕ್ತಗುಣವಿಶಿಷ್ಟೋ ಯೋ ದೇವಃ ಸ್ವಧ್ವರಃ ಶೋಭನಯಜ್ಞವಾನ್ ಯಜ್ಞಂ ಸಮ್ಯಕ್ ನಿರ್ವಹನ್ ಊರ್ಧ್ವಯೋನ್ನತಯೋತ್ಕೃಷ್ಟಯಾ ದೇವಾಚ್ಯಾ ದೇವಾನ್ಪೂಜಯಂತ್ಯಾ ದೇವಾನ್ಪ್ರತ್ಯಕ್ತಯಾ ವಾ ಕೃಪಾ ಕೃಪಯಾ ಸಾಮರ್ಥ್ಯಲಕ್ಷಣಯಾ । ದೇವಾನ್ಪ್ರತ್ಯಕ್ತಯಾ ಕೃಪೇತಿ ಯಾಸ್ಕಃ । ನಿ. ೬-೮ । ತೇಭ್ಯೋ ಹವಿರ್ವಹನಬುದ್ಧ್ಯಾ ಯುಕ್ತಃ ಸನ್ ಆಜುಹ್ವಾನಸ್ಯಾ ಸಮಂತಾದ್ಧೂಯಮಾನಸ್ಯ ಸರ್ಪಿಷಃ ಸರಣಶೀಲಸ್ಯ ಘೃತಸ್ಯ ವಿಲಾಪನೇನ ದೀಪ್ತಸ್ಯಾಜ್ಯಸ್ಯ ವಿಭ್ರಾಷ್ಟಿಂ ವಿಶೇಷೇಣ ಭ್ರಾಜಮಾನಮನು ಸ್ವಯಮಪಿ ತದಾಜ್ಯಂ ಶೋಚಿಷಾ ಜ್ವಾಲಯಾ ವಷ್ಟಿ । ಕಾಮಯತೇ । ಸ್ವೀಕರೋತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಃ ದೇವಃ**—ಯಾವ ಅಗ್ನಿದೇವನು । **ಸ್ವಧ್ವರಃ**—(ತನ್ನಿಂದ) ಶೋಭಿತವಾದ ಯಾಗವುಳ್ಳವನಾಗಿ (ಯಜ್ಞವನ್ನು ಚೆನ್ನಾಗಿ ನಿರ್ವಹಿಸುವವನಾಗಿ) । **ಊರ್ಧ್ವಯಾ**—ಉತ್ಕೃಷ್ಟವಾದ । **ದೇವಾಚ್ಯಾ**—ದೇವತೆಗಳನ್ನು ಪೂಜಿಸುವ । **ಕೃಪಾ**—ಕೃಪೆಯಿಂದ (ಹವಿರ್ವಹನರೂಪವಾದ) ಯುಕ್ತನಾಗಿ । **ಆಜುಹ್ವಾನಸ್ಯ**—ಆಹ್ವಾನಿಸುತ್ತಿರುವ (ಯಜಮಾನನ) । **ಸರ್ಪಿಷಃ**—ದ್ರವರೂಪವಾಗಿರುವ । **ಘೃತಸ್ಯ**—ಆಜ್ಯದ । **ವಿಭ್ರಾಷ್ಟಿಂ ಅನು**—ಜ್ವಾಲೆಯನ್ನು ಅನುಸರಿಸಿ । **ಶೋಚಿಷಾ**—(ತನ್ನ) ಜ್ವಾಲೆಯಿಂದ । **ವಷ್ಟಿ**—ಸ್ವೀಕರಿಸುತ್ತಾನೋ । (ತಂ-ಅ) । **ಅಗ್ನಿಂ**—ಅಗ್ನಿಯನ್ನು (ದೇವತೆಗಳಿಗೆಲ್ಲಾ ಅಗ್ರಗಾಮಿಯನ್ನಾಗಿಯೂ) **ಹೋತಾರಂ**-(ನಮ್ಮ ಯಾಗಕ್ಕೆ ದೇವತೆಗಳನ್ನು) ಆಹ್ವಾನಿಸುವವನಾಗಿಯೂ (ಹೋಮನಿಷ್ಪಾದಕನಾದ ಹೋತೃವನ್ನಾಗಿಯೂ) । **ದಾಸ್ವಂತಂ**—ದಾನಶೀಲನನ್ನಾಗಿಯೂ । **ವಸುಂ**—(ಸರ್ವರಿಗೂ) ನಿವಾಸಹೇತುವನ್ನಾಗಿಯೂ । **ಸಹಸಃ ಸೂನುಂ**—(ಮಥನಕ್ಕೆ ಆವಶ್ಯಕವಾದ) ಬಲದ ಪುತ್ರನನ್ನಾಗಿಯೂ (ಮತ್ತು) । **ಜಾತವೇದಸಂ**—ಮೇಧಾವಿಯಾದ । **ವಿಪ್ರಂ ನ**—ಬ್ರಾಹ್ಮಣನಂತೆ । **ಜಾತವೇದಸಂ**—ಸೃಷ್ಟವಾದ ಸಮಸ್ತವನ್ನೂ ತಿಳಿದವನನ್ನಾಗಿಯೂ । **ಮನ್ಯೇ**—ತಿಳಿಯು (ಸ್ತುತಿಸು)ತ್ತೇನೆ.

॥ ಭಾವಾರ್ಥ ॥

ಅಗ್ನಿಯು (ನಮ್ಮ) ಯಾಗವನ್ನಲಂಕರಿಸಿ, ಉತ್ಕೃಷ್ಟವಾದ ಮತ್ತು ದೇವತೆಗಳನ್ನು ಪೂಜಿಸುವ (ತನ್ನ ಹವಿರ್ವಹನರೂಪ) ಸಾಮರ್ಥ್ಯದಿಂದ (ದೇವತೆಗಳನ್ನು) ಆಹ್ವಾನಮಾಡುವ (ಯಜಮಾನನಿಂದ ಹುತವಾದ)

ದ್ರವೀಭೂತವಾದ ಘೃತವನ್ನು (ತನ್ನ) ಜ್ವಾಲೆಗಳಿಂದ ಸ್ವೀಕರಿಸುತ್ತಾನೆ; (ಇಂತಹ) ಅಗ್ನಿಯನ್ನು (ನಮ್ಮ ಯಾಗಕ್ಕೆ ದೇವತೆಗಳನ್ನು ಕರೆಯುವ) ಹೋತೃವನ್ನಾಗಿಯೂ, ದಾನಶೀಲನನ್ನಾಗಿಯೂ, (ಸರ್ವರಿಗೂ) ನಿವಾಸಕ್ಕೆ ಕಾರಣನನ್ನಾಗಿಯೂ, ಮೇಧಾವಿಯಾದ ವಿಪ್ರನಂತೆ ಸರ್ವಜ್ಞನನ್ನಾಗಿಯೂ ತಿಳಿಯುತ್ತೇನೆ (ಸ್ತುತಿಸುತ್ತೇನೆ).

## English Translation.

I venerate Agni, the invoker (of the gods), the munificent, the giver of dwellings, the son of strength : he who knows all that exists, like a sage who is endowed with knowledge : who, the divine regenerator of sacrfices, through his lofty and reverential devotion, covets for the gods the blaze of the liquefied butter which is offered in oblation with his flames.

॥ ವಿಶೇಷವಿಷಯಗಳು ॥

**ಅಗ್ನಿಂ—ಸರ್ವಾಸಾಂ ದೇವಸೇನಾನಾಮಗ್ರಣ್ಯಂ ಯಜ್ಞೇಷ್ವಗ್ರಂ ನೀಯಮಾನಂ ವಾ ।** ಅಗ್ನಿ ಶಬ್ದವು ಎರಡು ವಿಧವಾದ ಅರ್ಥದಲ್ಲಿ ಪ್ರಯುಕ್ತವಾಗಿದೆ. ಮೊದಲನೆಯ ಅರ್ಥದಲ್ಲಿ (ದೇವಸೇನೆಗಳಿಗೆ) ದೇವತೆಗಳ ಸೇನೆಗೆ ಮುಂದಾಗಿರತಕ್ಕವನೆಂದೂ, ಎರಡನೆಯ ಅರ್ಥದಲ್ಲಿ ಯಜ್ಞಗಳಲ್ಲಿ ಎಲ್ಲರಿಗಿಂತಲೂ (ಕರೆಯಲ್ಪಟ್ಟು) ಮೊದಲು ತರಲ್ಪಡುವವನು ಎಂದೂ ವಿವರಿಸಿದೆ. ಈ ವಿಷಯದಲ್ಲಿ ಯಾಸ್ಕರು—

**ಅಗ್ನಿಃ ಪೃಥಿವೀಸ್ಥಾನಃ ತಂ ಪ್ರಥಮಂ ವ್ಯಾಖ್ಯಾಸ್ಯಾಮಃ ಅಗ್ರಣೀರ್ಭವತಿ । ಅಗ್ರಂ ಯಜ್ಞೇಷು ಪ್ರಣೀಯತೇ । ಅಙ್ಗಂ ನಯತಿ ಸನ್ನಮಮಾನಃ ।**

(ನಿ. ೭-೧೪)

ಎಂದು ಹೇಳಿರುವರು. ಅಗ್ನಿಗೆ ಮೂರು ಸ್ಥಾನಗಳಿರುವುವು. ಅಗ್ನಿಯ ಕಾರ್ಯವು ಅಂತರಿಕ್ಷ, ದ್ಯುಲೋಕ, ಪೃಥಿವೀ ಎಂಬ ಮೂರು ಸ್ಥಾನಗಳಲ್ಲಿಯೂ ವ್ಯಾಪಿಸಿರುವುದು. ಅವುಗಳಲ್ಲಿ ಪೃಥಿವಿಯ ಸ್ಥಾನದಲ್ಲಿ ಅತಿಶಯವಾಗಿ ವ್ಯಾಪಿಸಿರುವುದರಿಂದ ಪಾರ್ಥಿವಾಗ್ನಿಯನ್ನು ಮೊದಲು ವಿವರಿಸಲು ಪ್ರಾರಂಭಿಸಿ ಅಗ್ನಿಶಬ್ದದ ರೂಪನಿಷ್ಪತ್ತಿಯನ್ನು ಮೂರು ವಿಧವಾಗಿ ಹೇಳಿರುವರು. ಮೊದಲನೆಯ, **ಅಗ್ರಣೀರ್ಭವತಿ** ಎಂಬ ವಿವರಣೆಗೆ, ದುರ್ಗಾಚಾರ್ಯರು **ಸರ್ವೇಷ್ವರ್ಥೇಷು ಅಸಾವಾತ್ಮಾನಮಗ್ರಂ ನಯತಿ, ಸರ್ವತ್ರ ತಥೋಪಕರೋತಿ ಯಥಾ ಅಗ್ರಂ ಸಂಪದ್ಯತೇ ।** ವೈದಿಕಕರ್ಮಗಳಲ್ಲಿಯೂ, ಲೌಕಿಕವಾದ ಕರ್ಮಗಳಲ್ಲಿಯೂ ಮುಖ್ಯವಾಗಿ (ಪ್ರಧಾನವಾಗಿ) ಇರುವವನು. ಆದ್ದರಿಂದ **ಅಗ್ರಣೀಃ** ಅಥವಾ **ಅಗ್ನಿರ್ವೈ ದೇವಾನಾಂ ಸೇನಾನೀಃ** ಅಗ್ನಿಯು ದೇವತೆಗಳ ಸೇನಾಪತಿಯು ಎಂದು ಶ್ರುತಿವಚನವಿರುವುದರಿಂದ ಅಗ್ನಿಯೇ ತಾನು ಮುಂದಾಳಾಗಿ ದೇವತೆಗಳನ್ನು ಯಜ್ಞಾದಿಗಳಿಗೆ ತರತಕ್ಕವನಾದ್ದರಿಂದ **ಅಗ್ರಣೀಃ** ಎಂಬದಾಗಿಯೂ, ತನ್ನನ್ನು ಸೇವಿಸುವವರಿಗೆ ಪ್ರಾಮುಖ್ಯತೆಯು ಉಂಟಾಗುವಂತೆ ಮಾಡುವವನಾದ ಕಾರಣದಿಂದಲೂ **ಅಗ್ರಣೀಃ** ಎಂಬ ಅರ್ಥವನ್ನು **ಅಗ್ರಂ ನಯತಿ ಇತಿ ಅಗ್ರಣೀಃ** ಎಂಬ ವ್ಯುತ್ಪತ್ತಿಯಿಂದ ವಿವರಿಸಿರುವರು.

ಯಜ್ಞಗಳಲ್ಲಿ ಮೊದಲು ಅಂದರೆ ಅವಶ್ಯವಾಗಿ ನಡೆಯಬೇಕಾದ ಕರ್ತವ್ಯಗಳಲ್ಲಿ ಅಗ್ನಿಯ ಪ್ರಣಯನಕ್ಕಿಂತಲೂ ಮುಂಚಿತವಾಗಿ ಯಾವ ಕರ್ಮವೂ ನಡೆಯದಿರುವ ಕಾರಣ **ಯಜ್ಞೇಷು ಅಗ್ರಂ ಪ್ರಣೀಯತೇ** ಎಂಬ

ಎರಡನೆಯ ವಿವರಣೆಯು (ಯಜ್ಞಗಳಲ್ಲಿ ಎಲ್ಲಕ್ಕಿಂತಲೂ ಮೊದಲು ಸಿದ್ಧಪಡಿಸಲ್ಪಡುತ್ತಾನೆ. ಅಗ್ರಂ-ಮೊದಲು- ಪ್ರಣಯನಾತ್—ಸಿದ್ಧಮಾಡಿ ಒಯ್ಯಲ್ಪಡುವುದರಿಂದ ಅಗ್ನಿಃ—ಅಗ್ನಿಶಬ್ದವಾಚ್ಯನು ಎಂಬದಾಗಿ) ಸಮಂಜಸವಾಗಿರುವುದು.

**ಅಂಗಂ ನಯತೀತ್ಯಗ್ನಿಃ** ಎಂಬ **ಅಗ್ನಿ**ಪದದ ವಿವರಣೆಯು **ಅಂಗಂ ನಯತಿ ಸನ್ನಮಮಾನಃ** ಎಂದಾಗಿರುತ್ತದೆ. ಈ ದೇವನು ಲೌಕಿಕವಾದ ಅಥವಾ ವೇದಪ್ರೋಕ್ತವಾದ ಕರ್ಮಗಳು ಎಲ್ಲದರಲ್ಲಿಯೂ, ತಾನು ಮುಖ್ಯನಾಗಿರುವನು. ತನಗಿಂತ ಬೇರೆಯಾದವುಗಳೆಲ್ಲವನ್ನೂ (ತನಗಿಂತ ನಿಕೃಷ್ಟಗಳನ್ನಾಗಿ) ತನಗೆ ಅಧೀನವಾಗಿರುವಂತೆ ಮಾಡಿಕೊಳ್ಳುವನು ಎಂದೂ, ಅಥವಾ ಇವನು ತೃಣವನ್ನಾಗಲಿ, ಕಟ್ಟಿಗೆಯನ್ನಾಗಲಿ ಆಶ್ರಯಿಸಿದಾಗ ಅದನ್ನು ತನಗೆ ಅಧೀನವಾಗಿ ಇರುವಂತೆ ಇರಿಸುವನು ಆದ್ದರಿಂದ ಅಗ್ನಿ ಎನಿಸಿರುವನು.

**ಅಗ್ರಂ ನಯತೀತ್ಯಗ್ನಿಃ, ಅಗ್ರಂ ನೀಯತೆ ಇತ್ಯಗ್ನಿಃ, ಅಂಗಂ ನಯತೀತ್ಯಗ್ನಿಃ** ಎಂದು ಮೂರು ವಿಧವಾಗಿ ಅಗ್ನಿ ಶಬ್ದಾರ್ಥದ ನಿರ್ವಚನವನ್ನು ಯಾಸ್ಕರು ವಿವರಿಸಿರುತ್ತಾರೆ. ಸ್ಥೌಲಾಷ್ಠೀವಿ ಎಂಬ ಆಚಾರ್ಯರು ಇವನು ತಾನು ಹೊಂದುವ ಪದಾರ್ಥವೆಲ್ಲವನ್ನೂ ವಿರೂಪವುಳ್ಳದ್ದನ್ನಾಗಿ ಮಾಡುವನು (ಸುಟ್ಟು ಕಪ್ಪಗೆ ಮಾಡುವನು) ಎಂದು ಅಗ್ನಿಯ ಸ್ವಭಾವವನ್ನು ವರ್ಣಿಸಿರುವರು. ಶಾಕಪೂಣಿ ಎಂಬ ಆಚಾರ್ಯರು,

> **ತ್ರಿಭ್ಯ ಆಖ್ಯಾತೇಭ್ಯೋ ಜಾಯತೇ । ಇತಾದಕ್ತಾದ್ದಗ್ಧಾದ್ವಾ ನೀತಾತ್ । ಸ ಖಲ್ವೇತೇರಕಾರಮಾದತ್ತೇ ಗಕಾರಮನಕ್ತೇರ್ವಾ ದಹತೇರ್ವಾ ನೀಃ ಪರಃ ॥**
>
> (ನಿ. ೭-೧೪)

ಎಂದು ಅಗ್ನಿಶಬ್ದದ ರೂಪನಿಷ್ಪತ್ತಿಯನ್ನು ವಿವರಿಸಿರುವರು. ದುರ್ಗಾಚಾರ್ಯರು **ಏತಿ ಚ ನಯತಿ ಚ ಹವೀಂಷಿ ದಹತಿ ಚ ಅಥವಾ ಏತಿ, ವ್ಯನಕ್ತಿ** ಎಂಬ ಕ್ರಿಯಾಪದಗಳ ಅರ್ಥವನ್ನು ಇವನು ಆಚರಿಸುವನು. ಏತಿ-ಬರುತ್ತಾನೆ. ನಯತಿ—ಹವಿಸ್ಸುಗಳನ್ನು ಒಯ್ಯುತ್ತಾನೆ. ದಹತಿ-ಸುಡುತ್ತಾನೆ. ವ್ಯನಕ್ತಿ—ರೂಪಾಂತರವನ್ನು ಹೊಂದಿಸುತ್ತಾನೆ ಎಂದು ಅಗ್ನಿಯ ಕ್ರಿಯೆಯಮೂಲಕ ಸ್ವಭಾವವನ್ನು ವರ್ಣಿಸಿದ್ದಾರೆ. ಸಾಯಣರು ಅಗ್ನಿಯು ದೇವಸೇನೆಯ ಮುಂದಾಳಾಗಿರುವನು. ಅಥವಾ ಯಜ್ಞಗಳಲ್ಲಿ ಮುಖ್ಯನಾಗಿರುವವನು ಎಂಬ ಅಗ್ನಿ ಶಬ್ದಾರ್ಥವನ್ನು ವಿವರಿಸಿ ಎರಡು ವಿಧವಾದ ಅರ್ಥವನ್ನು ಮಾತ್ರ ವರ್ಣಿಸಿದ್ದಾರೆ.

**ಹೋತಾರಂ—ಅಸ್ಮದ್ಯಾಗಂ ಪ್ರತಿ ದೇವಾನಾಮಾಹ್ವಾತಾರಂ ಯದ್ವಾ ಹೋಮನಿಷ್ಪಾದಕಂ ಹೋತಾರಂ ।** ನಮ್ಮ ಯಜ್ಞಗಳಿಗೆ ದೇವತೆಗಳನ್ನು ಕರೆದು ತರುವ ಅಥವಾ ಹೋಮವನ್ನು ನೆರವೇರಿಸುವ (ಮತ್ತು ಮಂತ್ರವನ್ನು ಪಠಿಸುವ) ಹೋತೃವಾಗಿರುವನು. ಎಂದು ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. **ಹು ದಾನಾದನಯೋಃ** ಎಂಬ ಧಾತುವಿನಿಂದ ಹೋತೃ ಎಂಬ ಶಬ್ದದ ನಿಷ್ಪತ್ತಿಯು ಆಗಿರುತ್ತದೆ. **ಅಗ್ನಿಮದ್ಯ ಹೋತಾರಮವೃಣೀತ** (ತೈ. ಬ್ರಾ. ೨-೬-೧೫-೧) ಎಂಬ ಶ್ರುತಿಯು ಯಜ್ಞದಲ್ಲಿ ಅಗ್ನಿಯನ್ನು ಹೋತೃವನ್ನಾಗಿ ವರಿಸಬೇಕು ಎಂದು ಬೋಧಿಸುತ್ತದೆ. **ಅಗ್ನಿಮಗ್ರ ಆವಹ** (ತೈ. ಬ್ರಾ. ೩-೫-೩-೨) ಎಂಬ ಶ್ರುತಿಯು ಅಗ್ನಿಯು ದೇವತೆಗಳನ್ನು ಆಹ್ವಾನಮಾಡುವುದಕ್ಕಾಗಿ ಮೊದಲು ಅಗ್ನಿಯನ್ನು ಆಹ್ವಾನಿಸಬೇಕು ಎಂದು ಬೋಧಿಸುತ್ತದೆ. ಇದರಿಂದ ಎರಡು ವಿಧವಾದ ಅರ್ಥಗಳೂ ಉಪಪನ್ನವಾಗಿವೆ. ಇದರಿಂದಲೇ ಇಲ್ಲಿಯೂ ಕೂಡ **ಅಗ್ನಿಂ ಹೋತಾರಂ ಮನ್ಯೇ** ಅಗ್ನಿಯನ್ನು ಹೋತೃವನ್ನಾಗಿ ತಿಳಿಯುತ್ತೇನೆ ಎಂದು ಹೋತೃಪದವನ್ನು ಅಗ್ನಿಪದಕ್ಕೆ ವಿಶೇಷಣವಾಗಿ ಹೇಳಿದೆ. ಇದರಂತೆಯೇ ಈ ಋಕ್ಕಿನಲ್ಲಿರುವ ದ್ವಿತೀಯಾಂತಪದಗಳು ಅಗ್ನಿಪದಕ್ಕೆ ವಿಶೇಷಣಗಳಾಗಿ ಇರುತ್ತವೆ ಎಂದು

ಒಂದು ವಿಧವಾದ ಅರ್ಥ. **ಯದ್ವಾ ಯಾಗನಿಷ್ಪತ್ತೇರೇವಾಪೇಕ್ಷಿತತ್ವಾತ್ ಏತದೇವವಿಧೇಯವಿಶೇಷಣಂ ಇತರಾಣಿ ತು ವಕ್ಷ್ಯಮಾಣವಿಶೇಷಣಾನಿ ಸ್ತುತಿಪರಾಣಿ** ಯಾಗವು ಆವಶ್ಯಕರ್ತವ್ಯವಾಗಿ ನೆರವೇರಬೇಕಾದುದರಿಂದ **ಹೋತಾರಂ** ಎಂಬ ಪದವು ವಿಧೇಯವಿಶೇಷಣವನ್ನಾಗಿಯೂ ಇತರ ವಿಶೇಷಣಪದಗಳು ಅಗ್ನಿಯನ್ನು ಸ್ತುತಿಮಾಡುವವುಗಳಾಗಿಯೂ ಇರುತ್ತವೆ ಎಂದು ಎರಡನೆಯ ವ್ಯಾಖ್ಯಾನವು. ಇದರಿಂದ ಅಗ್ನಿಯೇ ಹೋತೃಶಬ್ದವಾಚ್ಯನೆಂದು ಅರ್ಥವಾಗುತ್ತದೆ. ಯಾಸ್ಕರು ನಿರುಕ್ತದಲ್ಲಿ—

**ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ । ಹೋತಾರಂ ರತ್ನಧಾತಮಮ್ ॥**

(ಋ. ಸಂ. ೧-೧-೧)

ಎಂಬ ಋಕ್ಕನ್ನು ಉದಹರಿಸಿ **ಹೋತಾರಂ ಹ್ವಾತಾರಂ ಜುಹೋತೇರ್ಹೋತಾ ಇತ್ಯೌರ್ಣವಾಭಃ** (ನಿ. ೭-೧೫) ಹು ಧಾತುವಿನಿಂದ ನಿಷ್ಪನ್ನವಾದ ಹೋತಾ ಎಂಬ ಪದಕ್ಕೆ ದೇವತೆಗಳನ್ನು ಯಜ್ಞಕ್ಕಾಗಿ ಆಹ್ವಾನಮಾಡಿ ಕರೆದು ತರುವವನು ಎಂದು ಔರ್ಣವಾಭ ಎಂಬವರ ಮತವನ್ನು ವಿವರಿಸಿರುವರು.

**ದಾಸ್ವನ್ತಂ— ಅತಿಶಯೇನ ದಾನವಂತಂ.** ಅಗ್ನಿಯು ಯಾಗಮಾಡುವ ಯಜಮಾನರಿಗೆ ಬಹಳವಾಗಿ ಧನವೇ ಮೊದಲಾದವುಗಳನ್ನು ಕೊಡುವವನೆಂದು ಅರ್ಥ.

**ವಸುಂ— ಸರ್ವೇಷಾಂ ನಿವಾಸಹೇತುಂ** ಅಗ್ನಿಯು ಎಲ್ಲರಿಗೂ ಸುಖದಿಂದ ವಾಸಮಾಡುವುದಕ್ಕೆ ಕಾರಣನಾದವನು ಎಂದು ಅರ್ಥ. ವಸುಶಬ್ದವು ರಶ್ಮಿನಾಮಗಳಲ್ಲಿ (ನಿ. ೨-೧೫)ಯೂ, ಧನನಾಮಗಳಲ್ಲಿಯೂ, (ನಿ. ೩-೯) ಪಠಿತವಾಗಿರುತ್ತದೆ. ಮತ್ತೂ

**ಸುಗುರಸತ್ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇಂದ್ರೋ ದಧಾತಿ ।**
**ಯಸ್ತ್ವಾಯಂತಂ ವಸುನಾ ಪ್ರಾತರಿತ್ವೋ ಮುಕ್ಷೀಜಯೇವ ಪದಿಮುತ್ಸಿನಾತಿ ।**

(ಋ. ಸಂ. ೧-೧೨೫-೨)

ಎಂಬ ಈ ಋಕ್ಕಿನಲ್ಲಿ ವಸುನಾ— ಅನ್ನೇನ ಎಂದು ಅರ್ಥವನ್ನು ವಿವರಿಸಿರುವುದರಿಂದ ಅನ್ನವೆಂದೂ ಅರ್ಥವಾಗುತ್ತದೆ.

**ದೇವೀ ಜೋಷ್ಟ್ರೀ ವಸುಧಿತೀ ಯಯೋರನ್ಯಾಘಾದ್ವೇಷಾಂಸಿ ಯೂಯವದನ್ಯಾವಕ್ಷದ್ವಸು**
**ವಾರ್ಯಾಣಿ ಯಜಮಾನಾಯ ವಸುವನೇ ವಸುಧೇಯಸ್ಯ ವೀತಾಂ ಯಜ ।**

(ವಾ. ಸಂ. ೨೮-೧೫)

ಇಲ್ಲಿ ಪ್ರಯುಕ್ತವಾಗಿರುವ ವಸು ಪದಕ್ಕೆ ಧನವೆಂದು ಅರ್ಥವನ್ನು ವಿವರಿಸಿದೆ-

**ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ ।**
**ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ॥**

(ಋ. ಸಂ. ೭-೩೯-೩)

ಇಲ್ಲಿ ವಸವಃ ಎಂಬ ಪದಕ್ಕೆ ದೇವತೆಗಳು ಎಂದು ಅರ್ಥವನ್ನು ವಿವರಿಸಿದೆ. ಆದರೆ ಸಾಯಣರು ವಸು ಶಬ್ದಕ್ಕೆ ವಾಸಕಾರಣನೆಂದು ಅರ್ಥವನ್ನು ವರ್ಣಿಸಿದ್ದಾರೆ.

**ಸಹಸಃ ಸೂನುಂ—ಬಲಸ್ಯ ಪುತ್ರಂ** ಯಾಗಮಾಡುವಾಗ ಅರಣಿಯಲ್ಲಿ (ಬಲದಿಂದ) ಶಕ್ತಿಯಿಂದ ಮಥನ ಮಾಡಿ ಅಗ್ನಿಯನ್ನು ಉತ್ಪನ್ನಮಾಡುವರು. ಆದ್ದರಿಂದ ಅಗ್ನಿಯು ಬಲದಿಂದ ಉತ್ಪನ್ನನಾಗುವ ಕಾರಣ ಬಲಕ್ಕೆ ಪುತ್ರನೆಂದು (ಮಗನೆಂದು) ಇಲ್ಲಿ ಔಪಚಾರಿಕವಾದ ಪ್ರಯೋಗವಿರುತ್ತದೆ.

**ಸಹಃ** ಎಂಬ ಶಬ್ದವು—ನೂರೊಂದು ಉದಕನಾಮಗಳಲ್ಲಿಯೂ (ನಿ. ೨-೨೪) ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿಯೂ (ನಿ. ೩-೯) ಪಠಿತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ।**

(ಋ. ಸಂ. ೧೦-೫೦-೬)

ಎಂಬ ಈ ಋಕ್ಕಿನಲ್ಲಿ **ಸಹಸಃ ಸೂನೋ ಬಲಸ್ಯ ಪುತ್ರ** ಎಂದು ಅಗ್ನಿಯನ್ನು ಸಂಬೋಧಿಸಿದೆ ಎಂದು ಕೆಲವರ ಮತವೆಂದು ದುರ್ಗಾಚಾರ್ಯರು ವರ್ಣಿಸಿರುವರು.

**ಜಾತವೇದಸಂ— ಜಾತಾನಾಂ ವೇದಿತಾರಂ ಜಾತಪ್ರಜ್ಞಂ ಜಾತಬಲಂ ವಾ।** ಉತ್ಪನ್ನವಾದವುಗಳೆಲ್ಲವನ್ನೂ ತಿಳಿದಿರುವವನು, ಎಂದೂ, ಸ್ವಾಭಾವಿಕವಾದ ಎಲ್ಲವನ್ನೂ ತಿಳಿಯಬಹುದಾದ ಬುದ್ಧಿಶಕ್ತಿಯುಳ್ಳವನೆಂದೂ, ಬಹಳವಾಗಿ ಇರುವ ಶಕ್ತಿಯನ್ನು ಹೊಂದಿ ಇರುವನೆಂದೂ ಅಗ್ನಿಯ ಸ್ವರೂಪವನ್ನು ಬೋಧಿಸುವ ಜಾತವೇದ ಶಬ್ದಕ್ಕೆ ಮೂರು ವಿಧವಾದ ಅರ್ಥವನ್ನು ಸಾಯಣರು ವಿವರಿಸಿರುವರು. ಯಾಸ್ಕರು ನಿರುಕ್ತದಲ್ಲಿ—

**ಜಾತಾನಿ ವೇದ। ಜಾತಾನಿ ವೈನಂ ವಿದುಃ। ಜಾತೇ ಜಾತೇ ವಿದ್ಯತ ಇತಿ ವಾ। ಜಾತವಿತ್ತೋ ವಾ ಜಾತಧನಃ। ಜಾತವಿದ್ಯೋ ವಾ ಜಾತಪ್ರಜ್ಞಾನಃ।**

(ನಿ. ೭-೧೯)

ಎಂದು ಹೇಳಿರುವರು. ಈ ಲೋಕದಲ್ಲಿ ಉತ್ಪನ್ನವಾದುದೂ ಇವನಿಗೆ ತಿಳಿಯದಿರುವುದೂ ಇಲ್ಲವು. ಆದ್ದರಿಂದ ಅಗ್ನಿಯು ಸರ್ವಜ್ಞನಾಗಿರುವನು. ಉತ್ಪನ್ನವಾದ ಪ್ರಾಣಿಗಳು ಎಲ್ಲವೂ ಅಗ್ನಿಯನ್ನು ತಿಳಿದಿರುವವು. ಆದ್ದರಿಂದ ಎಲ್ಲರಿಂದಲೂ ತಿಳಿಯಲರ್ಹನಾಗಿರುವನು.

**ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ ತಸ್ಮಾತ್ ಸರ್ವಾನೃತೂನ್ ಪಶವೋಽಗ್ನಿಮಭಿ ಸರ್ಪಂತೀತಿ ಚ॥**

ಎಂಬ ಈ ಶ್ರುತಿವಾಕ್ಯವು ಅಗ್ನಿಯು ಉತ್ಪನ್ನವಾದವುಗಳೆಲ್ಲದರಲ್ಲಿಯೂ ವ್ಯಾಪಿಸಿರುವನು ಎಂಬ ಅರ್ಥವನ್ನು ವಿಶದವಾಗಿ ಹೇಳುತ್ತದೆ.

ಅಗ್ನಿಯು ಧನವುಳ್ಳವನು. ಮತ್ತು ಸ್ವಭಾವದಿಂದಲೂ ಅಗ್ನಿಯು ಪ್ರಜ್ಞಾನವಂತನಾಗಿರುವನು. ಎಂದು ಅಗ್ನಿಯ ಸ್ವರೂಪ ಮತ್ತು ಸ್ವಭಾವವನ್ನು ವಿವರಿಸಿ,

**ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ।**
**ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ॥**

(ಋ. ಸಂ. ೧-೯೯-೧)

ಮತ್ತು—

**ಪ್ರ ನೂನಂ ಜಾತವೇದಸಮಶ್ವಂ ಹಿನೋತ ವಾಜಿನಂ । ಇದಂ ನೋ ಬರ್ಹಿರಾಸದೇ ॥**

(ಋ. ಸಂ. ೧೦-೧೮೮-೧)

ಎಂಬ ಋಕ್ಕುಗಳಿಂದ ಜಾದವೇದಸ್ಸೆಂಬ ಅಗ್ನಿಯನ್ನು ಸ್ತುತಿಸಿರುವುದನ್ನೂ ವಿವರಿಸಿರುವರು. ಮತ್ತು—

**ತದೇತದೇಕಮೇವ ಜಾತವೇದಸ್ಯಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ।**
**ಯತ್ತು ಕಿಂಚಿದಾಗ್ನೇಯಂ ತಜ್ಜಾತವೇದಸಾನಾಂ ಸ್ಥಾನೇ ಯುಜ್ಯತೇ ॥**

(ನಿ. ೭-೨೦)

ಪ್ರನೂನಂ ಎಂಬ ಜಾತವೇದಸ್ಸಂಬಂಧಿಯಾದ ಗಾಯಿತ್ರಿಯು ಒಂದೇ ಆಗಿರುವುದು. ಇದಕ್ಕಿಂತಲೂ ಬೇರೆಯಾದ ಜಾತವೇದಾಗ್ನಿಬೋಧಕವಾದ ಗಾಯಿತ್ರಿಯು ಕರ್ಮದಲ್ಲಿ ವಿನಿಯೋಗವನ್ನು ಹೊಂದಿರುವುದಿಲ್ಲ. ಆದ್ದರಿಂದ ಅಗ್ನಿಯೇ ಜಾತವೇದಾಃ ಎಂಬ ಪದದಿಂದ ನಿರ್ದಿಷ್ಟನಾಗಿರುವನು.

**ಸ ನ ಮನ್ಯೇತಾಯಮೇವಾಗ್ನಿರಿತ್ಯಪ್ಯೇತೇ ಉತ್ತರೇ ಜ್ಯೋತಿಷೀ ಜಾತವೇದಸೀ ಉಚ್ಯೇತೇ ತತೋ ನು ಮಧ್ಯಮಃ। ಅಭಿಪ್ರವಂತ ಸಮನೇವ ಯೋಷಾ ಇತಿ ತತ್ ಪುರಸ್ತಾದ್ವ್ಯಾಖ್ಯಾತಂ । ಅಥಾಸಾವಾದಿತ್ಯಂ ಉದುತ್ಯಂ ಜಾತವೇದಸಮಿತಿ ತದುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥**

**ಅಭಿ ಪ್ರವಂತ ಸಮನೇವ ಯೋಷಾ** ಎಂಬ ಮಂತ್ರದಿಂದಲೂ ಅಗ್ನಿಯ ಸ್ವರೂಪವನ್ನು ವರ್ಣಿಸಿರುವುದಾದರೂ, ಜಾತವೇದಶ್ಶಬ್ದದ ಅರ್ಥವನ್ನು ವಿಮರ್ಶೆಮಾಡುವಾಗ ಅಗ್ನಿ ಪದವೂ (ಅಭಿಪ್ರವಂತ ಎಂಬ ಮಂತ್ರದಲ್ಲಿ ಉಕ್ತವಾಗಿರುವ ಪದವು) ಜಾದವೇದಶ್ಶಬ್ದಾರ್ಥಕ್ಕೆ ವಿಶೇಷಣವಾಗಿರುವುದು. **ಉದತ್ಯಂ ಜಾತವೇದಸಂ** ಎಂಬ ಮಂತ್ರದಿಂದ ಸೂರ್ಯನೂ ಜಾತವೇದಶ್ಶಬ್ದದಿಂದ ಬೋಧ್ಯನಾಗಿರುವನೆಂದು ಅರ್ಥವು. ದುರ್ಗಾಚಾರ್ಯರು—

**ಜಾತವೇದಸಂ ಸೂರ್ಯಮುದ್ವಹಂತೀತಿ ತು ವಿಶೇಷಣವಿಶೇಷ್ಯಸಾಮಾನಾಧಿಕರಣ್ಯೈಕವಾಕ್ಯ ಪ್ರಸಿದ್ಧ್ಯಾ ಸ್ವನಿಗಮಸಿದ್ಧಮಸ್ಮಿನ್ ಮಂತ್ರೇ ಜಾತವೇದಾಃ ಸೂರ್ಯ ಇತಿ ॥**

**ಉದುತ್ಯಂ ಜಾತವೇದಸಂ** ಎಂಬ ಮಂತ್ರದಲ್ಲಿ ಸೂರ್ಯನಿಗೂ, ಜಾತವೇದಸನೆಂಬ ಅಗ್ನಿಗೂ ತಾದಾತ್ಮ್ಯವನ್ನು ಬೋಧಿಸುವುದಕ್ಕಾಗಿ ವಿಶೇಷಣ ವಿಶೇಷ್ಯಭಾವದಿಂದ ಏಕವಾಕ್ಯವನ್ನು ಅಂಗೀಕರಿಸಿ ಸೂರ್ಯನೂ ಜಾದವೇದಸನಾಗಿರುವನು ಎಂದು ಅರ್ಥವನ್ನು ವಿಮರ್ಶೆಮಾಡಿ ವರ್ಣಿಸಿರುತ್ತಾರೆ. ಮತ್ತು—

**ಯತ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇ ಅಯಮೇವ ಸೋಽಗ್ನಿರ್ಜಾತವೇದಾ ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ॥**

(ನಿ. ೭-೨೦)

ಪಾರ್ಥಿವಾಗ್ನಿರೂಪದಿಂದ ಇರುವ ಜಾತವೇದಶ್ಶಬ್ದಬೋಧ್ಯನಾದ ಅಗ್ನಿಯೇ ಆಯಾಯ ಸೂಕ್ತಮಂತ್ರಗಳಿಂದ ಯಜ್ಞಗಳಲ್ಲಿ ಆಹೂತನಾಗಿ ಹವಿಸ್ಸುಗಳನ್ನು ಸ್ವೀಕರಿಸುವನು. ವೈದ್ಯುತಾಗ್ನಿ, ವೈಶ್ವಾನರಾಗ್ನಿ, ಸೂರ್ಯ, ಇವರುಗಳು ಅಗ್ನಿಯ ಪ್ರಭೇದವಾದರೂ ಜಾತವೇದಶ್ಶಬ್ದದಿಂದ ಬೋಧ್ಯವಾದರೂ ಜಾತವೇದಶ್ಶಬ್ದವು ಪ್ರಸಿದ್ಧಿಯಿಂದ ಪಾರ್ಥಿವಾಗ್ನಿಯನ್ನು ಬೋಧಿಸುವುದು ಎಂದು ವಿವರಿಸಿರುವರು.

**ವಿಪ್ರಂ ನ ಜಾತವೇದಸಂ—ಜಾತವಿದ್ಯಂ ಮೇಧಾವಿನಂ ಬ್ರಾಹ್ಮಣಮಿವ |**

ಯಾಸ್ಕರು—

**ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ । ಉಭಯಮನ್ವಧ್ಯಾಯಂ** (ನಿ. ೧-೪) ನ ಎಂಬ ಪದವು ನಿಷೇಧಾರ್ಥದಲ್ಲಿ ಪ್ರಸಿದ್ಧವಾಗಿರುವುದು. ವೇದದಲ್ಲಿ ಇದು ನಿಷೇಧ, ಉಪಮಾ, (ಹೋಲಿಕೆ) ಎಂಬ ಎರಡು ಅರ್ಥಗಳಲ್ಲಿಯೂ ಪ್ರಯುಕ್ತವಾಗಿದೆ ಎಂದು ವಿವರಿಸಿರುವುದರಿಂದ **ವಿಪ್ರಂ ನ** ಎಂಬಲ್ಲಿ ನ ಎಂಬುವ ಪದವು ಉಪಮಾರ್ಥದಲ್ಲಿ ಪ್ರಯುಕ್ತವಾಗಿರುವುದರಿಂದ ಸಾಯಣರು **ಬ್ರಾಹ್ಮಣಮಿವ** ಬ್ರಾಹ್ಮಣರ ಹಾಗೆ ಎಂದು ಅರ್ಥವನ್ನು ಹೇಳಿರುವರು.

ಮಂತ್ರದ್ರಷ್ಟೃವಾದ ಋಷಿಯು ಜ್ಞಾನವಂತನಾಗಿರುವ ಬ್ರಾಹ್ಮಣನನ್ನು ಗೌರವದಿಂದ ಪೂಜಿಸುವಂತೆ ಅಗ್ನಿಯನ್ನೂ ಕೂಡ ಗೌರವದಿಂದಲೂ, ಆದರದಿಂದಲೂ ಸ್ತುತಿಸುತ್ತೇನೆ ಎಂದು ವರ್ಣಿಸಿರುವನು ಎಂದು ಅರ್ಥ.

**ಊರ್ಧ್ವಯಾ ದೇವಾಚ್ಯಾ ಕೃಪಾ—ಉತ್ಪನ್ನಯಾ ಉತ್ಕೃಷ್ಟಯಾ ದೇವಾನ್ ಪೂಜಯಂತ್ಯಾ ದೇವಾನ್ ಪ್ರತ್ಯಕ್ತಯಾ ವಾ ಕೃಪಯಾ ಸಾಮರ್ಥ್ಯಲಕ್ಷಣಯಾ** ಊರ್ಧ್ವಶಬ್ದವು ಉನ್ನತ ಎಂಬ ಅರ್ಥವನ್ನು ಬೋಧಿಸುವುದು ರೂಢಿಯಾಗಿರುತ್ತದೆ. ಇಲ್ಲಿ ಕೃಪಾ ಶಬ್ದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿ ಉತ್ಕೃಷ್ಟ ಅಥವಾ ಅತಿಶಯವಾದ ಎಂಬ ಅರ್ಥವನ್ನು ಬೋಧಿಸುವುದು. ದೇವತೆಗಳ ವಿಷಯದಲ್ಲಿ ಅಗ್ನಿಗೆ ಉಂಟಾಗುವ ಕೃಪೆಯು ದೇವತೆಗಳಿಗೆ ಯಜ್ಞದಲ್ಲಿ ಅರ್ಪಿಸುವ ಹವಿಸ್ಸುಗಳನ್ನು ಅವರವರಿಗೆ ತಲುಪಿಸುವುದಾಗಿಯೂ ದೇವತೆಗಳನ್ನು ಗೌರವಿಸುವುದಾಗಿಯೂ ಇರುತ್ತದೆ.

ಯಾಸ್ಕರು ನಿರುಕ್ತದಲ್ಲಿ **ದೇವೋ ದೇವಾಚ್ಯಾ ಕೃಪಾ** (ನಿ. ೬-೮) **ದೇವೋ ದೇವಾನ್ ಪ್ರತ್ಯಕ್ತಯಾ ಕೃಪಾ ಕೃಪ್ ಕೃಪತೇರ್ವಾ ಕಲ್ಪತೇರ್ವಾ** ಎಂದು ವಿವರಿಸಿರುವರು. ದುರ್ಗಾಚಾರ್ಯರು **ಅಗ್ನಿಂ ಹೋತಾರಂ ಮನ್ಯೇ** (ಋ. ಸಂ. ೨-೧-೧೨-೧) ಎಂಬ ಈ ಋಕ್ಕನ್ನೇ ಉದಹರಿಸಿ ಕೃಪಾ ಎಂಬ ಶಬ್ದವು ಕೃಪೂ ಸಾಮರ್ಥ್ಯೇ ಎಂಬ ಧಾತುವಿನಿಂದಲಾಗಲಿ ಅಥವಾ ಕಲ್ಪಧಾತುವಿನಿಂದಾಗಲಿ ನಿಷ್ಪನ್ನವಾಗಿರುವುದರಿಂದ ಸಾಮರ್ಥ್ಯದಿಂದ ಅಗ್ನಿಯು ದೇವತೆಗಳ ವಿಷಯದಲ್ಲಿ ಪ್ರತ್ಯಗ್ಗಮನವುಳ್ಳವನಾಗಿರುವನೆಂದು ಅರ್ಥವನ್ನು ವರ್ಣಿಸಿರುವರು.

**ಶೋಚಿಷಾ ವಷ್ಟಿ—ಜ್ವಾಲಯಾ ಕಾಮಯತೇ ಸ್ವೀಕರೋತೀತ್ಯರ್ಥಃ |** ಅಗ್ನಿಯು ತನ್ನ ಸುತ್ತಲೂ ಹೋಮಮಾಡುವುದರಿಂದ ಹೆಚ್ಚಾಗಿ ಹರಡುತ್ತಿರುವ ಆಜ್ಯದ ಪ್ರಸರಣವನ್ನು ಅನುಸರಿಸಿ ತಾನೂ ದೀಪ್ತನಾಗಿ ಜ್ವಲಿಸುತ್ತಿರುವ ಆಜ್ಯವನ್ನು ತನ್ನ ಜ್ವಾಲೆಗಳಿಂದ ಸ್ವೀಕರಿಸುವನೆಂದು ವರ್ಣಿಸಿದೆ. **ಶೋಚತಿ, ಶೋಚಿಃ** ಎಂಬ ಪದಗಳು **ಜ್ವಲತಿ** ಕರ್ಮಗಳಲ್ಲಿ **ಜ್ವಲತೋ** ನಾಮಧೇಯಗಳಲ್ಲಿ (ನಿ ೨-೧೮) ಪಠಿತವಾಗಿದೆ. ಜ್ವಾಲೆಗಳಿಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಹೋತಾರಮ್**—ಹು ದಾನಾದನಯೋಃ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕ್ಕಿಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಮನ್ಯೇ**—ಮನು ಅವಬೋಧನೇ ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ದಾಸ್ವಂತಮ್**—ಡುದಾಞ್ ದಾನೇ· ಧಾತು. ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ ದಾಶ್ ಶಬ್ದವಾಗುತ್ತದೆ. ದಾಃ ದಾನಂ ಯಸ್ಯ ಸಃ ದಾಸ್ವಾನ್. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—ಎಂಬುದರಿಂದ ಮಕಾರಕ್ಕೆ ವತ್ವ. **ತಸೌ ಮತ್ವರ್ಥೇ** (ಪಾ. ಸೂ. ೧-೪-೧೯) ಎಂಬುದರಿಂದ ಸಾಂತಕ್ಕೆ ಭಸಂಜ್ಞಾ ಇರುವುದರಿಂದ ರುತ್ವ ಬರುವುದಿಲ್ಲ. ಮತುಪ್ ಅನುದಾತ್ತವಾಗುವುದರಿಂದ ಆದ್ಯುದಾತ್ತಸ್ವರ ಉಳಿಯುತ್ತದೆ.

**ಜಾತವೇದಸಮ್**—ವಿದ ಜ್ಞಾನೇ. ಧಾತು. ಜಾತಶಬ್ದ ಉಪಪದವಾಗಿರುವಾಗ **ಗತಿಕಾರಕೋಪ ಪದಯೋಃ ಪೂರ್ವಪದ ಪ್ರಕೃತಿಸ್ವರತ್ವಂ ಚ** (ಉ. ಸೂ· ೪-೬೬೦) ಎಂಬುದರಿಂದ ಅಸಿ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರಕ್ಕೆ ಬಾಧಕವಾಗಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ದ್ವಿತೀಯಾ ಏಕವಚನಾಂತರೂಪ.

**ಸ್ವಧ್ವರಃ**—ಶೋಭನಃ ಅಧ್ವರಃ ಯಸ್ಯ ಸಃ ಸ್ವಧ್ವರಃ. **ನಞ್ ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ದೇವಾಚ್ಯಾ—ಕೃಪಾ—ಸುಪಾಂ ಸುಲುಕ್**—(ಪಾ· ಸೂ. ೭-೧-೩೯) ಎಂಬುದರಿಂದ ತೃತೀಯಾ ವಿಭಕ್ತಿಗೆ ಲುಕ್.

**ವಿಭ್ರಾಷ್ಟಿಮ್**—ಭ್ರಾಜೃ ದೀಪ್ತೌ. ಧಾತು. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೬೪) ಎಂಬುದರಿಂದ ಕ್ತಿನ್ ಪ್ರತ್ಯಯ. **ವ್ರಶ್ಚ ಭ್ರಸ್ಜ**—ಎಂಬುದರಿಂದ ಧಾತುವಿನ ಜಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಷ್ಟುತ್ವ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ.

**ವಷ್ಟಿ**—ವಶ ಕಾಂತೌ ಧಾತು. (ಕಾಂತಿರಿಚ್ಛಾ) ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶೋಚಿಷಾ**—ಶುಚ ಶೋಕೇ. ಧಾತು. **ಅರ್ಚಿಶುಚಿ**—(ಉ. ಸೂ. ೨--೨೬೫) ಎಂಬುದರಿಂದ ಇಸಿ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ.

**ಆ ಜುಹ್ವಾನಸ್ಯ**—ಹು ದಾನಾದನಯೋಃ. ಧಾತು. ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಛಾಂದಸವಾಗಿ ಯಕ್ ಬರುವುದಿಲ್ಲ. ಶ್ಲು ವಿಕರಣ. ಧಾತುವಿಗೆ ದ್ವಿತ್ವ. **ಅಭ್ಯಸ್ತಾನಾಮಾದಿಃ** (ಪಾ.ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ, ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಸರ್ಪಿಷಃ**—ಸೃಪ್ಲೃ ಗತೌ ಧಾತು . **ಅರ್ಚಿಶುಚಿ**—(ಉ. ಸೂ. ೨-೨೬೫) ಎಂಬುದರಿಂದ ಇಸಿ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಲಘೂಪಧ ಗುಣ. ಷಷ್ಠೀ ಏಕವಚನಾಂತರೂಪ. ॥ ೧ ॥



॥ ಸಂಹಿತಾಪಾಠಃ ॥

ಯಜಿಷ್ಠಂ ತ್ವಾ ಯಜಮಾನಾ ಹುವೇಮ ಜ್ಯೇಷ್ಠಮಂಗಿರಸಾಂ ವಿಪ್ರ
ಮನ್ಮಭಿರ್ವಿಪ್ರೇಭಿಃ ಶುಕ್ರ ಮನ್ಮಭಿಃ ।
ಪರಿಜ್ಮಾನಮಿವ ದ್ಯಾಂ ಹೋತಾರಂ ಚರ್ಷಣೀನಾಂ ।
ಶೋಚಿಷ್ಕೇಶಂ ವೃಷಣಂ ಯಮಿಮಾ ವಿಶಃ ಪ್ರಾವಂತು ಜೂತಯೇ
ವಿಶಃ ॥ ೨ ॥

॥ ಪದಪಾಠಃ ॥

ಯಜಿಷ್ಠಂ । ತ್ವಾ । ಯಜಮಾನಾಃ । ಹುವೇಮ । ಜ್ಯೇಷ್ಠಂ । ಅಂಗಿರಸಾಂ । ವಿಪ್ರ । ಮನ್ಮಽಭಿಃ ।
ವಿಪ್ರೇಭಿಃ । ಶುಕ್ರ । ಮನ್ಮಽಭಿಃ ।
ಪರಿಜ್ಮಾನಂಽಇವ । ದ್ಯಾಂ । ಹೋತಾರಂ । ಚರ್ಷಣೀನಾಂ ।
ಶೋಚಿಃಽಕೇಶಂ । ವೃಷಣಂ । ಯಂ । ಇಮಾಃ । ವಿಶಃ । ಪ್ರ । ಅವಂತು । ಜೂತಯೇ । ವಿಶಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ವಿಪ್ರ ಮೇಧಾವಿನ್ ಶುಕ್ರ ದೀಪ್ತಜ್ವಾಲಾಗ್ನೇ ಯಜಿಷ್ಠಮತಿಶಯೇನ ಯಷ್ಟೃತಮಂ ತ್ವಾ ತ್ವಾಂ ಯಜಮಾನಾ ವಯಂ ಯಷ್ಟಾರೋ ಹುವೇಮ । ಆಹ್ವಯಾಮಃ । ಯತೋ ವಯಂ ಯಜಮಾನಾ ಯತಶ್ಚ ತ್ವಂ ಯಜಿಷ್ಠಃ ಅತೋ ಹುವೇಮೇತ್ಯಭಿಪ್ರಾಯಃ । ಕೀದೃಶಂ ತ್ವಾಂ । ಅಂಗಿರಸಾಮಂಗಿರೋಗೋತ್ರೋತ್ಪನ್ನಾನಾಂ ಮಧ್ಯೇ ಜ್ಯೇಷ್ಠಂ । ಯದ್ವಾ । ಅಂಗಾರಾಣಾಂ ಮಧ್ಯೇ ಜ್ಯೇಷ್ಠಂ ಜ್ವಾಲಾಯುಕ್ತತ್ವಾತ್ । ಅಂಗಿರಾ ಅಂಗಾರಾ ಇತಿ ಯಾಸ್ಕಃ । ನಿ. ೩-೧೭ । ಯೇಽಂಗಾರಾಃ ಆಸಂಸ್ತೇಽಂಗಿರಸೋಽಭವನ್ । ಐ. ಬ್ರಾ. ೩-೩೪ । ಇತಿ ಶ್ರುತೇಃ । ಕೇನ ಸಾಧನೇನೇತಿ ತದುಚ್ಯತೇ । ಮನ್ಮಭಿರ್ಮನನಸಾಧನೈರ್ವಿಪ್ರೇಭಿರ್ವಿಶೇಷೇಣ ಪ್ರೀಣಯಿತೃಭಿರ್ಮನ್ಮಭಿರ್ಮಂತ್ರೈಃ । ಯದ್ವಾ । ವಿಪ್ರೇಭಿರ್ಮೇಧಾವಿಭಿರ್ಋತ್ವಿಗ್ಭಿರ್ಮನ್ಮಭಿರ್ಮಂತ್ರೈಶ್ಚ ಸಹಿತಾ ವಯಮಿತಿ ಸಂಬಂಧಃ । ತ್ವದಾಹ್ವಾನಾನಂತರಂ ಪರಿಜ್ಮಾನಂ ಪರಿತೋ ಗಚ್ಛಂತಂ ದ್ಯಾಮಿವ ಸೂರ್ಯಮಿವ ಹೋತಾರಂ ದೇವಾನಾ-

ಮಾಹ್ವಾತಾರಂ । ಕೇಷಾಮರ್ಥೇ । ಚರ್ಷಣೀನಾಂ । ಮನುಷ್ಯನಾಮೈತತ್ । ಮನುಷ್ಯಾಣಾಂ ಯಜಮಾನಾನಾಮರ್ಥೇ । ಯದ್ವಾ । ಚರ್ಷಣೀನಾಂ ಪೂರ್ವಂ ಮನುಷ್ಯಾಣಾಮೇವ ಸತಾಂ ಪಶ್ಚಾದ್ಯಾಗಾದಿಸಾಧನೇನ ದೇವತ್ವಮಾಪನ್ನಾನಾಂ ದೇವಾನಾಮಾಹ್ವಾತಾರಂ । ತಥಾ ಶೋಚಿಷ್ಕೇಶಂ ಕೇಶವದತ್ಯಂತಾಯತಜ್ವಾಲೋಪೇತಂ ವೃಷಣಂ ವರ್ಷಿತಾರಂ ಏವಂ ರೂಪಂ ಯಂ ತ್ವಾಂ ವಿಶಸ್ತ್ವಾಮೇವ ನಿವಿಶಮಾನಾ ಇಮಾ ವಿಶೋ ಯಜಮಾನರೂಪಾಃ ಪ್ರಜಾ ಜೂತಯೇ ಸ್ವರ್ಗಾದ್ಯಭಿಮತಫಲ-ಪ್ರಾಪ್ತಯೇ ಪ್ರಾವಂತು ಪ್ರಕರ್ಷೇಣ ಪ್ರೀಣಯಂತು । ತಾದೃಶಂ ತ್ವಾಂ ಹುವೇಮೇತಿ ಸಂಬಂಧಃ ॥

॥ ಪ್ರತಿಪದಾರ್ಥ ॥

(**ಹೇ**) ವಿಪ್ರ – ಎಲೈ ಮೇಧಾವಿಯಾದ ಅಗ್ನಿಯೇ । **ಪರಿಜ್ಮಾನಮಿವ ದ್ಯಾಂ**—ಸುತ್ತಲೂ ಸಂಚರಿಸುವ ಸೂರ್ಯನಂತೆ । **ಚರ್ಷಣೀನಾಂ**—ಯಾಗಕರ್ತೃಗಳಿಗೋಸ್ಕರ । **ಹೋತಾರಂ**—ದೇವತೆಗಳನ್ನು ಆಹ್ವಾನಿಸುವವನೂ । [**ಚರ್ಷಣೀನಾಂ**—ಮೊದಲು ಮನುಷ್ಯರಾಗಿದ್ದು ಅನಂತರ ದೇವತ್ವವನ್ನು ಪಡೆದ ದೇವತೆಗಳನ್ನು । **ಹೋತಾರಂ**—ಆಹ್ವಾನಿಸುವವನೂ] । **ಶೋಚಿಷ್ಕೇಶಂ**—ಹೊಳೆಯುತ್ತಿರುವ ಕೇಶಗಳುಳ್ಳವನೂ (ಕೇಶಗಳಂತೆ ಹರಡಿಕೊಂಡಿರುವ ಜ್ವಾಲೆಗಳುಳ್ಳವನೂ) । **ವೃಷಣಂ**— ಕಾಮವರ್ಷಕನೂ (ಆದ) । **ಯಂ** – ಯಾವ (ನಿನ್ನನ್ನು) । ವಿಶಃ—(ನಿನ್ನನ್ನು) ಸಮೀಪಿಸಿರುವ । **ಇಮಾ ವಿಶಃ**— ಈ (ಯಜಮಾನರೂಪರಾದ) ಪ್ರಜೆಗಳು । **ಜೂತಯೇ**—ಸ್ವರ್ಗಾದ್ಯಭಿಮತ ಫಲಪ್ರಾಪ್ತಿಗೋಸ್ಕರ । **ಪ್ರ ಅವಂತು**—ಹೆಚ್ಚಾಗಿ ತೃಪ್ತಿಪಡಿಸುತ್ತಾರೋ । **ಹೇ ಶುಕ್ರ**—ಎಲೈ ಪ್ರಜ್ವಲಿಸುತ್ತಿರುವ ಅಗ್ನಿಯೇ । **ತಂ**—ಅಂತಹ । **ಯಜಿಷ್ಠಂ**—ಪೂಜ್ಯತಮನೂ । **ಅಂಗಿರಸಾಂ**—ಅಂಗಿರಸರಲ್ಲಿ (ಬೆಂಕಿಯ ಕಣಗಳಲ್ಲಿ) । **ಜ್ಯೇಷ್ಠಂ**—ಶ್ರೇಷ್ಠನೂ (ಜ್ವಾಲಾವಿಶಿಷ್ಟನಾದುದರಿಂದ ಜ್ಯೇಷ್ಠನೂ) । **ತ್ವಾ**—(ಆದ) ನಿನ್ನನ್ನು । **ಮನ್ಮಭಿಃ**—ಮನನಸಾಧನಗಳಾದ (ಮತ್ತು) । **ವಿಪ್ರೇಭಿಃ**—ವಿಶೇಷ ಪ್ರೀತಿ ಕಾರಕಗಳಾದ । **ಮನ್ಮಭಿಃ**—ಮಂತ್ರಗಳಿಂದ (ವಿಶಿಷ್ಟರಾದ) । [**ಮನ್ಮಭಿಃ**—ಸ್ತುತಿ ಕರ್ತೃಗಳಾದ । **ವಿಪ್ರೇಭಿಃ**—ಋತ್ವಿಜರಿಂದಲೂ (ಮತ್ತು) । **ಮನ್ಮಭಿಃ**—ಮಂತ್ರಗಳಿಂದಲೂ ವಿಶಿಷ್ಟರಾದ] । **ಯಜಮಾನಾಃ**—ಯಾಗಕರ್ತೃಗಳಾದ (ನಾವು) । **ಹುವೇಮ**—ಕರೆಯುತ್ತೇವೆ.

॥ ಭಾವಾರ್ಥ ॥

ಮೇಧಾವಿಯೂ, ಜ್ವಲಿಸುತ್ತಿರುವವನೂ (ಆದ) ಎಲೈ ಅಗ್ನಿಯೇ, ನೀನು ಯಾಗಕರ್ತೃಗಳಾದ ಮನುಷ್ಯರಿಗೋಸ್ಕರ, ಸುತ್ತಲೂ ಸಂಚರಿಸುವ ಸೂರ್ಯನಂತೆ, ದೇವತೆಗಳನ್ನು ಆಹ್ವಾನಿಸುತ್ತೀಯೇ; ಪೂಜ್ಯತಮನೂ, ಕೇಶಗಳಂತೆ ಹರಡಿಕೊಂಡಿರುವ ಜ್ವಾಲಾವಿಶಿಷ್ಟನೂ, ಇಷ್ಟಾರ್ಥಪ್ರದನೂ ಆದ ನಿನ್ನನ್ನು ಸ್ವರ್ಗಾದ್ಯಭೀಷ್ಟಪ್ರಾಪ್ತಿಗೋಸ್ಕರ, ಪ್ರಜೆಗಳು ಸಮೀಪಿಸುತ್ತಾರೆ; ಅಂತಹ ಆಂಗಿರಸರಿಗೆಲ್ಲಾ ಜ್ಯೇಷ್ಠನಾದ ನಿನ್ನನ್ನು, ಸ್ತೋತೃಗಳಾದ ಋತ್ವಿಜರು ಮತ್ತು (ಸ್ತುತಿ ಸಾಧನಗಳಾದ) ಮಂತ್ರಗಳು, ಇವುಗಳಿಂದ ಸಹಿತರಾಗಿ ನಾವು (ಯಜಮಾನರು) ಆಹ್ವಾನಿಸುತ್ತೇವೆ.

## English Translation.

We, the institutors of the ceremony, invoke you Agni, who are most deserving of worship, and are the eldest of the Angirasas, with

(acceptable) prayers ; and with prayers (recited) by the priests, (we adore) you, who, like the traverser of the sky, (the sun), are the invoker (of the gods on behalf) of men, and whom, the bright-haired showerer (of blessings), many people approaching propitiate for the attainment of felicity.

॥ ವಿಶೇಷವಿಷಯಗಳು ॥

**ಶುಕ್ರ—ದೀಪ್ತಜ್ವಾಲಾಗ್ನೇ**—ಶುಕ್ರ ಶಬ್ದವು ನೂರೊಂದು ಉದಕ ನಾಮಗಳ (ನಿ. ೨-೨೪) ಮಧ್ಯದಲ್ಲಿ ಪಠಿತವಾಗಿದೆ.

**ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।**
**ದಿವ್ಯೇ-ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ॥**

(ಋ. ಸಂ. ೧೦-೧೧೦-೬)

ಎಂಬ ಋಕ್ಕಿನಲ್ಲಿ **ಶುಕ್ರಪೇಶಸಂ ಶ್ರಿಯಂ, ಶುಕ್ರಂ ಶೋಚತೇರ್ಜ್ವಲತಿಕರ್ಮಣಃ** (ನಿ. ೮-೧೧) ಎಂದು ಶುಕ್ರ ಶಬ್ದದ ಅರ್ಥವನ್ನು ವಿವರಿಸಿರುವುದರಿಂದ ಶುಕ್ರ ಶಬ್ದವನ್ನು ಅಗ್ನಿಗೆ ವಿಶೇಷಣವಾಡಿ ದೀಪ್ತವಾದ ಜ್ವಾಲೆಗಳುಳ್ಳವನೆಂದು ಅಗ್ನಿಯನ್ನು ಸಂಬೋಧಿಸಿದೆ.

**ವಿಪ್ರ—ಮೇಧಾವಿನ್**—ವಿಪ್ರ ಶಬ್ದಕ್ಕೆ **ಮೇಧಾವಿ** ಪ್ರಜ್ಞಾನವಂತನೆಂದು ಅರ್ಥವನ್ನು ವಿವರಿಸಿ ಅಗ್ನಿಗೆ ವಿಶೇಷಣವಾಗಿ ಪ್ರಯೋಗಿಸಿರುವುದರಿಂದ ಅಗ್ನಿಯನ್ನು ವಿಪ್ರನೆಂದು ಸಂಬೋಧಿಸಿದೆ.

**ಯಜಿಷ್ಠಂ ತ್ವಾ ಯಜಮಾನಾ ಹುವೇಮ—ಅತಿಶಯೇನ ಯಷ್ಟೃತಮಂ ತ್ವಾಂ ವಯಂ ಯಷ್ಟಾರಃ ಆಹ್ವಯಾಮಃ । ಯತೋ ವಯಂ ಯಜಮಾನಾಃ ಯತಶ್ಚ ತ್ವಂ ಯಜಿಷ್ಠಃ ಅತೋ ಹುವೇಮ ।** ಈ ವಾಕ್ಯದಲ್ಲಿ ಯಜ್ಞಮಾಡುವವನನ್ನು ಯಜಮಾನನೆಂತಲೂ, ಯಷ್ಟೃವೆಂತಲೂ ಅರ್ಥಮಾಡಿ ಅಗ್ನಿಯು ಯಷ್ಟೃಗಳಿಗೆ (ಮುಖ್ಯನಾಗಿರುವವ) ಅವಶ್ಯವಾಗಿ ಅಪೇಕ್ಷಿತನಾಗಿರುವ ಕಾರಣ ಯಷ್ಟೃತಮನೆಂದು ಸಂಬೋಧಿಸಿ, ಯಜ್ಞಮಾಡುವ ಯಜಮಾನರು ಅಗ್ನಿಯನ್ನು ಯಜ್ಞದ ಉದ್ದೇಶವಾಗಿ ಆಹ್ವಾನಮಾಡುತ್ತಾರೆಂದು ವಿವರಿಸಿದೆ.

**ಅಂಗಿರಸಾಂ ಜ್ಯೇಷ್ಠಂ—ಅಂಗಿರೋಗೋತ್ರೋತ್ಪನ್ನಾನಾಂ ಮಧ್ಯೇ ಜ್ಯೇಷ್ಠಂ ಯದ್ವಾ ಅಂಗಾರಾಣಾಂ ಮಧ್ಯೇ ಜ್ಯೇಷ್ಠಂ ಜ್ವಾಲಾಯುಕ್ತತ್ವಾತ್ ಅಂಗಿರಾ ಅಂಗಾರಾಃ (ನಿ. ೩-೧೭) ಇತಿ ಯಾಸ್ಕಃ । ಯೇ ಅಂಗಾರಾ ಆಸಂಸ್ತೇಽಂಗಿರಸೋಽಭವನ್ (ಐ ಬ್ರಾ. ೩-೩೪) ಇತಿ ಶ್ರುತೇಃ ।** ಅಗ್ನಿಯು ಅಂಗಿರಾ ಋಷಿಗಳ ಗೋತ್ರದಲ್ಲಿ ಉತ್ಪನ್ನರಾದವರೆಲ್ಲರಿಗಿಂತಲೂ ಮೊದಲನೆಯವನು ಆಗಿರುತ್ತಾನೆ ಅಥವಾ ಅಗ್ನಿಯು ಜ್ವಾಲೆಗಳಿಂದ ಕೂಡಿರುವುದರಿಂದ ಅಂಗಾರಗಳ (ಕೆಂಡಗಳ) ಲ್ಲಿ ಶ್ರೇಷ್ಠನಾಗಿರುತ್ತಾನೆಂದು ಅರ್ಥ.

**ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾಮಭವಶ್ಶಿವಸ್ಸಖಾ ॥**

(ಋ. ಸಂ. ೧-೩೧-೧)

**ತ್ವಮಗ್ನೇ ಪ್ರಥಮೋ ಅಂಗಿರಸ್ತಮಃ ಕವಿರ್ದೇವಾನಾಂ ಪರಿಭೂಷಸಿ ವ್ರತಮ್ ॥**

(ಋ ಸಂ. ೧-೩೧-೨)

ಎಂಬ ಈ ಋಕ್ಕುಗಳಲ್ಲಿ ಅಗ್ನಿಯು ಅಂಗಿರಾ ಋಷಿಗಳೆಲ್ಲರಿಗೂ ಮೊದಲನೆಯವನಾಗಿ ಅಂಗಿರಸ್ಸೆಂಬ ಋಷಿ ಎಂಬ ಹೆಸರಿನಿಂದ ಉತ್ಪನ್ನನಾದನು. ಮತ್ತು ಆ ಋಷಿಗಳಲ್ಲಿ ಶ್ರೇಷ್ಠನಾದನು ಎಂದು ವರ್ಣಿಸಿದೆ. ಐತರೇಯ ಬ್ರಾಹ್ಮಣದಲ್ಲಿ—**ಯೇ ಅಂಗಾರಾ ಆಸಂಸ್ತೇಽಂಗಿರಸೋಽಭವನ್** (ಐ. ಬ್ರಾ. ೩-೩೪) ಅಗ್ನಿಯು ಪ್ರಜ್ವಲಿಸುವಾಗ ಉಂಟಾಗುವ ಅಂಗಾರಗಳು (ಕೆಂಡಗಳು) ಅಂಗಿರಸ್ ಎಂಬ ಋಷಿಗಳ ನಾಮಧೇಯವಾಯಿತು. ಎಂದು ಅಂಗಿರಸ್ ಶಬ್ದದ ನಿರ್ವಚನವನ್ನೂ ಹೇಳಿದೆ.

**ಪ್ರಿಯಮೇಧವದತ್ರಿವಜ್ಜಾತವೇದೋ ವಿರೂಪವತ್ ।**
**ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಮ್ ॥**
(ಋ. ಸಂ. ೧-೪೫-೩)

ಎಂಬ ಋಕ್ಕನ್ನು ಯಾಸ್ಕರು ಉದಹರಿಸಿ, (ನಿ. ೩-೧೭)

**ಅರ್ಚಿಷಿ ಭೃಗುಃ ಸಂಬಭೂವ ಭೃಗುರ್ಭೃಜ್ಯಮಾನೋ ನ ದೇಹೇ । ಅಂಗಾರೇಷ್ವಂಗಿರಾ ಅಂಗಾರಾ (ಅಂಚನಾಃ) ಅಂಕನಾಃ** । ಎಂದು ವ್ಯಾಖ್ಯಾನಮಾಡಿರುವರು.
ದುರ್ಗಾಚಾರ್ಯರು ಇದರ ಅರ್ಥವನ್ನು ವಿವರಿಸುವಾಗ—

**ಭೃಗುರ್ಭೃಜ್ಯಮಾನೋ ನ ದೇಹೇ ಪ್ರಜಾಪತಿನಾ ಕಿಲ ಶುಕ್ರಮಾತ್ಮೀಯಮಾದಾಯ ಅಗ್ನೌ ಹುತಂ । ತತಃ ಅರ್ಚಿಷಿ ಜ್ವಾಲಾಯಾಂ ಭೃಗುಃ ನಾಮ ಮಹರ್ಷಿಃ ಸಂಬಭೂವ । ವ್ಯಪಗತೇ ಅರ್ಚಿಷಿ ಯಃ ಅಂಗಾರೇಷು ಸಂಬಭೂವ ಸಃ ಅಂಗಿರಾಃ ನಾಮ ಅಭವತ್ ॥ ಅಂಗಾರಾಃ ಅಂಕನಾಃ ತೇ ಹಿ ಯತ್ರ ನಿಧೀಯಂತೇ ತದಂಕಿತಂ ಭವತಿ ॥**

ಬ್ರಹ್ಮನು ತನ್ನ ರೇತಸ್ಸನ್ನು ಅಗ್ನಿಯಲ್ಲಿ ಹೋಮಮಾಡಿದಾಗ ಜ್ವಾಲೆಗಳು ಉಂಟಾದವು. ಅದರಿಂದ ಭೃಗುಋಷಿಯು ಉತ್ಪನ್ನನಾದನು. ಜ್ವಾಲೆಗಳು ಎಲ್ಲವೂ ಆರಿದನಂತರ ಅಂಗಾರಗಳು ಉಳಿದವು. ಅದರಿಂದ ಉತ್ಪನ್ನನಾದವನು ಅಂಗಿರಸ್ಸೆಂಬ ಋಷಿಯಾದನು. ತಮಗೆ ಸ್ಪರ್ಶವಾದವುಗಳಿಗೆ ಗುರುತು (ಅಂಕನ) ಮಾಡುವುದರಿಂದ ಇವುಗಳಿಗೆ ಅಂಗಾರಗಳೆಂದು ಹೆಸರಾಯಿತು ಎಂದು ಅರ್ಥವನ್ನು ವಿವರಿಸಿದೆ. ಇದರಿಂದಲೇ ಸಾಯಣರು ಜ್ವಾಲಾಯುಕ್ತನಾಗಿರುವುದರಿಂದ ಅಗ್ನಿಯು ಅಂಗಾರಗಳಲ್ಲಿ ಶ್ರೇಷ್ಠನಾಗಿರುವನು ಎಂದು ವರ್ಣಿಸಿರುವರು.

**ಮನ್ಮಭಿರ್ವಿಪ್ರೇಭಿರ್ಮನ್ಮಭಿಃ—ಮನನಸಾಧನೈಃ ವಿಶೇಷೇಣ ಪ್ರೀಣಯಿತೃಭಿಃ ಮಂತ್ರೈಃ । ಯದ್ವಾ ವಿಪ್ರೈಃ ಮೇಧಾವಿಭಿಃ ಋತ್ವಿಗ್ಭಿಃ ಮನ್ಮಭಿಃ ಮನ್ತ್ರೈಶ್ಚ ಸಹಿತಾ ವಯಮಿತಿ ಸಂಬಂಧಃ ।** ಮನ್ಮ ಶಬ್ದವು ಎರಡು ಸಾರಿ ಇಲ್ಲಿ ಆವೃತ್ತಿಯುಳ್ಳದ್ದಾಗಿರುವುದು. ಇದರಿಂದ ಎರಡು ವಿಧವಾದ ಅರ್ಥವನ್ನು ವರ್ಣಿಸಿದೆ. ಮೊದಲನೆಯ ಅರ್ಥವು ಮನನಸಾಧನವೆಂದಾಗಿ ಮಂತ್ರಶಬ್ದಕ್ಕೆ ವಿಶೇಷಣವಾಗಿದೆ. ಎರಡನೆಯ ಮನ್ಮ ಶಬ್ದಕ್ಕೆ ಮಂತ್ರವೆಂದು ಅರ್ಥವನ್ನು ವಿವರಿಸಿದೆ. ವಿಪ್ರ ಶಬ್ದಕ್ಕೂ ಕೂಡ ಎರಡು ವಿಧವಾದ ಅರ್ಥವನ್ನು ವಿವರಿಸಿದೆ. ಮೊದಲನೆಯ ಅರ್ಥವು. ವಿ=ವಿಶೇಷವಾಗಿ ಪ್ರ=ಪ್ರೀಣಯಿತಾ, (ಸಂತೋಷಪಡಿಸುವವನು) ಎಂದಾಗಿದೆ. ವಿಪ್ರ ಶಬ್ದಕ್ಕೆ ಎರಡನೆಯ ಅರ್ಥವು ಮೇಧಾವಿಯಾದ ಋತ್ವಿಜನು ಎಂದು ಹೇಳಿದೆ.

ಅಗ್ನಿಯನ್ನು ಸಂತೋಷಪಡಿಸತಕ್ಕ ಮಂತ್ರಗಳಿಂದ ಕೂಡಿರುವ ಮೇಧಾವಿಗಳಾದ ಋತ್ವಿಜರೂ ಯಜಮಾನರಾದ ನಾವುಗಳೂ ಆಹ್ವಾನಮಾಡುವೆವು ಎಂದು ಒಟ್ಟಿನಲ್ಲಿ ಅರ್ಥವಾಗುತ್ತದೆ. ಇದನ್ನು ಸಾಯಣರು ಎರಡು ವಿಧವಾಗಿ ಅರ್ಥಮಾಡಿರುತ್ತಾರೆ. ವಿಪ್ರ ಶಬ್ದಕ್ಕೆ (ಎರಡು ವಿಧವಾದ ಅರ್ಥದಿಂದ) ಹೇಳಿರುವ ಅರ್ಥಭೇದದಿಂದ ಅರ್ಥವ್ಯತ್ಯಾಸವು ಇಲ್ಲಿ ವರ್ಣಿತವಾಗಿದೆ. ಮನ್ತ್ರ ಶಬ್ದದ ಅರ್ಥವು. ೧-೧೪೮-೨ ನೆಯ ಋಕ್ಕಿನಲ್ಲಿ ವಿವರಿಸಿದೆ.

**ಹೋತಾರಂ ಚರ್ಷಣೀನಾಂ—ಯಜಮಾನಾನಾಮರ್ಥೇ ದೇವಾನಾಂ ಆಹ್ವಾತಾರಂ । ಯದ್ವಾ । ಪೂರ್ವಂ ಮನುಷ್ಯಾಣಾಮೇವ ಸತಾಂ ಪಶ್ಚಾತ್ ಯಾಗಾದಿಸಾಧನೇನ ದೇವತ್ವಮಾಪನ್ನಾನಾಂ ದೇವಾನಾಮಾಹ್ವಾತಾರಂ ।** ಹ್ವೇಞ್ ಧಾತುವಿನಿಂದ ನಿಷ್ಪನ್ನವಾದ ಹೋತೃಶಬ್ದದ ಅರ್ಥವನ್ನು ಅಗ್ನಿಯೇ ಹೋತೃವೆಂದೂ, ಆಯಾಯ ದೇವತೆಗಳನ್ನು ಯಜ್ಞದಲ್ಲಿ ಸಮರ್ಪಿಸುವ ಹವಿಸ್ಸುಗಳ ಸ್ವೀಕಾರಕ್ಕಾಗಿ ಬರಮಾಡಲು ಆಯಾಯ ದೇವತೆಗಳ ಮಂತ್ರಗಳನ್ನು ಪಠಿಸುವ ಋತ್ವಿಜನೆಂದೂ ಹಿಂದೆ ವರ್ಣಿಸಿದೆ. ಇದರಿಂದ ಇಲ್ಲಿ ಎರಡು ವಿಧವಾದ ಅರ್ಥಗಳನ್ನೂ ವಿವರಿಸಿದೆ. ಮೊದಲನೆಯ ಅರ್ಥದಲ್ಲಿ ದೇವತೆಗಳನ್ನೆಲ್ಲರನ್ನೂ ಅಗ್ನಿಯೇ ಯಜ್ಞಕ್ಕಾಗಿ ಕರೆಯುವವನು ಎಂದು ಹೇಳಿದೆ. ಎರಡನೆಯ ಅರ್ಥದಲ್ಲಿ ಚರ್ಷಣೀ ಎಂಬ ಪದವನ್ನು ಪ್ರಯೋಗಿಸಿರುವುದರಿಂದ ಚರ್ಷಣೀ ಪದದ ಅರ್ಥವನ್ನು ವಿವರಿಸಿದೆ ಯಾಸ್ಕರು ನಿರುಕ್ತದಲ್ಲಿ—ಮನುಷ್ಯಾಃ, ನರಃ ಎಂಬ ಇಪ್ಪತ್ತೈದು ಮನುಷ್ಯ ನಾಮಗಳ ಮಧ್ಯದಲ್ಲಿ (ನಿ. ೩-೮) ಪಠಿಸಿರುತ್ತಾರೆ. ಮತ್ತು

**ವಿಶ್ವಾನರಸ್ಯ ವಸ್ಪತಿಮನಾನತಸ್ಯ ಶವಸಃ ।**
**ಏವೈಶ್ಚ ಚರ್ಷಣೀನಾಮೂತೀ ಹುವೇ ರಥಾನಾಂ ॥**

(ಋ. ಸಂ. ೮-೬೮-೪)

ಎಂಬ ಋಕ್ಕಿನಲ್ಲಿ ಚರ್ಷಣೀನಾಂ ಮನುಷ್ಯಾಣಾಂ ಎಂದು (ನಿ ೧೨-೨೨) ವ್ಯಾಖ್ಯಾನಮಾಡಿದೆ. ಇದನ್ನು ಅನುಸರಿಸಿಯೇ ಸಾಯಣರು ಚರ್ಷಣೀ ಎಂಬ ಪದವು ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ **ಯಜಮಾನಾನಾಮರ್ಥೇ** ಯಜ್ಞಮಾಡುವವರಿಗಾಗಿ ಎಂದು ಮೊದಲನೆಯ ಅರ್ಥವನ್ನು ವಿವರಿಸಿರುತ್ತಾರೆ ಮತ್ತು ಇವರು—ಎರಡನೆಯ ಅರ್ಥದಲ್ಲಿ—ಮೊದಲು ಯಜ್ಞಮಾಡುವ ಸಾಮಾನ್ಯಜನರು ಯಾಗಮಾಡಿ ದೇವಭಾವವನ್ನು ಹೊಂದಿ ಚರ್ಷಣೀ ಪದದಿಂದ ವ್ಯಪದಿಷ್ಟರಾಗುವರು. ಇವರನ್ನು ಯಜ್ಞಕ್ಕಾಗಿ ಅಗ್ನಿಯು ಆಹ್ವಾನಮಾಡುವನು ಎಂದು ಹೇಳಿದೆ.

**ಪರಿಜ್ಮಾನಮಿವ ದ್ಯಾಂ—ಸೂರ್ಯಮಿವ ಪರಿತೋ ಗಚ್ಛಂತಂ** ದ್ಯುಶಬ್ದಕ್ಕೆ ಸೂರ್ಯನೆಂದು ಅರ್ಥವನ್ನು ವಿವರಿಸಿ ಅಗ್ನಿಯು ಸೂರ್ಯನ ಹಾಗೆ ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಾನೆ (ವ್ಯಾಪಿಸಿರುತ್ತಾನೆ.) ಎಂದು ಸಾಯಣರು ಹೇಳಿದ್ದಾರೆ. ಆದರೆ ಯಾಸ್ಕರು—

**ನ ನೂನಮಸ್ತಿ ನೋ ಶ್ವಃ ಕಸ್ತದ್ವೇದ ಯದದ್ಭುತಂ ।**
**ಅನ್ಯಸ್ಯ ಚಿತ್ತಮಭಿ ಸಂಚರೇಣ್ಯಮುತಾಧೀತಂ ವಿ ನಶ್ಯತಿ ॥**

(ಋ. ಸಂ. ೧-೧೭೦-೧)

ಎಂಬ ಈ ಋಕ್ಕನ್ನು ಉದಹರಿಸಿ—**ನ ನೂನಮಸ್ತ್ಯದ್ಯತನಂ, ಅದ್ಯಾಸ್ಮಿನ್ ದ್ಯವಿ ದ್ಯುರಿತ್ಯಹ್ನೋ ನಾಮಧೇಯಂ ದ್ಯೋತತ ಇತಿ ಸತಃ** ಎಂದು ದ್ಯು ಶಬ್ದಕ್ಕೆ ಅಹಸ್ಸು ಎಂದು ಅರ್ಥಮಾಡಿದ್ದಾರೆ. ದುರ್ಗಾ

ಚಾರ್ಯರು ನ ನೂನಮಸ್ತಿ, ಶ್ವಃ ನಾಸ್ತಿ ಎಂದು ಇರುವುದರಿಂದ ಯಾಸ್ಕರು ಇಲ್ಲಿ ಅದ್ಯತನಂ ಎಂಬ ಪದವನ್ನು ಅಧ್ಯಾಹಾರಮಾಡಿ ವ್ಯಾಖ್ಯಾನಮಾಡಿದ್ದಾರೆ ಎಂದು ವಿವರಿಸಿರುವರು.

ಅಹಸ್ಸೆಂಬುವುದು ಸೂರ್ಯನ ಗತಿವಿಶೇಷದಿಂದ ಉಂಟಾಗುವುದರಿಂದ, ಕಾಲವಿಶೇಷವಾಗಿರುವ ಕಾರಣದಿಂದ, ಅಹಸ್ಸಿಗೇ ಪ್ರಕಾಶವನ್ನು ಬೆಳಗಿಸುವ, ಯಾವಾಗಲೂ ಸಂಚರಣಶೀಲನಾಗಿರುವ ಸೂರ್ಯನ ಹಾಗೆ ಸಂಚರಿಸುವವನು ಎಂದು ಅರ್ಥವನ್ನು (ದ್ಯೋತನರೂಪವಾದ ಅರ್ಥಸಾಮಾನ್ಯವು ಅಹಸ್ಸು ಮತ್ತು ಸೂರ್ಯ ಇವರಿಗೆ ಉಂಟಾಗಿರುತ್ತದೆ ಯಾದಕಾರಣ) ವಿವರಿಸಿರುವರೆಂದು ತೋರುತ್ತದೆ.

**ಶೋಚಿಷ್ಕೇಶಂ—ಕೇಶವತ್ ಅತ್ಯಂತಾಯತಜ್ವಾಲೋಪೇತಂ ।** ಶೋಚಿಶ್ಶಬ್ದವು ಜಮತ್ ಮೊದಲಾದ ಹನ್ನೊಂದು ಜ್ವಲತೋನಾಮಗಳ ಮಧ್ಯದಲ್ಲಿ (ನಿ. ೨-೨೮) ಪಠಿತವಾಗಿರುವುದರಿಂದ ಜ್ವಲತಃ ಜ್ವಾಲೆಗಳು, ಎಂದು ಅರ್ಥವು. ಮನುಷ್ಯರ ಶರೀರದಲ್ಲಿ ಇರುವ ಕೂದಲುಗಳು ಉದ್ದವಾಗಿರುವಂತೆ ಅಗ್ನಿಯ ಜ್ವಾಲೆಗಳೂ ದೀರ್ಘ ವಾಗಿರುವವು. ಹೀಗೆ ಇರುವ ಜ್ವಾಲೆಗಳುಳ್ಳವನು ಅಗ್ನಿಯು ಎಂದು ಅರ್ಥ

**ಇಮಾಃ ವಿಶಃ ವಿಶಃ ಜೂತಯೇ ಸ್ತ್ರಾವಂತು** ಎಂಬ ಈ ವಾಕ್ಯದಲ್ಲಿ ವಿಶಃ ಎಂಬ ಪದವು ಎರಡು ಸಾರಿ ಪ್ರಯುಕ್ತವಾಗಿದೆ. ನಿರುಕ್ತಕಾರರು ಮನುಷ್ಯಾಃ ನರಃ ಎಂಬ ಇಪ್ಪತ್ತೈದು ಮನುಷ್ಯ ನಾಮಗಳ ಮಧ್ಯದಲ್ಲಿ (ನಿ. ೩-೮) ವಿಶಃ ಎಂಬ ಪದವು ಪಠಿತವಾಗಿದೆ ಎಂದು ಹೇಳಿದ್ದಾರೆ. ಮತ್ತು

**ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ । ಸ್ತೋಮಂ ರುದ್ರಾಯ ದೃಶೀಕಂ ॥**
(ಋ. ಸಂ. ೧-೨೭-೧೦)

ಈ ಋಕ್ಕಿನಲ್ಲಿ ವಿಶೇ ವಿಶೇ ಎಂಬ ಪದಕ್ಕೆ ಮನುಷ್ಯಸ್ಯ, ಮನುಷ್ಯಸ್ಯ ಪ್ರತಿಯೊಬ್ಬ ಮನುಷ್ಯನಿಗೂ ಕೂಡ ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ವಿಶಃ ವಿಶಃ ಎಂಬ ಎರಡು ಪದದಲ್ಲಿ ಒಂದಕ್ಕೆ ತ್ವಾಮೇವ ನಿವಿಶಮಾನಾಃ ಅಗ್ನಿಯನ್ನೇ ಆಶ್ರಯಿಸಿಕೊಂಡು ಇರುವ ಎಂದು ಅರ್ಥವನ್ನು ಹೇಳಿ, ಎರಡನೆಯ ವಿಶಃ ಎಂಬ ಪದಕ್ಕೆ ಯಜಮಾನ ರೂಪದಿಂದ ಇರುವ ಪ್ರಜೆಗಳೆಂದು ವಿವರಿಸಿ, ಅಗ್ನಿದೇವನು ಇಷ್ಟಾರ್ಥಗಳನ್ನು ನೆರವೇರಿಸಿ ಕೊಡುವವನಾದುದರಿಂದ ಇವನನ್ನು ಸೇವಿಸುವ ಯಜಮಾನ ರೂಪದಿಂದ ಇರುವ ಪ್ರಜೆಗಳು ಸ್ವರ್ಗವೇ ಮೊದಲಾದ ತಮ್ಮ ತಮ್ಮ ಆಯಾಯ ಇಷ್ಟ ಸಿದ್ಧಿಗಾಗಿ ಆಯಾಯ ಹವಿಸ್ಸುಗಳನ್ನು ಅರ್ಪಿಸುವುದರಿಂದ ತೃಪ್ತಿ ಪಡಿಸಲಿ ಎಂದು ಕೋರಿದೆ. ಮತ್ತು ಈ ಪ್ರಕಾರವಾದ ಮಹಿಮೆಯುಳ್ಳ ಅಗ್ನಿಯನ್ನು ನಾವು ಯಜ್ಞಕ್ಕಾಗಿ ಆಹ್ವಾನಮಾಡಿ ಹವಿಸ್ಸುಗಳನ್ನು ಅರ್ಪಿಸೋಣ ಎಂದು ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಯಜಿಷ್ಠಮ್**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಅತಿಶಯೇನ ಯಷ್ಟಾ ಎಂದು ಅರ್ಥ ವಿವಕ್ಷಾಮಾಡಿದಾಗ **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ತುರಿಷ್ಠೇ ಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ತೃಚಿಗೆ ಲೋಪ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಯಜಮಾನಾಃ**—ಪೂರ್ವೋಕ್ತವಾದ ಧಾತುವಿಗೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್**—(ಪಾ. ಸೂ ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತು ಸ್ವರ ಉಳಿಯುತ್ತದೆ.

**ಹುವೇಮ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಅದರ ಸಕಾರಕ್ಕೆ ಲೋಪ. ಶಪ್ ವಿಕರಣ. ಲಿಙ್‌ಗೆ ಯಾಸುಟಾಗನ ಇಯಾದೇಶ. **ಲೋಪೋವ್ಯೋ**—ಎಂಬುದರಿಂದ ಯ ಲೋಪ. ಗುಣ. **ಬಹುಲಂ ಛಂದಸಿ** (ಪಾ. ಸೂ. ೧-೧-೩೪) ಎಂಬುದರಿಂದ ಸಂಪ್ರಸಾರಣ. ವ್ಯತ್ಯಯದಿಂದ ಉವಙಾದೇಶ. ತಿಙಂತ ನಿಘಾತಸ್ವರ ಬರುತ್ತದೆ.

**ಜ್ಯೇಷ್ಠಮ್**—ಅತಿಶಯೇನ ಪ್ರಶಸ್ಯಃ ಜ್ಯೇಷ್ಠಃ. ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ ಬಂದಾಗ **ಜ್ಯಚ** (ಪಾ. ಸೂ. ೫-೩-೬೧) ಎಂಬುದರಿಂದ ಜ್ಯಾದೇಶ. **ಪ್ರಕೃತ್ಯೈಕಾಚ್** ಎಂಬುದರಿಂದ ಪ್ರಕೃತಿಭಾವ ಬರುವುದರಿಂದ ಟಿಲೋಪ ಬರುವುದಿಲ್ಲ. ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕ ವಚನಾಂತರೂಪ.

**ಮನ್ಮಭಿಃ**—ಮನ ಜ್ಞಾನೇ. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದ ರಿಂದ ಮನಿನ್‌ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ವಿಪ್ರೇಭಿಃ**—ವಿಪ್ರ+ಭಿಸ್ ಎಂದಿರುವಾಗ **ಬಹುಲಂ ಛಂದಸಿ** ಎಂದುದರಿಂದ ಭಿಸಿಗೆ ಐಸ್ ಭಾವ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಸೂತ್ರದಿಂದ ಏತ್ವ.

**ಪರಿಜ್ಮಾನಮ್**—ಪರಿ ಜಾಯತೇ ಇತಿ ಪರಿಜ್ಮಾ. **ಶ್ವನ್ನುಕ್ಷ**—(ಉ. ಸೂ. ೧-೧೬೦) ಎಂಬುದರಿಂದ ಕನಿನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ದ್ವಿತೀಯಾ ಏಕವಚನಾಂತರೂಪ.

**ಚರ್ಷಣೀನಾಮ್**—ಪ್ರಾದಿಪದಿಕಸ್ವರದಿಂದ ಇದು ಅಂತೋದಾತ್ತವಾಗುತ್ತದೆ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ವಿಭಕ್ತಿಗೆ (ಷಷ್ಠೀ ಬಹುವಚನ) ಉದಾತ್ತಸ್ವರ ಬರುತ್ತದೆ.

**ಅವಂತು**—ಅವ ರಕ್ಷಣೇ. ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜೂತಯೇ—ಊತಿಜೂತಿಸಾತಿ**—(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಉದಾತ್ತವಾಗಿ ನಿಪಾತಿತವಾಗಿದೆ. ಚತುರ್ಥ್ಯಂತರೂಪ. ॥ ೨ ॥



॥ ಸಂಹಿತಾಪಾಠಃ ॥

ಸ ಹಿ ಪುರೂ ಚಿದೋಜಸಾ ವಿರುಕ್ಮತಾ ದೀದ್ಯಾನೋ ಭವತಿ ದ್ರುಹಂತರಃ
ಪರಶುರ್ನ ದ್ರುಹಂತರಃ ।
ವೀಳು ಚಿದ್ಯಸ್ಯ ಸಮೃತೌ ಶ್ರುವದ್ವನೇವ ಯತ್ಸ್ಥಿರಂ ।
ನಿಃಷಹಮಾಣೋ ಯಮತೇ ನಾಯತೇ ಧನ್ವಾಸಹಾ ನಾಯತೇ ॥ ೩ ॥

॥ ಪದಪಾಠಃ ॥

ಸಃ । ಹಿ । ಪುರು । ಚಿತ್ । ಓಜಸಾ । ವಿರುಕ್ಮತಾ । ದೀದ್ಯಾನಃ । ಭವತಿ । ದ್ರುಹಂऽತರಃ । ಪರಶುಃ । ನ ।
ದ್ರುಹಂऽತರಃ ।
ವೀಳು । ಚಿತ್ । ಯಸ್ಯ । ಸಂऽಋತೌ । ಶ್ರುವತ್ । ವನಾऽಇವ । ಯತ್ । ಸ್ಥಿರಂ ।
ನಿಃऽಸಹಮಾನಃ । ಯಮತೇ । ನ । ಅಯತೇ । ಧನ್ವऽಸಹಾ । ನ । ಅಯತೇ ॥ ೩ ॥

॥ ಸಾಯಣಭಾಷ್ಯಂ ॥

ಸ ಹಿ ಸ ಏವ ಪೂರ್ವಂ ಸ್ತುತ ಏವಾಗ್ನಿರ್ವಿರುಕ್ಮತಾ ವಿಶೇಷೇಣ ರೋಚನವತೌಜಸಾ ಜ್ವಾಲಾರೂಪೇಣ ಬಲೇನ ಪುರು ಚಿತ್ ಅತ್ಯಧಿಕಮೇವ ದೀದ್ಯಾನೋ ದೀಪ್ಯಮಾನೋ ದ್ರುಹಂತರೋ ದ್ರೋಗ್ಧೄಣಾಂ ತರಿತಾ ನಿವಾರಯಿತಾ ಭವತಿ । ಅಸ್ಮಾಸು ದ್ರೋಹಂ ಕುರ್ವತಾಂ ಶತ್ರೂಣಾಂ ಹಿಂಸಕೋ ಭವತೀತ್ಯರ್ಥಃ । ತತ್ರ ದೃಷ್ಟಾಂತಃ । ದ್ರುಹಂತರೋ ದ್ರೋಗ್ಧೄಣಾಂ ಛೇದನಾಯ ಪ್ರಯುಕ್ತಃ ಪರಶುರ್ನ ಪರಶುರಿವ । ಸ ಯಥಾಮೋಘಂ ಹಿನಸ್ತಿ ತಥಾಯಮಪಿ । ಕಿಂಚ ಯಸ್ಯಾಗ್ನೇಃ ಸಮೃತಾ ಸಂಗತೌ ಸಂಯೋಗೇ ವೀಳು ಚಿತ್ ದೃಢಮಪಿ ಪಾಷಾಣಾದಿಕಂ ಶ್ರುವತ್ ಗಚ್ಛೇತ್ ಶೀರ್ಯೇತ । ತಥಾಯತ್ಸ್ಥಿರಂ ಯಚ್ಚ ಪರ್ವತಾದಿ ಸ್ಥಿರಮಚಲಿತಂ ತದಪಿ ಶ್ರುವತ್ । ವೀಡ್ವಿತಿ ದೃಢನಾಮ ವೀಳು ಚ್ಯೌತ್ನಮಿತಿ ತನ್ನಾಮಸು ಪಾಠಾತ್ । ತತ್ರ ದೃಷ್ಟಾಂತಃ । ವನೇವ ಉದಕಮಿವ । ಉದಕಂ ಯಥಾಗ್ನಿಸಂಯೋಗೇ ಶುಷ್ಯತಿ ತಥೇತ್ಯರ್ಥಃ । ಅತ್ಯಂತದೃಢಂ ಸ್ಥಿರಮಪಿ ಹಿನಸ್ತಿ ಅಸ್ಮದ್ದ್ರೋಗ್ಧಾರಂ ಶತ್ರುಂ ಹಿನಸ್ತೀತಿ ಕಿಮುವಕ್ತವ್ಯಮಿತ್ಯಭಿಪ್ರಾಯಃ । ಕಿಂಚಾಯಮಗ್ನಿರ್ನಿಷ್ಷಹಮಾಣಃ ಶತ್ರೂನ್ನಿಃಶೇಷೇಣಾಭಿಭವನ್ ಯಮತೇ । ಉಪರಮತೇ । ಶತ್ರುಷು ಮಧ್ಯೇ ಕ್ರೀಡತಿ । ತಾನೇವ ನಾಶಯತಿ । ತಥಾ ಕುರ್ವನ್ನಾಯತೇ । ನ ಗಚ್ಛತಿ । ಶತ್ರೋಃ ಸಕಾಶಾನ್ನ ಪಲಾಯತೇ । ತತ್ರ ದೃಷ್ಟಾಂತಃ ।

**ಧನ್ವಸಹಾ ನ । ಧನುಷಾ ಶತ್ರೂನಭಿಭವತೀತಿ ಧಾನುಷ್ಕಃ ॥ ಸಹತೇರಸುನ್ ಛಾಂದಸೋಽಂತ್ಯಲೋಪಃ ॥ ಸ ಯಥಾ ಶತ್ರೋರಭಿಮುಖಂ ವಿಧ್ಯತಿ ನ ಪಲಾಯತೇ ತದ್ವದಿತ್ಯರ್ಥಃ । ಯದ್ವಾ । ದೃಢಧನುರ್ವಹನಕ್ಷಮೋ ಧನ್ವಸಹಃ ॥ ಅಸ್ಮಿನ್ಪಕ್ಷೇ ಪಚಾದ್ಯಚ್ । ಸುಪಾಂ ಸುಲುಗಿತ್ಯಾಕಾರಃ ॥ ದೃಢಧನ್ವಾ ಸನ್ನಾಯತೇ ನ ಚಲತಿ ॥**

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಅಗ್ನಿಯ । **ಸಂಋತೌ**—ಸಂಯೋಗವಾದಲ್ಲಿ । **ವೀಳು ಚಿತ್**—ಅತ್ಯಂತ ದೃಢವಾದ (ಪರ್ವತಾದಿ)ಗಳೂ । **ಯತ್ ಸ್ಥಿರಂ (ತತ್ ಚ)**—ಸ್ಥಿರವಾದ (ಇತರ ವಸ್ತುಗಳು) ಯಾವುವು (ಇವೆಯೋ ಅವುಗಳೂ ಕೂಡ) । **ವನೇವ**—ಉದಕವು (ಅಗ್ನಿಸಂಯೋಗದಿಂದ ಶೋಷಿಸಿಹೋಗು)ವಂತೆ । **ಶ್ರುವತ್**—(ನಾಶವಾಗಿ) ಹೋಗುತ್ತವೆಯೋ । **ಸಃ ಹಿ**—ಆ (ಪೂರ್ವದಲ್ಲಿ ಸ್ತುತನಾದ) ಅಗ್ನಿಯೇ । **ವಿರುಕ್ಮತಾ**—ವಿಶೇಷವಾಗಿ ಜ್ವಲಿಸುತ್ತಿರುವ । **ಓಜಸಾ**—ಜ್ವಾಲಾರೂಪಬಲದಿಂದ । **ಪುರು ಚಿತ್**—ಅತ್ಯಧಿಕವಾಗಿಯೇ । **ದೀದ್ಯಾನಃ**—ಜ್ವಲಿಸುವವನಾಗಿ । **ದ್ರುಹಂತರಃ**—ಶತ್ರುಭೇದನೆಗಾಗಿ ಪ್ರಯುಕ್ತವಾದ । **ಪರಶುಃ ನ**—ಕೊಡಲಿಯಂತೆ । **ದ್ರುಹಂತರಃ**—(ನಮ್ಮ) ಶತ್ರುಗಳನ್ನು ನಾಶಪಡಿಸುವವನು । **ಭವತಿ**—ಆಗುತ್ತಾನೆ । (**ಕಿಂಚ ಅಯಂ ಅಗ್ನಿಃ**—ಮತ್ತು ಈ ಅಗ್ನಿಯು) । **ನಿಃ ಸಹಮಾನಃ**—ಶತ್ರುಗಳನ್ನು ನಿಶ್ಶೇಷವಾಗಿ ಪರಾಭವಗೊಳಿಸಿ । **ಯಮತೇ**—(ಅವರ ಮಧ್ಯೇ) ಕ್ರೀಡಿಸುತ್ತಾನೆ (ಅವರನ್ನು ನಾಶಪಡಿಸುತ್ತಾನೆ) (ನಾಶಪಡಿಸುತ್ತಾ) । **ಯಥಾ** - ಹೇಗೆ । **ಧನ್ವಸಹಾ**—ಧನುರ್ಧಾರಿಯಾಗಿ ಶತ್ರುಗಳನ್ನು ಸೋಲಿಸುವ ವೀರನು । **ನ ಅಯತೇ**—ಶತ್ರುಗಳಿಂದ ಪಲಾಯಿತನಾಗುವುದಿಲ್ಲವೋ । (**ತಥಾ**—ಹಾಗೆ) । **ನ ಅಯತೇ**—ಓಡಿಹೋಗುವುದಿಲ್ಲ (ಅಚಲನಾಗಿರುತ್ತಾನೆ.)

॥ ಭಾವಾರ್ಥ ॥

ಅಗ್ನಿಸಂಯೋಗವಾದರೆ, ಅತ್ಯಂತ ದೃಢವೂ, ಅಚಲವೂ ಆದ ಪರ್ವತಾದಿಗಳೂ ಕೂಡ, ನೀರು (ಅಗ್ನಿಯಿಂದ ಶೋಷಿಸಲ್ಪಡುವಂತೆ) ನಷ್ಟವಾಗುತ್ತವೆ; ಅದೇ ಅಗ್ನಿಯೇ ಶತ್ರು ಭೇದನಾರ್ಥವಾಗಿ ಪ್ರಯುಕ್ತವಾದ ಕೊಡಲಿಯಂತೆ, ವಿಶೇಷವಾಗಿ ಜ್ವಲಿಸುತ್ತಿರುವ ಜ್ವಾಲಾ ವಿಶಿಷ್ಟನಾಗಿ ನಮ್ಮ ಶತ್ರುಗಳನ್ನೂ ನಾಶಪಡಿಸುತ್ತಾನೆ. ಅವರನ್ನು ಸಂಪೂರ್ಣವಾಗಿ ಸೋಲಿಸುತ್ತಾ ಅವರ ಮಧ್ಯದಲ್ಲಿಯೇ ಕ್ರೀಡಿಸುತ್ತಾನೆ. ಧನುರ್ಧಾರಿಯಾದ ವೀರನಂತೆ ಪಲಾಯಿತನಾಗದೇ (ಅಲ್ಲಿಯೇ) ಸ್ಥಿರನಾಗಿರುತ್ತಾನೆ.

## English Translation.

Verily, that Agni, far shining with brilliant vigour, is the destroyer of foes, like a hatchet that cuts down trees: whatever is most solid and stable dissolves like water at his contact: unsparing, he sports (amidst enemies), nor desists (from their destruction), like an archer who retreats not (from battle).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ (1) **ಸಃ ದೀದ್ಯಾನಃ ದ್ರುಂಹತರಃ ಪರಶುರ್ನ ದ್ರುಂಹತರಃ** (2) **ಯಸ್ಯ ಸಮೃತಾ ವೀಳು ಚಿತ್ ಯತ್ ಸ್ಥಿರಂ ವನೇವ ಶ್ರುವತ್** (3) **ನಿಷ್ಷಹಮಾಣಃ ಯಮತೇ ಧನ್ವಸಹಾ ನ ನಾಯತೇ ನಾಯತೇ** ಎಂದು ಮೂರು ವಾಕ್ಯಗಳಿರುತ್ತವೆ.

ಮೊದಲನೆಯ ವಾಕ್ಯದಲ್ಲಿ ದ್ರುಂಹತರಃ ಎಂಬ ಪದವು ಎರಡು ಸಾರಿ ಪ್ರಯುಕ್ತವಾಗಿದೆ. ಈ ಪದಕ್ಕೆ ಹಿಂಸೆಮಾಡುವವನು ಎಂದು ಅರ್ಥವನ್ನು ವಿವರಿಸಿದೆ. ಇದರಿಂದ ಅಗ್ನಿಯು ಬಹಳವಾಗಿ ಪ್ರಕಾಶಿಸುತ್ತಾ ಯಜ್ಞ ಮಾಡುವವರಿಗೆ ದ್ರೋಹಮಾಡುವವರನ್ನೂ ಶತ್ರುಗಳಾದವರನ್ನೂ ಕೂಡ ನಾಶಮಾಡುತ್ತಾನೆ ಅಥವಾ ತೊಂದರೆಗೆ ಒಳಗಾಗುವಂತೆ ಮಾಡುತ್ತಾನೆ ಎಂದು ಹೇಳಿದೆ. ಈ ವಿಷಯದಲ್ಲಿ ಎರಡನೆಯ ದ್ರುಂಹತರಃ ಎಂಬ ಪದದಿಂದ ದೃಷ್ಟಾಂತ ವನ್ನೂ ಉದಹರಿಸಿದೆ. ದೃಷ್ಟಾಂತವಾಕ್ಯದಲ್ಲಿ ದ್ರೋಹಿಗಳನ್ನು ನಾಶಪಡಿಸಲು ಪ್ರಯುಕ್ತವಾದ ಕೊಡಲಿಯು ಅವರನ್ನು ನಾಶಮಾಡುವ ಹಾಗೆ ಎಂದು ಅರ್ಥಮಾಡಿ ಅಗ್ನಿಯೂ ಈ ಕೊಡಲಿಯಂತೆ ಹಿಂಸೆಮಾಡುವನು ಎಂದು ಹೋಲಿಸಿದೆ.

**ಪುರು**—ಎಂಬ ಪದವು ಹನ್ನೆರಡು ಬಹು ನಾಮಗಳ ಮಧ್ಯದಲ್ಲಿ (ನಿ. ೩-೧೩) ಪಠಿತವಾಗಿ ಬಹಳ ಎಂದು ಅರ್ಥವನ್ನು ಬೋಧಿಸುತ್ತದೆ.

**ಚಿತ್**—ಈ ಪದವನ್ನು ನಿಪಾತಗಳಲ್ಲಿ ನಿರುಕ್ತಕಾರರು ಪಾಠಮಾಡಿರುತ್ತಾರೆ. **ಚಿದಿತ್ಯೇಷೋಽನೇಕಕರ್ಮಾ** (ನಿ. ೧-೪) ಎಂದು ವ್ಯಾಖ್ಯಾನಮಾಡಿ (ಚಿತ್ ಎಂಬ ಅವ್ಯಯವು ಅನೇಕವಾದ ಅರ್ಥಗಳನ್ನು ಬೋಧಿಸುವುದು) **ಆಚಾರ್ಯಃ ಚಿದಿದಂ ಬ್ರೂಯಾತ್ ಇತಿ ಪೂಜಾಯಾಂ** ಎಂಬ ವಾಕ್ಯದಲ್ಲಿ ಚಿತ್ ಎಂಬುವುದು ಪೂಜಾ ಬೋಧಕ ವಾಗಿರುವುದು. **ಚತುರಶ್ಚಿದ್ದದಮಾನಾತ್** (ನಿ. ೩-೧೩) ಈ ವಾಕ್ಯದಲ್ಲಿ ಚಿತ್ ಎಂಬುವುದು ಉಪಮಾವಾಚಕವು. ಎಂದು ವಿವರಿಸಿರುತ್ತಾರೆ. ಮತ್ತು

**ಚಿದಿತಿ ನಿಪಾತೋಽನುದಾತ್ತಃ ಅಥಾಪಿ ಪಶುನಾಮೇಹ ಭವತ್ಯುದಾತ್ತಃ ।**

(ನಿ. ೫-೫) ಚಿತ್ ಎಂಬ ಅವ್ಯಯವು ಅನುದಾತ್ತಸ್ವರವನ್ನು ಪಠಿಸುವಂತೆ ಪ್ರಯುಕ್ತವಾಗಿ ಅನುದಾತ್ತಸ್ವರ ದ್ಯೋತಕ ವಾಗಿರುವುದು. ಆದರೆ ಉದಾತ್ತಸ್ವರ ದ್ಯೋತಕವಾದಾಗ ಪ್ರಾಣಿಬೋಧಕವಾಗಿರುತ್ತದೆ. **ಸದ್ಯಶ್ಚಿದ್ಯಃ ಶವಸಾ ಪಂಚಕೃಷ್ಟೀಃ** ಎಂಬಲ್ಲಿ ಚಿತ್ ಎಂಬುದು ಅನುದಾತ್ತಸ್ವರದ್ಯೋತಕವಾಗಿದೆ. **ಚಿದಸಿ ಮನಾಸಿ ಧೀರಸಿ** ಎಂಬಲ್ಲಿ ಉದಾತ್ತಸ್ವರ ದ್ಯೋತಕವೆಂದೂ ಹೇಳಿದ್ದಾರೆ.

ಎರಡನೆಯ ವಾಕ್ಯದಲ್ಲಿ ಅಗ್ನಿಯ ಸಂಬಂಧವು ಉಂಟಾದ ಮಾತ್ರದಿಂದಲೇ ದೃಢವಾಗಿರುವ ಪಾಷಾಣಾದಿಗಳೂ ಕೂಡ ಶೀಳಿಹೋಗುವುವು ಎಂದು ವಿವರಿಸಿ ಬಹಳ ಬಲವಾಗಿರುವ ಬೆಟ್ಟವೇ ಮೊದಲಾದುವುಗಳೂ ಸಡಿಲವಾಗುವುವು. ಎಂದು ವರ್ಣಿಸಿ ಅಗ್ನಿಸಂಬಂಧದಿಂದ ಉದಕವು ಒಣಗಿಹೋಗುವುದೆಂದು ಉದಹರಿಸಿದೆ. ಈ ದೃಷ್ಟಾಂತದಿಂದಲೂ ಸ್ಥಿರವಾದ ಪರ್ವತ ಮತ್ತು (ಪಾಷಾಣ) ಕಲ್ಲುಗಳಿಗೂ ದುರ್ದಶೆಯನ್ನು ಉಂಟುಮಾಡುವ ಅಗ್ನಿಯು ಯಾಗಮಾಡು ವವರ ಶತ್ರುಗಳನ್ನು ಅಥವಾ ದ್ರೋಹಿಗಳನ್ನು ನಾಶಮಾಡುವ ವಿಷಯದಲ್ಲಿ ಅದ್ಭುತವಾದ ಸಾಮರ್ಥ್ಯವುಳ್ಳವನೆಂದು ಹೇಳಿದೆ

**ವೀಳು—ದೃಢಮ್** ಘಟ್ಟಿಯಾಗಿರುವುದೆಂದು ಅರ್ಥ. ವೀಳು ಶಬ್ದವು **ವೀಳು ಚ್ಯೌತ್ನಮ್** ಎಂದು ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ. ೨-೯) ಪಠಿತವಾಗಿದೆ.

**ವನೇವ**—ಉದಕಮಿವ ನೀರಿನ ಹಾಗೆ ಎಂದು ಸಾಯಣರ ಅರ್ಥ ವಿವರಣೆ ಇದೆ. ಯಾಸ್ಕರು ನಿರುಕ್ತದಲ್ಲಿ ವನ ಶಬ್ದವನ್ನು ರಶ್ಮಿನಾಮಗಳಲ್ಲಿಯೂ (ನಿ. ೨-೧೫),

**ನಿಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರಂದಿನೋ ರೋರುವದ್ವನಾ ॥**

(ಋ. ಸಂ. ೧-೫೪-೫)

ಎಂಬ ಋಕ್ಕಿನಲ್ಲಿ ವನಾ ಎಂಬ ಪದಕ್ಕೆ ವನಾನಿ ಉದಕಾನಿ ಎಂದೂ ಅರ್ಥವನ್ನು ವಿವರಿಸಿದಾರೆ.

**ಮೋದ್ಯಂತು ತೇ ವಹ್ನಯೋ ಯೇಭಿರೀಯಸೇರಿಷಣ್ಯನ್ನಿೀಳಯಸ್ವಾ ವನಸ್ಪತೇ ।**
**ಆಯೂಯಾ ಧೃಷ್ಣೋ ಅಭಿಗೂರ್ಯಾ ತ್ವಂ ನೇಷ್ಟ್ರಾತ್ಸೋಮಂ ದ್ರವಿಣೋದಃ ಪಿಬ ಋತುಭಿಃ ॥**

(ಋ. ಸಂ. ೨-೩೭-೩)

ಈ ಋಕ್ಕನ್ನು ಉದಹರಿಸಿ **ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ ವನಂ ವನೋತೇಃ** ಎಂದು ವನಸ್ಪತಿ ಶಬ್ದದ ಅರ್ಥವನ್ನು ವಿವರಿಸುವಾಗ ವನ ಶಬ್ದವು ವನು ಯಾಚನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಅರಣ್ಯವೆಂಬ ಅರ್ಥವನ್ನು ಬೋಧಿಸುವುದು ಎಂದು ವಿವರಿಸಿರುವರು.

ಮೂರನೆಯ ವಾಕ್ಯದಲ್ಲಿ—ಅಗ್ನಿಯು ಶತ್ರುಗಳು ಎದುರಾಗಿ ಬಂದಾಗ **ನಾಯತೇ—ನ ಗಚ್ಛತಿ** ಶತ್ರುವಿಗೆ ಹೆದರಿಕೊಂಡು ಓಡುವುದಿಲ್ಲ **ನಿಷ್ಷಹಮಾಣಃ ಯಮತೇ**—ಶತ್ರುಗಳನ್ನು ಬಹಳವಾಗಿ ತಿರಸ್ಕರಿಸುತ್ತಾ ಅವರ ಮಧ್ಯದಲ್ಲಿ ಆಟವಾಡುತ್ತಾ ಅವರನ್ನು ನಾಶಗೊಳಿಸುವನು ಎಂದು ಅರ್ಥವನ್ನು ವಿವರಿಸಿದೆ.

ಮತ್ತು ಈ ವಿಷಯದಲ್ಲಿ **ಧನ್ವಾ ಸಹಾ ನಾಯತೇ ನಾಯತೇ** ಎಂದು ದೃಷ್ಟಾಂತ ವಾಕ್ಯವನ್ನು ಉದಹರಿಸಿದೆ. ಇಲ್ಲಿ ಧನ್ವಾಸಹಾ ಶಬ್ದವು ಪ್ರಯುಕ್ತವಾಗಿದೆ. ಧನ್ವಸಹ ಶಬ್ದಕ್ಕೆ **ಧನುಷಾ ಶತ್ರೂನಭಿಭವತಿ ಇತಿ ಧನ್ವಾಸಹಾ ಧಾನುಷ್ಕಃ** ಧನುಸ್ಸಿನಿಂದ ಶತ್ರುಗಳನ್ನು ತಿರಸ್ಕರಿಸುತ್ತಾನೆಯಾದ ಕಾರಣ ಧನುಸ್ಸನ್ನು ಆಯುಧವಾಗಿ ಉಪಯೋಗಿಸುವವನು ಎಂದು ಅರ್ಥವನ್ನು ವಿವರಿಸಿದೆ. ಅಥವಾ ದೃಢವಾದ ಧನುಸ್ಸನ್ನು ವಹಿಸುವುದರಲ್ಲಿ ಶಕ್ತನಾದ ವನು ಎಂದು ಎರಡನೆಯ ಅರ್ಥವನ್ನೂ ವರ್ಣಿಸಿದೆ. ಇದರಿಂದ ಧನುಸ್ಸನ್ನು ಹಿಡಿದು ಇರುವವನು ಅಥವಾ ದೃಢವಾದ ಧನುಸ್ಸನ್ನು ಹಿಡಿದು ಯುದ್ಧಮಾಡುವವನು ಶತ್ರುಗಳನ್ನು ಎದುರಿಸಿ ತಾನು ಓಡದಿರುವಂತೆ, ಅಥವಾ ಬಿಲ್ಲನ್ನು ದೃಢವಾಗಿ ಹಿಡಿದು ಯುದ್ಧವನ್ನು ಮಾಡುತ್ತಾ ಚಲಿಸದಿರುವಂತೆ ಅಗ್ನಿಯೂ ಶತ್ರುಗಳನ್ನು ಎದುರಿಸುವನು ಎಂದು ಧಾನುಷ್ಕನಿಗೆ ಅಗ್ನಿಯನ್ನು ಹೋಲಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪುರು**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವಿರುಕ್ಮತಾ**—ವಿಶಿಷ್ಟಾ ರುಕ್ ವಿರುಕ್. ತದ್ವಂತಃ ವಿರುಕ್ಮಂತಃ. ಮತುಪ್ ಪ್ರತ್ಯಯ ಬಂದಾಗ ಅಯಸ್ಮ ಯಾದಿ ಪಠಿತವಾದುದರಿಂದ ಪದಸಂಜ್ಞಾ ಇರುವುದರಿಂದ ಕುತ್ವ ಭ ಸಂಜ್ಞಾ ಇರುವುದರಿಂದ ಜಸ್ತ್ವಸಂಧಿ ಬರುವುದಿಲ್ಲ. ತೃತೀಯಾ ಏಕವಚನಾಂತರೂಪ.

**ದೀದ್ಯಾನಃ**—ದೀದೀಙ್ ದೀಪ್ತಿದೇವನಯೋಃ ಧಾತು. ಇದು ಸೌತ್ರ ಧಾತು. ವ್ಯತ್ಯಯದಿಂದ ಶಾನಚ್. ಅದುಪದೇಶದ ಪರದಲ್ಲಿರುವುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ದ್ರುಹಂತರಃ**—ದ್ರೋಗ್ಧೄಣಾಂ ತರಿತಾ ದ್ರುಹಂತರಃ. ತೄ ಪ್ಲವನತರಣಯೋಃ ಧಾತು. ಸಂಜ್ಞಾಯಾಂ **ಭೃತೄವೃಜಿಧಾರಿಸಹಿ**—(ಪಾ. ಸೂ. ೩-೨-೪೬) ಎಂಬುದರಿಂದ ಖಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ತರ ಎಂದು ರೂಪವಾಗುತ್ತದೆ. ದ್ರುಹ ಜಿಘಾಂಸಾಯಾಂ ಧಾತು. ಇತ್ ಉಪಧೆಯಾಗಿರುವುದರಿಂದ **ಇಗುಪಧಜ್ಞಾಪ್ರೀಕಿರಃಕಃ** (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. **ಲಶಕ್ವತದ್ಧಿತೇ** ಸೂತ್ರದಿಂದ ಕಕಾರಕ್ಕೆ ಇತ್‌ಸಂಜ್ಞಾ. ದ್ರುಹ ತರ ಎಂದಿರುವಾಗ ಖಿತ್ ಪ್ರತ್ಯಯಾಂತವಾದುದು ಪರವಾದುದರಿಂದ **ಅರುರ್ದ್ವಿಷದಜಂತಸ್ಯ ಮುಮ್** (ಪಾ. ಸೂ. ೬-೩-೬೭) ಎಂಬುದರಿಂದ ಪೂರ್ವಪದಕ್ಕೆ ಮುವಾಗಮ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪರಶುಃ**—ಪರಂ ಶೃಣಾತಿ ಇತಿ ಪರಶುಃ. ಶೄ ಹಿಂಸಾಯಾಂ ಧಾತು. **ಆಙ್‌ಪರಯೋಃ ಖನಿಶೄಭ್ಯಾಂ ಡಿಚ್ಚ** (ಉ ಸೂ. ೧-೩೩) ಎಂಬುದರಿಂದ ಕು ಪ್ರತ್ಯಯ ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಶ್ರುವತ್**—ಶು ಶ್ರು ಗತೌ ಧಾತು. ಭ್ವಾದಿ. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಶಪ್ ವಿಕರಣ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಗುಣ ಬರುವುದಿಲ್ಲ. **ಅಚಿಶ್ನುಧಾತುಭ್ರುವಾಂ**—ಎಂಬುದರಿಂದ ಉವಜಾದೇಶ. ಶ್ರುವತ್ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ವನಾ ಇವ**—ವನ+ಸು **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸುವಿಗೆ ಆಕಾರಾದೇಶ.

**ನಿಷ್ಷಹಮಾಣಃ**—ಷಹ ಮರ್ಷಣೇ ಧಾತು. ಲಟಿಗೆ ಶಾನಚ್ ಆದೇಶ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಾದಿ ಸಮಾಸದಲ್ಲಿ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ.

**ಯಮತೇ**—ಯಮ ಉಪರಮೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಯತೇ—ಅಯ** ಪಯ ಗತೌ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಧನ್ವಸಹಾ** – ಷಹ ಮರ್ಷಣೇ. ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. ಛಾಂದಸವಾಗಿ ಧಾತುವಿನ ಅಂತ್ಯಕ್ಕೆ (ಹ) ಲೋಪ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಎರಡನೇ ವ್ಯಾಖ್ಯಾನದಲ್ಲಿ **ನಂದಿಗ್ರಹ ಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. **ಸುಪಾಂ ಸುಲುಕ್**—(ಪಾ ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರದೇಶ. || ೩ ||



॥ ಸಂಹಿತಾಪಾಠಃ ॥

ದೃಳ್ಹಾ ಚಿದಸ್ಮಾ ಅನು ದುರ್ಯಥಾ ವಿದೇ ತೇಜಿಷ್ಠಾಭಿರರಣಿಭಿರ್ದಾಷ್ಟ್ಯ-
ವಸೇಽಗ್ನಯೇ ದಾಷ್ಟ್ಯವಸೇ ।
ಪ್ರ ಯಃ ಪುರೂಣಿ ಗಾಹತೇ ತಕ್ಷದ್ವನೇವ ಶೋಚಿಷಾ ।
ಸ್ಥಿರಾ ಚಿದನ್ನಾ ನಿ ರಿಣಾತ್ಯೋಜಸಾ ನಿ ಸ್ಥಿರಾಣಿ ಚಿದೋಜಸಾ ॥ ೪ ॥

॥ ಪದಪಾಠಃ ॥

ದೃಳ್ಹಾ । ಚಿತ್ । ಅಸ್ಮೈ । ಅನು । ದುಃ । ಯಥಾ । ವಿದೇ । ತೇಜಿಷ್ಠಾಭಿಃ । ಅರಣಿಽಭಿಃ । ದಾಷ್ಟಿ ।
ಅವಸೇ । ಅಗ್ನಯೇ । ದಾಷ್ಟಿ । ಅವಸೇ ।
ಪ್ರ । ಯಃ । ಪುರೂಣಿ । ಗಾಹತೇ । ತಕ್ಷತ್ । ವನಾಽಇವ । ಶೋಚಿಷಾ ।
ಸ್ಥಿರಾ । ಚಿತ್ । ಅನ್ನಾ । ನಿ । ರಿಣಾತಿ । ಓಜಸಾ । ನಿ । ಸ್ಥಿರಾಣಿ । ಚಿತ್ । ಓಜಸಾ ॥ ೪ ॥

॥ ಸಾಯಣಭಾಷ್ಯಂ ॥

ಅಸ್ಮಾ ಅಗ್ನಯೇ ದೃಳ್ಹಾ ಚಿತ್ ದೃಳ್ಹಾನ್ಯೇವ ಸಾರವಂತಿ ಹವೀಂಷ್ಯನುಕ್ರಮೇಣ ಪ್ರತಿಮಂತ್ರಂ ದುಃ । ದದಾತಿ ॥ ದದಾತೇರ್ಲುಙಿ ಗಾತಿಸ್ಥೇತಿ ಸಿಚೋ ಲುಕ್ । ಆತ ಇತಿ ಝೇರ್ಜುಸ್ ॥ ಯಜಮಾನಾ ದದತಿ । ದಾನೇ ದೃಷ್ಟಾಂತಃ । ಯಥಾ ವಿದೇ ವಿದುಷೇ ಪರಮಾರ್ಥದರ್ಶಿನ ಉತ್ಕೃಷ್ಟಾನಿ ಧನಾನಿ ವಿತರಂತಿ ದಾನಶೀಲಾಃ । ಯದ್ವಾ । ಅಯಮಗ್ನಿರ್ಯಥಾ ವಿದೇ ವಿಂದತೇ ಸ್ವಾತಿರಿಕ್ತಂ ಹವಿರ್ದೇವೇಭ್ಯೋ ದಾತುಂ ಲಭತೇ ಸ್ವೀಕರೋತಿ ತಥಾ ದುರಿತಿ ॥ ವಿಂದತೇಶ್ಛಾಂದಸಃ ಶಪೋ ಲುಕ್ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥ ಕಿಂಚ ಸೋಽಗ್ನಿಸ್ತೇಜಿಷ್ಠಾಭಿರರಣಿಭಿರತ್ಯಂತತೇಜೋಯುಕ್ತೈರ್ಮಾರ್ಗೈರ್ಯಜ್ಞಾದಿರೂಪೈರ್ದಾಷ್ಟಿ । ಪೂಜಿತಃ ಸನ್ ಸ್ವರ್ಗಾದಿಕಂ ದದಾತಿ ॥ ದಾಶೃ ದಾನೇ । ಶಪೋ ಲುಕ್ ॥ ಕಿಮರ್ಥಂ । ಅವಸೇ ತದ್ರಕ್ಷಣಾಯ । ಯದ್ವಾ । ತೇಜಿಷ್ಠಾಭಿರತಿಶಯೇನ ತೇಜೋವದ್ಭಿರರಣಿಭಿರ್ಗಮನ್ಯೈರಿತರದೇವಾನುದ್ದಿಶ್ಯ ಯಜಮಾನೇನ ದತ್ತಂ ಹವಿರವಸೇ ತೇಷಾಂ ಸ್ವೀಕಾರಾಯ ದಾಷ್ಟಿ । ಅಯಮಗ್ನಿರ್ದದಾತಿ । ನಯತಿ । ಕಿಂಚಾಗ್ನಯೇ ಇತರದೇವತಾಪ್ರದಾನಸಮಯೇಽಪಿ ಯಜಮಾನೋಽಗ್ನಯೇಽಗ್ನಿಪ್ರೀತಯೇ ದಾಷ್ಟಿ । ಪ್ರಥಮಂ ದದಾತಿ । ಕಿಮರ್ಥಂ । ಅವಸೇ ರಕ್ಷಣಾರ್ಥಂ । ಯದ್ಯಯಮತೃಪ್ತಃ ಸ್ಯಾತ್ ಇತರೇಭ್ಯೋ ದತ್ತಮಪಿ ಸ್ವಯಂ

ಸ್ವೀಕುರ್ಯಾತ್ ತಸ್ಮಾದಗ್ನಯೇ ಪ್ರಯಾಜಾದಿರೂಪೇಣ ದದಾತೀತ್ಯರ್ಥಃ । ಕಿಂಚ ಯೋಽಗ್ನಿಃ ಪುರೂಣಿ ಬಹೂನಿ ಸಾಮರ್ಥ್ಯಾದ್ಯಜಮಾನಧನಾದೀನಿ ಪ್ರ ಗಾಹತೇ । ಪ್ರವಿಶತಿ । ಪ್ರವಿಶ್ಯ ಚ ವಾಶ್ಯಾದಿರೂಪಯಾ ಜ್ವಾಲಯಾ ತಕ್ಷತ್ ತನೂಕರೋತಿ । ನಾಶಯತೀತ್ಯರ್ಥಃ । ತತ್ರ ದೃಷ್ಟಾಂತಃ । ವನೇವ । ವೃಕ್ಷಾದಿಸಮೂಹಾನಿ ವನಾನಿ ಯಥಾ ಪ್ರವಿಶ್ಯ ತಕ್ಷತಿ ದಹತಿ ತಥೇತ್ಯರ್ಥಃ । ಕಿಂಚಾಯಮಗ್ನಿಃ ಸ್ಥಿರಾ ಸ್ಥಿರಾಣಿ ಕಠಿನಾನ್ಯನ್ನಾನ್ನಾನಿ ವ್ರೀಹ್ಯಾದೀನ್ಯೋಜಸಾ ತೇಜೋರೂಪಯಾ ಜ್ವಾಲಯಾ ನಿ ನಿತರಾಂ ರಿಣಾತಿ । ಗಚ್ಛತಿ । ಪಚತೀತ್ಯರ್ಥಃ ॥ ರೀ ಗತಿರೇಷಣಯೋಃ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವಃ ॥ ತಥೌಜಸಾ ಸ್ವಕೀಯೇನ ತೇಜಸಾ ಸ್ಥಿರಾಣ್ಯಪರಿಹರಣೀಯಾನಿ ಪಾಪಾನ್ಯಮಿತ್ರಾಣಿ ವಾ ನಿ ರಿಣಾತಿ । ನಿಃಶೇಷೇಣ ಗಚ್ಛತಿ । ನಾಶಯತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಅಗ್ನಿಯು । **ಪುರೂಣಿ**—ಬಹಳವಾದ (ಹವಿರಾದಿಗಳನ್ನು) । **ಪ್ರ ಗಾಹತೇ**—ವ್ಯಾಪಿಸುತ್ತಾನೋ (ವ್ಯಾಪಿಸಿ) । **ಶೋಚಿಷಾ**—ಜ್ವಾಲೆಯಿಂದ । **ವನಾ ಇವ**—ಅರಣ್ಯವನ್ನು ಹೇಗೋ ಹಾಗೆ । **ತಕ್ಷತ್**—ನಾಶಪಡಿಸುತ್ತಾನೋ (ಹುತವನ್ನಾಗಿ ಮಾಡುತ್ತಾನೋ) । **ಸ್ಥಿರಾ ಚಿತ್**—ಕಠಿಣವಾದರೂ । **ಅನ್ನಾ**—ವ್ರೀಹ್ಯಾದಿಗಳನ್ನು । **ಓಜಸಾ**—ಜ್ವಾಲಾರೂಪವಾದ ತೇಜಸ್ಸಿನಿಂದ । **ನಿ ರಿಣಾತಿ**—ಚೆನ್ನಾಗಿ ಪಚನಮಾಡುತ್ತಾನೋ । (**ತಥಾ**—ಹಾಗೆಯೇ) । **ಓಜಸಾ**—ತನ್ನ ಸಾಮರ್ಥ್ಯದಿಂದ । **ಸ್ಥಿರಾಣಿ ಚಿತ್**—ಅಪರಿಹಾರ್ಯಗಳಾದರೂ (ಪಾಪಗಳನ್ನು ಅಥವಾ ಶತ್ರುಗಳನ್ನು) । **ನಿ (ರಿಣಾತಿ)**—ನಾಶಪಡಿಸುತ್ತಾನೋ । **ಅಸ್ಮೈ**—ಅಂತಹ ಈ ಅಗ್ನಿಗೆ । **ದೃಳ್ಹಾ ಚಿತ್**—ಸಾರವತ್ತಾದವುಗಳನ್ನೇ (ಹವಿಸ್ಸನ್ನು) । **ವಿದೇ ಯಥಾ**—ವಿದ್ವಾಂಸನಿಗೆ ಹೇಗೆ (ದಾನ ಮಾಡುತ್ತಾರೋ) ಹಾಗೆ (ಇತರ ದೇವತೋದ್ದೇಶವಾದ ಹವಿಸ್ಸನ್ನು ಅವರಿಗೋಸ್ಕರ ತಾನು ಸ್ವೀಕರಿಸುವಂತೆ) । **ಅನು**—ಕ್ರಮವಾಗಿ (ಪ್ರತಿ ಮಂತ್ರಕ್ಕೂ) । **ದುಃ**—ಕೊಡುತ್ತಾರೆ । (**ಕಿಂಚ ಅಗ್ನಿಃ**—ಮತ್ತು ಅಗ್ನಿಯು) । ಅಥವಾ **ಷ್ಠಾಭಿಃ**—ಅತ್ಯಂತ ತೇಜೋಯುಕ್ತವಾದ । **ಅರಣಿಭಿಃ**—(ಯಜ್ಞಾದಿ) ಮಾರ್ಗಗಳಿಂದ (ಪೂಜಿತನಾಗಿ) । **ಅವಸೇ**—(ಕರ್ತೃಗಳಾದ ನಮ್ಮ) ರಕ್ಷಣೆಗೋಸ್ಕರ । **ದಾಷ್ಟಿ**—(ಸ್ವರ್ಗಾದಿಗಳನ್ನು) ಕೊಡುತ್ತಾನೆ । [ಅಥವಾ **ತೇಜಿಷ್ಠಾಭಿಃ**—ಅತ್ಯಂತ ತೇಜೋಯುಕ್ತವಾದ । **ಅರಣಿಭಿಃ**—(ತನ್ನ) ಗಮನಗಳಿಂದ । **ಅವಸೇ**—ಯಾಗ ರಕ್ಷಣಾರ್ಥವಾಗಿ । **ದಾಷ್ಟಿ**—(ಹವಿಸ್ಸನ್ನು ಇತರ ದೇವತೆಗಳಿಗೆ) ಕೊಡುತ್ತಾನೆ] (ಮತ್ತು ಯಜಮಾನನು ಇತರ ದೇವತೆಗಳಿಗೆ ಹೋಮಮಾಡುವಾಗಲೂ) । **ಅಗ್ನಯೇ**—ಅಗ್ನಿಗೆ । **ಅವಸೇ**—ಯಾಗರಕ್ಷಣಾರ್ಥವಾಗಿ । **ದಾಷ್ಟಿ**—(ಹವಿರಾದಿಗಳನ್ನು) ಕೊಡುತ್ತಾನೆ.

॥ ಭಾವಾರ್ಥ ॥

ಅಗ್ನಿಯು (ಯಜಮಾನ ದತ್ತವಾದ) ಅನೇಕ ಪದಾರ್ಥಗಳನ್ನು ವ್ಯಾಪಿಸಿ ಅರಣ್ಯವನ್ನು (ನಾಶಪಡಿಸುವಂತೆ (ಶೀಘ್ರವಾಗಿ) ದಹಿಸುತ್ತಾನೆ (ಹುತಪಡಿಸುತ್ತಾನೆ); (ಯಜಮಾನನಿಂದ ದತ್ತವಾದ) ವ್ರೀಹ್ಯಾದಿಗಳು ಎಷ್ಟೇ ಕಠಿಣವಾದರೂ (ತನ್ನ) ಜ್ವಾಲೆಗಳಿಂದ ಪಕ್ವಮಾಡುತ್ತಾನೆ; (ಮತ್ತು) ಅಪರಿಹಾರ್ಯವಾದ (ಪಾಪಗಳನ್ನು ಅಥವಾ ಶತ್ರುಗಳನ್ನು ತನ್ನ) ಶಕ್ತಿಯಿಂದ ನಾಶಪಡಿಸುತ್ತಾನೆ. ಈ ಅಗ್ನಿಗೆ (ಯಾಗ ಕರ್ತೃಗಳು) ಸಾರವತ್ತಾದ (ಹವಿರಾದಿಗಳನ್ನು) ವುಗಳನ್ನೇ ವಿದ್ವಾಂಸರಿಗೆ (ದಾನಮಾಡುವಂತೆ) ಪ್ರತಿಮಂತ್ರಕ್ಕೂ ಹೋಮಮಾಡುತ್ತಾರೆ. ಈ ಅಗ್ನಿಯೂ ಕೂಡ ಜಾಜ್ವಲ್ಯಮಾನವಾದ ಜ್ವಾಲೆಗಳ ಮೂಲಕ (ಇತರ ದೇವತೆಗಳಿಗೆ) ಯಾಗರಕ್ಷಣೆಗಾಗಿ (ಯಜಮಾನದತ್ತವಾದ

ಹವಿಸ್ಸನ್ನು) ಒಯ್ದುಕೊಡುತ್ತಾನೆ (ಅತಿಶ್ರೇಷ್ಠವಾದ ಯಜ್ಞಗಳಿಂದ ಪೂಜಿತನಾಗಿ ಯಜಮಾನರನ್ನು ರಕ್ಷಿಸುವುದಕ್ಕೋಸ್ಕರ ಸ್ವರ್ಗಾದಿಗಳನ್ನು ಕೊಡುತ್ತಾನೆ) ಮತ್ತು (ಯಜಮಾನನು) ಯಾಗ ರಕ್ಷಣಾರ್ಥವಾಗಿ (ಇತರ ದೇವತೆಗಳನ್ನು ಪ್ರೀತಿಸಿ ಹೋಮ ಮಾಡುವಾಗಲೂ) ಹವಿಸ್ಸನ್ನು ಮೊದಲು ಅಗ್ನಿಗೆ ಕೊಡುತ್ತಾನೆ.

## English Translation·

They have presented substantial offerings to him, as (they give riches) to a sage, and by resplendent means he grants us (grace) for our preservation : (the worshipper) presents (gifts) to Agni for preservation : he who pervades the (many offerings made to him) consumes them (as rapidly) as (he consumes) forests : he matures the standing corn by his potency ; he destroys whatever (things) are stationary by his potency.

॥ ವಿಶೇಷವಿಷಯಗಳು ॥

**ಅಸ್ಮೈ ವೃಳ್ಣ್ಣಾ ಚಿತ್ ಅನು ದುರ್ಯಥಾ ವಿದೇ—ಅಗ್ನಯೇ ಸಾರವಂತಿ ಹವೀಂಷಿ ಅನುಕ್ರಮೇಣ ಪ್ರತಿಮಂತ್ರಂ ದದತಿ ಯಜಮಾನಾಃ| ವಿದುಷೇ ಪರಮಾರ್ಥದರ್ಶಿನೇ ಉತ್ಕೃಷ್ಟಾನಿ ಧನಾನಿ ವಿತರಂತಿ ದಾನ-ಶೀಲಾಃ । ಯದ್ವಾ ಅಯಮಗ್ನಿರ್ಯಥಾ ವಿದೇ ವಿಂದತೇ ಸ್ವಾತಿರಿಕ್ತಂ ಹವಿಃ ದೇವೇಭ್ಯೋ ದಾತುಂ ಲಭತೇ ಸ್ವೀಕರೋತಿ ತಥಾ ದುಃ ದದತಿ ।** ಯಜ್ಞವನ್ನು ಆಚರಿಸುವ ಯಜಮಾನರು ಆಯಾಯ ಮಂತ್ರಗಳನ್ನು ಪಠಿಸುತ್ತಾ ಕ್ರಮವಾಗಿ ಸಾರವಾದ ಹವಿಸ್ಸುಗಳನ್ನು ಅರ್ಪಿಸುತ್ತಾರೆ. ಲೋಕದಲ್ಲಿ ಜ್ಞಾನವಂತನಾಗಿರುವ ಮೇಧಾವಿಗೆ ದಾನಮಾಡುವ ಉದಾರಿಗಳು ಉತ್ತಮವಾದ ವಸ್ತುಗಳನ್ನೂ, ಧನವನ್ನೂ ದಾನಮಾಡುವರು ಎಂದು ಅಗ್ನಿಗೆ ಹವಿಸ್ಸನ್ನು ಅರ್ಪಿಸುವ ವಿಷಯದಲ್ಲಿ ಹೋಲಿಸಿದೆ ಎಂದು ಸಾಯಣರು ಈ ವಾಕ್ಯಕ್ಕೆ ಒಂದು ವಿಧವಾದ ಅರ್ಥವನ್ನು ಹೇಳಿರುವರು.

ಎರಡನೆಯ ರೀತಿಯಲ್ಲಿ ಅರ್ಥವನ್ನು ಹೇಳುವಾಗ ದೃಷ್ಟಾಂತವಾಕ್ಯದ ಅರ್ಥವು ಒಂದೇರೀತಿಯಾಗಿದ್ದರೂ, ಅಗ್ನಿಯು ತನ್ನ ಹವಿರ್ಭಾಗವನ್ನು ತಾನು ಸ್ವೀಕರಿಸಿ ಇತರ ದೇವತೆಗಳಿಗೆ ಅರ್ಪಿಸಬೇಕಾದ ಹವಿಸ್ಸುಗಳನ್ನೂ ಬೇರೆ ಬೇರೆಯಾಗಿ ಸ್ವೀಕರಿಸುವಂತೆ ಯಜಮಾನರು ಹವಿಸ್ಸುಗಳನ್ನು ಒಪ್ಪಿಸುವರು ಎಂದು ವರ್ಣಿಸಿದೆ

**ಚಿತ್** ಎಂಬ ನಿಪಾತವು ಅನೇಕಾರ್ಥದಲ್ಲಿ ಪ್ರಯುಕ್ತವಾಗಿರುವುದೆಂದು ಹಿಂದಿನ (ಋ ಸಂ ೨-೧೨೭-೩) ಋಕ್ಕಿನಲ್ಲಿ ವಿವರಿಸಿದೆ.

**ತೇಜಿಷ್ಠಾಭಿರರಣಿಭಿಃ ದಾಷ್ಟ್ಯವಸೇ ಅಗ್ನಯೇ ದಾಷ್ಟ್ಯವಸೇ**— ಎಂಬ ಈ ವಾಕ್ಯದಲ್ಲಿ **ದಾಷ್ಟ್ಯವಸೇ** ಎಂಬ ಪದವು ಎರಡುಸಾರಿ ಆವರ್ತವಾಗಿದೆ. ಅಗ್ನಿಯು ಅತ್ಯಂತಪ್ರಕಾಶಯುಕ್ತವಾದ ಯಜ್ಞವೇ ಮೊದಲಾದವುಗಳ ಆಚರಣೆಯಿಂದ ಪೂಜಿತನಾಗಿ ಯಜ್ಞಮಾಡುವವರ ರಕ್ಷಣೆಗಾಗಿ ಸ್ವರ್ಗವೇ ಮೊದಲಾದವುಗಳನ್ನು ಅನುಗ್ರಹಿಸುತ್ತಾನೆ ಎಂದು ಮೊದಲನೆಯ ಅರ್ಥವನ್ನು ಸಾಯಣರು ವಿವರಿಸಿದ್ದಾರೆ.

ಎರಡನೆಯ ಅರ್ಥದಲ್ಲಿ ಅಗ್ನಿಯು ತನ್ನ ಪ್ರಕಾಶಗಳಿಂದ ಬೆಳಗುತ್ತಿರುವ ಗಮನಗಳಿಂದ ಇತರ ದೇವತೆಗಳನ್ನು ಉದ್ದೇಶಮಾಡಿ ಯಜಮಾನರು ಅರ್ಪಿಸುವ ಹವಿಸ್ಸುಗಳನ್ನು ಆಯಾಯ ದೇವತೆಗಳು ಅದನ್ನು ಸ್ವೀಕರಿಸುವುದಕ್ಕಾಗಿ ರಕ್ಷಿಸಿ ಅವರವರಿಗೋಸ್ಕರ ಒಯ್ಯುತ್ತಾನೆ ಎಂದು ವರ್ಣಿಸಿದ್ದಾರೆ.

**ಅಗ್ನಯೇ ದಾಷ್ಟ್ಯವಸೇ**—ಎಂಬ ಎರಡನೆಯ ವಾಕ್ಯದಿಂದ ಇತರ ದೇವತೆಗಳಿಗಾಗಿ ಹವಿಸ್ಸನ್ನು ಯಜಮಾನನು ಅರ್ಪಿಸುವಾಗ ಅಗ್ನಿ ಪ್ರೀತಿಯನ್ನು ಹೊಂದುವುದಕ್ಕಾಗಿ ಮೊದಲು ಅಗ್ನಿಗೆ ಹವಿಸ್ಸನ್ನು ಅರ್ಪಿಸುವನು. ಅಗ್ನಿಯು ಅತೃಪ್ತನಾದರೆ ಇತರ ದೇವತೆಗಳ ಹವಿಸ್ಸುಗಳನ್ನೂ ಇವನೇ ಸ್ವೀಕರಿಸಿದಲ್ಲಿ ಯಜಮಾನನಿಗೆ ರಕ್ಷಣೆಯು ಆಗುವುದಿಲ್ಲವಾದಕಾರಣ ಮೊದಲು ಅಗ್ನಿ ಪ್ರೀತ್ಯರ್ಥವಾಗಿ ಪ್ರಯಾಜಾದಿಗಳನ್ನು ಹೋಮಮಾಡುವನೆಂದು ವರ್ಣಿಸಿದೆ.

**ಅರಣಿಭಿಃ— ಯಜ್ಞಾದಿರೂಪೈಃ ಮಾರ್ಗೈಃ ಗಮನೈಃ,** ಅರಣಿಶಬ್ದಕ್ಕೆ ಯಜ್ಞವೇ ಮೊದಲಾದ ರೂಪಗಳಿಂದ ಇರುವ ಮಾರ್ಗಗಳೆಂದೂ, ನಡಿಗೆಗಳೆಂದೂ ಎರಡು ವಿಧವಾದ ಅರ್ಥಗಳನ್ನು ವರ್ಣಿಸಿದೆ. ನಿರುಕ್ತಕಾರರು—

**ಅಗ್ನಿಂ ನರೋ ದೀಧಿತಿಭಿರರಣ್ಯೋರ್ಹಸ್ತಚ್ಯುತೀ ಜನಯಂತ ಪ್ರಶಸ್ತಂ ।**
**ದೂರೇದೃಶಂ ಗೃಹಪತಿಮಥುರ್ಯಂ ।**

(ಋ. ಸಂ ೭-೧-೧).

ಎಂಬ ಋಕ್ಕನ್ನು ಉದಹರಿಸಿ **ಕರ್ಮಸ್ಸರಣೀ— ಅಗ್ನಿಃ ಸಮರಣಾಜ್ಜಾಯತ ಇತಿ ವಾ ।** ಎಂದು ವಿವರಿಸಿದ್ದಾರೆ. ಅರಣಿ ಶಬ್ದಕ್ಕೆ ದಾರುವಿಶೇಷವೆಂದು ಅರ್ಥಮಾಡಿದ್ದಾರೆ.

**ಪುರೂಣಿ ಪ್ರ ಗಾಹತೇ ತೆಕ್ಷತ್ ವನೇವ ಬಹೂನಿ । ಸಾಮರ್ಥ್ಯಾತ್ ಯಜಮಾನಧನಾದೀನಿ ಪ್ರವಿಶತಿ ಪ್ರವಿಶ್ಯ ಚ ವಾಶ್ಯಾದಿರೂಪಯಾ ಜ್ವಾಲಯಾ ತನೂಕರೋತಿ ನಾಶಯತೀತ್ಯರ್ಥಃ । ವೃಕ್ಷಾದಿಸಮೂಹಾನಿ ವನಾನಿ ಯಥಾ ಪ್ರವಿಶ್ಯ ತಕ್ಷತಿ ದಹತಿ ತಥಾ ।** ಈ ಅಗ್ನಿಯು ತನ್ನ ಜ್ವಾಲೆಗಳಿಂದ ವೃಕ್ಷಸಮೂಹವಾಗಿರುವ ವನಗಳನ್ನು ಆವರಿಸಿ ಸುಡುವ ಹಾಗೆ ತನ್ನನ್ನು ಪೂಜಿಸದಿರುವ ಯಜಮಾನರ ಧನಗಳನ್ನು ತನ್ನ ಜ್ವಾಲೆಗಳಿಂದ ಆವರಿಸಿ ನಾಶಮಾಡುವನೆಂದು ವರ್ಣಿಸಿದೆ.

**ಸ್ಥಿರಾ ಅನ್ನಾ—ಓಜಸಾ ನಿ ರಿಣಾತಿ ಸ್ಥಿರಾಣಿ ನಿ ಚಿದೋಜಸಾ**—ಎಂಬ ವಾಕ್ಯದಲ್ಲಿ ನಿ ರಿಣಾತಿ ಎಂಬ ಕ್ರಿಯಾಪದವನ್ನು ಎರಡು ಸಾರಿ ಹೇಳಿದೆ. ಈ ವಾಕ್ಯದಲ್ಲಿ ಸ್ಥಿರಾ—ಎಂಬ ಪದಕ್ಕೆ ಕಠಿನಾನಿ ಎಂದು ಅರ್ಥವನ್ನು ವಿವರಿಸಿ ಈ ಪದವನ್ನು ಅನ್ನಾನಿ ವ್ರೀಹ್ಯಾದೀನಿ ಎಂಬ ಪದಕ್ಕೆ ವಿಶೇಷಣ ಮಾಡಿ ಹೇಳಿದೆ. ಅಗ್ನಿಯು ಕಠಿಣವಾದ ವ್ರೀಹಿಯೇ ಮೊದಲಾದವುಗಳನ್ನು ತನ್ನ ತೇಜಸ್ಸಿನರೂಪವಾದ ಜ್ವಾಲೆಗಳಿಂದ ಪಚನಮಾಡುವನು ಎಂದು ಅರ್ಥ.

**ಸ್ಥಿರಾಣಿ** ಎಂಬ ಇನ್ನೊಂದು ಪದಕ್ಕೆ **ಅಪರಿಹರಣೀಯಾನಿ ಪಾಪಾನಿ ಅಮಿತ್ರಾಣಿ ವಾ** ಪರಿಹರಿಸಲಶಕ್ಯವಾದ ಪಾತಕಗಳೂ ಅಥವಾ ಶತ್ರುಗಳೂ ಎಂದು ವಿವರಿಸಿ ಇವರನ್ನು ಅಗ್ನಿಯು ತನ್ನ ತೇಜಸ್ಸಿನ ರೂಪವಾದ ಜ್ವಾಲೆಗಳಿಂದ ನಾಶಪಡಿಸುವನು ಎಂದು ಹೇಳಿದೆ.

**ಅನ್ನಾ— ಅನ್ನಾನಿ ವ್ರೀಹ್ಯಾದೀನಿ** ಎಂದು ಸಾಯಣರು ವಿವರಿಸಿದ್ದಾರೆ. ಅನ್ನ ಶಬ್ದವು ನೂರೊಂದು ಉದಕ ನಾಮಗಳ ಮಧ್ಯದಲ್ಲಿ (ನಿ. ೨-೨೪) ಉಕ್ತವಾಗಿದೆ. **ಅನ್ನಂ ಕಸ್ಮಾದಾನತಂ ಭೂತೇಭ್ಯೋ ಅತ್ತೇರ್ವಾ** (ನಿ. ೩-೯) ಪ್ರಾಣಿಗಳಿಗೆ ಆಹಾರವಾಗಿ ಇರುವುದರಿಂದ ಅನ್ನ ವೆನಿಸಿರುವುದು ಮತ್ತು.

**ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತೇ ।**

(ತೈ. ಉ. ೨-೩)

ಎಂದು ಶ್ರುತಿಯಲ್ಲಿಉಕ್ತವಾಗಿರುವುದು. ಅದ ಭಕ್ಷಣೇ ಎಂಬ ಧಾತುವಿನಿಂದ ಅನ್ನ ಶಬ್ದವು ನಿಷ್ಪನ್ನವಾಗಿ ಪ್ರಾಣಿಗಳಿಂದ ಭಕ್ಷಿಸಲ್ಪಡುವುದು ಅಥವಾ ಪ್ರಾಣಿಗಳನ್ನು ಭಕ್ಷಿಸುವುದಾದುದರಿಂದ ಅನ್ನವೆಂದು ವ್ಯವಹೃತವಾಗಿದೆ ಎಂದು ವಿವರಿಸಿದೆ.

**ಓಜಸಾ—ತೇಜೋರೂಪಯಾ ಜ್ವಾಲಯಾ, ಸ್ವಕೀಯೇನ ತೇಜಸಾ ।** ತೇಜಸ್ಸಿನ ರೂಪವಾಗಿರುವ ಜ್ವಾಲೆಗಳು-ಅಥವಾ ಅಗ್ನಿಯ ಸಂಬಂಧವಾದ ತೇಜಸ್ಸು ಎಂದು ಇಲ್ಲಿ ಓಜಸ್ ಎಂಬ ಶಬ್ದದ ಅರ್ಥವನ್ನು ಸಾಯಣರು ವಿವರಿಸಿದ್ದಾರೆ. **ಓಜಶ್ಶಬ್ದವು**—ಓಜಃ ಪಾಜಃ . ಇವೇ ಮೊದಲಾದ ಇಪ್ಪತ್ತೆಂಟು ಬಲ ನಾಮಗ ಮಧ್ಯದಲ್ಲಿ (ನಿ. ೩-೯) ಪಠಿತವಾಗಿದೆ. ಬಲವೆಂದು ಅರ್ಥ.

**ಶ್ರಾಯಂತ ಇವ ಸೂರ್ಯಂ ವಿಶ್ವೇದಿಂದ್ರಸ್ಯ ಭಕ್ಷತ ।**
**ವಸೂನಿ ಜಾತೇ ಜನಮಾನ ಓಜಸಾ ಪ್ರತಿ ಭಾಗಂ ನ ದೀಧಿಮ ॥**

(ಋ. ಸಂ. ೮-೯೯.೩)

ನಿರುಕ್ತದಲ್ಲಿ (ನಿ. ೬-೮) ಈ ಋಕ್ಕನ್ನು ಉದಹರಿಸಿ **ಓಜಸಾ-ಬಲೇನ** ಬಲದಿಂದ ಎಂದು ಅರ್ಥವನ್ನು ವಿವರಿಸಿದೆ. ಮತ್ತು ಓಜಸ್ ಶಬ್ದರೂಪವು ಓಜ ಧಾತುವಿನಿಂದಲಾಗಲಿ ಉಬ್ಜ ಧಾತುವಿನಿಂದಲಾಗಲಿ ಉಂಟಾಗಿರುವುದು ಎಂದು ಹೇಳಿದೆ

॥ ವ್ಯಾಕರಣಪ್ರಕ್ರಿಯಾ ॥

**ದೃಳ್ಹಾ**—ದೃಹ ದೃಹಿ ವೃದ್ಧೌ ಧಾತು. **ದೃಢಃ ಸ್ಥೂಲಬಲಯೋಃ** (ಪಾ. ಸೂ. ೭-೨-೨೦) ಎಂಬುದರಿಂದ ಕ್ತ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಪುಂಸಕಬಹುವಚನದಲ್ಲಿ ದೃಢಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ದುಃ**—ಡುದಾಞ್ ದಾನೇ. ಧಾತು. **ಛಂದಸಿ ಲುಙ್‌ಲಙ್**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಚ್ಲಿಗೆ ಸಿಚಾದೇಶ. **ಘಾತಿಸ್ಥಾಘು**—(ಪಾ. ಸೂ ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಆದಂತ ಧಾತುವಾದುದರಿಂದ **ಆತಃ** (ಪಾ. ಸೂ. ೩-೪-೧೧೦) ಎಂಬುದರಿಂದ ಪರದ ಝಿಗೆ ಜುಸಾದೇಶ. **ಉಸ್ಯಪದಾಂತಾತ್** (ಪಾ. ಸೂ. ೬-೧-೬೬) ಸೂತ್ರದಿಂದ ಪರರೂಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ವಿದೇ**—ವಿದ ಜ್ಞಾನೇ. ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಚತುರ್ಥೀ ಏಕವಚನಾಂತ ರೂಪ. **ಸಾವೇಕಾಚಸ್ತೃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಎರಡನೇ

ವ್ಯಾಖ್ಯಾನದಲ್ಲಿ ವಿದ್ಲೃ ಲಾಭೇ. ಧಾತು. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ ಟಿಗೆ ಏತ್ವ. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ತಕಾರಕ್ಕೆ ಲೋಪ. ಯಥಾ ಎಂಬುದು ಹಿಂದೆ ಇರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ತೇಜಿಷ್ಠಾಭಿಃ**—ತೇಜಸ್ ಶಬ್ದ. ಇದಕ್ಕೆ ಮತ್ವರ್ಥದಲ್ಲಿ **ಅಸ್ಮಾಯಾಮೇಧಾ**—(ಪಾ ಸೂ. ೫-೨-೧೨೧) ಎಂಬುದರಿಂದ ವಿನ್ ಪ್ರತ್ಯಯ. ಇದರ ಮೇಲೆ ಅತಿಶಯಾರ್ಥ ತೋರುವಾಗ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ವಿನ್ ಪ್ರತ್ಯಯಕ್ಕೆ ಲುಕ್. **ಟೇಃ** (ಪಾ. ಸೂ. ೬-೪-೧೪೩) ಸೂತ್ರದಿಂದ ಟಿಗೆ (ಅಸ್) ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ದಾಷ್ಟಿ**—ದಾಶೃ ದಾನೇ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ವ್ರಶ್ಚಭ್ರಸ್ಜ** (ಪಾ. ಸೂ. ೮-೨-೩೬) ಎಂಬುದರಿಂದ ಶಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯ ತಕಾರಕ್ಕೆ ಷ್ಟುತ್ವ. ತಿಙಂತನಿಘಾತಸ್ವರ ಬರುತ್ತದೆ.

**ಅವಸೇ**—ಅವ ರಕ್ಷಣೇ. ಧಾತು. ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಗಾಹತೇ**—ಗಾಹೂ ವಿಲೋಡನೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ತಕ್ಷತ್**—ತಕ್ಷೂ ತನೂಕರಣೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್ ಪ್ರಥಮಪುರುಷ ಏಕವಚನಾಂತರೂಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

ವನಾ—**ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿತೀಯಾ ಬಹುವಚನಕ್ಕೆ ಆಕಾರಾದೇಶ.

**ಸ್ಥಿರಾ**—ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ. ಹೀಗೆಯೇ ಅನ್ನಾ ಎಂಬಲ್ಲಿಯೂ ಪ್ರಕ್ರಿಯೆ.

**ರಿಣಾತಿ**—ರೀ ಗತಿರೇಷಣಯೋಃ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ, ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಅಟ್ ಕುಪ್ವಾಙ್**—ಎಂಬುದರಿಂದ ವಿಕರಣಕ್ಕೆ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ತಮಸ್ಯ ಪೃಕ್ಷಮುಪರಾಸು ಧೀಮಹಿ ನಕ್ತಂ ಯಃ ಸುದರ್ಶತರೋ ದಿವಾತ-
ರಾದಪ್ರಾಯುಷೇ ದಿವಾತರಾತ್ ।
ಆದಸ್ಯಾಯುರ್ಗ್ರಭಣವದ್ವೀಳು ಶರ್ಮ ನ ಸೂನವೇ ।
ಭಕ್ತಮಭಕ್ತಮವೋ ವ್ಯಂತೋ ಅಜರಾ ಅಗ್ನಯೋ ವ್ಯಂತೋ
ಅಜರಾಃ ॥ ೫ ॥

॥ ಪದಪಾಠಃ ॥

ತಂ । ಅಸ್ಯ । ಪೃಕ್ಷಂ । ಉಪರಾಸು । ಧೀಮಹಿ । ನಕ್ತಂ । ಯಃ । ಸುದರ್ಶಽತರಃ । ದಿವಾಽತರಾತ್ ।
ಅಪ್ರಽಆಯುಷೇ । ದಿವಾಽತರಾತ್ ।
ಆತ್ । ಅಸ್ಯ । ಆಯುಃ । ಗ್ರಭಣಽವತ್ । ವೀಳು । ಶರ್ಮ । ನ । ಸೂನವೇ ।
ಭಕ್ತಂ । ಅಭಕ್ತಂ । ಅವಃ । ವ್ಯಂತಃ । ಅಜರಾಃ । ಅಗ್ನಯಃ । ವ್ಯಂತಃ । ಅಜರಾಃ ॥ ೫ ॥

॥ ಸಾಯಣಭಾಷ್ಯಂ ॥

ಅಸ್ಯಾಸ್ಮೈ ಪೃಕ್ಷಂ ಹವಿರ್ಲಕ್ಷಣಮನ್ನಮುಪರಾಸು । ಉಪರಮಂತ್ಯೇಽಸ್ಮಿನ್ ಹವೀಂಷೀತ್ಯುಪರಾ ವೇದಿಸಮೀಪಭೂಮಯಃ । ತಾಸು ಧೀಮಹಿ । ಧಾರಯಾಮಃ । ಅಸ್ಯೇತ್ಯುಕ್ತಂ ಕಸ್ಯೇತ್ಯಾಹ । ಯೋಽಗ್ನಿರ್ನಕ್ತಂ ರಾತ್ರೌ ದಿವಾತರಾತ್ ಅನ್ಹೋಽಪಿ ಸುದರ್ಶತರಃ ಅತ್ಯರ್ಥಂ ಸರ್ವೈರ್ದರ್ಶನೀಯೋ ಭವತಿ । ಯತೋಽಯಂ ರಾತ್ರೌ ಸರ್ವೇಷು ಭಾವೇಷು ತಮಸಾವೃತತ್ವಾದದೃಶ್ಯಮಾನೇಷ್ವಪಿ ಸ್ವಯಮತ್ಯರ್ಥಂ ಪ್ರಕಾಶತೇ । ಅತೋಽಸ್ಮೈ ಧೀಮಹಿ । ಪುನಃ ಕೀದೃಶಾಯ । ದಿವಾತರಾದನ್ಹಃ ಸಕಾಶಾದೇವಾಪ್ರಾಯುಷೇ । ಪ್ರಗತಮಾಯುರ್ಯಸ್ಯಾಸೌ ಪ್ರಾಯುಃ । ನ ಪ್ರಾಯುರಪ್ರಾಯುಃ । ತಸ್ಮೈ । ಅಸೌ ಯೋಽಸ್ತಮೇತಿ ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯಾಸ್ತಮೇತೀತಿ ಶ್ರುತೇಃ ರಾತ್ರೌ ಸರ್ವೇ ಭಾವಾ ನಿದ್ರಯಾವೃತತ್ವಾತ್ಪ್ರಾಯುಷ ಇವ ಭವಂತಿ । ಅಯಮಗ್ನಿಸ್ತು ಸರ್ವಪ್ರಾಣಿಪ್ರಾಣಾ-ಪಹರ್ತುಃ ಸೂರ್ಯಸ್ಯ ರಾತ್ರೌ ಸ್ವಸ್ಮಿನ್ನೇವ ಪ್ರವೇಶಾತ್ಪ್ರಕೃಷ್ಟಾಯುರ್ಭವತಿ । ಅತೋಽಪಿ ಧೀಮಹಿ । ಕಿಂಚಾತ್ ಅತ ಏವ ಕಾರಣಾತ್ ಯತೋಽಯಂ ಸುದರ್ಶತರೋ ಯತಶ್ಚಾಯಮಪ್ರಾಯುಃ ಅತಃ ಕಾರಣಾದಸ್ಯಾಸ್ಮೈ ತದರ್ಥಮಾಯುರ್ಹವಿರ್ಲಕ್ಷಣಮನ್ನಂ ಗ್ರಭಣವತ್ ಗ್ರಹಣಯುಕ್ತಮಭೂತ್ ।

ಗ್ರಹಣೇ ದೃಷ್ಟಾಂತಃ । ಸೂನವೇ ಪುತ್ರಾಯ ಪಿತ್ರೋರ್ವೀಳು ಶರ್ಮ ದೃಢಂ ಸುಖಸಾಧನಂ ಗೃಹಂ ಯಥಾ ಗ್ರಹಣವದ್ಭವತಿ ತಥೇತ್ಯರ್ಥಃ । ಶರ್ಮೇತಿ ಗೃಹನಾಮ ಶರ್ಮ ವರ್ಮೇತಿ ತನ್ನಾಮಸು ಪಾಠಾತ್ । ಇದಾನೀಮಾಹವನೀಯಾದಿರೂಪೇಣಾಗ್ನೇರ್ಬಹುತ್ವಮಪೇಕ್ಷ್ಯಾಹ । ಏತೇಽಗ್ನಯೋ ಭಕ್ತಂ ಸೇವಮಾನಮಭಕ್ತಮಸೇವಮಾನಂ ಚಿಕಿತ್ವಂತ ಏತೇ ಪ್ರಾಣಿನೋಽನುಗ್ರಾಹ್ಯಾ ಇತಿ ಬುಧ್ಯಮಾನಾ ಅವಃ । ರಕ್ಷಂತಿ । ಯದ್ಯಪಿ ವಿಶೇಷೇಣ ಪ್ರಾಣಿನೋ ದಾಹಪಾಕಾದಿದ್ವಾರಾ ರಕ್ಷಂತಿ ತಥಾಪ್ಯಸ್ತಿ ಯಜಮಾನೇಷ್ವತಿಶಯ ಇತ್ಯಾಹ । ವ್ಯಂತಸ್ತ್ಯೈಃ ಪ್ರತ್ತಂ ಹವಿರಶ್ನಂತೋಽಜರಾ ಭವಂತಿ । ಸ್ವಯಂ ಹವಿಷಾಜರಾಃ ಸಂತೋ ಯಜಮಾನಾನಪ್ಯಜರಾನ್ಕುರ್ವಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಅಗ್ನಿಯು । **ನಕ್ತಂ**—ರಾತ್ರಿಯಲ್ಲಿ । **ದಿವಾತರಾತ್**—ಹಗಲಿಗಿಂತಲೂ । **ಸುದರ್ಶ-ತರಃ**—ಹೆಚ್ಚಾಗಿ ದರ್ಶನೀಯನೋ । **ದಿವಾತರಾತ್**—ಹಗಲಿನಿಂದಲೇ । **ಅಪ್ರಾಯುಷೇ**—(ರಾತ್ರಿಯಲ್ಲಿ ಸೂರ್ಯನು ಅಗ್ನಿಯಲ್ಲೇ ಪ್ರವಿಷ್ಟನಾಗಿರುವುದರಿಂದ) ಕ್ಷೀಣಾಯುವಲ್ಲವೋ । **ಅಸ್ಯ**—ಅಂತಹ ಈ ಅಗ್ನಿಗೋಸ್ಕರ । **ತಂ ಪೃಕ್ಷಂ**—ಆ ಹವಿರ್ಲಕ್ಷಣಾನ್ನವನ್ನು । **ಉಪರಾಸು**—ವೇದಿಯ ಅಕ್ಕ ಪಕ್ಕಗಳಲ್ಲಿ । **ಧೀಮಹಿ**—ಇಡೋಣ । **ಆತ್**—ಈ ಕಾರಣಗಳಿಂದಲೇ । **ಅಸ್ಯ**—ಇವನಿಗೆ । **ಆಯುಃ**—(ಹವೀರೂಪವಾದ) ಅನ್ನವು । **ಸೂನವೇ**—ಪುತ್ರನಿಗೆ । **ವೀಳು**—(ಪಿತೃದತ್ತವಾದ) ಗೃಹವು । **ಶರ್ಮ ನ**—ಸುಖಕರವಾಗುವಂತೆ । **ಗ್ರಭಣವತ್**—ಗ್ರಾಹ್ಯವಾಗುತ್ತದೆ । **ಅಗ್ನಯಃ**—ಆಹವನೀಯಾದ್ಯಗ್ನಿಗಳು । **ಭಕ್ತಂ**—(ತಮ್ಮನ್ನು) ಸೇವಿಸುವವನನ್ನು । **ಅಭಕ್ತಂ**—ಸೇವಿಸದೇ ಇರುವವನನ್ನು । **ವ್ಯಂತಃ**—(ಅನುಗ್ರಾಹ್ಯರೆಂದು) ತಿಳಿದವರಾಗಿ । **ಅವಃ**—ರಕ್ಷಿಸುತ್ತಾರೆ । **(ಮತ್ತೂ) ವ್ಯಂತಃ**—(ಭಕ್ತರಿಂದ ದತ್ತವಾದ) ಹವಿಸ್ಸನ್ನು ಸ್ವೀಕರಿಸಿದವರಾಗಿ । **ಅಜರಾಃ**—ಜರಾರಹಿತರಾಗುತ್ತಾರೆ (ಯಜಮಾನರನ್ನೂ ಜರಾರಹಿತರನ್ನಾಗಿ ಮಾಡುತ್ತಾರೆ).

॥ ಭಾವಾರ್ಥ ॥

ಹಗಲಿಗಿಂತಲೂ ರಾತ್ರಿಯಲ್ಲೇ ಹೆಚ್ಚಾಗಿ ಪ್ರಕಾಶಿಸುವ ಮತ್ತು ಹಗಲಿನಿಂದಲೇ (ರಾತ್ರಿಯಲ್ಲಿ ಸೂರ್ಯನು ಅಗ್ನಿಪ್ರವಿಷ್ಟನಾಗಿರುವುದರಿಂದ ಇತರ ಪ್ರಾಣಿಗಳಂತೆ) ಆಯುಃಕ್ಷೀಣತೆಯನ್ನು ಪಡೆಯದ ಅಗ್ನಿಗಾಗಿ ವೇದಿಕೆಯ ಸಮೀಪ ಪ್ರದೇಶದಲ್ಲಿ ಹವಿರಾದಿಗಳನ್ನು ಇಡುತ್ತೇವೆ. (ಈ ಮೇಲೆ ಹೇಳಿದ) ಗುಣಯುಕ್ತನಾದುದರಿಂದಲೇ (ನಮ್ಮಿಂದ ಹುತವಾದ) ಹವಿಸ್ಸು, (ಪಿತೃಪ್ರಾಪ್ತವಾದ) ಮನೆಯು ಪುತ್ರನಿಗೆ ಸುಖಕರವಾಗುವಂತೆ ಅವನಿಂದ ಗ್ರಾಹ್ಯವಾಗುತ್ತದೆ. ಅಗ್ನಿಯು (ಆಹವನೀಯವಾದ ನಾನಾರೂಪಗಳುಳ್ಳವನು). (ತನ್ನ) ಭಕ್ತರು ಭಕ್ತರಲ್ಲದವರೆನ್ನದೆ (ಎಲ್ಲರೂ ಅನುಗ್ರಾಹ್ಯರೆಂಬ) ಬುದ್ಧಿಯಿಂದ (ಎಲ್ಲರನ್ನೂ) ರಕ್ಷಿಸುತ್ತಾನೆ. ಆದರೆ (ಭಕ್ತರಿಂದ ದತ್ತವಾದ) ಅನ್ನದಿಂದ ತಾನೂ) ಅಜರನಾಗುತ್ತಾನೆ. (ಭಕ್ತರನ್ನು ಅಜರನನ್ನಾಗಿ ಮಾಡುತ್ತಾನೆ).

English Translation

We place near the altar the (sacrificial) food of him who is more conspicuous by night than by day: (we offer it) to him who is scarcely alive by day: hence his (sacrificial) food finds prompt acceptance, like

a dwelling (given by a father) to a son: these undecaying fires, (although) discriminating between the devout and the undevout, grant (both) protection, and accepting (the offerings of the pious), they are exempt from decay.

॥ ವಿಶೇಷವಿಷಯಗಳು ॥

**ಪೃಕ್ಷಂ—ಹವಿರ್ಲಕ್ಷಣಮನ್ನಂ ।** **ಪೃಕ್ಷ** ಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಹವಿಸ್ಸಿನ ರೂಪವಾದ ಅನ್ನವೆಂದು ಸಾಯಣರು ಅರ್ಥವನ್ನು ವಿವರಿಸಿರುವರು.

**ಉಪರಾಸು—ಉಪರಮಂತೇ ಅಸ್ಮಿನ್ ಹವೀಂಷಿ ಇತ್ಯುಪರಾಃ ವೇದಿಸಮೀಪಭೂಮಯಃ ।** ಹೋಮಮಾಡುವ ಹವಿಸ್ಸುಗಳನ್ನು ಸಿದ್ಧಪಡಿಸಿ ಇರಿಸುವ ಯಜ್ಞವೇದಿಯ ಹತ್ತಿರದ ಪ್ರದೇಶಗಳು ಎಂದು ಅರ್ಥ.

**ಉಪರಾ** ಶಬ್ದವು **ಆಶಾಃ ಆಶಾಃ** ಎಂಬ ಎಂಟು ದಿಙ್ನಾಮಗಳಲ್ಲಿ (ನಿ. ೨-೧೬) ಪಠಿತವಾಗಿರುವುದರಿಂದ ದಿಕ್ಕೆಂದು ಅರ್ಥವನ್ನು ಯಾಸ್ಕರು ವಿವರಿಸಿರುವರು. ಉಪರ ಶಬ್ದವು ಮೇಘ ನಾಮಗಳಲ್ಲಿಯೂ ಉಕ್ತವಾಗಿದೆ. ಅಗ್ನಿಗೋಸ್ಕರವಾಗಿ ಯಜ್ಞವೇದಿಯ ಸಮೀಪ ಪ್ರದೇಶದಲ್ಲಿ ಹವಿಸ್ಸಿನ ರೂಪವಾದ ಅನ್ನವನ್ನು ಸಿದ್ಧಮಾಡಿರುವರು. ಎಂದು ವರ್ಣಿಸಿದೆ.

**ನಕ್ತಂ—ರಾತ್ರೌ ।** ರಾತ್ರಿಯಲ್ಲಿ. ನಕ್ತ ಶಬ್ದವು ಇಪ್ಪತ್ತಮೂರು ರಾತ್ರಿನಾಮಗಳ ಮಧ್ಯದಲ್ಲಿ (ನಿ. ೨.೧೮) ಪಠಿತವಾಗಿದೆ.

**ದಿವಾತರಾತ್—ಸುದರ್ಶನತರಃ ಅಹ್ನೋಽಪಿ ಅತ್ಯರ್ಥಂ ಸರ್ವೈಃ ದರ್ಶನೀಯೋ ಭವತಿ ।** ರಾತ್ರಿಯಲ್ಲಿ ಪದಾರ್ಥಗಳೆಲ್ಲವೂ ಕತ್ತಲೆಯಿಂದ ಆವರಿಸಲ್ಪಟ್ಟು ಸರಿಯಾಗಿ ಕಾಣದಿರುವಾಗಲೂ ಅಗ್ನಿಯು ತನ್ನ ಪ್ರಕಾಶದಿಂದಲೇ ಬಹಳವಾಗಿ ಹಗಲಿನಲ್ಲಿ ಪ್ರಕಾಶಿಸುವುದಕ್ಕಿಂತಲೂ ಅಧಿಕವಾಗಿ (ಹಗಲಿನ ಪ್ರಕಾಶಕ್ಕಿಂತಲೂ ಹೆಚ್ಚಾಗಿ) ಪ್ರಕಾಶಿಸುವನು ಎಂದು ಅರ್ಥ.

**ದಿವಾತರಾತ್ ಅಪ್ರಾಯುಷೇ-ಅಹ್ನಃ ಸಕಾಶಾದೇವ ಅಪ್ರಾಯುಷೇ। ಪ್ರಗತಮಾಯುಃ ಯಸ್ಯಾಸೌ ಪ್ರಾಯುಃ ನ ಪ್ರಾಯುಃ ಅಪ್ರಾಯುಃ।** ಎಂದರೆ ಆಯುಸ್ಸಿಲ್ಲದವನು ಪ್ರಾಯುವೆನಿಸಿರುವನು. ಅಪ್ರಾಯುವು ಆಯುಸ್ಸಿನಿಂದ ಕೂಡಿರುವವನು ಎಂದು ಅರ್ಥವನ್ನು ಬೋಧಿಸುವ ಕಾರಣ ಅಗ್ನಿಯು ಅಹಸ್ಸಿನಿಂದ ದೀರ್ಘಾಯುವಾಗಿರುವನು.

**ಅಸೌ ಯೋಽಸ್ತಮೇತಿ ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯಾಸ್ತಮೇತಿ** (ತೈ. ಆ. ೧-೧೪) ಸೂರ್ಯನು ಅಸ್ತನಾಗುವಾಗ ಎಲ್ಲಾ ಪ್ರಾಣಿಗಳ ಪ್ರಾಣವನ್ನೂ (ತಾನು) ನಿಶ್ಚೇಷ್ಟವಾಗಿರುವಂತೆ ಮಾಡಿ ಅಸ್ತವನ್ನು ಹೊಂದುವನು ಎಂದು ತೈತ್ತಿರೀಯ ಶ್ರುತಿಯಲ್ಲಿ ಉಕ್ತವಾಗಿರುವುದು. ಇದರಿಂದ ಪ್ರಾಣಿಗಳೆಲ್ಲರೂ (ನಿದ್ರೆಯಲ್ಲಿ) ಆಯುಸ್ಸಿಲ್ಲದವರಂತೆ ಇರುವರು. ಸಾಯಣರು ಇದೇ ಅಭಿಪ್ರಾಯವನ್ನು **ರಾತ್ರೌ ಸರ್ವೇ ಭಾವಾಃ ನಿದ್ರಯಾ ಆವೃತತ್ವಾತ್ ಪ್ರಾಯುಷ ಇವ ಭವಂತಿ** ಎಂಬ ವಾಕ್ಯದಿಂದ ವಿವರಿಸಿ.

**ಆಯುಮಗ್ನಿಸ್ತು ಸರ್ವಪ್ರಾಣಿಪ್ರಾಣಾಪಹರ್ತುಃ ಸೂರ್ಯಸ್ಯ ರಾತ್ರೌ ಸ್ವಸ್ಮಿನ್ನೇವ ಪ್ರವೇಶಾತ್ ಪ್ರಕೃಷ್ಟಾಯುರ್ಭವತಿ ।**

ಅಗ್ನಿಯು ಮಾತ್ರ ಎಲ್ಲಾ ಪ್ರಾಣಿಗಳ ಪ್ರಾಣವನ್ನೂ ಅಪಹರಿಸುವ ಸೂರ್ಯನು ರಾತ್ರಿಯಲ್ಲಿ ತನ್ನಲ್ಲಿ ಪ್ರವೇಶಿಸುವುದರಿಂದ ದೀರ್ಘಾಯುಸ್ಸುಳ್ಳವನಾಗಿರುವನು ಎಂದು ವರ್ಣಿಸಿರುವರು. ಅಗ್ನಿಯನ್ನು ಸೂರ್ಯನು ಪ್ರವೇಶಿಸುವನು ಎಂದು ತೈತ್ತಿರೀಯ ಶ್ರುತಿಯಲ್ಲಿ **ಅಗ್ನಿರ್ವಾಯಮಾದಿತ್ಯಸ್ಸಾಯಮನುಪ್ರವಿಶತಿ** ಎಂಬ ವಾಕ್ಯದಿಂದ ಉಕ್ತವಾಗಿರುತ್ತದೆ. ಈ ರೀತಿಯಾದ ಮಹಿಮೆಯುಳ್ಳ ಅಗ್ನಿಯನ್ನು ಧ್ಯಾನಮಾಡುತ್ತೇವೆ ಎಂದು ವರ್ಣಿಸಿದೆ.

**ಆಯುಃ—ಹವಿರ್ಲಕ್ಷಣಮನ್ನಂ** ಹವಿಸ್ಸಿನ ರೂಪದಿಂದ ಇರುವ ಅನ್ನವು ಎಂದು ಅರ್ಥ. ಯಾಸ್ಕರು ಆಯುಃ ಎಂಬ ಶಬ್ದವನ್ನು ಇಪ್ಪತ್ತೆಂಟು ಅನ್ನನಾಮಗಳಲ್ಲಿ (ನಿ. ೩-೯) ಪಠಿಸಿರುವರು.

**ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ ಮರುತಃ ಪರಿ ಖ್ಯನ್ ।**
**ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ ॥**

(ಋ. ಸಂ. ೧-೧೬೨-೧)

ಇಲ್ಲಿ **ಆಯುಃ ವಾಯುಃ ವಕಾರಲೋಪೇನ ಅಯನಾತ್ ಏತಿ ಹ್ಯಸೌ ವಿಶ್ವಮ್** ಎಂದು ದುರ್ಗಾಚಾರ್ಯರು **ವಾಯುರಯನಃ** ಎಂಬ ವಾಕ್ಯಕ್ಕೆ ವಿವರಣೆಯನ್ನು ಮಾಡಿ ಆಯುಶ್ಶಬ್ದಕ್ಕೆ ವಾಯುವೆಂದು ಅರ್ಥಮಾಡಿರುವರು.

**ವಾತ ಆ ವಾತು ಭೇಷಜಂ ಶಂಭು ಮಯೋಭು ನೋ ಹೃದೇ ।**
**ಪ್ರ ಣ ಆಯೂಂಷಿ ತಾರಿಷತ್ ॥**

(ಋ. ಸಂ. ೧೦-೧೮೬-೧)

ಇಲ್ಲಿ ಆಯುಶ್ಶಬ್ದಕ್ಕೆ ಜೀವಿಸುವ ಕಾಲವೆಂದು ಅರ್ಥವನ್ನು ವಿವರಿಸಿದೆ.

**ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತವೇ ಸು ಪ್ರ ತಿರಾ ನ ಆಯುಃ ।**

(ಋ. ಸಂ. ೧೦-೫೯-೫)

**ಭಾಗಂ ದೇವೇಭ್ಯೋ ವಿ ದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ॥**

(ಋ. ಸಂ. ೧೦-೮೫-೧೯-)

ಎಂಬ ಋಕ್ಕುಗಳಲ್ಲಿ ಆಯುಶ್ಶಬ್ದಕ್ಕೆ ಜೀವಿತಕಾಲವೆಂದು ಅರ್ಥಮಾಡಿದೆ. ಇಲ್ಲಿ ಆಯುಶ್ಶಬ್ದಬೋಧ್ಯವಾದ ಹವಿಸ್ಸಿನ ರೂಪವಾದ ಅನ್ನವನ್ನು ಅಗ್ನಿಗೆ ಹೋಮ ಮಾಡುವುದಕ್ಕಾಗಿ ಗ್ರಹಣ ಮಾಡಿದೆ. (ಸಿದ್ಧಪಡಿಸಿದೆ) ಎಂದು ಅರ್ಥ.

**ಸೂನವೇ ವೀಳು ಶರ್ಮ ನ ಗ್ರಭಣವತ್—ಪಿತ್ರೋಃ ಪುತ್ರಾಯ ದೃಢಂ ಸುಖಸಾಧನಂ ಗೃಹಂ ಯಥಾ ಗ್ರಹಣವದ್ಭವತಿ ತಥಾ ।** ಪುತ್ರನಿಗೆ ಪಿತೃಸಂಬಂಧವಾದ ಸುಖಕರವಾದ ಮನೆಯು ಸ್ವೀಕರಿಸಲು ಅರ್ಹವಾಗಿರುವಂತೆ ನಾವು ಸಿದ್ಧಮಾಡಿದ ಹವಿಸ್ಸು ಅಗ್ನಿಗೆ ಸ್ವೀಕರಿಸಲರ್ಹವಾಗಿದೆ ಎಂದು ಹೋಲಿಸಿದೆ.

**ವೀಳು—**ಶಬ್ದವು ಬಲನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. **ಶರ್ಮ** ಶಬ್ದವು, ಗಯಃ ಕೃದರಃ ಎಂಬ ಇಪ್ಪತ್ತೆರಡು ಗೃಹನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ.

**ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ । ಯಚ್ಛಾ ನಃ ಶರ್ಮ ಸಪ್ರಥಃ ॥**
(ಋ. ಸಂ ೧-೨೨-೧೫)

ಇಲ್ಲಿ **ಶರ್ಮ**—ಸುಖಂ ಎಂದು ಅರ್ಥಮಾಡಿದೆ.

**ಅಗ್ನಯಃ ವ್ಯಂತಃ ಅಜರಾಃ—ತ್ಯೈಃ ಪ್ರತ್ತಂ ಹವಿರಶ್ನಂತಃ ಅಜರಾಃ ಭವಂತಿ** । ಸ್ವಯಂ ಹವಿಷಾ ಅಜರಾಸ್ಸಂತೋ ಯಜಮಾನಾನಪ್ಯಜರಾನ್ ಕುರ್ವಂತಿ । ಇಲ್ಲಿ ಅಗ್ನಯಃ ಎಂದು ಬಹುವಚನವನ್ನು ಹೇಳಿದೆ. ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಎಂಬ ಭೇದಗಳಿಂದ ಅಗ್ನಿಗೆ ಬಹುತ್ವವು ಉಪಪನ್ನವಾಗಿರುತ್ತದೆ. ಈ ಅಗ್ನಿಗಳು ಯಜಮಾನರು ಅರ್ಪಿಸುವ ಹವಿಸ್ಸುಗಳಿಂದ ಉದ್ದೀಪ್ತರಾಗಿ ಯಜ್ಞಮಾಡುವ ಯಜಮಾನರನ್ನು ತೇಜಶ್ಶಾಲಿಗಳನ್ನಾಗಿ ಮಾಡುವರೆಂದು ವರ್ಣಿಸಿದೆ.

ಮತ್ತು ಈ ಮಂತ್ರದಲ್ಲಿ ವ್ಯಂತಃ ಎಂಬ ಪದವನ್ನು ಆವೃತ್ತಿ ಮಾಡಿ ಈ ಅಗ್ನಿಗಳು ಪ್ರಾಣಿಗಳನ್ನು (ದಾಹಮಾಡುವುದು, ಪಚನಮಾಡುವುದು) ಅವರಿಗೆ ಅನುಕೂಲವಾಗುವಂತೆ ತೇಜಸ್ಸನ್ನು ವೃದ್ಧಿಮಾಡುವುದು, ಅವರ ಆಹಾರವನ್ನು ಪಚನಮಾಡುವುದು ಎಂಬ ಕಾರ್ಯಗಳಿಂದ ರಕ್ಷಿಸುವುದು, ಆದರೆ ಯಜ್ಞಮಾಡುವ ಯಜಮಾನರಿಗೆ ಇತರ ಪ್ರಾಣಿಗಳ ರಕ್ಷಣೆಗಿಂತ ಅತಿಶಯವಾದ ಫಲವು ಅಗ್ನಿಗಳಿಂದ ಉಂಟಾಗುವುದು ಎಂದು ವಿವರಿಸಿ, ವ್ಯಂತಃ ಅಜರಾಃ ಎಂಬ ಪದಗಳ ಆವೃತ್ತಿಗೆ ಪ್ರಯೋಜನವನ್ನೂ ವರ್ಣಿಸಿದೆ.

**ಅಗ್ನಯಃ ಭಕ್ತಂ ಸೇವಮಾನಂ ಅಭಕ್ತಂ ಅಸೇವಮಾನಂ ಚ ವ್ಯಂತಃ ಏತೇ ಪ್ರಾಣಿನಃ ಅನುಗ್ರಾಹ್ಯಾಃ ಇತಿ ಬುಧ್ಯಮಾನಾಃ ಅವಃ ರಕ್ಷಂತಿ** । ಅಗ್ನಿಗಳು—ಕೆಲವರು ಪಕ್ವವಾದದ್ದನ್ನು ಸೇವಿಸುವರು, ಕೆಲವರು ಪಕ್ವವಲ್ಲದ್ದನ್ನು ಸೇವಿಸುವರು ಎಂದು ತಿಳಿದು ಅವರನ್ನು ಅನುಗ್ರಹಮಾಡಿ ರಕ್ಷಿಸುವುವು ಎಂದು ಪ್ರಾಣಿಗಳ ರಕ್ಷಣೆಯ ವಿಷಯದಲ್ಲಿ ಅಗ್ನಿಗೆ ಇರುವ ದಯೆಯನ್ನು ವಿವರಿಸಿದೆ. ಆದರೆ **ವ್ಯಂತಃ ಅಜರಾಃ ಭವಂತಿ** ಎಂಬ ವಾಕ್ಯದಿಂದ ಯಜ್ಞಮಾಡುವ ಯಜಮಾನರ ಹವಿಸ್ಸಿನ ಅರ್ಪಣೆಯಿಂದ ವೃದ್ಧಿಹೊಂದಿ ಅವರಿಗೆ ಉತ್ತಮವಾದ ತೇಜಸ್ಸನ್ನು ಉಂಟುಮಾಡುವುದೆಂದು ಇತರಪ್ರಾಣಿಗಳ ರಕ್ಷಣೆಗಿಂತ ವೈಲಕ್ಷಣವನ್ನೂ ತೋರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಧೀಮಹಿ**—ಡುದಾಞ್ ಧಾರಣಪೋಷಣಯೋಃ ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಅದಕ್ಕೆ ಸೀಯುಟಾಗಮ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಸಾರ್ವಧಾತುಕ ಸಂಜ್ಞೆಯಿಂದ **ಲಿಙಃ ಸಲೋಪೋನಂತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಸೀಯುಟಿನ ಸಕಾರಕ್ಕೆ ಲೋಪ. ಶಪ್. ಙಿತ್ವ. **ಬಹುಲಂ ಛಂದಸಿ** ಎಂಬುದರಿಂದ ಅದಕ್ಕೆ ಲುಕ್. **ಲೋಪೋವ್ಯೋರ್ವಲಿ** ಸೂತ್ರದಿಂದ ಸೀಯುಟಿನ ಯಕಾರಕ್ಕೆ ಲೋಪ. ಙಿತ್ವವಿರುವುದರಿಂದ **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುದರ್ಶತರಃ, ದಿವಾತರಾತ್**—ಎರಡು ಕಡೆಯಲ್ಲಿಯೂ ಸ್ವಾರ್ಥದಲ್ಲಿ ತರಪ್ ಪ್ರತ್ಯಯ ಬರುತ್ತದೆ.

**ಅಪ್ರಾಯುಷೇ**—ಪ್ರಗತಂ ಆಯುಃ ಯಸ್ಯ ಅಸೌ ಪ್ರಾಯುಃ ನ ಪ್ರಾಯುಃ ಅಪ್ರಾಯುಃ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಗ್ರಭಣವತ್**—ಗ್ರಹ ಉಪಾದಾನೇ ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** ಎಂಬುದರಿಂದ ಅದಕ್ಕೆ ಅನಾದೇಶ. **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಅದರಮೇಲೆ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—ಎಂಬುದರಿಂದ ವತ್ವ. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಹಕಾರಕ್ಕೆ ಭತ್ವ.

**ಭಕ್ತಮ್**—ಭಜ ಸೇವಾಯಾಂ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ **ಚೋಃ ಕುಃ** ಎಂಬುದರಿಂದ ಧಾತು ಜಕಾರಕ್ಕೆ ಕುತ್ವ. ಚರ್ತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಅಭಕ್ತಮ್ ಎಂಬಲ್ಲಿ ನಞ್ ತತ್ಪುರುಷ ಸಮಾಸ. **ತತ್ಪುರುಷೇ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅಜರಾಃ**—ನ ವಿದ್ಯತೇ ಜರಾ ಯೇಷಾಂ ತೇ ಅಜರಾಃ. ನಞ್‌ಸ್ವರಕ್ಕೆ ಬಾಧಕವಾಗಿ **ನಞೋ ಜರಮರ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ವ್ಯಂತಃ**—ವೀ ಗತ್ಯಾದಿಷು. ಗತ್ಯರ್ಥಕವಾದ ಧಾತುಗಳು ಜ್ಞಾನಾರ್ಥದಲ್ಲಿಯೂ ಪ್ರಯುಕ್ತವಾಗುತ್ತವೆ. ಲಡರ್ಥದಲ್ಲಿ ಶತೃ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯಕ್ಕೆ ಙಿತ್ವಾತಿದೇಶ ವಿರುವುದರಿಂದ ಗುಣ ಬರುವುದಿಲ್ಲ. **ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್** ಎಂಬಲ್ಲಿ ಬಹುಲಗ್ರಹಣಸಾಮರ್ಥ್ಯ ದಿಂದ ಯಣಾದೇಶ. ಪ್ರಥಮಾ ಬಹುವಚನಾಂತರೂಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ‖ ೫ ‖



॥ ಸಂಹಿತಾಪಾಠಃ ॥

**ಸ ಹಿ ಶರ್ಧೋ ನ ಮಾರುತಂ ತುವಿಷ್ವಣಿರಪ್ನಸ್ವತೀಷೂರ್ವರಾಸ್ವಿಷ್ಟ-**
**ನಿರಾರ್ತನಾಸ್ವಿಷ್ಟನಿಃ ।**
**ಆದದ್ಧವ್ಯಾನ್ಯಾದದಿರ್ಯಜ್ಞಸ್ಯ ಕೇತುರರ್ಹಣಾ ।**
**ಅಧ ಸ್ಮಾಸ್ಯ ಹರ್ಷತೋ ಹೃಷೀವತೋ ವಿಶ್ವೇ ಜುಷಂತ ಪಂಥಾಂ ನರಃ**
**ಶುಭೇ ನ ಪಂಥಾಂ ‖ ೬ ‖**

॥ ಪದಪಾಠಃ ॥

ಸಃ । ಹಿ । ಶರ್ಧಃ । ನ । ಮಾರುತಂ । ತುವಿಽಸ್ವನಿಃ । ಅಪ್ನಸ್ವತೀಷು । ಉರ್ವರಾಸು । ಇಷ್ಮನಿಃ ।
ಆರ್ತನಾಸು । ಇಷ್ಮನಿಃ ।

ಅದತ್ । ಹವ್ಯಾನಿ । ಆಽದದಿಃ । ಯಜ್ಞಸ್ಯ । ಕೇತುಃ । ಅರ್ಹಣಾ ।

ಅಧ । ಸ್ಮ । ಅಸ್ಯ । ಹರ್ಷತಃ । ಹೃಷೀವತಃ । ವಿಶ್ವೇ । ಜುಷಂತ । ಪಂಥಾಂ । ನರಃ । ಶುಭೇ । ನ ।
ಪಂಥಾಂ ॥ ೬ ॥

॥ ಸಾಯಣಭಾಷ್ಯಂ ॥

ಸ ಹಿ ಸ ಏವ ಸ್ತುತ್ಯತಯಾ ಪ್ರಸಿದ್ಧ ಏವಾಗ್ನಿಸ್ತುವಿಷ್ಮಣಿಃ । ತುವೀತಿ ಬಹುನಾಮ ಉರು ತುವೀತಿ ತನ್ನಾಮಸು ಪಾಠಾತ್ । ಬಹುಸ್ವನಿಃ ಪ್ರಭೂತಧ್ವನಿಯುಕ್ತೋ ವರ್ತತೇ । ಅತ್ಯಂತಜ್ವಲಿತೋಽಗ್ನಿರ್ವಾಯು-ಸಂಪರ್ಕಾತ್ ಭುಗಿಭುಗಿತಿ ಧ್ವನಿರುತ್ಪದ್ಯತೇ । ಜ್ವಲತೀತ್ಯರ್ಥಃ । ಧ್ವನನೇ ದೃಷ್ಟಾಂತಃ । ಮಾರುತಂ ಶರ್ಧೋ ನ ಮರುತ್ಸಂಬಂಧಿ ಬಲಮಿವ । ಮರುತಾಂ ಸಮೂಹೋ ಯಥಾ ಧ್ವನಯತಿ ತದ್ವದಿತ್ಯರ್ಥಃ । ಕುತ್ರೇತಿ ತದುಚ್ಯತೇ । ಅಪ್ನಸ್ವತೀಷು ಖನನಪ್ರೋಕ್ಷಣಾದಿಕರ್ಮೋಪೇತಾಸು । ಅಪ್ನ ಇತಿ ಕರ್ಮನಾಮ ಅಪ್ನೋ ದಂಸ ಇತಿ ತನ್ನಾಮಸು ಪಾಠಾತ್ । ಉರ್ವರಾಸೂರುವರಣಯುಕ್ತಾಸು ಶ್ರೇಷ್ಠಾಸು ವೇದಿಭೂಮಿಷು । ಕೀದೃಶೋಽಯಂ । ಇಷ್ಮನಿರ್ಯಷ್ಟವ್ಯಃ ॥ ಔಣಾದಿಕೋಽನಿಕ್ ತುಗಾಗಮಶ್ಚ ॥ ಕಿಂಚಾರ್ತನಾಸು । ಆರ್ತಾನ್ಕರೋತ್ಯಾರ್ತಯತಿ । ಆರ್ತಯಂತೀತ್ಯಾರ್ತನಾಃ ಪೃತನಾಃ । ತಾಸು ॥ ಣ್ಯಾಸಶ್ರಂಥೋ ಯುಚ್ । ಪಾ. ೩-೩-೧೦೭ । ವೃಷಾದಿತ್ವಾದಾದ್ಯುದಾತ್ತತ್ವಂ ॥ ತಾಸಾಂ ಜಯಾಯೇಷ್ಮನಿರೇಷ್ಟವ್ಯೋ ಯಷ್ಟವ್ಯೋ ವಾ । ಕಿಂಚೈವಂ ಸ್ತನಯನ್ನಗ್ನಿರ್ಹವ್ಯಾನ್ಯಾಜ್ಯ-ಪುರೋಡಾಶಾದೀನ್ಯಾದತ್ । ಅತ್ತಿ । ಭಕ್ಷಯತಿ ॥ ಛಾಂದಸೋ ಲುಙ್ । ಯದ್ವಾ । ಆಙ್ಪೂರ್ವಾ-ದ್ದದಾತೇರಾಙೋ ಯಮಹನಃ । ಪಾ. ೧-೩-೨೮. । ಇತಿ ವ್ಯತ್ಯಯೇನಾತ್ಮನೇಪದಾಭಾವಃ । ಗಾತಿಸ್ಥೇತಿ ಸಿಚೋ ಲುಕ್ । ಛಾಂದಸೋ ಹ್ರಸ್ವಃ । ಕೇವಲಾದೇವ ವಾ ಛಂದಸ್ಯಪಿ ದೃಶ್ಯತ ಇತ್ಯನಜಾದೇರ-ಪ್ಯಾಡಾಗಮಃ । ಅತ ಏವಾನವಗ್ರಹಃ ಸ ಏವ ಶಿಷ್ಯತೇ ॥ ಆದದಿಃ ಸರ್ವತ್ರ ಹವಿರಾದಾನಶೀಲಃ ತಥಾ ಯಜ್ಞಸ್ಯ ಕೇತುಃ ಪ್ರಜ್ಞಾಪಕಃ ಕೇತುಸ್ಥಾನೀಯೋ ವಾ ಅರ್ಹಣಾ ಪೂಜನೀಯಃ ॥ ಸುಪಾಂ ಸುಲುಗಿತಿ ಸೋರಾಕಾರಃ । ಪ್ರತ್ಯಯಾದ್ಯುದಾತ್ತತ್ವಂ ಛಾಂದಸಂ ॥ ಕಿಂಚ ಹರ್ಷತೋ ಹವಿರ್ಭಕ್ಷಣಾದತ್ಯಂತ-ಹರ್ಷಯುಕ್ತಸ್ಯ ಯದ್ವಾಭಿಮತಫಲದಾನೇನ ಯಜಮಾನಾನ್ಹರ್ಷಯತೋ ಹೃಷೀವತ ಆಜ್ಯಸ್ವೀಕಾ-ರೇಣ ಹರ್ಷಯುಕ್ತಸ್ಯಾಗ್ನೇಃ ಪಂಥಾಂ ಪಂಥಾನಂ ಮಾರ್ಗಂ ವಿಶ್ವೇ ಸರ್ವೇ ಮನುಷ್ಯಾ ಜುಷಂತ । ಅಪ್ರೀಣಯನ್ ಅಸೇವಂತ ವಾ । ಕಿಮರ್ಥಂ । ಶುಭೇ ಶುಭಾಯ ಶೋಭನಾಯ ಸುಖಪ್ರಾಪ್ತಯೇ । ಪಂಥಾನಂ ಸರ್ವೈರ್ಗಂತವ್ಯಮೈಹಿಕಾಮುಷ್ಮಿಕಫಲಸ್ಯಾಗ್ನೇರೇವ ಮಾರ್ಗಂಸರ್ವೇಽನು ಗಚ್ಛಂತಿ । ಅಗ್ನಿ-

**ಮೇವಪ್ರೀಣಯಿತ್ವಾ ಸಾಧಯಂತಿ । ಮಾರ್ಗಶ್ರಯಣೇ ದೃಷ್ಟಾಂತಃ । ಯಥಾ ಲೋಕೇ ನರೋ ಮನುಷ್ಯಾಃ ಶುಭೇ ಶೋಭನಾಯ ಸುಖಪ್ರಾಪ್ತಯೇ ಪಂಥಾನಂ ಸರ್ವೈರ್ಗಂತವ್ಯಂ ನಿರ್ಭಯಂ ಪ್ರೌಢಮಾರ್ಗಮಿವ ॥**

॥ ಪ್ರತಿಪದಾರ್ಥ ॥

**ಅಪ್ನಸ್ವತೀಷು**—(ಖನನಾದಿ) ಕರ್ಮಯುತವಾದ । **ಉರ್ವರಾಸು**—ಶ್ರೇಷ್ಠವಾದ ವೇದಿಕೆಗಳಲ್ಲಿ । **ಮಾರುತಂ**—ಮರುತ್ಸಂಬಂಧವಾದ । **ಶರ್ಧಃ ನ**—ಬಲದಂತೆ । **ತುವಿಷ್ವಣಿಃ**—ಹೆಚ್ಚಾದ ಧ್ವನಿಯುಕ್ತನೂ । **ಇಷ್ಟನಿಃ**—( ಯಾಗಗಳಲ್ಲಿ) ಪೂಜಾಯೋಗ್ಯನೂ । **ಆರ್ತನಾಸು**—ಯುದ್ಧಗಳಲ್ಲಿ ಜಯ ಪ್ರಾಪ್ತಿಗೋಸ್ಕರ । **ಇಷ್ಟನಿಃ**—ಪೂಜ್ಯನೂ (ಅಪೇಕ್ಷಣೀಯನೂ) । **ಆದದಿಃ**—(ಹವಿರಾದಿಗಳನ್ನು) ಸ್ವೀಕರಿಸುವ ಸ್ವಭಾವವುಳ್ಳವನೂ । **ಯಜ್ಞಸ್ಯಕೇತುಃ**—ಯಜ್ಞಜ್ಞಾಪಕನೂ (ಯಜ್ಞಕ್ಕೆ ಧ್ವಜಪ್ರಾಯನೂ) **ಅರ್ಹಣಾ**—ಪೂಜನೀಯನೂ (ಆದ) । **ಸ ಹಿ**—ಅದೇ ಅಗ್ನಿಯು । **ಹವ್ಯಾನಿ**—ಆಜ್ಯ ಪುರೋಡಾಶಾದಿಗಳನ್ನು । **ಆದತ್**— ಭಕ್ಷಿಸುತ್ತಾನೆ । **ಅಧ**—ಆದುದರಿಂದ । **ಹರ್ಷತಃ**—(ಹವಿರ್ಭಕ್ಷಣದಿಂದ) ಹೃಷ್ಟನಾದ ಅಥವಾ (ಇಷ್ಟಾರ್ಥದಾನದಿಂದ ಯಜಮಾನರನ್ನು) ಹರ್ಷಗೊಳಿಸುವ । **ಹೃಷೀವತಃ**—(ಆಜ್ಯಾದಿ ಸ್ವೀಕಾರದಿಂದ) ಹರ್ಷಯುಕ್ತನಾದ । **ಅಸ್ಯ**—ಈ ಅಗ್ನಿಯ । **ಪಂಥಾಂ**—ಮಾರ್ಗವನ್ನು । **ಶುಭೇ**—ಸುಖಪ್ರಾಪ್ತಿಗಾಗಿ । **ನರಃ**—ಮನುಷ್ಯರು । (**ಶುಭೇ**—ಸುಖಕ್ಕಾಗಿ) । **ಪಂಥಾಂ ನ**—(ಉತ್ತಮ) ಮಾರ್ಗವನ್ನು (ಅನುಸರಿಸುವಂತೆ) । **ವಿಶ್ವೇ**—ಎಲ್ಲಾ ಮನುಷ್ಯರೂ । **ಜುಷಂತ ಸ್ಮ**—ಸೇವಿಸುತ್ತಾರೆ.

॥ ಭಾವಾರ್ಥ ॥

ಜೋರಾಗಿ (ಬೀಸುವ) ಬಿರುಗಾಳಿಯಂತೆ ಮಹಾಧ್ವನಿಯುಕ್ತನಾಗಿ, (ಖನನ ಪ್ರೋಕ್ಷಣಾದಿ) ಕರ್ಮೋಪೇತವಾದ ವೇದಿಗಳಲ್ಲಿ (ಜ್ವಲಿಸುವವನೂ) ಶತ್ರುನಾಶಕ್ಕಾಗಿ ಪೂಜಿಸಲ್ಪಡಬೇಕಾದವನೂ, ಯಜ್ಞಜ್ಞಾಪಕನೂ, (ಯಜ್ಞಕ್ಕೆ ಧ್ವಜಸ್ಥಾನೀಯನೂ) ಮತ್ತು ಪೂಜ್ಯನೂ ಆದ ಅಗ್ನಿಯು ಆಜ್ಯ, ಪುರೋಡಾಶಾದಿಗಳನ್ನು ಸ್ವೀಕರಿಸುತ್ತಾನೆ; (ಹವಿರಾದಿಗಳಿಂದ ತೃಪ್ತನಾಗಿ) (ಯಜಮಾನನಿಗೆ ಅಭಿಮತ ದಾನದಿಂದ) ಹರ್ಷಜನಕನೂ, ಸ್ವತಃ ಹೃಷ್ಟನೂ ಆದ ಅಗ್ನಿಯ ಮಾರ್ಗವನ್ನೇ ಸರ್ವರೂ, (ಲೋಕದಲ್ಲಿ) ಸುಖಾಪೇಕ್ಷಿಗಳು ಸನ್ಮಾರ್ಗವನ್ನನುಸರಿಸುವಂತೆ, ಸುಖಾಭಿಲಾಷಿಗಳಾಗಿ ಅನುಸರಿಸುತ್ತಾರೆ.

## English Translation.

He roars aloud, like the roaring of the winds, amidst the sanctified and selected (rites of sacred) solemnities; he who is to be worshipped, who is to be adored (for victory) over hosts (of enemies); he, the receiver (of oblations), the manifester of the sacrifice; he, who is deserving of veneration, devours the oblations: hence, all men for their good pursue the path of Agni, who gives pleasure (to his worshippers), being pleased (himself), in like manner as men follow a path (that leads) to happiness.

॥ ವಿಶೇಷವಿಷಯಗಳು ॥

**ಸ ಹಿ ತುವಿಷ್ವಣಿಃ ಮಾರುತಂ ಶರ್ಧೋ ನ—ಸ ಏವ ಸ್ತುತ್ಯತಯಾ ಪ್ರಸಿದ್ಧ ಏವಾಗ್ನಿಃ ಪ್ರಭೂತಧ್ವನಿಯುಕ್ತೋ ವರ್ತತೇ। ಅತ್ಯಂತ ಜ್ವಲಿತೇಽಗ್ನೌ ವಾಯುಸಂಪರ್ಕಾತ್ ಭುಗುಭುಗಿತಿ ಧ್ವನಿರುತ್ಪದ್ಯತೇ ಜ್ವಲತೀತ್ಯರ್ಥಃ। ತತ್ರ ದೃಷ್ಟಾಂತಃ ಮರುತ್ಸಂಬಂಧಿ ಬಲಮಿವ ಮರುತಾಂ ಸಮೂಹೋ ಯಥಾ ಧ್ವನಯತಿ ತಥಾ।** ಸ್ತುತಿಮಾಡುವ ಯಜಮಾನರ ಸ್ತುತಿಗೆ ವಿಷಯನಾದ ಅಗ್ನಿಯು ಉದ್ದೀಪ್ತನಾಗಿ ಬಹಳವಾದ (ಧ್ವನಿ) ಶಬ್ದವನ್ನು ಮಾಡುತ್ತಾನೆ. ಅಗ್ನಿಯು ಉರಿಯುವಾಗ ವಾಯುವಿನ ಸಂಬಂಧದಿಂದ ಧ್ವನಿಯು ಉಂಟಾಗುವುದು ಪ್ರಸಿದ್ಧವಾಗಿದೆ. ಬಲವಾದ ಗಾಳಿಯು ಬೀಸುವಾಗ ಧ್ವನಿಯು ಉಂಟಾಗುವಂತೆ ಈ ಅಗ್ನಿಯೂ ಧ್ವನಿಯನ್ನು ಮಾಡುವನು ಎಂದು ಹೋಲಿಸಿದೆ.

**ಶರ್ಧೋ ನ** ಎಂಬಲ್ಲಿ **ಶರ್ಧ ಶಬ್ದವು** ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಇದರಿಂದ ಶರ್ಧಶಬ್ದಕ್ಕೆ ಬಲವೆಂದು ಅರ್ಥವನ್ನು ಹೇಳಿದೆ.

**ಅಪ್ನಸ್ವತೀಷು ಉರ್ವರಾಸು ಇಷ್ಟನಿಃ— ಅಪ್ನಃ ದಂಸಃ** ಎಂದು ಇಪ್ಪತ್ತಾರು ಕರ್ಮನಾಮಗಳಲ್ಲಿ (ನಿ. ೩-೨) ಪಾಠಮಾಡಿರುವುದರಿಂದ ಅಪ್ನ ಶಬ್ದವು ಕರ್ಮ ಎಂಬ ಅರ್ಥವನ್ನು ಬೋಧಿಸುವುದು. ಯಜ್ಞಭೂಮಿಯ ಪರಿಶುದ್ಧಿಗಾಗಿ ಖನನ (ಅಗೆಯುವುದು) ಪ್ರೋಕ್ಷಣ (ನೀರಿನಿಂದ ತೊಳೆಯುವುದು) ಇವೇ ಮೊದಲಾದ ಕರ್ಮಗಳಿಂದಲೂ, ಬಹಳವಾದ ಗುಣಗಳಿಂದ ಕೂಡಿರುವ ಶ್ರೇಷ್ಠವಾದ ಯಜ್ಞವೇದಿಯಲ್ಲಿ ಅಗ್ನಿಯು ಪೂಜ್ಯನಾಗಿರುವನು ಎಂದು ಅರ್ಥವನ್ನು ವರ್ಣಿಸಿದೆ.

**ಆರ್ತನಾಸು ಇಷ್ಟನಿಃ—ಆರ್ತಾನ್ ಕರೋತೀತ್ಯಾರ್ತಯತಿ। ಆರ್ತಯಂತೀತ್ಯಾರ್ತನಾಃ ಪೃತನಾಃ ತಾಸು। ತಾಸಾಂ ಜಯಾಯ ಏಷ್ಟವ್ಯಃ ಯಷ್ಟವ್ಯೋ ವಾ।** ಸಂಕಟಕ್ಕೆ ಸಿಕ್ಕಿಸುವ ಅಥವಾ ಸಂಕಟವುಳ್ಳವರನ್ನಾಗಿ ಮಾಡುವ ಸೇನೆಗಳು ಆರ್ತನಾ ಎಂಬ ಶಬ್ದದಿಂದ ಬೋಧ್ಯವಾಗಿ ಇರುತ್ತವೆ. ಈ ಸೇನೆಗಳನ್ನು ಜಯಿಸುವುದಕ್ಕಾಗಿ ಅಗ್ನಿಯು ಪೂಜ್ಯನಾಗಿರುವನು ಎಂದು ವಿವರಿಸಿದೆ.

**ಯಜ್ಞಸ್ಯ ಕೇತುಃ—ಪ್ರಜ್ಞಾಪಕಃ ಕೇತುಸ್ಥಾನೀಯೋ ವಾ।** ಅಗ್ನಿಯು ಜ್ಞಾನವನ್ನುಂಟುಮಾಡತಕ್ಕವನು ಅಥವಾ ಜಯವನ್ನು ಸೂಚಿಸುವವನಾಗಿರುವನು ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು—

**ಕೇತುಃ ಕೇತಃ** ಎಂದು ಹನ್ನೊಂದು ಪ್ರಜ್ಞಾನಾಮಗಳಲ್ಲಿ (ನಿ. ೩-೧೩) ಪಾಠಮಾಡಿದ್ದಾರೆ. ಇದರಿಂದ ಪ್ರಜ್ಞಾ ಎಂದು ಅರ್ಥವಾಗುತ್ತದೆ.

**ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಂ।**
**ಭಾಗಂ ದೇವೇಭ್ಯೋ ವಿ ದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ॥**
(ಋ. ಸಂ. ೧೦-೮೫-೧೯)

ಎಂಬಲ್ಲಿ ದುರ್ಗಾಚಾರ್ಯರು **ಅಹ್ನಾಂ ಕೇತುಃ ಲಕ್ಷಣಂ ತತ್ಕಾಲೋಪಚಯಾಪಚಯಾಭ್ಯಾಂ ಹಿ ಪ್ರತಿಪತ್ಪ್ರಭೃತೀನಿ ಅಹಾನಿ ಲಕ್ಷ್ಯಂತೇ ಅಥವಾ ಅಹ್ನಾಂ ಕೇತುಃ ಕರ್ತಾ ಸ್ವಗತಿವಿಶೇಷೈಃ** ಚಂದ್ರನು ತನ್ನ ಗತಿವಿಶೇಷಗಳಿಂದ ಆಯಾಯ ಕಾಲದ ಹಾನಿವೃದ್ಧಿಗಳನ್ನು ಉಂಟುಮಾಡುವ ಕಾರಣ ಅಹಸ್ಸಿಗೆ ಲಕ್ಷ್ಯಕನಾಗಿರುವನು.

ಅಥವಾ ತನ್ನ ಗತಿವಿಶೇಷಗಳಿಂದ ಅಹಸ್ಸನ್ನು ನಿರ್ಮಿಸುವನು ಎಂದು ವಿವರಿಸಿ ಕೇತುಶಬ್ದಕ್ಕೆ ಪ್ರಜ್ಞಾಪಕಃ, ಕರ್ತಾ ಎಂದು ಎರಡು ವಿಧವಾದ ಅರ್ಥವನ್ನೂ ವಿವರಿಸಿರುವರು.

**ಮಹೋ ಅರ್ಣಸ್ಸರಸ್ವತೀ ಪ್ರ ಚೇತಯತಿ ಕೇತುನಾ । ಧಿಯೋ ವಿಶ್ವಾ ವಿ ರಾಜತಿ ।**

(ಋ. ಸಂ. ೧-೩-೧೨)

ಇಲ್ಲಿ ಕೇತು ಶಬ್ದಕ್ಕೆ ಕರ್ಮಣಾ ಪ್ರಜ್ಞಯಾ ವಾ ಎಂದು ಅರ್ಥಮಾಡಿದೆ. ಕರ್ಮವೆಂದೂ, ಅಥವಾ ಪ್ರಜ್ಞಾ ಎಂದೂ ಎರಡು ವಿಧವಾದ ಅರ್ಥವಾಗುತ್ತದೆ.

**ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**
**ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ಪ್ರತಿ ಗಾವೋಽರುಷೀರ್ಯಂತಿ ಮಾತರಃ ॥**

(ಋ. ಸಂ. ೧-೯೨-೧)

ಇಲ್ಲಿ ಕೇತು ಶಬ್ದಕ್ಕೆ ಪ್ರಜ್ಞಾನ ಎಂದು ಅರ್ಥವನ್ನು ವರ್ಣಿಸಿದೆ.

**ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ॥**

(ಋ. ಸಂ ೧-೫೦-೧)

ಇಲ್ಲಿ ಕೇತು ಶಬ್ದಕ್ಕೆ ರಶ್ಮಿ ಎಂದು ಅರ್ಥವನ್ನು ಹೇಳಿದೆ. ಅನೇಕಾರ್ಥವಾದ ಕೇತು ಶಬ್ದಕ್ಕೆ ಇಲ್ಲಿ ಪ್ರಜ್ಞಾಪಕ (ಲಕ್ಷಕ) ಎಂದು ಸಾಯಣರು ವಿವರಿಸಿರುವರು.

**ಹರ್ಷತಃ—ಹವಿರ್ಭಕ್ಷಣಾದತ್ಯಂತಹರ್ಷಯುಕ್ತಸ್ಯ ಯದ್ವಾ ಅಭಿಮತಫಲದಾನೇನ ಯಜಮಾನಾನ್ ಹರ್ಷಯಿತಃ ।** ಅಗ್ನಿಯು ಹವಿಸ್ಸನ್ನು ಸೇವಿಸುವುದರಿಂದ ಬಹಳ ಸಂತೋಷದಿಂದ ಇರುವವನು ಅಥವಾ ಯಜಮಾನರಿಗೆ ಇಷ್ಟಾರ್ಥಗಳನ್ನು ಕೊಡುವುದರಿಂದ ಅವರನ್ನು ಸಂತೋಷಗೊಳಿಸುವನು ಎಂದು ಅರ್ಥ.

**ಹೃಷೀವತಃ ಪಂಥಾಂ ವಿಶ್ವೇ ಜುಷಂತೆ ಶುಭೇ**—ಎಂಬ ವಾಕ್ಯದಿಂದ ಎಲ್ಲರೂ ಅಗ್ನಿಯನ್ನು ಪೂಜಿಸಿ ಅಥವಾ ಸಂತೋಷಪಡಿಸಿ ಐಹಿಕಾಮುಷ್ಮಿಕ ಫಲವನ್ನು ಸಾಧಿಸುವ ಮಾರ್ಗವನ್ನು ಅನುಸರಿಸುತ್ತಾರೆ. ಎಂದು ವಿವರಿಸಿ **ಶುಭೇ ನ ಪಂಥಾಂ ನರಃ** ಎಂಬ ಉಪಮಾನವನ್ನು ಹೇಳಿದೆ. ಈ ವಾಕ್ಯಕ್ಕೆ **ಲೋಕೇ ಮಾನುಷ್ಯಾಃ ಶೋಭನಾಯ ಸುಖಪ್ರಾಪ್ತಯೇ ಸರ್ವೈಃ ಗಂತವ್ಯಂ ನಿರ್ಭಯಂ ಪ್ರೌಢಮಾರ್ಗಮಿವ** ಲೋಕದಲ್ಲಿ ಮನುಷ್ಯರು ಸುಖವನ್ನು ಹೊಂದುವುದಕ್ಕಾಗಿ ಆಚರಿಸಬೇಕಾದ ಕರ್ಮಾಚರಣೆಯನ್ನು ಮಾಡಿ ಆ ಅಭ್ಯಾಸದಿಂದ ಆ ಫಲವನ್ನುಂಟುಮಾಡುವ ಮಾರ್ಗವನ್ನು ಅವಲಂಬಿಸುವಂತೆ ಎಂದು ಅರ್ಥಮಾಡಿ ಹೋಲಿಸಿದೆ.

**ನರಃ—ಮನುಷ್ಯಾಃ । ಮನುಷ್ಯಾಃ ನರಃ** ಎಂಬ ಇಪ್ಪತ್ತೈದು ಮನುಷ್ಯನಾಮಗಳಲ್ಲಿ (ನಿ. ೩-೭) ಪಠಿತವಾಗಿದೆ. **ನರಾ ಮನುಷ್ಯಾ ನೃತ್ಯಂತಿ ಕರ್ಮಸು.** (ನಿ. ೫-೧) ಎಂದು ನಿರುಕ್ತಕಾರರು ನರಾ ಎಂಬ ಪದಕ್ಕೆ ಆಯಾ ಕಾರ್ಯಗಳು ಎದಗಿದಾಗ ಆಯಾಯ ಕಾರ್ಯಮಾಡುತ್ತಾ ಶರೀರದ ಅಂಗಗಳನ್ನು ಅಲ್ಲಲ್ಲಿಗೆ ಚಲಿಸುವಂತೆ ಮಾಡುವ ಕಾರಣ **ನೃತ್ಯಂತಿ ಇತಿ ನರಾಃ** ಎಂದು ನರಶಬ್ದದ ರೂಪನಿಷ್ಪತ್ತಿಯನ್ನು ಹೇಳಿ ಅರ್ಥವನ್ನು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಶರ್ಧಃ**--ಶೃಧು ಕುತ್ಸಾಯಾಂ ಧಾತು. ಅಸುನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ.

**ಅಪ್ನಸ್ವತೀಷು**—ಅಪ್ ಶಬ್ದ. **ಆಪಃ ಕರ್ಮಾಖ್ಯಾಯಾಂ ಹ್ರಸ್ವಃ ನುಟ್ ಚ ವಾ** (ಉ. ಸೂ. ೪-೬೪೨) ಎಂಬುದರಿಂದ ಅಸುನ್ ಪ್ರತ್ಯಯ ನುಡಾಗಮ. ಅಪ್ನಃ ಆಸಾಂ ಸಂತೀತಿ ಅಪ್ನಸ್ವತ್ಯಃ. ಮತುಪ್ ಪ್ರತ್ಯಯ. ಅದುಪಧೆಯ ಪರವಾದುದರಿಂದ **ಮಾದುಪಧಾಯಾಶ್ಚ**—ಎಂಬುದರಿಂದ ವತ್ವ. **ತಸೌ ಮತ್ವರ್ಥೇ** ಎಂಬುದರಿಂದ ಭಸಂಜ್ಞಾ ಇರುವುದರಿಂದ ರುತ್ವಾದಿಗಳು ಬರುವುದಿಲ್ಲ. ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ಇಷ್ಟನಿಃ**—ಯಜ ದೇವಪೂಜಾಸಂಗತಿಕಾರಣದಾನೇಷು ಧಾತು. ಇದಕ್ಕೆ ಔಣಾದಿಕವಾದ ಅನಿಕ್ ಪ್ರತ್ಯಯ. ತತ್ಸಂನಿಯೋಗದಿಂದ ತುಡಾಗಮ. ಪ್ರತ್ಯಯ ಕಿತ್ತಾದುದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. **ವ್ರಶ್ಚಭ್ರಸ್ಜ ಮೃಜ**—ಎಂಬುದರಿಂದ ಜಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ತಕಾರಕ್ಕೆ ಷ್ಟುತ್ವ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಅಂತೋದಾತ್ತವಾಗುತ್ತದೆ.

**ಆರ್ತನಾಸು**—ಆರ್ತಾನ್ ಕರೋತಿ ಆರ್ತಯತಿ (ದುಃಖಿತರನ್ನಾಗಿ ಮಾಡುವುದು) **ಆರ್ತಯಂತೀ—ತ್ಯಾರ್ತಾ. ತತ್ಕರೋತಿ ತದಾಚಷ್ಟೇ** ಎಂಬರ್ಥದಲ್ಲಿ ಆರ್ತಶಬ್ದಕ್ಕೆ ಣಿಚ್. ಣಿಜಂತದ ಮೇಲೆ **ಣ್ಯಾಸಶ್ರಂಥೋ ಯುಚ್** (ಪಾ. ಸೂ. ೩-೩-೧೦೭) ಎಂಬುದರಿಂದ ಯುಚ್ ಪ್ರತ್ಯಯ. **ಣೇರಣಿಟಿ** (ಪಾ. ಸೂ. ೬-೪-೬) ಎಂಬುದರಿಂದ ಣಿಚಿಗೆ ಲೋಪ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. ವೃಷಾದಿಯಲ್ಲಿ ಸೇರಿರುವುದರಿಂದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಆದತ್**—ಅದ ಭಕ್ಷಣೇ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**. ಎಂಬುದರಿಂದ ಇಕಾರ ಲೋಪ. **ಅದಿ ಪ್ರಭೃತಿಭ್ಯಃ ಶಪಃ** ಸೂತ್ರದಿಂದ ಶಪಿಗೆ ಲುಕ್. **ಅದಃ ಸರ್ವೇಷಾಂ** (ಪಾ. ಸೂ. ೭-೩-೧೦೦) ಎಂಬುದರಿಂದ ಅಪೃಕ್ತ ಪ್ರತ್ಯಯಕ್ಕೆ ಅಡಾಗಮ. ಅಂಗಕ್ಕೆ ಆಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ಅಥವಾ ಆಙ್‌ಪೂರ್ವಕವಾದ ದಾಙ್ ಧಾತು. ವ್ಯತ್ಯಯದಿಂದ **ಆಙೋ ದೋಽನಾಸ್ಯ**—(ಪಾ. ಸೂ. ೧-೩-೨೦) ಎಂಬುದರಿಂದ ಆತ್ಮನೇಪದ ಬರುವುದಿಲ್ಲ. ಛಾಂದಸವಾಗಿ ಲುಙ್. ಚ್ಲಿಗೆ ಸಿಚಾದೇಶ. **ಗಾತಿಸ್ಥಾಘು**—(ಪಾ. ಸೂ ೨-೪-೭೭) ಎಂಬುದರಿಂದ ಸಿಚಿಗೆ ಲುಕ್. ಛಾಂದಸವಾಗಿ ಹ್ರಸ್ವ ಬರುತ್ತವೆ. ಕೇವಲವಾದ ಧಾತುವಾದರೂ **ಛಂದಸ್ಯಪಿ ದೃಶ್ಯತೇ** (ಪಾ. ಸೂ. ೬-೪-೭೩) ಎಂಬುದರಿಂದ ಅಜಾದಿಯಾಗಿದ್ದರೂ ಆಡಾಗಮ. ಆದುದರಿಂದ ಅವಗ್ರಹ ಪದಕಾಲದಲ್ಲಿ ಮಾಡಲಿಲ್ಲ.

**ಆದದಿಃ**—ಆಙ್ ಉಪಸರ್ಗ. ಡುದಾಙ್ ದಾನೇ ಧಾತು. **ಆದೃಗಮಹನ ಜನಃ ಕಿಕಿನೌ ಲಿಟ್ ಚ** (ಪಾ. ಸೂ ೩-೨-೧೭೧) ಎಂಬುದರಿಂದ ಕಿ ಪ್ರತ್ಯಯ. ಲಿಡ್ವದ್ಭಾವ ವಿಧಾನ ಮಾಡಿರುವುದರಿಂದ ದ್ವಿತ್ವ. ಅಭ್ಯಾಸಕ್ಕೆ

ಹ್ರಸ್ವ. **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅರ್ಹಣಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಸು) ಆಕಾರದೇಶ. ಲ್ಯುಟ್ ಪ್ರತ್ಯಯಾಂತವಾದುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬಾಧಕವಾಗಿ ವ್ಯತ್ಯಯದಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅಧ—**ಅಥ ಎಂಬಲ್ಲಿ ಛಾಂದಸವಾಗಿ ವರ್ಣವಿಕಾರ ಬಂದಿದೆ.

**ಜುಷಂತ**—ಜುಷೀ ಪ್ರೀತಿಸೇವನಯೋಃ ಧಾತು ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮ ಪುರುಷ ಬಹುವಚನಾಂತರೂಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪಂಥಾಮ್**— ಪಥಿನ್ ಶಬ್ದ. ದ್ವಿತೀಯಾ ಏಕವಚನದಲ್ಲಿಯೂ **ಪಥಿಮಥ್ಯೃಭುಕ್ಷಾಮಾತ್** (ಪಾ. ಸೂ. ೭-೧-೮೫) ಎಂಬುದರಿಂದ ವ್ಯತ್ಯಯದಿಂದ ಆತ್ವ ಬರುತ್ತದೆ **ಥೋನ್ಥಃ** ಎಂಬುದರಿಂದ ನ್ಥಾದೇಶ. **ಪಥಿಮಥೋಃ ಸರ್ವನಾಮಸ್ಥಾನೇ** (ಪಾ. ಸೂ. ೬-೧-೧೯೯) ಎಂಬುದರಿಂದ ಪ್ರತ್ಯಯಸ್ವರಕ್ಕೆ ಅಪವಾದವಾಗಿ ಆದ್ಯುದಾತ್ತಸ್ವರ ಬರುತ್ತದೆ.

**ಶುಭೇ**—ಶುಭ ದೀಪ್ತೌ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಚತುರ್ಥೀ ಏಕವಚನಾಂತ ರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ದ್ವಿತಾ ಯದೀಂ ಕೀಸ್ತಾಸೋ ಅಭಿದ್ಯವೋ ನಮಸ್ಯಂತ ಉಪವೋಚಂತ
ಭೃಗವೋ ಮಥ್ನಂತೋ ದಾಶಾ ಭೃಗವಃ।
ಅಗ್ನಿರೀಶೇ ವಸೂನಾಂ ಶುಚಿರ್ಯೋ ಧರ್ಣಿರೇಷಾಂ।
ಪ್ರಿಯಾಁ ಅಪಿಧೀಁರ್ವನಿಷೀಷ್ಟ ಮೇಧಿರ ಆ ವನಿಷೀಷ್ಟ ಮೇಧಿರಃ ॥ ೭ ॥

॥ ಪದಪಾಠಃ ॥

ದ್ವಿತಾ । ಯತ್ । ಈಂ । ಕೀಸ್ತಾಸಃ । ಅಭಿಽದ್ಯವಃ । ನಮಸ್ಯಂತಃ । ಉಪಽವೋಚಂತ । ಭೃಗವಃ ।
ಮಥ್ನಂತಃ । ದಾಶಾ । ಭೃಗವಃ ।

ಅಗ್ನಿಃ । ಈಶೇ । ವಸೂನಾಂ । ಶುಚಿಃ । ಯಃ । ಧರ್ಣಿಃ । ಏಷಾಂ ।
ಪ್ರಿಯಾನ್ । ಅಪಿಽಧೀನ್ । ವನಿಷೀಷ್ಟ । ಮೇಧಿರಃ । ಆ । ವನಿಷೀಷ್ಟ । ಮೇಧಿರಃ । ॥ ೭ ॥

॥ ಸಾಯಣಭಾಷ್ಯಂ ॥

ಯದ್ಯಂ ದ್ವಿತಾ ದ್ವಿತ್ವಮಾಪನ್ನಂ ದ್ವಿಪ್ರಕಾರಂ ಶ್ರೌತಸ್ಮಾರ್ತಭೇದೇನ ದ್ವಿತ್ವಮಾಪನ್ನಂ । ಯದ್ವಾ । ಉಪಲಕ್ಷಣಮೇತತ್ । ಆಹವನೀಯಾದಿರೂಪೇಣ ನಾನಾವಿಧಂ । ಯದ್ವಾ । ದ್ವಿತಾ ದ್ವಿವಿಧಾಯೈಹಿಕಾಮುಷ್ಮಿಕಫಲಾಯೋಭಯಾಯ ॥ ವಿಭಕ್ತೇರಾಜಾದೇಶಃ ॥ ಈಮಿಮಮಗ್ನಿಂ ಕೀಸ್ತಾಸಃ ಕೀರ್ತನಂ ಕುರ್ವಂತಃ ಸ್ತೋತಾರಃ ॥ ಪಚಾದ್ಯಚಿ ಛಾಂದಸಂ ಸತ್ವಂ ॥ ಅಭಿದ್ಯವೋಽಭಿತೋ ದ್ಯೋತಮಾನಾ ನಮಸ್ಯಂತೋ ನಮಸ್ಕಾರೋಪಲಕ್ಷಿತಮುಪಸ್ಥಾನಂ ಕುರ್ವಂತೋ ಭೃಗವೋ ಭೃಗುಗೋತ್ರೋತ್ಪನ್ನಾ ಮಹರ್ಷಯ ಉಪವೋಚಂತ ಉಪೇತ್ಯ ಬ್ರುವಂತಿ । ಕಿಂ ಕುರ್ವಂತಃ । ದಾಶಾ ದಾನೇನ ನಿಮಿತ್ತಭೂತೇನ ಹವಿರ್ದಾನಾರ್ಥಂ ಮಥ್ನಂತೋಽರಣ್ಯಾಮಗ್ನಿಮಂಥನಂ ಕುರ್ವಂತಃ ತಥಾ ಭೃಗವೋ ಭ್ರಷ್ಟಾರೋ ಹವಿಷಾಂ ಪಾಪಾನಾಂ ವಾ । ಕಿಂಚ ಯೋಽಗ್ನಿಃ ಶುಚಿರ್ದೀಪ್ತೋ ಧರ್ಣಿರ್ಧಾರಣಕುಶಲೋಽಯಮಗ್ನಿರೇಷಾಂ ದೀಯಮಾನಾನಾಂ ವಸೂನಾಂ ಹವಿರ್ಲಕ್ಷಣಾನಾಮೀಶೇ । ಈಷ್ಟೇ । ಸಮರ್ಥೋ ಭವತಿ ॥ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥ ಯದ್ವಾ । ಏಷಾಂ ದೃಶ್ಯಮಾನಾನಾಂ ಮಣಿಮುಕ್ತಾದೀನಾಂ ವಸೂನಾಮೀಶೇ । ಈಷ್ಟೇ । ಸಮರ್ಥೋ ಭವತಿ ಪ್ರದಾತುಮಿತಿ ಶೇಷಃ । ಕಿಂಚಾಯಮಗ್ನಿರ್ಮೇಧಿರಃ । ಮೇಧೋ ಯಜ್ಞಃ । ತದ್ವಾನ್ ಸ್ವಯಂ ಯಷ್ಟವ್ಯತ್ವೇನ ಪ್ರಧಾನಭೂತಃ ಸನ್ ಪ್ರಿಯಾನ್ ಸ್ವಪ್ರೀತಿಹೇತೂನಾಜ್ಯಾದೀನಪಿಧೀನ್ ಪರ್ಯಾಪ್ತಿಪರ್ಯಂತಂ ದತ್ತವಾನ್ವನಿಷೀಷ್ಟ । ಸಂಭಕ್ತವಾನ್ ।। ಸಂಭಜತಾಂ ವಾ । ತಥಾ ಮೇಧಿರೋ ಮೇಧಾವಾನಸಾವಾ ವನಷೀಷ್ಟ । ಅನ್ಯದೇವತಾಕೇಷ್ವಪಿ ಯಜ್ಞೇಷು ಸ್ವಯಮಾಜ್ಯಭಾಗಪ್ರಯಾಜಾದಿರೂಪಂ ಹವಿಃ ಸಂಭಜತೇ ॥

॥ ಪ್ರತಿಪದಾರ್ಥ ॥

**ದ್ವಿತಾ**—(ಶ್ರೌತಸ್ಮಾರ್ತ ರೂಪದಿಂದ) ಎರಡು ಪ್ರಕಾರವಾದ ಆಹವನೀಯಾದಿ ನಾನಾರೂಪವಾದ ಅಥವಾ ಐಹಿಕಾಮುಷ್ಮಿಕ ರೂಪವಾದ ಎರಡು ಫಲಪ್ರಾಪ್ತಿಗಾಗಿ) । **ಯತ್**—ಯಾವ । **ಈಂ**—ಅಗ್ನಿಯನ್ನು । **ಕೀಸ್ತಾಸಃ**—ಸ್ತುತಿಸುವವರೂ । **ಅಭಿದ್ಯವಃ**—ಪ್ರಸಿದ್ಧಿಪಡಿಸುವವರೂ । **ನಮಸ್ಯಂತಃ**—(ಉಪಸ್ಥಾನರೂಪವಾಗಿ) ನಮಸ್ಕರಿಸುವವರೂ (ಆದ) । **ಭೃಗವಃ**—ಭೃಗುವಂಶೋತ್ಪನ್ನರಾದ ಋಷಿಗಳು । **ಭೃಗವಃ**—ಹವಿರ್ದಾನ ಮಾಡುವವರಾಗಿ ಅಥವಾ ಪಾಪಗಳನ್ನು ಕಳೆದುಕೊಳ್ಳುವವರಾಗಿ । **ದಾಶಾ**—ಹವಿರ್ದಾನಾರ್ಥವಾಗಿ । **ಮಥ್ನಂತಃ**—(ಅರಣಿಯಲ್ಲಿ)

ಮಥನಮಾಡುತ್ತಾ । **ಉಪವೋಚಂತೆ**—ಸಮೀಪಿಸಿ ಸ್ತುತಿಸುತ್ತಾರೆಯೋ (ಮತ್ತು)। **ಯಃ ಅಗ್ನಿಃ**—ಯಾವ ಅಗ್ನಿಯು । **ಶುಚಿಃ**—ದೀಪ್ತನಾಗಿ । **ವಿಶಾಂ ವಸೂನಾಂ**—ಈ (ಮಣಿಮುಕ್ತಾದಿಗಳ) ಹವಿರಾದಿಗಳ । **ಧರ್ಣಿಃ**—ರಕ್ಷಕನಾಗಿ। **ಈಶೇ**—(ಅವುಗಳನ್ನು) ದಾನಮಾಡಲು ಸಮರ್ಥನಾಗಿರುವನೋ। (**ಸಃ**—ಆ ಅಗ್ನಿಯು)। **ಮೇಧಿರಃ**—ಯಜ್ಞದಲ್ಲಿ ಪ್ರಧಾನಭೂತನಾಗಿ । **ಅಪಿಧೀನ್**—ತೃಪ್ತಿಯಾಗುವವರೆಗೂ ದತ್ತವಾದ । **ಪ್ರಿಯಾನ್**—ಪ್ರಿಯವಾದ ಆಜ್ಯಾದಿಗಳನ್ನು । **ವನಿಷೀಷ್ಟ**—ಸೇವಿಸಲಿ (ಸೇವಿಸುತ್ತಾನೆ) । **ಮೇಧಿರಃ**—ಮೇಧಾವಿಯಾದ ಅಗ್ನಿಯು । **ಆ ವನಿಷೀಷ್ಟ**—(ಇತರ ದೇವತಾಕವಾದ ಯಜ್ಞಗಳಲ್ಲಿಯೂ) ಹವಿರ್ಭಾಗವನ್ನು ಸೇವಿಸಲಿ.

॥ ಭಾವಾರ್ಥ ॥

ಶ್ರೌತಸ್ಮಾರ್ತಗಳೆಂಬ ಎರಡು ರೂಪವಾದ ಅಥವಾ ಆಹವನೀಯಾದಿ ನಾನಾರೂಪನಾದ ಈ ಅಗ್ನಿಯನ್ನೇ (ಐಹಿಕಾಮುಷ್ಮಿಕರೂಪವಾದ ಎರಡು ವಿಧವಾದ ಫಲಪ್ರಾಪ್ತಿಗಾಗಿ) ಸ್ತುತಿಸುವವರೂ ಸರ್ವತ್ರ (ಆತನನ್ನು) ಪ್ರಸಿದ್ಧಿಪಡಿಸುವವರೂ, (ಉಪಸ್ಥಾನ ರೂಪವಾಗಿ) ನಮಸ್ಕಾರಮಾಡುವವರೂ ಆದ ಭೃಗುಋಷಿಗಳು ಹವಿರಾಧಾನಕ್ಕಾಗಿ ಅಗ್ನಿಮಥನಮಾಡುತ್ತಾ (ಅಗ್ನಿಯನ್ನು) ಸಮೀಪಿಸಿ ಸ್ತುತಿಸುತ್ತಾರೆ, ದೀಪ್ತನಾದ ಅಗ್ನಿಯು ದೀಯಮಾನಹವಿರಾದಿಗಳಿಗೆ (ಮಣಿಮುಕ್ತಾದಿಗಳಿಗೆ) ಆಧಾರಭೂತನಾದುದರಿಂದ (ಅವುಗಳನ್ನು ದಾನಮಾಡಲು) ಸಮರ್ಥನಾಗಿರುತ್ತಾನೆ; ಮತ್ತು (ಯಜ್ಞದಲ್ಲಿ) ಪ್ರಧಾನನಾಗಿದ್ದು (ದತ್ತವಾದ) ಪ್ರಿಯವಾದ (ಹವಿರಾದಿಗಳನ್ನು) ತೃಪ್ತಿಯಾಗುವವರೆಗೂ ಸ್ವೀಕರಿಸಲಿ; (ಇತರ ದೇವತಾಕವಾದ ಯಜ್ಞಗಳಲ್ಲಿಯೂ) ಮೇಧಾವಿಯಾದ ಈತನು (ತನ್ನ ಭಾಗವನ್ನು) ಸ್ವೀಕರಿಸಲಿ.

English Translation.

The descendants of Bhrigu, celebrating him (Agni) in both his forms, glorifying him, and paying him homage, proclaim his praises; the descendants of Bhrigu, rubbing (the sticks to kindle flame) for the oblation. For the radiant Agni, who is the guardian of all these treasures, has power (to distribute them). May he, the rcceiver of sacrifices, partake of the agreeable (offerings) given to satiety; may he, the receiver of sacrifices, partake (of the oblations).

॥ ವಿಶೇಷವಿಷಯಗಳು ॥

**ದ್ವಿತಾ ಈಂ ಕೀಸ್ತಾಸಃ—ದ್ವಿತ್ವಮಾಪನ್ನಂ ದ್ವಿಪ್ರಕಾರಂ ಶ್ರೌತಸ್ಮಾರ್ತಭೇದೇನ ದ್ವಿತ್ವಮಾಪನ್ನಂ । ಯದ್ವಾ ದ್ವಿವಿಧಾಯ ಐಹಿಕಾಮುಷ್ಮಿಕಫಲಾಯ ಉಭಯಾಯ ಇಮಮಗ್ನಿಂ ಕೀರ್ತನಂ ಕುರ್ವಂತಃ ಸ್ತೋತಾರಃ** । ದ್ವಿತಾ ಎಂಬ ಪದಕ್ಕೆ ಮೊದಲನೆಯದಾಗಿ ಅಗ್ನಿಯನ್ನು ಶ್ರೌತಸೂತ್ರದಲ್ಲಿ ಉಕ್ತವಾಗಿರುವ ಯಜ್ಞಾಚರಣೆಗಳ ಕ್ರಮದಿಂದಲೂ ಗೃಹ್ಯಸೂತ್ರಗಳಲ್ಲಿ ಉಕ್ತವಾಗಿರುವ ಸ್ಮಾರ್ತಕರ್ಮಾಚರಣೆಯ ಕ್ರಮದಿಂದಲೂ (ಆರಾಧನೆ) ಸೇವಿಸುವರು ಎಂದು ಅರ್ಥಮಾಡಿದೆ. ಎರಡನೆಯದಾಗಿ ಈ ಲೋಕದಲ್ಲಿ ಅನುಭವಿಸಬಹುದಾದ ಫಲವು ಉಂಟಾಗುವುದಕ್ಕೂ ಮತ್ತು ಪರಲೋಕದಲ್ಲಿ ಪುಣ್ಯಲೋಕದ ಸುಖಭೋಗವು ಉಂಟಾಗುವುದಕ್ಕೂ ಅಗ್ನಿಯನ್ನು ಪೂಜಿಸುವರು ಎಂದೂ ಅರ್ಥವನ್ನು ವರ್ಣಿಸಿದೆ.

**ಭೃಗವೋ ಮಥ್ನಂತೋ ದಾಶಾ ಭೃಗವಃ—ಭೃಗುಗೋತ್ರೋತ್ಪನ್ನಾ ಮಹರ್ಷಯಃ ಹವಿರ್ದಾನಾರ್ಥಂ ಅರಣ್ಯಾಂ ಅಗ್ನಿಮಥನಂ ಕುರ್ವಂತಃ । ತಥಾ ಭೃಗವಃ ಭ್ರಷ್ಟಾರೋ ಪಾಪಾನಾಂ ವಾ ।** ಭೃಗವಃ ಎಂಬ ಶಬ್ದವನ್ನು ಎರಡು ಸಾರಿ ಇಲ್ಲಿ ಹೇಳಿದೆ. ಮೊದಲನೆಯ ಭೃಗವಃ ಎಂಬ ಪದಕ್ಕೆ ಭೃಗು ಋಷಿಯ ಗೋತ್ರದಲ್ಲಿ ಉತ್ಪನ್ನವಾದ ಮಹರ್ಷಿಗಳು ಎಂದು ಅರ್ಥವನ್ನು ವರ್ಣಿಸಿದೆ ಎರಡನೆಯ ಭೃಗುವಃ ಎಂಬ ಪದಕ್ಕೆ ಪಾಪಗಳನ್ನು ನಾಶಮಾಡುವ ಮಹರ್ಷಿಗಳು ಎಂದು ಅರ್ಥವನ್ನು ವಿವರಿಸಿ ಅಗ್ನಿಗೆ ಹವಿಸ್ಸನ್ನು ಅರ್ಪಿಸುವುದಕ್ಕಾಗಿ (ಈ ಮಹರ್ಷಿಗಳು) ಪಾಪಗಳನ್ನು ಪರಿಹರಿಸುವ ಭೃಗುಗೋತ್ರೋತ್ಪನ್ನರಾದ ಮಹರ್ಷಿಗಳು ಅರಣಿಗಳಲ್ಲಿ ಅಗ್ನಿಯನ್ನು ಮಂಥನಮಾಡಿ ಉತ್ಪನ್ನಮಾಡುತ್ತಾರೆ ಎಂದು ಹೇಳಿದೆ.

ನಿರುಕ್ತಕಾರರು **ಭೃಗುರರ್ಚಿಷಿ ಸಂಬಭೂವ ಭೃಗುರ್ಭೃಜ್ಯಮಾನೋ ನ ದೇಹೇ ।** (ನಿ.೩-೧೭). ಎಂದು ಭೃಗುಶಬ್ದದ ಅರ್ಥವನ್ನು ವಿವರಿಸುತ್ತಾ ಭೃಗುರೂಪಿಯು ಅಗ್ನಿಯ ಜ್ವಾಲೆಯಿಂದ ಉತ್ಪನ್ನನಾಗಿರುವನು ಎಂದ ವರ್ಣಿಸಿರುವರು.

ವಾಕ್ಯಗ್ರಂಥಗಳಲ್ಲಿ ನಿಪಾತಗಳು ವಾಕ್ಯವನ್ನು ಪೂರ್ತಿಮಾಡುವುದಕ್ಕಾಗಿ ಪ್ರಯುಕ್ತವಾಗಿರುವುದರಿಂದ ಪದ ಪೂರಕಗಳಾಗಿರುತ್ತವೆ. ಛಂದೋಬದ್ಧವಾದ ಪ್ರಯೋಗಗಳಲ್ಲಿ ಕಂ, ಈ, ಇತ್, ಉ, ಎಂಬ ನಿಪಾತಗಳಿಗೆ ಅರ್ಥವಿಲ್ಲದ ಕಾರಣ ಇವುಗಳು ಅನರ್ಥಕಗಳೆಂದೂ ಪದಪೂರಕಗಳಾಗಿ ಇವುಗಳು ಇರುತ್ತವೆ ಎಂಮೂ (ನಿ. ೧-೯) ಯಾಸ್ಕರು ವಿವರಿಸಿದ್ದಾರೆ.

**ಏನೋಂನಂ ಸೃಜತಾ ಸುತೇ ಮಂದಿಮಿಂದ್ರಾಯ ಮಂದಿನೇ । ಚಕ್ರಿಂ ವಿಶ್ವಾನಿ ಚಕ್ರಯೇ ॥**
(ಋ. ಸಂ. ೧-೯-೨)

ಇಲ್ಲಿ ಈಮ್ ಎಂಬ ಪದವು ಪದಪೂರಕವಾಗಿರುವುದೆಂದು ಉದಹರಿಸಿದೆ. ಮತ್ತು **ಪರಿ ಈಮ್ ಸೀಮ್ ಇತಿ ವ್ಯಾಖ್ಯಾತಾಃ** ಎಂದು (ನಿ. ೫-೨೮) ರಲ್ಲಿ ಉಕ್ತವಾಗಿದೆ.

**ಅಗ್ನಿಃ ಶುಚಿಃ ಧರ್ಣಿಃ ಏಷಾಂ ವಸೂನಾಂ ಈಶೇ—ದೀಪ್ತಃ ಧಾರಣಕುಶಲಃ ಅಯಮಗ್ನಿಃ ದೀಯಮಾನಾನಾಂ ಹವಿರ್ಲಕ್ಷಣಾನಾಂ ಈಷ್ಟೇ ಸಮರ್ಥೋ ಭವತಿ । ಯದ್ವಾ ಏಷಾಂ ದೃಶ್ಯಮಾನಾನಾಂ ಮಣಿಮುಕ್ತಾದೀನಾಂ ವಸೂನಾಂ ಪ್ರದಾತುಂ ಸಮರ್ಥೋ ಭವತಿ ।**

ಅಗ್ನಿಯು ಕಾಂತಿಯುಳ್ಳ ತೇಜಸ್ಸುಗಳಿಂದ ಯುಕ್ತನಾಗಿ ಇರುವನು. ಇತರ ದೇವತೆಗಳ ಹವಿಸ್ಸುಗಳನ್ನು ಧರಿಸುವುದರಲ್ಲಿ ಸಮರ್ಥನಾಗಿರುವನು. ಹವಿಸ್ಸಿನರೂಪವಾದ ಅನ್ನಗಳ ವಿಷಯದಲ್ಲಿ ಸ್ವಾಮಿಯಾಗಿರುವನು. ಅಥವಾ ರತ್ನ ಮುತ್ತು, ಇವೇ ಮೊದಲಾದ ಧನಗಳನ್ನು ಯಜಮಾನರಿಗೆ ಅನುಗ್ರಹಿಸಲು ಸಮರ್ಥನಾಗಿರುವನು ಎಂದು ಅರ್ಥವನ್ನು ವಿವರಿಸಿದೆ. ನಿರುಕ್ತಕಾರರು.

**ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ ।**
**ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ ॥**
(ಋ. ಸಂ. ೨-೧-೧)

ಎಂಬ ಋಕ್ಕನ್ನು ಉದಹರಿಸಿ **ಶುಚಿಃ ಶೋಚತೇರ್ಜ್ವಲತಿಕರ್ಮಣಃ ಅಯಮಪೀತರಃ ಶುಚಿಃ ಏತಸ್ಮಾದೇವ ಜ್ವಲತಿ** ಎಂಬ ಅರ್ಥವುಳ್ಳ ಶುಚ್ ಧಾತುವಿನಿಂದ ನಿಷ್ಪನ್ನವಾದ ಶುಚಿ ಎಂಬ ಪದಕ್ಕೆ ಅಗ್ನಿ ಎಂದು ಅರ್ಥವನ್ನು

ವಿವರಿಸಿದೆ. ಮತ್ತು ಈ ಅಗ್ನಿಯು ಲೌಕಿಕಾಗ್ನಿಯಾಗಿರುವುದು. ಎಂದು ಮತಾಂತರವನ್ನು ಹೇಳಿ ಪಾಪಗಳು ಈ ಅಗ್ನಿಯಿಂದ ಹೋಗುವುವು ಎಂದು ಈ ಅಗ್ನಿಯ ಮಹಿಮೆಯನ್ನು ವರ್ಣಿಸಿದ್ದಾರೆ.

**ವಸು** ಶಬ್ದವು ಅನೇಕಾರ್ಥ ಬೋಧಕವಾಗಿದ್ದರೂ ಇಲ್ಲಿ ಧನ ಮತ್ತು ಹವಿಸ್ಸಿನ ರೂಪವಾದ ಅನ್ನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಮೇಧಿರಃ—ಮೇಧೋ ಯಜ್ಞಃ ತದ್ವಾನ್ ಸ್ವಯಂ ಯಷ್ಟೃತ್ವೇನ ಪ್ರಧಾನಭೂತಃ ।** ಮೇಧ ಶಬ್ದವು ಯಜ್ಞವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಅಗ್ನಿಯು ಯಜ್ಞವನ್ನು ಮಾಡುವವರಿಗೆ ತಾನೇ ಪ್ರಧಾನ ದೇವತೆಯಾಗಿರುವನು. ಎಂದು ವರ್ಣಿಸಿದೆ.

**ಮೇಧಿರಃ ಅವನಿಷೀಷ್ಟ—ಮೇಧಾವಾನ್ ಅಸೌ ಅನ್ಯದೇವತಾಕೇಷ್ವಪಿ ಯಜ್ಞೇಷು ಸ್ವಯಂ ಆಜ್ಯಭಾಗಪ್ರಯಾಜಾದಿರೂಪಂ ಹವಿಃ ಸಂಭಜತೇ ।** ಇಲ್ಲಿ ಮೇಧಿರ ಶಬ್ದಕ್ಕೆ ಮೇಧಾವಾನ್ ಮೇಧಾವಿ ಎಂದು ಅರ್ಥಮಾಡಿ ಮೇಧಾವಿಯಾದ ಅಗ್ನಿಯು ಇತರ ದೇವತೆಗಳ ಉದ್ದೇಶವಾಗಿ ಆಚರಿಸುವ ಯಜ್ಞಗಳಲ್ಲಿಯೂ ಕೂಡ ತಾನು ತನ್ನ ಹವಿಸ್ಸಿನ ಭಾಗಗಳನ್ನು ಬೇರೆಯಾಗಿ ಹೊಂದುತ್ತಾನೆ. ಮತ್ತು ಅದನ್ನು ಪ್ರತ್ಯೇಕವಾಗಿ ಇರುವಂತೆ ವಿಂಗಡಿಸಿಕೊಳ್ಳುತ್ತಾನೆ. ಎಂದು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ದ್ವಿತಾ**— ಪ್ರಕಾರಾರ್ಥದಲ್ಲಿ ಧಾ ಪ್ರತ್ಯಯ. ಅದಕ್ಕೆ ಛಾಂದಸವಾಗಿ ತಕಾರಾದೇಶ. ಎರಡನೇ ವ್ಯಾಖ್ಯಾನದಲ್ಲಿ **ಸುಪಾಂ ಸುಲುಕ್** (ಪಾ. ಸೂ. ೭.೧-೩೯) ಎಂಬುದರಿಂದ ವಿಭಕ್ತಿಗೆ ಆಚಾದೇಶ. ಚಿತ್ತ್ವಾದುದರಿಂದ ಅಂತೋದಾತ್ತ ಸ್ವರ ಬರುತ್ತದೆ.

**ಕೀಸ್ತಾಸಃ**—ಕ್ಷತ ಸಂಶಬ್ದನೇ ಧಾತು. **ಉಪಧಾಯಾಶ್ಚ**—(ಪಾ. ಸೂ. ೭-೧-೧೦೧) ಎಂಬುದರಿಂದ ಉಪಧಾ ಯಕಾರಕ್ಕೆ ಇತ್ವ. ರಪರವಾಗಿ ಬರುತ್ತದೆ. **ಉಪಧಾಯಾಂ ಚ**—(ಪಾ. ಸೂ. ೮-೨-೭೮) ಎಂಬುದರಿಂದ ಅದಕ್ಕೆ ದೀರ್ಘ. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಛಾಂದಸವಾಗಿ ಸಕಾರವು ರೇಫಕ್ಕೆ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ.

**ಅಭಿದ್ಯವಃ**-ಅಭಿಗತಾ ದ್ಯೌಃ ಯೈಸ್ತೇ ಅಭಿದ್ಯವಃ. ಅಭಿ ಎಂಬುದು ಪ್ರಾತಿಪದಿಕಸ್ವರದಿಂದ ಅಂತೋದಾತ್ತ ವಾಗುತ್ತದೆ. ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ನಮಸ್ಯಂತಃ-ನಮೋವರಿವಶ್ಚಿತ್ರಜಃ ಕ್ಯಚ್**—(ಪಾ.ಸೂ. ೩-೧-೧೯) ಎಂಬುದರಿಂದ ಪೂಜಾರ್ಥದಲ್ಲಿ ಕ್ಯಚ್. ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಪ್ರಥಮಾ ಬಹುವಚನಾಂತರೂಪ. ಕ್ಯಚ್ ಸ್ವರ ಉಳಿಯುತ್ತದೆ.

**ಉಪವೋಚಂತ**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಲುಙ್ ಛಾಂದಸವಾಗಿ ವರ್ತಮಾನಾರ್ಥ ದಲ್ಲಿ ಬರುತ್ತದೆ. ಪ್ರಥಮಪುರುಷ ಬಹುವಚನದಲ್ಲಿ ಝಕಾರಕ್ಕೆ ಅಂತಾದೇಶ ಚ್ಲಿಬಂದಾಗ **ಬ್ರುವೋವಚಿಃ** (ಪಾ. ಸೂ.

೨-೪-೫೩) ಎಂಬುದರಿಂದ ವಚ್ಯಾದೇಶ. **ಅಸ್ಯತಿವಕ್ತಿಖ್ಯಾತಿಭ್ಯೋಽಙ್** ಎಂಬುದರಿಂದ ಚ್ಲಿಗೆ ಅಙಾದೇಶ **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಉಮಾಗಮ. **ಬಹುಲಂಛಂದಸ್ಯಮಾಙ್‍ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. ಉದಾತ್ತವುಳ್ಳ ತಿಙಂತ ಪರವಾದುದರಿಂದ **ತಿಙಿ ಚೋದಾತ್ತವತಿ** (ಪಾ. ಸೂ. ೮-೨-೭೧) ಎಂಬುದರಿಂದ ಗತಿಗೆ (ಉಪ) ನಿಘಾತಸ್ವರ ಬರುತ್ತದೆ.

**ಮಥ್ನಂತಃ**—ಮಂಥ ವಿಲೋಡನೇ. ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶತೃ ಪ್ರತ್ಯಯ. ಶ್ನಾ ವಿಕರಣ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಆಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ದಾಶಾ**—ದಾಶೃ ದಾನೇ. ಧಾತು. ಕ್ವಿಪ್ ಪ್ರತ್ಯಯ. ತೃತೀಯಾ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಈಶೇ**—ಈಶ ಐಶ್ವರ್ಯೇ. ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತ ಆತ್ಮನೇಪದಾನಾಂ**—ಎಂಬುದರಿಂದ ಟಿಗೆ ಏತ್ವ. **ಅದಿಪ್ರಭೃತಿಭ್ಯ ಶಪಃ** ಎಂಬುದರಿಂದ ಶಪಿಗೆ ಲುಕ್. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯ ತಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಧರ್ಣಿಃ**—ಧೃಞ್ ಧರಣೇ. ಧಾತು. ಔಣಾದಿಕ ನಿಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಪ್ರತ್ಯಯಸ್ವರದಿಂದ ಅಂತೋದಾತ್ತ.

**ಅಪಿಧೀನ್**—ಡುಧಾಞ್ ಧಾರಣಪೋಷಣಯೋಃ ಧಾತು. **ಉಪಸರ್ಗೇ ಘೋಃ ಕಿಃ** (ಪಾ. ಸೂ. ೩-೩-೯೨) ಎಂಬುದರಿಂದ ಕಿಪ್ರತ್ಯಯ. **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಧಾತುವಿನ ಆಕಾರಕ್ಕೆ ಲೋಪ. ಪ್ರಾದಿಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ವನಿಷೀಷ್ಟ**—ವನ ಸಂಭಕ್ತೌ ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಿಙ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮೇಧಿರಃ**—ಮೇಧೃ ಮೇಧಾಹಿಂಸನಯೋಃ ಧಾತು. ಇದಕ್ಕೆ ಔಣಾದಿಕವಾದ ಇರನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ವಿಶ್ವಾಸಾಂ ತ್ವಾ ವಿಶಾಂ ಪತಿಂ ಹವಾಮಹೇ ಸರ್ವಾಸಾಂ ಸಮಾನಂ
ದಂಪತಿಂ ಭುಜೇ ಸತ್ಯಗಿರ್ವಾಹಸಂ ಭುಜೇ ।
ಅತಿಥಿಂ ಮಾನುಷಾಣಾಂ ಪಿತುರ್ನ ಯಸ್ಯಾಸಯಾ ।
ಅಮೀ ಚ ವಿಶ್ವೇ ಅಮೃತಾಸ ಆ ವಯೋ ಹವ್ಯಾ ದೇವೇಷ್ವಾ ವಯಃ ॥ ೮ ॥

॥ ಪದಪಾಠಃ ॥

ವಿಶ್ವಾಸಾಂ । ತ್ವಾ । ವಿಶಾಂ । ಪತಿಂ । ಹವಾಮಹೇ । ಸರ್ವಾಸಾಂ । ಸಮಾನಂ । ದಂಽಪತಿಂ । ಭುಜೇ ।
ಸತ್ಯಽಗಿರ್ವಾಹಸಂ । ಭುಜೇ ।
ಅತಿಥಿಂ । ಮಾನುಷಾಣಾಂ । ಪಿತುಃ । ನ । ಯಸ್ಯ । ಆಸಯಾ ।
ಅಮೀ ಇತಿ । ಚ । ವಿಶ್ವೇ । ಅಮೃತಾಸಃ । ಆ । ವಯಃ । ಹವ್ಯಾ । ದೇವೇಷು । ಆ । ವಯಃ ॥ ೮ ॥

॥ ಸಾಯಣಭಾಷ್ಯಂ ॥

ವಿಶ್ವಾಸಾಂ ಸರ್ವಾಸಾಂ ವಿಶಾಂ ಪ್ರಜಾನಾಂ ಯಜಮಾನಾನಾಂ ಪತಿಮಭಿಮತಫಲದಾನೇನ ಪಾಲಕಂ ಹವಾಮಹೇ । ಆಹ್ವಯಾಮಃ । ನ ಕೇವಲಂ ಯಜಮಾನಾನಾಂ ಕಿಂತು ಸರ್ವಾಸಾಂ ಪ್ರಜಾನಾಂ ಸಮಾನಮೇಕರೂಪಂ ದಹನಪಚನಾದ್ಯುಪಕಾರಸ್ಯ ಸರ್ವೇಷಾಂ ಸಮತ್ವಾತ್ । ತಥಾ ದಂಪತಿಂ ಗಾರ್ಹಪತ್ಯಾದಿರೂಪೇಣ ಗೃಹಸ್ಯ ಪಾಲಕಂ । ದಮ ಇತಿ ಗೃಹನಾಮ ದಮೇ ಕೃತ್ತಿರಿತಿ ತನ್ನಾಮಸು ಪಾಠಾತ್ ॥ ಅಕಾರಲೋಪಶ್ಛಾಂದಸಃ ॥ ಕಿಮರ್ಥಂ । ಭುಜೇ ಭೋಗಾಯ ಹವಾಮಹೇ । ಆಹ್ವಯಾಮಃ । ಪುನಃ ಸ ಏವ ವಿಶೇಷ್ಯತೇ । ಸತ್ಯಗಿರ್ವಾಹಸಂ ಯಥಾರ್ಥಭೂತಾನಾಮವಿಸಂವಾದಿಫಲಾನಾಂ ಸ್ತುತಿರೂಪಾಣಾಂ ಗಿರಾಂ ವೋಢಾರಂ। ಯದ್ವಾ। ಗಿರೋ ಮಂತ್ರರೂಪಾ ವಹಂತೀತಿ ಗಿರ್ವಾಹಸ ಋತ್ವಿಜಃ । ಸತ್ಯಾ ಅವಿಸಂವಾದಿಫಲಾ ಗಿರ್ವಾಹಸೋ ಯಸ್ಯ ತಂ ತಾದೃಶಂ ಹವಾಮಹ ಇತಿ ಶೇಷಃ ॥ ವಹಿಹಾಧಾಞ್ಭ್ಯಶ್ಛಂದಸಿ ಇತ್ಯಸುನ್ । ಣಿದಿತ್ಯನುವೃತ್ತೇರುಪಧಾವೃದ್ಧಿಃ ॥ ಪುನಃ ಕೀದೃಶಂ । ಮಾನುಷಾಣಾಂ ಮನುಷ್ಯಾಣಾಮತಿಥಿಮತಿಥಿವತ್ಪೂಜ್ಯಂ ದರ್ಶಾದಿತಿಥಿಮಪೇಕ್ಷ್ಯಾಗಂತಾರಂ ವಾ । ಕಿಂಚ ಯಸ್ಯಾಗ್ನೇರಾಸಯಾಸಮೀಪೇ । ಆಸೇತ್ಯಂತಿಕನಾಮ ಆಸಾಂಬರಮಿತಿ ತನ್ನಾಮಸು ಪಾಠಾತ್ । ತತ್ಸಮೀಪೇಽಮೀ ವಿಶ್ವೇಽಮೃತಾಸೋ ಹವಿರ್ಭೋಕ್ತೃತ್ವೇನ ಪ್ರಸಿದ್ಧಾಃ ಸರ್ವೇ ದೇವಾ ಆಪ್ಯಾ ಗಚ್ಛಂತಿ॥ ಉಪಸರ್ಗವಶಾ-

**ದ್ಯೋಗ್ಯಕ್ರಿಯಾಧ್ಯಾಹಾರಃ । ಕಿಮರ್ಥಂ । ವಯೋ ಹವಿರ್ಲಕ್ಷಣಾನ್ನಮುದ್ದಿಶ್ಯ ಅಗ್ನಿಮುಖಾದೇವೇತರೇಭ್ಯೋ ದೀಯಮಾನತ್ವಾತ್ । ತತ್ರ ದೃಷ್ಟಾಂತಃ । ಪಿತುರ್ನ । ಪಿತುರಂತಿಕೇ ಪುತ್ರಾದಯೋ ಯಥಾನ್ನಾದ್ಯರ್ಥಂ ಸೇವಂತೇ ತದ್ವತ್। ಕಿಂಚ ವಯೋ ನೇತಾರ ಋತ್ವಿಜೋಽಪಿ ದೇವೇಷ್ವಿತರೇಷ್ವಿಜ್ಯಮಾನೇಷು ಮಧ್ಯೇ ಹವ್ಯಾ ಹವೀಂಷ್ಯಾ ದದತ್ಯಗ್ನಯೇ ॥ ವೇತೇರೌಣಾದಿಕೋ ಡಿಃ। ವಿಚಿ ವಾ ಗುಣಃ ॥**

॥ ಪ್ರತಿಪದಾರ್ಥ ॥

**ವಿಶ್ವಾಸಾಂ**—ಎಲ್ಲಾ । **ವಿಶಾಂ**—ಯಾಗಕರ್ತೃಗಳಿಗೂ । **ಪತಿಂ**—ಪಾಲಕನೂ । **ಸರ್ವಾಸಾಂ**—ಎಲ್ಲಾ ಪ್ರಜೆಗಳಿಗೂ । **ಸಮಾನಂ**—ಏಕರೂಪನೂ । **ದಂಪತಿಂ**—(ಗಾರ್ಹಪತ್ಯಾದಿ ರೂಪದಿಂದ) ಗೃಹರಕ್ಷಕನೂ । **ಸತ್ಯಗಿರ್ವಾಹಸಂ**—ಯಥಾರ್ಥ ಫಲಪ್ರದವಾದ ಸ್ತುತಿಗಳಿಗೆ ಆಶ್ರಯನೂ ಆದ (ಯಥಾರ್ಥಫಲಭೋಕ್ತೃಗಳಾದ ಋತ್ವಿಜರುಳ್ಳ) । **ತ್ವಾ**—ನಿನ್ನನ್ನು । **ಭುಜೇ**—(ಹವಿರಾದಿಗಳ) ಭೋಗಾರ್ಥವಾಗಿ । **ಹವಾಮಹೇ**—ಕರೆಯುತ್ತೇವೆ । **ಮಾನುಷಾಣಾಂ**—ಮನುಷ್ಯರಿಗೆ । **ಅತಿಥಿಂ**—ಅತಿಥಿಯಂತೆ ಪೂಜ್ಯನಾದ (ಅಗ್ನಿಯನ್ನು) । **ಭುಜೇ**—(ಹವಿರಾದಿ) ಸ್ವೀಕಾರಕ್ಕೋಸ್ಕರ । (**ಹವಾಮಹೇ**—ಕರೆಯುತ್ತೇವೆ) । **ಯಸ್ಯ**—ಯಾವ ಅಗ್ನಿಯ । **ಆಸಯಾ**—ಸಮೀಪದಲ್ಲಿದ್ದು । **ಪಿತುಃ ನ**—ತಂದೆಯ (ಹತ್ತಿರದಲ್ಲಿದ್ದು ಪುತ್ರರು) ಹೇಗೋ ಹಾಗೆ । **ಅಮೃತಾಸಃ**—ಹವಿರ್ಭೋಕ್ತೃಗಳೆಂದು ಪ್ರಸಿದ್ಧರಾದ । **ಅಮೀ ವಿಶ್ವೇ ಚ**—ಈ ಎಲ್ಲಾ ದೇವತೆಗಳೂ । **ವಯಃ**—ಹವಿರ್ಲಕ್ಷಣವಾದ ಅನ್ನವನ್ನು (ಉದ್ದೇಶಿಸಿ) । **ಆ (ಗಚ್ಛಂತಿ)**—ಬರುತ್ತಾರೋ (ಅದರಂತೆ ಆ ಅಗ್ನಿಗೆ) । **ವಯಃ**—(ಯಜ್ಞ) ನೇತೃಗಳಾದ ಋತ್ವಿಜರು । **ದೇವೇಷು**—(ಇತರ) ದೇವತೆಗಳ ಮಧ್ಯೆ । **ಹವ್ಯಾ**—ಹವಿಸ್ಸುಗಳನ್ನು । **ಆ (ದದತಿ)**—ಕೊಡುತ್ತಾರೆ.

॥ ಭಾವಾರ್ಥ ॥

ಯಾಗಕರ್ತೃಗಳಿಗೆಲ್ಲ (ಅಭಿಮತದಾಯಕನಾಗಿ) ಪಾಲಕನೂ, ಸಮಸ್ತ ಪ್ರಜೆಗಳಿಗೂ (ದಹನ ಪಚನಾದಿಗಳಿಗೆ ಸಹಾಯಕನಾಗಿ) ಏಕರೂಪನೂ (ಆಹವನೀಯಾದಿ ರೂಪದಿಂದ) ಗೃಹರಕ್ಷಕನೂ ಆದ ಅಗ್ನಿಯನ್ನು ಹವಿರಾದಿ ಭಕ್ಷಣಾರ್ಥವಾಗಿ ಆಹ್ವಾನಿಸುತ್ತೇವೆ; ಯಥಾರ್ಥ ಫಲದಾಯಕವಾದ ಸ್ತುತಿ ವಾಕ್ಯಗಳಿಗೆ ಆಶ್ರಯನಾದ (ಯಥಾರ್ಥ ಫಲಭೋಗಿಗಳಾದ ಋತ್ವಿಜರುಳ್ಳ) ಮತ್ತು ಮನುಷ್ಯರಿಗೆ ಅತಿಥಿಯಂತೆ(ಸರ್ವದಾ)ಪೂಜ್ಯನಾದ ಅಗ್ನಿಯನ್ನು ಹವಿಸ್ಸ್ವೀಕಾರಕ್ಕಾಗಿ ಕರೆಯುತ್ತೇವೆ; ತಂದೆಯ (ಸಮೀಪದಲ್ಲಿ ಪುತ್ರಾದಿಗಳು ಅನ್ನಾದಿಗಳನ್ನು ಸೇವಿಸುವಂತೆ) ಹವಿರ್ಭೋಕ್ತೃಗಳೆಂದು ಪ್ರಸಿದ್ಧರಾದ ಈ ದೇವತೆಗಳು ಅಗ್ನಿ ಸಮೀಪಕ್ಕೆ ಹವಿಸ್ಸನ್ನುದ್ದೇಶಿಸಿ ಬರುತ್ತಾರೆ; ಋತ್ವಿಜರು ಇತರ ದೇವತೆಗಳಿಗೆ (ಹವಿರ್ದಾನ ಕಾಲದಲ್ಲಿ) ಅಗ್ನಿಗೂ ಹವಿಸ್ಸನ್ನು ಕೊಡುತ್ತಾರೆ.

## English Translation.

We invoke you, the protector of all people, the same alike to all, the preserver of the house, to enjoy (the oblation); you who are the wafter of our infallible prayer, to enjoy (the oblation); we invoke you, who are the guest of men, to whom all these immortals apply for their sustenance, as (a son) to a father; you, to whom the priests offer oblations amongst the gods.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ವಿಶ್ವಾಸಾಂ ವಿಶಾಂ ಪತಿಂ ಸಮಾನಂ ಹವಾಮಹೇ।** ಎಲ್ಲಾ ಪ್ರಜೆಗಳಿಗೂ, ಯಜ್ಞ ಮಾಡುವ ಯಜಮಾನರಿಗೂ ಅವರವರಿಗೆ ಬೇಕಾದ ಇಷ್ಟಾರ್ಥಗಳನ್ನು ಅಗ್ನಿಯು ಅನುಗ್ರಹಿಸುವುದರಿಂದ ಅವರೆಲ್ಲರಿಗೂ ರಕ್ಷಕನಾಗಿರುವನು ಎಂದೂ, ಉಪಕಾರಮಾಡುವ ವಿಷಯದಲ್ಲಿ ಎಲ್ಲರಿಗೂ ಸಮಾನನಾಗಿರುವನು ಎಂದೂ ವಿವರಿಸಿದೆ.

**ದಂಪತಿಂ—ಗಾರ್ಹಪತ್ಯಾದಿರೂಪೇಣ ಗೃಹಸ್ಯ ಪಾಲಕಂ** ಅಗ್ನಿಯು **ಗಾರ್ಹಪತ್ಯ** ಎಂಬ ಹೆಸರಿನಿಂದ ಯಜಮಾನನ ಗೃಹವನ್ನು ರಕ್ಷಿಸುವನು ಎಂದು ಅರ್ಥ. ನಿರುಕ್ತಕಾರರು—ಗಯಃ ಕೃತ್ತಿಃ ಎಂಬ ಇಪ್ಪತ್ತೆರಡು ಗೃಹನಾಮಗಳ ಮಧ್ಯದಲ್ಲಿ (ನಿ. ೩-೧೩) ದಮೇ ಶಬ್ದವನ್ನು ಪಾಠಮಾಡಿರುವರು. ಇದರಿಂದ ದಮೇ ಎಂದರೆ ಮನೆ ಎಂದು ಅರ್ಥ. ಮತ್ತು **ದಮೂನಾ** ಎಂಬ ಶಬ್ದದ ಅರ್ಥವನ್ನು ವಿವರಿಸುವಾಗ **ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್** (ನಿ. ೪-೪). ಎಂದು ವ್ಯಾಖ್ಯಾನಮಾಡಿರುವರು. ದುರ್ಗಾಚಾರ್ಯರು—**ದಮ ಇತ್ಯೇತತ್ ಗೃಹನಾಮ ಏತತ್ ಯಸ್ಯ ಮನಸಿ ಮನೋದಮಿತಿ ಸಃ ದಮೂನಾಃ ಗೃಹಪತಿರಗ್ನಿಃ।** ದಮ ಶಬ್ದಕ್ಕೆ ಗೃಹವೆಂದು ಅರ್ಥವು. ಈ ಮನೆಯು ನನಗೆ ಸಂಬಂಧಿಸಿರುವುದು ಎಂದು ಅಭಿಮಾನವುಳ್ಳ ಅಗ್ನಿಯು ಗೃಹಪತಿಯಾಗಿರುವನು ಎಂದು ಅರ್ಥವನ್ನು ವರ್ಣಿಸಿರುವುದರಿಂದ ಅಗ್ನಿಗೆ ಗಾರ್ಹಪತ್ಯವು ಉಂಟಾಗಿರುತ್ತದೆ.

**ಸತ್ಯಗಿರ್ವಾಹಸಂ—ಯಥಾರ್ಥಭೂತಾನಾಂ ಅವಿಸಂವಾದಿಫಲಾನಾಂ ಸ್ತುತಿರೂಪಾಣಾಂ ಗಿರಾಂ ವೋಢಾರಂ। ಯದ್ವಾ ಗಿರಃ ಮನ್ತ್ರರೂಪಾಃ ವಹಂತೀತಿ ಗಿರ್ವಾಹಸಃ। ಋತ್ವಿಜಃ। ಸತ್ಯಾಃ ಅವಿಸಂವಾದಿ ಫಲಾಃ ಗಿರ್ವಾಹಸೋ ಯಸ್ಯ ತಂ।** ಅಗ್ನಿಯನ್ನು ಸ್ತುತಿಮಾಡುವಾಗ ಅವನ ಗುಣಗಳನ್ನೂ ಮಹಿಮೆಯನ್ನೂ ಪ್ರಕಟಿಸುವ ಪದಗಳ ಅರ್ಥವು ಅಗ್ನಿಯಲ್ಲಿ ನಿಯತವಾಗಿರುವ ಕಾರಣ ಆ ಪ್ರಕಾರವಾದ ಸ್ತುತಿವಾಕ್ಯದ ಪದಗಳ ಅರ್ಥವು ತನ್ನಲ್ಲಿರುವಂತೆ ಅಗ್ನಿಯು ಮಹಿಮೆಯುಳ್ಳವನು ಎಂದು ಒಂದು ವಿಧವಾದ ಅರ್ಥವನ್ನು ವರ್ಣಿಸಿರುವ ಸಾಯಣರು ಅಥವಾ ಎಂದು ಇನ್ನೊಂದುವಿಧವಾದ ಅರ್ಥವನ್ನೂ ವರ್ಣಿಸಿರುವರು. ಈ ಅರ್ಥದಲ್ಲಿ—ಗಿರಃ ಶಬ್ದಕ್ಕೆ ಮಂತ್ರಗಳೆಂದು ಅರ್ಥಮಾಡಿ ಈ ಮಂತ್ರಗಳನ್ನು ಅಭ್ಯಾಸಮಾಡಿರುವ ಋತ್ವಿಜರು ಗಿರ್ವಾಹಸರೆಂದೂ, ಈ ಋತ್ವಿಜರು ಸತ್ಯವಾದ ಫಲವನ್ನು ಅನುಗ್ರಹಿಸುವ ಮಂತ್ರಗಳನ್ನು ಹೊಂದಿ, ಅಗ್ನಿಯ ಸೇವೆಯಲ್ಲಿ ಅವುಗಳನ್ನು ಪ್ರಯೋಗಿಸುವ ಕಾರಣದಿಂದ ಅಗ್ನಿಯು (ಹೀಗೆ ಇರುವ) ಸತ್ಯಾರ್ಥಪ್ರಕಾಶಕಮಂತ್ರಗಳುಳ್ಳ ಋತ್ವಿಜರನ್ನು ಹೊಂದಿರುವನೆಂದೂ ವಿವರಿಸಿದ್ದಾರೆ.

**ಅತಿಥಿಂ ಮಾನುಷಾಣಾಂ—ಮನುಷ್ಯಾಣಾಂ 'ಅತಿಥಿವತ್ ಪೂಜ್ಯಂ ದರ್ಶಾದಿತಿಥಿಮಪೇಕ್ಷ್ಯ ಆಗಂತಾರಂ ವಾ** ಅಗ್ನಿಯು ಮನೆಗೆ ಬಂದಿರುವ ಅತಿಥಿಯ ಹಾಗೆ ಯಜಮಾನನಿಂದ ಪೂಜೆಗೆ ಅರ್ಹನಾಗಿರುವನು. ಅಥವಾ ಪೂರ್ಣಮಾಸ್ಯವೇ ಮೊದಲಾದ ತಿಥಿಗಳನ್ನು ಅನುಸರಿಸಿ ಯಾಗಗಳನ್ನು (ದರ್ಶಪೂರ್ಣಮಾಸಾದಿಗಳನ್ನು) ಆಚರಿಸುವ ಯಜಮಾನರ ಇಚ್ಛಾನುಸಾರವಾಗಿ ಅಗ್ನಿಯು ಬರುವನೆಂದು ಅರ್ಥವನ್ನೂ ವಿವರಿಸಿದೆ. ನಿರುಕ್ತಕಾರರು—

**ಜುಷ್ಟೋ ದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪ ಯಾಹಿ ವಿದ್ವಾನ್।**
**ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾ ಭರಾ ಭೋಜನಾನಿ ॥**

(ಋ. ಸಂ. ೫-೪-೫)

ಈ ಋಕ್ಕನ್ನು ಉದಹರಿಸಿ **ಅತಿಥಿರಭ್ಯತಿತೋ ಗೃಹಾನ್ ಭವತಿ ಅಭ್ಯೇತಿ ತಿಥಿಷು ಪರಕುಲಾನೀತಿ ವಾ ಪರಗೃಹಾಣೀತಿ ವಾ ಅಯಮಪೀತರೋ ಅತಿಥಿರೇತಸ್ಮಾದೇವ ॥** ಎಂದು ಅರ್ಥವನ್ನು ವಿವರಿಸಿದ್ದಾರೆ.

ದುರ್ಗಾಚಾರ್ಯರು—**ಗೃಹಾನ್ ಅಭಿ ಅಭಿಮುಖ್ಯೇನ ಅಸೌ ಅತಿತೋ ಭವತಿ ।** ಮನೆಗಳನ್ನು ಹುಡುಕಿಕೊಂಡು ಇವನು ಬರುವವನಾದಕಾರಣ ಅತಿಥಿಯಾಗಿರುವನು. ಅಥವಾ ಪೂರ್ಣಿಮೆಯೇ ಮೊದಲಾದ ತಿಥಿಗಳಲ್ಲಿ ಯಜ್ಞಮಾಡುವವರ ಮನೆಗಳನ್ನು ಬಂದು ಸೇರುವನು. **ಅಭ್ಯೇತಿ ತಿಥಿಷು ಪರಕುಲಾನಿ ಪೌರ್ಣಮಾಸ್ಯಾದಿಷು ಯಜಮಾನಕುಲಾನಿ ಅಭ್ಯಾಗಚ್ಛತಿ ಇತಿ ಅತಿಥಿಃ । ಅಯಮಪೀತರೋऽತಿಥಿರೇತಸ್ಮಾದೇವ** ಅಗ್ನಿಯೂ ಕೂಡ ಅತಿಥಿಯಹಾಗೆ ವರ್ತಿಸುವುದರಿಂದ ಇವನೂ ಅತಿಥಿಯಾಗಿರುವನು ಎಂದು ಎರಡು ಅರ್ಥವನ್ನು ವಿವರಿಸಿರುವರು. ಸಾಯಣರೂ ಹೀಗೆಯೇ ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ.

**ಆಸಯಾ—ಸಮೀಪೇ** । ಹತ್ತಿರ ಎಂದು ಅರ್ಥ. **ಆಸಾತ್, ಅಂಬರಂ** ಎಂಬ ಹನ್ನೊಂದು ಅಂತಿಕನಾಮಗಳಲ್ಲಿ (ನಿ. ೩-೯) ಪಠಿತವಾಗಿವೆ. ಹವಿರ್ಭಾಗಗಳನ್ನು ಸ್ವೀಕರಿಸುವ ದೇವತೆಗಳೆಲ್ಲರೂ (ಈ ಅಗ್ನಿಯ ಮೂಲಕವಾಗಿ ತಮ್ಮ ತಮ್ಮ ಹವಿರ್ಭಾಗಗಳು ಯಜ್ಞಮಾಡುವ ಯಜಮಾನರಿಂದ ಅವರವರಿಗೆ ಅರ್ಪಿಸುವುದಕ್ಕಾಗಿ ಒಪ್ಪಿಸಿರುವ ಕಾರಣ) ಈ ಅಗ್ನಿಯ ಸಮೀಪವನ್ನು ಹೊಂದುವರೆಂದು ಅರ್ಥವನ್ನು ವರ್ಣಿಸಿದೆ.

**ವಯಃ ಪಿತುರ್ನ—ಹವಿರ್ಲಕ್ಷಣಾನ್ನಮುದ್ದಿಶ್ಯ ಅಗ್ನಿಮುಖಾದೇವ ಇತರೇಭ್ಯೋ ದೀಯಮಾನತ್ವಾತ್ । ಪಿತುರಂತಿಕೇ ಪುತ್ರಾದಯೋ ಯಥಾ ಅನ್ನಾದ್ಯರ್ಥಂ ಸೇವಂತೇ ತದ್ವತ್** । ಲೋಕದಲ್ಲಿ ಮಕ್ಕಳೇ ಮೊದಲಾದವರು ತಮ್ಮ ತಮ್ಮ ಆಹಾರವೇ ಮೊದಲಾದವುಗಳಿಗಾಗಿ ಅವರವರ ತಂದೆಯನ್ನು ಸೇವಿಸುವಂತೆ ದೇವತೆಗಳೆಲ್ಲರೂ, ತಮ್ಮ ತಮ್ಮ ಹವಿರ್ಭಾಗಗಳೆಲ್ಲವೂ ಯಜ್ಞಮಾಡುವವರಿಂದ ಅಗ್ನಿಯಲ್ಲಿ ಅರ್ಪಿಸಲ್ಪಟ್ಟಿರುವ ಕಾರಣ ಅದನ್ನು ಹೊಂದುವುದಕ್ಕಾಗಿ ಅಗ್ನಿಯ ಸಮೀಪಕ್ಕೆ ಬರುವರೆಂದು ಪಿತಾಪುತ್ರನ್ಯಾಯವನ್ನು ವಿವರಿಸಿ ಹೋಲಿಸಿದೆ. ವಯಶ್ಶಬ್ದವು **ಅಂಧಃ ವಾಜಃ** ಎಂಬ ಇಪ್ಪತ್ತೆಂಟು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಮತ್ತು

**ಯುವೋಃ ಶ್ರಿಯಂ ಪರಿ ಯೋಷಾವೃಣೀತ ಸೂರೋ ದುಹಿತಾ ಪರಿತಕ್ಮ್ಯಾಯಾಂ ।**
**ಯದ್ದೇವಯಂತಮವಥಃ ಶಚೀಭಿಃ ಪರಿ ಘ್ರಂಸಮೋಮನಾ ವಾಂ ವಯೋ ಗಾತ್ ॥**
(ಋ. ಸಂ. ೭-೬೯-೪)

ಈ ಋಕ್ಕಿನಲ್ಲಿರುವ **ವಯಃ** ಎಂಬ ಶಬ್ದಕ್ಕೆ **ಅನ್ನಂ ಹವಿರ್ಲಕ್ಷಣಂ** ಎಂದು ದುರ್ಗಾಚಾರ್ಯರು ಅರ್ಥಮಾಡಿರುವರು.

**ವಯಃ ದೇವೇಷು ಹವ್ಯಾ ಆ ನೇತಾರಃ ಋತ್ವಿಜೋಪಿ ಇತರೇಷು ಇಜ್ಯಮಾನೇಷು ಮಧ್ಯೇ ಹವೀಂಷಿ ದದತಿ ಅಗ್ನಯೇ ।** ಈ ಮಂತ್ರದಲ್ಲಿ ವಯಃ ಎಂಬ ಶಬ್ದವು ಎರಡು ಸಾರಿ ಪಠಿತವಾಗಿದೆ. ಮೊದಲನೆಯ ವಯಃ ಶಬ್ದಕ್ಕೆ ಹವಿಸ್ಸಿನ ರೂಪವಾದ ಅನ್ನವೆಂದು ಅರ್ಥಮಾಡಿದೆ. ಎರಡನೆಯ ವಯಃ ಶಬ್ದವು ಯಜ್ಞದ ಕರ್ಮಗಳನ್ನು ಸರಿಯಾಗಿರುವಹಾಗೆ ಆಚರಿಸುವ ಋತ್ವಿಜರೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಋತ್ವಿಜರು ಇತರ ದೇವತೆಗಳಿಗಾಗಿ ಹವಿಸ್ಸುಗಳನ್ನು ಹೋಮಮಾಡುವಾಗ ಅಗ್ನಿಗಾಗಿಯೂ ಹವಿರ್ಭಾಗಗಳನ್ನು ಹೋಮಮಾಡುವರೆಂದು ವರ್ಣಿಸಿದೆ.

ಉಪಸರ್ಗಗಳಿಗೆ ಅನೇಕಾರ್ಥಬೋಧಕತ್ವವು ಇರುವುದರಿಂದ ಇಲ್ಲಿ ಆ ಎಂಬ ಉಪಸರ್ಗಕ್ಕೆ **ದದತಿ**-ಕೊಡುತ್ತಾರೆ ಎಂದು ಅರ್ಥವನ್ನು ವಿವರಿಸಿದೆ. ಇದರಂತೆಯೇ ಇಲ್ಲಿ ಆ-ಆಗಚ್ಛಂತಿ ಬರುತ್ತಾರೆ ಎಂದು ಅರ್ಥವನ್ನು

ಮಾಡಿ **ಉಪಸರ್ಗವಶಾತ್ ಯೋಗ್ಯಕ್ರಿಯಾಧ್ಯಾಹಾರಃ** ಉಪಸರ್ಗಕ್ಕನುಸಾರವಾಗಿ ಅದಕ್ಕೆ ತಕ್ಕ ಕ್ರಿಯಾ ಪದವನ್ನು ಅಧ್ಯಾಹಾರಮಾಡಿದೆ ಎಂದು ವ್ಯಾಖ್ಯಾನಮಾಡಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಿಶಾಮ್**—ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಲಡುತ್ತಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಂಪತಿಮ್**—ದಮಾನಾಂ ಪತಿಃ ದಂಪತಿಃ. ದಮವೆಂಬುದು ಮನೆಯ ಹೆಸರು. ಛಾಂದಸವಾಗಿ ಪೂರ್ವಪದಾಂತ್ಯಕ್ಕೆ ಲೋಪ ಬರುತ್ತದೆ. **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಭುಜೇ**—ಭುಜ ಪಾಲನಾಭ್ಯವಹಾರಯೋಃ ಧಾತು. **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಚತುರ್ಥೀಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸತ್ಯಗಿರ್ವಾಹಸಮ್**-ಗಿರಃ ವಹಂತಿ ಇತಿ ಗಿರ್ವಾಹಸಃ. ವಹ ಪ್ರಾಪಣೇ ಧಾತು. **ವಹಿಹಾಧಾಞ್ಭ್ಯ**-(ಪಾ. ಸೂ. ೪-೬-೬೦) ಎಂಬುದರಿಂದ ಅಸುನ್ ಪ್ರತ್ಯಯ. ಪೂರ್ವಸೂತ್ರದಿಂದ ಣಿತ್ ಎಂದು ಅನುವೃತ್ತವಾಗುವುದರಿಂದ ಧಾತುವಿನ ಉಪಧೆಗೆ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ವೃದ್ಧಿ. ಗಿರ್ವಾಹಸ್ ಶಬ್ದವಾಗುತ್ತದೆ. ಸತ್ಯಾಃ ಗಿರ್ವಾಹಸಃ ಯಸ್ಯ ಸಃ ಸತ್ಯಗಿರ್ವಾಹಾಃ, ತಮ್. ಸತ್ಯಗಿರ್ವಾಹಸಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಮಾನುಷಾಣಾಂ**—**ಮನೋರ್ಜಾತಾವಞ್ಯತೌ ಷುಕ್ ಚ** (ಪಾ.ಸೂ. ೪-೧-೧೬೧) ಎಂಬುದರಿಂದ ಮನು ಶಬ್ದಕ್ಕೆ ಅಞ್ ಪ್ರತ್ಯಯ. ತತ್ಸಂನಿಯೋಗದಿಂದ ಷುಕಾಗಮ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. ಪ್ರತ್ಯಯ ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಬಹುವಚನಾಂತರೂಪ.

**ಅಮೃತಾಸಃ**-ನಞ್ ಪೂರ್ವಪದ ಬಹುವ್ರೀಹಿಯಲ್ಲಿ ನಞ್ ಸ್ವರಕ್ಕೆ ಅಪವಾದವಾಗಿ **ನಞೋ ಜರಮರ**-(ಪಾ ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರ-ಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ವಯಃ**—ವೀ ಗತ್ಯಾದಿಷು. ಧಾತು. ಅದಾದಿ. ಇದಕ್ಕೆ ಔಣಾದಿಕವಾದ ಡಿ ಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ವಿಃ ಶಬ್ದವಾಗುತ್ತದೆ. **ಜಸಿ ಚ** ಎಂಬುದರಿಂದ ಜಸ್ ಪರವಾದಾಗ ಗುಣ. ಆಯಾದೇಶ. ಪ್ರತ್ಯಯಸ್ವರದಿಂದ ಆದ್ಯುದಾತ್ತವಾಗುತ್ತದೆ. ಅಥವಾ **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ ಸೂ. ೩-೨-೭೫)

ಎಂಬುದರಿಂದ ವಿಚ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಇಕಿಗೆ ಗುಣ. ವೇ ಶಬ್ದವಾಗುತ್ತದೆ. ಜಸಿನಲ್ಲಿ ಆಯಾದೇಶ.

ಹವ್ಯಾ—ಹೂಯಂತೇ ಇತಿ ಹವ್ಯಾನಿ. ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ॥ ೮ ॥



॥ ಸಂಹಿತಾಪಾಠಃ ॥

ತ್ವಮ॑ಗ್ನೇ ಸ॒ಹಸಾ॒ ಸಹಂ॑ತಮಃ ಶು॒ಷ್ಮಿಂತ॑ಮೋ ಜಾಯಸೇ ದೇ॒ವತಾ॑ತಯೇ
ರ॒ಯಿರ್ನ ದೇ॒ವತಾ॑ತಯೇ ।
ಶು॒ಷ್ಮಿಂತ॑ಮೋ॒ ಹಿ ತೇ॒ ಮದೋ॑ ದ್ಯು॒ಮ್ನಿಂತ॑ಮ ಉ॒ತ ಕ್ರತುಃ॑ ।
ಅಧ॑ ಸ್ಮಾ॒ ತೇ॒ ಪರಿ॑ ಚರಂತ್ಯಜರ ಶ್ರುಷ್ಟೀ॒ವಾನೋ॒ ನಾಜ॑ರ ॥ ೯ ॥

॥ ಪದಪಾಠಃ ॥

ತ್ವಂ । ಅ॒ಗ್ನೇ॒ । ಸ॒ಹಸಾ॑ । ಸಹಂ॑ಽತಮಃ । ಶು॒ಷ್ಮಿನ್ಽತ॑ಮಃ । ಜಾ॒ಯ॒ಸೇ॒ । ದೇ॒ವಽತಾ॑ತಯೇ । ರ॒ಯಿಃ ।
ನ । ದೇ॒ವಽತಾ॑ತಯೇ ।
ಶು॒ಷ್ಮಿನ್ಽತ॑ಮಃ । ಹಿ । ತೇ॒ । ಮದಃ॑ । ದ್ಯು॒ಮ್ನಿನ್ಽತ॑ಮಃ । ಉ॒ತ । ಕ್ರತುಃ॑ ।
ಅಧ॑ । ಸ್ಮ॒ । ತೇ॒ । ಪರಿ॑ । ಚ॒ರ॒ಂತಿ॒ । ಅ॒ಜ॒ರ॒ । ಶ್ರು॒ಷ್ಟಿ॒ಽವಾನಃ॑ । ನ । ಅ॒ಜ॒ರ॒ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಸಹಸಾ ಬಲೇನ ಸಹಂತಮೋಽತಿಶಯೇನ ಶತ್ರೂಣಾಮಭಿಭವಿತಾ ತಥಾ ಶುಷ್ಮಿಂತಮೋಽತಿಶಯೇನ ತೇಜಸ್ವೀ ಜಾಯಸೇ ॥ ಸಹೇರೌಣಾದಿಕಃ ಕನಿನ್ । ನಾದ್ಘಸ್ಯೇತಿ ನುಟ್ ॥ ಕಿಮರ್ಥಂ। ದೇವತಾತಯೇ ದೇವಾನಾಂ ವಿಸ್ತಾರಯಿತ್ರೇ ಯಾಗಾಯ ತದರ್ಥಂ। ಯಜ್ಞನಾಮೈತತ್। ಯದ್ವಾ । ಉಕ್ತಗುಣವಿಶಿಷ್ಟಃ ಸ ಜಾಯಸೇ । ಅರಣ್ಯೋರುತ್ಪದ್ಯಸೇ । ಯಜ್ಞಾರ್ಥತ್ವೇ ದೃಷ್ಟಾಂತಃ ।

**ರಯಿರ್ನ ದೇವತಾತಯೇ । ಧನಂ ಯಥಾ ಯಜ್ಞಾರ್ಥಮುತ್ಪದ್ಯತೇ । ತಥಾ ಚೋಕ್ತಂ ಯಜ್ಞಾರ್ಥಂ ದ್ರವ್ಯಮುತ್ಪನ್ನಮಿತಿ । ಕಿಂಚ ತೇ ತವ ಮದ ಆಜ್ಯಸ್ವೀಕಾರಜನಿತೋ ಹರ್ಷಃ ಶುಷ್ಮಿಂತಮೋಽತಿಶಯೇನ ಬಲವಾನ್ । ಹಿಶಬ್ದಃ ಪ್ರಸಿದ್ಧೌ । ಆಜ್ಯೇನಾಗ್ನೇರ್ಮದೋ ಭವತೀತಿ ಪ್ರಸಿದ್ಧಂ । ಅಪಿ ಚ ತೇ ಕ್ರತುಃ ಕರ್ಮವಿಶೇಷೋಽಪಿ ದ್ಯುಮ್ನಿಂತಮೋ ಯಶೋಯುಕ್ತೋಽನ್ನಯುಕ್ತೋ ವಾ ಖಲು । ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವೇತಿ ಯಾಸ್ಕಃ । ನಿ. ೫-೫ । ಅಧಾತಃ ಕಾರಣಾತ್ ಅಜರ ಹೇ ಜರಾರಹಿತಾಗ್ನೇ ತೇ ತ್ವಾಂ ಪರಿ ಚರಂತಿ ಯಜಮಾನಾಃ । ತತ್ರ ದೃಷ್ಟಾಂತಃ । ಶುಷ್ಟೀವಾನೋ ನ ದೂತಾ ಇವ । ತೇ ಯಥಾ ವಾರ್ತಾವಿಶೇಷಪ್ರದಾನೇನ ರಾಜಾನಂ ಸೇವಂತೇ ತದ್ವತ್ ॥ ಛಂದಸೀವನಿಪಾವಿತಿ ವನಿಪ್ । ಛಾಂದಸಂ ಪ್ರತ್ಯಯಾದ್ಯುದಾತ್ತತ್ವಂ ॥ ಅಜರ ಭಕ್ತಾನಾಮಜರಯಿತಃ ॥ ಅಂತರ್ಭಾವಿತಣ್ಯ-ರ್ಥಾತ್ಪಚಾದ್ಯಚ್ ॥ ಯದ್ವಾ । ಅಜರಾಸ್ತೋತಃ । ಜರಾ ಸ್ತುತಿಃ । ಅಸೌ ನ ಕಸ್ಯಾಪಿ ಸ್ತೋತಾ ಭವತಿ ಕಿಂತು ಸರ್ವೈಃ ಸ್ವಯಂ ಸ್ತೂಯತೇ । ತಾದೃಶಂ ತ್ವಾಂ ಪರಿ ಚರಂತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಹೇ ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಸಹಸಾ**—(ನಿನ್ನ) ಬಲದಿಂದ **ಸಹಂತಮಃ**—(ಶತ್ರುಗಳನ್ನು) ಚೆನ್ನಾಗಿ ಪರಾಜಯಗೊಳಿಸುವವನೂ । **ಶುಷ್ಮಿಂತಮಃ**—ಅತ್ಯಂತ ತೇಜಸ್ವಿಯೂ (ಆಗಿ) **ರಯಿಃ**—ದ್ರವ್ಯವು । **ದೇವತಾತಯೇ ನ**—ಹೇಗೆ ಯಜ್ಞಕ್ಕೇ ಉಪಯುಕ್ತವಾಗುತ್ತದೋ ಹಾಗೆ । **ದೇವತಾತಯೇ**—ದೇವತೆಗಳ ವಿಸ್ತಾರವಾದ ಯಜ್ಞಾರ್ಥವಾಗಿ । **ಜಾಯಸೇ**—(ಅರಣಿಯಿಂದ) ಉತ್ಪನ್ನನಾಗುತ್ತಿ । **ತೇ**—ನಿನ್ನ । **ಮದಃ**—(ಆಜ್ಯಸ್ವೀಕಾರಜನ್ಯವಾದ)ಹರ್ಷವು । **ಶುಷ್ಮಿಂತಮಃ ಹಿ**—ಅತ್ಯಂತ ಬಲಿಷ್ಠವಾದುದಷ್ಟೇ । **ಉತ**—ಮತ್ತು । **ಕ್ರತುಃ**—ಕರ್ಮವೂ । **ದ್ಯುಮ್ನಿಂತಮಃ (ಹಿ)**—(ಅನ್ನ)ಯಶೋಯುಕ್ತವಾದುದು (ಅಷ್ಟೇ) । **ಅಧ**—ಆದಕಾರಣ । **ಅಜರ**—ಜರಾರಹಿತನಾದ (ಮತ್ತು) ಸ್ವಯಂ ಯಾರನ್ನೂ ಸ್ತುತಿಸದೇ ಇರುವ ಅಥವಾ ಭಕ್ತರನ್ನು ಜರಾರಹಿತರನ್ನಾಗಿ ಮಾಡುವ ಎಲೈ ಅಗ್ನಿಯೇ, । **ತೇ** – ನಿನ್ನನ್ನು । **ಶುಷ್ಟೀವಾನೋ ನ**—ದೂತರು (ರಾಜನನ್ನು ವಾರ್ತಾಪ್ರದಾನಾದಿಗಳಿಂದ) ಸೇವಿಸುವಂತೆ । **ಪರಿ ಚರಂತಿ ಸ್ಮ**—(ಯಜಮಾನರು) ಸೇವಿಸುತ್ತಾರೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, (ನಿನ್ನ) ಬಲದಿಂದ ಶತ್ರುಗಳನ್ನು ಪರಾಭವಗೊಳಿಸುತ್ತೀಯೆ; ಅತ್ಯಂತ ತೇಜಸ್ವಿಯು; ದ್ರವ್ಯವು ಹೇಗೆ ಯಜ್ಞಕ್ಕೆ (ಉಪಯುಕ್ತವೋ) ಹಾಗೆ (ನೀನು) ಯಜ್ಞಕ್ಕೋಸ್ಕರ ಅರಣಿಗಳಿಂದ ಉತ್ಪನ್ನವಾಗುತ್ತಿ; (ಆಜ್ಯಾದಿ ಸ್ವೀಕಾರಜನ್ಯವಾದ) ನಿನ್ನ ಹರ್ಷವು ಅತ್ಯಂತ ಬಲಕಾರಿಯು; ನಿನ್ನ ಕರ್ಮಗಳೂ ಯಶೋ(ಅನ್ನ) ಯುಕ್ತವಾದವು; ಆದ್ದರಿಂದ ಜರಾರಹಿತನೂ ಅನ್ಯರನ್ನು ಸ್ತುತಿಸದೇ ಇರುವವನೂ ಆದ ನಿನ್ನನ್ನು (ಯಜಮಾನರು) (ರಾಜನನ್ನು) ಸೇವಕರು ಸೇವಿಸುವಂತೆ, ಪರಿಚರಿಸುತ್ತಾರೆ.

## English Translation.

You, Agni, the destroyer (of enemies) by your strength, the possessor of great splendour, are born for the sake of sacrificing to the gods, as

riches (are generated) for the sake of sacrificing to the gods: verily your exhilaration is most brilliant, your worship is most productive of renown; hence, undecaying Agni, (sacrficers) wait upon you, like envoys (upon a prince; upon you), who preserve (your votaries) from decay.

॥ ವಿಶೇಷವಿಷಯಗಳು ॥

**ಸಹಸಾ ಸಹಂತಮಃ—ಬಲೇನ ಅತಿಶಯೇನ ಶತ್ರೂಣಾಮಭಿಭವಿತಾ ।** ಅಗ್ನಿಯು ತನ್ನ ಸಾಮರ್ಥ್ಯದಿಂದ ಶತ್ರುಗಳನ್ನು ಬಹಳವಾಗಿ, ತಿರಸ್ಕರಿಸುವವನು, ಸೋಲಿಸುವವನು ಎಂದು ಅರ್ಥ. **ಸಹಃ** ಎಂಬ ಶಬ್ದವು. (ನಿ ೩-೯) ಬಲನಾಮಗಳಲ್ಲಿ ಪಠಿತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ॥**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**

(ಋ. ಸಂ. ೧೦-೫೦-೬)

ಇಲ್ಲಿ ಸಹಸಃ ಬಲಸ್ಯ ಎಂದು ಅರ್ಥಮಾಡಿದೆ.

**ಜಾಯಸೇ ದೇವತಾತಯೇ ರಯಿರ್ನ ದೇವತಾತಯೇ—ದೇವಾನಾಂ ವಿಸ್ತಾರಯುಕ್ತಾಯ ಯಾಗಾಯ ತದರ್ಥಂ । ಯದ್ವಾ । ಉಕ್ತಗುಣವಿಶಿಷ್ಟಃ ಜಾಯಸೇ ಅರಣ್ಯೋರುತ್ಪದ್ಯಸೇ । ತತ್ರ ದೃಷ್ಟಾಂತಃ । ಧನಂ ಯಥಾ ಯಜ್ಞಾರ್ಥಮುತ್ಪದ್ಯತೇ: ತಥಾ ಚೋಕ್ತಂ । " ಯಜ್ಞಾರ್ಥಂ ದ್ರವ್ಯಮುತ್ಪನ್ನಂ " ಇತಿ ।**

**ಯಜ್ಞಃ ವೇನಃ ಅಧ್ವರಃ** ಎಂಬ ಹದಿನೈದು ಯಜ್ಞನಾಮಗಳಲ್ಲಿ (ನಿ. ೩-೧೯) ಉಕ್ತವಾಗಿರುವ **ದೇವತಾತಾ** ಎಂಬ ಶಬ್ದಕ್ಕೆ ಯಜ್ಞನೆಂದು ಅರ್ಥ.

**ಶಂ ನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ ಸ್ವರ್ಕಾಃ ।**
**ಜಂಭಯಂತೋಽಹಿಂ ವೃಕಂ ರಕ್ಷಾಂಸಿ ಸನೇಮ್ಯಸ್ಮದ್ಯುಯವನ್ನಮೀವಾಃ ॥**

(ಋ. ಸಂ. ೭-೩೮-೭)

ಇಲ್ಲಿಯೂ ದೇವತಾತೌ—ಯಜ್ಞೇ ಎಂದು ಅರ್ಥವನ್ನು (ನಿ. ೧೨-೪೪) ವಿವರಿಸಿದೆ. ಅನೇಕ ಕರ್ಮಗಳಿಂದ ಕೂಡಿರುವ ಯಜ್ಞವು ನೆರವೇರುವುದಕ್ಕಾಗಿ ಅಗ್ನಿಯು ಆವಿರ್ಭವಿಸುವನು ಎಂದು ಒಂದು ಅರ್ಥ. ಅಥವಾ ಬಹಳ ಮಹಿಮೆಯಿಂದ ಕೂಡಿರುವ ಅಗ್ನಿಯು ಅರಣಿಗಳಿಂದ ಉತ್ಪನ್ನನಾಗಿ ಯಜ್ಞಗಳು ನಡೆಯುವಂತೆ ಮಾಡುವನು. ಯಜ್ಞದ ಆಚರಣೆಗಾಗಿಯೇ ಧನವು ಉತ್ಪನ್ನನಾಗುವಂತೆ ಎಂದು ಅಗ್ನಿಯ ಉತ್ಪತ್ತಿಯ ವಿಷಯದಲ್ಲಿ ದೃಷ್ಟಾಂತವನ್ನು ಹೇಳಿದೆ. ಯಜ್ಞಕ್ಕಾಗಿಯೇ ದ್ರವ್ಯವು ಸೃಷ್ಟವಾಗಿರುವುದು ಎಂಬ ವಚನವನ್ನು ಪ್ರಮಾಣವಾಗಿ ಉದಹರಿಸಿದೆ. **ರಯಿಃ** ಎಂಬ ಶಬ್ದವು—ಉದಕನಾಮಗಳಲ್ಲಿಯೂ (ನಿ. ೨-೨೪), ಧನನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ.

**" ನೂ ಚ ಪುರಾ ಚ ಸದನಂ ರಯೀಣಾಂ "** ಎಂಬಲ್ಲಿ—**ರಯಿರಿತಿ ಧನನಾಮ ರಾತೇರ್ದಾನಕರ್ಮಣಃ** (ನಿ. ೪-೧೭) ರಯಿಃ ಎಂಬ ಶಬ್ದವು ಧನ ಎಂಬ ಅರ್ಥಬೋಧಕವಾಗಿರುವುದು ವಿವೃತವಾಗಿದೆ.

**ತೇ ಮದಃ ಶುಷ್ಮಿಂತಮಃ—ತವ ಆಜ್ಯಸ್ವೀಕಾರಜನಿತೋ ಹರ್ಷಃ ಅತಿಶಯೇನ ಬಲವಾನ್ । ಆಜ್ಯೇನ ಅಗ್ನೇರ್ಮದೋ ಭವತೀತಿ ಪ್ರಸಿದ್ಧಂ ॥** ಅಗ್ನಿಗೆ ಆಜ್ಯವನ್ನು ಹೋಮಮಾಡುವುದರಿಂದ ಉಂಟಾಗುವ ಹರ್ಷವು ಇತರ ಹವಿಸ್ಸುಗಳನ್ನು ಹೋಮಮಾಡಿದ್ದರಿಂದ ಉಂಟಾಗುವ ಹರ್ಷಕ್ಕಿಂತಲೂ ಹೆಚ್ಚಾಗಿ ಇರುತ್ತದೆ ಎಂದು ವಿವರಿಸಿದೆ.

**ತೇ ಕ್ರತುಃ ದ್ಯುಮ್ನಿಂತಮಃ—ಯಶೋಯುಕ್ತೋ ಅನ್ನಯುಕ್ತೋ ವಾ ।** ಅಗ್ನಿಯನ್ನು ತೃಪ್ತಿಪಡಿಸುವುದಕ್ಕಾಗಿ ಆಚರಿಸುವ ಯಜ್ಞವು ಯಶಸ್ಸನ್ನು ಉಂಟುಮಾಡುವುದು. ಮತ್ತು ಯಜ್ಞ ಮಾಡುವವರಿಗೆ ಕೀರ್ತಿಯನ್ನೂ ಅನ್ನವನ್ನೂ ಉಂಟುಮಾಡುವಂತೆ ಬಹಳವಾದ ಅನ್ನದಿಂದ ಕೂಡಿ ಇರುವುದು ಎಂದು ಅರ್ಥ.

**ದ್ಯುಮ್ನ** ಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ.

**ಶತಂ ತೇ ಶಿಪ್ರಿನ್ನೂತಯಃ ಸುದಾಸೇ ಸಹಸ್ರಂ ಶಂಸಾ ಉತ ರಾತಿರಸ್ತು ।**
**ಜಹಿ ವಧರ್ವನುಷೋ ಮರ್ತ್ಯಸ್ಯಾಸ್ಮೇ ದ್ಯುಮ್ನಮಧಿ ರತ್ನಂ ಚ ಧೇಹಿ ॥**

(ಋ. ಸಂ. ೭-೨೫-೩)

ಈ ಋಕ್ಕಿನಲ್ಲಿ ನಿರುಕ್ತಕಾರರು—**ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ** (ನಿ. ೫-೬) ಎಂದು ಅರ್ಥಮಾಡಿರುವುದರಿಂದ ಯಶಸ್ಸು ಮತ್ತು ಅನ್ನ ಎಂಬ ಅರ್ಥವನ್ನು ಬೋಧಿಸುವುದೆಂದು ವಿವೃತವಾಗಿದೆ. ನಿರುಕ್ತಕಾರರು—

**ಉತಸ್ಯ ವಾಜೀ ಕ್ಷಿಪಣಿಂ ತುರಣ್ಯತಿ ಗ್ರೀವಾಯಾಂ ಬದ್ಧೋ ಅಪಿಕಕ್ಷ ಆಸನಿ ।**
**ಕ್ರತುಂ ದಧಿಕ್ರಾ ಅನು ಸಂತವೀತ್ವತ್ಪಥಾಮಂಕಾಸ್ಯನ್ವಾಪನೀಫಣತ್ ॥**

(ಋ. ಸಂ. ೪-೪೦-೪)

ಇಲ್ಲಿ ಕ್ರತುಂ ಕರ್ಮ ವಾ ಪ್ರಜ್ಞಾಂ ವಾ ಎಂದು ಕ್ರತು ಶಬ್ದಕ್ಕೆ ಅರ್ಥವನ್ನು ವಿವರಿಸಿದಾರೆ. ಮತ್ತು ಕ್ರತು ಶಬ್ದವು ಪ್ರಜ್ಞಾನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. ಮತ್ತು

**ಯೋ ಜಾತ ಏವ ಪ್ರಥಮೋ ಮನಸ್ವಾನ್ ದೇವೋ ದೇವಾನ್ ಕ್ರತುನಾ ಪರ್ಯಭೂಷತ್ ।**

(ಋ. ಸಂ. ೨-೧೨-೧)

ಇಲ್ಲಿ ಕ್ರತುನಾ ಕರ್ಮಣಾ ಎಂದು ಅರ್ಥಮಾಡಿದೆ. ಸಾಯಣರೂ ಕ್ರತುಃ ಕರ್ಮವಿಶೇಷೋಪಿ ಎಂದು ಅರ್ಥವನ್ನು ವಿವರಿಸಿರುತ್ತಾರೆ.

**ಶ್ರುಷ್ಟೀವಾನೋ ನ—ದೂತಾ ಇವ ತೇ ಯಥಾ ವಾರ್ತಾವಿಶೇಷಪ್ರದಾನೇನ ರಾಜಾನಂ ಸೇವಂತೇ ತದ್ವತ್ ।** ಮುಪ್ಪಿಲ್ಲದವನಾಗಿರುವ ಅಗ್ನಿಯನ್ನು ಯಜಮಾನರು, ರಾಜನನ್ನು ಆಯಾಯ ವರ್ತಮಾನಗಳನ್ನು ತರುವದೂತರು ಸೇವಿಸುವ ಹಾಗೆ ಸೇವಿಸುವರು ಎಂದು ಹೋಲಿಸಿದೆ.

ಈ ಋಕ್ಕಿನಲ್ಲಿ ಅಜರ ಶಬ್ದವನ್ನು ಎರಡುಸಾರಿ ಹೇಳಿದೆ. ಮೊದಲನೆಯ ಅಜರ ಶಬ್ದಕ್ಕೆ ಜರಾರಹಿತನು (ಮುಪ್ಪಿಲ್ಲದವನು) ಅಗ್ನಿಯು. ಎಂದು ಅರ್ಥವನ್ನು ವರ್ಣಿಸಿದೆ. ಎರಡನೆಯ ಅಜರ ಶಬ್ದಕ್ಕೆ ಎರಡು ವಿಧವಾಗಿ ಅರ್ಥ

ವನ್ನು ಮಾಡಿದೆ. ಮೊದಲನೆಯ ಅರ್ಥದಲ್ಲಿ **ಭಕ್ತಾನಾಮಜರಯಿತಃ** ತನ್ನನ್ನು ಸೇವಿಸುವವರಿಗೆ ಮುಪ್ಪಿಲ್ಲದಂತೆ ಮಾಡುವವನೂ ಎಂದೂ, ಅಜರ –**ಅಸ್ತೋತಃ। ಜರಾ ಸ್ತುತಿಃ। ಅಸೌ ನ ಕಸ್ಯಾಪಿ ಸ್ತೋತಾ ಭವತಿ ಕಿಂತು ಸರ್ವೈಃ ಸ್ವಯಂ ಸ್ತೂಯತೇ.** ಜರಾ ಶಬ್ದವು ಜರಾ **ಸ್ತುತಿರ್ಜರತೇಃ ಸ್ತುತಿಕರ್ಮಣಃ** ಎಂದು (ನಿ. ೧೦-೮) ವ್ಯಾಖ್ಯಾತವಾಗಿರುವುದರಿಂದ ಸ್ತುತಿ ಎಂಬ ಅರ್ಥವನ್ನು ಬೋಧಿಸುವುದು. ಅಗ್ನಿಯು ಸ್ತೋತ್ರಮಾಡದಿರುವವನು. ಇತರರಿಂದ ಸ್ತುತಿಸಲ್ಪಡುತ್ತಿರುವವನು. ಎಲ್ಲರೂ ಅಗ್ನಿಯನ್ನು ಸ್ತುತಿಮಾಡುವರು. ಅಗ್ನಿಯು ಮಾತ್ರ ಯಾರನ್ನೂ ಸ್ತುತಿಮಾಡತಕ್ಕವನಲ್ಲವು ಎಂದೂ ಅರ್ಥವನ್ನು ವರ್ಣಿಸಿ ಈ ಪ್ರಕಾರವಾದ ಮಹಿಮೆಯುಳ್ಳ ಅಗ್ನಿಯನ್ನು ಯಜ್ಞ ಮಾಡುವ ಯಜಮಾನರು ಸೇವಿಸುತ್ತಿರುವರು ಎಂದು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸಹಸಾ**—ಷಹ ಮರ್ಷಣೇ ಧಾತು. ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ.

**ಸಹಸ್ತಮಃ**—ಷಹ ಮರ್ಷಣೇ ಧಾತು. ಬಹುಲಗ್ರಹಣದಿಂದ ಇದಕ್ಕೆ ಕನಿನ್ ಪ್ರತ್ಯಯ. **ಧಾತ್ವಾದೇಃ ಷಃ ಸಃ**—ಎಂಬುದರಿಂದ ಆದಿಗೆ ಸತ್ವ ಅತಿಶಯಾರ್ಥದಲ್ಲಿ ಇದರ ಮೇಲೆ ತಮಪ್ ಪ್ರತ್ಯಯ. **ನಲೋಪಃ ಪ್ರಾತಿಪದಿಕಾಂತಸ್ಯ**—ಎಂಬುದರಿಂದ ನಕಾರಕ್ಕೆ ಲೋಪ **ತರಪ್‌ತಮಪೌ ಘಃ**– (ಪಾ. ಸೂ. ೧-೧-೨೨) ಎಂಬುದರಿಂದ ತಮಪಿಗೆ ಘಸಂಜ್ಞಾ ಇರುವುದರಿಂದ **ನಾದ್ ಘಸ್ಯ**—(ಪಾ. ಸೂ. ೮-೨-೧೭) ಎಂಬುದರಿಂದ ತಮಪಿಗೆ ನುಟಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ತಮಪ್ ಪಿತ್ತಾದುದರಿಂದ ಅನುದಾತ್ತವಾಗತ್ತದೆ. ಹೀಗೆಯೇ ಶುಷ್ಮಿನ್‌ತಮಃ ಎಂಬಲ್ಲಿಯೂ ಪ್ರಕ್ರಿಯೆಯನ್ನು ತಿಳಿಯಬೇಕು.

**ಜಾಯಸೇ**—ಜನೀ ಪ್ರಾದುರ್ಭಾವೇ ಧಾತು. ದಿವಾದಿ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ದೇವತಾತಯೇ**—ಸರ್ವದೇವಾತ್ತಾತಿಲ್ (ಪಾ. ಸೂ. ೪-೪-೧೪೨) ಎಂಬುದರಿಂದ ತಾತಿಲ್ ಪ್ರತ್ಯಯ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಮದಃ**—ಮದೀ ಹರ್ಷೇ. **ಮದೋಽನುಪಸರ್ಗೇ**—(ಪಾ. ಸೂ. ೩-೩-೬೭) ಎಂಬುದರಿಂದ ಅಪ್ ಪ್ರತ್ಯಯ. ಪಿತ್ತಾದುದರಿಂದ ಇದು ಅನುದಾತ್ತವಾಗುತ್ತದೆ.

**ದ್ಯುಮ್ನಿಂತಮಃ**—ದ್ಯುಮ್ನಂ ಯಶಃ ಅಸ್ಯ ಅಸ್ತಿ ಇತಿ ದ್ಯುಮ್ನೀ. ಮತ್ವರ್ಥದಲ್ಲಿ **ಅತಇನಿಠನೌ**— ಎಂಬುದರಿಂದ ಇನಿ ಪ್ರತ್ಯಯ. ಇದರ ಮೇಲೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ಸಹಸ್ತಮಃ ಎಂಬಲ್ಲಿ ಬಂದಂತೆಯೇ ಕಾರ್ಯಗಳು ಬರುತ್ತವೆ.

**ಅಧ**—ಅಥ ಎಂದು ರೂಪವಾದಾಗ ಛಾಂದಸವಾಗಿ ವರ್ಣವಿಕಾರ ಬರುತ್ತದೆ.

**ಚರಂತಿ**—ಚರ ಗತಿಭಕ್ಷಣಯೋಃ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಜರ**—ಜ್ಯೂಷ್ ವಯೋಹಾನೌ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಪಚಾದಿಪಠಿತವಾದುದರಿಂದ **ನಂದಿಗ್ರಹಪಚಾದಿಭ್ಯೋ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ಅಥವಾ ಜರಾ ಸ್ತುತಿಃ ನ ವಿದ್ಯತೇ ಜರಾ ಯಸ್ಯ ಅಜರಃ ಸರ್ವಸ್ತೋತವ್ಯ ಎಂದರ್ಥ. ಸಂಬುದ್ಧ್ಯಂತರೂಪ.

**ಶ್ರುಷ್ಟೀವಾನಃ**—**ಛಂದಸೀ ವನಿಪೌ** ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಪಿತ್ತ್ವಾದರೂ ಛಾಂದಸವಾಗಿ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ ॥ ೯ ॥



॥ ಸಂಹಿತಾಪಾಠಃ ॥

ಪ್ರ ವೋ ಮಹೇ ಸಹಸಾ ಸಹಸ್ವತ ಉಷರ್ಬುಧೇ ಪಶುಷೇ ನಾಗ್ನಯೇ
ಸ್ತೋಮೋ ಬಭೂತ್ವಗ್ನಯೇ ।
ಪ್ರತಿ ಯದೀಂ ಹವಿಷ್ಮಾನ್ವಿಶ್ವಾಸು ಕ್ಷಾಸು ಜೋಗುವೇ ।
ಅಗ್ರೇ ರೇಭೋ ನ ಜರತ ಋಷೂಣಾಂ ಜೂರ್ಣಿರ್ಹೋತ ಋಷೂಣಾಂ ॥

॥ ಪದಪಾಠಃ ॥

ಪ್ರ । ವಃ । ಮಹೇ । ಸಹಸಾ । ಸಹಸ್ವತೇ । ಉಷಃಬುಧೇ । ಪಶುಸೇ । ನ । ಅಗ್ನಯೇ । ಸ್ತೋಮಃ ।
ಬಭೂತು । ಅಗ್ನಯೇ ।
ಪ್ರತಿ । ಯತ್ । ಈಂ । ಹವಿಷ್ಮಾನ್ । ವಿಶ್ವಾಸು । ಕ್ಷಾಸು । ಜೋಗುವೇ ।
ಅಗ್ರೇ । ರೇಭಃ । ನ । ಜರತೇ । ಋಷೂಣಾಂ । ಜೂರ್ಣಿಃ । ಹೋತಾ । ಋಷೂಣಾಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಉದ್ಗಾತ್ರಾದಯಃ ಸ್ತೋತಾರಃ ವೋ ಯುಷ್ಮಾಕಂ ಸಂಬಂಧಿ ಸ್ತೋಮಃ ಸ್ತೋತ್ರಮಗ್ನಯೇ ಪ್ರ ಬಭೂತು । ಪ್ರೀಣಯಿತುಂ ಸಮರ್ಥಃ ಭವತು ॥ ಛಾಂದಸಃ ಶಪಃ ಶ್ಲುಃ । ಅತ್ವಂ ಚಾಭ್ಯಾಸಸ್ಯ । ಭೂಸುವೋಸ್ತಿಙೀತಿ ಗುಣಾಭಾವಃ ॥ ಕೀದೃಶಾಯಾಗ್ನಯೇ । ಮಹೇ ಮಹತೇ ಪೂಜ್ಯಾಯ ಸಹಸಾ ಪರಾಭಿಭವಸಾಮರ್ಥ್ಯೇನ ತಪ್ಯತೇ ಉಷರ್ಬುಧ ಉಷಃಕಾಲೇ ಪ್ರಬುಧ್ಯಮಾನಾಯ ॥ ಅಹರಾದೀನಾಂ ಪತ್ಯಾದಿಷೂಪಸಂಖ್ಯಾನಮಿತಿ ರತ್ವಂ ॥ ಪಶುಷೇ ಪಶುಫಲಪ್ರದಾಯ । ನಶಬ್ದೋಽತ್ರಾಪಿಶಬ್ದಾರ್ಥಃ । ಯದ್ವಾ । ಪಶುಷೇ ಪಶುಪ್ರದಾತ್ರೇ ಪ್ರಭವೇ ಯಥಾಸ್ತುತಿಃ ಕ್ರಿಯತೇತದ್ವತ್ । ಕಿಮರ್ಥಮಿತಿ ತದುಚ್ಯತೇ । ಈಮೇನಮಗ್ನಿಂ ಪ್ರತಿ ಲಕ್ಷೀಕೃತ್ಯ ಹವಿಷ್ಮಾನ್ ಘೃತಾದಿಹವಿರ್ಯುಕ್ತೋ ಯಜಮಾನೋ ವಿಶ್ವಾಸು ಕ್ಷಾಸು ಸರ್ವಾಸು ನಿವಾಸಭೂತಾಸು ವೇದಿಭೂಮಿಷು ಜೋಗುವೇ । ಅತ್ಯರ್ಥಂ ಗಚ್ಛತಿ ॥ ಗುವತೇರ್ಯಙ್ಲುಗಂತಾಚ್ಛಾಂದಸೋ ಲಿಟ್ । ವ್ಯತ್ಯಯೇನಾತ್ಮನೇಪದಂ । ಅಮಂತ್ರೇ ಇತಿ ಪರ್ಯುದಾಸಾದಾಮಭಾವಃ ॥ ಕ್ಷೇತಿ ಭೂನಾಮ ಕ್ಷಾ ಕ್ಷಾಮೇತಿ ತನ್ನಾಮಸು ಪಾಠಾತ್ । ಋಷೂಣಾ-ಮಾಗಂತ್ಯೃಣಾಂ ದೇವಾನಾಂ ಮಧ್ಯೇ ಶ್ರೇಷ್ಠಮಗ್ನಿಂ ಜೂರ್ಣಿಃ ಸ್ತುತಿಕುಶಲೋ ಹೋತಾಗ್ರ ಇತರದೇವೇಭ್ಯೋ ಪೂರ್ವಂ ಜರತೇ । ಸ್ತೌತಿ । ತತ್ರ ದೃಷ್ಟಾಂತಃ । ಋಷೂಣಾಂ ಮಹತಾಂ ಧನವತಾಮಗ್ರೇ ರೇಭೋ ನ ವಂದೀವ ॥ ಋಷೀ ಗತೌ । ಔಣಾದಿಕಃ ಕುಪ್ರತ್ಯಯಃ । ನಾಮನ್ಯತರ-ಸ್ಯಾಮಿತಿ ನಾಮ ಉದಾತ್ತತ್ವಂ ॥ ಯದ್ವಾ ಋಷೂಣಾಮಿತ್ಯೇತದ್ಧೋತೃವಿಶೇಷಣಂ । ಋಷೂಣಾಂ ಜ್ಞಾನವತಾಂ ಮಧ್ಯೇ ಶ್ರೇಷ್ಠೋಽಯಂ ಹೋತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯತ್**—ಯಾವ ಕಾರಣದಿಂದ । **ಹವಿಷ್ಮಾನ್**—ಹವಿರಾದಿ ವಿಶಿಷ್ಟನಾದ (ಯಜಮಾನನು)। **ಈಂ ಪ್ರತಿ**—ಈ ಅಗ್ನಿಯನ್ನುದ್ದೇಶಿಸಿ । **ವಿಶ್ವಾಸು ಕ್ಷಾಸು**—ಎಲ್ಲಾ ವೇದಿಕೆಗಳಲ್ಲಿಯೂ । **ಜೋಗುವೇ**—ವಿಶೇಷವಾಗಿ ಹೋಗುತ್ತಾನೆಯೋ (ಮತ್ತು) । **ಋಷೂಣಾಂ**—ಜ್ಞಾನಿಶ್ರೇಷ್ಠನೂ । **ಜೂರ್ಣಿಃ**—ಸ್ತುತಿಕುಶಲನೂ (ಆದ) । **ಹೋತಾ**—ಹೋತೃವು । **ಋಷೂಣಾಂ**—ಧನಿಕರ । (**ಅಗ್ರೇ**—ಮುಂದುಗಡೆ) । **ರೇಭಃ ನ**—ವಂದಿಯು (ಸ್ತುತಿಸು)ವಂತೆ । **ಋಷೂಣಾಂ**—(ಯಾಗೋದ್ದೇಶವಾಗಿ) ಬರುವ ದೇವತೆಗಳಲ್ಲಿ (ಶೇಷ್ಠನಾದ ಅಗ್ನಿಯನ್ನು) । **ಅಗ್ರೇ**—(ಇತರ ದೇವತೆಗಳಿಗಿಂತ) ಮೊದಲು । **ಜರತೇ**—ಸ್ತುತಿಸುತ್ತಾನೆಯೋ । **ತತ್**—ಆದಕಾರಣ । **ಹೇ ಉದ್ಗಾತ್ರಾದಯಃ**—ಎಲೈ ಉದ್ಗಾತೃವೇ ಮೊದಲಾದ ಸ್ತೋತೃಗಳೇ) **ಮಹೇ**—ಪೂಜ್ಯನೂ । **ಸಹಸಾ**—(ಶತ್ರು ಪರಾಭವಕಾರಕವಾದ) ಬಲದಿಂದ । **ಸಹಸ್ವತೇ**—ಸಮರ್ಥನೂ । **ಉಷರ್ಬುಧೇ**—ಉಷಃಕಾಲದಲ್ಲಿ ಪ್ರಬುಧ್ಯಮಾನನೂ (ಆದ) **ಅಗ್ನಯೇ**—ಅಗ್ನಿಗೆ । **ವಃ**—ನಿಮ್ಮ । **ಸ್ತೋಮಃ**—ಸುತಿಯು । **ಪ್ರ ಬಭೂತು**—(ಸಂತೋಷವನ್ನುಂಟುಮಾಡಲು) ಸಮರ್ಥವಾಗಲಿ । **ಪಶುಷೇ ನ**—ಪಶ್ವಾದಿದಾತೃವಿಗೆ (ಸ್ತುತಿಯು ಸಂತೋಷದಾಯಕವಾಗು)ವಂತೆ (**ಪಶುಷೇ**—ಪಶ್ವಾದಿಫಲದಾತೃವಾದ) । **ಅಗ್ನಿಯೇ**—ಅಗ್ನಿಗೆ । (**ಸ್ತೋಮಃ ಪ್ರ ಬಭೂತು**—ನಿಮ್ಮ ಸ್ತುತಿಯು ತುಷ್ಟಿದಾಯಕವಾಗಲಿ).

॥ ಭಾವಾರ್ಥ ॥

ಎಲೈ ಉದ್ಗಾತ್ರಾದಿ ಋತ್ವಿಜರೇ, ಪೂಜ್ಯನೂ, ಬಲಿಷ್ಠನೂ (ಶತ್ರುಗಳನ್ನು ಜಯಿಸುವವನೂ), ಉಷಃ ಕಾಲದಲ್ಲಿ ಪ್ರಬುಧ್ಯಮಾನನೂ, ಪಶ್ವಾದಿಫಲದಾತೃವೂ ಆದ ಅಗ್ನಿಗೆ, ಪಶ್ವಾದಿದಾತೃವಾದ ಪ್ರಭುವಿಗೆ ಸ್ತುತಿಯು ಸಂತೋಷದಾಯಕವಾಗುವಂತೆ ನಿಮ್ಮ ಸ್ತುತಿಯು ಸಂತೋಷವನ್ನುಂಟುಮಾಡಲಿ; ಈ ಅಗ್ನಿಯನ್ನುದ್ದೇಶಿಸಿಯೇ, ಯಾಗಕರ್ತೃಗಳು ಹವಿರಾದಿವಿಶಿಷ್ಟರಾಗಿ ಪ್ರತಿ ವೇದಿಕೆಗೂ ಹೋಗುತ್ತಾರೆ ಮತ್ತು ಜ್ಞಾನಿಶ್ರೇಷ್ಠನೂ, ಸ್ತುತಿಕುಶಲನೂ ಆದ ಹೋತೃವೂ, ಯಾಗಕ್ಕೆ ಬರುವ ದೇವತೆಗಳಲ್ಲೆಲ್ಲಾ ಮೊದಲು ಈ ಅಗ್ನಿಯನ್ನೇ, ಧನಿಕರನ್ನು ವಂದಿಯು ಸ್ತುತಿಸುವಂತೆ, ಸ್ತುತಿಸುವನು.

English Translation

May your praise, (oh priests), become grateful to Agni, who is deserving of laudation, who is of strength to overcome the strong, who is awakened at the dawn; to Agni, as if to a giver of cattle. Inasmuch as the presenter of the oblation repairs assiduously to every altar, the invoking priest, well skilled in (pious) praise, glorifies him (Agni) as the first of the attaining (divinities), as a herald (recites the praises) of illustrious (men).

॥ ವಿಶೇಷವಿಷಯಗಳು ॥

**ಮಹೇ—ಮಹತೇ ಪೂಜ್ಯಾಯ** ಅಗ್ನಿಯು ಮಹತ್ವದಿಂದ ಪೂರ್ಣನಾಗಿ ಇರುವನು, ಪೂಜ್ಯನಾಗಿರುವನು ಎಂದು ಅರ್ಥ. ಮಹಃ ಎಂಬ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಉಕ್ತವಾಗಿದೆ. ಮತ್ತು

**ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಂ ।**
**ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ ।**

(ಋ. ಸಂ. ೧-೧೮೭-೧)

ಮಹಃ ಮಹತಃ ಬಲಸ್ಯ ಎಂದು ಅರ್ಥವನ್ನು ವಿವರಿಸಿದೆ.

**ಸಹಸಾ—ಪರಾಭಿಭವಸಾಮರ್ಥ್ಯೇನ ಸಹಃ** ಈ ಶಬ್ದವು ಬಲನಾಮಗಳಲ್ಲಿ (ನಿ- ೨-೯) ಪಠಿತವಾಗಿದೆ. ಅಗ್ನಿಯು ಇತರರನ್ನು ತಿರಸ್ಕರಿಸುವ ಸಾಮರ್ಥ್ಯದಿಂದ ಕೂಡಿರುವವನು ಎಂದು ಅರ್ಥಮಾಡಿದೆ.

**ಪಶುಷೇ ನ—ನ ಶಬ್ದೋಽತ್ರ ಅಪಿಶಬ್ದಾರ್ಥಃ । ಪಶುಫಲಪ್ರದಾಯ ಯದ್ವಾ ಪಶುಪ್ರದಾತ್ರೇ ಪ್ರಭವೇ ಯಥಾ ಸ್ತುತಿಃ ಕ್ರಿಯತೇ ತದ್ವತ್** ಇಲ್ಲಿ ನ ಶಬ್ದಕ್ಕೆ ಅಪಿ ಶಬ್ದದ ಸಮುಚ್ಚಯಾರ್ಥವನ್ನು ಹೇಳಿ ಪಶುರೂಪವಾದ (ಗೋವು ಮೊದಲಾದ) ಫಲಗಳನ್ನೂ ಕೂಡ ಅನುಗ್ರಹಿಸುವ ಅಗ್ನಿಗೆ ಎಂದು, ಒಂದು ವಿಧವಾದ ಅರ್ಥವನ್ನು ಹೇಳಿ, ಎರಡನೆಯ ಅರ್ಥದಲ್ಲಿ ನ ಎಂಬುದು ಉಪಮಾವಾಚಕವಾಗಿದೆಯಾದ್ದರಿಂದ ಗೋರೂಪವಾದ ಧನವನ್ನು ಕೊಡುವ ಪ್ರಭುವನ್ನು ಸ್ತುತಿಮಾಡುವ ಹಾಗೆ ಅಗ್ನಿಯನ್ನು ಸ್ತುತಿಮಾಡುತ್ತೇವೆ ಎಂದೂ ಹೋಲಿಸಿ ಅರ್ಥವನ್ನು ವರ್ಣಿಸಿದೆ.

**ಈಂ—ಏನಮಗ್ನಿಂ** | ನಿರುಕ್ತಕಾರರು **ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ** (ನಿ ೧-೯) ನಿಪಾತಗಳಿಗೆ (ಛಂದಸ್ಸಿನಲ್ಲಿ) ಛಂದೋಬದ್ಧವಾಗಿರುವ ಮಂತ್ರಗಳಲ್ಲಿ ಅರ್ಥವು ಇಲ್ಲದಕಾರಣ ಇವು ಅನರ್ಥಕಗಳಾಗಿರುವುವು ಎಂದು ವಿವರಿಸಿದ್ದಾರೆ. ಸಾಯಣರು ಇಲ್ಲಿ **ಈಂ** ಎಂಬುವ ನಿಪಾತಕ್ಕೆ ಏನಮಗ್ನಿಂ ಈ ಅಗ್ನಿಯನ್ನು ಉದ್ದೇಶಮಾಡಿಕೊಂಡು ಯಜ್ಞಮಾಡುವ ಯಜಮಾನನು ಹವಿಸ್ಸನ್ನು ಹಿಡಿದುಕೊಂಡು ಬಹಳವಾಗಿ ಸೇವಿಸುತ್ತಾನೆ ಎಂದು ಅರ್ಥವನ್ನು ವಿವರಿಸಿದ್ದಾರೆ.

**ವಿಶ್ವಾಸು ಕ್ಷಾಸು – ಸರ್ವಾಸು ನಿವಾಸಭೂತಾಸು ವೇದಿಭೂಮಿಷು ಕ್ಷಾ** | ಎಂಬ ಶಬ್ದವು **ಗೌಃ ಕ್ಷ್ಮಾ** ಎಂಬ ಇಪ್ಪತ್ತೊಂದು ಪೃಥಿವೀನಾಮಗಳಲ್ಲಿ (ನಿ. ೨-೫) ಉಕ್ತವಾಗಿದೆ. **ಕ್ಷಾ ಕ್ಷಿಯತೇರ್ನಿವಾಸಕರ್ಮಣಃ** (ನಿ. ೨-೬) ಎಂದು ವಿವೃತವಾಗಿದೆ. ಇಲ್ಲಿ ಎಲ್ಲರಿಗೂ ವಾಸಸ್ಥಾನವಾದ ಭೂಮಿ ಎಂದು ಅರ್ಥಬೋಧಕವಾದರೂ ಯಜ್ಞದ ವೇದಿ ಎಂದು ಅರ್ಥವನ್ನು ಬೋಧಿಸುವುದಾಗಿದೆ.

**ಋಷೂಣಾಂ ಜೂರ್ಣಿಃ ಹೋತಾ ಅಗ್ರೇ ಜರತೇ—ಆಗಂತ್ಯೂಣಾಂ ದೇವಾನಾಂ ಮಧ್ಯೇ ಶ್ರೇಷ್ಠಮಗ್ನಿಂ ಸ್ತುತಿಕುಶಲಃ ಹೋತಾ ಇತರದೇವೇಭ್ಯಃ ಪೂರ್ವಂ ಸ್ತೌತಿ** | ಸ್ತುತಿಮಾಡುವದರಲ್ಲಿ ನಿಪುಣನಾದ ಹೋತೃವು, ದೇವತೆಗಳಲ್ಲಿ ಶ್ರೇಷ್ಠನಾದ ಅಗ್ನಿಯನ್ನು ಇತರ ದೇವತೆಗಳನ್ನು ಆಹ್ವಾನ ಮಾಡುವುದಕ್ಕಿಂತ ಮೊದಲು ಯಜ್ಞಕ್ಕಾಗಿ ಆಹ್ವಾನಮಾಡಿ ಸ್ತುತಿಸುತ್ತಾನೆ. ನಿರುಕ್ತಕಾರರು **ಜೂರ್ಣಿ** ಎಂಬ ಪದವನ್ನು ಹನ್ನೊಂದು ಕ್ರೋಧನಾಮಗಳಲ್ಲಿಯೂ (ನಿ ೩-೯) ಮತ್ತು ಇಪ್ಪತ್ತಾರು ಕ್ಷಿಪ್ರನಾಮಗಳಲ್ಲಿಯೂ (ನಿ. ೩-೯) ಪಾಠಮಾಡಿದ್ದಾರೆ. ಮತ್ತು

**ಸ್ವಯಂ ಸಾ ರಿಷಯಧ್ಯೈ ಯಾ ನ ಉಪೇಷೇ ಅತ್ರೈಃ |**
**ಹತೇಮಸನ್ನ ವಕ್ಷತಿ ಕ್ಷಿಪ್ತಾ ಜೂರ್ಣಿರ್ನ ವಕ್ಷತಿ ||**

(ಋ ಸಂ. ೧-೧೨೯-೮)

ಈ ಋಕ್ಕನ್ನು ಉದಹರಿಸಿ **ಜೂರ್ಣಿರ್ಜವತೇರ್ವಾ ದ್ರವತೇರ್ವಾ ದುನೋತೇರ್ವಾ** ಎಂದು ಹೇಳಿದ್ದಾರೆ. ದುರ್ಗಾಚಾರ್ಯರು, **ಜವತೇರ್ವಾ ಹಿಂಸಾರ್ಥಸ್ಯೈವ ಜೂರ್ಣಿಃ ದ್ರವತೇರ್ವಾ ಗತ್ಯರ್ಥಸ್ಯೈವ ಜೂರ್ಣಿಃ ದುನೋತೇರ್ವಾ ಹಿಂಸಾರ್ಥಸ್ಯೈವ ಜೂರ್ಣಿಃ** ಎಂದು ವ್ಯಾಖ್ಯಾನಮಾಡಿದ್ದಾರೆ. ಇದರಿಂದ ಜೂರ್ಣಿಶಬ್ದಕ್ಕೆ ಕ್ರೋಧ, ಕ್ಷಿಪ್ರ, ಗತಿ, ಹಿಂಸಾ, ಎಂದು ನಾನಾರ್ಥಗಳು ಆಗುತ್ತವೆ. ಸಾಯಣರು ಜೂರ್ಣಿ ಶಬ್ದಕ್ಕೆ ಸ್ತುತಿಕುಶಲಃ ಎಂಬ ಅರ್ಥವನ್ನು ಮಾಡಿರುತ್ತಾರೆ.

**ಋಷೂಣಾಂ ಅಗ್ರೇ ರೇಭೋ ನ—ಮಹತಾಂ ಧನವತಾಂ ಅಗ್ರೇ ವಂದೀವ | ಯದ್ವಾ ಋಷೂಣಾಂ ಇತ್ಯೇತತ್ ಹೋತೃವಿಶೇಷಣಂ | ಜ್ಞಾನವತಾಂ ಮಧ್ಯೇ ಶ್ರೇಷ್ಠೋಽಯಂ ಹೋತಾ |** ಹೋತೃವಾದ ಋತ್ವಿಜನನ್ನು ಸ್ತುತಿಮಾಡುವವನಿಗೆ ಹೋಲಿಸಿದೆ. ಇಲ್ಲಿ ಋಷೂಣಾಂ ಎಂಬ ಪದವು ಎರಡು ಸಾರಿ ಉಕ್ತವಾಗಿದೆ. ಮೊದಲನೆಯ ಅರ್ಥದಲ್ಲಿ ಆಗಂತೃಗಳು, ಬರತಕ್ಕವರು ಎಂದು ಅರ್ಥಮಾಡಿದೆ. ಎರಡನೆಯ ಸಾರಿ ಪ್ರಯುಕ್ತವಾದ **ಋಷೂಣಾಂ** ಎಂಬ ಪದಕ್ಕೆ ಬಹಳ ಹಣಗಾರರು ಎಂದು ಒಂದು ಅರ್ಥವನ್ನು ಹೋತೃಪದಕ್ಕೆ ವಿಶೇಷಣವಾಗಿ ಹೇಳಿ ಜ್ಞಾನವುಳ್ಳವರೆಂಬ ಅರ್ಥವನ್ನು ವಿವರಿಸಿದೆ.

**ರೇಭಃ—ವಂದೀ** | ರೇಭ ಶಬ್ದವು ಜರಿತಾ, ಕಾರುಃ, ಎಂಬ ಹದಿಮೂರು ಸ್ತೋತೃನಾಮಗಳಲ್ಲಿ (ನಿ. ೩-೧೯) ಉಕ್ತವಾಗಿರುವುದರಿಂದ ಸ್ತೋತ್ರಮಾಡುವವನು ಎಂದು ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮಹೇ**—ಮಹತೇ ಎಂದು ರೂಪವಾದಾಗ ಛಾಂದಸವಾಗಿ ಅತಿಗೆ ಲೋಪ. ಅಥವಾ ಮಹ ಪೂಜಯಾಂ ಧಾತು. ಕ್ವಿಪ್ ಪ್ರತ್ಯಯ. ಚತುರ್ಥೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸಹಸ್ವತೇ**—ಸಹಃ ಅಸ್ಯ ಅಸ್ತಿ ಇತಿ ಸಹಸ್ವಾನ್. ಮತುಪ್ ಪ್ರತ್ಯಯ. ಅದುಪಧೆಯ ಪರದಲ್ಲಿರುವುದರಿಂದ **ಮಾದುಪಧಾಯಾಶ್ಚ**—ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ.

**ಉಷರ್ಬುಧೇ**—ಬುಧ ಅವಗಮನೇ ಧಾತು. ಕ್ವಿಪ್ ಪ್ರತ್ಯಯ. ಉಷಸ್ ಶಬ್ದದ ಸಕಾರಕ್ಕೆ **ಅಹರಾದೀನಾಂ ಪತ್ಯಾದಿಷು ಉಪಸಂಖ್ಯಾನಮ್** ಎಂಬುದರಿಂದ ರತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಬಭೂತು**-ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಏರುಃ**-ಸೂತ್ರದಿಂದ ಉತ್ವ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಭವತೇರಃ**—(ಪಾ. ಸೂ. ೭-೪-೭೩)ಎಂಬುದರಿಂದ ಅಭ್ಯಾಸಕ್ಕೆ ಅತ್ವ. **ಭೂಸುವೋಸ್ತಿಙಿ**—(ಪಾ. ಸೂ. ೭-೩-೮೮)ಎಂಬುದರಿಂದ ಕೇವಲ ತಿಙ್ ಪರದಲ್ಲಿರುವುದರಿಂದ ಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಜೋಗುವೇ**—ಧಾತುಗಳಿಗೆ ಅನೇಕಾರ್ಥವಿರುವುದರಿಂದ ಗುಧಾತುವು ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಭೃಶಾರ್ಥ ತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ **ಯಙೋಽಚಿ ಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಅನೈಮಿತ್ತಿಕವಾಗಿ ಲುಕ್. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಯಙ್‌ಲುಗಂತದ ಮೇಲೆ ಲಿಟ್. **ವ್ಯತ್ಯಯೋ ಬಹುಲಮ್** ಎಂಬುದರಿಂದ ಆತ್ಮನೇಪದಿಯಾಗುತ್ತದೆ. **ಕಾಸ್‌ಪ್ರತ್ಯಯಾದಾಮಮಂತ್ರೇ ಲಿಟಿ** (ಪಾ. ಸೂ. ೩-೧-೩೫) ಎಂಬಲ್ಲಿ ಅಮಂತ್ರೇ ಎಂದು ನಿಷೇಧಮಾಡಿರುವುದರಿಂದ ಆಮ್ ಬರುವುದಿಲ್ಲ. ಪ್ರಥಮಪುರುಷಏಕವಚನವಲ್ಲಿ ಉವಙಾದೇಶ. ಪ್ರತ್ಯಯಕ್ಕೆ ಕಿತ್ವಾತಿದೇಶವಿರುವುದರಿಂದ ಗುಣಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜರತೇ**—ಜ್ಯೄಷ್ ವಯೋಹಾನೌ ಧಾತು. ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಖುಷೂಣಾಮ್**—ಖುಷೀ ಗತೌ ಧಾತು. (ಗತ್ಯರ್ಥಕಧಾತುಗಳು ಜ್ಞಾನಾರ್ಥದಲ್ಲಿಯೂ ಪ್ರಯುಕ್ತವಾಗುತ್ತವೆ.) ಇದಕ್ಕೆ ಔಣಾದಿಕವಾದ ಕು ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಖುಷು ಎಂದು ರೂಪವಾಗುತ್ತದೆ. ಷಷ್ಠೀ ಬಹುವಚನದಲ್ಲಿ **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ಜೂರ್ಣಿಃ**—ಜ್ವರ ಸಂತಾಪೇ ಧಾತು. **ವೀಜ್ಯಾಜ್ವರಿಭ್ಯೋ ನಿಃ** (ಉ. ಸೂ. ೪-೪೮) ಎಂಬುದರಿಂದ ನಿ ಪ್ರತ್ಯಯ. **ಜ್ವರತ್ವರಸ್ರಿವಿ**—(ಪಾ. ಸೂ. ೬-೪-೨೦) ಎಂಬುದರಿಂದ ಉಪಧಾವಕಾರಗಳಿಗೆ ಊಠ್. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧೦ ॥



॥ ಸಂಹಿತಾಪಾಠಃ ॥

ಸ ನೋ ನೇದಿಷ್ಠಂ ದದೃಶಾನ ಆ ಭರಾಗ್ನೇ ದೇವೇಭಿಃ ಸಚನಾಃ ಸುಚೇ-
ತುನಾ ಮಹೋ ರಾಯಃ ಸುಚೇತುನಾ ।
ಮಹಿ ಶವಿಷ್ಠ ನಸ್ಕೃಧಿ ಸಂಚಕ್ಷೇ ಭುಜೇ ಅಸ್ಯೈ ।
ಮಹಿ ಸ್ತೋತೃಭ್ಯೋ ಮಘವನ್ತ್ಸುವೀರ್ಯಂ ಮಥೀರುಗ್ರೋ ನ
ಶವಸಾ ॥ ೧೧ ॥

॥ ಪದಪಾಠಃ ॥

ಸಃ । ನಃ । ನೇದಿಷ್ಠಂ । ದದೃಶಾನಃ । ಆ । ಭರ । ಅಗ್ನೇ । ದೇವೇಭಿಃ । ಸ್ಽಚನಾಃ । ಸುಽಚೇತುನಾ ।
ಮಹಃ । ರಾಯಃ । ಸುಽಚೇತುನಾ ।
ಮಹಿ । ಶವಿಷ್ಠ । ನಃ । ಕೃಧಿ । ಸಂಽಚಕ್ಷೇ । ಭುಜೇ । ಅಸ್ಯೈ ।
ಮಹಿ । ಸ್ತೋತೃಽಭ್ಯಃ । ಮಘ್ಽವನ್ । ಸುಽವೀರ್ಯಂ । ಮಥೀಃ । ಉಗ್ರಃ । ನ । ಶವಸಾ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸ ತ್ವಂ ನೋ ನೇದಿಷ್ಠಮತ್ಯಂತಸಮೀಪೇ ದದೃಶಾನೋ ವೇದ್ಯಾಂ ದದೃಶಾನೋ ದೀಪ್ತತ್ವೇನ ದೃಶ್ಯಮಾನೋ ದೇವೇಭಿಃ ಸಚನಾ ಇತರೈರ್ದೇವೈಃ ಸಮಾನಾನ್ನಃ । ಅಗ್ನಿಮುಖೇನೈವೇತ-ರೇಷಾಂ ಹವಿಃಸ್ವೀಕಾರಾತ್ಸಮಾನಾನ್ನತ್ವಂ । ಸುಚೇತುನಾ ಶೋಭನೇನ ಚೇತನೇನ ಚೇತಸಾ ವಾ । ಪುನಸ್ತದೇವ ವಿಶೇಷ್ಯತೇ । ಸುಚೇತುನಾ ಶೋಭನಚೇತೋವತಾ ಮಯಾ ॥ ಔಣಾದಿಕ ಉಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥ ಯುಕ್ತೇನ । ತ್ವದಾಯತ್ತೇ ಮಯ್ಯನು-ಗ್ರಹಯುಕ್ತೇನೇತ್ಯರ್ಥಃ । ತಾದೃಶಸ್ತ್ವಂ ಮಹಃ ಪೂಜನೀಯಾನಿ ರಾಯೋ ಧನಾನ್ಯಾ ಭರ । ಅಸ್ಮಾಕಮಾಹರ । ಹೇ ಅಗ್ನೇ ಶವಿಷ್ಠ ಬಲವನ್ನಗ್ನೇ ನೋಽಸ್ಮಭ್ಯಂ ಮಹಿ ಮಹದನ್ನಂ ಮಹತೀಂ ಕೀರ್ತಿಂ ವಾ ಕೃಧಿ । ಕುರು । ಸಂಪಾದಯ । ಶವಿಷ್ಠೇತಿ ಸಂಬೋಧಿತತ್ವಾತ್ತದೇವ ಪ್ರಾರ್ಥ್ಯತ ಇತಿ ಗಮ್ಯತೇ । ಕಿಮರ್ಥಂ । ಸಂಚಕ್ಷೇ ಸಮ್ಯಗ್ದರ್ಶನೀಯತ್ವಾಯ ಅಸ್ಯಾ ಅಸ್ಯಾಃ ಪೃಥಿವ್ಯಾಃ ಸಂಬಂಧಿನೇ ಭುಜೇ ಭೋಗಾಯ । ಯದ್ವಾ । ಸಂಚಕ್ಷೇ ಭುಜ ಇತಿ ಸಾಮಾನಾಧಿಕರಣ್ಯಂ । ಸಮ್ಯಗ್ದರ್ಶನೀಯಾಯ

**ಭೋಗಾಯೇತ್ಯರ್ಥಃ । ನ ಕೇವಲಂ ಯಜಮಾನೇಭ್ಯೋಽಸ್ಮಭ್ಯಮೇವ ಅಪಿ ತು ಸ್ತೋತೃಭ್ಯಃ ಸ್ತೋತ್ರಕರ್ತೃಭ್ಯೋಽಪಿ ಹೇ ಮಘವನ್ನನ್ನವನ್ನಗ್ನೇ ಸುವೀರ್ಯಂ ಶೋಭನಪುತ್ರಭೃತ್ಯಾದ್ಯುಪೇತಂ ಧನಂ ಶೋಭನಸಾಮರ್ಥ್ಯಂ ವಾ ಕೃಧಿ । ಕುರು । ಕಿಂಚ ಶವಸಾ ಬಲೇನ ಯುಕ್ತಃ ಸನ್ ಮೃಧಃ । ಅಸ್ಮದ್ವಿರೋಧಿನೋ ನಾಶಯ ॥ ಲುಙಿ ಹ್ಮ್ಯಂತಕ್ಷಣೇತಿ ವೃದ್ಧಿಪ್ರತಿಷೇಧಃ । ಕಾರಕಪಕ್ಷ ಔಣಾದಿಕ ಈಕಾರಃ । ಆದ್ಯುದಾತ್ತಶ್ಛಾಂದಸಃ ॥ ಯದ್ವಾ । ಮೃಧೀರ್ಮೃಧನವಾಂಸ್ತ್ವಮಸ್ಮದರ್ಥಂ ಶವಸಾ ಬಲೇನ ಯುಕ್ತೋ ಭವೇತಿ ಶೇಷಃ । ತತ್ರ ದೃಷ್ಟಾಂತಃ । ಉಗ್ರೋ ನ ಶವಸಾ । ಯಥಾ ಕಶ್ಚಿತ್ ಕ್ರೂರಃ ಶವಸಾ ಬಲೇನ ಮೃಧೀರ್ಭವತಿ ತದ್ವತ್ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸಃ**—ಆ (ನೀನು) । **ನಃ**—ನಮ್ಮ । **ನೇದಿಷ್ಠಂ**—ಅತ್ಯಂತ ಸಮೀಪದಲ್ಲಿ । **ದದೃಶಾನಃ**—ಪರಿದೃಶ್ಯಮಾನನಾಗಿ । **ದೇವೇಭಿಃ**—ಇತರ ದೇವತೆಗಳೊಡನೆ । **ಸುಚೇತುನಾ**—ಶುದ್ಧಮನಸ್ಕನಾದ (ನನ್ನಿಂದ) । **ಸಚನಾಃ**—ಸಮಾನಾನ್ನವುಳ್ಳವನಾಗಿ (ಅವರಿಗೆ ಸಮನಾಗಿ ಅನ್ನವನ್ನು ಸ್ವೀಕರಿಸುವವನಾಗಿ) । **ಮಹಃ**—ಪೂಜ್ಯವಾದ । **ರಾಯಃ**—ಧನವನ್ನು । **ಸುಚೇತುನಾ**—ಶುದ್ಧಾಂತಃಕರಣದಿಂದ । **ನಃ**—ನಮಗೆ । **ಆ ಭರ**—ಸಂಪಾದಿಸಿಕೊಡು । **ಶವಿಷ್ಠ**—ಬಲಿಷ್ಠನಾದ ಎಲೈ ಅಗ್ನಿಯೇ । **ನಃ**—ನಮಗೆ । **ಮಹಿ**—ಹೆಚ್ಚಾದ ಕೀರ್ತಿಯನ್ನು (ಧನವನ್ನು) । **ಕೃಧಿ**—ಉಂಟುಮಾಡು । **ಸಂಚಕ್ಷೇ**—ಚೆನ್ನಾಗಿ ಕಾಣುವುದಕ್ಕೋಸ್ಕರ (ಮತ್ತು) । **ಅಸ್ಯೈ ಭುಜೇ**—ಈ (ಪೃಥಿವೀ ಸಂಬಂಧವಾದ) ಭೋಗಕ್ಕೋಸ್ಕರ । **ಕೃಧಿ**—ಉಂಟುಮಾಡು । **ಸ್ತೋತೃಭ್ಯಃ**—(ನಿನ್ನ) ಸ್ತೋತೃಗಳಾದ (ಉದ್ಗಾತ್ರಾದಿಗಳಿಗೂ) । **ಮಘವನ್**—ಅನ್ನಯುಕ್ತನಾದ ಎಲೈ ಅಗ್ನಿಯೇ । **ಮಹಿ**—ಹೆಚ್ಚಾದ । **ಸುವೀರ್ಯಂ**—ಒಳ್ಳೆಯ ಪುತ್ರಾದಿಯುಕ್ತವಾದ ಧನವನ್ನು । (**ಕೃಧಿ**—ಅನುಗ್ರಹಿಸು) । **ಶವಸಾ**—ಬಲದಿಂದ (ಯುಕ್ತನಾಗಿ) । **ಉಗ್ರೋ ನ**—ಕ್ರೂರನಾದ ಪುರುಷನಂತೆ । **ಮೃಧಃ**—ಶತ್ರುಗಳನ್ನು ನಾಶಪಡಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮಗೆ ಅತ್ಯಂತ ಸಮೀಪದಲ್ಲಿ ದೇದೀಪ್ಯಮಾನನಾಗಿ, ಇತರ ದೇವತೆಗಳಿಗೆ ಸಮನಾಗಿ ಹವಿರಾದಿಗಳನ್ನು ಸ್ವೀಕರಿಸಿ, ಶುದ್ಧಾಂತಃಕರಣರಾದ ನಮಗೆ ಉತ್ತಮವಾದ ಧನಾದಿಗಳನ್ನು ಒಳ್ಳೆಯ ಮನಸ್ಸಿನಿಂದ ಅನುಗ್ರಹಿಸು; ಬಲಿಷ್ಠನೇ, ನಮಗೆ ಹೆಚ್ಚಾದ ಕೀರ್ತಿಯನ್ನು (ಅನ್ನವನ್ನು) ಪೃಥ್ವೀ ಸಂಬಂಧವಾದ ಭೋಗಗಳಿಗಾಗಿ ಮತ್ತು ಸ್ಫುರದ್ರೂಪಿಗಳಾಗಿ ಕಾಣುವುದಕ್ಕೋಸ್ಕರಲೂ, ಸಂಪಾದಿಸಿಕೊಡು; (ನಮಗೆ ಮಾತ್ರವೇ ಅಲ್ಲ) ಅನ್ನಾದಿ ಯುಕ್ತನಾದ ನೀನು ಈ ಸ್ತೋತೃಗಳಿಗೂ ಪುತ್ರಾದ್ಯುಪೇತವಾದ ಧನವನ್ನು ದಾನಮಾಡು; ನಿನ್ನ ಬಲದಿಂದ ಕ್ರೂರನಾದ ಪುರುಷನಂತೆ, ನಮ್ಮ ಶತ್ರುಗಳನ್ನು ನಾಶಪಡಿಸು.

## English Translation·

Agni, becoming visible close to us, and partaking with benignant intent of (the sacrificial) food along with the gods, bestow upon us abundant riches, with benignant intent. Most mighty Agni, render us

illustrious, that we may behold and enjoy (this earth); and grant greatness with excellent progeny to those who praise you, possessor of wealth, destroyer of foes, like a fierce (gaint) in strength.

‖ ವಿಶೇಷವಿಷಯಗಳು ‖

**ದದೃಶಾನಃ—ವೇದ್ಯಾಂ ದೀಪ್ತತ್ವೇನ ದೃಶ್ಯಮಾನಃ** । ಅಗ್ನಿಯು ಯಜ್ಞವೇದಿಯಲ್ಲಿ ತನ್ನ ಜ್ವಾಲೆಗಳಿಂದ ಕೂಡಿ ಕಾಂತಿಯುಳ್ಳವನಾಗಿ ಕಾಣಿಸುತ್ತಿರುವನೆಂದು ಅರ್ಥ.

**ದೇವೇಭಿಃ ಸಚನಾಃ—ಇತರದೇವೈಸ್ಸಮಾನಾನ್ನಃ** । ಅಗ್ನಿಗಿಂತಲೂ ಬೇರೆಯಾದ ದೇವತೆಗಳೆಲ್ಲರಿಗೂ ಅಗ್ನಿಯ ಮೂಲಕವಾಗಿಯೇ ಹವಿರ್ಭಾಗಗಳು ಅರ್ಪಿಸಲ್ಪಡುವ ಕಾರಣದಿಂದ ಆಯಾಯ ದೇವತೆಗಳಿಗೆ ಸಮಾನವಾದ ಅನ್ನವುಳ್ಳವನಾಗಿ ಇರುವನು ಎಂದು ಅರ್ಥ.

**ಸುಚೇತುನಾ**—ಎಂಬ ಪದವು ಇಲ್ಲಿ ಎರಡುಸಾರಿ ಪ್ರಯುಕ್ತವಾಗಿದೆ. ಮೊದಲನೆಯ **ಸುಚೇತುನಾ** ಎಂಬ ಪದಕ್ಕೆ ಉತ್ತಮವಾದ ಜ್ಞಾನದಿಂದ ಅಥವಾ ಉತ್ತಮವಾದ ಮನಸ್ಸಿಂದ ಎಂದು ಎರಡು ವಿಧವಾದ ಅರ್ಥವನ್ನು ವಿವರಿಸಿ ಎರಡನೆಯ **ಸುಚೇತುನಾ** ಪದಕ್ಕೆ ಒಳ್ಳೆಯ ಮನಸ್ಸುಳ್ಳವನು ಎಂದು ಅರ್ಥಮಾಡಿದೆ.

**ಮಹಿ—ಮಹದನ್ನಂ ಮಹತೀಂ ಕೀರ್ತಿಂ ವಾ** । ಪ್ರಭೂತವಾದ ಅನ್ನವನ್ನೂ ಬಹಳ ಕೀರ್ತಿಯನ್ನೂ ಅನುಗ್ರಹಿಸಲಿ ಎಂದು ಅಗ್ನಿಯನ್ನು ಪ್ರಾರ್ಥಿಸಿದೆ. **ಶವಿಷ್ಠ**—ಬಲವುಳ್ಳವನೆಂದು ಅಗ್ನಿಯನ್ನು ಸಂಬೋಧಿಸಿರುವುದರಿಂದ ಅಗ್ನಿಯು ಬಲವನ್ನೂ ಉಂಟುಮಾಡಲಿ ಎಂದು ಪ್ರಾರ್ಥಿಸಿದೆ.

**ಸಂಚಕ್ಷೇ ಭುಜೇ ಅಸ್ಯೈ—ಸಮ್ಯಕ್ ದರ್ಶನೀಯತ್ವಾಯ । ಅಸ್ಯಾಃ ಪೃಥಿವ್ಯಾಃ ಸಂಬಂಧಿನೇ ಭೋಗಾಯ । ಯದ್ವಾ । ಸಂಚಕ್ಷೇ ಭುಜೇ ಇತಿ ಸಾಮಾನಾಧಿಕರಣ್ಯಂ ಸಮ್ಯಗ್ದರ್ಶನೀಯಾಯ ಭೋಗಾಯ** । ಲೋಕದಲ್ಲಿ ಎಲ್ಲರಿಗೂ ಅಂದವಾಗಿ ಕಾಣಿಸುವುದಕ್ಕಾಗಿ ಮತ್ತು ಈ ಭೂಮಿಯಲ್ಲಿ ಅನುಭವಿಸಬಹುದಾದ ಭೋಗವನ್ನು ಅನುಭವಿಸುವುದಕ್ಕಾಗಿ ಯಜ್ಞವನ್ನು ಆಚರಿಸುವ ನಮಗೆ ಅಗ್ನಿಯು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದೆ.

**ಸುವೀರ್ಯಂ ಕೃಧಿ-ಶೋಭನ ಭೃತ್ಯ ಪುತ್ರಾದ್ಯುಪೇತಂ ಧನಂ ಶೋಭನಸಾಮರ್ಥ್ಯಂ ವಾ ಕುರು.** ಅಗ್ನಿಯು ಯಜ್ಞಮಾಡುವ ನಮಗೂ ಅವನನ್ನು ಸ್ತುತಿಮಾಡುವವರಿಗೂ ಸಹ ಒಳ್ಳೆಯ ಪುತ್ರರು ಆಗುವಂತೆಯೂ, ದಾಸ ದಾಸಿಯರು ಇವರುಗಳಿಂದ ಕೂಡಿರುವ ಧನವು ಉಂಟಾಗುವಂತೆಯೂ ಅನುಗ್ರಹಿಸಲಿ ಎಂದು ಪ್ರಾರ್ಥಿಸಿದೆ.

**ಮಥೀರುಗ್ರೋ ನ ಶವಸಾ**—ಈ ವಾಕ್ಯದಲ್ಲಿರುವ **ಶವಸಾ ಮಥೀಃ** ಎಂಬ ಶಬ್ದಗಳನ್ನು ಆವೃತ್ತಿಮಾಡಿ **ಶವಸಾ ಮಥೀಃ ಬಲೇನ ಯುಕ್ತಸ್ಸನ್ ಅಸ್ಮದ್ವಿರೋಧಿನೋ ನಾಶಯ** ಅಗ್ನಿಯು ಬಲದಿಂದ ಕೂಡಿದವನಾಗಿ ನಮ್ಮ ಶತ್ರುಗಳನ್ನು ನಾಶಮಾಡಲಿ ಎಂದು ಅರ್ಥಮಾಡಿದೆ. ಅಥವಾ—

**ಮಥೀಃ ಮಥನವಾಂಸ್ತ್ವಂ ಅಸ್ಮದರ್ಥಂ ಶವಸಾ ಬಲೇನ ಯುಕ್ತೋ ಭವ । ಯಥಾ ಕಶ್ಚಿತ್ ಕ್ರೂರಃ ಶವಸಾ ಬಲೇನ ಮಥೀರ್ಭವತಿ ತದ್ವತ್.**

ಅರಣಿಗಳಲ್ಲಿ ಮಥನದಿಂದ ಉತ್ಪನ್ನನಾದ ನೀನು ಯಜ್ಞಮಾಡುವ ನಮಗಾಗಿ ಬಲವುಳ್ಳವನಾಗಿರು ಎಂದು ಹೇಳಿ ಕ್ರೂರನಾದವನು ತನ್ನ ಸಾಮರ್ಥ್ಯದಿಂದ ಇತರರನ್ನು ನಿಗ್ರಹಮಾಡುವವನಾಗಿರುವಂತೆ ಅಗ್ನಿಯೂ ಶತ್ರುನಾಶಕವಾದ ಬಲದಿಂದ ಕೂಡಿ ಇರಬೇಕೆಂದು ದೃಷ್ಟಾಂತವನ್ನು ಹೇಳಿ ವಿವರಿಸಿದೆ.

**ಶವಸಾ—ಬಲೇನ** । ಬಲದಿಂದ ಎಂದು ಅರ್ಥ. ಶವಸ್ ಎಂಬ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಬಲನಾಮಗಳಲ್ಲಿಯೂ (ನಿ ೩-೯) ಪಠಿತವಾಗಿದೆ. ಮತ್ತು ೧-೨೭-೨; ೧-೩೯-೮; ೧-೫೧-೪; ೧-೫೨-೧೦ ಇತ್ಯಾದಿ ಋಕ್ಕುಗಳಲ್ಲಿಯೂ ಬಲ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ನೇದಿಷ್ಠಮ್**—ಅತಿಶಯಾರ್ಥದಲ್ಲಿ ಅಂತಿಕಶಬ್ದಕ್ಕೆ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ಅಂತಿಕ-ಬಾಢಯೋರ್ನೇದಸಾಧೌ** (ಪಾ. ಸೂ ೫-೩-೬೩) ಎಂಬುದರಿಂದ ಪ್ರಕೃತಿಗೆ ನೇದಾದೇಶ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದದೃಶಾನಃ**—ದೃಶಿರ್ ಪ್ರೇಕ್ಷಣೇ ಧಾತು. ಛಾಂದಸವಾಗಿ ಲಿಟ್ ಬಂದಾಗ ಅದಕ್ಕೆ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಚಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಭರ**—ಹೃಞ್ ಹರಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಧಾತುವಿನ ಹಕಾರಕ್ಕೆ ಭತ್ವ. ತಿಙಂತನಿಘಾತಸ್ವರ ಬರುತ್ತದೆ.

**ದೇವೇಭಿಃ—ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್‌ಭಾವ ಬಾರದಿರುವುದರಿಂದ **ಬಹುವಚನೇ-ಝಲ್ಯೇತ್** ಎಂಬುದರಿಂದ ಏತ್ವ.

**ಸುಚೇತುನಾ**—ಚಿತೀ ಸಂಜ್ಞಾನೇ. ಧಾತು. ಇದಕ್ಕೆ ಔಣಾದಿಕ ಉ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಶೋಭನಃ ಚೇತುಃ ಯಸ್ಯ ಸಃ, ತೇನ ಸುಚೇತುನಾ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ಮಹಃ**—ಮಹ ಪೂಜಾಯಾಂ ಧಾತು. ಕ್ವಿಪ್ ಪ್ರತ್ಯಯ. ದ್ವಿತೀಯಾಬಹುವಚನಾಂತರೂಪ.

**ರಾಯಃ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮಹಿ**—ಮಹ ಪೂಜಾಯಾಂ ಧಾತು. ಔಣಾದಿಕ ಇನ್ ಪ್ರತ್ಯಯ. ನಿತ್ತಾದುದದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶವಿಷ್ಠ**—ಶವಃ ಅಸ್ಯ ಅಸ್ತಿ ಇತಿ ಶವಸ್ವೀ. ಅತಿಶಯೇನ ಶವಸ್ವೀ ಶವಿಷ್ಠ. **ಅಸ್‌ಮಾಯಾಮೇ—** (ಪಾ. ಸೂ. ೫-೨-೧೨೧) ಎಂಬುದರಿಂದ ವಿನ್ ಪ್ರತ್ಯಯ. ಅದಕ್ಕೆ ಇಷ್ಠನ್ ಪರವಾದಾಗ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ಲುಕ್. **ಟೇಃ** (ಪಾ. ಸೂ. ೬-೪-೧೪೩.) ಎಂಬುದರಿಂದ ಟಿಗೆ (ಅಸ್) ಲೋಪ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಕೃಧಿ**—ಡುಕೃಞ್ ಕರಣೇ· ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಅದಕ್ಕೆ ಹಿ ಆದೇಶ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಶ್ರುಶೃಣಿಪ್ವೃಕೃವೃ**—(ಪಾ. ಸೂ. ೬-೪-೧೦೨) ಎಂಬುದರಿಂದ ಹಿಗೆ ಧಿ ಆದೇಶ. ಇದು ಙಿತ್ತಾದುದರಿಂದ ಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಸಂಚಕ್ಷೇ**— ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಕ್ವಿಪ್ ಪ್ರತ್ಯಯ. ಇಲ್ಲಿ ಈ ಧಾತುವು ದರ್ಶನಾರ್ಥದಲ್ಲಿ ಪ್ರಯುಕ್ತವಾಗಿದೆ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಮಥೀಃ**—ಮಂಥ ವಿಲೋಡನೇ ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನಾಂತರೂಪ. ನಾಮಪದವೆಂದು ಸ್ವೀಕರಿಸುವುದಾದರೆ ಇದಕ್ಕೆ ಔಣಾದಿಕವಾದ ಈ ಪ್ರತ್ಯಯ. ಛಾಂದಸವಾಗಿ ಆದ್ಯುದಾತ್ತಸ್ವರ ಬರುತ್ತದೆ. ॥ ೧೧ ॥

ಇಲ್ಲಿಗೆ ನೂರ ಇಪ್ಪತ್ತೇಳನೇ ಸೂಕ್ತ ಮುಗಿದುದು.

# ನೂರ ಇಪ್ಪತ್ತೆಂಟನೆಯ ಸೂಕ್ತವು

**ಅಯಂ ಜಾಯತೇತ್ಯಷ್ಟರ್ಚಂ ದ್ವಿತೀಯಂ ಸೂಕ್ತಂ । ಅಯಂ ಜಾಯತಾಷ್ಟಾವಿತ್ಯನುಕ್ರಮಣಿಕಾ । ಪರುಚ್ಛೇಪ ಋಷಿಃ । ಸರ್ವಮಾತ್ಯಷ್ಟಮಿತ್ಯುಕ್ತತ್ವಾದತ್ಯಷ್ಟಿಶ್ಛಂದಃ । ಆಗ್ನೇಯಂ ತ್ವಿತಿ ತುಶಬ್ದಸ್ಯೋಕ್ತತ್ವಾದಿದಮಪ್ಯಾಗ್ನೇಯಂ ॥ ಪೃಷ್ಠ್ಯಸ್ಯ ಷಷ್ಠೇಽಹನ್ಯೇತತ್ಸೂಕ್ತಮಾಜ್ಯಶಸ್ತ್ರೇನ ವಿನಿಯುಕ್ತಂ । ಸೂತ್ರಿತಂ ಚ ಷಷ್ಠಸ್ಯೇತಿ ಖಂಡೇ । ಅಯಂ ಜಾಯತ ಮನುಷೋ ಧರೀಮಣೀತ್ಯಾಜ್ಯಂ । ಆ. ೮-೧ । ಇತಿ ॥**

ಅನುವಾದವು—**ಅಯಂ ಜಾಯತೆ** ಎಂಬ ಈ ಸೂಕ್ತವು ಹತ್ತೊಂಭತ್ತನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು ಅನುಕ್ರಮಣಿಕೆಯಲ್ಲಿ—ಅಯಂ **ಜಾಯತಾಷ್ಟೌ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಪರುಚ್ಛೇಪನು ಋಷಿಯು. ಈ ಋಷಿದೃಷ್ಟ ಸೂಕ್ತಗಳೆಲ್ಲವೂ ಅತ್ಯಷ್ಟಿಛಂದಸ್ಕಗಳೆಂದು ಹೇಳಿರುವುದರಿಂದ ಈ ಸೂಕ್ತದ ಛಂದಸ್ಸೂ ಅತ್ಯಷ್ಟಿಯು. ಹಿಂದೆ **ಆಗ್ನೇಯಂ ತು** ಎಂದು ತುಶಬ್ದ ಪ್ರಯೋಗವಿರುವುದರಿಂದ ಈ ಸೂಕ್ತಕ್ಕೂ ಅಗ್ನಿಯೇ ದೇವತೆಯು. ಪೃಷ್ಠ್ಯಯಾಗದ ಆರನೆಯ ದಿವಸ ಈ ಸೂಕ್ತವು ಆಜ್ಯಶಸ್ತ್ರಮಂತ್ರಗಳಲ್ಲಿ ಸೇರಿ ಪಠಿಸಲ್ಪಡಬೇಕೆಂದು ಆಶ್ವಲಾಯನಶ್ರೌತಸೂತ್ರದ **ಷಷ್ಠಸ್ಯ** ಎಂಬ ಖಂಡದಲ್ಲಿ—**ಅಯಂ ಜಾಯತ ಮನುಷೋ ಧರೀಮಣೀತ್ಯಾಜ್ಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೮-೧).

## ಸೂಕ್ತ—೧೨೮

ಮಂಡಲ—೧ ॥ ಅನುವಾಕ—೧೯ ॥ ಸೂಕ್ತ—೧೨೮ ॥
ಅಷ್ಟಕ—೨ ॥ ಅಧ್ಯಾಯ—೧ ॥ ವರ್ಗ—೧೪, ೧೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
॥ ಋಷಿಃ—ಪರುಚ್ಛೇಪೋ ದೈವೋದಾಸಿಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ಅತ್ಯಷ್ಟಿಃ ॥

॥ ಸಂಹಿತಾಪಾಠಃ ॥

ಅಯಂ ಜಾಯತ ಮನುಷೋ ಧರೀಮಣಿ ಹೋತಾ ಯಜಿಷ್ಠ ಉಶಿಜಾ-
ಮನು ವ್ರತಮಗ್ನಿಃ ಸ್ವಮನು ವ್ರತಂ ।
ವಿಶ್ವಶ್ರುಷ್ಟಿಃ ಸಖೀಯತೇ ರಯಿರಿವ ಶ್ರವಸ್ಯತೇ ।
ಅದಬ್ಧೋ ಹೋತಾ ನಿ ಷದದಿಳಸ್ಪದೇ ಪರಿವೀತ ಇಳಸ್ಪದೇ ॥ ೧ ॥

॥ ಪದಪಾಠಃ ॥

ಅಯಂ । ಜಾಯತ । ಮನುಷಃ । ಧರೀಮಣಿ । ಹೋತಾ । ಯಜಿಷ್ಠಃ । ಉಶಿಜಾಂ । ಅನು । ವ್ರತಂ ।
ಅಗ್ನಿಃ । ಸ್ವಂ । ಅನು । ವ್ರತಂ ।
ವಿಶ್ವಽಶ್ರುಷ್ಟಿಃ । ಸಖಿಽಯತೇ । ರಯಿಃಽಇವ । ಶ್ರವಸ್ಯತೇ ।
ಅದಬ್ಧಃ । ಹೋತಾ । ನಿ । ಸದತ್ । ಇಳಃ । ಪದೇ । ಪರಿಽವೀತಃ । ಇಳಃ । ಪದೇ ॥ ೧ ॥

॥ ಸಾಯಣಭಾಷ್ಯಂ ॥

ಅಯಮಗ್ನಿರ್ಮನುಷೋ ಮನುಷ್ಯಸ್ಯಾಧ್ವರ್ಯೋಃ ಸಕಾಶಾಜ್ಜಾಯತ । ಅರಣಿಮಂಥನೇನೋತ್ಪನ್ನಃ । ಕೀದೃಶೋಽಯಂ । ಹೋತಾ ದೇವಾನಾಮಾಹ್ವಾತಾ ಯಜಿಷ್ಠೋಽತಿಶಯೇನ ಯಷ್ಟೃತಮಃ । ಕಿಮರ್ಥಮುತ್ಪನ್ನ ಇತಿ । ಉಶಿಜಾಂ ಫಲಸ್ಯ ಕಾಮಯಿತ್ರೀಣಾಂ ಯಜಮಾನಾನಾಂ ವ್ರತಂ ಸೋಮಯಾಗಾದಿರೂಪಂ ಕರ್ಮಾನು ಲಕ್ಷೀಕೃತ್ಯ । ನ ಕೇವಲಂ ಪರಾರ್ಥಮೇವ ಅಪಿ ತ್ವಯಮರ್ಥಃ ।

ಸ್ವಂ ವ್ರತಮನು ಸ್ವಕೀಯಂ ಹವಿಃಸ್ವೀಕಾರಾದಿರೂಪಂ ಕರ್ಮಾನುಲಕ್ಷ್ಯ । ಪುನಃ ಸ ಏವ ವಿಶೇಷ್ಯತೇ । ವಿಶ್ವಶ್ರುಷ್ಟಿರ್ವಿಶ್ವವಿಷಯಕರ್ಮವಾನ್ । ಕಸ್ಮೈ । ಸಖೀಯತೇ ಸಖಿತ್ವಮಾತ್ಮನ ಇಚ್ಛತೇ । ತಥಾ ಶ್ರವಸ್ಯತೇಽತಿಪ್ರಸಿದ್ಧಾನ್ನಮಾತ್ಮನ ಇಚ್ಛತೇ ಯಜಮಾನಾಯ ರಯಿರಿವ ಧನಸ್ಥಾನೀಯೋ ಭವತಿ । ಧನಂ ಯಥಾ ಸಖ್ಯಮನ್ನಸಮೃದ್ಧಿಂ ಚ ಸಾಧಯತಿ ತದ್ವದಯಮಗ್ನಿರಪಿ ತಸ್ಮೈ ದ್ವಯಂ ಸಾಧಯತೀತ್ಯರ್ಥಃ। ಕಿಂಚಾಯಮಗ್ನಿರಿಳಸ್ಪದ ಇಡಾಯಾ ಭೂಮ್ಯಾಃ ಪದೇ ॥ ಅಂತ್ಯಲೋಪಶ್ಛಾಂದಸಃ ॥ ಧರೀಮಣಿ ಸಾರಭೂತೇ ಸ್ಥಾನೇ ವೇದಿರೂಪೇ । ವೇದಿಮಾಹುಃ ಪರಮಂತಂ ಪೃಥಿವ್ಯಾಃ । ತೈ. ಸಂ. ೭-೪-೧೮-೨ । ಇತಿ ಶ್ರುತೇಃ । ಏತಾವತೀ ವೈ ಪೃಥಿವೀ ಯಾವತೀ ವೇದಿರಿತಿ ಚ । ಪುನಸ್ತದೇವ ವಿಶೇಷ್ಯತೇ । ಇಡಸ್ಪದ ಇಡಾದೇವತಾಯಾ ಮನೋಃ ಪುತ್ರ್ಯಾ ಗೋರೂಪಾಯಾ ಇಡೋಪಹ್ವಾನಮಂತ್ರಪ್ರತಿಪಾದಿತಾಯಾಃ ಪದೇ ಪಾದನ್ಯಾಸಪ್ರದೇಶೇ । ಇಡಾ ವೈ ಮಾನವೀ ಯಜ್ಞಾನುಕಾಶಿನ್ಯಾಸೀತ್ । ತೈ. ಬ್ರಾ. ೧-೧-೪-೪ । ಇತೀಡಾಯಾಃ ಪದೇ ಘೃತವತಿ ಸ್ವಾಹಾ । ತೈ. ಸಂ. ೧-೨-೫-೧ । ಇತಿ ಚ ಶ್ರುತೇಃ । ನಿ ಷದತ್ । ನಿಷೀದತಿ । ಕೀದೃಶೋಽಯಮಗ್ನಿಃ । ಅದಬ್ಧಃ ಕೇನಾಪ್ಯಹಿಂಸಿತಃ ಹೋತಾ ಹೋಮನಿಷ್ಪಾದಕಃ ಪರಿವೀತ ಋತ್ವಿಗ್ಭಿಃ ಪರಿಧಿಭಿರ್ವಾ ಪರಿತೋ ವೇಷ್ಟಿತಃ । ಏವಂಭೂತಃ ಸನ್ ನಿ ಷದತ್ ॥

॥ ಪ್ರತಿಪದಾರ್ಥ ॥

**ಹೋತಾ**—(ದೇವತೆಗಳನ್ನು) ಆಹ್ವಾನಿಸುವವನೂ । **ಯಜಿಷ್ಠಃ**—(ಯಜ್ಞಗಳಲ್ಲಿ) ಅತ್ಯಂತ ಪೂಜ್ಯನೂ (ಆದ) । **ಅಯಂ ಅಗ್ನಿಃ**—ಈ ಅಗ್ನಿಯು । **ಉಶಿಜಾಂ**—ಫಲಾಪೇಕ್ಷಿಗಳಾದ ಯಜಮಾನರ । **ವ್ರತಂ ಅನು**—ಸೋಮಯಾಗಾದಿಗಳನ್ನು ಉದ್ದೇಶಿಸಿ । **ಸ್ವಂ**—ಸ್ವಕೀಯವಾದ । **ವ್ರತಂ ಅನು**—(ಹೋಮಸ್ವೀಕಾರರೂಪ) ವ್ರತವನ್ನನುಸರಿಸಿ । **ಮನುಷಃ**—(ಅಧ್ವರ್ಯುರೂಪನಾದ) ಮನುಷ್ಯನಿಂದ (ಅರಣಿಯಲ್ಲಿ ಮಥಿಸಲ್ಪಟ್ಟು) । **ಜಾಯತೆ**—ಉತ್ಪನ್ನನಾದನು । **ಸಖೀಯತೇ**—(ಅಗ್ನಿಯ) ಸಖ್ಯವನ್ನು ಅಪೇಕ್ಷಿಸುವವನಿಗೆ । **ವಿಶ್ವಶ್ರುಷ್ಟಿಃ**—ಸರ್ವವಿಧ ಕರ್ಮಕರ್ತೃವಾಗಿ । **ಶ್ರವಸ್ಯತೇ**—ಅನ್ನಾಪೇಕ್ಷಿಗೆ । **ರಯಿಃ ಇವ**—ಧನದಂತೆ (ಅನ್ನಸಾಧಕನಾಗಿ) ಇರುವವನು । (**ಕಿಂಚ ಅಯಮಗ್ನಿಃ**—ಮತ್ತು ಈ ಅಗ್ನಿಯು) । **ಇಳಸ್ಪದೇ**—ಭೂತಲದಲ್ಲಿ ಇಳಸ್ಪದೇ-(ಮನುಪುತ್ರಿಯೂ, ಗೋರೂಪಳೂ ಆದ) ಇಳಾದೇವತೆಯ ಪಾದನ್ಯಾಸಸ್ಥಳವಾದ । **ಧರೀಮಣಿ**—ಸಾರಭೂತವಾದ ವೇದಿಭೂಮಿಯಲ್ಲಿ । **ಅದಬ್ಧಃ**—ಅಪ್ರತಿಹತನೂ । **ಹೋತಾ**—ಹೋಮನಿಷ್ಪಾದಕನೂ । **ಪರಿವೀತಃ**—(ಮತ್ತು ಹೋತ್ರಾದಿಗಳಿಂದ) ಪರಿವೃತನೂ ಅಥವಾ ಪರಿಧಿವೇಷ್ಟಿತನೂ (ಆಗಿ) । **ನಿ ಸದತ್**—ಕುಳಿತಿದಾನೆ.

॥ ಭಾವಾರ್ಥ ॥

(ದೇವತೆಗಳನ್ನು ಯಾಗಪ್ರದೇಶಕ್ಕೆ) ಆಹ್ವಾನಿಸುವವನೂ, (ಯಜ್ಞಗಳಲ್ಲಿ) ಅತ್ಯಂತ ಪೂಜ್ಯನೂ, (ತನ್ನ) ಸಖ್ಯವನ್ನಪೇಕ್ಷಿಸುವವರಿಗೆ ಸಮಸ್ತವನ್ನು ದೊರಕಿಸಿಕೊಡುವವನೂ, ಅನ್ನಾಭಿಲಾಷಿಗಳಿಗೆ (ಅನ್ನಕ್ಕೆ ಮೂಲಭೂತವಾದ) ಧನವನ್ನು ಅನುಗ್ರಹಿಸುವವನೂ ಆದ ಈ ಅಗ್ನಿಯು, ಫಲಾಪೇಕ್ಷಿಗಳಾದ ಯಜಮಾನರ ಉದ್ದೇಶವಾಗಿಯೂ, ಹವಿಸ್ಸ್ವೀಕಾರರೂಪವಾದ ತನ್ನ ಸ್ವಂತ ಉದ್ದೇಶವಾಗಿಯೂ, (ಅಧ್ವರ್ಯುರೂಪನಾದ) ಮನುಷ್ಯನಿಂದ (ಅರಣಿಯಲ್ಲಿ ಮಥಿಸಲ್ಪಟ್ಟು) ಜನಿಸುತ್ತಾನೆ; (ಜನಿಸಿ) (ಮನುಪುತ್ರಿಯೂ, ಗೋರೂಪಳೂ ಆದ) ಇಳಾದೇವತಾಪಾದನ್ಯಾಸಸ್ಥಾನವಾದ, ಭೂತಲದಲ್ಲಿ ಅತ್ಯಂತ ಪವಿತ್ರವಾದ ವೇದಿಭೂಮಿಯಲ್ಲಿ, ಅಪ್ರತಿಹತನಾಗಿ, ಹೋಮನಿಷ್ಪಾಕನಾಗಿ, ಋತ್ವಿಜರಿಂದ ಪರಿವೃತನಾಗಿ ಮಂಡಿಸುತ್ತಾನೆ.

## English Translation.

This Agni, the invoker of the gods, the assiduous offerer of sacrifices, is generated of man. (for the fulfilment of the) duty of those who desire (the fruit of) pious rites, as well as for (the discharge of) his own duty: he is the bestower of all blessings on him who desires his friendship, and is wealth to (such a one) seeking for food: the unobstructed offerer of oblations, he sits down, surrounded (by ministering priests), on the most sacred spot of earth, upon the footmark of Ila.

॥ ವಿಶೇಷವಿಷಯಗಳು ॥

**ಮನುಷಃ—ಮನುಷ್ಯಸ್ಯ ಅಧ್ವರ್ಯೋಃ ಸಕಾಶಾತ್** ಅಗ್ನಿಯು ಅಧ್ವರ್ಯುವಿನಿಂದ ಅರಣಿಗಳಲ್ಲಿ ಉತ್ಪನ್ನನಾಗಿರುವನು. ಅಧ್ವರ್ಯುವೆಂಬುವನು ಋತ್ವಿಜರಲ್ಲಿ ಒಬ್ಬನಾಗಿ ಇರುವನು. ಮನುಷಃ ಎಂಬ ಪದವು ಅಧ್ವರ್ಯುವೂ ಒಬ್ಬ ಮನುಷ್ಯನೆಂದು ಬೋಧಿಸುತ್ತದೆ. ನಿರುಕ್ತಕಾರರು,

**ಯವಂ ವೃಕೇಣಾಶ್ವಿನಾ ವಪಂತೇಷಂ ದುಹಂತಾ ಮನುಷಾಯ ದಸ್ರಾ ।**
**ಅಭಿ ದಸ್ಯುಂ ಬಕುರೇಣಾ ಧಮಂತೋರು ಜ್ಯೋತಿಶ್ಚಕ್ರಥುರಾರ್ಯಾಯ ॥**

(ಋ. ಸಂ. ೧-೧೧೭-೨೧)

ಇಲ್ಲಿ **ಮನುಷಾಯ ಮನುಷ್ಯಾಯ** ಎಂದು ಅರ್ಥವನ್ನು ವಿವರಿಸಿದ್ದಾರೆ. ಮತ್ತು—

**ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ ಯಜಸಿ ಜಾತವೇದಃ ।**
**ಆ ಚ ವಹ ಮಿತ್ರಮಹಶ್ಚಿಕಿತ್ವಾನ್ ತ್ವಂ ದೂತಃ ಕವಿರಸಿ ಪ್ರಚೇತಾಃ ॥**

(ಋ. ಸಂ. ೧೦-೧೧೦-೧)

ಇಲ್ಲಿಯೂ ಕೂಡ **ಮನುಷಃ ಮನುಷ್ಯಸ್ಯ** ಎಂದು ಅರ್ಥವನ್ನು ಹೇಳಿರುತ್ತಾರೆ.

ಈ ಋಕ್ಕಿನಲ್ಲಿ ಹೋತಾ ಎಂಬ ಪದವು ಎರಡುಸಾರಿ ಉಕ್ತವಾಗಿದೆ. ಅದರಲ್ಲಿ ಮೊದಲನೆಯ **ಹೋತಾ** ಎಂಬ ಪದಕ್ಕೆ **ದೇವಾನಾಂ ಆಹ್ವಾತಾ** ದೇವತೆಗಳನ್ನು ಯಾಗಕ್ಕಾಗಿ ಆಹ್ವಾನಮಾಡುವವನೆಂದೂ, ಎರಡನೆಯ **ಹೋತಾ** ಎಂಬ ಪದಕ್ಕೆ **ಹೋಮನಿಷ್ಪಾದಕಃ** ಹೋಮವನ್ನು ಉಂಟುಮಾಡುವವನೆಂಬುದಾಗಿಯೂ ಅರ್ಥ ಮಾಡಿದೆ.

**ಉಶಿಜಾಂ—ಫಲಸ್ಯ ಕಾಮಯಿತ್ರೀಣಾಂ ಯಜಮಾನಾನಾಂ ।** ಸ್ವರ್ಗಾದಿ ಫಲವನ್ನು ಹೊಂದಲು ಅಪೇಕ್ಷಿಸಿ ಯಜ್ಞಮಾಡುವವರ ಎಂದು ಅರ್ಥವನ್ನು ವಿವರಿಸಿದೆ.

**ಉಶಿಕ್**—ಎಂಬ ಪದವು. ಹದಿನೆಂಟು ಕಾಂತಿಕರ್ಮಗಳಲ್ಲಿ, (ನಿ. ೩-೯) ಪಠಿತವಾಗಿದೆ. **ಉಶಿಜಃ** ಎಂಬ ಪದವು ಇಪ್ಪತ್ತನಾಲ್ಕು ಮೇಧಾವಿನಾಮಗಳಲ್ಲಿಯೂ (ನಿ. ೩-೧೯) ಉಕ್ತವಾಗಿದೆ. ಮತ್ತು **ಕಕ್ಷೀವಂತಂ ಯ**

**ಔಶಿಜಃ** ಎಂಬಲ್ಲಿ **ಉಶಿಜಃ ಪುತ್ರಃ ಔಶಿಜಃ ಉಶಿಗ್ ವಷ್ಟೇಃ ಕಾಂತಿಕರ್ಮಣಃ** (ನಿ. ೬-೧೧) ಎಂದು ಹೇಳಿದೆ. ಸಾಯಣರು ಮಾತ್ರ ಫಲಾಭಿಲಾಷೆಯುಳ್ಳ ಯಜಮಾನರೆಂದು ಅರ್ಥವನ್ನು ಹೇಳಿದ್ದಾರೆ.

**ವ್ರತಂ ಅನು ವ್ರತಂ ಅನು**—ಎರಡುಸಾರಿ ಆವರ್ತಿತವಾಗಿರುವ ವ್ರತಶಬ್ದಗಳಲ್ಲಿ ಮೊದಲನೆಯ ವ್ರತಶಬ್ದಕ್ಕೆ ಸೋಮಯಾಗಾದಿರೂಪವಾದ ಕರ್ಮವೆಂದು ಅರ್ಥಮಾಡಿದೆ. ಎರಡನೆಯ ವ್ರತಶಬ್ದಕ್ಕೆ ಹವಿಸ್ಸ್ವೀಕಾರರೂಪವಾದ ಕರ್ಮವೆಂದು ಅರ್ಥವನ್ನು ವಿವರಿಸಿದೆ.

ಅಗ್ನಿಯು ಫಲಾಭಿಸಂಧಿಯಿಂದ ಯಜ್ಞಮಾಡುವ ಸೋಮಯಾಗವನ್ನು ನೆರವೇರಿಸುವುದಕ್ಕಾಗಿಯೂ, ತನ್ನ ಹವಿರ್ಭಾಗಗಳ ಸ್ವೀಕಾರಕ್ಕಾಗಿಯೂ ಅರಣಿಗಳಲ್ಲಿ ಉತ್ಪನ್ನನಾಗುವನೆಂದೂ ಸ್ವಕಾರ್ಯವನ್ನೂ ಪರರ ಕಾರ್ಯವನ್ನೂ ಅಗ್ನಿಯು ನೆರವೇರಿಸುವನೆಂದೂ ವರ್ಣಿಸಿದೆ.

**ಸಖೀಯತೇ ಶ್ರವಸ್ಯತೇ ವಿಶ್ವಕೃಷ್ಟಿಃ ರಯಿರಿವ—ಅತಿಪ್ರಸಿದ್ಧಾನ್ನಮಾತ್ಮನ ಇಚ್ಛತೇ ಯಜಮಾನಾಯ—ವಿಶ್ವವಿಷಯಕಕರ್ಮವಾನ್ ಧನಸ್ಥಾನೀಯೋ ಭವತಿ। ಧನಂ ಯಥಾಸಖ್ಯಂ ಅನ್ನಸಮೃದ್ಧಿಂ ಚ ಸಾಧಯತಿ ತದ್ವತ್ ಅಗ್ನಿರಪಿ ತಸ್ಮೈ ದ್ವಯಂ ಸಾಧಯತಿ।** ಪ್ರಪಂಚಕ್ಕೆ ಸಂಬಂಧಿಸಿದ ಕರ್ಮಗಳೆಲ್ಲವನ್ನೂ ಆಚರಿಸುತ್ತಿರುವ ಅಗ್ನಿಯು—ಉತ್ಕೃಷ್ಟವಾದ ಅನ್ನವನ್ನು ಅಪೇಕ್ಷಿಸುವ ಮತ್ತು ಸ್ನೇಹವನ್ನು ಇತರರ ಸಂಗಡ ಬಳೆಸಲು ಇಚ್ಛಿಸುವ ಯಜಮಾನನಿಗೆ ಧನವು ಇತರರ ಸ್ನೇಹವನ್ನುಂಟುಮಾಡಿ ಉತ್ತಮವಾದಅನ್ನವನ್ನೂ ಉಂಟುಮಾಡಿಕೊಡುವಂತೆ ಅವನ ಇಷ್ಟವಾದ ಇವೆರಡನ್ನೂ ಸಾಧಿಸಿ ಕೊಡುವನು ಎಂದು ಹೋಲಿಸಿದೆ.

**ಇಳಸ್ಪದೇ ಧರೀಮಣಿ-ಇಡಾಯಾಃ ಭೂಮ್ಯಾಃ ಪದೇ ಸಾರಭೂತೇ ಸ್ಥಾನೇ ವೇದಿರೂಪೇ.** ಈ ಅಗ್ನಿಯು ಇಡಾ ಎಂಬ ಹೆಸರಿನಿಂದ ಪ್ರಸಿದ್ಧವಾದ ಭೂಮಿಯಲ್ಲಿ ಶ್ರೇಷ್ಠವೆನಿಸಿರುವ ಯಜ್ಞದ ವೇದಿಯಲ್ಲಿ ಸುಖವಾಗಿ ಇರುವನು ಎಂದು ಅರ್ಥ. ಈ ವಿಷಯದಲ್ಲಿ—**ವೇದಿಮಾಹುಃ ಪರಮಂತಂ ಪೃಥಿವ್ಯಾಃ** ಎಂಬ ತೈತ್ತಿರೀಯ ಸಂಹಿತಾವಾಕ್ಯವೂ (ತೈ. ಸಂ. ೭-೪-೧೮-೨) ಮತ್ತು—**ಏತಾವತೀ ವೈ ಪೃಥಿವೀ ಯಾವತೀ ವೇದಿಃ** (ತೈ. ಸಂ. ೨-೬-೪-೧) ಎಂಬ ವಾಕ್ಯವೂ ಪ್ರಮಾಣವಾಗಿದೆ ಎಂದು ವರ್ಣಿಸಿದೆ.

**ಇಳಸ್ಪದೇ ಪರಿವೀತಃ ನಿ ಷದತ್—ಇಡಾದೇವತಾಯಾಃ ಮನೋಃ ಪುತ್ರ್ಯಾಃ ಇಡೋಪಹ್ವಾನ-ಮಂತ್ರಪ್ರತಿಪಾದಿತಾಯಾಃ ಪದೇ ಪಾದನ್ಯಾಸಪ್ರದೇಶೇ ಋತ್ವಿಗ್ಭಿಃ ಪರಿಧಿಭಿರ್ವಾ ಪರಿತೋ ವೇಷ್ಟಿತಃ ನಿಷದತ್** ಈ ಋಕ್ಕಿನಲ್ಲಿ ಇಳಸ್ಪದೇ ಎಂಬ ಪದವು ಎರಡುಸಾರಿ ಉಕ್ತವಾಗಿದೆ. ಅದರಲ್ಲಿ ಮೊದಲನೆಯಸಾರಿ ಉಕ್ತವಾದ ಇಳಸ್ಪದೇ ಎಂಬ ಪದಕ್ಕೆ ಅರ್ಥವನ್ನೂ ಹೇಳಿದೆ. ಎರಡನೆಯ ಇಳಸ್ಪದೇ ಎಂಬ ಪದಕ್ಕೆ ಇಡಾಯಾಃ ಪದೇ ಎಂದು ವಿಗ್ರಹವಾಕ್ಯವನ್ನು ಹೇಳಿ—ಇಡಾ ದೇವಿಯು ಮನುವಿನ ಪುತ್ರಿಯೆಂದು ಅರ್ಥಮಾಡಿದೆ. ಈ ವಿಷಯವು ತೈತ್ತಿರೀಯ ಬ್ರಾಹ್ಮಣದಲ್ಲಿ ಉಕ್ತವಾಗಿದೆ ಎಂದು **ಇಡಾ ವೈ ಮಾನವೀ ಯಜ್ಞಾನೂಕಾಶಿನ್ಯಾಸೀತ್** (ತೈ. ಬ್ರಾ. ೧-೧-೪-೪) ಎಂಬ ವಾಕ್ಯವನ್ನು ಪ್ರಮಾಣವಾಗಿ ಉದಹರಿಸಿದೆ. ಮತ್ತು ಇಡಾದೇವತೆಯ ಪಾದನ್ಯಾಸಪ್ರದೇಶಕ್ಕೆ ಹೋಮಮಾಡುವ **ಇಡಾಯಾಃ ಪದೇ ಘೃತವತಿ ಸ್ವಾಹಾ** (ತೈ. ಸಂ. ೧-೨-೫-೧) ಇಡೋಪಹ್ವಾನ ಮಂತ್ರವನ್ನೂ ಪ್ರಮಾಣವಾಗಿ ಹೇಳಿದೆ. ಇಡಾದೇವಿಯು ಗೋರೂಪದಿಂದ ಪಾದವಿನ್ಯಾಸಮಾಡಿದ ಪ್ರದೇಶವೆಂದು ಯಜ್ಞವೇದಿಯ ಮಾಹಾತ್ಮ್ಯವನ್ನು ವಿವರಿಸಿ, ಈ ರೀತಿಯಾಗಿ ಪರಿಶುದ್ಧತೆಯಿಂದ ಕೂಡಿರುವ ಈ ವೇದಿಯಲ್ಲಿ ಅಗ್ನಿಯು ಋತ್ವಿಜರಿಂದಲೂ ಮತ್ತು ದರ್ಭೆಗಳ ಪರಿಧಿಯಿಂದಲೂ ಸುತ್ತುವರಿದವನಾಗಿ ಪ್ರತಿಷ್ಠಾಪಿತನಾಗಿ ಇರುವನು ಎಂದು ವರ್ಣಿಸಿದೆ.

**ಪರಿವೀತಃ—ಪರಿತಃ ವೇಷ್ಟಿತಃ**—ಸುತ್ತುವರಿಯಲ್ಪಟ್ಟವನೆಂದು ಅರ್ಥ.

**ಅದಬ್ಧಃ—ಕೇನಾಪ್ಯಹಿಂಸಿತಃ**—ಹಿಂಸೆಮಾಡು ಎಂಬ ಅರ್ಥವನ್ನು ಕೊಡುವ ದಭ್ ಧಾತುವಿನಿಂದ ನಿಷ್ಪನ್ನವಾದ ದಬ್ಧಃ ಎಂಬ ಪದಕ್ಕೆ ಹಿಂಸೆಮಾಡತಕ್ಕವನೆಂದು ಅರ್ಥವಾಗುತ್ತದೆ. ಅದಬ್ಧಃ ಎಂದರೆ ಅಗ್ನಿಯು ಯಾರಿಂದಲೂ ಹಿಂಸೆಮಾಡಲ್ಪಡದಿರುವವನಾಗಿ ಇರುವನು ಎಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಜಾಯತೆ**—ಜನೀ ಪ್ರಾದುರ್ಭಾವೇ ಧಾತು. ಲಙ್ ಪ್ರಥಮಪುರುಷ ಏಕವಚನಾ ತರೂಪ. **ಬಹುಲಂ ಛಂದಸ್ಯಮಾಙ್ ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಮನುಷಃ**—ಮನ ಜ್ಞಾನೇ ಧಾತು. ಮನ್ಯತೇ ಜಾನಾತೀತಿ ಮನುಃ ಪ್ರಜಾಪತಿಃ. **ಜನೇರುಸಿಃ ನಿಚ್ಚ** ಎಂದು ಅನುವೃತ್ತವಾಗುವಾಗ **ಬಹುಲಮನ್ಯತ್ರಾಪಿ** (ಉ ಸೂ. ೨-೨೭೮) ಎಂಬುದರಿಂದ ಉಸಿ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತ ಸ್ವರಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಧರೀಮಣಿ**—ಧೃಙ್ ಧಾರಣೇ. ಧಾತು. **ಹೃಭೃಧೃಸೃ**—(ಉ. ಸೂ. ೪-೫೮೭) ಎಂಬುದರಿಂದ ಇಮನಿಚ್ ಪ್ರತ್ಯಯ. ಛಾಂದಸವಾಗಿ ಇಕಾರಕ್ಕೆ ದೀರ್ಘ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಉಶಿಜಾವ್**—ವಶ ಕಾಂತೌ ಧಾತು. **ವಶಃ ಕಿತ್** (ಉ ಸೂ. ೨-೨೯೯) ಎಂಬುದರಿಂದ ಇಜಿ ಪ್ರತ್ಯಯ. ಕಿತ್ವ ವಿಧಾನಮಾಡಿರುವುದರಿಂದ **ಗ್ರಹಿಜ್ಯಾವಯಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣ ಪೂರ್ವರೂಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸಖೀಯತೇ**—ಸಖಿತ್ವಮಾತ್ಮನಃ ಇಚ್ಛತಿ ಸಖೀಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. ಕ್ಯಜಂತದಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಚತುರ್ಥೀ ಏಕವಚನಾಂತರೂಪ. ನುಮ್ ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಹೀಗೆಯೇ ಶ್ರವಸ್ಯತೇ ಎಂಬಲ್ಲಿಯೂ ಕ್ಯಚ್, ಸ್ವರ ಬರುತ್ತವೆ.

**ಅದಬ್ಧಃ**—ದಂಭು ದಂಭನೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಅನಿದಿತಾಂ**—ಸೂತ್ರದಿಂದ ಉಪಧಾಲೋಪ. **ಝಷಸ್ತಥೋ**—ಎಂಬುದರಿಂದ ಪ್ರತ್ಯಯಕ್ಕೆ ಧತ್ವ. ಧಾತು ಭಕಾರಕ್ಕೆ ಜಸ್ತ್ವ ನಞ್ ತತ್ಪುರುಷಸಮಾಸವಾದಾಗ **ತತ್ಪುರುಷೇ**—(ಪಾಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸದತ್**—ಷದ್ಲೃ ವಿಶರಣಗತ್ಯವಸಾದನೇಷು ಧಾತು. **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷಏಕವಚನಪರವಾದಾಗ **ಪುಷಾದಿದ್ಯುತಾದಿ**—(ಪಾ. ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ **ಬಹುಲಂ ಛಂದಸ್ಯ**—ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತ ಸ್ವರ ಬರುತ್ತದೆ.

**ಇಳಸ್ಪದೇ**—ಇಡಾಯಾಃ ಪದಮ್. ತಸ್ಮಿನ್. ಛಾಂದಸವಾಗಿ ಅಂತ್ಯಲೋಪ ಬರುತ್ತದೆ. ಸಪ್ತಮಿಾ ಏಕವಚನಾಂತರೂಪ.

**ಪರಿವೀತಃ**—ವೀ ಗತ್ಯಾದಿಷು ಧಾತು ಕರ್ಮಣಿಯಲ್ಲಿ ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿ ಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ತಂ ಯಜ್ಞಸಾಧಮಪಿ ವಾತಯಾಮಸ್ಯೃತಸ್ಯ ಪಥಾ ನಮಸಾ ಹವಿಷ್ಮತಾ
ದೇವತಾತಾ ಹವಿಷ್ಮತಾ ।
ಸ ನ ಊರ್ಜಾಮುಪಾಭೃತ್ಯಯಾ ಕೃಪಾ ನ ಜೂರ್ಯತಿ ।
ಯಂ ಮಾತರಿಶ್ವಾ ಮನವೇ ಪರಾವತೋ ದೇವಂ ಭಾಃ ಪರಾವತಃ ॥ ೨ ॥

॥ ಪದಪಾಠಃ ॥

ತಂ । ಯಜ್ಞಽಸಾಧಂ । ಅಪಿ । ವಾತಯಾಮಸಿ । ಋತಸ್ಯ । ಪಥಾ । ನಮಸಾ । ಹವಿಷ್ಮತಾ ।
ದೇವಽತಾತಾ । ಹವಿಷ್ಮತಾ ।
ಸಃ । ನಃ । ಊರ್ಜಾಂ । ಉಪಽಆಭೃತಿ । ಅಯಾ । ಕೃಪಾ । ನ । ಜೂರ್ಯತಿ ।
ಯಂ । ಮಾತರಿಶ್ವಾ । ಮನವೇ । ಪರಾಽವತಃ । ದೇವಂ । ಭಾರಿತಿ ಭಾಃ । ಪರಾಽವತಃ ॥ ೨ ॥

॥ ಸಾಯಣಭಾಷ್ಯಂ ॥

ಯಜ್ಞಸಾಧಂ ಯಜ್ಞಸ್ಯ ಸಾಧಕಂ ॥ ಸಾಧ್ನೋತೇಃ ಕ್ವಿಪಿ ಕೃದುತ್ತರಪದಪ್ರಕೃತಿಸ್ವರತ್ವಂ ॥ ತಮಗ್ನಿಂ ವೇದ್ಯಾಂ ಸ್ಥಾಪಿತಮಪಿ ವಾತಯಾಮಸಿ । ಅಪಿಃ ಸಂಭಾವನಾರ್ಥಃ । ಆ ಪರಿತೋಷಂ ಸೇವಾಮಹೇ ॥ ವಾತ ಗತಿಸುಖಸೇವನಯೋಃ । ಚೌರಾದಿಕಃ । ಇದಂತೋ ಮಸಿಃ ॥ ಕೇನೋಪಾಯೇನೇತಿ ತದುಚ್ಯತೇ । ಋತಸ್ಯ ಪಥಾ ಯಾಗಸ್ಯ ಮಾರ್ಗೇಣ ಯಾಗಾನುಷ್ಠಾನೇನ । ಯಜ್ಞೇನ ದೇವೇಭ್ಯ ಇತಿ

**ಶ್ರುತೇರ್ಯಜ್ಞೇನ ದೇವಸ್ಯ ಮಹತೀ ಪ್ರೀತಿರ್ಭವತಿ। ಯದ್ವಾ। ಋತಸ್ಯ ಯಜ್ಞಸ್ಯ ಪಥಾ। ಮಾರ್ಗಸ್ತೀರ್ಥಾಖ್ಯಃ ಪೂರ್ವೇಣೋತ್ಕರಮಪರೇಣ ಪ್ರಣೀತಾಃ। ಆ. ೧-೧। ಇತ್ಯಾದಿಸೂತ್ರೋಕ್ತಃ। ತೇನ ಮಾರ್ಗೇಣ ಗತ್ವಾ। ಪುನಃ ಕೇನ। ಹವಿಷ್ಮತಾಜ್ಯಾದಿಪ್ರದೇಯದ್ರವ್ಯವತಾ ನಮಸಾ ನಮಸ್ಕಾರೋಪಲಕ್ಷಣೇನ ಸ್ತೋತ್ರೇಣೋಪಸ್ಥಾನೇನ ವಾ। ತದುಭಯೇನೇತ್ಯರ್ಥಃ। ಕುತ್ರೇತಿ ತದುಚ್ಯತೇ। ಹವಿಷ್ಮತಾ ಹವಿಷ್ಮತ್ಯಾಜ್ಯಪುರೋಡಾಶಾದಿಬಹುಹವಿರ್ಯುಕ್ತೇ ದೇವತಾತಾ ದೇವಾನಾಂ ವಿಸ್ತಾರಯುಕ್ತೇ ಯಜ್ಞೇ। ಕಿಂಚ ಸೋಽಗ್ನಿರ್ನೋಽಸ್ಮತ್ಸಂಬಂಧಿನಾಮೂರ್ಜಾಂ ಹವಿರ್ಲಕ್ಷಣಾನಾಮನ್ನಾನಾಮುಪಾಭೃತ್ಯುಪಾಹರಣೇ ತತ್ಸ್ವೀಕಾರವಿಷಯೇ॥ ಉಪಾಙುಪಸೃಷ್ಟಾದ್ಭರತೇಃ ಕ್ತಿನ್। ಹೃಗ್ರಹೋರ್ಭ ಇತಿ ಭತ್ವಂ। ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್। ತಾದೌ ಚೇತ್ಯನಂತರಸ್ಯ ಗತೇಃ ಪ್ರಕೃತಿಸ್ವರತ್ವಂ॥ ಅಯಾ ಕೃಪಾನಯಾ ಸಾಮರ್ಥ್ಯಲಕ್ಷಣಯಾ ಕಲ್ಪನಯಾ ಹವಿಃಸ್ವೀಕರಣರೂಪಯಾ ನ ಜೂರ್ಯತಿ। ಯಜ್ಞಸಮಾಪ್ತಿಪರ್ಯಂತಂ ನ ನಶ್ಯತಿ। ಅಜರೋ ವರ್ತತ ಇತ್ಯರ್ಥಃ। ಸ ಇತ್ಯುಕ್ತಂ। ಕ ಇತ್ಯಾಹ। ಯಮಗ್ನಿಂ ದೇವಂ ದ್ಯೋತನಶೀಲಂ ಮಾತರಿಶ್ವಾಂತರಿಕ್ಷಸಂಚಾರೀ ವಾಯುಃ ಪೂರ್ವಂ ಮನವೇ ಮನೋರರ್ಥಾಯ ಪರಾವತೋಽತಿದೂರಂ ಗತವತ ಆದಿತ್ಯಾದ್ಭಾಃ। ಅಭಾಸೀತ್। ಔಚಿತ್ಯೇನ ಭೂಮೌ ಸ್ಥಾಪಿತವಾನಿತ್ಯರ್ಥಃ। ತದ್ವತ್ಪರಾವತೋ ದೂರಾದ್ದೇವಮಗ್ನಿಮಸ್ಮದ್ದೇವಯಜನಂ ಪ್ರತಿ ಸ್ಥಾಪಯತ್ವಿತ್ಯರ್ಥಃ॥**

॥ ಪ್ರತಿಪದಾರ್ಥ ॥

**ದೇವತಾತಾ**—ದೇವಸಮೂಹದಿಂದ (ಯುಕ್ತವಾದ) ವಿಸ್ತೃತವೂ। **ಹವಿಷ್ಮತಾ**- ಆಜ್ಯಪುರೋಡಾಶಾದಿ ಹವಿರ್ಯುಕ್ತವೂ (ಆದ)। **ಋತಸ್ಯ ಪಥಾ**—ಯಾಗಾನುಷ್ಠಾನರೂಪವಾದ ಮಾರ್ಗದಿಂದ (ಮತ್ತು)। **ಹವಿಷ್ಮತಾ**—ಹವಿರಾದಿದ್ರವ್ಯಯುಕ್ತವಾದ। **ನಮಸಾ**—ನಮಸ್ಕಾರ (ಉಪಸ್ಥಾನ)ದಿಂದ। **ಯಜ್ಞಸಾಧಂ**—ಯಜ್ಞಸಾಧಕನಾದ। **ತಂ**—(ವೇದಿಪ್ರತಿಷ್ಠಿತನಾದ) ಆ (ಅಗ್ನಿಯನ್ನು)। **ಅಪಿ ವಾತಯಾಮಸಿ**—ತೃಪ್ತಿಯಾಗುವವರೆಗೂ ಸೇವಿಸೋಣ। **ಯಂ**—ಯಾವ। **ದೇವಂ**—ದ್ಯೋತನಶೀಲನಾದ (ಅಗ್ನಿದೇವನನ್ನು)। **ಮಾತರಿಶ್ವಾ**—ವಾಯುವು। **ಮನವೇ**—ಮನುವಿಗೋಸ್ಕರ। **ಪರಾವತಃ**—ಅತಿದೂರದಲ್ಲಿರುವ (ಸೂರ್ಯನ ಹತ್ತಿರದಿಂದ)। **ಭಾಃ**—(ಭೂಮಿಯಮೇಲೆ) ಪ್ರಕಾಶಿಸುವಂತೆ ಮಾಡಿದನೋ। **ಸಃ**—ಆ ಅಗ್ನಿಯು। **ನಃ**—ನಮ್ಮಸಂಬಂಧವಾದ। **ಊರ್ಜಾಂ**—ಹವೀರೂಪವಾದ ಆಹಾರದ। **ಉಪ ಆಭೃತಿ**—ಸ್ವೀಕಾರ ವಿಷಯದಲ್ಲಿ। **ಅಯಾ ಕೃಪಾ**—(ಹವಿಃಸ್ವೀಕಾರರೂಪವಾದ) ಕಲ್ಪನೆ (ಕೃಪೆ)ಯಿಂದ। **ನ ಜೂರ್ಯತಿ**—(ಯಾಗಪರಿಸಮಾಪ್ತಿಪರ್ಯಂತ) ಜೀರ್ಣ(ನಾಶ)ನಾಗುವುದಿಲ್ಲ। **ಪರಾವತಃ**—ದೂರಪ್ರದೇಶದಿಂದ (ಅಗ್ನಿಯು ಯಾಗೋದ್ದೇಶದಿಂದ ಬರಲಿ)

॥ ಭಾವಾರ್ಥ ॥

ದೇವಸಮೂಹದಿಂದ ಯುಕ್ತವಾದ ಮತ್ತು ಆಜ್ಯಪುರೋಡಾಶಾದಿದ್ರವ್ಯಯುಕ್ತವಾದ ಯಾಗಶಾಲೆಯಲ್ಲಿ, ಯಾಗಾನುಷ್ಠಾನಮಾರ್ಗವಾಗಿ ಮತ್ತು ಹವಿರಾದಿದ್ರವ್ಯಯುಕ್ತವಾದ ಉಪಸ್ಥಾನಗಳಿಂದ, ಅಗ್ನಿಯನ್ನು ತೃಪ್ತಿಪರ್ಯಂತವಾಗಿ ಸೇವಿಸೋಣ. ದ್ಯೋತನಶೀಲವಾದ ಈ ಅಗ್ನಿಯನ್ನು ವಾಯುವು ಬಹುದೂರದಲ್ಲಿರುವ ಸೂರ್ಯನ ಸಮೀಪದಿಂದ (ಭೂಮಿಯಲ್ಲಿ) ಪ್ರಕಾಶಿಸುವಂತೆ ಮಾಡಿದನು; ಈ ಅಗ್ನಿಯು ನಮ್ಮಹವಿರಾದಿಗಳ ಸ್ವೀಕಾರವಿಷಯದಲ್ಲಿ ತನ್ನ

(ಸಾಮರ್ಥ್ಯರೂಪವಾದ) ಕೃಪೆಯಿಂದ ಯಜ್ಞ ಮುಗಿಯುವವರೆಗೂ ನಾಶವಾಗದಿರಲಿ; (ಮತ್ತು) ದೂರದಿಂದ (ನಮ್ಮ ಯಾಗಾರ್ಥವಾಗಿ) ಆಗಮಿಸಲಿ.

## English Translation.

We propitiate that instrument of sacrifice by the path of sacrifice, by reverential salutation, and by oblations of clarified butter ; by oblations (offered) to the gods : and he accepts our offerings, and through his benignity quits not (the rite until its close), the divinity whom the wind brought from afar for the service of Manu : (may he come) from afar (to our sacrifice).

॥ ವಿಶೇಷವಿಷಯಗಳು ॥

**ಯಜ್ಞಸಾಧಮುಪ ವಾತಯಾಮಸಿ** – **ಯಜ್ಞಸ್ಯ ಸಾಧಕಂ ತಂ ಅಗ್ನಿಂ ವೇದ್ಯಾಂ ಸ್ಥಾಪಿತಂ ಆಪರಿತೋಷಂ ಸೇವಾಮಹೇ ।** ಯಜ್ಞವನ್ನು ನೆರವೇರಿಸುವದರಲ್ಲಿ ಸಮರ್ಥನಾದ ಅಗ್ನಿಯು ಯಜ್ಞದ ವೇದಿಯಲ್ಲಿ ಸ್ಥಾಪಿಸಲ್ಪಟ್ಟಿರುವನು. ಇವನನ್ನು ಇವನಿಗೆ ಸಂತೋಷವುಂಟಾಗುವವರಿಗೂ ಯಜಮಾನರೂ ನಾವು ಸಹ ಸೇವಿಸುತ್ತೇವೆ ಎಂದು ಅರ್ಥ.

**ಋತಸ್ಯ ಪಥಾ—ಯಾಗಸ್ಯ ಮಾರ್ಗೇಣ ಯಾಗಾನುಷ್ಠಾನೇನ ಯಜ್ಞೇನ ದೇವಸ್ಯ ಮಹತೀ ಪ್ರೀತಿಃ ಭವತಿ । ಯದ್ವಾ ಋತಸ್ಯ ಯಜ್ಞಸ್ಯ ಪಥಾ । ಮಾರ್ಗಸ್ತ್ರೇಧಾಖ್ಯಃ । ತೇನ ಮಾರ್ಗೇಣ ಗತ್ವಾ ।** ಅಗ್ನಿಯನ್ನು ಸಂತೋಷಪಡಿಸುವ (ಮಾರ್ಗಗಳಲ್ಲಿ) ಕರ್ಮಗಳಲ್ಲಿ ಯಾಗಾನುಷ್ಠಾನವೆಂಬುವುದು ಮುಖ್ಯವಾಗಿರುತ್ತದೆ. **ಯಜ್ಞೇನ ದೇವೇಭ್ಯಃ** (ತೈ. ಸಂ. ೬-೩-೧೦-೫) ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿರುತ್ತದೆ. ಯಜ್ಞದಿಂದಲೇ ಅಗ್ನಿಗೆ ಯಜಮಾನರ ವಿಷಯದಲ್ಲಿ ಪ್ರೀತಿಯೂ ಅಗ್ನಿಗೆ ಯಜ್ಞಮಾಡುವಾಗ ಹವಿಸ್ಸಿನ ಅರ್ಪಣೆಯಿಂದ ಸಂತೋಷವೂ ಉಂಟಾಗುತ್ತದೆ ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ಎರಡನೆಯ ಅರ್ಥದಲ್ಲಿ **ಪೂರ್ವೇಣೋತ್ತರಮಪರೇಣ ಪ್ರಣೀತಾಃ** (ಆಶ್ವ. ಸೂ. ೧-೧) ಎಂಬ ಅಶ್ವಲಾಯನ ಶ್ರೌತಸೂತ್ರದಲ್ಲಿ ಹೇಳಿರುವ ಕ್ರಮವನ್ನು ಅನುಸರಿಸಿ ಉಕ್ತವಾಗಿರುವ ಪರಿಶುದ್ಧವಾದ (ಕ್ರಮದಿಂದ) ಮಾರ್ಗದಿಂದ ಅಗ್ನಿಯನ್ನು ಯಾಗಾನುಷ್ಠಾನದಿಂದ ಸಂತೋಷಪಡಿಸಬೇಕೆಂದು ವಿವರಿಸಿದೆ.

ಅಗ್ನಿಯನ್ನು ಸಂತೋಷಪಡಿಸುವ ಉಪಾಯಗಳು **ಹವಿಷ್ಮತಾ**—ಹವಿಸ್ಸನ್ನೂ ಆಜ್ಯವನ್ನೂ ಹೋಮಮಾಡುವುದೂ, **ನಮಸಾ**—ನಮಸ್ಕಾರಗಳೂ ಮತ್ತು ಅಗ್ನಿಯನ್ನು ಸ್ತೋತ್ರಮಾಡುವುದೂ, ಸ್ತೋತ್ರವನ್ನು ಪಠಿಸುತ್ತಾ ಅಗ್ನಿಯನ್ನು ಧ್ಯಾನಮಾಡುವುದೂ, ಆಗಿರುತ್ತದೆ. ಎಂದು ಹವಿಷ್ಮತಾ, ನಮಸಾ ಎಂಬ ಪದಗಳಿಂದ ವಿಶ್ವತವಾಗಿದೆ.

ಎರಡನೆಯ ಸಾರಿ ಉಕ್ತವಾಗಿರುವ ಹವಿಷ್ಮತಾ ಎಂಬ ಪದವನ್ನು ದೇವತಾತಾ ಎಂಬ ಪದಕ್ಕೆ ವಿಶೇಷಣವಾಗಿ ಅರ್ಥಮಾಡಿದೆ. ಇದರಿಂದ ಸಾಯಣರು,

**ಹವಿಷ್ಮತಾ— ಹವಿಷ್ಮತಿ ಆಜ್ಯಪುರೋಡಾಶಾದಿಬಹುಹವಿರ್ಯುಕ್ತೇ ದೇವತಾತಾ—ದೇವಾನಾಂ ವಿಸ್ತಾರಯುಕ್ತೇ ಯಜ್ಞೇ ।** ಆಜ್ಯ ಮತ್ತು ಪುರೋಡಾಶ ಇವೇ ಮೊದಲಾದ ಹವಿಸ್ಸುಗಳಿಂದ ಕೂಡಿರುವ ಮತ್ತು ಬಹಳ ದೇವತೆಗಳು ಆಹ್ವಾನಿಸಲ್ಪಡುವ ಕರ್ಮಗಳಿಂದ ಆಚರಿಸಲ್ಪಡುವ ಯಜ್ಞಗಳಲ್ಲಿ ಅಗ್ನಿಯು ಆಯಾಯ ಪ್ರೀತ್ಯುತ್ಪಾದಕ ಕರ್ಮಗಳಿಂದ ಸಂತೋಷಪಡಿಸಲ್ಪಡುವನು ಎಂದು ಅರ್ಥವನ್ನು ವಿವರಿಸಿರುವರು.

**ಋತಸ್ಯ**—ಎಂಬ ಪದಕ್ಕೆ ನಿರುಕ್ತಕಾರರು ಉದಕ ಎಂಬ ಅರ್ಥವನ್ನೂ (ನಿ. ೨-೧೪) **ಯಜ್ಞ, ಸತ್ಯ,** ಎಂಬ ಅರ್ಥವನ್ನೂ (ನಿ. ೪-೧೯) ವಿವರಿಸಿದ್ದಾರೆ. **ದೇವತಾತಾ** ಎಂಬ ಪದವೂ ಯಜ್ಞನಾಮಗಳಲ್ಲಿ (ನಿ. ೩-೧೯) ಪಠಿತವಾಗಿದೆ. ಮತ್ತು

**ಶಂ ನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ ಸ್ವರ್ಕಾಃ ।**
**ಜಂಭಯಂತೋಹಿಂ ವೃಕಂ ರಕ್ಷಾಂಸಿ ಸನೇಮ್ಯಸ್ಮದ್ಯುಯವನ್ನಮೀವಾಃ ।**

(ಋ. ಸ. ೭-೩೮-೭)

ಎಂಬ ಋಕ್ಕಿನಲ್ಲಿ **ದೇವತಾತಾ ಯಜ್ಞೇ** ಎಂದು ನಿರುಕ್ತದಲ್ಲಿ ಅರ್ಥವನ್ನು ವರ್ಣಿಸಿದೆ.

**ಊರ್ಜಾಂ—ಹವಿರ್ಲಕ್ಷಣಾನಾಂ ಅನ್ನಾನಾಂ ।** ಹವಿಸ್ಸಿನರೂಪದಿಂದ ಇರುವ ಅನ್ನವೆಂದು ಅರ್ಥ. **ಊರ್ಜ್**—ಎಂಬ ಪದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ.

**ದೇವೀ ಊರ್ಜಾಹುತೀ ಇಷಮೂರ್ಜಮನ್ಯಾವಕ್ಷತ್ ಸಗ್ಧಿಂ ಸಪೀತಿ ಮನ್ಯಾ ನವೇನ ಪೂರ್ವಂ ದಯಮಾನಾಃ ಸ್ಯಾಮ ಪುರಾಣೇನ ನವಂ ತಾಮೂರ್ಜಾಮೂರ್ಜಾಹುತೀ ಊರ್ಜಯಮಾನೇ ಅಧಾತಾಂ ವಸುವನೇ ವಸುಧೇಯಸ್ಯ ವೀತಾಂ ಯಜ ॥**

(ವಾ. ಸಂ. ೨೮ ೧೬ ಮತ್ತು ನಿ. ೯-೪೩)

ಇಲ್ಲಿ **ಇಷಂ ಊರ್ಜಂ—ಅನ್ನಂ ರಸಂ ಚ ।** ಅನ್ನ ಉದಕ ಎಂದು ಅರ್ಥಮಾಡಿದೆ.

**ಅಯಾ ಕೃಪಾ ನ ಜೂರ್ಯತಿ— ಅನಯಾ ಸಾಮರ್ಥ್ಯಲಕ್ಷಣಯಾ ಕಲ್ಪನಯಾ ಹವಿಸ್ಸ್ವೀಕರಣ ರೂಪಯಾ ಯಜ್ಞಸಮಾಪ್ತಿಪರ್ಯನ್ತಂ ನ ನಶ್ಯತಿ ಅಜರೋ ವರ್ತತ ಇತ್ಯರ್ಥಃ ।** ಅಗ್ನಿಯು ಯಜಮಾನರು ಅರ್ಪಿಸಿದ ಆಜ್ಯಪುರೋಡಾಶರೂಪವಾದ ಹವಿಸ್ಸಿನ ಸ್ವೀಕಾರದ ವಿಷಯದಲ್ಲಿ ಯಜ್ಞವು ಮುಗಿಯುವವರಿಗೂ ತರುಣನಾಗಿ (ಮುಪ್ಪಿಲ್ಲದವನಾಗಿ ಎಂದರೆ ಆರಿಹೋಗದೆ) ಇರುವನು ಎಂದು ಅರ್ಥವನ್ನು ವಿವರಿಸಿದೆ.

ನಿರುಕ್ತಕಾರರು **ಕೃಪ್ ಕೃಪತೇರ್ವಾ ಕಲ್ಪತೇರ್ವಾ**— (ನಿ. ೬-೮) ಎಂದು ಪಠಿಸಿರುವರು. ಕೃಪೂ ಸಾಮರ್ಥ್ಯೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಇಲ್ಲಿ ಸಾಯಣರು ಸಾಮರ್ಥ್ಯವೆಂದು ಅರ್ಥವನ್ನು ವಿವರಿಸಿದ್ದಾರೆ.

**ದೇವಂ ಮಾತರಿಶ್ವಾ ಮನವೇ ಪರಾವತಃ ಭಾಃ— ದ್ಯೋತನಶೀಲಂ ಅಂತರಿಕ್ಷಸಂಚಾರೀ ವಾಯುಃ ಪೂರ್ವಂ ಮನೋರರ್ಥಾಯ ಅತಿದೂರಂ ಗತವತಃ ಆದಿತ್ಯಾತ್ ಅಭಾಸೀತ್ । ಔಚಿತ್ಯೇನ ಭೂಮೌ ಸ್ಥಾಪಿತವಾನ್ ।** ಕಾಂತಿಯಿಂದ ಅಥವಾ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಅಗ್ನಿಯನ್ನು ಅಂತರಿಕ್ಷದಲ್ಲಿ ಸಂಚರಿಸುವ

ವಾಯುವು (ಮನುವೆಂಬವನಿಗಾಗಿ) ಮನುವಿಗೋಸ್ಕರ ಬಹಳ ದೂರದಲ್ಲಿರುವ ಸೂರ್ಯನಿಂದ ತಂದು ಬೇರೆಯಾಗಿ ಭೂಮಿಯಲ್ಲಿ ಇರುವಂತೆ ಆಯಾಯ ಕರ್ಮಗಳಿಗನುಕೂಲವಾಗಲು ಉಚಿತ ಸನ್ನಿವೇಶಗಳಲ್ಲಿ ಸ್ಥಾಪಿಸಿದನು. ಎಂದು ಅರ್ಥ,

**ಪರಾವತೇ**—ಶಬ್ದವು ಐದು ದೂರನಾಮಗಳಲ್ಲಿ (ನಿ. ೩-೨೦ ಪಠಿತವಾಗಿದೆ.

**ಅಪಾಮುಪಸ್ಥೇ ಮಹಿಷಾ ಅಗೃಭ್ಣತ ವಿಶೋ ರಾಜಾನಮುಪ ತಸ್ಥುರ್ಋಗ್ಮಿಯಂ ।**
**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ॥**

(ಋ. ಸಂ. ೬-೮-೪)

ಏತದಸ್ಯಾ ಅನಃ ಶಯೇ ಸುಸಂಪಿಷ್ಟಂ ವಿಪಾಶ್ಯಾ । ಸಸಾರ ಸೀಂ ಪರಾವತಃ ॥

(ಋ. ಸಂ. ೪-೩೦-೧೧)

ಈ ಋಕ್ಕುಗಳಲ್ಲಿಯೂ ಪರಾವತ ಶಬ್ದಕ್ಕೆ **ಪ್ರೇರಿತವತಃ ಪರಾಗತಾದ್ವಾ** ಎಂದು ನಿರುಕ್ತದಲ್ಲಿ ಅರ್ಥಮಾಡಿದೆ. ಆದರೆ ಸಾಯಣರು ಇಲ್ಲಿ ದೂರದಲ್ಲಿರುವ ಆದಿತ್ಯನಿಂದ ಎಂದು ಅರ್ಥವನ್ನು ವಿವರಿಸಿದ್ದಾರೆ.

**ಮಾತರಿಶ್ವಾ—ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ ।** (ನಿ. ೭-೨೬) ನಿರುಕ್ತಕಾರರು ಮಾತರಿಶ್ವಪದವು ವಾಯು ಎಂಬ ಅರ್ಥವನ್ನು ಬೋಧಿಸುವುದು. ಮಾತರಿ—ಅಂತರಿಕ್ಷದಲ್ಲಿ ಶ್ವಸಿತಿ ಸಂಚರಿಸುವವನು. ಅಥವಾ ಅಂತರಿಕ್ಷದಲ್ಲಿ ಉಸಿರಾಡುವವನು ಎಂದು ಅರ್ಥವನ್ನು ಮಾತರಿಶ್ವ ಶಬ್ದಕ್ಕೆ ವಿವರಿಸಿದ್ದಾರೆ. **ಅಸ್ಯಾಗ್ನೇರ್ವೈಶ್ವಾನರಸ್ಯ ಮಾತರಿಶ್ವಾನಮಾಹರ್ತಾರಮಾಹ** ಭೂಮಿಯಲ್ಲಿರುವ ಎಲ್ಲಾ ಪ್ರಾಣಿಗಳಲ್ಲಿಯೂ ಜಾಠರಾಗ್ನಿರೂಪದಿಂದ ಇರುವ ವೈಶ್ವಾನರಾಗ್ನಿಯನ್ನು ಆಯಾಯ ಔಚಿತ್ಯಕ್ಕನುಗುಣವಾಗಿರುವಂತೆ ಆದಿತ್ಯನಿಂದ ಬೇರೆಯಾಗಿ ಸ್ಥಾಪಿಸಿರುವನು ಎಂದು ಸಾಯಣರು ಹೇಳಿರುವ ಅರ್ಥವೇ ಇಲ್ಲಿಯೂ ಉಕ್ತವಾಗಿರುತ್ತದೆ.

**ಪರಾವತಃ—ತದ್ವತ್ ದೂರಾತ್ ದೇವಮಗ್ನಿಂ ಅಸ್ಮದ್ದೇವಯಜನಂ ಪ್ರತಿ ಸ್ಥಾಪಯೇತ್ವಿತ್ಯರ್ಥಃ** ಪರಾವತಃ ಎಂಬ ಶಬ್ದಕ್ಕೆ ದೂರ ಎಂದು ಅರ್ಥಮಾಡಿ ದೂರದಲ್ಲಿರುವ ಆದಿತ್ಯನಿಂದ ಅಗ್ನಿಯನ್ನು ತಂದು ಭೂಮಿಯಲ್ಲಿ ವಾಯುವು ಇರಿಸಿರುವಂತೆ ಯಜ್ಞಮಾಡುವ ಯಜಮಾನರ ಯಜ್ಞವೇದಿಕೆಯಲ್ಲಿಯೂ ಅಗ್ನಿಯು ಸ್ಥಿರವಾಗಿ ಇರುವಂತೆ ಮಾಡಲಿ ಎಂದು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಯಜ್ಞಸಾಧಮ್**—ಸಾಧ ಸಂಸಿದ್ಧೌ. ಧಾತು. ಕರ್ತರಿಯಲ್ಲಿ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಯಜ್ಞಂ ಸಾಧ್ನೋತಿ ಇತಿ ಯಜ್ಞಸಾತ್. ತಮ್. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವಾತಯಾಮಸಿ**—ವಾತ ಗತಿಸುಖಸೇವನಯೋಃ ಧಾತು. ಚುರಾದಿ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್.

ಶಪ್‌ವಿಕರಣ ನಿಮಿತ್ತನಾಗಿ ಅದಕ್ಕೆ ಗುಣ, ಅಯಾದೇಶ. **ಇದಂತೋ ಮಸಿ** (ಪಾ. ಸೂ. ೭-೧-೪೬) ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪಥಾ**—ಪಥಿನ್ ಶಬ್ದ. ತೃತೀಯಾ ಏಕವಚನ ಪರವಾದಾಗ **ಭಸ್ಯ ಟೇರ್ಲೋಪಃ**—(ಪಾ. ಸೂ. ೭-೧-೮೮) ಎಂಬುದರಿಂದ ಟಿಗೆ ಲೋಪ. **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ**—(ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದೇವತಾತಾ**—**ಸರ್ವದೇವಾತ್ತಾತಿಲ್**—(ಪಾ. ಸೂ. ೪-೪-೧೪೨) ಎಂಬುದರಿಂದ ತಾತಿಲ್ ಪ್ರತ್ಯಯ. **ಲಿತಿ** (ಪಾ. ಸೂ. ೬-೧-೧೯೩)ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮೀ ವಿಭಕ್ತಿಗೆ ಡಾದೇಶ. ಹವಿಷ್ಮತಾ ಎಂಬಲ್ಲಿಯೂ ಹೀಗೆಯೇ ಸಪ್ತಮಿಗೆ ಆಕಾರಾದೇಶ

**ಊರ್ಜಾಮ್**—ಊರ್ಕ್ ಎಂಬುದು ಅನ್ನದ ಹೆಸರು. ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧.೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಉಪಾಭೃತಿ**—ಉಪ ಆಙ್ ಎಂಬವುಗಳು ಉಪಸರ್ಗಗಳು. ಹೃಞ್ ಹರಣೇ. ಧಾತು. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಧಾತು ಹಕಾರಕ್ಕೆ ಭತ್ವ. ಸಪ್ತಮೀ ವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಅವ್ಯವಹಿತವಾದ ಗತಿಗೆ (ಆಙ್) ಪ್ರಕೃತಿಸ್ವರ ಬರುತ್ತದೆ. **ಗತಿರ್ಗತೌ** (ಪಾ. ಸೂ. ೮-೧-೭೦) ಎಂಬುದರಿಂದ ಪೂರ್ವದ ಗತಿಗೆ (ಉಪ) ಅನುದಾತ್ತಸ್ವರ ಬರುತ್ತದೆ.

**ಅಯಾ**—ಅನಯಾ ಎಂದು ರೂಪವಾದಾಗ ಛಾಂದಸವಾಗಿ ವರ್ಣ (ನ) ಲೋಪ ಬರುತ್ತದೆ.

**ಜೂರ್ಯತಿ**—ಜ್ಯೂಷ್ ವಯೋಹಾನೌ ಧಾತು. ದಿವಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಶ್ಯನ್ ವಿಕರಣ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಉತ್ವ. ರಪರವಾಗಿ ಬರುತ್ತದೆ. **ಹಲಿ ಚ** ಎಂಬುದರಿಂದ ಉಪಧಾದೀರ್ಘ. ತಿಙಂತನಿಘಾತಸ್ವರ ಬರುತ್ತದೆ.

**ಭಾಃ**—ಭಾ ದೀಪ್ತೌ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ವ್ಯತ್ಯಯದಿಂದ ಸಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. ಶಪಿಗೆ ಲುಙ್. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುವಿನ ಅಂತೋದಾತ್ತಸ್ವರ ಉಳಿಯುತ್ತದೆ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. || ೨ ||



॥ ಸಂಹಿತಾಪಾಠಃ ॥

ಏವೇನ ಸದ್ಯಃ ಪರ್ಯೇತಿ ಪಾರ್ಥಿವಂ ಮುಹುರ್ಗೀ ರೇತೋ ವೃಷಭಃ
ಕನಿಕ್ರದದ್ದಧದ್ರೇತಃ ಕನಿಕ್ರದತ್ ।
ಶತಂ ಚಕ್ಷಾಣೋ ಅಕ್ಷಭಿರ್ದೇವೋ ವನೇಷು ತುರ್ವಣಿಃ ।
ಸದೋ ದಧಾನ ಉಪರೇಷು ಸಾನುಷ್ವಗ್ನಿಃ ಪರೇಷು ಸಾನುಷು ॥ ೩ ॥

॥ ಪದಪಾಠಃ ॥

ಏವೇನ । ಸದ್ಯಃ । ಪರಿ । ಏತಿ । ಪಾರ್ಥಿವಂ । ಮುಹುಃऽಗೀಃ । ರೇತಃ । ವೃಷಭಃ । ಕನಿಕ್ರದತ್ ।
ದಧತ್ । ರೇತಃ । ಕನಿಕ್ರದತ್ ।
ಶತಂ । ಚಕ್ಷಾಣಃ । ಅಕ್ಷऽಭಿಃ । ದೇವಃ । ವನೇಷು । ತುರ್ವಣಿಃ ।
ಸದಃ । ದಧಾನಃ । ಉಪರೇಷು । ಸಾನುಷು । ಅಗ್ನಿಃ । ಪರೇಷು । ಸಾನುಷು ॥ ೩ ॥

॥ ಸಾಯಣಭಾಷ್ಯಂ ॥

ಅಯಮಗ್ನಿರೇವೇನ ಗಮನಸಾಧನೇನ ಗಮನೇನ ವಾ ಸದ್ಯೋऽಸ್ಮದಃಹ್ನಾನಾನಂತರಂ ಪಾರ್ಥಿವಂ ಪೃಥಿವೀಸಂಬಂಧಿ ಸ್ಥಾನಂ ವೇದಿಲಕ್ಷಣಮೇವ ಪರಿ ಪರಿತಃ । ಯದ್ವಾ । ಅನರ್ಥಕ ಆಭಿಮುಖ್ಯಾರ್ಥೋ ವಾ ಪರಿ । ಏತಿ । ಗಚ್ಛತಿ । ಕಿದೃಶೋऽಗ್ನಿಃ । ಮುಹುರ್ಗೀಃ ಸರ್ವದಾ ಗೀಯಮಾನಃ । ರೇತಃಶಬ್ದೇನ ತತ್ಕಾರ್ಯಂ ಹವೀರೂಪಮನ್ನಮುಚ್ಯತೇ । ತದ್ವಾನ್ ॥ ಮತ್ವರ್ಥೀಯೋ ಲುಪ್ಯತೇ ॥ ವೃಷಭಃ ಕಾಮಾನಾಂ ವರ್ಷಿತಾ ಕನಿಕ್ರದತ್ ಶಬ್ದಯನ್ ಪರ್ಯೇತಿ । ಪುನಃ ಸ ಏವ ವಿಶೇಷ್ಯತೇ । ರೇತೋ ದಧದಾಜ್ಯಾದಿಸ್ವೀಕಾರೇಣಾತ್ಯಧಿಕಂ ಸಾಮರ್ಥ್ಯಂ ದಧಾನಃ ಕನಿಕ್ರದತ್ ಶಬ್ದಯನ್ ಪರ್ಯೇತೀತಿ ಶೇಷಃ । ಪುನಃ ಸ ಏವ ವಿಶೇಷ್ಯತೇ । ಅಯಮಗ್ನಿರ್ದೇವೋ ವನೇಷು ಸಂಭಜನೇಷು ಸ್ತೋತ್ರೇಷು ನಿಮಿತ್ತಭೂತೇಷ್ವಕ್ಷಭಿರಕ್ಷಸ್ಥಾನೀಯಾಭಿರ್ಜ್ವಾಲಾಭಿಃ ಶತಂ ಚಕ್ಷಾಣಃ ಸರ್ವತಃ ಪ್ರಕಾಶಮಾನಃ । ಯದ್ವಾ । ಜ್ವಾಲೋತ್ಕರ್ಷೇಣ ಯಜಮಾನೇನ ಕೃತಂ ಶತಗುಣಿತಂ ಪ್ರಖ್ಯಾಪಯನ್ । ತಥಾ ತುರ್ವಣಿಃ ಶೀಘ್ರಗಂತಾ ಶತ್ರೂಣಾಂ ಹಿಂಸಕೋ ವಾ । ತುರ್ವಣಿಸ್ತೂರ್ಣವನಿರಿತಿ ಯಾಸ್ಕಃ । ನಿ. ೬–೧೪ । ಕಿಂಚ ಸಾನುಷು ಸಮುಚ್ಛ್ರಿತೇಷು । ಸಾನು ಸಮುಚ್ಛ್ರಿತಂ ಭವತೀತಿ ಯಾಸ್ಕಃ । ನಿ. ೨–೨೪ । ತೇಷೂಪರೇಷು । ಉಪರಮಂತೆ ಏಷ್ವಗ್ನಯ ಇತ್ಯುಪರಾ ಧಿಷ್ಣ್ಯಾ ಯಜಮಾನಗೃಹಾ ವಾ । ತೇಷು

**ಸದೋ ದಧಾನಃ ಸ್ಥಾನಂ ಧಾರಯಮಾಣೋಽಗ್ನಿಃ ಸದ್ಯಃ ಪರ್ಯೇತೀತಿ ಪೂರ್ವತ್ರಾನ್ವಯಃ । ಕಿಮರ್ಥಂ । ಪರೇಷೂತ್ಕೃಷ್ಟೇಷು ಸಾನುಷು ಸಮುಚ್ಛ್ರಿತೇಷು ಕರ್ಮಸು ಹವಿಃಷು ವಾ ನಿಮಿತ್ತ-ಭೂತೇಷು ॥**

॥ ಪ್ರತಿಪದಾರ್ಥ ॥

**ಮುಹುರ್ಗೀಃ**—ಸದಾಗೀಯಮಾನನೂ । **ವೃಷಭಃ**—ಕಾಮವರ್ಷಕನೂ । **ರೇತಃ**—ಹವೀರೂಪವಾದ ಅನ್ನಯುಕ್ತನೂ (ಆದ) । **ಕನಿಕ್ರದತ್**—ಧ್ವನಿಗೈಯುವ (ಅಗ್ನಿಯು) । **ಏವೇನ**—ಗಮನದಿಂದ । **ಸದ್ಯಃ**—ನಮ್ಮಿಂದ ಆಹ್ವಾನಿತನಾದಮೇಲೆಯೇ । **ಪಾರ್ಥಿವಂ**—ಪೃಥ್ವೀ ಸಂಬಂಧವಾದ (ವೇದಿ ಭೂಮಿಗೆ) । **ಪರಿ ಏತಿ**—ಅಭಿಮುಖವಾಗಿ ಬರುತ್ತಾನೆ । **ರೇತಃ ದಧತ್**—(ಆಜ್ಯಾದಿ ಸ್ವೀಕರದಿಂದ) ಸಾಮರ್ಥ್ಯಯುಕ್ತನಾಗಿ । **ಕನಿಕ್ರದತ್**—(ಹೆಚ್ಚಾಗಿ) ಶಬ್ದಮಾಡುತ್ತಾ । (**ಪರಿ ಏತಿ**—ಅಭಿಮುಖನಾಗಿ ಬರುತ್ತಾನೆ) । **ಅಗ್ನಿಃದೇವಃ**—ಅಗ್ನಿದೇವನು । **ವನೇಷು**—ಸ್ತುತಿಗಳು ಪ್ರಯುಕ್ತವಾಗಲು । **ಅಕ್ಷಭಿಃ**—(ಜ್ವಾಲಾರೂಪವಾದ) ಕಣ್ಣುಗಳಿಂದ । **ಶತಂ ಚಕ್ಷಾಣಃ**—ಚೆನ್ನಾಗಿ ಪ್ರಕಾಶಿಸುತ್ತಾ (ಯಜಮಾನಕೃತವಾದ ಯಜ್ಞವನ್ನು ನೂರರಷ್ಟು ಪ್ರಸಿದ್ಧಿಪಡಿಸುತ್ತಾ) । **ತುರ್ವಣಿಃ**—ಶತ್ರುಹಿಂಸಕನಾಗಿ (ಶೀಘ್ರಗಮನನಾಗಿ) । **ಸಾನುಷು**—ಉಚ್ಛ್ರಿತವಾದ । **ಉಪರೇಷು**—ವೇದಿ ಭೂಮಿಗಳಲ್ಲಿ (ಯಜಮಾನ ಗೃಹಗಳಲ್ಲಿ) । **ಸದಃ ದಧಾನಃ**—ಸ್ಥಾನವನ್ನು ಸ್ವೀಕರಿಸಿದವನಾಗಿ । **ಪರೇಷು**—ಉತ್ಕೃಷ್ಟವಾದ । **ಸಾನುಷು**— ಕರ್ಮಗಳಲ್ಲಿ (ಕರ್ಮಗಳನ್ನುದ್ದೇಶಿಸಿ) । (**ಪರಿ ಏತಿ**—ಅಭಿಮುಖನಾಗಿ ಬರುತ್ತಾನೆ).

॥ ಭಾವಾರ್ಥ ॥

ಸದಾ ಸ್ತೂಯಮಾನನೂ, ಹವಿರ್ಯುಕ್ತನೂ, ಇಷ್ಟಾರ್ಥ ವರ್ಷಕನೂ, ಧ್ವನಿಯುಕ್ತನೂ ಆದ ಅಗ್ನಿಯು ನಮ್ಮ ಆಹ್ವಾನಾನಂತರವೇ ಪೃಥ್ವೀಸಂಬಂಧವಾದ (ಈ ವೇದಿ ಭೂಮಿಗೆ) (ಹವಿರಾದಿ ಸ್ವೀಕಾರದಿಂದ) ಸಾಮರ್ಥ್ಯಯುಕ್ತನಾಗಿ, ಹೆಚ್ಚಾಗಿ ಶಬ್ದಮಾಡುತ್ತಾ ಅಭಿಮುಖನಾಗಿ ಬರುತ್ತಾನೆ; ಮತ್ತು ಈ ಅಗ್ನಿಯು ಸ್ತುತಿಸಲ್ಪಟ್ಟು, ಜ್ವಾಲೆಗಳಿಂದ ಹೆಚ್ಚಾಗಿ ಪ್ರಕಾಶಮಾನನಾಗಿ (ಯಜಮಾನನ ಕರ್ಮವನ್ನು ನೂರ್ಮಡಿಯಾಗಿ ಪ್ರಸಿದ್ಧಪಡಿಸುತ್ತಾ) ಶತ್ರುಹಿಂಸಕನಾಗಿ (ವೇಗಯುಕ್ತನಾಗಿ), ಉಚ್ಛ್ರಿತವಾದ ವೇದಿಭೂಮಿಗಳಲ್ಲಿ ಸ್ಥಾನವನ್ನು ಆಕ್ರಮಿಸಿ, ಉತ್ಕೃಷ್ಟವಾದ ಕರ್ಮಗಳಲ್ಲಿ (ಕರ್ಮಗಳನ್ನುದ್ದೇಶಿಸಿ) ಬರುತ್ತಾನೆ.

## English Translation.

Agni, who is ever to be hymned, the giver of food, the showerer (of benefits), comes immediately (upon our invocation), in approach to (the altar of) earth, loud-sounding, vigorous, and loud-sounding: the rapid and divine (Agni, incited by praise), manifests himself a hundred-fold by his flames; Agni, having his abode in high places, (comes quickly)-to pious rites.

॥ ವಿಶೇಷವಿಷಯಗಳು ॥

**ಏವೇನ—ಪರ್ಯೇತಿ ಗಮನಸಾಧನೇನ ಗಮನೇನ ವಾ ಪರಿತಃ । ಯದ್ವಾ ಅನರ್ಥಕಃ ಆಭಿಮುಖ್ಯಾರ್ಥೋ ವಾ ಪರಿ ಏತಿ ಗಚ್ಛತಿ ।** ನಿರುಕ್ತಕಾರರು **ಮಿತಾಕ್ಷರೇಷ್ವನರ್ಥಕಾಃ** ನಿಪಾತಗಳು ಛಂದೋಬದ್ಧವಾದ ವಾಕ್ಯಗಳಲ್ಲಿ ಯಾವ ವಿಧವಾದ ಅರ್ಥವನ್ನೂ ಬೋಧಿಸುವುದಿಲ್ಲವಾದುದರಿಂದ ಅನರ್ಥಕಗಳಾಗಿರುವುವು. ಎಂದೂ, ವೃತ್ತಿಕಾರರು **ನಿಪಾತಃ ಪಾದಪೂರಣಃ** (ನಿಪಾತವು.) ಅವ್ಯಯವು ಪಾದಪೂರಕವಾಗಿರುವುದು ಎಂದೂ ವಿವರಿಸಿರುತ್ತಾರೆ. ಇದನ್ನು ಅನುಸರಿಸಿ ಸಾಯಣರು **ಪರಿ+ಏತಿ** ಎಂಬಲ್ಲಿ ಪರಿ ಎಂಬ ಅವ್ಯಯಕ್ಕೆ ಅನರ್ಥಕವೆಂದೂ ಅಥವಾ ಅಭಿಮುಖ ಎಂದೂ ಎರಡು ವಿಧವಾದ ಅರ್ಥವನ್ನೂ ಹೇಳಿದ್ದಾರೆ. **ಏವೇನ** ಎಂಬ ಶಬ್ದವು ಇಣ್ ಗತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಗಮನ ಎಂದು ಅರ್ಥವನ್ನು ವಿವರಿಸಿದ್ದಾರೆ.

ಅಗ್ನಿಯು ಯಜ್ಞಮಾಡುವ ಪ್ರದೇಶಕ್ಕೆ ಬರುವಾಗ ಗಮನಕ್ಕೆ ಸಾಧನವಾದ ರಥಾದಿಗಳಿಂದಲಾಗಲಿ ಅಥವಾ ಪಾದಚಾರಿಯಾಗಿಯಾಗಲಿ ಬಂದು ಯಜ್ಞವೇದಿಯಲ್ಲಿ ಯಜಮಾನನ ಅಭಿಮುಖವಾಗಿ ಇರುವಿಕೆಯನ್ನು ಹೊಂದುವನು. ಎಂದು ಅರ್ಥ.

ನಿರುಕ್ತಕಾರರು **ಏವ, ಏವಂ** ಇವುಗಳು ನಿಪಾತಗಳಾಗಿರುವುವು. ಸುಬಂತದ ವಿಭಕ್ತಿಪ್ರತ್ಯಯಗಳನ್ನು ಹೊಂದಿರುವ **ಏವಃ** ಎಂಬ ಶಬ್ದವು ಮಾತ್ರ ಗಮನಾದ್ಯರ್ಥಗಳನ್ನು ಬೋಧಿಸುವುದು ಎಂದು ಅರ್ಥಮಾಡಿದ್ದಾರೆ.

**ವಿಶ್ವಾನರಸ್ಯ ವಸ್ಪತಿಮನಾನತಸ್ಯ ಶವಸಃ ।**
**ಏವೈಶ್ಚ ಚರ್ಷಣೀನಾಮೂತೀ ಹುವೇ ರಥಾನಾಂ ।**

(ಋ. ಸಂ. ೮-೬೮-೪).

ಇಲ್ಲಿ **ಏವೈಶ್ಚ ಕಾಮೈರಯನೈರವನೈರ್ವಾ** (ನಿ. ೧೨-೨೨) ಎಂದು ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು—**ಕಾಮೈಃ ಅಯನೈಃ, ಅವನೈಃ ಗಮನೈಃ** ಎಂದು ಅರ್ಥಮಾಡಿದ್ದಾರೆ. ಇದರಿಂದಲೇ ಸಾಯಣರುಮಾಡಿರುವ **ಏವೇನ** ಎಂಬ ಪದದ ವಿವರಣೆಯು ಒಪ್ಪುತ್ತದೆ.

ರೇತಃ ಕನಿಕ್ರದತ್ ಎಂಬ ಪದವು ಎರಡುಸಾರಿ ಪ್ರಯುಕ್ತವಾಗಿದೆ. ಮೊದಲನೆಯ ರೇತಃ ಶಬ್ದಕ್ಕೆ **ತತ್ಕಾರ್ಯಂ ಹವೀರೂಪಮನ್ನಮುಚ್ಯತೇ ತದ್ವಾನ್ ।** ರೇತಶ್ಶಬ್ದವು ನೂರೊಂದು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿರುವುದರಿಂದ (ಉದಕ) ನೀರು ಎಂಬ ಅರ್ಥವನ್ನು ಬೋಧಿಸುವುದು. ನೀರಿನಿಂದ ಉಂಟಾಗುವ ವ್ರೀಹಿಯವಾದಿಗಳೂ ಹವಿಸ್ಸಿನ ರೂಪದಿಂದ ಉಪಯೋಗಿಸಲ್ಪಡುವಕಾರಣ ಇವುಗಳು ರೇತಸ್ಸಿನ ಕಾರ್ಯಗಳಾಗಿರುತ್ತವೆ. ಎಂದು ವರ್ಣಿಸಿದೆ. ಅಗ್ನಿಯು ಹವಿಸ್ಸಿನರೂಪವಾದ ಅನ್ನವುಳ್ಳವನು ಎಂದು ಅರ್ಥಮಾಡಿದೆ.

ಎರಡನೆಯ **ರೇತಶ್ಶಬ್ದ**ಕ್ಕೆ ಮೊದಲನೆಯ ಅರ್ಥವನ್ನೇ ವಿವರಿಸಿದೆ. ಆಜ್ಯಾದಿಗಳೂ ಹವಿಸ್ಸಾಗುವ ಕಾರಣ ಆಜ್ಯಾದಿಗಳನ್ನು ಹವಿಸ್ಸಾಗಿ ಹೋಮಮಾಡುವುದರಿಂದ ಅಗ್ನಿಯು ಅದನ್ನು ಸ್ವೀಕರಿಸಿ ಅತಿಶಯವಾದ ಸಾಮರ್ಥ್ಯವನ್ನು ಹೊಂದಿರುವನು ಎಂದು ಅರ್ಥಮಾಡಿದೆ.

**ಕನಿಕ್ರದತ್—ಶಬ್ದಯನ್ ಪರ್ಯೇತಿ** ಅಗ್ನಿಯು ಹವಿಸ್ಸನ್ನು ಸ್ವೀಕರಿಸುವುದರಿಂದ ಬಹಳವಾಗಿ ಧ್ವನಿ ಮಾಡುತ್ತಾ ಬರುವನು ಎಂದರೆ ಅಗ್ನಿಯು ಉರಿಯುವಾಗ ಧಗಧಗವೆಂದು ಶಬ್ದವಾಗುವುದು ಎಂದು ಅರ್ಥ.

**ಕನಿಕ್ರದಜ್ಜನುಷಂ ಪ್ರಬ್ರುವಾಣ ಇಯರ್ತಿ ವಾಚಮರಿತೇವ ನಾವಂ ।**
**ಸುಮಂಗಲಶ್ಚ ಶಕುನೇ ಭವಾಸಿ ಮಾ ತ್ವಾ ಕಾ ಚಿದಭಿಭಾ ವಿಶ್ವ್ಯಾ ವಿದತ್ ॥**
(ಋ. ಸಂ. ೨-೪೨-೧)

ಈ ಋಕ್ಕಿನಲ್ಲಿ ಕನಿಕ್ರದತ್ ಎಂಬ ಪದಕ್ಕೆ ವೃತ್ತಿಕಾರರು **ಪುನಃ ಪುನಃ ಭೃಶಂ ವಾ ಅಕ್ರಂದತ್** ಎಂದು ಅರ್ಥಮಾಡಿ. ಸಾಯಣರು ಹೇಳಿರುವ ಅರ್ಥವನ್ನೇ ವಿವರಿಸಿದೆ.

**ವೃಷಭಃ—ಕಾಮಾನಾಂ ವರ್ಷಿತಾ ।** ಅಗ್ನಿಯು ಯಜಮಾನರ ಅಭಿಲಾಷೆಗಳನ್ನು ನೆರವೇರಿಸುವವನು ಎಂದು ಅರ್ಥ. ನಿರುಕ್ತಕಾರರು ವೃಷಭ ಶಬ್ದಕ್ಕೆ ಅರ್ಥವನ್ನು ವರ್ಣಿಸಿ ಉದಾಹರಿಸಿರುವರು. **ಪ್ರಜಾಂ ವರ್ಷತೀತಿ ವಾತಿ ಬೃಹತಿ ರೇತ ಇತಿ ವಾ ತತ್ ವೃಷಕರ್ಮಾ ವರ್ಷಣಾತ್ ವೃಷಭಃ** ಎಂದು ನಿರುಕ್ತಕಾರರ ನಿರ್ವಚನವು. ವೃತ್ತಿಕಾರರು. ಪ್ರಜೆಯು ಉತ್ಪನ್ನವಾಗಲು ಕಾರಣವಾದ ರೇತಸ್ಸನ್ನು ಬಿಡುವುದೂ, ರೇತಸ್ಸೇಚನಮಾಡುವುದಕ್ಕಾಗಿ ಅತಿಶಯವಾಗಿ ತನ್ನ ಶರೀರವನ್ನು ಉಪಯೋಗಿಸುವುದೂ, ವೃಷಕರ್ಮ ಎಂದು ಅರ್ಥಮಾಡಿ, **ವೃಷಣಾತ್ ರೇತೋವರ್ಷಣಾತ್** ರೇತಸ್ಸನ್ನು ಸೇಚಿಸುವುದರಿಂದ ವೃಷಭವು (ಗೂಳಿಯು) ಎಂದು ವೃಷಭ ಶಬ್ದಾರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಅಗ್ನಿಯು ವರ್ಷಣರೂಪವಾದ ಕರ್ಮಮಾತ್ರಾಚರಣದಿಂದ ವೃಷಭನೆಂದು ವಿವರಿಸಿದೆ. ವೃಷಭ ಶಬ್ದವು ನಿರುಕ್ತದಲ್ಲಿ ಬೇರೆಯ ಅರ್ಥದಲ್ಲಿಯೂ ಪ್ರಯುಕ್ತವಾಗಿದೆ.

**ಮರುತ್ವಾँ ಇಂದ್ರ ವೃಷಭೋ ರಣಾಯ ಪಿಬಾ ಸೋಮ ಮನುಷ್ವಧಂ ಮದಾಯ ।**
**ಆ ಸಿಂಚಸ್ವ ಜಠರೇ ಮಧ್ವ ಊರ್ಮಿಂ ತ್ವಂ ರಾಜಾಸಿ ಪ್ರದಿವಃ ಸುತಾನಾಂ ॥**
(ಋ. ಸಂ. ೩-೪೭-೧)

ಇಲ್ಲಿ **ವೃಷಭಃ ವರ್ಷಿತಾ ಅಪಾಂ** ಎಂದು ಅರ್ಥಮಾಡಿದೆ. ಇದರಂತೆಯೇ

**ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।**
**ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ ॥**
(ಋ. ಸಂ. ೧-೫೯-೬)

ಇಲ್ಲಿಯೂ **ವೃಷಭಸ್ಯ ವರ್ಷಿತುರಪಾಂ** ಮಳೆಯನ್ನು ಸುರಿಸುವವನ ಎಂದು ಅರ್ಥವನ್ನು ವಿವರಿಸಿದೆ.

**ದೇವಃ ವನೇಷು ಅಕ್ಷಭಿಃ ಶತಂ ಚಕ್ಷಾಣಃ—ಸಂಭಜನೇಷು ಸ್ತೋತ್ರೇಷು ನಿಮಿತ್ತಭೂತೇಷು ಅಕ್ಷಸ್ಥಾನೀಯಾಭಿರ್ಜ್ವಾಲಾಭಿಃ ಸರ್ವತಃ ಪ್ರಕಾಶಮಾನಃ । ಯದ್ವಾ । ಜ್ವಾಲೋತ್ಕರ್ಷೇಣ ಯಜಮಾನೇನ ಕೃತಂ ಶತಗುಣಿತಂ ಪ್ರಖ್ಯಾಪಯನ್ ।** ಅಗ್ನಿಯು, ಯಜ್ಞಮಾಡುವವರು ಸ್ತೋತ್ರಮಾಡುವಾಗ ತನಗೆ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಲು ಅನುಕೂಲವಾಗಿರುವ ಜ್ವಾಲೆಗಳಿಂದ ಎಲ್ಲಾ ಕಡೆಯಲ್ಲಿಯೂ ಪ್ರಕಾಶಿಸುತ್ತಿರುವನೆಂದೂ ಅಥವಾ ತನ್ನ ಅತಿಶಯವಾದ ಜ್ವಾಲೆಗಳಿಂದ ಯಜ್ಞಮಾಡುವ ಯಜಮಾನರು ತನಗೆ ಅರ್ಪಿಸಿರುವ ಹವಿಸ್ಸುಗಳನ್ನು ಹೆಚ್ಚಾಗಿರುವ ಪ್ರಮಾಣದಲ್ಲಿ ಇರುವುವು ಎಂದು ಪ್ರಕಟಮಾಡುತ್ತಿರುವನು ಎಂದೂ ಅರ್ಥವನ್ನು ವರ್ಣಿಸಿದೆ.

ನಿರುಕ್ತಕಾರರು—ಅಕ್ಷಶಬ್ದಕ್ಕೆ **ಅಶ್ನೋತೇರಿತ್ಯೇವಮೇಕೇ** ಎಂದು ವ್ಯಾಖ್ಯಾನಮಾಡಿ. ವ್ಯಾಪ್ತ್ಯರ್ಥಕವಾದ ಅಶೂ ಧಾತುವಿನಿಂದ ಅಕ್ಷಶಬ್ದವು ನಿಷ್ಪನ್ನವಾಗಿದೆ. ವ್ಯಾಪಿಸುವುದು ಎಂದು ಅರ್ಥವನ್ನು ಹೇಳಿದ್ದಾರೆ. ಮತ್ತು

**ಅನೂಪೇ ಗೋಮಾನ್ ಗೋಭಿರಕ್ಷಾಃ ಸೋಮೋ ದುಗ್ಧಾಭಿರಕ್ಷಾಃ ||**

(ಋ. ಸಂ. ೯-೧೦೭-೯)

**ನ ಯಸ್ಯ ದ್ಯಾವಾಪೃಥಿವೀ ನ ಧನ್ವ ನಾಂತರಿಕ್ಷಂ ನಾದ್ರಯಃ ಸೋಮೋ ಅಕ್ಷಾಃ |**

(ಋ. ಸಂ. ೧೦-೮೯-೬)

ಈ ಋಕ್ಕುಗಳನ್ನು ಉದಾಹರಣೆಗಾಗಿ ಹೇಳಿರುವರು.—ಮತ್ತು ಇವರು **ಅಕ್ಷಾಃ ಅಶ್ನುವತೆ ಏನಾನಿತಿ ವಾ ಅಭ್ಯ-ಶ್ನುವತ ಏಭಿರಿತಿ ವಾ** ಎಂದು ಅಕ್ಷಶಬ್ದಕ್ಕೆ ಬೇರೆಯ ಅರ್ಥವನ್ನು ವಿವರಿಸಿದ್ದಾರೆ. ದುರ್ಗಾಚಾರ್ಯರು **ದೀವ್ಯಂತಃ ಕಿತವಾಃ ಏತಾನ್ ಅಕ್ಷಾನ್ ಪಾಣಿಭಿಃ ಅಶ್ನುವತೇ ಅಕ್ಷೈಃ ಕಿತವಾಃ ಪ್ರತಿಕಿತವಂ ಧನಂ ಅಭ್ಯಶ್ನುವತೇ** ಜೂಜಾಡುವವರು ಈ ಅಕ್ಷಗಳನ್ನು ತಮ್ಮ ಹಸ್ತಗಳಿಂದ ಜೂಜಾಡುವಕಾಲದಲ್ಲಿ ಎಸೆಯುತ್ತಾರೆ. ಅಥವಾ ಇವುಗಳಿಂದ ಇನ್ನೊಬ್ಬರ ಧನವನ್ನು ತಮ್ಮದನ್ನಾಗಿ ಮಾಡಿಕೊಳ್ಳುತ್ತಾರೆ ಆದುದರಿಂದ ಅಕ್ಷ ಶಬ್ದವು ಜೂಜಾಡುವವರ (ಸಾಮಗ್ರಿ) ಸಾಧನವು ಎಂದು ಅರ್ಥಮಾಡಿರುವರು.

**ವನೇಷು—ಸಂಭಜನೀಯೇಷು | ವನಂ ವನೋತೇಃ** (ನಿ. ೮-೪) ಎಂದು ಸಂಭಜನರೂಪವಾದ ಅರ್ಥವುಳ್ಳ ವನುಧಾತುವಿನಿಂದ ವನ ಶಬ್ದವು ನಿಷ್ಪನ್ನವಾಗಿರುತ್ತದೆಯಾದ್ದರಿಂದ ಇಲ್ಲಿಯೂ ಯಾಸ್ಕರು ಹೇಳಿರುವ ಅರ್ಥವನ್ನೇ ವರ್ಣಿಸಿದೆ. ಆದರೆ—

**ನಿ ಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರಂದಿನೋ ರೋರುವದ್ವನಾ |**
**ಪ್ರಾಚೀನೇನ ಮನಸಾ ಬರ್ಹಣಾವತಾ ಯದದ್ಯಾ ಚಿತ್ಕೃಣವಃ ಕಸ್ತ್ವಾ ಪರಿ ||**

(ಋ. ಸಂ. ೧-೫೪-೫)

ಎಂಬ ಋಕ್ಕಿನಲ್ಲಿ **ವನಾನಿ—ಉದಕಾನಿ** ಅಥವಾ. **ವನಾನಿ—ಮೇಘವಧೇನ** ಎಂದು ಅರ್ಥಾಂತರದಲ್ಲಿ ಪ್ರಯುಕ್ತವಾಗಿದೆ ಎಂದು ಯಾಸ್ಕರು ಹೇಳಿರುವರು.

**ತುರ್ವಣಿಃ—ಶೀಘ್ರಗಂತಾ, ಶತ್ರೂಣಾಂ ಹಿಂಸಕೋ ವಾ |** ವೇಗವಾಗಿ (ಹೋಗುವವನು) ಸಂಚರಿಸುವವನು. ಅಥವಾ ಶತ್ರುಗಳನ್ನು ಹಿಂಸೆಮಾಡುವವನು ಎಂದು ಅರ್ಥ. ಅಗ್ನಿಯು ಈ ಗುಣಗಳಿಂದ ಯುಕ್ತನೆಂದು ವರ್ಣಿಸಿದೆ.

**ಸ ತುರ್ವಣಿರ್ಮಹಾँ ಅರೇಣು ಪೌಂಸ್ಯೇ ಗಿರೇರ್ಭೃಷ್ಟಿರ್ನ ಭ್ರಾಜತೇ ತುಜಾ ಶವಃ |**
**ಯೇನ ಶುಷ್ಣಂ ಮಾಯಿನಮಾಯಸೋ ಮದೇ ದುಧ್ರ ಆಭೂಷು ರಾಮಯನ್ನಿ ದಾಮನಿ ||**

(ಋ. ಸಂ. ೧-೫೬-೩)

ಇಲ್ಲಿ **ತುರ್ವಣಿ** ಶಬ್ದಕ್ಕೆ **ತೂರ್ಣಂ ಹಿ ಯಃ ಸಂಭಜತೇ ಸ ತೂರ್ಣವನಿತಾ ಸರ್ ತೂರ್ಣವನಿರಿತ್ಯುಕ್ತಃ** ಎಂದು ದುರ್ಗಾಚಾರ್ಯರು ವಿವರಿಸಿದ್ದಾರೆ. ಯಾಸ್ಕರೂ ಕೂಡ **ತುರ್ವಣಿಸ್ತೂರ್ಣವನಿಃ**(ನಿ. ೬-೧೪) ಎಂದು ಸಾಯಣರ ಅರ್ಥವನ್ನೇ ವಿವರಿಸಿದ್ದಾರೆ.

**ಸಾನುಷು—ಸಮುಚ್ಛ್ರಿತೇಷು!** ಎತ್ತರವಾದ ಪ್ರದೇಶ ಎಂದು ಅರ್ಥ. **ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ || ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ-**

**ವಿವಾಸೇಮುಧೀತಿಭಿಃ** || ಯಾಸ್ಕರು ಈ ಋಕ್ಕಿನಲ್ಲಿರುವ ಸಾನು ಶಬ್ದಕ್ಕೆ **ಸಾನು ಸಮುಚ್ಛ್ರಿತಂ ಭವತಿ ಸಮುನ್ನುನ್ನಮಿತಿ ವಾ** (ನಿ. ೨-೨೪) ಎಂದು ವ್ಯಾಖ್ಯಾನಮಾಡಿರುವರು. ದುರ್ಗಾಚಾರ್ಯರು **ಸಾನು ಸಮಸ್ತಂ ಹಿ ತದುಚ್ಛ್ರಿತಂ ಭವತಿ** ಎತ್ತರವಾದ ಪ್ರದೇಶವೂ ಎಂದೂ **ಸಮಂ ಊರ್ಧ್ವಂ ನುನ್ನಂ ಸಾನು** ಸರಿಯಾಗಿ ಮೇಲುಗಡೆಗೆ ಪ್ರೇರಿತವಾದದ್ದು ಸಾನುವೆನಿಸಿರುತ್ತದೆ ಎಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಉಪರೇಷು—ಉಪಾರಮಂತೇ ಏಷ್ವಗ್ನಯಃ ಇತ್ಯುಪರಾಃ ಧಿಷ್ಣ್ಯಾ ಯಜಮಾನಗೃಹಾ ವಾ** | ಅಗ್ನಿಯು ಯಜ್ಞದಲ್ಲಿ ಸುಖವಾಗಿ ಇರುವ ವೇದಿಗಳು ಅಥವಾ ಯಜ್ಞಮಾಡುವ ಯಜಮಾನರ ಗೃಹಗಳು ಎಂದು ಅರ್ಥ.

**ಉಪರ** ಶಬ್ದವು ಎಂಟು **ದಿಙ್ನಾಮ**ಗಳಲ್ಲಿಯೂ (ನಿ. ೨-೧೬) **ಮೇಘ**ನಾಮಗಳಲ್ಲಿಯೂ (ನಿ. ೩-೨೧) ಉಕ್ತವಾಗಿರುತ್ತದೆ. ಅಗ್ನಿಯು ಎತ್ತರವಾದ ಯಜ್ಞವೇದಿಯಲ್ಲಿಯೂ, ಯಜಮಾನರ ಗೃಹಗಳಲ್ಲಿಯೂ ಪ್ರತಿಷ್ಠಿತನಾಗಿ ಇರುರುವವನು ಎಂದು ಅರ್ಥ.

**ಪರೇಷು ಸಾನುಷು—ಉತ್ಕೃಷ್ಟೇಷು ಸಮುಚ್ಛ್ರಿತೇಷು ಕರ್ಮಸು ಹವಿಷ್ಷು ವಾ ನಿಮಿತ್ತ-ಭೂತೇಷು** | ಈ ಋಕ್ಕಿನಲ್ಲಿ **ಸಾನುಷು** ಎಂಬ ಪದವನ್ನು ಎರಡು ಸಾರಿ ಹೇಳಿದೆ. ಅದರಲ್ಲಿ ಒಂದು ಉಪರ ಶಬ್ದಕ್ಕೆ ವಿಶೇಷಣವಾಗಿ ಹೇಳಿದೆ. ಎರಡನೆಯ ಸಾನುಷು ಎಂಬ ಪದಕ್ಕೆ ಉತ್ತಮವಾದ ಕರ್ಮಗಳಲ್ಲಿ ಅಥವಾ ಉತ್ತಮವಾದ ಹವಿಸ್ಸುಗಳನ್ನು ಅರ್ಪಿಸುವ ಕಾಲದಲ್ಲಿ ಅಗ್ನಿಯು ವೇದಿಯಲ್ಲಿ ನೆಲಸಿರುವನು ಎಂದು ವರ್ಣಿಸಿದೆ.

**ಸದಃ—ಸ್ಥಾನಂ** ಸುಖವಾಗಿರುವ ಪ್ರದೇಶ. **ಸದಸ್** ಶಬ್ದವೂ **ದ್ಯಾವಾಪೃಥಿವೀ**ನಾಮಗಳಲ್ಲಿ ಸದಸೀ ಎಂದು (ನಿ. ೩-೨೨) ಪಠಿತವಾಗಿದೆ. ಸಾಯಣರು ಸ್ಥಾನವೆಂದು ಅರ್ಥವನ್ನು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಏನೇನ**—ಇಣ್ ಗತೌ ಧಾತು. **ಇಣ್‌ಶೀಭ್ಯಾಂ ವನ್** (ಉ. ಸೂ. ೧-೧೫೦) ಎಂಬುದರಿಂದ ವನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದ ರಿಂದ ಆದ್ಯುದಾತ್ತಸ್ವರ ಬರುತ್ತದೆ ತೃತೀಯಾ ಏಕವಚನಾಂತರೂಪ.

**ಏತಿ**—ಪೂರ್ವೋಕ್ತವಾದ ಧಾತುವಿನ ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪಾರ್ಥಿವಮ್**—ಪೃಥಿವ್ಯಾ ಇದಮ್. **ಪೃಥಿವ್ಯಾ ಞಾಞೌ** ಎಂಬುದರಿಂದ ಅಞ್ ಪ್ರತ್ಯಯ. **ತದ್ಧಿತೇಷ್ವ-ಚಾಮಾದೇಃ** ಎಂಬುದರಿಂದ ಆದಿವೃದ್ಧಿ. **ಯಸ್ಯೇತಿ ಚ** ಸೂತ್ರದಿಂದ ಈಕಾರಲೋಪ. ಞಿತ್ತ್ವಾದುದರಿಂದ ಆದ್ಯುದಾತ್ತ ವಾಗುತ್ತದೆ.

**ಮುಹುರ್ಗಿರಃ**—ಗೃ ನಿಗರಣೇ. ಧಾತು. ಮುಹುಃ ಎಂಬುದು ಉಪಪದವಾಗಿರುವಾಗ ಇದಕ್ಕೆ **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಋತ ಇದ್ಧಾತೋಃ** ಎಂಬುದರಿಂದ ಧಾತುವಿಗೆ ಇತ್ವ. ಪ್ರಥಮಾ ಸುಪರವಾದಾಗ **ರ್ವೋರುಪಧಾಯಾಃ**—ಎಂಬುದರಿಂದ ಉಪಧಾದೀರ್ಘ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ರೇತಃ**— ರೀಙ್ ಶ್ಲೇಷಣೇ ಧಾತು. **ಸ್ರುರೀಭ್ಯಾಂ ತುಟ್ ಚ** (ಉ. ಸೂ. ೪-೬೪೧) ಎಂಬುದರಿಂದ ಅಸನ್ ಪ್ರತ್ಯಯ. ಅದಕ್ಕೆ ತುಟಾಗಮ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಧತ್**—ಡುಧಾಞ್ ಧಾರಣಪೋಷಣಯೋಃ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ನಾಭ್ಯಸ್ತಾಚ್ಛತುಃ** ಎಂಬುದರಿಂದ ನುಮಾಗಮ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಚಕ್ಷಾಣಃ**—ಚಕ್ಷಿಙ್ ವ್ಯಕ್ತಾಯಾಂ ವಾಚಿ, ಅದಾದಿ. ಇಲ್ಲಿ ಪ್ರಕಾಶಾರ್ಥದಲ್ಲಿ ಪ್ರಯುಕ್ತವಾಗಿದೆ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಅನುದಾತ್ತೇತ್ತ್ವಾದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವಾದ ಶಾನಚ್ ಅನುದಾತ್ತವಾಗುವುದರಿಂದ ಧಾತುವಿನ ಸ್ವರ ಉಳಿಯುತ್ತದೆ.

**ಉಪರೇಷು**—ಉಪರಮಂತೇ ಏಷು ಇತಿ ಉಪರಾಃ. ರಮು ಕ್ರೀಡಾಯಾಂ ಧಾತು. **ಅನ್ಯತ್ರಾಪಿ ದೃಶ್ಯತೇ ಇತಿ ವಕ್ತವ್ಯಮ್** ಎಂಬುದರಿಂದ ಡ ಪ್ರತ್ಯಯ. ಡಿತ್ತ್ವಾದುದರಿಂದ ಟಿಗೆ (ಅಮ್) ಲೋಪ. ಸಪ್ತಮೀ ಬಹುವಚನಾಂತರೂಪ. ॥ ೩ ॥



॥ ಸಂಹಿತಾಪಾಠಃ ॥

ಸ ಸುಕ್ರತುಃ ಪುರೋಹಿತೋ ದಮೇದಮೇಽಗ್ನಿರ್ಯಜ್ಞಸ್ಯಾಧ್ವರಸ್ಯ ಚೇತತಿ
ಕ್ರತ್ವಾ ಯಜ್ಞಸ್ಯ ಚೇತತಿ ।
ಕ್ರತ್ವಾ ವೇಧಾ ಇಷೂಯತೇ ವಿಶ್ವಾ ಜಾತಾನಿ ಪಸ್ಪಶೇ ।
ಯತೋ ಘೃತಶ್ರೀರತಿಥಿರಜಾಯತ ವಹ್ನಿರ್ವೇಧಾ ಅಜಾಯತ ॥ ೪ ॥

॥ ಪದಪಾಠಃ ॥

ಸಃ । ಸುಽಕ್ರತುಃ । ಪುರಃಽಹಿತಃ । ದಮೇಽದಮೇ । ಅಗ್ನಿಃ । ಯಜ್ಞಸ್ಯ । ಅಧ್ವರಸ್ಯ । ಚೇತತಿ ।
ಕ್ರತ್ವಾ । ಯಜ್ಞಸ್ಯ । ಚೇತತಿ ।
ಕ್ರತ್ವಾ । ವೇಧಾಃ । ಇಷುಽಯತೇ । ವಿಶ್ವಾ । ಜಾತಾನಿ । ಪಸ್ಪಶೇ ।
ಯತಃ । ಘೃತಽಶ್ರೀಃ । ಅತಿಥಿಃ । ಅಜಾಯತ । ವಹ್ನಿಃ । ವೇಧಾಃ । ಅಜಾಯತ ॥ ೪ ॥

॥ ಸಾಯಣಭಾಷ್ಯಂ ॥

**ಸೋಽಗ್ನಿಃ ಸುಕ್ರತುಃ ಶೋಭನಕರ್ಮಾ ಪುರೋಹಿತಃ ಪುರೋ ಧಾರ್ಯಮಾಣಃ । ಯದ್ವಾ । ಪುರೋಹಿತವದ್ಯಾಗನಿರ್ವಾಹಕಃ ಸನ್ । ದಮೇ ದಮೇ ತತ್ತದ್ಯಜಮಾನಗೃಹೇ ಸರ್ವೇಷು ದೇವಯಜನೇಷು ವಾಧ್ವರಸ್ಯ ನಾಶರಹಿತಸ್ಯ ಫಲಪ್ರದಸ್ಯ ಯಜ್ಞಸ್ಯ ತದರ್ಥಂ ಚೇತತಿ । ಜಾನಾತಿ । ಪ್ರಬುಧ್ಯತ ಇತ್ಯರ್ಥಃ । ಕಿಂಚಾಯಂ ಯಜಮಾನೋಽಪಿ ಕ್ರತ್ವಾ ಶೋಭನೇನ ಕರ್ಮಣಾ ಯಜ್ಞಸ್ಯ ಚೇತತಿ । ಕರ್ತವ್ಯತಾಮವಜಾನಾತಿ । ಕಿಂಚಾಯಮಗ್ನಿರಪಿ ಕ್ರತ್ವಾ ಪ್ರಕೃಷ್ಟೇನ ಕರ್ಮಣಾ ವೇಧಾ ವಿವಿಧಾನಾಂ ಫಲಾನಾಂ ಕರ್ತಾ ಸನ್ನಿಷೂಯತೇ। ಇಷ್ಯತ ಇತೀಷುರನ್ನಮಾಗಮನಂ ವಾ। ತದಿಚ್ಛತೇ ಯಜಮಾನಾರ್ಥಂ ವಿಶ್ವಾ ಜಾತಾನಿ ಸರ್ವಾಣಿ ಸಂಪಾದಿತಾನಿ ಹವಿರಾದೀನಿ ಪಸ್ಪಶೇ । ಅತ್ಯರ್ಥಂ ಸ್ಪೃಶತಿ । ಸ್ವೀಕರೋತಿ । ಯತೋಽಯಂ ಘೃತಶ್ರೀರ್ಘೃತಂ ಸೇವಮಾನೋಽತಿಥಿರತಿಥಿವತ್ಪೂಜ್ಯಶ್ಚಾಜಾಯತ ಉತ್ಪನ್ನಃ । ಯತಃ ಕಾರಣಾತ್ ಘೃತಮತ್ಯರ್ಥಂ ಸೇವಮಾನಃ ಪ್ರವೃದ್ಧೋಽಭವತ್ । ಅತಃ ಪಸ್ಪಶ ಇತ್ಯರ್ಥಃ । ಏವಮಗ್ನೌ ಪ್ರವೃದ್ಧೇ ಸತಿ ಯಜಮಾನೋಽಪಿ ವಹ್ನಿರ್ಹವಿಷಾಂ ವೋಢಾ ವೇಧಾ ವಿವಿಧಸ್ಯ ಫಲಸ್ಯ ಕರ್ತೋತ್ಪಾದಯಿತಾಜಾಯತ । ಸಮರ್ಥೋಽಭವತ್ ॥**

॥ ಪ್ರತಿಪದಾರ್ಥ ॥

**ಸಃ ಅಗ್ನಿಃ**—ಆ ಅಗ್ನಿಯು । **ಸುಕ್ರತುಃ**—ಶುಭಕರ್ಮವಿಶಿಷ್ಟನೂ । **ಪುರೋಹಿತಃ**—ಮುಂಭಾಗದಲ್ಲಿ ಸ್ಥಾಪಿತನೂ (ಪುರೋಹಿತನಂತೆ ಯಾಗನಿರ್ವಾಹಕನೂ) ಆಗಿ । **ದಮೇ ದಮೇ**—ಪ್ರತಿ ಮನೆಯಲ್ಲಿಯೂ । **ಅಧ್ವರಸ್ಯ**—ನಾಶರಹಿತವಾದ (ಫಲಪ್ರದವಾದ) । **ಯಜ್ಞಸ್ಯ**—ಯಜ್ಞಕ್ಕೋಸ್ಕರ । **ಚೇತತಿ**—ಪ್ರಬುದ್ಧನಾಗುತ್ತಾನೆ; (ಮತ್ತು ಯಜಮಾನನೂ ಕೂಡ) । **ಕ್ರತ್ವಾ**—ಶುಭಕರ್ಮಗಳಿಂದ । **ಯಜ್ಞಸ್ಯ**—ಯಜ್ಞವಿಷಯದಲ್ಲಿ । **ಚೇತತಿ**—ಕರ್ತವ್ಯತಾಜ್ಞಾನವುಳ್ಳವನಾಗುತ್ತಾನೆ; । **ಯತಃ**—ಯಾವ ಕಾರಣದಿಂದ । (**ಅಯಂ**—ಈ ಅಗ್ನಿಯು) । **ಘೃತಶ್ರೀಃ**—ಘೃತವನ್ನು ಸೇವಿಸಿದವನೂ । **ಅತಿಥಿಃ**—ಅತಿಥಿಯಂತೆ (ಪೂಜ್ಯನೂ) । **ಅಜಾಯತ**—ಆದನೋ । (**ತತಃ**—ಆದುದರಿಂದ) । (**ಅಯಂ ಅಗ್ನಿಃ**—ಈ ಅಗ್ನಿಯು) । **ಕ್ರತ್ವಾ**—ಶ್ರೇಷ್ಠಕರ್ಮಗಳಿಂದ । **ವೇಧಾಃ**—ವಿವಿಧ ಫಲಕಾರಿಯಾಗಿ । **ಇಷೂಯತೇ**—ಆಹಾರೇಚ್ಛುವಾದ (ಅಗ್ನ್ಯಾಗಮನೇಚ್ಛುವಾದ) ಯಜಮಾನನಿಗೋಸ್ಕರ । **ವಿಶ್ವಾ ಜಾತಾನಿ**—ಸಮಸ್ತ (ಸಂಪಾದಿತಪದಾರ್ಥ) ಸಮುದಾಯಗಳನ್ನೂ । **ಪಸ್ಪಶೇ**—ಹೆಚ್ಚಾಗಿ ಸ್ಪರ್ಶಿಸುತ್ತಾನೆ (ಸ್ವೀಕರಿಸುತ್ತಾನೆ ಹೀಗೆ ಅಗ್ನಿಯು ಪ್ರವೃದ್ಧನಾಗಲು, ಯಜಮಾನನು) । **ವಹ್ನಿಃ**—(ಹವಿರಾದಿಗಳನ್ನು ಅಗ್ನಿಯ ಸಮೀಪಕ್ಕೆ) ವಹಿಸುವವನಾಗಿ । **ವೇಧಾಃ**—ವಿವಿಧ ಫಲಾಧಿಕಾರಿಯು । **ಅಜಾಯತ**—ಆದನು (ಆಗುತ್ತಾನೆ).

॥ ಭಾವಾರ್ಥ ॥

ಅಗ್ನಿಯು ಶುಭಕರ್ಮಕರ್ತೃವು ; (ಪುರೋಹಿತನಂತೆ) ಯಾಗನಿರ್ವಾಹಕನು ; (ಯಾಗ ಕರ್ತೃಗಳ) ಮನೆಮನೆಯಲ್ಲಿಯೂ, ಯಾಗಾರ್ಥವಾಗಿ ಪ್ರಬುದ್ಧನಾಗುತ್ತಾನೆ ; ಯಜಮಾನನೂ ಕೂಡ ಶುಭಕರ್ಮಾಚರಣೆಗಳಿಂದ ಕರ್ತವ್ಯತಾಜ್ಞಾನವುಳ್ಳವನಾಗುತ್ತಾನೆ ; ಘೃತವನ್ನು ಸ್ವೀಕರಿಸಿ, ಅತಿಥಿಯಂತೆ ಪೂಜಿತನಾಗಿ, ಅಗ್ನಿಯು ಹವಿರಾದಿಗಳನ್ನು ಅಧಿಕವಾಗಿ ಸ್ವೀಕರಿಸಿ, ಉತ್ಕೃಷ್ಟವಾದ ಕರ್ಮಗಳಿಂದ ವಿವಿಧ ಫಲದಾತೃವಾಗುತ್ತಾನೆ ; (ಯಜಮಾನನೂ) ಹವಿರಾದಿಗಳನ್ನರ್ಪಿಸಿ, ವಿವಿಧ ಫಲಭೋಕ್ತೃವಾಗುತ್ತಾನೆ.

## English Translation.

That Agni, who is (the performer of) holy acts, the priest of the family, thinks in every dwelling of the imperishable sacrifice; he thinks of the sacrifice (reminded) by (its) celebration: for through such pious rite, he, the bestower of (fit) rewards, accepts all the offered oblations for (the good of) the worshipper; whence he has become as a guest, fed abundantly with butter; and the offerer (of the oblations) has become the realizer of the rewards (of the worship).

॥ ವಿಶೇಷವಿಷಯಗಳು ॥

**ಸುಕ್ರತುಃ—ಶೋಭನಕರ್ಮಾ** ಯಜಮಾನರಿಗೆ ಒಳ್ಳೆಯದಾಗುವ ಕಾರ್ಯಗಳನ್ನು ಆಚರಿಸುವವನು ಎಂದು ಅರ್ಥ.

**ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ ।**
**ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ॥**

(ಋ. ಸಂ. ೭-೨-೨)

ಇಲ್ಲಿ ಯಾಸ್ಕರು **ಸುಕ್ರತವಃ** ಎಂಬ ಪದಕ್ಕೆ **ಶೋಭನಕರ್ಮಾಣಃ** ಎಂದು ಅರ್ಥವನ್ನು ವಿವರಿಸಿದ್ದಾರೆ.

**ಪುರೋಹಿತಃ—ಪುರೋಧಾರ್ಯಮಾಣಃ ಯದ್ವಾ ಪುರೋಹಿತವತ್ ಯಾಗನಿರ್ವಾಹಕಃ ।** ಅಗ್ನಿಯೂ ಯಾಗಗಳಲ್ಲಿ ಮುಂದುಗಡೆ ಇಡಲ್ಪಡುವನು ಅಥವಾ ಮಂತ್ರಗಳನ್ನು ಪಠಿಸಿ ಆಯಾಯ ಕರ್ಮಗಳನ್ನು ಮಾಡಿಸುವವನಂತೆ (ಪುರೋಹಿತನಂತೆ) ಯಾಗಗಳನ್ನು ನೆರವೇರಿಸುವವನು. ಯಾಸ್ಕರು **ಪುರಃ ಏನಂ ದಧಾತಿ** (ನಿ. ೨-೧೨) ಎಂದು ಪುರೋಹಿತಶಬ್ದದ ಅರ್ಥವನ್ನು ವಿವರಿಸಿರುವರು.

**ದಮೇ ದಮೇ—ತತ್ತದ್ಯಜಮಾನಗೃಹೇ ಸರ್ವೇಷು ದೇವಯಜನೇಷು ವಾ । ದಮೇ** ಎಂಬ ಶಬ್ದವು ಗೃಹನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಮತ್ತು **ದಮ ಇತಿ ಗೃಹನಾಮ** (ನಿ. ೪-೪) ಎಂದು ವ್ಯಾಖ್ಯಾತವಾಗಿದೆ. ಸಾಯಣರು, ಅಗ್ನಿಯು ಆಯಾಯ ಯಜ್ಞಮಾಡುವವರ ಮನೆಗಳಲ್ಲಿಯೂ, ದೇವತೆಗಳ ಉದ್ದೇಶದಿಂದ ಯಜ್ಞಮಾಡುವ ಪ್ರದೇಶಗಳಲ್ಲಿಯೂ ಪ್ರಬುದ್ಧನಾಗಿರುವನು ಎಂದು ಅರ್ಥವನ್ನು ವರ್ಣಿಸಿರುವರು.

**ಅಧ್ವರಸ್ಯ—ನಾಶರಹಿತಸ್ಯ ಫಲಪ್ರದಸ್ಯ** ನಾಶವಾಗದೆ ಇರುವ ಫಲವನ್ನು ಉಂಟುಮಾಡುವ ಯಜ್ಞಕ್ಕಾಗಿ ಎಂದು ಅರ್ಥ.

ಅಧ್ವರ ಶಬ್ದವು—**ಅಧ್ವರ ಇತಿ ಯಜ್ಞನಾಮ ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧಃ ।** (ನಿ. ೧-೮) **ಅಧ್ವರ** ಎಂಬ ಶಬ್ದವು **ಯಜ್ಞ** ಎಂಬ ಅರ್ಥವನ್ನು ಬೋಧಿಸುವುದು. **ಧ್ವರತಿ ಧೂರ್ವತಿ** ಎಂಬ ಧಾತುಗಳು ಹಿಂಸೆ ಮಾಡುವುದು ಎಂಬ ಅರ್ಥವನ್ನು ಬೋಧಿಸುವುವು. ಅಧ್ವರಶಬ್ದದಿಂದ ಹಿಂಸೆ ಇಲ್ಲದಿರುವ ಕರ್ಮವೆಂದು ಅರ್ಥವನ್ನು

ಯಾಸ್ಕರು ವರ್ಣಿಸಿದ್ದಾರೆ. ಮತ್ತು—ಅಧ್ವರ ಶಬ್ದವು ಹದಿನಾರು ಅಂತರಿಕ್ಷನಾಮಗಳಲ್ಲಿಯೂ (ನಿ. ೨-೧೦) ಉಕ್ತವಾಗಿದೆ. ಮತ್ತು ಹದಿನೈದು ಯಜ್ಞನಾಮಗಳಲ್ಲಿಯೂ (ನಿ. ೩-೧೯) ಉಕ್ತವಾಗಿದೆ.

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।**
**ತಾँ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ॥**

(ಋ. ಸಂ. ೭-೩೯-೪)

ಇಲ್ಲಿ **ಅಧ್ವರೇ—ಯಜ್ಞೇ** ಎಂದು **ಅಧ್ವರ** ಶಬ್ದಕ್ಕೆ ಯಜ್ಞವೆಂದು ಅರ್ಥಮಾಡಿದೆ. **ಕ್ರತ್ವಾ** ಎಂಬ ಪದವು ಎರಡು ಸಾರಿ ಪ್ರಯುಕ್ತವಾಗಿದೆ. ಮೊದಲನೆಯ ಕ್ರತ್ವಾ ಪದಕ್ಕೆ **ಶೋಭನೇನ ಕರ್ಮಣಾ** ಮಂಗಳಕರವಾದ ಕರ್ಮವೆಂದೂ, ಎರಡನೆಯ ಕ್ರತ್ವಾ ಪದಕ್ಕೆ **ಪ್ರಕೃಷ್ಟೇನ ಕರ್ಮಣಾ** ಬಹಳ ಕಾರ್ಯಗಳಿಂದ ಎಂದೂ, ಅರ್ಥಮಾಡಿದೆ.

**ವೇಧಾಃ—ವಿವಿಧಾನಾಂ ಫಲಾನಾಂ ಕರ್ತಾ** ಯಾಗ ಮಾಡುವವರಿಗೆ ಅನೇಕ ವಿಧವಾದ ಫಲಗಳನ್ನು ಕೊಡುವವನು ಎಂದು ಅರ್ಥ. ಈ ಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಪಠಿತವಾಗಿದೆ.

**ಇಷೂಯತೇ—ಇಷ್ಯತ ಇತಿ ಇಷುಃ ಅನ್ನಂ ಆಗಮನಂ ವಾ । ಈಷ** ಎಂಬ ಧಾತುವಿನಿಂದ ನಿಷ್ಪನ್ನವಾದ ಇಷು ಶಬ್ದಕ್ಕೆ ಅನ್ನ ಅಥವಾ ಆಗಮನ (ಬರುವಿಕೆ) ಎಂದೂ ಅರ್ಥ. ನಿರುಕ್ತಕಾರರು,

**ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಸ್ಸನ್ನದ್ಧಾ ಪತತಿ ಪ್ರಸೂತಾ ।**
**ಯತ್ರಾ ನರಃ ಸಂ ಚ ವಿ ಚ ದ್ರವಂತಿ ತತ್ರಾಸ್ಮಭ್ಯಮಿಷವಃ ಶರ್ಮ ಯಂಸನ್ ॥**

(ಋ. ಸಂ. ೬-೭೫-೧೧)

ಈ ಋಕ್ಕನ್ನು ಉದಹರಿಸಿ, **ಇಷುರೀಷತೇರ್ಗತಿಕರ್ಮಣೋ ವಧಕರ್ಮಣೋ ವಾ ।** ಗತಿ ಎಂಬ ಅರ್ಥವನ್ನು ಬೋಧಿಸುವ ಈಷ ಧಾತುವಿನಿಂದ ನಿಷ್ಪನ್ನವಾದ ಇಷು ಶಬ್ದಕ್ಕೆ ಗಮನ ಅಥವಾ ಪ್ರಾಣಿಗಳನ್ನು ಕೊಲ್ಲುವ ಆಯುಧ ಎಂದು ಅರ್ಥವನ್ನು ವರ್ಣಿಸಿದ್ದಾರೆ. ಪ್ರಾಣಿಗಳನ್ನು ವಧೆಮಾಡುವ ಬಾಣವು ಶೀಘ್ರವಾಗಿ ಲಕ್ಷ್ಯಕ್ಕೆ ಸೇರುವಂತೆ, ಯಜ್ಞಕ್ಕಾಗಿ ಬರಲು ಅಪೇಕ್ಷೆಪಡುವ (ಯಜಮಾನನಿಗಾಗಿ) ಯಜಮಾನನ ಅಭಿಲಾಷೆಯನ್ನು ಅನುಸರಿಸಿ ಅಗ್ನಿಯು ಬರುವನೆಂದು ಅರ್ಥ.

**ಘೃತಶ್ರೀಃ ಅತಿಥಿಃ ಅಜಾಯತ—ಘೃತಂ ಸೇವಮಾನಃ ಅತಿಥಿವತ್ ಪೂಜ್ಯಶ್ಚ ।** ಅಗ್ನಿಯು ಆಜ್ಯವನ್ನು ಬಹಳವಾಗಿ ಸೇವಿಸುವುದರಿಂದಲೂ, ಅತಿಥಿಯ ಹಾಗೆ ಪೂಜಾಯೋಗ್ಯನಾಗಿರುವುದರಿಂದಲೂ ವೇದಿಯಲ್ಲಿ ಪ್ರವೃದ್ಧನಾಗಿ ಯಜ್ಞಮಾಡುವ ಯಜಮಾನನು ಹೋಮಮಾಡುವ ಹವಿಸ್ಸೇ ಮೊದಲಾದವುಗಳನ್ನು ಬಹಳವಾಗಿ ಸ್ವೀಕರಿಸುವನು ಎಂದು ಅರ್ಥ.

**ವಹ್ನಿಃ ವೇಧಾಃ ಅಜಾಯತ—ಏವಮಗ್ನೌ ಪ್ರವೃದ್ಧೇ ಸತಿ ಯಜಮಾನೋಽಪಿ ಹವಿಷಾಂ ವೋಢಾ ವಿವಿಧಸ್ಯ ಫಲಸ್ಯ ಕರ್ತಾ ಉತ್ಪಾದಯಿತಾ ಸಮರ್ಥಃ ಅಭವತ್ ।** ಹವಿಸ್ಸುಗಳ ಸ್ವೀಕಾರದಿಂದ ಅಗ್ನಿಯು ವೃದ್ಧಿಯನ್ನು ಹೊಂದಿ ತೃಪ್ತಿಯನ್ನು ಹೊಂದಿದಾಗ ಯಜ್ಞಮಾಡುವ ಯಜಮಾನನೂ ಕೂಡ ಅಗ್ನಿಗಾಗಿ ಹವಿಸ್ಸುಗಳನ್ನು ವಹಿಸುವವನಾಗಿಯೂ, ಅಗ್ನಿಯ ಹಾಗೆ ಅನೇಕ ವಿಧವಾದ ಫಲಗಳನ್ನು ಉಂಟುಮಾಡಿಕೊಡುವ ಸಾಮರ್ಥ್ಯವುಳ್ಳ ಮಹಿಮೆಯಿಂದ ಕೂಡಿದವನಾಗಿಯೂ ಇರುವನು ಎಂದು ಅರ್ಥವನ್ನು ವಿವರಿಸಿದೆ.

**ವಹ್ನಿ** ಶಬ್ದವು ಇಪ್ಪತ್ತಾರು ಅಶ್ವನಾಮಗಳಲ್ಲಿ (ನಿ. ೨–೨೭) ಪಠಿತವಾಗಿದೆ.

> **ನ ಜಾಮಯೇ ತಾನ್ವೋ ರಿಕ್ಥಮಾರೈಕ್ ಚಕಾರ ಗರ್ಭಂ ಸನಿತುರ್ನಿಧಾನಂ ।**
> **ಯದೀ ಮಾತರೋ ಜನಯಂತ ವಹ್ನಿಮನ್ಯಃ ಕರ್ತಾ ಸುಕೃತೋರನ್ಯ ಋಂಧನ್ ॥**

(ಋ. ಸಂ ೩-೩೧-೨)

ಇಲ್ಲಿ **ವಹ್ನಿ** ಶಬ್ದಕ್ಕೆ **ವಧ್ವಾ ವೋಢಾರಂ ಪುತ್ರಂ** ಎಂದು ಅರ್ಥವನ್ನು ವರ್ಣಿಸಿದೆ.

> **ಮೇದ್ಯಂತು ತೇ ವಹ್ನಯೋ ಯೇಭಿರೀಯಸೇऽರಿಷಣ್ಯನ್ ವೀಳಯಸ್ವಾ ವನಸ್ಪತೇ ।**
> **ಆಯೂಯಾ ಧೃಷ್ಣೋ ಅಭಿಗೂರ್ಯಾ ತ್ವಂ ನೇಷ್ಟ್ರಾತ್ ಸೋಮಂ ದ್ರವಿಣೋದಃ ಪಿಬ ಋತುಭಿಃ ॥**

(ಋ. ಸಂ. ೨-೩೭-೩)

ಈ ಋಕ್ಕಿನಲ್ಲಿ ವಹ್ನಿ ಶಬ್ದಕ್ಕೆ ವೋಢಾರಃ ಎಂದು ಅರ್ಥವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸುಕ್ರತುಃ**—ಶೋಭನಃ ಕ್ರತುಃ ಯಸ್ಯ ಸಃ ಸುಕ್ರತುಃ. **ಕ್ರತ್ವಾದಯಶ್ಚ** (ಪಾ. ಸೂ. ೬-೨-೧೧೮) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ವಾಗುತ್ತದೆ.

**ಪುರೋಹಿತಃ**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ನಿಷ್ಠಾ ಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದಮೇದಮೇ—ನಿತ್ಯವೀಪ್ಸಯೋಃ** (ಪಾ. ಸೂ. ೮–೧–೪) ಎಂಬುದರಿಂದ ವೀಪ್ಸಾರ್ಥದಲ್ಲಿ ದ್ವಿರ್ವಚನ. ಪರಕ್ಕೆ ಆಮ್ರೇಡಿತಸಂಜ್ಞಾ ಇರುವಾಗ **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಅಧ್ವರಸ್ಯ**—ನ ವಿದ್ಯತೇ ಧ್ವರಃ ಹಿಂಸಾ ಯತ್ರ ಅಧ್ವರಃ, ತಸ್ಯ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತ ಸ್ವರ ಬರುತ್ತದೆ.

**ಚೇತತಿ**—ಚಿತೀ ಸಂಜ್ಞಾನೇ ಧಾತು. ಭ್ವಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಕ್ರತ್ವಾ**— ಕ್ರತು+ಆ ಎಂದಿರುವಾಗ **ಜಸಾದಿಷು ಛಂದಸಿ ವಾವಚನಮ್** ಎಂಬ ವಚನದಿಂದ ನಾಭಾವ ಬರುವುದಿಲ್ಲ. ಯಣಾದೇಶ.

**ವೇಧಾಃ**—ಡುಧಾಞ್ ಧಾರಣಪೋಷಣಯೋಃ ಧಾತು. **ವಿಧಾಞೋ ವೇಧ ಚ** (ಉ. ಸೂ. ೪-೬೬೪) ಎಂಬುದರಿಂದ ವಿ ಉಪಸರ್ಗ ಪೂರ್ವಕವಾದ ಇದಕ್ಕೆ ಅಸಿ ಪ್ರತ್ಯಯ. ಉಪಸರ್ಗವಿಶಿಷ್ಟವಾದ ಧಾತುವಿಗೆ ವೇಧಾ ದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಸಕಾರಾಂತ ಶಬ್ದವಾಗುತ್ತದೆ.

**ಇಷೂಯತೇ**— ಇಷುಂ ಆತ್ಮನಃ ಇಚ್ಛತಿ ಇಷೂಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ. ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಚತುರ್ಥೀ ಏಕ

ವಚನಾಂತರೂಪ. **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

ವಿಶ್ವಾ— **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಪಸ್ಪಶೇ**—ಸ್ಪಶ ಬಾಧನಸ್ಪರ್ಶನಯೋಃ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಏಶಾದೇಶ. ಧಾತುವಿಗೆ ದ್ವಿತ್ವ. **ಶರ್ಪೂರ್ವಾಃಖಯಃ** (ಪಾ. ಸೂ. ೭-೪-೬೧) ಎಂಬುದರಿಂದ ಅಭ್ಯಾಸದಲ್ಲಿ ಪಕಾರಶೇಷ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಘೃತಶ್ರೀಃ**—ಘೃತಂ ಶ್ರಯತೇ ಇತಿ ಘೃತಶ್ರೀಃ. **ಕ್ವಿಬ್ವಚಿಪ್ರ**—(ಉ. । ಸೂ. ೨-೫೭) ಎಂಬುದರಿಂದ ಶ್ರಿಞ್ ಧಾತುವಿಗೆ ಕ್ವಿಪ್ ಪ್ರತ್ಯಯ. ತತ್ಸಂನಿಯೋಗದಿಂದ ಧಾತುವಿಗೆ ದೀರ್ಘ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಜಾಯತ**— ಜನೀ ಪ್ರಾದುರ್ಭಾವೇ ಧಾತು. ಲಙ್ ಪ್ರಥಮ ಪುರುಷ ಏಕವಚನಾಂತರೂಪ ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಅದ್ಯುದಾತ್ತವಾಗುತ್ತದೆ.



॥ ಸಂಹಿತಾಪಾಠಃ ॥

ಕ್ರತ್ವಾ ಯದಸ್ಯ ತವಿಷೀಷು ಪೃಂಚತೇಽಗ್ನೇರವೇಣ ಮರುತಾಂ ನ ಭೋ-
ಜ್ಯೇಷಿರಾಯ ನ ಭೋಜ್ಯಾ ।
ಸ ಹಿ ಷ್ಮಾ ದಾನಮಿನ್ವತಿ ವಸೂನಾಂ ಚ ಮಜ್ಮನಾ ।
ಸ ನಸ್ತ್ರಾಸತೇ ದುರಿತಾದಭಿಹ್ರುತಃ ಶಂಸಾದಘಾದಭಿಹ್ರುತಃ ॥ ೫ ॥

॥ ಪದಪಾಠಃ ॥

ಕ್ರತ್ವಾ । ಯತ್ । ಅಸ್ಯ । ತವಿಷೀಷು । ಪೃಂಚತೇ । ಅಗ್ನೇಃ । ಅವೇನ । ಮರುತಾಂ । ನ । ಭೋಜ್ಯಾ ।
ಇಷಿರಾಯ । ನ । ಭೋಜ್ಯಾ ।
ಸಃ । ಹಿ । ಸ್ಮ । ದಾನಂ । ಇನ್ವತಿ । ವಸೂನಾಂ । ಚ । ಮಜ್ಮನಾ ।
ಸಃ । ನಃ । ತ್ರಾಸತೇ । ದುಃಽಇತಾತ್ । ಅಭಿಽಹ್ರುತಃ । ಶಂಸಾತ್ । ಅಘಾತ್ । ಅಭಿಽಹ್ರುತಃ ॥ ೫ ॥

॥ ಸಾಯಣಭಾಷ್ಯಂ ॥

ಯದ್ಯಸ್ಮಾತ್ಕಾರಣಾತ್ಸರ್ವೇ ಯಜಮಾನಾಃ ಕ್ರತ್ವಾ ಪ್ರಕೃಷ್ಟೇನ ಕರ್ಮಣಾ ಹವಿಷ್ಪ್ರದಾನಾದಿರೂಪೇಣಾಸ್ಯಾಗ್ನೇಸ್ತವಿಷೀಷು ಪ್ರಬಲಾಸು ಜ್ವಾಲಾಸ್ವವೇನ ತೃಪ್ತಿನಿಮಿತ್ತೇನ ಭೋಜ್ಯಾ ಭಕ್ಷ್ಯಾಣಿ ಪುರೋಡಾಶಾದೀನಿ ಪೃಂಚತೇ ಮಿಶ್ರಯಂತಿ । ತವಿಷೀತಿ ಬಲನಾಮ ತವಿಷೀ ಶುಷ್ಮಮಿತಿ ತನ್ನಾಮಸು ಪಾಠಾತ್ । ತತ್ರ ದೃಷ್ಟಾಂತಃ । ಮರುತಾಂ ನ ಭೋಜ್ಯಾ ವಾಯೂನಾಂ ಸಂಬಂಧೀನಿ ವ್ರೀಹ್ಯಾದ್ಯನ್ನಾನೀವ । ವಾಯುಷು ಮೇಘಂ ನಿರ್ಭಿದ್ಯ ವೃಷ್ಟಿಂ ಜನಯತ್ಸು ಸತ್ಸು ಸಸ್ಯಾದಿದ್ವಾರಾ ವ್ರೀಹ್ಯಾದಿಭೋಜ್ಯಾನಿ ಯಥಾ ಪೃಂಚತೇ ತಥೇತ್ಯರ್ಥಃ । ದಾನೇ ದೃಷ್ಟಾಂತಃ । ಇಷಿರಾಯ ನ ಭೋಜ್ಯಾ । ಏಷಣಯುಕ್ತಾಯ ಯಾಚಮಾನಾಯಾರ್ಥಿನೇ ಭೋಜ್ಯಾ ಭೋಗ್ಯಾನಿ ಭಕ್ಷ್ಯಾದೀನಿ ಯಥಾ ದೀಯಂತೇ ತದ್ವತ್ । ಇಷಿರಶಬ್ದೋ ಯಾಸ್ಕೇನೈವಂ ನಿರುಕ್ತಃ । ಈಷಣೇನ ವೈಷಣೇನ ವಾ । ನಿ. ೪-೭ । ಇತಿ । ಅತಃ ಕಾರಣಾತ್ ಸ ಖಲು ಯಜಮಾನೋ ದಾನಮಿನ್ವತಿ । ಹವಿಷ್ಪ್ರದಾನಂ ತಸ್ಮೈ ವ್ಯಾಪ್ನೋತಿ । ಯದ್ವಾ । ಸ್ವಯಮಭಿಮತಂ ದಾನಮಿನ್ವತಿ । ಇನ್ವತಿರ್ವ್ಯಾಪ್ತಿಕರ್ಮಾ ಇನ್ವತಿ ನನಕ್ಷೇತಿ ತತ್ಕರ್ಮಸು ಪಾಠಾತ್ । ಕೇನ ಸಾಮರ್ಥ್ಯೇನೇತಿ । ವಸೂನಾಂ ಚ ಮಜ್ಮನಾ ನಿವಾಸಯೋಗ್ಯಾನಾಂ ಧನಾನಾಮಗ್ನಿನಾ ಲಬ್ಧಾನಾಂ ಬಲೇನೈವ । ಯದ್ವಾ । ಸೋಽಗ್ನಿರ್ವಸೂನಾಂ ಹವಿರ್ನಿವಾಸಯೋಗ್ಯಾನಾಂ ಜ್ವಾಲಾರೂಪಾಣಾಂ ಧನಾನಾಂ ಮಜ್ಮನಾ ಬಲೇನ ದಾನಮಿನ್ವತೀತಿ ಶೇಷಃ । ಕಿಂಚ ಸೋಽಗ್ನಿರಭಿಹ್ರುತ ಆಭಿಮುಖ್ಯೇನ ಪಾಪೈಃ ಹ್ರಿಯಮಾಣಾನ್ ನೋಽಸ್ಮಾನ್ ದುರಿತಾತ್ಪಾಪಾತ್ ತ್ರಾಸತೇ । ತ್ರಾಯತೇ । ತಥಾ ಶಂಸಾದತಿಪ್ರಭೂತತ್ವೇನ ಶಂಸನೀಯಾತ್ ಯದ್ವಾ ಹಿಂಸಕಾತ್ ಅಭಿಹ್ರುತೋಽಭಿತೋ ಹ್ರಿಯಮಾಣಾದಘಾದ್ದುಃಖಾತ್ ತತ್ಕಾರಣಾತ್ಪಾಪಾದ್ವಾ ತ್ರಾಸತೇ । ತ್ರಾಯತೇ ॥

॥ ಪ್ರತಿಪದಾರ್ಥ ॥

**ಯತ್**—ಯಾವ ಕಾರಣದಿಂದ (ಎಲ್ಲಾ ಯಾಗಕರ್ತೃಗಳೂ) । **ಕ್ರತ್ವಾ**—(ಹವಿಷ್ಪ್ರದಾನರೂಪ) ಕರ್ಮದಿಂದ । **ಅಸ್ಯ ಅಗ್ನೇಃ**—ಈ ಅಗ್ನಿಯ । **ತವಿಷೀಷು**—ಪ್ರಬಲವಾದ (ಜ್ವಾಲೆಗಳಲ್ಲಿ) । **ಅವೇನ**—(ಅಗ್ನಿಯ) ತೃಪ್ತಿನಿಮಿತ್ತಕವಾಗಿ । (**ಭೋಜ್ಯಾ**—ಪುರೋಡಾಶಾದಿಭಕ್ಷ್ಯಗಳನ್ನು) । **ಮರುತಾಂ**—ವಾಯುಸಂಬಂಧವಾದ । **ಭೋಜ್ಯಾ ನ**—ವ್ರೀಹ್ಯಾದ್ಯಾಹಾರ ಪದಾರ್ಥಗಳು ಮಿಶ್ರಿಸಲ್ಪಡುವಂತೆ । **ಇಷಿರಾಯ**—ಯಾಚಿಸುವವನಿಗೆ । **ಭೋಜ್ಯಾ ನ**—ಆಹಾರವನ್ನು ದಾನಮಾಡುವಂತೆ । **ಪೃಂಚತೇ**—ಮಿಶ್ರಣಮಾಡುತ್ತಾರೋ । (**ಅತಃ**—ಆ ಕಾರಣದಿಂದ) । **ಸಃ**—ಆ ಯಜಮಾನನು (ಅಗ್ನಿಯು) । **ವಸೂನಾಂ ಚ**—ಅಗ್ನಿಪ್ರಾಪ್ತವಾದ ಧನದ (ಹವಿರಾಧಾನಯೋಗ್ಯವಾದ ಜ್ವಾಲಾರೂಪವಾದ ಧನದ) । **ಮಜ್ಮನಾ**—ಬಲದಿಂದ । **ದಾನಂ**—ಹವಿಷ್ಪ್ರದಾನವನ್ನು (ಇಷ್ಟವಾದ ದಾನವನ್ನು) । **ಇನ್ವತಿ ಹಿ**—(ಅಗ್ನಿಗೆ) ಅರ್ಪಿಸುತ್ತಾನೆ (ಯಜಮಾನನಿಗೆ ಉಂಟುಮಾಡುತ್ತಾನೆ) । (**ಕಿಂ ಚ**—ಮತ್ತು) । **ಸಃ**—ಆ ಅಗ್ನಿಯು । **ಅಭಿಹ್ರುತಃ**—ಹಿಂಸಿಸಲ್ಪಡುತ್ತಿರುವ । **ನಃ**—ನಮ್ಮನ್ನು । **ದುರಿತಾತ್**—ಪಾಪದಿಂದ । **ತ್ರಾಸತೇ**—ರಕ್ಷಿಸುತ್ತಾನೆ । (**ತಥಾ**—ಹಾಗೆಯೇ) । **ಶಂಸಾತ್**—ಅತ್ಯಂತ ಹೆಚ್ಚಾದ ಮತ್ತು । **ಅಭಿಹ್ರುತಃ**—ಸರ್ವತ್ರ ಹಿಂಸಕವಾದ । **ಅಘಾತ್**—ದುಃಖದಿಂದ (ದುಃಖಕಾರಣವಾದ ಪಾಪದಿಂದ) । (**ತ್ರಾಸತೇ**—ರಕ್ಷಿಸುತ್ತಾನೆ).

॥ ಭಾವಾರ್ಥ ॥

(ಎಲ್ಲಾ) ಯಾಗಕರ್ತೃಗಳೂ ಉತ್ಕೃಷ್ಟ ಕರ್ಮಗಳ ಮೂಲಕ ಅಗ್ನಿಯ ಪ್ರಬಲವಾದ ಜ್ವಾಲೆಗಳಲ್ಲಿ (ಅವನ) ತೃಪ್ತಿಗಾಗಿಯೇ, ವಾಯು ಸಂಬಂಧವಾದ ವ್ರೀಹ್ಯಾದಿಗಳಂತೆ (ವಾಯುವು ಮೇಘಗಳನ್ನು ಭೇದಿಸಿ ವೃಷ್ಟಿಯನ್ನುಂಟುಮಾಡಿ ತನ್ಮೂಲಕ ವ್ರೀಹ್ಯಾದಿಗಳನ್ನು ಉತ್ಪತ್ತಿಮಾಡಿಸುವಂತೆ) ಅತಿಥಿಯಾಗಿ ಬಂದವನಿಗೆ ಆಹಾರವನ್ನು (ಕೊಡುವಂತೆ) ಪುರೋಡಾಶಾದಿಗಳನ್ನು ಹೋಮಮಾಡುತ್ತಾರೆ; ಯಜಮಾನನು (ಅಗ್ನಿದತ್ತವಾದ) ಧನದ ಬಲದಿಂದಲೇ (ಧನದಿಂದಲೇ) ಹವಿಷ್ಪ್ರದಾನಮಾಡುತ್ತಾನೆ; (ಅಗ್ನಿಯು ಹವಿರಾಧಾನಯೋಗ್ಯವಾದ ಜ್ವಾಲೆಗಳ ಬಲದಿಂದ ಹವಿರ್ದಾನವನ್ನು ಸ್ವೀಕರಿಸುತ್ತಾನೆ ಅಥವಾ ಯಜಮಾನನಿಗೆ ಇಷ್ಟವಾದ ದಾನವನ್ನು ಅನುಗ್ರಹಿಸುತ್ತಾನೆ); (ಹೀಗೆ ತೃಪ್ತನಾದ) ಅಗ್ನಿಯು ನಮ್ಮನ್ನು ಹಿಂಸಿಸಿ, ಅಭಿಭೂತರನ್ನಾಗಿ ಮಾಡಿರುವ ಪಾಪ ಮತ್ತು ದುಃಖದಿಂದ ರಕ್ಷಿಸುತ್ತಾನೆ.

## English Translation.

Inasmuch as (all men) offer in holy rite (food) for his satisfaction in the blazing (flames) of Agni, like (the grains that) are to be enjoyed by the winds, and like the viands that are to be given to him who solicits them; therefore the worshipper presents gifts to him, according to the extent of his opulence; and he preserves us, when oppressed (by sin), from wickedness; from overpowering malevolence and sin.

॥ ವಿಶೇಷವಿಷಯಗಳು ॥

**ತವಿಷೀಷು ಅವೇನ ಪೃಂಚತೇ—ಪ್ರಬಲಾಸು ಜ್ವಾಲಾಸು ತೃಪ್ತಿನಿಮಿತ್ತೇನ ಭೋಜ್ಯಾ ಭಕ್ಷ್ಯಾಣಿ ಪುರೋಡಾಶಾದೀನಿ ಮಿಶ್ರಯಂತಿ।** ಯಜ್ಞಮಾಡುವ ಯಜಮಾನನು ಹವಿಸ್ಸನ್ನು ಅರ್ಪಿಸುವ ನಿಮಿತ್ತವಾಗಿ ಅಗ್ನಿಯು ಭಕ್ಷಿಸಲು ತಕ್ಕದ್ದಾಗಿ ಇರುವ ಪುರೋಡಾಶವೇ ಮೊದಲಾದವುಗಳನ್ನು ಅಗ್ನಿಯ ತೃಪ್ತಿಯುಂಟಾಗಲು ಅವನ ಪ್ರಬಲವಾದ ಜ್ವಾಲೆಗಳಲ್ಲಿ ಸೇರಿಸುತ್ತಾನೆ. **ತವಿಷೀ** ಎಂಬ ಪದವು ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ. ೨-೯) ಪಠಿತವಾಗಿದೆ.

**ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಂ।**
**ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ ॥**

(ಋ. ಸಂ. ೧-೧೮೭-೧)

ಇಲ್ಲಿ **ತವಿಷೀತಿ ಬಲನಾಮ ತವತೇರ್ವೃದ್ಧಿಕರ್ಮಣಃ** ಎಂದು **ತವಿಷೀ** ಪದವು ಬಲ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ನಿರುಕ್ತಕಾರರ ಈ ಅಭಿಪ್ರಾಯದಂತೆಯೇ ಸಾಯಣರು ಅರ್ಥವನ್ನು ವಿವರಿಸಿದ್ದಾರೆ.

**ಮರುತಾಂ ನ ಭೋಜ್ಯಾ—ವಾಯೂನಾಂ ಸಂಬಂಧೀನಿ ವ್ರೀಹ್ಯಾದ್ಯನ್ನಾನೀವ** ಮೇಘಗಳನ್ನು ಭೇದಿಸಿ ವೃಷ್ಟಿಯು ಉಂಟಾಗುವಂತೆ ವಾಯುವು ಮಾಡುವುದರಿಂದ ಸಸ್ಯಾದಿಗಳು ಉತ್ಪನ್ನವಾಗಿ ಅವುಗಳಲ್ಲಿ ಭಕ್ಷಣೆಗೆ

ಅರ್ಹವಾದ ವ್ರೀಹ್ಯಾದಿಗಳು (ವ್ಯಾಪ್ತ) ವ್ಯಾಪಿಸಿಕೊಂಡಿರುವುವು. ಈ ವ್ರೀಹ್ಯಾದಿಗಳು ಅನ್ನರೂಪದಿಂದ ವಾಯುವೇ ಮೊದಲಾದ ದೇವತೆಗಳಿಗೆ ಹವಿಸ್ಸಾಗಿ ಅಗ್ನಿಯ ಮೂಲಕ ವ್ಯಾಪಿಸುವಂತೆ ಎಂದು ಅಗ್ನಿಯ ಜ್ವಾಲೆಯಲ್ಲಿ ಹವಿಸ್ಸಿನ ವ್ಯಾಪ್ತಿಯು ದೃಷ್ಟಾಂತವಾಗಿ ಉದಹರಿಸಿದೆ.

**ಇಷಿರಾಯ ನ ಭೋಜ್ಯಾ—ಏಷಣಯುಕ್ತಾಯ ಯಜಮಾನಾಯ ಅರ್ಥಿನೇ ಭೋಜ್ಯಾ ಭೋಗ್ಯಾನಿ ಭಕ್ಷ್ಯಾದೀನಿ ಯಥಾ ದೀಯಂತೇ ತದ್ವತ್ ।** ಅಗ್ನಿಗೆ ಹವಿಸ್ಸನ್ನು ಪ್ರದಾನಮಾಡುವ ವಿಷಯದಲ್ಲಿ ಈ ವಾಕ್ಯವು ಉಪಮಾನ ವಾಕ್ಯವಾಗಿ ಉದಹರಿಸಲ್ಪಟ್ಟಿದೆ. ಫಲಾಭಿಸಂಧಿಯಿಂದ ಇರುವ ಯಜಮಾನನಿಗೆ ಅಗ್ನಿಯು ಅವನ ಇಷ್ಟಾನುಸಾರವಾಗಿ ಭೋಗ್ಯವಾದವುಗಳನ್ನು ಅನುಗ್ರಹಿಸುವಂತೆ ಎಂದು ಹೋಲಿಸಿದೆ. ನಿರುಕ್ತಕಾರರು,

**ಇಷಿರೇಣ ತೇ ಮನಸಾ ಸುತಸ್ಯ ಭಕ್ಷೀಮಹಿ ಪಿತ್ರ್ಯಸ್ಯೇವ ರಾಯಃ ।**
**ಸೋಮ ರಾಜನ್ ಪ್ರ ಣ ಆಯೂಂಷಿ ತಾರೀರಹಾನೀವ ಸೂರ್ಯೋ ವಾಸರಾಣಿ ॥**

(ಋ. ಸಂ. ೮-೪೮-೭)

ಎಂಬ ಋಕ್ಕನ್ನು ಉದಹರಿಸಿ

**ಈಷಣೇನ ವಾ ಏಷಣೇನ ವಾ ಋಷಣೇನ ವಾ** ಎಂದು (ನಿ. ೪-೭) ವ್ಯಾಖ್ಯಾನ ಮಾಡಿದ್ದಾರೆ. ದುರ್ಗಾಚಾರ್ಯರು—**ಇಷಿರೇಣ—ಸರ್ವಾತ್ಮನಾ ಗತೇನ, ಏಷಣೇನ ಇಚ್ಛಾವತಾ ಫಲಪ್ರಾರ್ಥನಾವತಾ, ಋಷಣೇನ ದರ್ಶನವತಾ** (ಎಲ್ಲಾ ವಿಧದಿಂದಲೂ)ಮನೋವಾಕ್ಕಾಯಗಳಿಂದಲೂ ಶರಣುಹೊಂದಿರುವ, ಅಥವಾ ಫಲಾಭಿಸಂಧಿಯಿಂದ ಕರ್ಮಾಚರಣೆಯನ್ನು ಮಾಡಿ ಫಲವು ಆಗಬೇಕೆಂದು ಪ್ರಾರ್ಥಿಸುವ, ಅಥವಾ ಇಷ್ಟದೇವತೆ ಯನ್ನು ಸಾಕ್ಷಾತ್ಕರಿಸುವ ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಫಲಾಭಿಸಂಧಿಯಿಂದ ಎಂದು ಅರ್ಥವನ್ನು ಮಾತ್ರ ಒಪ್ಪಿದ್ದಾರೆ.

**ದಾನಂ ಇನ್ವತಿ—ಹವಿಷ್ಪ್ರದಾನಂ ತಸ್ಮೈ ವ್ಯಾಪ್ನೋತಿ । ಯದ್ವಾ ಸ್ವಯಮಭಿಮತಂ ದಾನಮಿನ್ವತಿ ।** ಯಜ್ಞಮಾಡುವ ಯಜಮಾನನು—ಹವಿಸ್ಸನ್ನು ಸ್ವೀಕರಿಸಲು ಅಪೇಕ್ಷಿಸುತ್ತಿರುವ ಅಗ್ನಿಗೆ ತಾನೂ (ಹವಿಷ್ಪ್ರದಾನವನ್ನು) ಹವಿಸ್ಸನ್ನು ಅರ್ಪಿಸುವುದರಿಂದ ಅದು ಅಗ್ನಿಗೆ ವ್ಯಾಪಿಸುವಂತೆ ಮಾಡುತ್ತಾನೆ. ಎಂದು ಅರ್ಥ.

**ಇನ್ವತಿ ನಕ್ಷತಿ** ಎಂದು ಹತ್ತು **ವ್ಯಾಪ್ತಿಕರ್ಮನಾಮಗಳಲ್ಲಿ** (ನಿ. ೩-೧೦) ಇನ್ವತಿ ಎಂಬ ಪದವು ಉಕ್ತವಾಗಿರುವುದರಿಂದ ಇಲ್ಲಿ ವ್ಯಾಪ್ತಿಯಾಗುವಂತೆ ಮಾಡುವುದು ಎಂದು ಅರ್ಥಮಾಡಿದೆ.

**ದಾನಂ ಇನ್ವತಿ** ಎಂಬ ಈ ವಾಕ್ಯಕ್ಕೆ ಯಜಮಾನನು ಅಗ್ನಿಗೆ ಅಪೇಕ್ಷಿತವಾದ ಹವಿಸ್ಸನ್ನು ಪ್ರದಾನ ಮಾಡುವಂತೆ ತಾನಾಗಿಯೇ ತನಗೆ ಅಭಿಮತವಾದವುಗಳನ್ನು ಅಗ್ನಿಯ ಪ್ರೀತಿಸಂಪಾದನೆಗಾಗಿ ಒಪ್ಪಿಸುವನು ಎಂದು ಎರಡನೆಯ ಅರ್ಥವನ್ನೂ ವಿವರಿಸಿದೆ.

**ವಸೂನಾಂ—ನಿವಾಸಯೋಗ್ಯಾನಾಂ ಧನಾನಾಂ । ವಸು** ಶಬ್ದವು ರಶ್ಮಿನಾಮಗಳಲ್ಲಿಯೂ (ನಿ. ೨-೧೫) **ಧನ** ನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. ಇಲ್ಲಿ **ವಸುನಾ ಅನ್ನೇನ** ಎಂದು (ನಿ. ೫-೧೯) ಅನ್ನವಾಚಕವಾಗಿದೆ.

**ವಸವೋ ಯದ್ವಿವಸತೇ ಸರ್ವಮಗ್ನಿರ್ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾತ್ ಪೃಥಿವೀ- ಸ್ಥಾನಾಃ । ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾತ್ ಮಧ್ಯಸ್ಥಾನಾಃ । ವಸವ ಆದಿತ್ಯರಶ್ಮಯಃ**

**ನಿವಾಸನಾತ್ ತಸ್ಮಾತ್ ದ್ಯುಸ್ಥಾನಾಃ** । (ನಿ. ೧೨-೪೨) ವಸ ಧಾತುವಿಗೆ ಅತಿಶಯವಾಗಿ ವಾಸಮಾಡು ಅಥವಾ ಎಲ್ಲವನ್ನೂ ವ್ಯಾಪಿಸು ಎಂದು ಅರ್ಥವನ್ನು ಹೇಳಿರುವ ಕಾರಣ ಅಗ್ನಿಯೂ, ಇಂದ್ರನೂ, ಸೂರ್ಯರಶ್ಮಿಗಳೂ ಸಹ ಎಲ್ಲವನ್ನೂ ವ್ಯಾಪಿಸಿ ವಾಸಮಾಡುವುದರಿಂದ ವಸು ಶಬ್ದಕ್ಕೆ ಅನೇಕಾರ್ಥಗಳಿರುತ್ತವೆ. ಸಾಯಣರು ಇಲ್ಲಿ ವಾಸಮಾಡಲು ಅರ್ಹವಾದ ಧನಗಳೆಂದು ಅರ್ಥಮಾಡಿರುತ್ತಾರೆ.

**ಮಜ್ಮನಾ—ಬಲೇನ** । ಬಲನಾಮಗಳಲ್ಲಿ (ನಿ. ೩-೯) ಈ ಪದವು ಪಠಿತವಾಗಿರುವುದರಿಂದ ಬಲವೆಂದು ಅರ್ಥ.

**ವಸೂನಾಂ ಚ ಮಜ್ಮನಾ ದಾನಮಿನ್ವತಿ**—ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿರುವರು. **ನಿವಾಸಯೋಗ್ಯಾನಾಂ ಧನಾನಾಂ ಅಗ್ನಿನಾ ಲಬ್ಧಾನಾಂ ಬಲೇನೈವ.** ಎಂಬ ಮೊದಲನೆಯ ಅರ್ಥವು ಅಗ್ನಿಯ ಅನುಗ್ರಹದಿಂದ ಹೊಂದಲ್ಪಟ್ಟ ಮತ್ತು ಸುಖವಾಗಿ ವಾಸಮಾಡಲು ಅರ್ಹವಾದ ಧನಗಳ ಬಲದಿಂದ ಯಜಮಾನರು ಅಗ್ನಿಯನ್ನು ಹವಿಪ್ಪ್ರದಾನದಿಂದ ಸೇವಿಸುವರು ಎಂದು ಆಗಿರುತ್ತದೆ. **ಯದ್ವಾ ಸೋಽಗ್ನಿರ್ವಸೂನಾಂ ಹವಿರ್ನಿವಾಸಯೋಗ್ಯಾನಾಂ ಜ್ವಾಲಾರೂಪಾಣಾಂ ಧನಾನಾಂ ಮಜ್ಮನಾ ಬಲೇನ** ಎರಡನೆಯ ಅರ್ಥವು ಹವಿಸ್ಸುಗಳನ್ನು ಸ್ವೀಕರಿಸುವುದಕ್ಕೆ ಅರ್ಹವಾದ ಜ್ವಾಲಾರೂಪದಿಂದ ಇರುವ ತನ್ನ ಸಂಬಂಧಿಯಾದ ಧನಸ್ಥಾನೀಯವಾದ ರಶ್ಮಿಗಳ ಬಲದಿಂದ ಯಜಮಾನರು ಅರ್ಪಿಸಿದ ಹವಿಸ್ಸುಗಳನ್ನು ವ್ಯಾಪಿಸುವನು ಎಂದು ಆಗಿರುತ್ತದೆ.

**ಅಭಿಹ್ರುತೇಃ ದುರಿತಾತ್ ತ್ರಾಸತೇ—ಅಭಿಮುಖ್ಯೇನ ಪಾಪೈಃ ಹ್ರಿಯಮಾಣಾನ್ ಪಾಪಾತ್ ತ್ರಾಯತೇ** । ಅಗ್ನಿಯು ಬಲಾತ್ಕಾರದಿಂದ ನಮ್ಮನ್ನು ಹಿಂಸೆಮಾಡುವ (ಪಾತಕ) ದುಷ್ಕರ್ಮಗಳಿಂದ ರಕ್ಷಿಸುತ್ತಾನೆ ಎಂದು ಅರ್ಥ.

**ಶಂಸಾತ್ ಅಭಿಹ್ರುತೇಃ ಅಘಾತ್—ಅತಿ ಪ್ರಭೂತತ್ವೇನ ಶಂಸನೀಯಾತ್ ಯದ್ವಾ ಹಿಂಸಕಾತ್ ಅಭಿತೋ ಹ್ರಿಯಮಾಣಾತ್ ದುಃಖಾತ್ ತತ್ಕಾರಣಾತ್ ಪಾಪಾದ್ವಾ ತ್ರಾಯತೇ** । ದುಷ್ಕರ್ಮಗಳು ಬಹಳವಾಗಿ ಆಚರಿಸಲ್ಪಟ್ಟಿರುವ ಕಾರಣ ಅವುಗಳಿಂದ ಬಹಳ ಹಿಂಸೆಯು ಉಂಟಾಗಿ ಪುನಃ ದುಃಖವೂ ಪ್ರಾಪ್ತವಾಗುವುದರಿಂದ ಅಗ್ನಿಯು ಈ ವಿಧವಾದ ಪಾತಕಗಳಿಂದ ರಕ್ಷಿಸುವನು ಎಂದು ಅರ್ಥ.

**ಶಂಸತಿ** ಎಂದು ಅರ್ಚತಿ ಕರ್ಮಗಳಲ್ಲಿ (ನಿ. ೩-೧೯) ಪಾಠಮಾಡಿರುವುದರಿಂದ ಇಲ್ಲಿ ಶಂಸಾತ್ ಎಂಬ ಪದಕ್ಕೆ **ಶಂಸನೀಯಾತ್** ಎಂದು ಅರ್ಥವನ್ನು ಹೇಳಿದೆ. ಆದರೆ ಹಿಂಸಕಾತ್ ಎಂದು ಸಾಯಣರು ಅರ್ಥವನ್ನು ವಿವರಿಸಿದ್ದಾರೆ.

**ಅಘಾತ್—ದುಃಖಾತ್ ತತ್ಕಾರಣಾದ್ವಾ ಪಾಪಾತ್** । **ಅಘ** ಶಬ್ದಕ್ಕೆ ದುಃಖ ಅಥವಾ ದುಃಖವನ್ನು ಉಂಟುಮಾಡುವ ಪಾಪ ಎಂದು ಅರ್ಥ.

**ಇಂದ್ರಾಸೋಮಾ ಸಮಘಶಂಸಮಭ್ಯ೧ ಘಂ ತಪುರ್ಯಯಸ್ತು ಚರುರಗ್ನಿವಾँ ಇವ ।**
**ಬ್ರಹ್ಮದ್ವಿಷೇ ಕ್ರವ್ಯಾದೇ ಘೋರಚಕ್ಷಸೇ ದ್ವೇಷೋ ಧತ್ತಮನವಾಯಂ ಕಿಮೀದಿನೇ ॥**

(ಋ. ಸಂ. ೭-೧೦೪-೨)

ನಿರುಕ್ತಕಾರರು ಈ ಋಕ್ಕಿನಲ್ಲಿ **ಅಘಂ ಹಂತೇ ನಿರ್ಹ್ರಸಿತೋಪಸರ್ಗ ಆಹಂತೀತಿ.** ಹಿಂಸಾ ಮತ್ತು ಗಮನ ಎಂಬ ಅರ್ಥವುಳ್ಳ ಹನ ಧಾತುವಿನಿಂದ ಉಪಸರ್ಗ ಸಂಬಂಧವು ಇಲ್ಲದಿದ್ದರೂ ಅಘ ಎಂಬ ಶಬ್ದವು ನಿಷ್ಪನ್ನವಾಗಿ ಆಹಂತಿ

ಎಂಬ ಅರ್ಥವನ್ನು ಬೋಧಿಸುವುದು ಎಂದು ಅರ್ಥವನ್ನು ಹೇಳಿರುತ್ತಾರೆ. ಇದರಿಂದ ಹಿಂಸಾಜನಕವಾದದ್ದೂ, ಹಿಂಸಾರೂಪದಿಂದ ಇರುವುದೂ ಕೂಡ ಅಘ ಶಬ್ದದಿಂದ ಬೋಧ್ಯವಾಗಿರುವುದು ಎಂದು ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ಪೃಞ್ಚತೇ**—ಪೃಚೀ ಸಂಪರ್ಕೇ. ಧಾತು. ರುಧಾದಿ ವ್ಯತ್ಯಯದಿಂದ ಆತ್ಮನೇಪದಿಯಾಗುತ್ತದೆ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅದಕ್ಕೆ ಅತಾದೇಶ. ಟಿಗೆ ಏತ್ವ. **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಅದರ ಅಕಾರಕ್ಕೆ ಲೋಪ. ನಕಾರಕ್ಕೆ ಅನುಸ್ವಾರ ಪರಸವರ್ಣ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಮಧ್ಯೋದಾತ್ತ ಪದವಾಗುತ್ತದೆ.

**ಭೋಜ್ಯಾ**—ಭುಜ ಪಾಲನಾಭ್ಯವಹಾರಯೋಃ ಧಾತು. **ಭೋಜ್ಯಂ ಭಕ್ಷ್ಯೇ** (ಪಾ. ಸೂ. ೭-೩-೬೯) ಎಂಬುದರಿಂದ ಣ್ಯದಂತವಾಗಿ ನಿಪಾತಿತವಾಗಿದೆ. **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಇಷಿರಾಯ**—ಇಷು ಇಚ್ಛಾಯಾಂ ಧಾತು. **ಇಷಿಮದಿಮುದಿ** (ಉ. ಸೂ. ೧-೫೧) ಎಂಬುದರಿಂದ ಕಿರಚ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ದಾನಂ**—ಡುದಾಞ್ ದಾನೇ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** ಎಂಬುದರಿಂದ ಅದಕ್ಕೆ ಅನಾದೇಶ. **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಇನ್ವತಿ**—ಇವಿ ವ್ಯಾಪ್ತೌ. ಧಾತು. ವ್ಯಾಪ್ತಿಕರ್ಮಕಧಾತುಗಳ ಮಧ್ಯದಲ್ಲಿ **ಇನ್ವತಿ ತತಕ್ಷ** (ನಿರು. ೨-೧೮) ಎಂದು ಯಾಸ್ಕರು ಪಠಿಸಿದ್ದಾರೆ. **ಇದಿತೋನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಲಟ್ ಪ್ರಥಮಪುರುಷ ಏಕವಚನಾಂತರೂಪ. , ಹಿ ಎಂಬುದರ ಯೋಗವಿರುವುದರಿಂದ **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಶಪ್, ತಿಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ತ್ರಾಸತೇ**—ತ್ರೈಙ್ ಪಾಲನೇ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಬಹುಲಗ್ರಹಣ ಸಾಮರ್ಥ್ಯದಿಂದ ಇಲ್ಲಿಯೂ ಸಿಪ್ ಬರುತ್ತದೆ. **ಆದೇ ಚ ಉಪದೇಶೇಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದುರಿತಾತ್**—ಇಣ್ ಗತೌ ಧಾತು. ಕ್ತ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ವಿಶ್ವೋ ವಿಹಾಯಾ ಅರತಿರ್ವಸುರ್ದಧೇ ಹಸ್ತೇ ದಕ್ಷಿಣೇ ತರಣಿರ್ನ
ಶಿಶ್ರಥಚ್ಛ್ರವಸ್ಯಯಾ ನ ಶಿಶ್ರಥತ್ ।
ವಿಶ್ವಸ್ಮಾ ಇದಿಷುಧ್ಯತೇ ದೇವತ್ರಾ ಹವ್ಯಮೋಹಿಷೇ ।
ವಿಶ್ವಸ್ಮಾ ಇತ್ಸುಕೃತೇ ವಾರಮೃಣ್ವತ್ಯಗ್ನಿರ್ದ್ವಾರಾ ವ್ಯೃಣ್ವತಿ ॥ ೬ ॥

॥ ಪದಪಾಠಃ ॥

ವಿಶ್ವಃ । ವಿಽಹಾಯಾಃ । ಅರತಿಃ । ವಸುಃ । ದಧೇ । ಹಸ್ತೇ । ದಕ್ಷಿಣೇ । ತರಣಿಃ । ನ । ಶಿಶ್ರಥತ್ ।
ಶ್ರವಸ್ಯಯಾ । ನ । ಶಿಶ್ರಥತ್ ।
ವಿಶ್ವಸ್ಮೈ । ಇತ್ । ಇಷುಧ್ಯತೇ । ದೇವಽತ್ರಾ । ಹವ್ಯಂ । ಆ । ಊಹಿಷೇ ।
ವಿಶ್ವಸ್ಮೈ । ಇತ್ । ಸುಽಕೃತೇ । ವಾರಂ । ಋಣ್ವತಿ । ಅಗ್ನಿಃ । ದ್ವಾರಾ । ವಿ । ಋಣ್ವತಿ ॥ ೬ ॥

॥ ಸಾಯಣಭಾಷ್ಯಂ ॥

ಅಯಮಗ್ನಿರ್ದಕ್ಷಿಣೇಽಭಿಮತಂ ಪ್ರದಾತುಮುತ್ಸಾಹಯುಕ್ತೇ ಹಸ್ತೇ ವಾಮೇತರೇ ಯಜಮಾನಾಯ ದಾತವ್ಯಂ ಧನಂ ದಧೇ । ಧಾರಯತಿ । ಕೀದೃಶೋಽಯಂ । ವಿಶ್ವಃ ಸರ್ವೈರ್ಗಂತವ್ಯಃ ಯದ್ವಾ ವಿಶ್ವಾತ್ಮಕಃ ವಿಹಾಯಾ ಮಹಾನ್ । ವಿಹಾಯಾ ಇತಿ ಮಹನ್ನಾಮ ವಿಹಾಯಾ ಯಹ್ವ ಇತಿ ತನ್ನಾಮಸು ಪಾಠಾತ್ । ಅರತಿರೀಶ್ವರೋಽರಮಮಾಣೋ ವಾಪ್ರೀತಿಃ ॥ ಅತ್ರ ವಹಿವಸ್ಯರ್ತಿಭ್ಯಶ್ಚಿದಿತ್ಯತಿಪ್ರತ್ಯಯಃ। ಚಿದ್ವದ್ಭಾವಾದಂತೋದಾತ್ತಃ ॥ ಧೃತ್ವಾ ಚ ಶಿಶ್ರಥತ್ । ಧೃತಂ ಹಸ್ತಂ ಯಜಮಾನಾರ್ಥಂ ಶ್ರಥಯತಿ । ದದಾತಿ ॥ ಶ್ಲಥಯತೇರ್ಲುಙಿ ಚಙಿ ರೂಪಂ ॥ ತತ್ರ ದೃಷ್ಟಾಂತಃ । ತರಣಿರ್ನ ತರಣಿರಿವ ತಾರಕಃ ಸೂರ್ಯ ಇವ । ಸ ಯಥಾ ಸ್ವೋಪಾಸಕಾಯಾಭಿಮತಂ ಹಸ್ತೇ ಧೃತ್ವಾ ವಿತರತಿ ತದ್ವತ್ । ಯದ್ವಾ । ತರಣಿಃ ಸರ್ವಸ್ಯ ತಾರಕೋ ನ ಶಿಶ್ರಥತ್ । ಯಜಮಾನಂ ನ ಶ್ರಥಯತಿ ನ ಮುಂಚತಿ । ಕಿಂಚ ಶ್ರವಸ್ಯಯಾ ನ ಶಿಶ್ರಥತ್ । ಹವೀರೂಪಾನ್ನೇಚ್ಛಯೈವ ನ ಶಿಶ್ರಥತ್ । ನ ವಿಮುಂಚತಿ । ಅಯಮನುಗ್ರಹೇಣೈವ ಪಾಲಯತೇ ಹವಿಃಸ್ವೀಕಾರಸ್ತು ವ್ಯಪದೇಶಮಾತ್ರೇಣೇತಿ ಭಾವಃ । ಇದಾನೀಂ ಪ್ರತ್ಯಕ್ಷಕೃತಃ । ಹೇ ಅಗ್ನೇ ದೇವತ್ರಾ ದೇವೇಷು ಮಧ್ಯೇಽತಿಶಯೇನ ತ್ವಂ ವಿಶ್ವಸ್ಮೈ ಸರ್ವಸ್ಮಾ ಇಷುಧ್ಯತೇ ಹವಿರಾತ್ಮನ ಇಚ್ಛತ ಇಂದ್ರಾದಯೇ ॥ ಇಷುಧ್ಯತಿಃ ಕಂಡ್ವಾದಿಃ ॥ ಹವ್ಯಂ ತತ್ತದ್ದೇವತಾಮುದ್ದಿಶ್ಯ ಪ್ರತ್ತಂ ಪುರೋಡಾಶಾ-

ದಿಕಮೋಹಿಷೇ । ಸರ್ವತೋ ವಹಸಿ ॥ ವಹೇರ್ಲೇಟಿ ಯಜಾದಿತ್ವಾತ್ಸಂಪ್ರಸಾರಣಂ ॥ ಕಿಂಚಾಯ-ಮಗ್ನಿರ್ವಿಶ್ವಸ್ಮೈ ಸುಕೃತೇ ಶೋಭನಯಜ್ಞಕರ್ತ್ರೇ ಯಜಮಾನಾಯ ವಾರಂ ಸರ್ವೈರ್ವರಣೀಯಂ ಕ್ಷುದಾದಿನಿವಾರಕಂ ವಾಸ್ನಾದಿಕಮೃಣ್ವತಿ । ಗಚ್ಛತಿ । ಕರೋತೀತ್ಯರ್ಥಃ । ಕಿಂಚಾಯಮಗ್ನಿರ್ದ್ವಾರಾ ಸ್ವರ್ಗಾದ್ಯಭಿಮತದ್ವಾರಾಣಿ ವ್ಯೃಣ್ವತಿ । ವಿವೃಣೋತಿ । ಪ್ರತಿಬಂಧಕಪಾಪಾಪನಯನದ್ವಾರಾಭಿಮತಾನಿ ಸಾಧಯತೀತ್ಯರ್ಥಃ ॥ ಋಣ್ವತಿರ್ಗತಿಕರ್ಮಾ । ಯದ್ವಾ । ರಿವಿರ್ಗತ್ಯರ್ಥಃ । ಇದಿತ್ವಾನ್ನುಮ್ । ಛಾಂದಸಂ ರೇಫಸ್ಯ ಸಂಪ್ರಸಾರಣಂ ॥

॥ ಪ್ರತಿಪದಾರ್ಥ ॥

ವಿಶ್ವಃ—ಸರ್ವರಿಂದಲೂ ಪ್ರಾಪ್ಯನೂ (ವಿಶ್ವಾತ್ಮಕನೂ) । **ವಿಹಾಯಾಃ**—ಪ್ರಭೂತಾಕಾರನೂ । **ಅರತಿಃ**—ಈಶ್ವರನೂ ಆದ (ಈ ಅಗ್ನಿಯು) । **ದಕ್ಷಿಣೇ**—ಅಭಿಮತ ದಾನಸಮರ್ಥವಾದ । **ಹಸ್ತೇ**—(ಬಲ) ಗೈಯಲ್ಲಿ । **ವಸುಃ**—ದಾನಾರ್ಹಧನವನ್ನು । **ದಧೇ**—ಧರಿಸುತ್ತಾನೆ । **ತರಣಿಃ ನ**—ತಾರಕನಾದ ಸೂರ್ಯನಂತೆ । **ಶಿಶ್ರಥತ್**—(ಹಸ್ತಧೃತವಾದ ಧನವನ್ನು ಯಜಮಾನನಿಗೆ) ದಾನಮಾಡುತ್ತಾನೆ [ಅಥವಾ । **ತರಣಿಃ**—ತಾರಕನಾದ ಅಗ್ನಿಯು । **ನ ಶಿಶ್ರಥತ್**—ಯಜಮಾನನನ್ನು ಬಿಡುವುದಿಲ್ಲ] । **ಶ್ರವಸ್ಯಯಾ**—ಹವೀರೂಪವಾದ ಅನ್ನೇಚ್ಛೆಯಿಂದ (ಮಾತ್ರ) । ನ **ಶಿಶ್ರಥತ್**—ಬಿಡುವುದಿಲ್ಲ । **ದೇವತ್ರಾ ಇತ್**—ದೇವತೆಗಳಲ್ಲಿ ವಿಶೇಷವಾಗಿ ನೀನೇ । **ವಿಶ್ವಸ್ಮೈ**—ಎಲ್ಲಾ । **ಇಷುಧ್ಯತೇ**—ಹವಿಃಕಾಮರಾದ ಇಂದ್ರಾದಿಗಳಿಗೆ । **ಹವ್ಯಂ**—(ತತ್ತದ್ದೇವತೋದ್ದೇಶದಿಂದ ದತ್ತವಾದ) ಹವಿಸ್ಸನ್ನು । **ಆ ಊಹಿಷೇ** - ಎಲ್ಲಾ ಕಡೆಗೂ ವಹಿಸುತ್ತೀ (ಮತ್ತು ಅಗ್ನಿಯು) । **ವಿಶ್ವಸ್ಮೈ ಸುಕೃತೇ ಇತ್**—ಎಲ್ಲಾ ಶುಭಕರ್ಮ ಕರ್ತೃಗಳಿಗೂ । **ವಾರಂ**—ಸರ್ವರಿಂದಲೂ ಅಪೇಕ್ಷಣೀಯವಾದ ಅನಾದಿಗಳನ್ನು । **ಋಣ್ವತಿ**—ಉಂಟುಮಾಡುತ್ತಾನೆ । **(ಕಿಂಚ**—ಮತ್ತು) । **ಅಗ್ನಿಃ**—ಅಗ್ನಿಯು । **ದ್ವಾರಾ**—ಸ್ವರ್ಗಾದಿ ಅಭಿಮತ ದ್ವಾರಗಳನ್ನು । **ವಿ ಋಣ್ವತಿ**—ತೆರೆಯುತ್ತಾನೆ.

॥ ಭಾವಾರ್ಥ ॥

ಸರ್ವರಿಂದ ಅಭಿಗಮ್ಯನೂ, ಮಹನೀಯನೂ, ಈಶ್ವರನೂ ಆದ ಅಗ್ನಿಯು ಅಭಿಮತದಾನಸಮರ್ಥವಾದ (ತನ್ನ) ದಕ್ಷಿಣ ಹಸ್ತದಲ್ಲಿ (ದಾನಾರ್ಹ) ಧನವನ್ನು ಧರಿಸಿ, ತಾರಕನಾದ ಸೂರ್ಯನಂತೆ (ಯಜಮಾನನಿಗೆ) ದಾನಮಾಡುತ್ತಾನೆ; (ತಾರಕನಾದ ಇವನು ಯಾಗಕರ್ತೃಗಳನ್ನು ಬಿಡುವುದಿಲ್ಲ) ಹವಿರಾದಿ ಇಚ್ಛೆಯಿಂದಲೂ (ಯಜಮಾನನನ್ನೂ) ಬಿಡುವುದಿಲ್ಲ. (ಎಂದರೆ ಹವಿರಾದಿಗಳು ವ್ಯಪದೇಶರೂಪಗಳು. ಅನುಗ್ರಹವೇ ಪಾಲನೆಗೆ ಮುಖ್ಯ ಕಾರಣ) ದೇವತೆಗಳಲ್ಲೆಲ್ಲಾ ವಿಶೇಷವಾಗಿ ಅಗ್ನಿಯೇ, ಹವಿಃಕಾಮರಾದ ಇಂದ್ರಾದಿಗಳಿಗೆ (ಯಜಮಾನರಿಂದ) ದತ್ತವಾದ (ಚರ್ವಾದಿಗಳನ್ನು) ಒಯ್ದುಕೊಡುತ್ತಾನೆ; ಮತ್ತು ಶುಭವಾದ ಯಾಗಾದಿಗಳನ್ನು ಮಾಡುವವರೆಲ್ಲರಿಗೂ (ಕ್ಷುನ್ನಿವಾರಕವಾದ) ಅನ್ನವನ್ನೂ ದೊರಕಿಸುತ್ತಾನೆ; (ಅಭಿಮತವಾದ ಸ್ವರ್ಗಾದಿಲೋಕಗಳ) ದ್ವಾರಗಳನ್ನೂ ತೆರೆಯುವಂತೆ ಮಾಡುತ್ತಾನೆ.

## English Translation·

The universal, mighty and imperious (Agni) holds riches in his right hand; but, like the sun, he loosens his grasp (in favour af his worshipper),

although he relaxes not from his desire of the (sacrificial) food. Verily, Agni, you bear the oblation to every one of the gods who desires it; Agni grants blessings to every pious (worshipper) and opens for him the gates (of heaven).

॥ ವಿಶೇಷವಿಷಯಗಳು ॥

**ದಕ್ಷಿಣೇ—ಅಭಿಮತಂ ಪ್ರದಾತುಂ ಉತ್ಸಾಹಯುಕ್ತೇ ಹಸ್ತೇ ವಾಮೇತರೇ ।** ದಕ್ಷಿಣ ಶಬ್ದಕ್ಕೆ ಉದಾರವಾದ ಮನಸ್ಸುಳ್ಳ ಉತ್ಸಾಹದಿಂದ ಕೂಡಿದ ಎಂದೂ, ಎಡಗಡೆಗಿಂತ ಬೇರೆಯಾದ ಹಸ್ತವು ಎಂದರೆ ಬಲಗೈ ಎಂದು ಎರಡು ವಿಧವಾದ ಅರ್ಥವನ್ನೂ ಸಾಯಣರು ವಿವರಿಸಿದ್ದಾರೆ.

**ವಿಶ್ವಃ—ಸರ್ವೈಃ ಗಂತವ್ಯಃ ಯದ್ವಾ ವಿಶ್ವಾತ್ಮಕಃ ।** ಎಲ್ಲರಿಂದಲೂ ಪೂಜಿಸಲ್ಪಟ್ಟು ಹೊಂದಲು ಅರ್ಹನಾದವನು ಅಥವಾ ಸರ್ವಾತ್ಮಭಾವದಿಂದ ಅಗ್ನಿಯು ಇರುವವನು ಎಂದು ಎರಡು ವಿಧವಾದ ಅರ್ಥವನ್ನು ವರ್ಣಿಸಿದೆ.

**ವಿಶ್ವ ಶಬ್ದವು— ಉರು, ತುವಿ** ಎಂಬ ಹನ್ನೆರಡು ಬಹುನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಸರ್ವ ಎಂಬ ಅರ್ಥದಲ್ಲಿ ಈ ಶಬ್ದವು ಬಹಳ ಕಡೆಯಲ್ಲಿ ಪ್ರಯುಕ್ತವಾಗಿದೆ.

**ವಿಹಾಯಾಃ**—೨೫ ಮಹನ್ನಾಮಗಳಲ್ಲಿ ಉಕ್ತವಾಗಿರುವುದರಿಂದ (ನಿ. ೩-೧೩) **ವಿಹಾಯಾಃ** ಎಂಬ ಶಬ್ದಕ್ಕೆ ಮಹಾನ್ ಮಹತ್ತ್ವದಿಂದ ಪೂರಿತನಾದವನು ಅಗ್ನಿಯು ಎಂದು ಇಲ್ಲಿ ಅರ್ಥವನ್ನು ವರ್ಣಿಸಿದೆ.

**ತರಣಿರ್ನ ಧೃತ್ವಾ ಚ ಶಿಶ್ರಥತ್—ತರಣಿಃ ತಾರಕಃ ಸೂರ್ಯ ಇವ ಧೃತಂ ಹಸ್ತಂ ಯಜಮಾನಾರ್ಥಂ ಶ್ರಥಯತಿ ದದಾತಿ। ಯಥಾ ಸಃ ಸ್ವೋಪಾಸಕಾಯ ಅಭಿಮತಂ ಹಸ್ತೇ ಧೃತ್ವಾ ವಿತರತಿ ತದ್ವತ್ । ಯದ್ವಾ ತರಣಿಃ ಸರ್ವಸ್ಯ ತಾರಕಃ ನ ಶಿಶ್ರಥತ್ ಯಜಮಾನಂ, ನ ಶ್ರಥಯತಿ ನ ಮುಂಚತಿ । ತರಣಿ** ಶಬ್ದವು ಕ್ಷಿಪ್ರನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇಲ್ಲಿ ಸೂರ್ಯನೆಂದು ಅರ್ಥಮಾಡಿದೆ. ಸೂರ್ಯನು ತನ್ನನ್ನು ಸೇವಿಸುವವನ ಇಷ್ಟಾರ್ಥವನ್ನು ತನ್ನ ಹಸ್ತದಿಂದ ಧರಿಸಿ ಅವನಿಗೆ ಕೊಡುವಂತೆ ಅಗ್ನಿಯೂ ಕೂಡ ಯಜಮಾನರಿಗೆ ಅಭಿಮತವನ್ನು ತನ್ನ ಹಸ್ತದಿಂದಲೇ ಧರಿಸಿಕೊಡುವನು ಎಂದು ಒಂದು ವಿಧವಾದ ಅರ್ಥವೂ, ಎರಡನೆಯದಾಗಿ ಸೂರ್ಯನು ಎಲ್ಲರನ್ನೂ ಉತ್ತಮವಾದ ಸ್ಥಿತಿಗೆ ತರುವಂತೆ ಅಗ್ನಿಯೂ ತನ್ನನ್ನು ಸೇವಿಸುವ ಯಜಮಾನರನ್ನು ತೊಂದರೆಗೆ (ಸಿಕ್ಕಿಸದಂತೆ) ಒಳಗುಮಾಡದೆ ಉತ್ತಮವಾದ ಸ್ಥಿತಿಯುಳ್ಳವರನ್ನಾಗಿ ಮಾಡುವನು ಎಂದೂ ವರ್ಣಿತವಾಗಿದೆ.

**ಶ್ರವಸ್ಯಯಾ ನ ಶಿಶ್ರಥತ್ ನ ವಿಮುಂಚತಿ ।** ಅಗ್ನಿಯು ಯಜ್ಞಮಾಡುವ ಯಜಮಾನರನ್ನು ತನಗೆ ಹವಿಸ್ಸುಗಳನ್ನು ಅರ್ಪಿಸುವರೆಂಬ ಅಭಿಮಾನದಿಂದಲೇ ಅಥವಾ ತನಗೆ ಹವಿಸ್ಸುಗಳು ಇವರಿಂದ ಸಿಕ್ಕುತ್ತವೆ ಎಂಬ ಇಚ್ಛೆಯಿಂದಲೇ ಯಜಮಾನರನ್ನು ಬಿಡದೆ ರಕ್ಷಿಸುವನೆಂದು ತಿಳಿಯಬಾರದು. **ಅಯಂ ಅನುಗ್ರಹೇಣೈವ ಪಾಲಯತೇ ಹವಿಃ ಸ್ವೀಕಾರಸ್ತು ವ್ಯಪದೇಶಮಾತ್ರಂ** ಹವಿಸ್ಸನ್ನು ಅಗ್ನಿಯು ಸ್ವೀಕರಿಸುವುದು ಎಂಬುದು ಮಾತ್ರ ಒಂದು ನೆಪವಾಗಿರುವುದು ಆದರೆ ಇವನು ಯಜಮಾನರನ್ನು ಅನುಗ್ರಹಮಾಡುವವನಾಗಿಯೇ ಯಾವಾಗಲೂ ರಕ್ಷಿಸುವನು ಎಂದು ಸಾಯಣರು ವಿವರಿಸಿದ್ದಾರೆ.

**ಶ್ರವಃ**—ಎಂಬ ಶಬ್ದವು **ಧನ**ನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ.

**ಅಮಂದಾನ್ಸ್ತೋಮಾನ್ ಪ್ರ ಭರೇ ಮನೀಷಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ।**
**ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ॥**

(ಋ. ಸಂ. ೧-೧೨೬-೧)

ಇಲ್ಲಿ ಶ್ರವಃ—ಎಂಬ ಶಬ್ದವು ಯಶಸ್ಸೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಅಸಸ್ರಾಣಾಸಃ ಶವಸಾನಮಚ್ಛೇಂದ್ರಂ ಸುಚಕ್ರೇ ರಥ್ಯಾಸೋ ಅಶ್ವಾಃ ।**
**ಅಭಿ ಶ್ರವ ಋಜ್ಯಂತೋ ವಹೇಯುರ್ನೂ ಚಿನ್ನು ವಾಯೋರಮೃತಂ ವಿ ದಸ್ಯೇತ್ ॥**

(ಋ. ಸಂ. ೬-೩೭-೩)

ಇಲ್ಲಿ **ಶ್ರವ ಇತಿ ಅನ್ನನಾಮ ಶ್ರೂಯತೆ ಇತಿ ಸತಃ** ಎಂದು ನಿರುಕ್ತಕಾರರು ವಿವರಿಸಿರುವರು. ಸಾಯಣರು ಶ್ರವಃ ಆತ್ಮನ ಇಚ್ಛತಿ ಎಂಬ ಅರ್ಥದಲ್ಲಿ ಕ್ಯಚ್ ಪ್ರತ್ಯಯವು ಬಂದಿರುವ ಶ್ರವಸ್ಯಾ ಎಂಬ ಪದಕ್ಕೆ ಹವಿಸ್ಸಿನರೂಪವಾದ ಅನ್ನದಲ್ಲಿ ಇಚ್ಛೆ ಎಂದು ಅರ್ಥವನ್ನು ವರ್ಣಿಸಿರುವರು.

**ವಿಶ್ವಸ್ಮೈ ಸುಕೃತೇ ವಾರಂ ಋಣ್ವತಿ—ಶೋಭನಯಜ್ಞಕರ್ತ್ರೇ ಯಜಮಾನಾಯ ಸರ್ವೈರ್ವರಣೀಯಂ ಕ್ಷುದಾದಿನಿವಾರಕಂ ವಾ ಅನ್ನಾದಿಕಂ ಕರೋತಿ ।** ಅಗ್ನಿಯು ಯಜ್ಞಮಾಡುವ ಯಜಮಾನರಿಗಾಗಿ ಹಸಿವೆಯನ್ನು ಅಡಗಿಸುವ ಅನ್ನವನ್ನು ಅನುಗ್ರಹಿಸುತ್ತಾನೆ ಎಂದು ಅರ್ಥ.

**ಅಗ್ನಿಃ ದ್ವಾರಾ ವ್ಯೃಣ್ವತಿ**—ಅಗ್ನಿಯು ಸ್ವರ್ಗವೇ ಮೊದಲಾದ ಇಷ್ಟಾರ್ಥಗಳಿಗೆ ಪ್ರತಿಬಂಧಕವಾದ ಪಾತಕಗಳನ್ನು ನಾಶಮಾಡುವುದರಿಂದ ಯಜಮಾನರ ಇಷ್ಟಗಳನ್ನು ಸಾಧಿಸುವನು ಎಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ದಧೇ**— ಡುಧಾಞ್ ಧಾರಣಪೋಷಣಯೋಃ ಧಾತು. ಅಂತರ್ಭಾವಿತ ಣ್ಯರ್ಥಕವಾದ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅರತಿಃ**—ಋ ಗತೌ ಧಾತು. ಇದಕ್ಕೆ **ವಹಿವಸ್ಯರ್ತಿಭ್ಯಶ್ಚಿತ್** (ಉ. ಸೂ. ೪-೫೦) ಎಂಬುದರಿಂದ ಅತಿ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ಚಿತ್ವ ವಿಧಾನಮಾಡಿರುವುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ತರಣಿಃ**—ತೄ ಪ್ಲವನತರಣಯೋಃ ಧಾತು. **ಅರ್ತಿಸೃಧೃ**—(ಉ. ಸೂ. ೨-೧೦೩) ಎಂಬುದರಿಂದ ಅನಿ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಶಿಶ್ರಥತ್**—ಶ್ರಥ ಮೋಕ್ಷಣೇ. ಧಾತು. ಣಿಜಂತದ ಮೇಲೆ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** ಎಂಬುದರಿಂದ ಧಾತುವಿಗೆ ದ್ವಿತ್ವ. ಉಪಧಾಹ್ರಸ್ವ. ಸನ್ವದ್ಭಾವಕ್ಕೆ ನಿಮಿತ್ತವಿಲ್ಲವಾದರೂ

**ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ

**ಶ್ರವಸ್ಯಯಾ**—ಶ್ರವಃ ಅನ್ನಂ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷಾಮಾಡುವಾಗ **ಸುಪ ಆತ್ಮನಃ ಕ್ಯಚ್** ಎಂಬುದರಿಂದ ಕ್ಯಚ್. ಕ್ಯಜಂತಧಾತುವಿನ ಮೇಲೆ ಭಾವಾರ್ಥದಲ್ಲಿ **ಅಪ್ರತ್ಯಯಾತ್** (ಪಾ. ಸೂ ೩-೩-೧೦೨) ಎಂಬುದರಿಂದ ಅಕಾರ ಪ್ರತ್ಯಯ. ಇದರ ಮೇಲೆ ಟಾಪ್. ತೃತೀಯಾ ಏಕವಚನಾಂತರೂಪ

**ಇಷುಧ್ಯತೇ**—ಇಸುಧ ಶರಧಾರಣೇ. ಧಾತು. ಕಂಡ್ವಾದಿ. **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩ ೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. ಲಡರ್ಥದಲ್ಲಿ ಶತೃಪ್ರತ್ಯಯ. ಚತುರ್ಥೀ ಏಕವಚನಾಂತರೂಪ. ನುಮ್ ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದೇವತ್ರಾ**—**ದೇವಮನುಷ್ಯಪುರುಷಪುರು**— (ಪಾ. ಸೂ. ೫-೪-೫೬) ಎಂಬುದರಿಂದ ತ್ರಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಊಹಿಷೇ**—ವಹ ಪ್ರಾಪಣೇ. ಧಾತು. **ಛಂದಸಿ ಲುಙ್ಲಙ್ಲಿಟಃ.** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಮಧ್ಯಮಪುರುಷದಲ್ಲಿ **ಥಾಸಃ ಸೇ** ಎಂಬುದರಿಂದ ಸೇ ಆದೇಶ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಕಾರಕ್ಕೆ ಸಂಪ್ರಸಾರಣ. ಪೂರ್ವರೂಪ ದ್ವಿತ್ವಾದಿ. ತಿಙಂತನಿಘಾತ ಸ್ವರ ಬರುತ್ತದೆ.

**ಸುಕೃತೇ**—ಶೋಭನಂ ಕರೋತಿ ಇತಿ ಸುಕೃತ್. ಡುಕೃಙ್ ಕರಣೇ ಧಾತು. ಇದಕ್ಕೆ ಕ್ವಿಪ್ ಬಂದಾಗ **ಹ್ರಸ್ವಸ್ಯ ಪಿತಿಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಋಣ್ವತಿ**—ಇದು ಸೌತ್ರಧಾತು ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಅಥವಾ ರಿವಿ ಗತೌ. ಧಾತು. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ ಬರುತ್ತದೆ. ಛಾಂದಸವಾಗಿ ಧಾತುವಿನ ರೇಫಕ್ಕೆ ಸಂಪ್ರಸಾರಣ. ನುಮಿನ ನಕಾರಕ್ಕೆ ಅದನ್ನು ನಿಮಿತ್ತೀಕರಿಸಿ ಣತ್ವ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ದ್ವಾರಾ**—ದ್ವಾರಾಣಿ ಎಂದು ರೂಪವಾದಾಗ ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ‖ ೬ ‖



॥ ಸಂಹಿತಾಪಾಠಃ ॥

ಸ ಮಾನುಷೇ ವೃಜನೇ ಶಂತಮೋ ಹಿತೋ೭ಗ್ನಿರ್ಯಜ್ಞೇಷು ಜೇನ್ಯೋ ನ
ವಿಶ್ಪತಿಃ ಪ್ರಿಯೋ ಯಜ್ಞೇಷು ವಿಶ್ಪತಿಃ ।
ಸ ಹವ್ಯಾ ಮಾನುಷಾಣಾಮಿಳಾ ಕೃತಾನಿ ಪತ್ಯತೇ ।
ಸ ನಸ್ತ್ರಾಸತೇ ವರುಣಸ್ಯ ಧೂರ್ತೇರ್ಮಹೋ ದೇವಸ್ಯ ಧೂರ್ತೇಃ ॥ ೭ ॥

॥ ಪದಪಾಠಃ ॥

ಸಃ । ಮಾನುಷೇ । ವೃಜನೇ । ಶಂ೭ತಮಃ । ಹಿತಃ । ಅಗ್ನಿಃ । ಯಜ್ಞೇಷು । ಜೇನ್ಯಃ । ನ । ವಿಶ್ಪತಿಃ ।
ಪ್ರಿಯಃ । ಯಜ್ಞೇಷು । ವಿಶ್ಪತಿಃ ।
ಸಃ । ಹವ್ಯಾ । ಮಾನುಷಾಣಾಂ । ಇಳಾ । ಕೃತಾನಿ । ಪತ್ಯತೇ ।
ಸಃ । ನಃ । ತ್ರಾಸತೇ । ವರುಣಸ್ಯ । ಧೂರ್ತೇಃ । ಮಹಃ । ದೇವಸ್ಯ । ಧೂರ್ತೇಃ ॥ ೭ ॥

॥ ಸಾಯಣಭಾಷ್ಯಂ ॥

ಸೋ೭ಗ್ನಿರ್ಮಾನುಷೇ ಮನುಷ್ಯಸ್ಯ ಯಜಮಾನಸ್ಯ ಸಂಬಂಧಿನಿ ವೃಜನೇ ವರ್ಜನೀಯೇ ಪಾಪೇ ನಿಮಿತ್ತಭೂತೇ ಸತಿ ಯಜ್ಞೇಷು ನಿಮಿತ್ತೇಷು ಶಂತಮೋ೭ತ್ಯಂತಂ ಸುಖತಮಃ ಅರಿಷ್ಟಸ್ಯ ನಿವಾರಕತ್ವಾತ್ ಅತ ಏವ ಹಿತಃ ಸ್ವರ್ಗಾದ್ಯಭಿಮತಸಾಧಕತ್ವಾತ್ । ಕಿಂಚಾಯಂ ಯಜ್ಞೇಷು ವಿಶ್ಪತಿರ್ಋತ್ವಿಗ್ರೂಪಾಣಾಂ ಪ್ರಜಾನಾಮತಿಶಯೇನ ಪಾಲಕಃ । ಪತ್ಯಾವೈಶ್ವರ್ಯೆ ಇತಿ ಪೂರ್ವಪದಪ್ರಕೃತಿಸ್ವರೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ ॥ ಅತ ಏವ ಪ್ರಿಯಶ್ಚ ಭವತಿ । ತತ್ರ ದೃಷ್ಟಾಂತಃ । ಜೇನ್ಯೋ ನ ವಿಶ್ಪತಿರ್ಜಯಶೀಲೋ ರಾಜೇವ । ಸ ಯಥಾ ಪರಸೇನಾದ್ಯುಪದ್ರವಪರಿಹಾರೇಣ ಸಮ್ಯಕ್ಪರಿಪಾಲನೇನ ಚ ಪ್ರಜಾನಾಂ ಪ್ರಿಯೋ ಭವತಿ । ಕಿಂಚಾಯಮಗ್ನಿರ್ಮಾನುಷಾಣಾಂ ಮನುಷ್ಯಾಣಾಂ ಯಜಮಾನಾನಾಂ ಸಂಬಂಧೀನಿ ಹವ್ಯಾ ಹವೀಂಷೀಳಾ ಕೃತಾನೀಳಾಯಾಂ ವೇದ್ಯಾಂ ಕೃತಾನಿ ಸಂಪಾದಿತಾನ್ಯುದ್ದಿಶ್ಯ ಪತ್ಯತೇ । ಪತತಿ । ಆಗಚ್ಛತಿ । ಕಿಂಚ ಸೋ೭ಗ್ನಿರ್ನೋ೭ಸ್ಮಾನ್ಯಜಮಾನಾನ್ವರುಣಸ್ಯ ವಾರಕಸ್ಯ ಧೂರ್ತೇರ್ಹಿಂಸಕಸ್ಯ ಭಯಾತ್ತ್ರಾಸತೇ । ತ್ರಾಯತೇ । ಯದ್ವಾ । ಧೂರ್ತೇರಿತಿ ಪಂಚಮೀ । ವರುಣಸ್ಯ ಪಾಪದೇವಸ್ಯ ಧೂರ್ತೇರ್ಹಿಂಸಕಾತ್ । ಕಿಂಚ ಮಹೋ ಮಹತೋ ದೇವಸ್ಯ

**ಧೂರ್ತೇಃ ಹಿಂಸಾತಸ್ತ್ರಾಸತೇ । ಪಾಲಯತೇ । ಅಯಮಪ್ಯಾರಮಗ್ನಿರ್ಹಿನಸ್ತೀತಿ ಪ್ರಸಿದ್ಧಂ । ಯದ್ವಾ । ಏಕಮೇವ ವಾಕ್ಯಂ । ಧೂರ್ತೇಃ ಹಿಂಸಕಸ್ಯ ಮಹೋ ಮಹತೋ ವರುಣಸ್ಯ ದೇವಸ್ಯ ವರುಣಾಖ್ಯಾಯಾಃ ಪಾಪದೇವತಾಯಾ ಧೂರ್ತೇಃ ಹಿಂಸಾತೋ ನೋಽಸ್ಮಾನ್ ಸೋಽಗ್ನಿಸ್ತ್ರಾಸತೇ । ತ್ರಾಯತೇ ॥**

॥ ಪ್ರತಿಪದಾರ್ಥ ॥

**ಮಾನುಷೇ**—ಮನುಷ್ಯ ಸಂಬಂಧವಾದ । **ವೃಜನೇ**—ಪಾಪ (ಪರಿಹಾರ) ವಿಷಯದಲ್ಲಿ । **ಯಜ್ಞೇಷು**—ಯಜ್ಞಗಳಲ್ಲಿ । **ಶಂತಮಃ**—ಅತ್ಯಂತ ಸುಖಕರನೂ । **ಹಿತಃ**—(ಆದ್ದರಿಂದಲೇ) ಹಿತಕರನೂ । **ಯಜ್ಞೇಷು**—ಯಜ್ಞಗಳಲ್ಲಿ । **ವಿಶ್ಪತಿಃ**—(ಋತ್ವಿಗ್ರೂಪರಾದ) ಪ್ರಜೆಗಳ ಪಾಲಕನೂ । **ಜೇನ್ಯಃ**—ಜಯಶೀಲನೂ (ಆದ) । **ವಿಶ್ಪತಿಃ ನ**—ರಾಜನಂತೆ । **ಪ್ರಿಯಃ**—ವಿಶ್ವಾಸಪಾತ್ರನೂ (ಆದ) । **ಸಃ ಅಗ್ನಿಃ**—ಆ ಅಗ್ನಿಯು । **ಇಳಾ ಕೃತಾನಿ**—ವೇದಿಕೆಯಮೇಲೆ ಸಿದ್ಧಪಡಿಸಿರುವ । **ಮಾನುಷಾಣಾಂ**—ಮನುಷ್ಯ ಸಂಬಂಧವಾದ । **ಹವ್ಯಾ**—ಹವಿಸ್ಸನ್ನು (ಉದ್ದೇಶಿಸಿ) । **ಪತ್ಯತೇ**—ಬರುತ್ತಾನೆ । (**ಕಿಂಚ** – ಮತ್ತು) । **ಸಃ**—ಅವನು । **ನಃ**—ನಮ್ಮನ್ನು (ಯಾಗಕರ್ತೃಗಳನ್ನು) । **ವರುಣಸ್ಯ**—(ಕರ್ಮಗಳಿಗೆ) ಅಡ್ಡಿಮಾಡುವ । **ಧೂರ್ತೇಃ**—ಹಿಂಸಕನಿಂದ । **ತ್ರಾಸತೇ**—ರಕ್ಷಿಸುತ್ತಾನೆ। (ಮತ್ತು) । **ಮಹಃ ದೇವಸ್ಯ**—ಬಲಿಷ್ಠನಾದ (ವರುಣನಾಮಕ ಪಾಪ) ದೇವತೆಯ । **ಧೂರ್ತೇಃ**—ಹಿಂಸೆಯಿಂದ । (**ತ್ರಾಸತೇ**—ರಕ್ಷಿಸುತ್ತಾನೆ) [ಅಥವಾ । **ಧೂರ್ತೇಃ**—ಹಿಂಸಕಳೂ । **ಮಹಃ**—ಬಲಿಷ್ಠಳೂ ಆದ । **ವರುಣಸ್ಯ ದೇವಸ್ಯ**—ವರುಣನಾಮಕ (ಪಾಪ) ದೇವತೆಯ । **ಧೂರ್ತೇಃ**—ಹಿಂಸೆಯಿಂದ । **ನಃ**—ನಮ್ಮನ್ನು । **ಸಃ**—ಆ ಅಗ್ನಿಯು । **ತ್ರಾಸತೇ** – ರಕ್ಷಿಸುತ್ತಾನೆ.]

॥ ಭಾವಾರ್ಥ ॥

ಯಜ್ಞಗಳಲ್ಲಿ ಮನುಷ್ಯಸಂಬಂಧವಾದ ಪಾಪ (ಪರಿಹಾರಮಾಡಿ) ಸುಖವನ್ನುಂಟುಮಾಡುವವನೂ, (ಆದ್ದರಿಂದಲೇ) ಹಿತಕರನೂ, ಯಾಗಗಳಲ್ಲಿ ಋತ್ವಿಜರುಗಳ ಪಾಲಕನೂ, ಜಯಶೀಲನಾದ ರಾಜನು (ಪ್ರಜೆಗಳಿಗೆ) ಪ್ರಿಯನಾಗಿರುವಂತೆ ಪ್ರಿಯನೂ ಆದ ಅಗ್ನಿಯು ಮನುಷ್ಯರು ಯಜ್ಞವೇದಿಕೆಗಳಲ್ಲಿ ಸಿದ್ಧಪಡಿಸಿರುವ ಹವಿರಾದಿಗಳನ್ನು (ಉದ್ದೇಶಿಸಿ) ಬರುತ್ತಾನೆ ; (ಬಂದು) ಯಾಗಕರ್ತೃಗಳಾದ ನಮ್ಮನ್ನು ಯಾಗಕ್ಕೆ ಅಡ್ಡಿಮಾಡಿ ಹಿಂಸೆಮಾಡುವ ಪಾಪ (ದೇವತೆಯ) ಹಿಂಸೆಯಿಂದ ಕಾಪಾಡುತ್ತಾನೆ.

English Translation.

Agni is a most amiable friend in human infirmity through the means of sacrifices; the beloved protector of all in sacrifices, like a victorious prince, he alights upon the oblations of men when placed upon the altar : he preserves us from the malignity of Varuna; from the malignity of the mighty deity (of sin.)

॥ ವಿಶೇಷವಿಷಯಗಳು ॥

**ಅಗ್ನಿಃ ಮಾನುಷೇ ವೃಜನೇ ಯಜ್ಞೇಷು ಶಂತಮಃ ಹಿತಃ ಯಜಮಾನಸ್ಯ ಸಂಬಂಧಿನಿ ವರ್ಜನೀಯೇ ಪಾಪೇ ನಿಮಿತ್ತಭೂತೇ ಸತಿ ಯಜ್ಞೇಷು ಅತ್ಯಂತಂ ಸುಖತಮಃ ಅರಿಷ್ಟಸ್ಯ ನಿವಾರಕತ್ವಾತ್ ।**

**ಅತಏವ ಸ್ವರ್ಗಾದ್ಯಭಿಮತಸಾಧಕತ್ವಾತ್ ಹಿತಃ** । ಯಜ್ಞಮಾಡುವ ಯಜಮಾನರಿಗೆ ದುಸ್ಥಿತಿಯನ್ನು ಉಂಟು ಮಾಡುವ ಪಾಪಸಂಬಂಧವು ಉಂಟಾದಾಗ ಅದನ್ನು ಪರಿಹರಿಸಿಕೊಳ್ಳುವ ಉಪಾಯವಾದ ಯಜ್ಞದಲ್ಲಿ ಅಗ್ನಿಯು ಹವಿಸ್ಸ್ವೀಕಾರವೇ ಮೊದಲಾದವುಗಳಿಂದ ಅರ್ಚಿತನಾಗಿ ಅವರವರ ಪಾತಕಗಳನ್ನು ಪರಿಹರಿಸುವುದರ ಮೂಲಕವಾಗಿ ಬಹಳವಾಗಿ ಸುಖಕರನಾಗುವನು. ಮತ್ತು ಈ ಅಗ್ನಿಯೇ ಯಜ್ಞಮಾಡುವವರಿಗೆ ಅನಿಷ್ಟವನ್ನು ಪರಿಹರಿಸಿ ಸ್ವರ್ಗವೇ ಮೊದಲಾದ ಇಷ್ಟಗಳನ್ನು ಸಾಧಿಸಿಕೊಡುವುದರಿಂದ ಹಿತವನ್ನು ಉಂಟುಮಾಡುವವನಾಗಿಯೂ ಇರುವನು ಎಂದು ಅರ್ಥ.

**ಯಜ್ಞೇಷು ವಿಶ್ಪತಿಃ ಜೇನ್ಯೋ ನ ವಿಶ್ಪತಿಃ— ಅಯಂ ಯಜ್ಞೇಷು ಋತ್ವಿಗ್ರೂಪಾಣಾಂ ಪ್ರಜಾನಾಂ ಅತಿಶಯೇನ ಪಾಲಕಃ ಅತ ಏವ ಪ್ರಿಯಶ್ಚ । ಜಯಶೀಲಃ ರಾಜಾ ಪರಸೇನಾದ್ಯುಪದ್ರವ ಪರಿಹಾರೇಣ ಸಮ್ಯಕ್ ಪರಿಪಾಲನೇನ ಚ ಪ್ರಜಾನಾಂ ಪ್ರಿಯೋ ಭವತಿ ಇತಿ ದೃಷ್ಟಾಂತಃ** । ಅಗ್ನಿಯು ರಾಜನಂತೆ ಇರುವನು ಎಂದು ಈ ವಾಕ್ಯದಿಂದ ರಾಜನಿಗೆ ಹೋಲಿಸಿದೆ. ರಾಜನು ಪ್ರಜೆಗಳಿಗೂ ತನಗೂ ಹಿಂಸೆಯನ್ನು ಉಂಟು ಮಾಡುವ ಶತ್ರುವಿನ ಸೇನೆಯಿಂದ ಉಂಟಾದ ತೊಂದರೆಗಳನ್ನು ಪರಿಹರಿಸುತ್ತಾ ಪ್ರಜೆಗಳಿಗೆ ಹಿತಕರನಾಗಿ ಜಯಶೀಲ ನಾಗಿರುವಂತೆಯೂ, ಪ್ರಜೆಗಳನ್ನು ಚೆನ್ನಾಗಿ ಕಾಪಾಡುವುದರಿಂದ ಪ್ರಜೆಗಳ ಪ್ರೀತಿಗೆ ಆಸ್ಪದನಾಗಿರುವಂತೆಯೂ, ಅಗ್ನಿಯು ಯಜ್ಞಗಳಲ್ಲಿ ಋತ್ವಿಜರಾಗಿರುವ ಪ್ರಜೆಗಳನ್ನು ಅವರ ತೊಂದರೆಗಳನ್ನು ಪರಿಹರಿಸುವದರ ಮೂಲಕ ಅವರನ್ನು ರಕ್ಷಿಸುವವನಾದುದರಿಂದ ಅವರ ಪ್ರೀತಿಗೆ ಆಸ್ಪದನಾಗಿರುವನೆಂದು ಅರ್ಥ-

ವಿಶ್ಪತಿಃ— **ಪ್ರಜಾನಾಂ ಅತಿಶಯೇನ ಪಾಲಕಃ** ಪ್ರಜೆಗಳನ್ನು ಬಹಳ ಚೆನ್ನಾಗಿ ರಕ್ಷಿಸುವವನು ಎಂದು ಅರ್ಥ.

ವಿಶ್ಪತಿ ಶಬ್ದವು ನಿರುಕ್ತಕಾರದಿಂದ **ಸರ್ವಸ್ಯ ಪಾತಾ, ಪಾಲಾಯಿತಾ ವಾ** । ಎಲ್ಲರನ್ನೂ ರಕ್ಷಿಸುವವನು ಅಥವಾ ಎಲ್ಲವನ್ನೂ ರಕ್ಷಿಸುವಂತೆ ಮಾಡುವವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವಿವರಿಸಿರುವರು. ಉದಾಹರಣೆಗೆ—

**ಅಸ್ಯ ವಾಮಸ್ಯ ಪಲಿತಸ್ಯ ಹೋತುಸ್ತಸ್ಯ ಭ್ರಾತಾ ಮಧ್ಯಮೋ ಅಸ್ತ್ಯಶ್ನಃ ।**
**ತೃತೀಯೋ ಭ್ರಾತಾ ಘೃತಪೃಷ್ಠೋ ಅಸ್ಯಾತ್ರಾಪಶ್ಯಂ ವಿಶ್ಪತಿಂ ಸಪ್ತಪುತ್ರಂ ॥**

(ಋ. ಸಂ. ೧-೧೬೪--೧)

**ಪ್ರ ವಾವೃಜೇ ಸುಪ್ರಯಾ ಬರ್ಹಿರೇಷಾಮಾ ವಿಶ್ಪತೀವ ಬೀರಿಟ ಇಯಾತೇ ।**
**ವಿಶಾಮಕ್ತೋರುಷಸಃ ಪೂರ್ವಹೂತೌ ವಾಯುಃ ಪೂಷಾ ಸ್ವಸ್ತಯೇ ನಿಯುತ್ವಾನ್ ॥**

(ಋ· ಸಂ. ೭-೩೯-೨)

ಈ ಋಕ್ಕುಗಳಲ್ಲಿ ವಿಶ್ಪತಿಶಬ್ದವು **ಸರ್ವಸ್ಯ ಜಗತಃ ಪಾತಾ ಪಾಲಾಯಿತಾ ವಾ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಮಾನುಷಾಣಾಂ ಹವ್ಯಾ ಇಳಾ ಕೃತಾನಿ ಪತ್ಯತೇ—ಮನುಷ್ಯಾಣಾಂ ಯಜಮಾನಾನಾಂ ಸಂಬಂಧೀನಿ ಹವೀಂಷಿ ವೇದ್ಯಾಂ ಸಂಪಾದಿತಾನಿ ಉದ್ದಿಶ್ಯ ಅಯಮಗ್ನಿರಾಗಚ್ಛತಿ** । ಅಗ್ನಿಯು, ಯಜ್ಞಮಾಡುವವರು ಯಜ್ಞವೇದಿಯಲ್ಲಿ ಹವಿಸ್ಸುಗಳನ್ನು ಸಿದ್ಧಮಾಡಿರುವುದನ್ನು ಉದ್ದೇಶಮಾಡಿಕೊಂಡು ಅವುಗಳ ಸ್ವೀಕಾರಕ್ಕಾಗಿ ಬರುವನು ಎಂದು ಅರ್ಥ.

**ಇಳಾ** ಶಬ್ದವು—**ಪೃಥಿವೀ**ನಾಮುಗಳಲ್ಲಿಯೂ (ನಿ ೨-೫)—**ವಾಙ್ನಾ**ಮುಗಳಲ್ಲಿಯೂ (ನಿ. ೨-೨೩) **ಅನ್ನ** ನಾಮುಗಳಲ್ಲಿಯೂ, (ನಿ. ೩-೯) **ಗೋ**ನಾಮುಗಳಲ್ಲಿಯೂ (ನಿ. ೩-೯) ಪಠಿತವಾಗಿರುವುದರಿಂದ, ಭೂಮಿ, ವಾಕ್, ಅನ್ನ, ಗೋವು ಎಂಬ ಅರ್ಥಗಳಲ್ಲಿ ಪ್ರಯುಕ್ತವಾಗಿದೆ. ಮತ್ತು **ಇಳಾ—ಈಡ್ ಸ್ತುತಿಕರ್ಮಣಃ** । ಸ್ತುತಿ ಎಂಬ ಅರ್ಥವನ್ನು ಬೋಧಿಸುವ ಈಡ ಧಾತುವಿನಿಂದ **ಇಳಾ** ಶಬ್ದವು ನಿಷ್ಪನ್ನವಾಗಿದೆ ಎಂದು ದುರ್ಗಾಚಾರ್ಯರು ವ್ಯಾಖ್ಯಾನ ಮಾಡಿರುವರು ಸಾಯಣರು ಮಾತ್ರ ಯಜ್ಞವೇದಿ ಎಂದು ಅರ್ಥವನ್ನು ವಿವರಿಸಿದ್ದಾರೆ.

**ವರುಣಸ್ಯ ಧೂರ್ತೇಃ ತ್ರಾಸತೇ ಮಹಃ ದೇವಸ್ಯ ಧೂರ್ತೇಃ ತ್ರಾಸತೇ** ಎಂದು ಎರಡು ವಾಕ್ಯಗಳನ್ನಾಗಿ ಮಾಡಿಯೂ, **ಧೂರ್ತೇಃ ಮಹಃ ದೇವಸ್ಯ ವರುಣಸ್ಯ ಧೂರ್ತೇಃ ನಃ ಅಗ್ನಿಃ ತ್ರಾಸತೇ** ಎಂದು ಒಂದು ವಾಕ್ಯದ ರೀತಿಯಿಂದಲೂ ಸಾಯಣರು ಅರ್ಥವನ್ನು ಹೇಳಿರುವರು.

ಮೊದಲನೆಯ ವಿಧದಲ್ಲಿ ವರುಣ ಎಂಬ ಹೆಸರುಳ್ಳ ಹಿಂಸಕನ ಅಥವಾ ಹಿಂಸಕನ ಭಯದಿಂದ ಅಗ್ನಿಯು ರಕ್ಷಿಸುವನು, ಮತ್ತು ಅಗ್ನಿಯು ಯಜ್ಞಮಾಡದಿರುವವನನ್ನು (ಹಿಂಸೆಗೆ ಒಳಗುಮಾಡುವನು) ಹಿಂಸಿಸುವನು ಎಂದು ಅರ್ಥ.

ಎರಡನೆಯದಾಗಿ, ವರುಣ ಎಂಬ ಪಾಪದೇವತೆಯು ಮಹತ್ವದಿಂದ ಕೂಡಿರುವುದಾಗಿ ಹಿಂಸೆಯನ್ನುಂಟು ಮಾಡುವುದರಿಂದ ಹಿಂಸಕವಾಗಿರುವ ಆದೇವತೆಯ ಹಿಂಸೆಯಿಂದ ಅಗ್ನಿಯು ನಮ್ಮನ್ನು ರಕ್ಷಿಸುವನು ಎಂದು ಅರ್ಥವನ್ನು ವರ್ಣಿಸಿದೆ.

ಧೂರ್ತಿ ಶಬ್ದಕ್ಕೆ ಹಿಂಸೆ ಎಂತಲೂ ಹಿಂಸಕ ಎಂಬುದಾಗಿಯೂ ಎರಡು ವಿಧವಾದ ಅರ್ಥವನ್ನು ಹೇಳಿದೆ.

**ಮಹಃ—ಮಹತಃ** । **ಮಹಃ** ಶಬ್ದವು ಉದಕನಾಮುಗಳಲ್ಲಿ (ನಿ. ೨-೨೪) ಪಠಿತವಾಗಿದೆ.

**ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಂ ।**
**ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ ॥**

(ಋ. ಸಂ ೧-೧೮೭-೧)

ಇಲ್ಲಿ **ಮಹಃ ಮಹತಃ** ಎಂದು ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ವೃಜನೇ**—ವೃಜೀ ವರ್ಜನೇ ಧಾತು. **ಕೃಪೃವೃಜಿ**—(ಉ. ಸೂ. ೨-೨೫೯) ಎಂಬುದರಿಂದ ಕ್ಯು ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತೆ. ಸಪ್ತಮೀ ಏಕವಚನಾಂತರೂಪ.

**ಶಂತಮಃ—ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ಅತಿಶಯಾರ್ಥ ತೋರುವಾಗ ತಮಪ್ ಪ್ರತ್ಯಯ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಜೇನ್ಯಃ—**ಜಿ ಜಯೇ. ಧಾತು. **ಕೃತ್ಯಲ್ಯುಟೋ ಬಹುಲಂ** (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುಲ ಗ್ರಹಣ ಸಾಮರ್ಥ್ಯದಿಂದ ಕರ್ತರಿಯಲ್ಲಿ **ಅಚೋ ಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ.

ಸುಡಾಗಮ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ವಿಶ್ಪತಿಃ**—ವಿಶಾಂ ಪತಿಃ ವಿಶ್ಪತಿಃ **ಪತ್ಯಾವೈಶ್ವರ್ಯೇ** (ಪಾ. ಸೂ. ೬-೧-೧೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಪ್ರಾಪ್ತವಾದರೆ **ಪರಾದಿಶ್ಛಂದಸಿ ಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರ ಪದಾದ್ಯುದಾತ್ತಸ್ವರ ಬರುತ್ತದೆ.

**ಹವ್ಯಾ**—ಹವ್ಯಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಇಡಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್.

**ಪತ್ಯತೇ**—ಪತ್ಲೃ ಗತೌ. ಧಾತು. ವ್ಯತ್ಯಯದಿಂದ ಆತ್ಮನೇಪದಿಯಾಗುತ್ತದೆ. ಅಥವಾ ತಪ ಐಶ್ವರ್ಯೇ ಧಾತು. ದಿವಾದಿ. ಇಲ್ಲಿ ವ್ಯತ್ಯಾಸವಾಗಿ ಪಾಠಾಂತರವು ಸಂಮತವಾದುದರಿಂದ ಲಟಿನಲ್ಲಿ ಪತ್ಯತೇ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ತ್ರಾಸತೇ**—ತ್ರೈಙ್ ಪಾಲನೇ. ಧಾತು. ಭ್ವಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಟಿತ ಆತ್ಮನೇಪ**—(ಪಾ. ಸೂ. ೩-೪-೭೯) ಎಂಬುದರಿಂದ ಅದಕ್ಕೆ ಏತ್ವ. ಶಪ್ ವಿಕರಣ. ಅಚ್ ಪರವಾದುದರಿಂದ ಆಯಾದೇಶ. ಛಾಂದಸವಾಗಿ ವರ್ಣ ವ್ಯತ್ಯಯ ಬಂದಿದೆ. ತಿಙಂತನಿಘಾತಸ್ವರ ಬರುತ್ತದೆ.

**ಧೂರ್ತೇಃ**—ಧುರ್ವೀ ಹಿಂಸಾಯಾಂ ಧಾತು. **ಕ್ತಿಚ್‌ಕ್ತೌ ಚ ಸಂಜ್ಞಾಯಾಂ** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್. **ತಿತುತ್ರತಥಸಿ**—(ಪಾ. ಸೂ. ೭-೨-೯) ಎಂಬುದರಿಂದ ಇಣ್ನಿಷೇಧ ಬರುತ್ತದೆ. **ಉಪಧಾಯಾಶ್ಚ** (ಪಾ. ಸೂ. ೭-೧-೧೦೧) ಎಂಬುದರಿಂದ ಧಾತುವಿನ ಉಪಧೆಗೆ ದೀರ್ಘ. **ಲೋಪೋವ್ಯೋರ್ವಲಿ** ಸೂತ್ರದಿಂದ ಬರುವ ವಕಾರಲೋಪವನ್ನು ಬಾಧಿಸಿ ಊಠ್ ಪ್ರಾಪ್ತವಾದರೆ **ರಾಲ್ಲೋಪಃ** (ಪಾ. ಸೂ. ೬-೪-೨೧) ಎಂಬುದರಿಂದ ಧಾತುವಿನ ವಕಾರಕ್ಕೆ ಲೋಪಬರುತ್ತದೆ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ. ಪಂಚಮ್ಯಂತ ಷಷ್ಠ್ಯಂತದಲ್ಲಿ ಒಂದೇ ರೂಪವಾಗುತ್ತದೆ.

**ಮಹಃ**—ಮಹತಃ ಎಂಬಲ್ಲಿ ಛಾಂದಸವಾಗಿ ಅತಿಗೆ ಲೋಪ. ಅಥವಾ ಮಹ ಪೂಜಾಯಾಂ ಧಾತು. ಇದಕ್ಕೆ ಕ್ವಿಪ್ ಪ್ರತ್ಯಯ. ಷಷ್ಠ್ಯಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ ॥ ೭ ॥



॥ ಸಂಹಿತಾಪಾಠಃ ॥

ಅಗ್ನಿಂ ಹೋತಾರಮೀಳತೇ ವಸುಧಿತಿಂ ಪ್ರಿಯಂ ಚೇತಿಷ್ಠಮರತಿಂ ನ್ಯೇರಿರೇ
ಹವ್ಯವಾಹಂ ನ್ಯೇರಿರೇ ।
ವಿಶ್ವಾಯುಂ ವಿಶ್ವವೇದಸಂ ಹೋತಾರಂ ಯಜತಂ ಕವಿಂ ।
ದೇವಾಸೋ ರಣ್ವಮವಸೇ ವಸೂಯವೋ ಗೀರ್ಭೀ ರಣ್ವಂ ವಸೂಯವಃ ॥

॥ ಪದಪಾಠಃ ॥

ಅಗ್ನಿಂ । ಹೋತಾರಂ । ಈಳತೇ । ವಸುಽಧಿತಿಂ । ಪ್ರಿಯಂ । ಚೇತಿಷ್ಠಂ । ಅರತಿಂ । ನಿ । ಏರಿರೇ ।
ಹವ್ಯಽವಾಹಂ । ನಿ । ಏರಿರೇ ।
ವಿಶ್ವಽಆಯುಂ । ವಿಶ್ವಽವೇದಸಂ । ಹೋತಾರಂ । ಯಜತಂ । ಕವಿಂ ।
ದೇವಾಸಃ । ರಣ್ವಂ । ಅವಸೇ । ವಸುಽಯವಃ । ಗೀಃಽಭಿಃ । ರಣ್ವಂ । ವಸುಽಯವಃ ॥ ೮ ॥

॥ ಸಾಯಣಭಾಷ್ಯಂ ॥

ಅಮುಮಗ್ನಿಂ ಹೋತಾರಮಾಹ್ವಾತಾರಂ ಹೋಮನಿಷ್ಪಾದಕಂ ವೇಳತೇ । ಋತ್ವಿಜಃ ಸ್ತುವಂತಿ । ತಥಾ ವಸುಧಿತಿಂ ಧನಸ್ಯ ಧಾರಯಿತಾರಂ ದಾತಾರಂ ವಾ ಅತ ಏವ ಪ್ರಿಯಂ ಸರ್ವೇಷಾಂ ಪ್ರಿಯತಮಂ ಚೇತಿಷ್ಠಮತಿಶಯೇನ ಯಜಮಾನಾನಾಂ ಚೇತಯಿತಾರಂ ಯದ್ವಾ ಪ್ರಕೃಷ್ಟಚೇತನವಂತಂ ॥ ಚೇತ್ತೃಶ-ಬ್ದಾತ್ತೃಛಂದಸೀತೀಷ್ಠನ್ । ತುರಿಷ್ಠೇಮೇಯಃಸ್ವಿತಿ ತೃಲೋಪಃ ॥ ಅರತಿಮೀಶ್ವರಂ ತಾದೃಶಂ ದೇವಂ ನ್ಯೇರಿರೇ । ನಿತರಾಂ ಪ್ರಾಪ್ತಾಃ । ಪ್ರಾಪ್ತಿರೇವ ವಿಶೇಷ್ಯತೇ । ಹವ್ಯವಾಹಂ ನ್ಯೇರಿರೇ । ನಿಃಶೇಷೇಣ ಪ್ರಾಪ್ತಾಃ । ಇತರದೇವೇಭ್ಯೋ ಹವ್ಯಂ ವೋಢುಂ ಯಥಾ ಪ್ರಭವತಿ ತಥಾ ನಿತರಾಂ ಪ್ರಾಪ್ತಾಃ । ಪುನಃ ಕೀದೃಶಂ । ವಿಶ್ವಾಯುಂ ಸರ್ವತ್ರ ಪ್ರಾಣಿಜೀವನಂ ವಿಶ್ವವೇದಸಂ ಸರ್ವಪ್ರಜ್ಞಂ ಹೋತಾರಂ ದೇವಾನಾಮಾ-ಹ್ವಾತಾರಂ ಯಜತಂ ಯಜನೀಯಂ ಕವಿಂ ಸರ್ವಜ್ಞಂ ॥ ಈರ ಪ್ರೇರಣೇ ಈರ ಗತಾವಿತ್ಯನ್ಯತಮಸ್ಯ ಲಿಟಿ ರೂಪಂ ॥ ಕಿಂಚ ದೇವಾಸೋ ದೇವನಶೀಲಾ ಋತ್ವಿಜೋ ರಣ್ವಮತಿಪ್ರವೃದ್ಧ್ಯಾ ಶಬ್ದಯಂತಮವಸೇಽಸ್ಯ ರಕ್ಷಣಾಯ ವಸೂಯವೋ ವಸುಕಾಮಾಃ ಸಂತಃ । ಪುನಃ ಕೀದೃಶಾಃ । ಗೀರ್ಭಿಃ ಸ್ತುತಿಭೀ ರಣ್ವಂ ರಣಯಂತಂ ರಮಣೀಯಂ ವಾ ವಸೂಯವೋ ವಸು ಹವೀರೂಪಮನ್ನಮಗ್ನಯೇ ಪ್ರದಾತುಮಾತ್ಮನ ಇಚ್ಛಂತೋ ನ್ಯೇರಿರೇ । ಪ್ರೀತೋ ಯಥಾ ಧನಂ ಪ್ರಯಚ್ಛತಿ ತಥಾ ಹವಿರಾದಿನಾ ಪ್ರಾಪ್ತಾ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಹೋತಾ ಂ**—ದೇವತೆಗಳ ಆಹ್ವಾನಕರ್ತೃವಾದ । **ಅಗ್ನಿಂ**—ಅಗ್ನಿಯನ್ನು । **ಈಳತೇ**—ಸ್ತುತಿಸುತ್ತಾರೆ । **ವಸುಧಿತಿಂ**—ಧನಾಶ್ರಯನೂ (ಧನದಾತೃವೂ) । **ಪ್ರಿಯಂ**—(ಸರ್ವರಿಗೂ) ಪ್ರಿಯನೂ । **ಚೇತಿಷ್ಠಂ**—ಹೆಚ್ಚಾದ ಚೈತನ್ಯ (ಶಕ್ತಿ) ವಿಶಿಷ್ಟನೂ (ಯಾಗಕರ್ತೃಗಳನ್ನು ಎಚ್ಚರಿಸುವವನೂ) । **ಅರತಿಂ**—ಈಶ್ವರನೂ ಆದ (ಅಗ್ನಿಯನ್ನು) । **ನಿ ಏರಿರೇ**—ಸಮೀಪಿಸಿದರು । **ಹವ್ಯವಾಹಂ**—ದೇವತೆಗಳಿಗೆ ಹವಿರ್ವಾಹಕನೂ । **ವಿಶ್ವಾಯುಂ**—ಸರ್ವಪ್ರಾಣಿಗಳಿಗೂ ಜೀವನ (ರೂಪ)ನೂ । **ವಿಶ್ವವೇದಸಂ**—ಸರ್ವಜ್ಞನೂ । **ಹೋತಾರಂ**—ದೇವತೆಗಳನ್ನು ಆಹ್ವಾನಿಸುವ (ಹೋಮನಿಷ್ಪಾದಕನಾದ) ವನೂ । **ಯಜತಂ**—(ಯಾಗಾದಿಗಳ ಮೂಲಕ) ಪೂಜ್ಯನೂ । **ಕವಿಂ**—ತ್ರಿಕಾಲಜ್ಞನೂ ಆದ ಅಗ್ನಿಯನ್ನು । **ನಿ ಏರಿರೇ**—ಪ್ರಾಪ್ತರಾದರು । (**ಕಿಂಚ**—ಮತ್ತೂ)। **ದೇವಾಸಃ**—ಪೂಜಾಶೀಲರಾದ ಋತ್ವಿಜರು **ರಣ್ವಂ**—(ಜಾಜ್ವಲ್ಯಮಾನನಾಗಿ) ಶಬ್ದವನ್ನುಂಟುಮಾಡುತ್ತಿರುವ ಅಗ್ನಿಯನ್ನು । **ಅವಸೇ**—(ಈ ಯಜಮಾನನ) ರಕ್ಷಣೆಗಾಗಿ (ಮತ್ತು) । **ವಸೂಯವಃ**—ಧನಕಾಮರೂ । **ಗೀರ್ಭಿಃ**—ಸ್ತುತಿವಾಕ್ಯಗಳಿಂದ । **ರಣ್ವಂ**—ರಮಣೀಯವಾದ । **ವಸೂಯವಃ**—(ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಹವೀರೂಪವಾದ) ಅನ್ನವನ್ನು ಅಪೇಕ್ಷಿಸುವವರೂ ಆಗಿ । (**ನ್ಯೇರಿರೇ**—ಪ್ರಾಪ್ತರಾದರು.)

॥ ಭಾವಾರ್ಥ ॥

(ದೇವತೆಗಳನ್ನು ಯಾಗಪ್ರದೇಶಕ್ಕೆ) ಆಹ್ವಾನಿಸುವ ಅಗ್ನಿಯನ್ನು (ಋತ್ವಿಜರು) ಸ್ತುತಿಸುತ್ತಾರೆ; ಧನಾಶ್ರಯನೂ (ಧನದಾತೃವೂ) (ಸರ್ವರಿಗೂ) ಪ್ರಿಯನೂ, (ಯಾಗವಿಷಯದಲ್ಲಿ ಯಜಮಾನರಿಗೆ) ಎಚ್ಚರಿಕೆ ಕೊಡುವವನೂ, ಈಶ್ವರನೂ, ಸಮಸ್ತ ಪ್ರಾಣಿಗಳಿಗೂ ಜೀವನಪ್ರಾಯನೂ, ಸರ್ವಜ್ಞನೂ, ಹೋತೃವೂ (ಹೋಮನಿಷ್ಪಾಕನೂ ಅಥವಾ ದೇವತೆಗಳನ್ನು ಕರೆಯುವವನೂ,) (ಯಾಗಗಳಲ್ಲಿ) ಪೂಜ್ಯನೂ ಮತ್ತು ತ್ರಿಕಾಲಜ್ಞನೂ ಆದ ಅಗ್ನಿಯನ್ನು (ಋತ್ವಿಜರು) ಸಮೀಪಿಸಿದರು ; ಪೂಜಾಶೀಲರಾದ (ಋತ್ವಿಜರು) (ಯಜಮಾನನ) ರಕ್ಷಣೆಗಾಗಿ ಧನಕಾಮರೂ ಮತ್ತು ಸ್ತುತಿವಾಕ್ಯಗಳಿಂದ (ಸ್ತುತಿಸಿ) ರಮಣೀಯವಾದ ಹವೀರೂಪವಾದ ಅನ್ನವನ್ನು ಅಪೇಕ್ಷಿಸುವವರೂ ಆಗಿ (ಪ್ರಜ್ವಲಿಸುತ್ತಾ) ಶಬ್ದಮಾಡುತ್ತಿರುವ ಅಗ್ನಿಯನ್ನು ಸಮೀಪಿಸಿದರು.

## English Translation.

They, (the devout), praise Agni, the invoker (of the gods), the possessor of wealth, the beloved, the thoughtful; they have recourse to him as to a sovereign; they have recourse to him as the bearer of oblations; to him, who is the life (of all living beings), who knows all things, the offerer of oblations, the object of worship, the sage: the sacred (priests), desirous of affluence, murmur (his praises) to obtain his protection; desirous of affluence, they murmur (his praises) in their hymns.

॥ ವಿಶೇಷವಿಷಯಗಳು ॥

**ಹೋತಾರಂ ಈಳತೇ—ಹೋಮನಿಷ್ಪಾದಕಂ ಆಹ್ವಾತಾರಂ ವಾ** ಅಗ್ನಿಯು ಹೋಮವನ್ನು ನೆರವೇರಿಸುವವನಾಗಿಯೂ, ಅಥವಾ ದೇವತೆಗಳನ್ನು (ಹೋಮಕ್ಕಾಗಿ) ಹೋಮಮಾಡುವ ಹವಿಸ್ಸುಗಳ ಸ್ವೀಕಾರಕ್ಕಾಗಿ ಆಹ್ವಾನಮಾಡುವವನಾಗಿಯೂ ಇರುವನು. ಹೀಗೆ ಇರುವ ಅಗ್ನಿಯನ್ನು ಋತ್ವಿಜರು ಸ್ತುತಿಮಾಡುವರು ಎಂದು ಅರ್ಥ.

**ವಸುಧಿತಿಂ—ಧನಸ್ಯ ಧಾರಯಿತಾರಂ ದಾತಾರಂ ವಾ ।** ಅಗ್ನಿಯು ಧನವನ್ನು ಧರಿಸಿರುವವನು. ಅಥವಾ ಧನವನ್ನು ಕೊಡುವವನು ಎಂದು ಅರ್ಥ.

ನಿರುಕ್ತಕಾರರು ವಸುಧಿತಿ, ವಸುಧಿತೀ ಈ ಎರಡು ಶಬ್ದಗಳೂ ಬೇರೆಯ ಅರ್ಥವನ್ನು ಬೋಧಿಸುವುದಿಲ್ಲವೆಂದು **ವಸುಧೀತೀ—ವಸುಧಾನ್ಯೌ—ವಸೂನಾಂ ನಿಧಾನಭೂತೇ** ಧನಗಳಿಗೆ ಆಶ್ರಯವಾಗಿರುವವರು ಎಂದು ಅರ್ಥವನ್ನು ವರ್ಣಿಸಿದ್ದಾರೆ. (ನಿ. ೯-೪೨)

**ಚೇತಿಷ್ಠಂ—ಅತಿಶಯೇನ ಯಜಮಾನಾನಾಂ ಚೇತಯಿತಾರಂ ಯದ್ವಾ ಪ್ರಕೃಷ್ಟಚೇತನವಂತಂ** ಯಜ್ಞಮಾಡುವ ಯಜಮಾನರಿಗೆ ಬಹಳವಾದ ಜ್ಞಾನವನ್ನು ಅಗ್ನಿಯು ಅನುಗ್ರಹಿಸುವನು. ಅಥವಾ, ತಾನೂ ಬಹಳ ಪ್ರಜ್ಞಾವಂತನಾಗಿರುವನು ಎಂದು ಅರ್ಥ.

**ಹವ್ಯವಾಹಂ ನ್ಯೇರಿರೇ—ನಿಶ್ಶೇಷೇಣ ಪ್ರಾಪ್ತಾಃ ।** ಅಗ್ನಿಯು ಇತರ ದೇವತೆಗಳಿಗಾಗಿ ಹವಿಸ್ಸನ್ನು ವಹಿಸಲು ಸಂತೋಷದಿಂದ ಸಮರ್ಥನಾಗಿ ಇರುವನು. ಅಂತಹ ಅಗ್ನಿಯನ್ನು ಸೇವಿಸುವರು ಎಂದು ವಿವರಿಸಿದೆ.

**ರಣ್ವಂ—ಅತಿಪ್ರವೃದ್ಧತಯಾ ಶಬ್ದಯಂತಂ ರಮಣೀಯಂ ವಾ ।** ಅಗ್ನಿಯು ಚೆನ್ನಾಗಿ ಉರಿಯುತ್ತಿರುವಾಗ ಶಬ್ದಮಾಡುವನು ಎಂದೂ ಅಥವಾ ರಮಣೀಯನಾಗಿರುವನು ಎಂದೂ ಅರ್ಥಮಾಡಿದೆ.

**ವಸೂಯವಃ—ವಸುಕಾಮಾಃ—ವಸು ಹವೀರೂಪಮನ್ನಂ ಅಗ್ನಯೇ ಪ್ರದಾತುಮಾತ್ಮನ ಇಚ್ಛಂತಃ ।** ವಸುಕಾಮಾಃ—ಧನವನ್ನು ಅಪೇಕ್ಷಿಸುವವರು, ಅಥವಾ ಹವಿಸ್ಸಿನರೂಪವಾದ ಅನ್ನವನ್ನು ಅಗ್ನಿಗೆ ಅರ್ಪಿಸುವುದಕ್ಕಾಗಿ ಪ್ರಭೂತವಾಗಿರುವ ಅನ್ನವನ್ನು ಅಗ್ನಿಯಿಂದ ಹೊಂದಲು ಅಪೇಕ್ಷಿಸುವವರೂ ಆದ ಯಜಮಾನರು ಎಂದು ಅರ್ಥ. ಅಗ್ನಿಯಿಂದ ಬಹಳವಾದ ಅನ್ನವನ್ನೂ ಧನವನ್ನೂ ಹೊಂದಿ, ಅಗ್ನಿಯು ಸಂತುಷ್ಟನಾಗಿ ಧನವನ್ನು ಅನುಗ್ರಹಿಸುವಂತೆ ಅಗ್ನಿಯನ್ನು ಹವಿಸ್ಸುಗಳಿಂದ ತೃಪ್ತಿಪಡಿಸುವ ಯಜಮಾನರು ಆ ಪ್ರಕಾರವಾಗಿ ಅಗ್ನಿಯನ್ನು ಸೇವಿಸುವರು ಎಂದು ವರ್ಣಿಸಿದೆ.

**ಕಾರುರಹಂ ತತೋ ಭಿಷಗುಪಲಪ್ರಕ್ಷಿಣೀ ನನಾ ।**
**ನಾನಾಧಿಯೋ ವಸೂಯವೋಽನು ಗಾ ಇವ ತಸ್ಥಿಮೇಂದ್ರಾಯೇಂದೋ ಪರಿ ಸ್ರವ ॥**

(ಋ. ಸಂ. ೯-೧೧೨-೩)

ಇಲ್ಲಿ ವಸೂಯವಃ ವಸುಕಾಮಾಃ (ನಿ. ೬-೫) ಎಂದು ಅರ್ಥವನ್ನು ವಿವರಿಸಿದೆ.

**ಇಂದ್ರೋ ಅಶ್ರಾಯಿ ಸುಧ್ಯೋ ನಿರೇಕೇ ಪಜ್ರೇಷು ಸ್ತೋಮೋ ದುರ್ಯೋ ನ ಯೂಪಃ ।**
**ಅಶ್ವಯುರ್ಗವ್ಯೂ ರಥಯುರ್ವಸೂಯುರಿಂದ್ರ ಇದ್ರಾಯಃ ಕ್ಷಯತಿ ಪ್ರಯಂತಾ ॥**

(ಋ. ಸಂ. ೧-೫೧-೧೪)

ಈ ಋಕ್ಕಿನಲ್ಲಿ ವಸೂಯುಃ ವಸುನಾನ್ ಎಂದು ಅರ್ಥಮಾಡಿದೆ. ಇದರಿಂದ ವಸುಯವಃ ಎಂಬ ಪದಕ್ಕೆ ಧನವನ್ನು ಅಪೇಕ್ಷಿಸುವವರು, ಅಥವಾ ಧನವುಳ್ಳವರು ಎಂದು ಅರ್ಥವನ್ನು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಹೋತಾರಂ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಛಾಂದಸವಾಗಿ ಧಾತುವಿಗೆ ಸಂಪ್ರಸಾರಣ, ಪೂರ್ವರೂಪ. ಪ್ರತ್ಯಯ ನಿಮಿತ್ತವಾಗಿ ಉಕಾರಕ್ಕೆ ಗುಣ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಈಳತೇ**—ಈಡ ಸ್ತುತೌ. ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ. ಶಪಿಗೆ ಲುಕ್. ತಿಙಂತನಿಘಾತ ಸ್ವರ ಬರುತ್ತದೆ.

**ವಸುಧಿತಿಂ**—ವಸುನಃ ಧಿತಿಃ ಡುಧಾಞ್ ಧಾರಣಪೋಷಣಯೋ ಧಾತು. ಬಹುಲಗ್ರಹಣದಿಂದ ಕರ್ತರಿಯಲ್ಲಿ ಕ್ತಿನ್ ಪ್ರತ್ಯಯ. ಧಾತುವಿಗೆ ಇತ್ವ. ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಚೇತಿಷ್ಠಂ**—ಚಿತೀ ಸಂಜ್ಞಾನೇ. ಧಾತು. ಕರ್ತರಿಯಲ್ಲಿ ತೃಚ್‌ಪ್ರತ್ಯಯ. ಅತಿಶಯೇನ ಚೇತಯಿತಾ ಎಂದು ಅರ್ಥವಿವಕ್ಷಾಮಾಡಿದಾಗ **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ತೃನ್ನಂತದ ಮೇಲೆ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ತೃಚಿಗೆ ಲೋಪ ಇಷ್ಠನ್ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅರತಿಮ್**—ಋ ಗತೌ ಧಾತು. ಇದಕ್ಕೆ ಔಣಾದಿಕ ಅತಿಪ್ರತ್ಯಯ. ಪೂರ್ವಸೂತ್ರದಿಂದ ಚಿತ್ ಎಂಬುದು ಅನುವೃತ್ತವಾಗುವುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಏರಿರೇ**—ಈರ ಪ್ರೇರಣೇ. ಅಥವಾ ಈರ ಗತೌ ಧಾತು ಲಿಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಹವ್ಯವಾಹನಮ್**—ವಹ ಪ್ರಾಪಣೇ. ಧಾತು. **ವಹಶ್ಚ** (ಪಾ. ಸೂ. ೩-೨-೬೪) ಎಂಬುದರಿಂದ ಣಿ ಪ್ರತ್ಯಯ. ಣಿತ್ತಾದುದರಿಂದ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಣ್ವಿ ಪ್ರತ್ಯಯದಲ್ಲಿ ಸರ್ವವೂ ಲೋಪವಾಗುತ್ತದೆ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ವಿಶ್ವವೇದಸಂ**—ವಿಶ್ವಂ ವೇದಃ ಯಸ್ಯ. ಸಃ ವಿಶ್ವವೇದಾಃ ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಯಜತಂ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಭೃಮೃಶಿಯಜಿಪರ್ವಿ**— (ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ದೇವಾಸಃ**—**ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ ಬರುತ್ತದೆ.

**ರಣ್ವಂ**—ರವಿ ಗತೌ. ಧಾತು. **ಇದಿತೋನುಮ್ ಧಾತೋಃ** ಎಂಬುದರಿಂದ ನುಮಾಗಮ. ಇದಕ್ಕೆ ಕಪ್ರತ್ಯಯ. **ಅಟ್‌ಕುಪ್ವಾಙ್**—ಸೂತ್ರದಿಂದ ನಕಾರಕ್ಕೆ ಣತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅವಸೇ**—ಅವ ರಕ್ಷಣೇ. ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಸೂಯುವಃ**—ವಸುಮಾತ್ಮನಃ ಇಚ್ಛಂತಃ ವಸೂಯವಃ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. **ಅತೋ ಲೋಪಃ** ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ. ॥ ೮ ॥

ಇಲ್ಲಿಗೆ ನೂರ ಇಪ್ಪತ್ತೆಂಟನೇ ಸೂಕ್ತ ಮುಗಿದುದು.

## ನೂರ ಇಪ್ಪತ್ತೊಂಭತ್ತನೆಯ ಸೂಕ್ತವು

**ಯಂ ತ್ವಂ ರಥಮಿತ್ಯೇಕಾದಶರ್ಚಂ ತೃತೀಯಂ ಸೂಕ್ತಂ ಪಾರುಚ್ಛೇಪಂ ಸರ್ವಮಾತ್ಯಷ್ಟಮಿತ್ಯುಕ್ತತ್ವಾದತ್ಯಷ್ಟಿಚ್ಛಂದಸ್ಕಂ । ಅನುಕ್ತತ್ವಾದೈಂದ್ರಂ । ಪ್ರಪ್ರಾ ವೋ ಅಸ್ಮೇ ಇತ್ಯಾದಿಕೇ ದ್ವೇ ಅತಿಶಕ್ವರ್ಯೌ ಷಷ್ಟ್ಯಕ್ಷರೋಪೇತತ್ವಾತ್ । ಪಾಹಿ ನ ಇತ್ಯಂತ್ಯಾಷ್ಟಿಃ ಚತುಃಷಷ್ಟ್ಯಕ್ಷರೋಪೇತತ್ವಾತ್ । ಪ್ರ ತದ್ವೋಚೇಯಮಿತಿ ಷಷ್ಠೀಂದುದೇವತ್ಯಾ । ತಥಾ ಚಾನುಕ್ರಮಣಿಕಾ । ಯಂ ತ್ವಮೇಕಾದಶ ಷಷ್ಠ್ಯೈಂದವೀ ಪ್ರಪ್ರಾ ವೋಽತಿಶಕ್ವರ್ಯಾವಷ್ಟಿರಂತ್ಯೇತಿ ॥ ದಶರಾತ್ರಸ್ಯ ಷಷ್ಠೇಽಹನಿ ಮರುತ್ವತೀಯೇ ಶಸ್ತ್ರ ಏತತ್ಸೂಕ್ತಂ ಷಷ್ಠಸ್ಯೇತಿ ಖಂಡೇ ಸೂತ್ರಿತಂ । ಯಂ ತ್ವಂ ರಥಮಿಂದ್ರ ಸ ಯೋ ವೃಷಾ । ಆ. ೮-೧। ಇತಿ ॥**

ಅನುವಾದವು—**ಯಂ ತ್ವಂ ರಥಂ** ಎಂಬ ಈ ಸೂಕ್ತವು ಹತ್ತೊಂಭತ್ತನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪರುಚ್ಛೇಪನು ಋಷಿಯು. ಈ ಋಷಿದೃಷ್ಟ ಸೂಕ್ತಗಳೆಲ್ಲವೂ ಅತ್ಯಷ್ಟಿಛಂದಸ್ಕಗಳೆಂದು ಹೇಳಿರುವುದರಿಂದ ಈ ಸೂಕ್ತವೂ ಅತ್ಯಷ್ಟಿಛಂದಸ್ಕವು. **ಪ್ರಪ್ರಾ ವೋ ಅಸ್ಮೇ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೮,೯ ನೆಯ ಋಕ್ಕುಗಳು) ಅರವತ್ತು ಅಕ್ಷರಗಳಿರುವುದರಿಂದ ಅವು ಅತಿಶಕ್ವರೀ ಎಂಬ ಛಂದಸ್ಸಿನವು. **ಪಾಹಿ ನ ಇಂದ್ರ** ಎಂಬ ಕೊನೆಯ ಋಕ್ಕಿನಲ್ಲಿ ಅರವತ್ತುನಾಲ್ಕು ಅಕ್ಷರಗಳಿರುವುದರಿಂದ ಅದು ಅಷ್ಟಿಃ ಎಂಬ ಛಂದಸ್ಕವು. **ಪ್ರ ತದ್ವೋಚೇಯಂ** ಎಂಬ ಆರನೆಯ ಋಕ್ಕಿಗೆ ಇಂದುವು ದೇವತೆಯು. ಉಳಿದ ಋಕ್ಕುಗಳಿಗೆ ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ—**ಯಂ ತ್ವಮೇಕಾದಶ ಷಷ್ಠ್ಯೈಂದವೀ ಪ್ರಪ್ರಾ ವೋಽತಿಶಕ್ವರ್ಯಾವಷ್ಟಿರಂತ್ಯೇತಿ** ಎಂದು ಹೇಳಿರುವುದು. ದಶರಾತ್ರವೆಂಬ ಯಾಗದ ಆರನೆಯ ದಿವಸದಲ್ಲಿ ಮರುತ್ವತೀಯಶಸ್ತ್ರ ಮಂತ್ರಪಠನಮಾಡುವಾಗ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಷಷ್ಠಸ್ಯ** ಎಂಬ ಖಂಡದಲ್ಲಿ **ಯಂ ತ್ವಂ ರಥಮಿಂದ್ರ ಸ ಯೋ ವೃಷಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧)

## ಸೂಕ್ತ—೧೨೯

ಮಂಡಲ—೧ ॥ ಅನುವಾಕ—೧೯ ॥ ಸೂಕ್ತ—೧೨೯ ॥

ಅಷ್ಟಕ—೨ ॥ ಅಧ್ಯಾಯ—೧ ॥ ವರ್ಗ—೧೬, ೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

॥ ಋಷಿಃ—ಪರುಚ್ಛೇಪೋ ದೈವೋದಾಸಿಃ ॥

॥ ದೇವತಾ—೧-೫, ೭-೧೧, ಇಂದ್ರಃ । ೬, ಇಂದುಃ ॥

॥ ಛಂದಃ—೧-೭, ೧೦, ಅತ್ಯಷ್ಟಿಃ । ೮, ೯, ಅತಿಶಕ್ವರೀ ।

೧೧, ಅಷ್ಟಿಃ ॥

॥ ಸಂಹಿತಾಪಾಠಃ ॥

ಯಂ ತ್ವಂ ರಥಮಿಂದ್ರ ಮೇಧಸಾತಯೇಽಪಾಕಾ ಸಂತಮಿಷಿರ ಪ್ರಣಯಸಿ

ಪ್ರಾನವದ್ಯ ನಯಸಿ ।

ಸದ್ಯಶ್ಚಿತ್ತಮಭಿಷ್ಟಯೇ ಕರೋ ವಶಶ್ಚ ವಾಜಿನಂ ।

ಸಾಸ್ಮಾಕಮನವದ್ಯ ತೂತುಜಾನ ವೇಧಸಾಮಿಮಾಂ ವಾಚಂ ನ ವೇಧಸಾಂ ॥

॥ ಪದಪಾಠಃ ॥

ಯಂ । ತ್ವಂ । ರಥಂ । ಇಂದ್ರ । ಮೇಧಽಸಾತಯೇ । ಅಪಾಕಾ । ಸಂತಂ । ಇಷಿರ । ಪ್ರಽನಯಸಿ । ಪ್ರ ।

ಅನವದ್ಯ । ನಯಸಿ ।

ಸದ್ಯಃ । ಚಿತ್ । ತಂ । ಅಭಿಷ್ಟಯೇ । ಕರಃ । ವಶಃ । ಚ । ವಾಜಿನಂ ।

ಸಃ । ಅಸ್ಮಾಕಂ । ಅನವದ್ಯ । ತೂತುಜಾನ । ವೇಧಸಾಂ । ಇಮಾಂ । ವಾಚಂ । ನ । ವೇಧಸಾಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರೇಷಿರ ಯಜ್ಞಗಮನಶೀಲ ತ್ವಂ ಮೇಧಸಾತಯೇ ಯಜ್ಞಸ್ಯ ದಾನಾಯ ಲಾಭಾಯ ವಾ ಯಂ ಯಜಮಾನಂ ಪ್ರತಿ ರಥಂ ಪ್ರಣಯಸಿ ಪ್ರಾಪಯಸಿ ॥ ದ್ವಿಕರ್ಮಕೋಽಯಂ ॥ ಕೀದೃಶಂ ಯಜಮಾನಂ । ಅಪಾಕಾಪಾಕಮನಲ್ಪಪ್ರಜ್ಞಯಾಧಿಕಾರವಂತಂ । ಪಾಕಃ ಪಕ್ತವ್ಯೋ ಭವತೀತಿ ಯಾಸ್ಕಃ ।

ನಿ. ೩-೧೨ । ಅತ ಏವ ಸಂತಂ ಪಂಡಿತಂ ಸಂತಂ । ಕಿಂಚ ಹೇ ಅನವದ್ಯಾನಿಂದಿತ ಯಂ ಯಜಮಾನಂ ಧನವಿದ್ಯಾದಿನಾ ಪ್ರ ಣಯಸಿ ಪ್ರಕೃಷ್ಟಂ ನಯಸಿ । ತಂ ಯಜಮಾನಂ ಸದ್ಯಶ್ಚಿತ್ ತದಾನೀಮೇವ ತದನು-ಗ್ರಹಕಾಲ ಏವಾಭಿಷ್ಟಯೆ ಆಭಿಮುಖ್ಯೇನ ಯಾಗಾಯಾಭಿಮತಪ್ರಾಪ್ತಯೇ ವಾ ॥ ಅಭಿಪೂರ್ವಾದಿಷೇಃ ಕ್ತಿನ್ । ಶಕಂಧ್ವಾದಿತ್ವಾತ್ಪರರೂಪತ್ವಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ಕರಃ । ಸಮರ್ಥಂ ಕರೋಷಿ ॥ ಲೇಟಿ ವ್ಯತ್ಯಯೇನ ಶಪ್ ॥ ಏವಂ ಕೃತ್ವಾ ಚ ವಾಜಿನಂ ಹವಿರ್ಲಕ್ಷಣಮನ್ನಂ ತದ್ವಂತಂ ವಾ ವಶಃ । ಕಾಮಯಸೇ ಚ ॥ ವಷ್ಟೇರ್ಲೇಟ್ಯಡಾಗಮಃ । ತಿಙಃ ಪರತ್ವಾದನಿಘಾತಃ ॥ ಯಜಮಾನೇನಾ-ಹೂತಃ ಸನ್ ಶೀಘ್ರಮೇವಾಗತ್ಯ ಹವಿಃ ಸ್ವೀಕೃತ್ಯ ಯಾಗಂ ಸಾಧು ನಿರ್ವರ್ತ್ಯ ತಂ ಚಾಭಿಮತಫಲೇನ ಸಂಯೋಜ್ಯ ಪುನರ್ಹವಿಃ ಸ್ವೀಕರೋಷೀತ್ಯರ್ಥಃ । ಹೇ ಇಂದ್ರಾನವದ್ಯಾನಿಂದಿತ ಸರ್ವೈಃ ಸ್ತೂಯಮಾನ ತೂತುಜಾನಾಸ್ಮಾನನುಗ್ರಹೀತುಂ ತ್ವರಮಾಣ ॥ ತುಜೇಃ ಪ್ರೇರಣಾರ್ಥಾಲ್ಲಿಟಃ ಕಾನಚ್ । ತುಜಾದೀನಾಂ ದೀರ್ಘೋಽಭ್ಯಾಸಸ್ಯೇತ್ಯಭ್ಯಾಸಸ್ಯ ದೀರ್ಘತ್ವಂ ॥ ಸ ತ್ವಂ ॥ ಸೋಽಚಿ ಲೋಪೇ ಚೇದಿತಿ ಸಂಹಿ-ತಾಯಾಂ ಸೋರ್ಲೋಪಃ ॥ ವೇಧಸಾಂ ವಿವಿಧಫಲಕರ್ತೄಣಾಂ ಮಧ್ಯೇ ಶ್ರೇಷ್ಠತಯಾ ವೇಧಸಾಂ ಮೇಧಾವಿನಾಮಸ್ಮಾಕಂ ಸಂಬಂಧಿ ಹವಿಃ ಸ್ವೀಕುರ್ವಿತ್ಯರ್ಥಃ । ತತ್ರ ದೃಷ್ಟಾಂತಃ । ಇಮಾಂ ವಾಚಂ ನಾಸ್ಮದೀಯಾಂ ಸ್ತುತಿರೂಪಾಂ ವಾಚಮಿವ । ಸ್ತುತಿಂ ಯಥಾ ಸ್ವೀಕರೋಷಿ ತಥಾ ಹವಿರಪೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಹೇ ಇಂದ್ರ**—ಎಲೈ ಇಂದ್ರನೇ । **ಇಷಿರ**—ಯಾಗಗಳಿಗೆ ಹೋಗುವ ಸ್ವಭಾವವುಳ್ಳ । **ತ್ವಂ**—ನೀನು । **ಮೇಧಸಾತಯೇ**—ಯಜ್ಞದ ದಾನಕ್ಕೋಸ್ಕರ (ಯಜ್ಞಲಾಭಕ್ಕೋಸ್ಕರ) । **ಅಪಾಕಾ**—ಅಧಿಕಜ್ಞಾನಿಯಾದ್ದರಿಂದ ಅಧಿಕಾರಿಯಾದ ಮತ್ತು । **ಸಂತಂ**—ಪಂಡಿತನಾದ । **ಯಂ**—ಯಾವ ಯಜಮಾನನ ಕಡೆಗೆ । **ರಥಂ**—ರಥವನ್ನು । **ಪ್ರ ನಯಸಿ**—ಹೊರಡಿಸುತ್ತೀಯೋ (ಮತ್ತು) । **ಹೇ ಅನವದ್ಯ**—ಎಲೈ ದೋಷರಹಿತನೇ (ಸರ್ವರಿಂದಲೂ ಸ್ತುತ್ಯನೇ) । (**ಯ**—ಯಾವ ಯಜಮಾನನನ್ನು) । **ಪ್ರ ನಯಸಿ**—(ಧನವಿದ್ಯಾದಿಗಳಿಂದ) ಪ್ರಕೃಷ್ಟನನ್ನು ಮಾಡುತ್ತೀಯೋ । **ತಂ**—ಆ ಯಜಮಾನನನ್ನು । **ಚಿತ್**—ಆಗಲೇ । **ಅಭಿಷ್ಟಯೇ**—ಯಾಗಾಭಿಮುಖನಾಗುವುದಕ್ಕೆ (ಅಭೀಷ್ಟಪ್ರಾಪ್ತಿಗೆ) । **ಕರಃ**—ಸಮರ್ಥನನ್ನಾಗಿ ಮಾಡುತ್ತೀಯೆ । (ಹೀಗೆ ಮಾಡಿ) । **ವಾಜಿನಂ**—ಹವಿರ್ಲಕ್ಷಣವಾದ ಅನ್ನವನ್ನು । **ವಶಃ ಚ**—ಅಪೇಕ್ಷಿಸಿಯೂ ಅಪೇಕ್ಷಿಸುತ್ತೀಯೆ । **ಅನವದ್ಯ**—ಎಲೈ ನಿರ್ದುಷ್ಟನೇ (ಮತ್ತು) । **ತೂತುಜಾನ**—(ನಮ್ಮನ್ನನುಗ್ರಹಿಸಲು) ತ್ವರೆಮಾಡುವವನೇ । **ಸಃ**—ಆ (ನೀನು) **ವೇಧಸಾಂ**—ವಿವಿಧಫಲಕರ್ತೃಗಳ (ಮಧ್ಯೇ ಉತ್ತಮನಾದುದರಿಂದ) । **ವೇಧಸಾಂ**—ಮೇಧಾವಿಗಳಾದ । **ಅಸ್ಮಾಕಂ**—ನಮ್ಮ (ಸಂಬಂಧವಾದ ಹವಿಸ್ಸನ್ನು) । **ಇಮಾಂ**—ಈ (ನಮ್ಮ) । **ವಾಚಂ ನ**—ಸ್ತುತಿವಾಕ್ಯವನ್ನೂ । (**ಸ್ವೀಕುರು**—ಸ್ವೀಕರಿಸು).

॥ ಭಾವಾರ್ಥ ॥

ಯಜ್ಞಗಳಿಗೆ ಹೋಗುವ ಸ್ವಭಾವವುಳ್ಳ ಎಲೈ ಇಂದ್ರನೇ, ಅಧಿಕಜ್ಞಾನಿಯೂ ಪಂಡಿತನೂ ಆದ ಯಾವ ಯಜಮಾನನ ಹತ್ತಿರಕ್ಕೆ ರಥವನ್ನು ನಡೆಯಿಸುತ್ತೀಯೋ, ದೋಷರಹಿತನಾದ ಇಂದ್ರನೇ, ಮತ್ತು ಯಾವನಿಗೆ (ಧನವಿದ್ಯಾದಿಗಳಿಂದ) ಪ್ರಾಕೃಷ್ಟ್ಯವನ್ನುಂಟುಮಾಡುತ್ತೀಯೋ, ಅಂಥವನನ್ನು ಕೂಡಲೇ ಯಾಗೋದ್ಯುಕ್ತನಾಗಲು

(ಅಭೀಷ್ಟ ಫಲ ಪಡೆಯಲು) ಸಮರ್ಥನನ್ನು ಮಾಡುತ್ತಿ ; ನಿರ್ದುಷ್ಟನೂ, ನಮ್ಮನ್ನು ಅನುಗ್ರಹಿಸುವ ವಿಷಯದಲ್ಲಿ ಆತುರವುಳ್ಳವನೂ ಆದ ನೀನು, ವಿವಿಧ ಫಲದಾತೃಗಳಲ್ಲಿ ಶ್ರೇಷ್ಠನಾದುದರಿಂದ, ನಮ್ಮ ಸ್ತುತಿಯನ್ನು (ಸ್ವೀಕರಿಸು)ವಂತೆ ನಮ್ಮ ಹವಿಸ್ಸನ್ನು (ಸ್ವೀಕರಿಸು).

## English Translation.

Indra, frequenter of sacrifices, quickly enable him to attain his desires, to whom you repair in your car to receive the oblation ; and for whom, as he is mature (in understanding) and devout, you who are without fault, entertain regard. Accept his offering, for you who are without fault, are prompt to favour us (among) the pious (offerers of oblations), as (you accept) this our praise.

॥ ವಿಶೇಷವಿಷಯಗಳು ॥

**ಮೇಧಸಾತಯೇ—ಯಜ್ಞಸ್ಯ ದಾನಾಯ ಲಾಭಾಯ ವಾ** । ನಿರುಕ್ತಕಾರರು ಮೇಧಶಬ್ದಕ್ಕೆ ಯಜ್ಞವೆಂಬ ಅರ್ಥವನ್ನು (ನಿ. ೩-೧೯) ಹೇಳಿರುವುದರಿಂದ ಸಾಯಣರು ಅದೇ ಅರ್ಥವನ್ನು ಅನುಸರಿಸಿ ಇಂದ್ರನು ಯಜ್ಞಮಾಡುವವನ ಯಜ್ಞವನ್ನು ನೆರವೇರಿಸುವುದಕ್ಕಾಗಿಯೂ ಅಥವಾ ಹವಿಸ್ಸುಗಳನ್ನು ತಾನು ಹೊಂದುವುದಕ್ಕಾಗಿಯೂ (ಯಜ್ಞಕ್ಕಾಗಿ) ಯಾಗಶಾಲೆಗೆ ತನ್ನ ರಥವನ್ನು ಒಯ್ಯುವನು ಎಂದು ಅರ್ಥ.

ನಿರುಕ್ತಕಾರರು ಇಂದ್ರ ಶಬ್ದದ ಅರ್ಥವನ್ನು ನಾನಾ ವಿಧವಾಗಿ ಹೇಳಿರುತ್ತಾರೆ.

**ಇಂದ್ರಃ—ಇರಾಂ ದೃಣಾತೀತಿ ವಾ** ವೃಷ್ಟಿಯನ್ನು ಸುರಿಸುವುದರಿಂದ ವ್ರೀಹ್ಯಾದಿಧಾನ್ಯಗಳ ಬೀಜಗಳು ನೆನೆಯುವುವು ಅವುಗಳಿಂದ ಅಂಕುರವು ಉತ್ಪನ್ನವಾಗುವಂತೆ ಮಾಡುವವನು. **ಇರಾಂ ದದಾತೀತಿ ವಾ—** ಮಳೆಯನ್ನು ಸುರಿಸುವುದರಿಂದ ಅನ್ನವನ್ನು ಕೊಡುವವನು, **ಇರಾಂ ದಧಾತಿ ಇತಿ ವಾ** ಅನ್ನವನ್ನು ಪ್ರಾಣಿಗಳಿಗಾಗಿ ಕೊಡುವವನು ಅಥವಾ ಧರಿಸಿರುವವನು, **ಇರಾಂ ಧಾರಯತೆ, ದಾರಯತೆ ಇತಿ ವಾ** (ಮೇಲಿನ ಅರ್ಥವೇ ಈ ವಾಕ್ಯಾರ್ಥವು) **ಇಂದವೇ ದ್ರವತೀತಿ ವಾ** ಸೋಮಪಾನಕ್ಕಾಗಿ ಬೇಗ ಬರುವವನು. **ಇಂದೌ ರಮತ ಇತಿ ವಾ** ಸೋಮಪಾನದ ವಿಷಯದಲ್ಲಿ ಸಂತೋಷದಿಂದ ಇರುವವನು. **ಇಂಧೇ ಭೂತಾನೀತಿ ವಾ ತದ್ಯದೇನಂ ಪ್ರಾಣೈಃ ಸಮೈಂಧಂಸ್ತದಿಂದ್ರಸ್ಯ ಇಂದ್ರತ್ವಮಿತಿ ವಿಜ್ಞಾಯತೇ** ಎಂಬ ಬ್ರಾಹ್ಮಣವಾಕ್ಯದಲ್ಲಿ ಉಕ್ತವಾದ ರೀತಿಯಿಂದ ಪ್ರಾಣಿಗಳಲ್ಲಿ ಅಧ್ಯಾತ್ಮರೂಪದಿಂದ ಇರುವವನಾಗಿ ಪ್ರಾಣಿಗಳನ್ನು ಕಾಂತಿಯುಳ್ಳವರನ್ನಾಗಿ ಮಾಡುತ್ತಾ ವೃದ್ಧಿಗೊಳಿಸುವವನು ಅಥವಾ ಪ್ರಾಣಗಳಿಂದ ಕಾಂತಿಯನ್ನು ಹೊಂದಿಸಲ್ಪಟ್ಟವನು ಇಂದ್ರನು ಎಂದು ಅರ್ಥವನ್ನು ವಿವರಿಸಿರುವ ಯಾಸ್ಕರು ಇಂದ್ರಶಬ್ದಾರ್ಥದ ನಿರ್ವಚನದಲ್ಲಿ ಇರುವ ಮತಾಂತರವನ್ನು ಹೇಳಿರುವರು.

**ಇದಂ ಕರಣಾದಿತ್ಯಾಗ್ರಯಣಃ** ಆಗ್ರಯಣ ಎಂಬ ಆಚಾರ್ಯರು ಇದನ್ನೆಲ್ಲವನ್ನೂ ಇವನು ನಿರ್ಮಾಣ ಮಾಡುವುದರಿಂದ ಇಂದ್ರನು ಎಂದು ಹೇಳಿರುವನು. **ಇದಂ ದರ್ಶನಾದಿತ್ಯೌಪಮನ್ಯವಃ** ಉಪಮನ್ಯು ಎಂಬ (ಆಚಾರ್ಯರ) ಋಷಿಯ ಮತವನ್ನು ಒಪ್ಪುವವರು ಇದೆಲ್ಲವನ್ನೂ ರಕ್ಷಿಸುವುದಕ್ಕಾಗಿ ನೋಡುವವನು ಇಂದ್ರನು, **ಇಂದತೇರ್ವೈಶ್ವರ್ಯಕರ್ಮಣಃ ಇಂದ್ರಶ್ಶತ್ರೂಣಾಂ ದಾರಯಿತಾ ವಾ ದ್ರಾವಯಿತಾ ವಾ ಆದರಯಿತಾ**

**ಚ ಯಜ್ವನಾಂ** ಶತ್ರುಗಳನ್ನು ಸೀಳುವವನು, ಅಥವಾ ಶತ್ರುಗಳನ್ನು ಓಡಿಸುವವನು, ಯಾಗಮಾಡುವರನ್ನು ಆದರಿಸುವವನು ಎಂದು ಅರ್ಥವನ್ನು ಹೇಳುವರು.

**ಅಪಾಕಾ— ಅಪಾಕಂ ಅನಲ್ಪಪ್ರಜ್ಞ್ಯೋಧಿಕಾರವಂತಂ ।** ಈ ಪ್ರಕಾರವಾದ ಮಹತ್ತ್ವಪೂರಿತನಾದ ಇಂದ್ರನು ಬಹಳ ಮೇಧಾವಿಯಾಗಿರುವ ಯಜ್ಞಮಾಡುವ ಅಧಿಕಾರವುಳ್ಳವನಾದ ಯಜಮಾನನಿಗೆ ಧನ ಮತ್ತು ವಿದ್ಯಾ ಇವುಗಳನ್ನು ಅನುಗ್ರಹಿಸಿ ಗೌರವವುಳ್ಳವನನ್ನಾಗಿ ಮಾಡುತ್ತಾನೆ ಎಂದು ಅರ್ಥ.

**ಯತ್ರಾ ಸುಪರ್ಣಾ ಅಮೃತಸ್ಯ ಭಾಗಮನಿಮೇಷಂ ವಿದಥಾಭಿಸ್ವರಂತಿ ।**
**ಇನೋ ವಿಶ್ವಸ್ಯ ಭುವನಸ್ಯ ಗೋಪಾಃ ಸ ಮಾ ಧೀರಃ ಪಾಕಮತ್ರಾ ವಿವೇಶ ॥**
(ಋ. ಸಂ. ೧-೧೬೪-೨೧)

ಈ ಋಕ್ಕನ್ನು ಯಾಸ್ಕರು ಉದಹರಿಸಿ **ಪಾಕಃ ಪಕ್ತವ್ಯೋ ಭವತಿ** (ನಿ. ೩-೧೨) ಎಂದು ವ್ಯಾಖ್ಯಾನಮಾಡಿರುವರು. ದುರ್ಗಾಚಾರ್ಯರು **ಪಾಕಃ ಪಕ್ತವ್ಯಃ ಪಕ್ತವ್ಯಪ್ರಜ್ಞಃ ಅಸಮ್ಯಕ್‌ದರ್ಶೀ** ಸರಿಯಾದ ತಿಳುವಳಿಕೆ ಇಲ್ಲದಿರುವವನು. **ವಿಪಕ್ವಪ್ರಜ್ಞಃ—ಸಮ್ಯಗ್ದರ್ಶೀ ಸರ್ವಜ್ಞಃ** ಚೆನ್ನಾಗಿ ತಿಳಿದು ಇರುವ ಸರ್ವಜ್ಞನು ವಿಪಕ್ವನೆನಿಸಿರುವನು ಎಂದು ಅರ್ಥವನ್ನು ಹೇಳಿರುತ್ತಾರೆ.

**ಅಭಿಷ್ಟಯೇ—ಅಭಿಮುಖ್ಯೇನ ಯಾಗಾಯ ಅಭಿಮತಪ್ರಾಪ್ತಯೇ ವಾ ।** ಇಂದ್ರನು ಯಜ್ಞ ಮಾಡುವ ಯಜಮಾನನನ್ನು ಯಾಗಮಾಡುವುದಕ್ಕೆ ಪ್ರವೃತ್ತನಾಗುವ ಸಾಮರ್ಥ್ಯವುಳ್ಳವನನ್ನಾಗಿ ಮಾಡುವನು. ಅಥವಾ ಯಜಮಾನನು ತನ್ನ ಇಷ್ಟವನ್ನು ಹೊಂದಲು ಶಕ್ಯವಾದ ಕಾರ್ಯದಲ್ಲಿ ದಕ್ಷನಾಗಿರುವ ಯಜಮಾನನು ಯಾಗಮಾಡಲು ಶಕ್ತಿಯುಳ್ಳವನನ್ನಾಗಿ ಮಾಡುವನು ಎಂದು ಅರ್ಥ.

**ವಾಜಿನಂ—ಹವಿರ್ಲಕ್ಷಣಮನ್ನಂ ತದ್ವಂತಂ ವಾ ವಶಃ—ಕಾಮಯಸೇ ಚ ।** ಇಂದ್ರನು ಯಜಮಾನನಿಂದ ಯಾಗಕ್ಕಾಗಿ ಆಹೂತನಾಗಿ ಯಜ್ಞಕ್ಕೆ ಬೇಗನೆ ಬಂದು, ಹವಿಸ್ಸನ್ನು ಸ್ವೀಕರಿಸಿ, ಯಾಗವು ಪೂರ್ತಿಯಾಗುವಂತೆ ಅನುಗ್ರಹವನ್ನು ಮಾಡಿ, ಯಜಮಾನನಿಗೆ ಬೇಕಾದ ಇಷ್ಟಗಳನ್ನೂ ನೆರವೇರಿಸಿಕೊಡುವುದರಿಂದ ಅವನು ಪುನಃ ಯಜ್ಞಮಾಡುವುದರಲ್ಲಿ ಉದ್ಯುಕ್ತನಾಗುವಂತೆ ಮಾಡುತ್ತಾನೆ ಎಂದು ವಿವರಿಸಿದೆ.

**ವಾಜ** ಶಬ್ದವು **ಅನ್ನ**ನಾಮಗಳಲ್ಲಿಯೂ (ನಿ. ೩-೯) ವಾಜೇ ಎಂದು **ಸಂಗ್ರಾಮ** ನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ.

**ಹಿರಣ್ಯಸ್ತೂಪಸ್ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ ।**
**ಏವಾ ತ್ವಾರ್ಚನ್ನವಸೇ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ ಜಾಗರಾಹಂ ॥**
(ಋ ಸಂ. ೧೦-೧೪೯-೫)

ಇಲ್ಲಿ **ವಾಜೇ** ಎಂಬ ಶಬ್ದಕ್ಕೆ **ಅನ್ನೇ ಸಂಸ್ಕೃತೇ ಹವಿಷಿ** ಸಂಸ್ಕೃತವಾದ ಯಜ್ಞದಲ್ಲಿ ಉಪಯೋಗಿಸುವ ಹವಿಸ್ಸೆಂದೂ

**ಪಾವಕಾ ನಸ್ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ ವಷ್ಟು ಧಿಯಾ ವಸುಃ ॥**
(ಋ. ಸಂ. ೧-೩-೧೦)

ಇಲ್ಲಿ—**ವಾಜೇಭಿರ್ವಾಜಿನೀವತೀ—ಅನ್ನೇನ ಹವಿಷಾ, ಉದಕೇನ ವಾ ತದ್ವತೀ** ಅನ್ನ, ಹವಿಸ್ಸು, ಉದಕ, ಇವುಗಳಿಂದ ಯುಕ್ತವಾಗಿರುವುದು ಎಂದೂ ದುರ್ಗಾಚಾರ್ಯರು ಅರ್ಥವನ್ನು ವರ್ಣಿಸಿದ್ದಾರೆ.

**ಅನವದ್ಯ— ಅನಿಂದಿತ, ಸರ್ವೈಃ ಸ್ತೂಯಮಾನ ।** ಇಂದ್ರನು ನಿಂದೆಗೆ ಆಸ್ಪದನಲ್ಲದವನು, ಎಲ್ಲರಿಂದಲೂ ಸ್ತುತಿಗೆ ಅರ್ಹನಾದವನು ಎಂದು ಅರ್ಥಮಾಡಿ, ಸಂಬೋಧಿಸಿದೆ.

**ತೂತುಜಾನ— ಅಸ್ಮಾನನುಗೃಹೀತುಂ ತ್ವರಮಾಣ । ತೂತುಜಾನ** ಶಬ್ದವು ಕ್ಷಿಪ್ರನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇಂದ್ರನು ತನ್ನ ಆಶ್ರಿತರಾದ ನಮ್ಮನ್ನು ಅನುಗ್ರಹಿಸು(ಬೇಕಾಗಿರು)ವಲ್ಲಿ ತ್ವರೆಯಿಂದ ಬರುವವನೆಂದು ಅರ್ಥ. ತುಜ ಧಾತುವಿಗೆ ಪ್ರೇರಣಾರ್ಥದಲ್ಲಿ ಪ್ರತ್ಯಯವು ಬಂದು ತೂತುಜಾನ ಎಂದಾಗಿದೆ.

**ವೇಧಸಾಂ—** ಎಂಬ ಪದವು ಎರಡು ಸಾರಿ ಪ್ರಯುಕ್ತವಾಗಿದೆ ಮೊದಲನೆಯ **ವೇಧಸಾಂ** ಎಂಬ ಪದಕ್ಕೆ ಅನೇಕ ವಿಧವಾದ ಫಲಗಳನ್ನು ನಿರ್ಮಿಸಲು ಶಕ್ತರಾದವರ ಮಧ್ಯದಲ್ಲಿ ಎಂದೂ, ಎರಡನೆಯ **ವೇಧಸಾಂ** ಎಂಬ ಪದಕ್ಕೆ ಮೇಧಾವಿಗಳು ಎಂದೂ ಅರ್ಥಮಾಡಿದೆ. ಇಂದ್ರನು ಮೇಧಾವಿಗಳಾದ (ನಮ್ಮ ಹವಿಸ್ಸನ್ನು) ನಾವು ಅರ್ಪಿಸುವ ಹವಿಸ್ಸನ್ನು ಸ್ವೀಕರಿಸಲಿ ಎಂದು ಪ್ರಾರ್ಥಿಸಿದೆ.

**ಇಮಾಂ ವಾಚಂ ನ— ಅಸ್ಮದೀಯಾಂ ಸ್ತುತಿರೂಪಾಂ ವಾಚಮಿವ** ಇಂದ್ರನು ನಾವು ಸ್ತುತಿಸುವ ವಾಕ್ಕುಗಳನ್ನು ಸ್ವೀಕರಿಸುವಂತೆ ಹವಿಸ್ಸುಗಳನ್ನೂ ಸ್ವೀಕರಿಸಲಿ ಎಂದು ಹೋಲಿಸಿದೆ.

**ವಾಚಂ— ವಾಕ್** ಶಬ್ದವು ಐವತ್ತೇಳು ವಾಙ್ನಾಮಗಳಲ್ಲಿ (ನಿ. ೨-೧೩) ಉಕ್ತವಾಗಿದೆ. ಇಲ್ಲಿ ಸ್ತೋತ್ರವೆಂದು ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮೇಧಸಾತಯೇ—** ಮೇಧಸ್ಯ ಸಾತಿಃ ಮೇಧಸಾತಿಃ. ಷಣು ದಾನೇ. ಧಾತು. ಕ್ತಿನ್ ಪ್ರತ್ಯಯ. **ಜನಸನಖನಾಂ ಸಞ್ಝಲೋಃ** (ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. ಪೂರ್ವಪದಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಅಪಾಕಾ— ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಸಂತಂ—** ಅಸ ಭುವಿ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಅಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಇಷಿರ—** ಇಷ ಗತೌ ಧಾತು. ಔಣಾದಿಕ ರಕ್ ಪ್ರತ್ಯಯ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪ್ರಣಯಸಿ—** ಣೀಞ್ ಪ್ರಾಪಣೇ. ಧಾತು. ಇದು ದ್ವಿಕರ್ಮಕ. ಲಟ್ ಮಧ್ಯಮಪುರುಷ ಏಕವಚನಾಂತ ರೂಪ. **ಉಪಸರ್ಗಾದಸಮಾಸೇऽಪಿ ಣೋಪದೇಶಸ್ಯ** ಎಂಬುದರಿಂದ ಧಾತು ನಕಾರಕ್ಕೆ ಣತ್ವ.

**ಅನವದ್ಯ—** ನ ಅವದ್ಯಃ ಅನವದ್ಯಃ. ಸಂಬುದ್ಧ್ಯಂತರೂಪ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಅಭಿಷ್ಟಯೇ—** ಅಭಿ ಉಪಸರ್ಗ ಪೂರ್ವಕವಾದ ಇಷ ಧಾತುವಿಗೆ ಕ್ತಿನ್ ಪ್ರತ್ಯಯ. ಷಕಾರ ನಿಮಿತ್ತವಾಗಿ ಅದಕ್ಕೆ ಷ್ಟುತ್ವ. ಅಭಿ+ಇಷ್ಟಿ ಎಂದಿರುವಾಗ **ಶಕಂಧ್ವಾದಿಷು ಪರರೂಪಂ ವಾಚ್ಯಮ್** ಎಂಬ ವಾರ್ತಿಕದಿಂದ

ಪರರೂಪ ಬರುತ್ತದೆ. **ತಾದೌ ಚ ನಿತಿ ಕೃತ್ಯತೌ** (ಪಾ ಸೂ. ೬-೨-೫೦) ಎಂಬುದರಿಂದ ಗತಿಗೆ (ಅಭಿ) ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಕರಃ**—ಡುಕೃಞ್ ಕರಣೇ. ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಲೇಟೋಽಡಾಟೌ** ಎಂಬುದರಿಂದ ಅಡಾಗಮ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಚೇತ್ ಎಂಬುದರ ಸಂಬಂಧವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ವಶಃ**—ವಶ ಕಾಂತೌ. ಧಾತು. ಅದಾದಿ ಹಿಂದಿನಂತೆ ಲೇಟಿನಲ್ಲಿ ಸಿಪಿಗೆ ಅಡಾಗಮ, ಇಕಾರಲೋಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಂದಿನಂತೇ ಧಾತುಸ್ವರ ಉಳಿಯುತ್ತದೆ.

**ವಾಜಿನಂ**—ವಾಜಮಸ್ಯಾಸ್ತಿ ಇತಿ ವಾಜೀ. **ಅತ ಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಪ್ರತ್ಯಯ ಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ತೂತುಜಾನ**—ತುಜ ಪ್ರೇರಣೇ. ಧಾತು. ಇದಕ್ಕೆ ಲಿಟ್ ಬಂದಾಗ **ಲಿಟಃ ಕಾನಜ್ವಾ** ಎಂಬುದರಿಂದ ಅದಕ್ಕೆ ಕಾನಚಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. **ತುಜಾದೀನಾಂ ದೀರ್ಘೋಽಭ್ಯಾಸಸ್ಯ** ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಸಂಬುದ್ಧಿಯಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

**ವಾಚಂ**—ವಚ ಪರಿಭಾಷಣೇ. ಧಾತು. **ಕ್ವಿಬ್ವಚಿ**—ಎಂಬುದರಿಂದ ಕ್ವಿಪ್, ದೀರ್ಘ. ॥ ೧ ॥



॥ ಸಂಹಿತಾಪಾಠಃ ॥

**ಸ ಶ್ರುಧಿ ಯಃ ಸ್ಮಾ ಪೃತನಾಸು ಕಾಸು ಚಿದ್ದಕ್ಷಾಯ್ಯ ಇಂದ್ರ ಭರಹೂತಯೇ**
**ನೃಭಿರಸಿ ಪ್ರತೂರ್ತಯೇ ನೃಭಿಃ ।**
**ಯಃ ಶೂರೈಃ ಸ್ವಃ ಸನಿತಾ ಯೋ ವಿಪ್ರೈರ್ವಾಜಂ ತರುತಾ ।**
**ತಮೀಶಾನಾಸ ಇರಧಂತ ವಾಜಿನಂ ಪೃಕ್ಷಮತ್ಯಂ ನ ವಾಜಿನಂ ॥ ೨ ॥**

॥ ಪದಪಾಠಃ ॥

ಸಃ । ಶ್ರುಧಿ । ಯಃ । ಸ್ಮ । ಪೃತನಾಸು । ಕಾಸು । ಚಿತ್ । ದಕ್ಷಾಯ್ಯಃ । ಇಂದ್ರ । ಭರಽಹೂತಯೇ ।
ನೃಽಭಿಃ । ಅಸಿ । ಪ್ರಽತೂರ್ತಯೇ । ನೃಽಭಿಃ ।
ಯಃ । ಶೂರೈಃ । ಸ್ವ೧ರಿತಿ ಸ್ವಃ । ಸನಿತಾ । ಯಃ । ವಿಪ್ರೈಃ । ವಾಜಂ । ತರುತಾ ।
ತಂ । ಈಶಾನಾಸಃ । ಇರಧಂತ । ವಾಜಿನಂ । ಪೃಕ್ಷಂ । ಅತ್ಯಂ । ನ । ವಾಜಿನಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸ ವಕ್ಷ್ಯಮಾಣಗುಣವಿಶಿಷ್ಟಸ್ತ್ವಂ ಶ್ರುಧಿ । ಅಸ್ಮದಾಹ್ವಾನಂ ಸ್ತೋತ್ರಂ ವಾ ಶೃಣು॥ ಪೇರ್ಥಿಭಾವಃ ॥ ಯಃ ಸ್ಮ ಯಃ ಖಲು ತ್ವಂ ನೃಭಿರ್ಮನುಷ್ಯೈರೇವ ಸದ್ಭಿಃ ಪಶ್ಚಾದ್ದೇವತ್ವಮಾಪನ್ನೈರ್ಮರುದ್ಭಿಃ । ಪುನಸ್ತ ಏವ ವಿಶೇಷ್ಯಂತೇ । ನೃಭಿಃ ಸಂಗ್ರಾಮನಯನಶೀಲೈಃ । ಇಂದ್ರಸ್ಯ ಮರುತಾಂ ಸಾಹಾಯ್ಯಮಿಂದ್ರೋ ಮರುದ್ಭಿಃ । ತೈ. ಸಂ. ೬ ೫ ೫–೧ । ಮರುತೋ ಹೈನಂ ನಾಜಹುಃ । ಐ. ಬ್ರಾ. ೩–೨೦ । ಇತ್ಯಾದಿಷು ಪ್ರಸಿದ್ಧಂ । ತೈಃ ಸಹಿತಃ ಸನ್ ಕಾಸು ಚಿತ್ಪೃತನಾಸು ಸರ್ವಾಸು ಸ್ಪರ್ಧೇಷ್ವಪಿ ಸಂಗ್ರಾಮೇಷು ಭರಹೂತಯೇ ಭರಣವಿಶಿಷ್ಟಾಹ್ವಾನಯುಕ್ತಾಯ ಪ್ರತೂರ್ತಯೇ ಪ್ರಕೃಷ್ಟಹಿಂಸನಾಯ । ಯದ್ವಾ । ಭರಹೂತಯೇ ಶೂರೋ ಭವ ಪ್ರಹರೇತ್ಯೇವಮಾದಿಭರಣಯುಕ್ತಾಹ್ವಾನಾಯ ಪ್ರತೂರ್ತಯೇ ಚ ಶೂರಾಣಾಂ ಪ್ರಕೃಷ್ಟವಧಾಯ ಚ । ದಕ್ಷಾಯ್ಯೋಽಸಿ ಪ್ರವರ್ಧನಶೀಲೋಽಸಿ । ಯದ್ವಾ । ನೃಭಿರ್ನೇತೃಭಿರ್ಯಜಮಾನೈಃ ಪ್ರಾರ್ಥಿತಃ ಸನ್ ಪ್ರತೂರ್ತಯೇ ಶತ್ರೂಣಾಂ ಪಾಪಾನಾಂ ವಾ ಪ್ರಕೃಷ್ಟಹಿಂಸನಾಯ ದಕ್ಷಾಯ್ಯೋಽಸಿ ಸಮರ್ಥೋಽಸಿ । ಕಿಂಚ ಯಸ್ತ್ವಂ ಶೂರೈಃ ಶೌರ್ಯೋಪೇತೈರ್ಮರುದ್ಭಿರನ್ಯೈರ್ಭಟೈರ್ವಾ ಸಹಿತಃ ಸನ್ ಸ್ವಃ ಸ್ವಯಮೇವ ಸನಿತಾ ಸಂಗ್ರಾಮಮಯಸ್ಯಾನ್ಯಸ್ಯ ವಾ ಮನೀಷಿತಸ್ಯ ಸನಿತಾ ಸಂಭಕ್ತಾಸಿ । ಸತ್ಯಪಿ ತೇಷಾಂ ಸಾಹಿತ್ಯೇಽನ್ಯನೈರಪೇಕ್ಷ್ಯೇಣೈವ ತರುತಾಸೀತ್ಯರ್ಥಃ ॥ ತರತೇಸ್ತೃನಿ ಗ್ರಸಿತಸ್ಕಭಿತೇತ್ಯಾದೌ ನಿಪಾತ್ಯತೇ ॥ ಯಶ್ಚ ತ್ವಂ ವಿಪ್ರೈರ್ಮೇಧಾವಿಭಿರ್ಋತ್ವಿಗ್ಭಿಃ ಸ್ತುತಃ ಸನ್ ವಾಜಂ ತರುತಾ ತೇಭ್ಯೋಽನ್ನಸ್ಯ ದಾತಾಸಿ । ವಿಪ್ರೈರ್ಮರುದ್ಭಿಃ ಸಹಿತ ಇತಿ ಸಂಬಂಧಃ । ತಂ ತಾದೃಶಂ ವಾಜಿನಂ ಗಮನವಂತಂ ಪೃಕ್ಷಂ ಹವಿರ್ಲಕ್ಷಣಾನ್ನವಂತಮಿಂದ್ರಮೀಶಾನಾಸಃ ಸಮ್ಯಗಭ್ಯರ್ಥಯಿತುಂ ಸಮರ್ಥಾ ಋತ್ವಿಜ ಇರಧಂತ । ಸಂರಾಧಂತಿ । ಸೇವಂತೇ । ತತ್ರ ದೃಷ್ಟಾಂತಃ । ವಾಜಿನಂ ವೇಜನವಂತಂ ಗಮನವಂತಂ ಪೃಕ್ಷಂ ಘಾಸಾದ್ಯನ್ನವಂತಮತ್ಯಂ ನಾಶ್ವಮಿವ । ತಂ ಯಥಾ ಸಮರ್ಥಾಃ ಸ್ವಾಮಿಘಾಸಪ್ರದಾನಾದಿನಾ ಪೋಷಯಂತಿ ತದ್ವತ್ ॥ ಅತ್ಯ ಇತ್ಯಶ್ವನಾಮ ಅತ್ಯೋ ಹಯ ಇತಿ ತನ್ನಾಮಸು ಪಠಿತತ್ವಾತ್ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಸಃ**—ವಕ್ಷ್ಯಮಾಣ ಗುಣವಿಶಿಷ್ಟನಾದ ನೀನು । **ಶ್ರುಧಿ**—(ನಮ್ಮ ಸ್ತುತಿಯನ್ನು) ಕೇಳು ಅಥವಾ (ನಮ್ಮ ಆಹ್ವಾನವನ್ನು) ಮನ್ನಿಸು । **ಯಃ ಸ್ಮ**—ಯಾವ ನೀನೇ । **ನೃಭಿಃ**—ಮನುಷ್ಯ

ರಾಗಿದ್ದ (ಅನಂತರ ದೇವತ್ವವನ್ನು ಪಡೆದ) । **ನೃಭಿಃ**—(ಯುದ್ಧದಲ್ಲಿ) ನಾಯಕರಾದ (ಮರುತ್ತುಗಳಿಂದ ಸಹಿತನಾಗಿ) । **ಕಾಸು ಚಿತ್ ಪೃತನಾಸು**—ನಾನಾ ಯುದ್ಧಗಳಲ್ಲಿ । **ಭರಹೂತಯೇ**—ಪ್ರೋತ್ಸಾಹಕರವಾದ ಕೂಗುಗಳಿಂದ ಕೂಡಿದ । **ಪ್ರತೂರ್ತಯೇ**—ಅತ್ಯಂತ ಹೆಚ್ಚಾದ (ಶತ್ರು) ಹಿಂಸೆಗೆ । [**ಭರಹೂತಯೇ**—ಪ್ರೋತ್ಸಾಹಕವಾಗಿ ಕೂಗುವುದಕ್ಕೂ ಮತ್ತು । **ಪ್ರತೂರ್ತಯೇ**—ಶತ್ರುಗಳನ್ನು ವಧಿಸುವುದಕ್ಕೂ] । **ದಕ್ಷಾಯ್ಯಃ ಅಸಿ**—ಸಮರ್ಥನಾಗಿದ್ದೀಯೆ । ಅಥವಾ । [**ನೃಭಿಃ**—ಯಾಗಕರ್ತೃಗಳಿಂದ (ಪ್ರಾರ್ಥಿತನಾಗಿ) । **ಪ್ರತೂರ್ತಯೇ**—ಶತ್ರು ಅಥವಾ ಪಾಪಗಳನ್ನು ನಾಶಪಡಿಸಲು । **ದಕ್ಷಾಯ್ಯಃ ಅಸಿ**—ಸಮರ್ಥನಾಗಿದ್ದೀಯೇ] । (**ಕಿಂಚ**—ಮತ್ತೂ) । **ಯಃ (ತ್ವಂ)**—ಯಾವ (ನೀನು) । **ಶೂರೈಃ**—ಶೂರರಾದ (ಮರುತರಿಂದ ಅಥವಾ ಇತರ ಭಟರಿಂದ ಸಹಿತನಾಗಿದ್ದರೂ) । **ಸ್ವಃ**—ಸ್ವಯಂ । **ಸನಿತಾ**—(ಯುದ್ಧದಲ್ಲಿ ಜಯವನ್ನು ಅಥವಾ ಇತರ ಅಭೀಷ್ಟವನ್ನು) ಅನುಗ್ರಹಿಸಬಲ್ಲವನೋ (ಮತ್ತೂ) । **ಯಃ (ತ್ವಂ)**—ಯಾವ (ನೀನು) । **ವಿಪ್ರೈಃ**—ಮೇಧಾವಿಗಳಾದ ಋತ್ವಿಜರಿಂದ (ಸ್ತುತನಾಗಿ) ಅಥವಾ ಮೇಧಾವಿಗಳಾದ ಮರುತರಿಂದ ಯುಕ್ತನಾಗಿ । **ವಾಜಂ**--ಅನ್ನವನ್ನು (ಆ ಋತ್ವಿಜರಿಗೆ) **ತರುತಾ**—ಕೊಡತಕ್ಕವನೋ । **ತಂ**—ಅಂತಹ । **ವಾಜಿನಂ**—ಗಮನಶೀಲನಾದ ಮತ್ತು । **ಪೃಕ್ಷಂ**—ಹವಿರ್ಲಕ್ಷಣಾನ್ನವಿಶಿಷ್ಟನಾದ ಇಂದ್ರನನ್ನು । **ಈಶಾನಾಸಃ**—ಪ್ರಾರ್ಥಿಸುವುದರಲ್ಲಿ ಸಮರ್ಥರಾದ ಋತ್ವಿಜರು । **ವಾಜಿನಂ**—ವೇಗಶಾಲಿಯೂ । (**ಪೃಕ್ಷಂ**--ಹುಲ್ಲು ಮೊದಲಾದ ಆಹಾರ ವಿಶಿಷ್ಟವೂ) ಆದ । **ಅತ್ಯಂ**—ಅಶ್ವವನ್ನು । (**ಈಶಾನಾಸಃ**) **ನ**—(ಸರ್ಮರ್ಥರಾದವರು) ಪೋಷಿಸುವಂತೆ । **ಇರಧಂತೆ**—ಆರಾಧಿಸುತ್ತಾರೆ (ಸೇವಿಸುತ್ತಾರೆ.)

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮ ಸ್ತುತಿಯನ್ನು ಕೇಳು (ಆಹ್ವಾನವನ್ನು ಮನ್ನಿಸು); ಮೊದಲು ಮನುಷ್ಯರಾಗಿದ್ದು, ಅನಂತರ ದೇವತ್ವವನ್ನು ಪಡೆದವರೂ, ಸಂಗ್ರಾಮನಾಯಕರೂ ಆದ ಮರುತರಿಂದ ಮಾಡಲ್ಪಡುವ, ಪ್ರೋತ್ಸಾಹಕರವಾದ ಕೂಗುಗಳಿಂದ ಶತ್ರುನಾಶಕ್ಕೆ ಸಮರ್ಥನಾಗುತ್ತೀಯೆ; ಶೂರರಾದ (ಮರುತರಿಂದ ಅಥವಾ ಯೋಧರಿಂದ ಸಹಿತನಾಗಿ) ಅಥವಾ ನೀನೇ (ಇತರರ ಸಹಾಯವಿಲ್ಲದಿದ್ದರೂ) ಸ್ವತಃ (ಯುದ್ಧದಲ್ಲಿ) ಜಯಪ್ರದನಾಗುತ್ತಿ ; ಮೇಧಾವಿಗಳಾದ ಋತ್ವಿಜರಿಂದ ಪ್ರಾರ್ಥಿತನಾಗಿ ಅನ್ನದಾನಮಾಡುತ್ತಿ ; ಇಂತಹ ಗುಣವಿಶಿಷ್ಟನೂ, ಯಾಗಗಳಿಗೆ ಹೋಗುವವನೂ, ಹವೀರೂಪ ಅನ್ನದಾತೃವೂ ಆದ ನಿನ್ನನ್ನು, ಪ್ರಾರ್ಥನಾಚತುರರಾದ ಋತ್ವಿಜರು, ವೇಗಶಾಲಿಯಾದ ಅಶ್ವವನ್ನು ಹುಲ್ಲು ಮೊದಲಾದವುಗಳಿಂದ ಶೂರರು ಸೇವಿಸುವಂತೆ, ಸೇವಿಸುತ್ತಾರೆ.

English Translation·

Hear our invocation, Indra : you, who in various battles (associated, with the Maruts, are animated through their encouragement ; (and are able), with the Maruts, to destroy (your foes): (for you are)he, who, (aided) by heroes, are of yourself the giver (of victory); or, (when praised) by the pious, the giver of food, and whom the lords (of prayer) celebrate, as swift-moving and eager (for sacrificial food), like a fleet courser (eager for forage).

॥ ವಿಶೇಷವಿಷಯಗಳು ॥

**ನೃಭಿಃ—ಮನುಷ್ಯೈರೇವ ಸದ್ಭಿಃ ಪಶ್ಚಾತ್ ದೇವತ್ವಮಾಪನ್ನೈಃ ಮರುದ್ಭಿಃ। ನೃಭಿಃ—ಸಂಗ್ರಾಮ ನಯನಶೀಲೈಃ ಇಂದ್ರಸ್ಯ ಮರುತಾಂ ಸಾಹಾಯ್ಯಂ ಇಂದ್ರೋ ಮರುದ್ಭಿಃ**(ತೈ ಸಂ. ೬-೫-೫-೧) **ಮರುತೋ ಹೈನಂ ನಾಜಹುಃ** (ಐ. ಬ್ರಾ. ೩-೨೦) **ಇತ್ಯಾದಿಷು ಪ್ರಸಿದ್ಧಂ। ನರಃ** ಎಂಬ ಶಬ್ದವು ಅಶ್ವನಾಮಗಳಲ್ಲಿಯೂ (ನಿ. ೨-೨೭) ಮನುಷ್ಯನಾಮಗಳಲ್ಲಿಯೂ (ನಿ. ೩-೭) ಪಠಿತವಾಗಿದೆ. ಇಂದ್ರನು, ಮನುಷ್ಯರಾಗಿದ್ದು ಯಜ್ಞವನ್ನು ಮಾಡಿ ಅದರ ಫಲರೂಪವಾದ ದೇವಭಾವವನ್ನು ಹೊಂದಿರುವ ಮರುದ್ದೇವತೆಗಳೊಡನೆ ಕೂಡಿರುವನು ಅಥವಾ ಯುದ್ಧಮಾಡು ವುದರಲ್ಲಿ ತನಗೆ ಸಹಾಯಕರಾಗಿರುವ ಮರುದ್ದೇವತೆಗಳೊಡನೆ ವೃದ್ಧಿಹೊಂದುತ್ತಿರುವನು ಎಂದು ಅರ್ಥ. ತೈತ್ತಿರೀಯ ಸಂಹಿತೆಯ **ಇಂದ್ರೋ ಮರುದ್ಭಿಃ** ಎಂಬ ವಾಕ್ಯದಿಂದಲೂ, **ಮರುತೋ ಸ್ನೈನಂ ಜಹುಃ** ಎಂಬ ಐತರೇಯ ಬ್ರಾಹ್ಮಣವಾಕ್ಯದಿಂದಲೂ ಮರುದ್ದೇವತೆಗಳು ಇಂದ್ರನಿಗೆ ಸಹಾಯಮಾಡುವ ವಿಷಯವು ಪ್ರಸಿದ್ಧವಾಗಿದೆ.

**ಪೃತನಾಸು ಭರಹೂತಯೇ ಪ್ರತೂರ್ತಯೇ ದಕ್ಷಾಯ್ಯಃ-ಸರ್ವಾಸು ಪ್ರೌಢೇಷ್ವಪಿ ಸಂಗ್ರಾಮೇಷು ಭರಣವಿಶಿಷ್ಟಾಹ್ವಾನಯುಕ್ತಾಯ ಪ್ರಕೃಷ್ಟಹಿಂಸನಾಯ ಯುದ್ಧಾ ಶೂರೋ ಭವ ಪ್ರಹರ ಇತ್ಯೇವಮಾದಿ ಭರಣಯುಕ್ತಾಹ್ವಾನಾಯ ಶೂರಾಣಾಂ ಪ್ರಕೃಷ್ಟವಧಾಯ ಚ ಪ್ರವರ್ಧನಶೀಲಃ ಅಸಿ।** ಪ್ರಬಲವಾಗಿರುವ ಯುದ್ಧಗಳು ನಡೆಯುವ ಪ್ರದೇಶಗಳಲ್ಲಿ ನಮ್ಮನ್ನು ರಕ್ಷಿಸು, ಎಂದೂ, ಶತ್ರುಗಳನ್ನು ಹಿಂಸೆಮಾಡು ಎಂದೂ ಇತರರಿಂದ ಇಂದ್ರನು ಕರೆಯಲ್ಪಡುವನು ಎಂದೂ ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ಇನ್ನೊಂದು ಅರ್ಥದಲ್ಲಿ ಎಲೈ ಇಂದ್ರನೇ ನೀನು ಶೂರನಾಗಿರು. ಶತ್ರುಗಳನ್ನು ನಿಗ್ರಹಿಸು, ಎಂದು ಎಲ್ಲರ ರಕ್ಷಣೆಗೂ ಅರ್ಹವಾದ ಶೂರರಾದ ಸೈನಿಕರ ಆಹ್ವಾನಕ್ಕೂ, ಶತ್ರುಗಳನ್ನು ಬಹಳವಾಗಿ ಕೊಲ್ಲುವುದಕ್ಕೂ ಕೂಡ ಇಂದ್ರನು ತಕ್ಕ ಸಮರ್ಥನಾಗಿ ವೃದ್ಧಿಯನ್ನು ಹೊಂದುತ್ತಿರುವ ಸ್ವಭಾವವುಳ್ಳವನೆಂದು ವರ್ಣಿಸಿದೆ.

**ನೃಭಿಃ ಪೃತನಾಸು** ಎಂಬ ಈ ವಾಕ್ಯಕ್ಕೆ ಸಾಯಣರು ಇನ್ನೊಂದು ವಿಧವಾದ ಅರ್ಥವನ್ನು ಹೇಳಿದ್ದಾರೆ.

ಯಜ್ಞಮಾಡುವ ಯಜಮಾನರ ಪ್ರಾರ್ಥನೆಯನ್ನು ಅನುಸರಿಸಿ ಶತ್ರುಗಳನ್ನೂ ಪಾಪಮಾಡುವವರನ್ನೂ ನಾಶಮಾಡುವ ಕಾರ್ಯದಲ್ಲಿ ಇಂದ್ರನು ಸಮರ್ಥನಾಗಿರುವನು ಎಂದು ಇಂದ್ರನ ಮಾಹಾತ್ಮ್ಯವು ವರ್ಣಿತವಾಗಿರುತ್ತದೆ.

ಯಾಸ್ಕರು ವಿವರಿಸಿರುವ ಇಂದ್ರಶಬ್ದಾರ್ಥದ ವಿವರಣೆಯನ್ನು ಅನುಸರಿಸಿ ದುರ್ಗಾಚಾರ್ಯರು— **ಇರಾದಾರಸ್ಸನ್ನಿಂದ್ರಃ ಇತಿ ಪರೋಕ್ಷೇಣೋಚ್ಯತೇ** ಪ್ರತ್ಯಕ್ಷವಾಗಿ ಇಂದ್ರನು ತನ್ನ ಆಕಾರವನ್ನು ತೋರಿಸದಿದ್ದರೂ ಕಾರ್ಯರೂಪದಿಂದ ತಿಳಿಯಲ್ಪಡುವನು. ದೇವತಾವಾಚಕ ಶಬ್ದಗಳೆಲ್ಲದರಲ್ಲಿಯೂ ಆಯಾಯ ದೇವತೆಗಳು ಬೋಧ್ಯರಾದಾಗ್ಯೂ ಅವರನ್ನು ಸೇವಿಸುವವರಿಗೆ ಆಯಾಯ ದೇವತೆಗಳು ಪರೋಕ್ಷದಲ್ಲಿ (ಕಾಣಿಸದಂತೆ ಇದ್ದುಕೊಂಡು) ಅವರವರ ಕಾರ್ಯಗಳನ್ನು ಸಾಧಿಸಿಕೊಡುವರು. ಮತ್ತು ದೇವತೆಗಳು ತಮ್ಮ ತಮ್ಮ ತಾತ್ವಿಕವಾದ ರೂಪ, ಮಹಿಮೆ ಇವುಗಳನ್ನು ಮರೆಮಾಡಿಕೊಂಡು ಇರುವರು. **ಪರೋಕ್ಷಪ್ರಿಯಾಃ ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ** ಇದರಿಂದಲೇ ದೇವತೆಗಳು ಪ್ರತ್ಯಕ್ಷವಾಗುವ ತಮ್ಮ ನಿಜರೂಪದಲ್ಲಿರಲು (ಕಾಣಿಸಿಕೊಳ್ಳಲು) ಇಷ್ಟವುಳ್ಳವರಾಗಿರುವುದಿಲ್ಲ. ಪರೋಕ್ಷ ವಾಗಿರುವುದರಲ್ಲಿಯೇ ಇವರ ಆಸಕ್ತಿಯು ಹೆಚ್ಚಾಗಿರುವುದು ಎಂದು ಶ್ರುತಿಯೂ ಹೇಳುತ್ತದೆ. ಜ್ಞಾನಿಗಳು ದೇವತೆಗಳ ತಾತ್ವಿಕವಾದ ಈ ರಹಸ್ಯವನ್ನು ತಿಳಿದು, ಆಯಾಯ ದೇವತಾವಾಚಕವಾದ ಶಬ್ದಗಳ ವ್ಯುತ್ಪತ್ತಿಯಿಂದ ಆಯಾಯ

ದೇವತಾಸ್ವರೂಪ, ಗುಣ, ಮಹಿಮೆ, ಕಾರ್ಯ ಇವುಗಳನ್ನು ಚೆನ್ನಾಗಿ ತಿಳಿದುಕೊಂಡು ಆಯಾಯ ದೇವತೆಗಳನ್ನು ಸೇವಿಸಿ, ಧ್ಯಾನಮಾಡಿ, ತಾದಾತ್ಮ್ಯದಿಂದ ತಮ್ಮ ತಮ್ಮ ಇಷ್ಟಗಳನ್ನು ಸಾಧಿಸುವರು. ಇದರಿಂದ ದೇವತೆಗಳೆಲ್ಲರಿಗೂ ಆಧ್ಯಾತ್ಮಿಕ, ಆಧಿದೇವತಾ ಸ್ವರೂಪವೂ ಇರುವುವು. ಇವುಗಳು ಆಯಾಯ ದೇವತಾ ಉಪಾಸಕರಿಗೆ ಅಭಿವ್ಯಕ್ತವಾಗುವ ದನ್ನು ಯಾಸ್ಕರು ವಿವರಿಸಿರುವರು. ಇಂದ್ರನೂ ಕೂಡ ಈ ವಿಷಯದಲ್ಲಿ ಬಹಳ ಮಟ್ಟಿಗೆ ಇದ್ದುಕೊಂಡು ರಕ್ಷಣೆಯೇ ಮೊದಲಾದ ಕಾರ್ಯಗಳನ್ನು ಆಚರಿಸುತ್ತಿರುವನು ಎಂದು ಇಂದ್ರನ ಸ್ವರೂಪ, ಮತ್ತು ಮಾಹಾತ್ಮ್ಯವನ್ನು ವರ್ಣಿಸಿದ್ದಾರೆ.

**ಯಃ ಶೂರೈಃ ಸ್ವಃ ಸನಿತಾ ತರುತಾ**—ಇಂದ್ರನು ಶೂರರಾದ ಮರುದ್ದೇವತೆಗಳೊಡನೆಯಾಗಲಿ, ಅಥವಾ ಬೇರೆ ಸೈನಿಕರೊಡನೆಯಾಗಲಿ ಕೂಡಿಕೊಂಡು ತಾನಾಗಿಯೇ ಯುದ್ಧದಲ್ಲಿಯಾಗಲಿ, ಬೇರೆಯ ರೀತಿಯಿಂದಲಾಗಲಿ ತನ್ನ ಇಷ್ಟವನ್ನು ಸಾಧಿಸುವನು. ಇವನಿಗೆ ಸಹಾಯಮಾಡುವುದಕ್ಕಾಗಿ ಸಹಾಯಸಂಪತ್ತಿಯು ಬಹಳವಾಗಿದ್ದರೂ ಅದನ್ನು ಇಂದ್ರನು ಅವಶ್ಯವಾಗಿರಬೇಕೆಂದು ಅಪೇಕ್ಷಿಸದೆ ತಾನೊಬ್ಬನೇ ಕಾರ್ಯಗಳನ್ನು ಸಾಧಿಸುವ ಮಹಿಮೆಯುಳ್ಳವ ನಾಗಿರುವನು ಎಂದು ಅರ್ಥವನ್ನು ಹೇಳಿದೆ.

**ವಿಪ್ರೈಃ ವಾಜಂ ತರುತಾ—ಮೇಧಾವಿಭಿಃ ಋತ್ವಿಗ್ಭಿಃ ಸ್ತುತಸ್ಸನ್ ತೇಭ್ಯೋ ಅನ್ನಸ್ಯ ದಾತಾ ಅಸಿ ವಿಪ್ರೈಃ ಮರುದ್ಭಿಃ ಇತಿ ಸಂಬಂಧಃ। ವಿಪ್ರ** ಶಬ್ದವು (ನಿ. ೩-೧೯) ಮೇಧಾವಿನಾಮಗಳಲ್ಲಿ ಪಠಿತವಾಗಿದೆ. ವಿಪ್ರೈಃ ಎಂದ ಪದವನ್ನು ಆವೃತ್ತಿಮಾಡಿ ಒಂದು ಪದಕ್ಕೆ ಮೇಧಾವಿಗಳಾದ ಋತ್ವಿಜರೆಂತಲೂ ಇನ್ನೊಂದು ಪದಕ್ಕೆ ಮರು ದ್ದೇವತೆಗಳೆಂದಲೂ ಅರ್ಥಮಾಡಿದೆ. ಇಂದ್ರನು ಮರುದ್ದೇವತೆಗಳೊಡನೆ ಕೂಡಿದವನಾಗಿ ಋತ್ವಿಗ್ಜನರಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ಆ ಋತ್ವಿಗ್ಜನರಿಗೆ ಅನ್ನವನ್ನು ಅನುಗ್ರಹಿಸುವನು ಎಂದು ವರ್ಣಿಸಿದೆ.

**ಪೃಕ್ಷಂ—ಹವಿರ್ಲಕ್ಷಣಾನ್ನವಂತಂ ಇಂದ್ರಂ।** ಪೃಕ್ಷಶಬ್ದವು ಅನ್ನ ನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ ಇಂದ್ರನಿಗೆ ವಿಶೇಷಣವಾಗಿ ಪ್ರಯುಕ್ತವಾಗಿದೆ. ಇಂದ್ರನು ಹವಿಸ್ಸಿನ ರೂಪವಾದ ಅನ್ನವುಳ್ಳವನು ಎಂದು ಅರ್ಥ.

**ಅತ್ಯಂ ನ—ಅಶ್ವಮಿವ।** ಅತ್ಯಶಬ್ದವು ಅಶ್ವನಾಮಗಳಲ್ಲಿ (ನಿ. ೨-೨೭) ಪಠಿತವಾಗಿದೆ. **ನ** ಎಂಬ ಪದವು ಉಪಮಾವಾಚಕಗಳಲ್ಲಿ ಪಠಿತವಾಗಿದೆ **ನೇಂದ್ರಂ ದೇವಮಮಂಸತ** (ಋ. ಸಂ. ೩) ಎಂಬಲ್ಲಿ ಪ್ರತಿಷೇಧಾರ್ಥ ದಲ್ಲಿಯೂ,

**ಕೃತ್ಸು ಸೀತಾಸೋ ಯುಧ್ಯಂತೇ ದುರ್ಮದಾಸೋ ನ ಸುರಾಯಾಂ।**
**ಊಧರ್ನ ನಗ್ನಾ ಜರಂತೇ॥**

(ಋ. ಸಂ. ೮-೨-೧೨)

ಇಲ್ಲಿ ಉಪಮಾವಾಚಕವಾಗಿಯೂ ಪ್ರಯುಕ್ತವಾಗಿರುವುದೆಂದು ನಿರುಕ್ತಕಾರರ ವ್ಯಾಖ್ಯಾನವನ್ನು ಅನುಸರಿಸಿ ಅತ್ಯಂ ನ ಎಂಬಲ್ಲಿ ನ ಎಂಬ ಪದವು ಉಪಮಾವಾಚಕವಾಗಿದೆ. ಅಶ್ವ ಇವ—ಕುದುರೆಯ ಹಾಗೆ ಎಂದು ಅರ್ಥ.

**ವಾಜಿನಂ ಪೃಕ್ಷಂ ಅತ್ಯಂ ನ—ವೇಜನವಂತಂ ಘಾಸಾದ್ಯನ್ನವಂತಂ ಅಶ್ವಮಿವ। ಈ ವಾಕ್ಯವು ವಾಜಿನಂ ಪೃಕ್ಷಂ ಈಶಾನಾಸಃ** ಎಂಬ ವಾಕ್ಯಕ್ಕೆ ಉಪಮಾನವಾಕ್ಯವಾಗಿ ಪ್ರಯುಕ್ತವಾಗಿದೆ. ಹವಿಸ್ಸಿನ ರೂಪವಾದ

ಅನ್ನವುಳ್ಳವನಾಗಿ ಸಂಚರಿಸುವ ಇಂದ್ರನನ್ನು ಸೇವಿಸಲು ಸಮರ್ಥರಾದ ಋತ್ವಿಜರು ರುಚಿಕರವಾದ, ಹುಲ್ಲನ್ನು ಕೊಡುವುದರಿಂದ ವೇಗಶಾಲಿಯಾದ ಅಶ್ವವನ್ನು ಲೋಕದಲ್ಲಿ ಜನರು ಪೋಷಿಸುವ ಹಾಗೆ ಇಂದ್ರನನ್ನು ಸೇವಿಸುವರು ಎಂದು ಹೋಲಿಸಿದೆ. ವೇದದಲ್ಲಿ ಈ ಪ್ರಯೋಗವು ಇರುವುದರಿಂದ ಹೀನೋಪಮೆಗೆ ಅವಕಾಶಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಶ್ರುಧಿ**—ಶ್ರು ಶ್ರವಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಶ್ರುಶೃಣು**—(ಪಾ. ಸೂ. ೬-೪-೧೦೨) ಎಂಬುದರಿಂದ ಹಿಗೆ ಧಿಭಾವ. ಛಾಂದಸವಾಗಿ ವಿಕರಣಕ್ಕೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ಮ**—**ನಿಪಾತಿತಸ್ಯ ಚ** ಎಂಬುದರಿಂದ ಸಂಹಿತಾವಲ್ಲಿ ದೀರ್ಘ ಬರುತ್ತದೆ.

**ದಕ್ಷಾಯ್ಯಃ**—ದಕ್ಷ ವೃದ್ಧೌ. ಧಾತು. **ಶ್ರುದಕ್ಷಿಸ್ಪೃಹಿ**—(ಉ. ಸೂ. ೩-೩೭೬) ಎಂಬುದರಿಂದ ಆಯ್ಯ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಭರಹೂತಯೇ**—ಭರಾ ಹೂತಿಃ ಯಸ್ಯಾಂ ಸಾ ಭರಹೂತಿಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಪ್ರತೂರ್ತಯೇ**—ತುರ್ವೀ ಹಿಂಸಾಯಾಂ ಧಾತು. ಇದಕ್ಕೆ **ಸ್ತ್ರಿಯಾಂಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ **ಉಪಧಾಯಾಶ್ಚ** (ಪಾ. ಸೂ. ೭-೧-೧೦೧) ಎಂಬುದರಿಂದ ಉಕಾರಕ್ಕೆ ದೀರ್ಘ. **ಲೋಪೋವ್ಯೋರ್ವಲಿ** ಎಂಬುದರಿಂದ ವಕಾರ ಲೋಪಪ್ರಾಪ್ತವಾದರೆ ಅದಕ್ಕೆ ಬಾಧಕವಾಗಿ **ರಾಲ್ಲೋಪಃ** (ಪಾ. ಸೂ. ೬-೪-೨೧) ಎಂಬುದರಿಂದ ಧಾತುವಿನ ವಕಾರಕ್ಕೆ ಲೋಪ ಬರುತ್ತದೆ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ.

**ಶೂರೈಃ**—ಶು ಎಂಬುದು ಸೌತ್ರಧಾತು. ಶು ಗತೌ. ಧಾತು. **ಶು ಸಿಚಿಮೀನಾಂ ದೀರ್ಘಶ್ಚ** (ಉ. ಸೂ. ೨-೧೮೩) ಎಂಬುದರಿಂದ ಕ್ರನ್ ಪ್ರತ್ಯಯ. ದೀರ್ಘ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸ್ವಃ**—**ನ್ಯಙ ಸ್ವರೌ ಸ್ವರಿತೌ** (ಫಿ ಸೂ. ೭೪) ಎಂಬುದರಿಂದ ಸ್ವರಿತವಾಗುತ್ತದೆ.

**ಸನಿತಾ**—ಷಣ ಸಂಭಕ್ತೌ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಅದಕ್ಕೆ ಇಡಾಗಮ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತರುತಾ**—ತ್ರ್ಯ ಪ್ಲವನತರಣಯೋಃ ಧಾತು ಇದಕ್ಕೆ ಕರ್ತರಿಯಲ್ಲಿ ತೃನ್ ಬಂದಾಗ **ಗ್ರಸಿತಸ್ಕಭಿತ ಸ್ತಭಿತ**—(ಪಾ. ಸೂ. ೭-೨-೩೪) ಎಂಬುದರಿಂದ ತರುತೃ ಎಂದು ನಿಪಾತಿತವಾಗಿದೆ.

**ಈಶಾನಾಸಃ**—ಈಶ ಐಶ್ವರ್ಯೇ. ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಇದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ ೭-೧-೫೦) ಎಂಬುದರಿಂದ ಆದಕ್ಕೆ ಅಸುಕಾಗಮ.

**ಇರಧಂತೆ**—ಇರಧ ಎಂಬುದು ಸೌತ್ರಧಾತು. ಸೇವನಾರ್ಥದಲ್ಲಿ ಪ್ರಯುಕ್ತವಾಗಿದೆ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ದಸ್ಮೋ ಹಿ ಷ್ಮಾ ವೃಷಣಂ ಪಿನ್ವಸಿ ತ್ವಚಂ ಕಂ ಚಿದ್ಯಾವೀರರರುಂ ಶೂರ ಮರ್ತ್ಯಂ ಪರಿವೃಣಕ್ಷಿ ಮರ್ತ್ಯಂ ।
ಇಂದ್ರೋತ ತುಭ್ಯಂ ತದ್ದಿವೇ ತದ್ರುದ್ರಾಯ ಸ್ವಯಶಸೇ ।
ಮಿತ್ರಾಯ ವೋಚಂ ವರುಣಾಯ ಸಪ್ರಥಃ ಸುಮೃಳೀಕಾಯ ಸಪ್ರಥಃ ॥ ೩ ॥

॥ ಪದಪಾಠಃ ॥

ದಸ್ಮಃ । ಹಿ । ಸ್ಮ । ವೃಷಣಂ । ಪಿನ್ವಸಿ । ತ್ವಚಂ । ಕಂ । ಚಿತ್ । ಯಾವೀಃ । ಅರರುಂ । ಶೂರ । ಮರ್ತ್ಯಂ । ಪರಿಽವೃಣಕ್ಷಿ । ಮರ್ತ್ಯಂ ।
ಇಂದ್ರ । ಉತ । ತುಭ್ಯಂ । ತತ್ । ದಿವೇ । ತತ್ । ರುದ್ರಾಯ । ಸ್ವಽಯಶಸೇ ।
ಮಿತ್ರಾಯ । ವೋಚಂ । ವರುಣಾಯ । ಸಽಪ್ರಥಃ । ಸುಽಮೃಳೀಕಾಯ । ಸಽಪ್ರಥಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ದಸ್ಮೋ ಹಿ । ಶತ್ರೂಣಾಮುಪಕ್ಷಪಣಕರ್ತಾ ಖಲು । ಅತ ಏವ ಕಾರಣಾದ್ವೃಷಣಂ ಸ್ವತೋ ವರ್ಷಣಶೀಲಂ ತ್ವಚಂ ಸಂವರಣವಂತಂ ಪುಟಬಂಧನವದುದಕವೇಷ್ಟನವಂತಂ ಕಂ ಚಿಜ್ಜಲಧಾರಿಣಂ ಮೇಘಂ ಪಿನ್ವಸಿ । ನಿರ್ಭಿದ್ಯ ಸೇಚಯಸಿ । ಕಿಂಚ ಮರ್ತ್ಯಂ ಮರ್ತ್ಯವದರರುಮರಣಶೀಲಂ ಗಮನಸ್ವಭಾವಂ ಕಂಚಿನ್ಮೇಘಂ ಹೇ ಶೂರ ವಿಕ್ರಾಂತ ಯಾವೀಃ । ಮಿಶ್ರಯಸಿ ॥ ಯೌತೇಶ್ಛಾಂದಸೇ ಲುಙಿ ಛಾಂದಸೋಽಡಭಾವಃ ॥ ಅವರ್ಷಣೇನ ಗಚ್ಛಂತಂ ಬಲಾನ್ನಿಗೃಹ್ಯ ವರ್ಷಯಸೀತ್ಯರ್ಥಃ ।

ಯಥಾ ಶೂರಃ ಕಶ್ಚಿದ್ಬಲವಂತಂ ಗಚ್ಛಂತಂ ವೈರಿಣಂ ನಿಗೃಹ್ಯ ಸ್ವೀಕರೋತಿ ತದ್ವದಿತ್ಯರ್ಥಃ । ತಥಾ ಮರ್ತ್ಯಂ ಮರಣಶೀಲಂ ಶೀರ್ಯಮಾಣಸ್ವಭಾವಂ ನಿರುದಕಂ ಕಂಚಿನ್ಮೇಘಂ ಪರಿವೃಣಕ್ಷಿ । ಸರ್ವತೋ ವರ್ಜಯಸಿ । ಔದಾಸೀನ್ಯಂ ಕರೋಷೀತ್ಯರ್ಥಃ । ಹೇ ಇಂದ್ರ ತತ್ತಾದೃಶಂ ಕರ್ಮ ವರ್ಷಣರೂಪಂ ಸಪ್ರಥಃ ಸರ್ವತಃ ಪೃಥು ಯಥಾ ಭವತಿ ತಥಾ ತುಭ್ಯಂ ವೋಚಂ । ಬ್ರವೀಮಿ । ಇಂದ್ರ ಏವ ವಿಶೇಷ್ಯತೇ । ಸ್ವಯಶಸೇ ಸ್ವಕೀಯಯಶೋಯುಕ್ತಾಯ ।। ತಥಾ ದಿವ ಉತ ತ್ವದಾಶ್ರಯಭೂತಾಯೈ ದ್ಯುಲೋಕದೇವತಾಯಾ ಅಪಿ ತತ್ತಾದೃಶಂ ಕರ್ಮ ವೋಚಂ । ಬ್ರವೀಮಿ । ಉತಶಬ್ದೋಽಪಿಶಬ್ದಾರ್ಥಃ । ವರ್ಷಣಕರ್ಮಣೋ ದ್ಯುದೇವತಾಯಾ ಆನುಕೂಲ್ಯಾತ್ತಸ್ಯಾ ಅಪಿ ವಚನಂ ಯುಕ್ತಂ । ತಥಾ ರುದ್ರಾಯ ಜಗತಾಂ ದುಃಖದ್ರಾವಯಿತ್ರೇ ರೋದನಶೀಲಾಯ ವಾಗ್ನಯೇ ತದ್ವೋಚಂ । ರುದ್ರೋ ವೈ ಕ್ರೂರೋ ಯದಯಮಗ್ನಿರಿತಿ ಶ್ರುತೇ ರುದ್ರತ್ವಂ । ಸೋಽರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ । ತೈ. ಸಂ. ೧-೫-೧-೧ । ಇತಿ ಶ್ರುತೇ ರೋದನಸ್ವಭಾವತ್ವಂ ಪ್ರಸಿದ್ಧಂ । ತಸ್ಯ ಚಾಹುತಿದ್ವಾರಾ ವೃಷ್ಟ್ಯನುಕೂಲತ್ವಾತ್ತಸ್ಯಾಪಿ ಕಥನಂ ಯುಕ್ತಂ । ಸ್ವಯಶಸ ಇತ್ಯಸ್ಯ ರುದ್ರಾಯೇತ್ಯನೇನ ವಾ ಸಂಬಂಧಃ ಸಂನಿಹಿತತ್ವಾದ್ಯೋಗ್ಯತ್ವಾಚ್ಚ । ಸ್ವಕೀಯಯಶೋಯುಕ್ತಾಯಾಗ್ನಯ ಇತ್ಯರ್ಥಃ । ತಥಾ ಮಿತ್ರಾಯಾಹರಭಿಮಾನಿದೇವತಾಯೈ ತದ್ವೋಚಂ । ವರುಣಾಯ ರಾತ್ರ್ಯಭಿಮಾನಿದೇವತಾಯೈ ತದ್ವೋಚಂ । ಅಹೋರಾತ್ರೇ ವೈ ಮಿತ್ರಾವರುಣೌ । ತಾಂ. ೨೫-೧೦-೧೦ । ಅಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ ವರ್ಷತಿ । ತೈ. ಸಂ. ೨-೧-೭-೩ । ಇತಿ ತಥಾ ಮೈತ್ರಂ ವಾ ಅಹರ್ವಾರುಣೀ ರಾತ್ರಿರಿತ್ಯಾದಿಶ್ರುತಿಭ್ಯೋ ಮಿತ್ರಾವರುಣಯೋರಹೋರಾತ್ರಾಭಿಮಾನಿದೇವತ್ವಂ । ಅತ ಏವ ಶ್ರುತೇರ್ವೃಷ್ಟಿಪ್ರದಾತೃತ್ವಾತ್ತಾಭ್ಯಾಮಪಿ ಪ್ರಥನಂ ಯುಕ್ತಂ । ಸುಮೃಳೀಕಾಯ ಶೋಭನಸುಖಯಿತ್ರೇ ಪ್ರಜಾನಾಂ ! ಏತತ್ಸರ್ವತ್ರ । ಸಂಬಧ್ಯತೇ । ಉಕ್ತೇಭ್ಯೋ ದೇವೇಭ್ಯಃ ಸಪ್ರಥಃ ಸರ್ವತಃ ಪೃಥ್ವಿತಿವಿಸ್ತೀರ್ಣಂ ಯಥಾ ಭವತಿ ತಥಾ ತದ್ವರ್ಷಣಕರ್ಮ ಬ್ರವೀಮಿ ॥

॥ ಪ್ರತಿಪದಾರ್ಥ ॥

(**ಹೇ ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು) । **ದಸ್ಮ ಹಿ**—ಶತ್ರುನಾಶಕನಷ್ಟೇ । (ಆದುದರಿಂದಲೇ) **ವೃಷಣಂ**—ಮಳೆಯನ್ನು ಸುರಿಸುವ ಸ್ವಭಾವವುಳ್ಳ (ಮತ್ತು) । **ತ್ವಚಂ** – (ನೀರಿನ) ಆವರಣ (ಚರ್ಮ) ಯುಕ್ತವಾದ **ಕಂ ಚಿತ್**—ಯಾವುದೋ ಒಂದು ಮೇಘವನ್ನು । **ಪಿನ್ವಸಿ ಸ್ಮ**—(ಭೇದಿಸಿ) ವೃಷ್ಟಿಗರೆಯುವಂತೆ ಮಾಡುತ್ತಿ । **ಮರ್ತ್ಯಂ**—ಮನುಷ್ಯನಂತೆ । **ಅರರುಂ**—(ಮಳೆಸುರಿಯದೇ) ಹೋಗುವ (ಒಂದು ಮೇಘವನ್ನು) । **ಶೂರ**—ಎಲೈ ಶೂರನೇ । **ಯಾವೀಃ**—ಮಿಶ್ರಣಮಾಡುತ್ತೀಯೇ (ಮಳೆ ಸುರಿಸುವಂತೆ ಮಾಡುತ್ತಿ) । **ಮರ್ತ್ಯಂ**—ಮರಣ ಸ್ವಭಾವವಾದ (ಉದಕರಹಿತವಾದ) । **ಮರ್ತ್ಯಂ**—ಮನುಷ್ಯನನ್ನು ಹೇಗೋ ಹಾಗೆ (ಒಂದು ಮೇಘವನ್ನು) । **ಪರಿ ವೃಣಕ್ಷಿ**—(ಉದಾಸೀನವಾಗಿ) ಬಿಟ್ಟುಬಿಡುತ್ತೀ । **ಹೇ ಇಂದ್ರ**—ಎಲೈ ಇಂದ್ರನೇ । **ತತ್**—ಆ ವೃಷ್ಟಿ ಕರ್ಮವನ್ನು । **ಸಪ್ರಥಃ**—ಸರ್ವತ್ರ ಪ್ರಸಿದ್ಧವಾಗುವಂತೆ । **ತುಭ್ಯಂ**—ನಿನಗೆ । **ವೋಚಂ**—ಹೇಳುತ್ತೇನೆ । (**ತಥಾ**—ಹಾಗೆಯೇ) । **ಸ್ವಯಶಸೇ**—ಸ್ವಕೀಯಯಶಸ್ಸಿನಿಂದಕೂಡಿರುವ ನಿನಗೂ । **ದಿವೇ ಉತ**—ದ್ಯುಲೋಕಾಭಿಮಾನಿ ದೇವತೆಗೂ । **ತತ್**—ಆ ಕರ್ಮವನ್ನು । **ವೋಚಂ**—ಹೇಳುತ್ತೇನೆ । **ಸ್ವಯಶಸೇ**—ಸ್ವಕೀಯಯಶೋ

ಯುಕ್ತನಾದ । **ರುದ್ರಾಯ**—ಜಗತ್ತಿನ ದುಃಖಪರಿಹಾರಕನಾದ ಅಗ್ನಿಗೆ (ರುದ್ರನಿಗೆ) । (**ವೋಚಂ**—ಹೇಳುತ್ತೇನೆ) । **ಮಿತ್ರಾಯ** (ಅಹರಭಿಮಾನಿದೇವತೆಯಾದ) ಮಿತ್ರನಿಗೂ । **ವರುಣಾಯ**—(ರಾತ್ರ್ಯಭಿಮಾನಿ ದೇವತೆಯಾದ) ವರುಣನಿಗೂ । (**ವೋಚಂ**—ಹೇಳುತ್ತೇನೆ) । **ಸುಮೃಳೀಕಾಯ**—(ಪ್ರಜೆಗಳಿಗೆ) ಸುಖಸಂತೋಷಕಾರಕನಾದ (ಮೇಲೆ ಹೇಳಿದ ಪ್ರತಿಯೊಬ್ಬ ದೇವತೆಗೂ) । **ಸಪ್ರಥಃ**—ಸರ್ವತ್ರ ಪ್ರಸಿದ್ಧಿಯಾಗುವಂತೆ । (**ವೋಚಂ**—ಹೇಳುತ್ತೇನೆ).

॥ ಭಾವಾರ್ಥ ॥

ಶತ್ರು ನಾಶಕನಾದ ಇಂದ್ರನೇ, ನೀನು ವೃಷ್ಟ್ಯಾವರಕವಾದ ಮೇಘದ ಚರ್ಮವನ್ನು ಭೇದಿಸುತ್ತೀಯೇ; ಗಮನಶೀಲವಾದ ಮೇಘವನ್ನು ಅತಿಕ್ರಮಿಸಿ (ಮಳೆಗರಸುತ್ತೀಯೆ); ಉದಕರಹಿತವಾದುದನ್ನು ಔದಾಸೀನ್ಯದಿಂದ ಬಿಟ್ಟು ಬಿಡುತ್ತೀಯೆ; ಇಂದ್ರನೇ, (ನಿನ್ನ) ಇಂತಹ ವೃಷ್ಟಿಕರ್ಮವನ್ನು ಸರ್ವತ್ರ ಪ್ರಸಿದ್ಧಿಯಾಗುವಂತೆ ಹೇಳುತ್ತೇನೆ. ಪ್ರಜೆಗಳಿಗೆ ಸುಖಸಂತೋಷವುಂಟುಮಾಡುವ, ದ್ಯುಲೋಕಾಭಿಮಾನಿದೇವತೆ, ದುಃಖನಾಶಕನಾದ ರುದ್ರ (ಅಗ್ನಿ), (ಅಹರಭಿಮಾನಿ) ಮಿತ್ರ, (ರಾತ್ರ್ಯಭಿಮಾನಿ) ವರುಣ ಮತ್ತು ಮಿತ್ರ (ಮುಂತಾದವರಿಗೂ ನಿನ್ನ) ವೃಷ್ಟಿಕರ್ಮವನ್ನು ಪ್ರಸಿದ್ಧಿಪಡಿಸುತ್ತೇನೆ.

## English Translation

you, the subduer (of adversaries), piercest every rain (confining) skin; you overtake, hero, every flying mortal (cloud), and abandone (it) when exhausted (of its water); for such glorious deed. Indra, I offer praise to your; to heaven; to the self-glorifying Rudra; to Mitra; (to each) the benefactor (of mankind) for such glorious (deed).

॥ ವಿಶೇಷವಿಷಯಗಳು ॥

**ದಸ್ಮಃ ವೃಷಣಂ ತ್ವಚಂ ಕಂಚಿತ್ ಪಿನ್ವಸಿ—ಶತ್ರೂಣಾಂ ಉಪಕ್ಷಪಣಕರ್ತಾ । ಸ್ವತಃ ವರ್ಷಣಶೀಲಂ ಪುಟಬಂಧನವದುದಕವೇಷ್ಟನವಂತಂ ಜಲಧಾರಿಣಂ ಮೇಘಂ ನಿರ್ಭಿದ್ಯ ಸೇಚಯತಿ ।** ಶತ್ರುಗಳನ್ನು ನಿಗ್ರಹಿಸುವ ಇಂದ್ರನು ನಗರಕ್ಕೆ ಕೋಟೆಯ ಸುತ್ತಲೂ ಇರುವಹಾಗೆ ತನ್ನ ಸುತ್ತಲೂ ನೀರನ್ನು ಇರಿಸಿಕೊಂಡು ಇರುವ ಮೇಘವನ್ನು ಭೇದಿಸುವನು. ಅದು ತಾನಾಗಿಯೇ ವೃಷ್ಟಿಯನ್ನು ಸುರಿಸುವ ಸ್ವಭಾವದಿಂದ ಇರುವುದಾದರೂ ಇಂದ್ರನೂ, (ಮಳೆಯು ಆಗುವಂತೆ) ವೃಷ್ಟಿಯನ್ನು ಮೇಘವು ಸುರಿಸುವಂತೆ ಪ್ರೇರಿಸುವನು ಎಂದು ಅರ್ಥ.

**ಅರರುಂ ಮರ್ತ್ಯಂ ಯಾಸೀಃ—ಮರ್ತ್ಯವತ್ ಗಮನಶೀಲಂ ಕಂಚಿತ್ ಮೇಘಂ ಮಿಶ್ರಯಸಿ** ಯಾವ ವಿಧವಾದ ಪ್ರಯೋಜನದ ಆಸೆಯೂ ಇಲ್ಲದೆ ಸುಮ್ಮನೆ ಸಂಚರಿಸುವ ಮನುಷ್ಯನಂತೆ ಓಡಾಡುತ್ತಿರುವ ಮೇಘದಿಂದ ವೃಷ್ಟಿಯು ಉಂಟಾಗುವಂತೆ ಇಂದ್ರನು ಮೇಘವನ್ನು ಬಲಾತ್ಕರಿಸಿ, ವೃಷ್ಟಿಯನ್ನು ಸುರಿಸದಿರುವ ಮೇಘದಿಂದಲೂ ವೃಷ್ಟಿಯನ್ನು ಸುರಿಸುವನು ಎಂದು ಅರ್ಥ. ಇದರಿಂದ ಶೂರನಾದವನು ಬಲವುಳ್ಳವನಾಗಿರುವ ತನ್ನ ಶತ್ರುವು ಸ್ವೇಚ್ಛೆಯಾಗಿ ಸಂಚರಿಸುತ್ತಿರುವುದನ್ನು ನೋಡಿ ಅವನನ್ನು ನಿಗ್ರಹಿಸಿ ತನ್ನ ಅಧೀನದಲ್ಲಿ ಇರಿಸಿಕೊಳ್ಳುವ ಲೋಕರೀತಿಯೂ ಇಲ್ಲಿ ಇಂದ್ರನ ವಿಷಯದಲ್ಲಿ ವರ್ಣಿತವಾಗಿರುವುದು—ಎಂದು ವಿವರಿಸಿದೆ.

**ಮರ್ತ್ಯಂ ಪರಿವೃಣಕ್ಷಿ—ಮರಣಶೀಲಂ ಶೀರ್ಯಮಾಣಸ್ವಭಾವಂ ಕಂಚಿನ್ಮೇಘಂ ನಿರುದಕಂ ಸರ್ವತೋ ವರ್ಜಯಸಿ ಔದಾಸೀನ್ಯಂ ಕರೋಷಿ । ಮರ್ತ್ಯ** ಶಬ್ದವು ಮನುಷ್ಯನಾಮಗಳಲ್ಲಿ (ನಿ. ೩-೮) ಪಠಿತವಾಗಿದೆ. ಮೇಘವು ನೀರಿಲ್ಲದ್ದಾಗಿ ತಾನಾಗಿಯೇ ನಾಶವಾಗುತ್ತಿರುವಾಗ ಅದರ ವಿಷಯದಲ್ಲಿ ಇಂದ್ರನು ಯಾವ ಕಾರ್ಯವನ್ನೂ ಆಚರಿಸಿದೆ ಉದಾಸೀನನಾಗಿ ಇರುವನು. ಎಂದು ಅರ್ಥಮಾಡಿದೆ.

**ಸಪ್ರಥಃ—ಸರ್ವತಃ ಪೃಥು ಯಥಾ ಭವತಿ ತಥಾ ।** ಎಲ್ಲಾ ವಿಧದಿಂದಲೂ ಅತಿಶಯವಾಗಿರುವಂತೆ ಇಂದ್ರನನ್ನು ಸ್ತುತಿಮಾಡುವೆನು ಎಂದು ಈ ಪದವು ಕ್ರಿಯಾ ವಿಶೇಷಣವಾಗಿ ಪ್ರಯುಕ್ತವಾಗಿದೆ.

**ಸಪ್ರಥಃ ಸರ್ವತಃ ಪೃಥುಃ** ಎಂದು ಅರ್ಥವನ್ನು ವಿವರಿಸಿ (ನಿ. ೬-೮)

**ತ್ವಮಗ್ನೇ ಸಪ್ರಥಾ ಅಸಿ ಜುಷ್ಟೋ ಹೋತಾ ವರೇಣ್ಯಃ । ತ್ವಯಾ ಯಜ್ಞಂ ವಿ ತನ್ವತೇ ॥**

(ಋ. ಸಂ. ೫-೧೩-೪)

**ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶಿನೀ । ಯಚ್ಛಾ ನಶ್ಶರ್ಮ ಸಪ್ರಥಃ ॥**

(ಋ. ಸಂ ೧-೨೨-೧೫)

ನಿರುಕ್ತಕಾರರು ಈ ಅರ್ಥದಲ್ಲಿ ಈ ಋಕ್ಕುಗಳನ್ನು ಉದಹರಿಸಿದ್ದಾರೆ.

**ದಿವೇ ಉತ ತತ್ ವೋಚಂ—ದ್ಯುಲೋಕದೇವತಾಯೈ ಅಪಿ ತ್ವದಾಶ್ರಯಭೃತಾಯೈ ತಾದೃಶಂ ಕರ್ಮ ಬ್ರವೀಮಿ ।** ದ್ಯುಲೋಕವು ಇಂದ್ರನ ಆಶ್ರಯದಿಂದ ರಕ್ಷಿತವಾಗಿರುವುದು ಮತ್ತು ಇಂದ್ರನು ಆಚರಿಸಿದ ವೃಷ್ಟಿಕರ್ಮವೂ ದ್ಯು ದೇವತೆಗೆ ಅನುಕೂಲವಾಗಿರುತ್ತದೆಯಾದಕಾರಣ ಇಂದ್ರನ ಕಾರ್ಯವನ್ನು ಪ್ರಕಟಮಾಡುವೆನೆಂದು ಮಂತ್ರದೃಕ್ಕಾದ ಋಷಿಯು ವರ್ಣಿಸಿರುವನು.

**ರುದ್ರಾಯ—ಜಗತಾಂ ದುಃಖದ್ರಾವಯಿತ್ರೇ, ರೋದನಶೀಲಾಯ ವಾ ಅಗ್ನಯೇ ತತ್ ವೋಚಂ ।** ರುದ್ರ ಶಬ್ದಕ್ಕೆ ದುಃಖವನ್ನು ಹೋಗಲಾಡಿಸುವವನೆಂದೂ, ರೋದನಮಾಡುವ (ಅಳುವ) ಸ್ವಭಾವದವನೆಂದೂ ಅರ್ಥಮಾಡಿ ಅಗ್ನಿಯು ರುದ್ರಪದದಿಂದ ಬೋಧ್ಯನಾಗಿರುವನೆಂದು ವ್ಯಾಖ್ಯಾನಮಾಡಿರುತ್ತಾರೆ. ರುದ್ರನೇ ಅಗ್ನಿಯಾಗಿರುವನೆಂಬ ಅಂಶವನ್ನು ತೈ. ಸಂ. ೬-೨-೩-೨ ರಲ್ಲಿಯೂ, ರುದ್ರನು ರೋದನಮಾಡಿದನು ಎಂಬುವುದನ್ನು ತೈ. ಸಂ. ೧-೫೧-೧ ರಲ್ಲಿಯೂ, **ರುದ್ರೋ ವೈ ಕ್ರೂರೋ ಯದಯಮಗ್ನಿಃ । ಸೋಽರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ ।** ಎಂಬ ವಾಕ್ಯಗಳಿಂದ ಹೇಳಿರುತ್ತದೆ. ಅಗ್ನಿಯು ಹವಿಸ್ಸನ್ನು ಅರ್ಪಿಸುವುದರ ಮೂಲಕ ವೃಷ್ಟಿಕರ್ಮಕ್ಕೆ ಅನುಕೂಲನಾಗುವುದರಿಂದಲೂ, ತನ್ನ ಕಾರ್ಯಗಳ ಮಹತ್ವದಿಂದ ಕೀರ್ತಿಯುಳ್ಳವನಾಗಿರುವುದರಿಂದಲೂ ಇಂದ್ರನು ಆಚರಿಸುವ ವೃಷ್ಟಿಕರ್ಮಗಳ ಆಚರಣೆಯನ್ನು ಅಗ್ನಿಗೆ ಹೇಳುವುದು ಯುಕ್ತವಾಗಿದೆ ಎಂದು ಹೇಳಿದೆ. ರುದ್ರನಿಗೂ ಅಗ್ನಿಗೂ ಅಭೇದವನ್ನು ಹೇಳಿರುವುದರಿಂದ ರುದ್ರನೂ ಸ್ವಯಶಸ್ಕನಾಗಿರುವನೆಂದು ವರ್ಣಿಸಿದೆ.

**ಮಿತ್ರಾಯ - ವರುಣಾಯ ತದ್ವೋಚಂ—ಅಹರಭಿಮಾನಿದೇವತಾಯೈ ರಾತ್ರ್ಯಭಿಮಾನಿದೇವತಾಯೈ ।** ಮಿತ್ರನು ಅಹರಭಿಮಾನಿದೇವತೆಯಾಗಿರುವನು. ವರುಣನು ರಾತ್ರ್ಯಭಿಮಾನಿದೇವತೆಯಾಗಿರುವನು. **ಅಹೋರಾತ್ರೇ ವೈ ಮಿತ್ರಾವರುಣೌ ।** (ತಾ. ಬ್ರಾ. ೨೫-೧೦-೧೦) **। ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ ।** (ತೈ. ಸಂ. ೨-೧-೭-೩) ಎಂಬ ಶ್ರುತಿವಾಕ್ಯಗಳಿಂದ ಮಿತ್ರಾವರುಣರಿಗೆ ಅಹೋ ರಾತ್ರ್ಯಭಿಮಾನಿತ್ವವು

ಪ್ರಸಿದ್ಧವಾಗಿರುವುದು. **ಅಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ ವರ್ಷತಿ** (ತೈ. ಸಂ. ೨-೧-೭-೩) ಈ ವಾಕ್ಯದಿಂದ ಅಹೋರಾತ್ರ್ಯಭಿಮಾನಿಗಳಾದ ಈ ದೇವತೆಗಳಿಂದ ವೃಷ್ಟಿಯು ಆಗುತ್ತದೆ. ಎಂದು ಉಕ್ತವಾಗಿರುವುದು. ಇಂದ್ರನು ಆಚರಿಸುವ ಕರ್ಮಗಳನ್ನು ವೃಷ್ಟಿಪ್ರದಾತೃಗಳಾದ ಅಹೋರಾತ್ರ್ಯಭಿಮಾನಿದೇವತೆಗಳಾದ ಮಿತ್ರಾವರುಣರಿಗೂ ಪ್ರಕಟಮಾಡುವುದು ಯುಕ್ತವಾಗಿರುವುದೆಂದು ಇಲ್ಲಿ ವರ್ಣಿಸಿದೆ.

**ಸುಮೃಳೀಕಾಯ ಸಪ್ರಥಃ**— ಪ್ರಜೆಗಳಿಗೆ ಬಹಳ ಸುಖವನ್ನು ಉಂಟುಮಾಡುವವರಾದ ದೇವತೆಗಳೆಲ್ಲರಿಗೂ ಇಂದ್ರನು ಆಚರಿಸುವ ವೃಷ್ಟ್ಯನುಕೂಲವಾದ ಕರ್ಮಗಳನ್ನೂ ವಿಸ್ತಾರವಾಗಿ ವರ್ಣಿಸಿ ಹೇಳುವೆನು ಎಂದು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ದಸ್ಮಃ**— ದಸು ಉಪಕ್ಷಯೇ. ಧಾತು. **ಇಷಿಯುಧೀಂಧಿ**— (ಉ ಸೂ ೧-೧೪೨) ಎಂಬುದರಿಂದ ಮಕ್ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಪಿನ್ವಸಿ**— ಪಿವಿ ಸೇಚನೇ. ಧಾತು. ಭ್ವಾದಿ. **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಶಪ್ ವಿಕರಣ. ಹಿ ಎಂಬುದರ ಸಂಬಂಧವಿರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್ ಸಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಯಾವೀಃ**— ಯು ಮಿಶ್ರಣಾಮಿಶ್ರಣಯೋಃ ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬಂದಾಗ **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. ಚ್ಲಿಗೆ ಸಿಚಾದೇಶ. ಅದಕ್ಕೆ **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. **ಅಸ್ತಿ ಸಿಚೋಽಪೃಕ್ತೇ** (ಪಾ. ಸೂ. ೭-೩-೯೬) ಎಂಬುದರಿಂದ ಪ್ರತ್ಯಯಕ್ಕೆ ಈಡಾಗಮ **ಸಿಚಿವೃದ್ಧಿಃ ಪರಸ್ಮೈಪದೇಷು** (ಪಾ. ಸೂ. ೭-೨-೧) ಎಂಬುದರಿಂದ ಧಾತು ಉಕಾರಕ್ಕೆ ವೃದ್ಧಿ. **ಇಟ ಈಟಿ** (ಪಾ. ಸೂ. ೮-೨-೨೮) ಎಂಬುದರಿಂದ ಸಿಚಿಗೆ ಲೋಪ. ಆವಾದೇಶ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಅರರುಂ**— ಋ ಗತೌ. ಧಾತು. **ಅರ್ತೇರರುಃ** (ಉ. ಸೂ. ೪-೫೧೯) ಎಂಬುದರಿಂದ ಅರು ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಪರಿವೃಣಕ್ಷಿ**— ವೃಜೀ ವರ್ಜನೇ. ಧಾತು. ರುಧಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಚೋಃ ಕುಃ** ಎಂಬುದರಿಂದ ಧಾತು ಜಕಾರಕ್ಕೆ ಕುತ್ವ, ಚರ್ತ್ವ. ಸಕಾರಕ್ಕೆ ಅದನ್ನು ನಿಮಿತ್ತೀಕರಿಸಿ ಷತ್ವ **ಚಾದಿಲೋಪೇ ವಿಭಾಷಾ** (ಪಾ. ಸೂ. ೮-೧-೬೩) ಎಂಬುದರಿಂದ ನಿಘಾತ ಪ್ರತಿಷೇಧ ಬರುವುದರಿಂದ ವಿಕರಣಸ್ವರ ಉಳಿಯುತ್ತದೆ. **ತಿಙಿ ಚೋದಾತ್ತವತಿ** (ಪಾ ಸೂ. ೮-೧-೭೧) ಎಂಬುದರಿಂದ ಗತಿಗೆ (ಪರಿ) ನಿಘಾತಸ್ವರ ಬರುತ್ತದೆ.

**ದಿನೇ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ಚತುರ್ಥೀ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ರುದ್ರಾಯ**—ರೋದಯತೀತಿ ರುದ್ರಃ. ರುದಿರ್ ಅಶ್ರುವಿಮೋಚನೇ ಧಾತು. **ರೋದೇರ್ಣಿಲುಕ್ ಚ** (ಉ. ಸೂ. ೨–೧೭೯) ಎಂಬುದರಿಂದ ರಕ್ ಪ್ರತ್ಯಯ ಣಿಚಿಗೆ ಲುಕ್. ಆದುದರಿಂದ ಪ್ರತ್ಯಯ ಲಕ್ಷಣದಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸ್ವಯಶಸೇ**—ಸ್ವೀಯಂ ಯಶಃ ಯಸ್ಯಾಸ್ಸಾ ಸ್ವಯಶಾಃ ತಸ್ಯೈ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ.

**ವೋಚಂ**—ಬ್ರೂ ಞ್ ವ್ಯಕ್ತಾಯಾಂ ವಾಚಿ. ಧಾತು ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. **ಬ್ರುವೋ ವಚಿಃ** (ಪಾ. ಸೂ. ೨-೪-೫೩) ಎಂಬುದರಿಂದ ವಚ್ಯಾದೇಶ. **ಅಸ್ಯತಿ ವಕ್ತಿ ಖ್ಯಾತಿಭ್ಯೋಙ್** (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙಾದೇಶ. **ವಚ ಉಮ್** ಎಂಬುದರಿಂದ ಧಾತುವಿಗೆ ಉಮಾಗಮ. ಅಂತ್ಯಾಚಿನ ಪರವಾಗಿ ಬಂದಾಗ ಗುಣ. ತಿಙಂತನಿಘಾತಸ್ವರ ಬರುತ್ತದೆ.

**ಸಪ್ರಥಃ**—ಪ್ರಥ ಪ್ರಖ್ಯಾನೇ. ಧಾತು. ಅಸುನ್ ಪ್ರತ್ಯಯ. ಪ್ರಥಸಾ ಸಹ ವರ್ತತ ಇತಿ ಸಪ್ರಥಃ **ತೇನ ಸಹೇತಿ ತುಲ್ಯಯೋಗೇ** (ಪಾ. ಸೂ. ೨-೨-೨೮) ಎಂಬುದರಿಂದ ಸಮಾಸವಾದಾಗ **ವೋಪಸರ್ಜನಸ್ಯ** (ಪಾ. ಸೂ. ೬-೩-೮೨) ಎಂಬುದರಿಂದ ಸ ಭಾವ ಬರುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುಮೃಳೀಕಾಯ—ನಞ್ ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ. ಚತುರ್ಥ್ಯಂತರೂಪ. ॥ ೩ ॥



॥ ಸಂಹಿತಾಪಾಠಃ ॥

ಅಸ್ಮಾಕಂ ವ ಇಂದ್ರಮುಶ್ಮಸೀಷ್ಟಯೇ ಸಖಾಯಂ ವಿಶ್ವಾಯುಂ ಪ್ರಾಸಹಂ
ಯುಜಂ ವಾಜೇಷು ಪ್ರಾಸಹಂ ಯುಜಂ ।
ಅಸ್ಮಾಕಂ ಬ್ರಹ್ಮೋತಯೇಽವಾ ಪೃತ್ಸುಷು ಕಾಸು ಚಿತ್ ।
ನಹಿ ತ್ವಾ ಶತ್ರುಃ ಸ್ತರತೇ ಸ್ತೃಣೋಷಿ ಯಂ ವಿಶ್ವಂ ಶತ್ರುಂ ಸ್ತೃಣೋಷಿ
ಯಂ ॥ ೪ ॥

॥ ಪದಪಾಠಃ ॥

ಅಸ್ಮಾಕಂ । ವಃ । ಇಂದ್ರಂ । ಉಶ್ಮಸಿ । ಇಷ್ಟಯೇ । ಸಖಾಯಂ । ವಿಶ್ವಽಆಯುಂ । ಪ್ರಽಸಹಂ ।
ಯುಜಂ । ವಾಜೇಷು । ಪ್ರಽಸಹಂ । ಯುಜಂ ।
ಅಸ್ಮಾಕಂ । ಬ್ರಹ್ಮ । ಊತಯೇ । ಅವ । ಪೃತ್ಸುಷು । ಕಾಸು । ಚಿತ್ ।
ನಹಿ । ತ್ವಾ । ಶತ್ರುಃ । ಸ್ತರತೇ । ಸ್ತೃಣೋಷಿ । ಯಂ । ವಿಶ್ವಂ । ಶತ್ರುಂ । ಸ್ತೃಣೋಷಿ । ಯಂ ॥೪ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ಅಸ್ಮಾಕಮಸ್ಮದರ್ಥಂ ವೋ ಯುಷ್ಮದರ್ಥಂ ಚೇಷ್ಟಯೇ ಯಾಗಾಯಾಭಿಮತ್ಯೈಷಣಾಯ ವೇಂದ್ರಮುಶ್ಮಸಿ । ಅಭಿಮತಂ ಕಾಮಯಾಮಹೇ ॥ ವಶ ಕಾಂತೌ । ಅದಾದಿಕಃ । ಇದಂತೋ ಮಸಿಃ । ಗ್ರಹಿಜ್ಯೇತ್ಯಾದಿನಾ ಸಂಪ್ರಸಾರಣಂ ॥ ಯದ್ವಾ । ಅಸ್ಮಾಕಂ ಸಖಾಯಮಿತಿಸಂಬಂಧಃ । ಕೀದೃಶಮಿಂದ್ರಂ । ಸಖಾಯಂ ಸಖಿವದತ್ಯಂತಹಿತಕಾರಿಣಂ ಸಮಾನಖ್ಯಾನಂ ವಾ । ವಿಶ್ವಾಯುಂ ವಿಶ್ವೇಷಾಂ ಯಾಗಾನಾಂ ಗಂತಾರಂ ಪ್ರಾಸಹಂ ಪ್ರಕರ್ಷೇಣ ಶತ್ರೂಣಾಂ ಮರ್ಷಯಿತಾರಂ ॥ ಸಹೇಃ ಕ್ವಿಪ್ । ನಹಿವೃತೀತ್ಯಾದಿನೋಪಸರ್ಗಸ್ಯ ದೀರ್ಘಃ ॥ ಯುಜಂ ಸರ್ವದಾ ಯುಕ್ತಂ ಸಹಾಯಭೂತಮಿತ್ಯರ್ಥಃ । ಪುನಃ ಸ ಏವ ವಿಶೇಷ್ಯತೇ । ವಾಜೇಷು ಹವೀರೂಪಾನ್ನೇಷು ತದ್ವತ್ಸು ಯಜ್ಞೇಷು ವಾ ನಿಮಿತ್ತಭೂತೇಷು ಪ್ರಾಸಹಂ ಯಜ್ಞವಿಘಾತಿನಃ ಸಹಮಾನಂ ಯುಜಮಭಿಮತಫಲೈರ್ಯುಕ್ತಂ ಮರುದ್ಭಿರ್ವಾ । ಕಿಂಚ ಹೇ ಇಂದ್ರ ಅಸ್ಮಾಕಮೂತಯೇ ರಕ್ಷಣಾಯ ಬ್ರಹ್ಮ ಪರಿವೃಢಂ ಕರ್ಮಾವ । ರಕ್ಷ । ಕಸ್ತತ್ರ ವಿಶೇಷ ಇತಿ ತತ್ರಾಹ । ಕಾಸು ಚಿತ್ ಪೃತ್ಸು ಸಂಗ್ರಾಮೇಷು । ಪೃತ್ಸು ಸಮತ್ಸ್ವಿತಿ ಸಂಗ್ರಾಮನಾಮಸು ಪಾಠಾತ್ತನ್ನಾಮತ್ವಂ । ತೇಷು ತ್ವಾ ತ್ವಾಂ ನಹಿ ಸ್ತರತೇ ನ ಹಿನಸ್ತಿ ನ ವಿರೋಧಮಾಚರತಿ ಯಂ ಸ್ತೃಣೋಷಿ । ಯಂ ವಿಶ್ವಂ ಶತ್ರುಂ ಸ್ತೃಣೋಷಿ ವಾರಯಸಿ ಸ ಕಶ್ಚಿದಪಿ ಶತ್ರುರ್ನ ಹಿನಸ್ತಿ । ತವ ಮಹತ್ತ್ವೇನ ಸರ್ವೇ ಭೀತಾ ವಿಧೇಯಾ ಭವಂತಿ ಶತ್ರುಭಾವಂ ನ ಕೋಽಪ್ಯಾಚರತಿ । ಅಜಾತಶತ್ರುತ್ವಾದಿತ್ಯರ್ಥಃ ॥

॥ ಪ್ರತಿಪದಾರ್ಥ ॥

(**ಹೇ ಋತ್ವಿಜಃ**—ಎಲೈ ಋತ್ವಿಜರೇ) । **ಅಸ್ಮಾಕಂ**—ನಮ್ಮ (ಮತ್ತು) । **ವಃ**—ನಿಮ್ಮ । **ಇಷ್ಟಯೇ**—ಯಾಗಕ್ಕೋಸ್ಕರ (ಅಭಿಮತವಾದ ಇಷ್ಟಾರ್ಥಕ್ಕೋಸ್ಕರ) । **ಸಖಾಯಂ**—ಸ್ನೇಹಿತರಂತೆ (ಹಿತಕಾರಿಯೂ) । **ವಿಶ್ವಾಯುಂ**—ಸರ್ವರ ಯಾಗಗಳಿಗೂ ಹೋಗುವವನೂ । **ಪ್ರಾಸಹಂ**—ಶತ್ರುಗಳನ್ನು ಸಹಿಸುವ (ಸಾಮರ್ಥ್ಯವುಳ್ಳ) ವನೂ । **ಯುಜಂ**—(ಸರ್ವದಾ) ಜೊತೆಯಲ್ಲಿರುವ (ಸಹಾಯಭೂತನಾದ) ವನೂ । **ವಾಜೇಷು**—ಹವೀರೂಪವಾದ ಅನ್ನ (ಯಜ್ಞ) ವಿಷಯದಲ್ಲಿ । **ಪ್ರಾಸಹಂ**—(ಯಜ್ಞ ವಿಘಾತಿಗಳನ್ನು) ನಾಶಮಾಡುವವನೂ । **ಯುಜಂ**—ಅಭಿಮತ ಫಲಯುಕ್ತನಾದ (ಮರುತ್ತುಗಳಿಂದ ಯುಕ್ತನಾದ)ವನೂ (ಆದ) । **ಇಂದ್ರಂ**—ಇಂದ್ರನನ್ನು । **ಉಶ್ಮಸಿ**—ಅಪೇಕ್ಷಿಸೋಣ । (**ಕಿಂಚ ಇಂದ್ರ**—ಮತ್ತು ಎಲೈ ಇಂದ್ರನೇ) । **ಅಸ್ಮಾಕಂ**—ನಮ್ಮ । **ಊತಯೇ**—

ರಕ್ಷಣೆಗಾಗಿ | **ಬ್ರಹ್ಮ**—ಆರಬ್ಧ ಕರ್ಮವನ್ನು | **ಅವ**—ರಕ್ಷಿಸು (ಏಕೆಂದರೆ) | **ಯಂ**—ಯಾವನನ್ನು | **ಸ್ಪೃಣೋಷಿ** – ನಿವಾರಣೆ ಮಾಡುತ್ತೀಯೋ | (**ಸಃ**—ಅವನು) | **ಕಾಸು ಚಿತ್ ಪೃತ್ಸುಷು**—ಎಲ್ಲಾ ಸಂಗ್ರಾಮುಗಳಲ್ಲೂ | **ತ್ವಾ**—ನಿನ್ನನ್ನು | **ನ ಹಿ ಸ್ತರತೇ**—ಹಿಂಸಿಸುವುದಿಲ್ಲ | **ಯಂ**—ಯಾವ | **ವಿಶ್ವಂ ಶತ್ರುಂ**—ಎಲ್ಲಾ ಶತ್ರುಗಳನ್ನೂ **ಸ್ಪೃಣೋಷಿ**—ವಿರೋಧಿಸುತ್ತೀಯೋ | (**ಸಃ**) **ಶತ್ರುಃ**—(ಆ) ಶತ್ರುವು | **ನ ಹಿನಸ್ತಿ**—(ನಿನ್ನನ್ನು) ಹಿಂಸಿಸುವುದಿಲ್ಲ)

॥ ಭಾವಾರ್ಥ ॥

ಸ್ನೇಹಿತನಂತೆ (ಹಿತಕರನೂ) ಎಲ್ಲಾ ಯಾಗಗಳಿಗೂ ಹೋಗುವವನೂ, ಶತ್ರುಗಳನ್ನು ಹಿಂಸಿಸುವ (ಸಾಮರ್ಥ್ಯವುಳ್ಳವನೂ); (ಸದಾ) ಜೊತೆಯಲ್ಲಿರುವವನೂ (ಸಹಾಯಭೂತನೂ), ಹವೀರೂಪಾನ್ನ (ಯಜ್ಞ) ವಿಷಯದಲ್ಲಿ (ಶತ್ರುಗಳಾದವರನ್ನು) ನಾಶಪಡಿಸುವವನೂ, ಅಭಿಮತಫಲಯುಕ್ತನೂ (ಮರುತ್ತುಗಳಿಂದ ಸಹಿತನೂ) ಆದ ಇಂದ್ರನನ್ನು, ಎಲೈ ಋತ್ವಿಜರೇ, ನಮ್ಮ ಮತ್ತು ನಿಮ್ಮ ಸಂಬಂಧವಾದ ಯಾಗಗಳಲ್ಲಿ (ಬರುವಂತೆ) ಅಪೇಕ್ಷಿಸೋಣ. ಎಲೈ ಇಂದ್ರನೇ, ನಮ್ಮ ಈ ಕರ್ಮವನ್ನು ರಕ್ಷಿಸು; (ಏಕೆಂದರೆ) ನಿನ್ನಿಂದ ನಿವಾರಿತನಾದ ಶತ್ರುವು ಯಾವ ಸಂಗ್ರಾಮದಲ್ಲಿಯೂ ನಿನ್ನನ್ನು ಹಿಂಸಿಸುವುದಿಲ್ಲ (ನಿನಗೆ ವಿರೋಧವಾಗಿ ನಡೆಯುವುದಿಲ್ಲ); ಮತ್ತು ನೀನು ವಿರೋಧಿಸುವ ಶತ್ರುಗಳಾರೂ ನಿನ್ನನ್ನು ಹಿಂಸಿಸಲಾರರು (ನೀನು ಅಜಾತಶತ್ರುವು).

English Translation.

We desire, (priests). Indra to be present at your sacrifice, (he who is) our friend, the the frequenter of all (ceremonies), the endurer (of enemies), the ally (of his worshippers), the patient expecter of (sacrificial) viands, associated (with the Maruts); Indra, guard our holy rite for our preservation, for in whatsoover contests (you may engage), no enemy, whom you oppose prevails against you; you prevail over every enemy whom (you oppose).

॥ ವಿಶೇಷವಿಷಯಗಳು ॥

**ಇಷ್ಟಯೇ—ಯಾಗಾಯ ಅಭಿಮತೈಷಣಾಯ ವಾ |** ಮಂತ್ರದ್ರಷ್ಟ್ರುವಾದ ಋಷಿಯು ಯಜ್ಞದಲ್ಲಿರುವ ಋತ್ವಿಜರಿಗಾಗಿಯೂ, ಯಜಮಾನರಿಗಾಗಿಯೂ ಯಾಗವು ನೆರವೇರುವುದಕ್ಕಾಗಿಯೂ, ಇಷ್ಟಸಿದ್ಧಿಗಾಗಿಯೂ, ಇಂದ್ರನನ್ನು ಅಪೇಕ್ಷಿಸುತ್ತೇವೆ ಎಂದು ಹೇಳಿರುವನು.

**ಸಖಾಯಂ—ಸಖಿವದತ್ಯಂತಹಿತಕಾರಿಣಂ ಸಮಾನಖ್ಯಾನಂ ವಾ |** ಇಂದ್ರನು ಯಜಮಾನರಿಗೆ ಹಿತವನ್ನು ಉಂಟುಮಾಡುವವನು ಅಥವಾ ಯಜಮಾನರಿಗೆ ಸರಿಯಾದ ಮಹಿಮೆಯನ್ನು ಉಂಟುಮಾಡುವವನು ಎಂದು ಅರ್ಥ.

**ಪ್ರಾಸಹಂ ವಾಜೇಷು ಪ್ರಾಸಹಂ—ಪ್ರಕರ್ಷೇಣ ಶತ್ರೂಣಾಂ ಮರ್ಷಯಿತಾರಂ ಹವೀರೂಪಾನ್ನೇಷು ತದ್ವತ್ಸು ಯಜ್ಞೇಷು ವಾ ನಿಮಿತ್ತಭೂತೇಷು ಯಜ್ಞವಿಘಾತಿನಃ ಸಹಮಾನಂ** ಶತ್ರುಗಳನ್ನು

ಅತಿಶಯವಾಗಿ ನಿಗ್ರಹಮಾಡುವ ಇಂದ್ರನು—ಹವಿಸ್ಸಿನರೂಪವಾದ ಅನ್ನಗಳ ನಿಮಿತ್ತವಾಗಿಯೂ, ಹವಿಸ್ಸುಗಳಿಂದ ಯುಕ್ತವಾದ ಯಜ್ಞಗಳು ನೆರವೇರುವ ನಿಮಿತ್ತವಾಗಿಯೂ, ಶತ್ರುಗಳಾಗಿ ಯಜ್ಞಗಳನ್ನು ನಾಶಮಾಡುವವರನ್ನು ಅವರ ಇಷ್ಟವು ನೆರವೇರದಂತೆ ತಡೆಯುವನು ಎಂದು ಅರ್ಥವನ್ನು ವಿವರಿಸಿದೆ.

**ಯುಜಂ—ಅಭಿಮತಫಲೈಃ ಮರುದ್ಭಿರ್ವಾ ಯುಕ್ತಂ** ಇಂದ್ರನು ಯಜಮಾನರಿಗೆ ಇಷ್ಟವಾದ ಫಲವನ್ನು ನೆರವೇರಿಸುವವನು ಅಥವಾ ಮರುದ್ದೇವತೆಗಳೊಡನೆ ಕೂಡಿರುವವನು ಎಂದು ಅರ್ಥವನ್ನು ವಿವರಿಸಿ **ಅಸ್ಮಾಕಂ ಊತಯೇ ಬ್ರಹ್ಮ ಪರಿವೃಢಂ ಕರ್ಮ ರಕ್ಷ** ನಮ್ಮ ರಕ್ಷಣೆಗಾಗಿ ನಾವು ಆಚರಿಸುವ ಯಜ್ಞರೂಪವಾದ ಕರ್ಮವನ್ನು ಇಂದ್ರನು ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

**ಪೃತ್ಸು—ಸಂಗ್ರಾಮೇಷು. ಪೃತ್ಸು** ಎಂಬ ಪದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಯುದ್ಧವೆಂದು ಅರ್ಥ.

**ಯಂ ವಿಶ್ವಂ ಶತ್ರುಂ ಸ್ಪೃಣೋಷಿ (ಕಿಂಚ) ಯಂ ತ್ವಾ ಶತ್ರುಃ ನಹಿ ಸ್ತರತೇ**—ಯುದ್ಧಗಳಲ್ಲಿ ಇಂದ್ರನ ಸಂಗಡ ಯಾವನೂ ವಿರೋಧವನ್ನು ಆಚರಿಸುವುದಿಲ್ಲ. ಇಂದ್ರನು ಯುದ್ಧಗಳಲ್ಲಿ ಶತ್ರುವನ್ನು ನಿಗ್ರಹಮಾಡುವುದರಿಂದ ಶತ್ರುವೂ ಇಂದ್ರನನ್ನೂ ಹೊಡೆಯಲು ಸಮರ್ಥನಾಗುವುದಿಲ್ಲ. ಇಂದ್ರನ ಮಹಿಮೆಯಿಂದ ಎಲ್ಲರೂ ಹೆದರಿಕೊಂಡು ಅವನಿಗೆ ವಿಧೇಯರಾಗಿರುತ್ತಾರೆ. ಶತ್ರುವೇ ಇಲ್ಲದಿರುವುದರಿಂದ ಇಂದ್ರನು ಅಜಾತಶತ್ರುವಾಗಿ ಇರುವನು ಆದ್ದರಿಂದ ಇಂದ್ರನ ವಿಷಯದಲ್ಲಿ ಯಾರೂ ಶತ್ರುಭಾವವನ್ನು ಅಚರಿಸುವುದಿಲ್ಲ. ಎಂದು ಇಂದ್ರನ ಮಹಿಮೆಯನ್ನು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಉಶ್ಮಸಿ**—ವಶ ಕಾಂತೌ. ಧಾತು. ಅದಾದಿ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ಇದಂತೋಮಸಿ** (ಪಾ. ಸೂ. ೭-೧-೪೬) ಎಂಬುದರಿಂದ ಅದಕ್ಕೆ ಇಕಾಗಮ. **ಸಾರ್ವಧಾತುಕಮಪಿತ್** ಎಂಬು ದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಗ್ರಹಿಜ್ಯಾವಯಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಉಶ್ಮಸಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಇಷ್ಟಯೇ**—ಯಜ ದೇವಪೂಜಾಸಂಗತಿಕರಣದಾನೇಷು. ಇದಕ್ಕೆ ಕ್ತಿಚ್ ಪ್ರತ್ಯಯ. **ವಚಿಸ್ವಪಿಯ ಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. **ವ್ರಶ್ಚಭ್ರಸ್ಜ**—ಎಂಬುದ ರಿಂದ ಜಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯಕ್ಕೆ ಷ್ಟುತ್ವ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಪ್ರಾಸಹಮ್**—ಷಹ ಮರ್ಷಣೇ. ಧಾತು. **ಧಾತ್ವಾದೇ ಷಃ ಸಃ** ಎಂಬುದರಿಂದ ಆದಿಗೆ ಸತ್ವ. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ನಹಿವೃತ್ತಿ**—(ಪಾ. ಸೂ. ೬-೬-೧೧೬) ಎಂಬುದರಿಂದ ಇದು ಪರವಾದಾಗ ಉಪಸರ್ಗಕ್ಕೆ ದೀರ್ಘ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ ದ್ವಿತೀಯಾ ಏಕವಚನಾಂತ ರೂಪ.

**ಯುಜನ್**—ಯುಜಿರ್ ಯೋಗೇ. ಧಾತು. **ಋತ್ವಿಕ್ ದಧೃಕ್**—ಎಂಬುದರಿಂದ ಕ್ವಿನ್ ಪ್ರತ್ಯಯ.

**ಊತಯೇ—ಊತಿಯೂತಿಜೂತಿ**– (ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತ ಕ್ತಿನ್ನಂತದಿಂದ ನಿಪಾತಿತವಾಗಿದೆ. ಚತುರ್ಥೀ ಏಕವಚನಾಂತರೂಪ.

**ಸ್ತರತೇ**—ಸ್ತೃ ಹಿಂಸಾಯಾಂ ಧಾತು ಲಟ್ ಪ್ರಥಮಪುರುಷ ಏಕವಚನಾಂತರೂಪ. **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್**—ಸೂತ್ರ ದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸ್ತೃಣೋಷಿ**—ಸ್ತೃಞ್ ಆಚ್ಛಾದನೇ. ಧಾತು ಸ್ವಾದಿ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ವಿಕರಣಸ್ವರ ಉಳಿಯುತ್ತದೆ. ‖ ೪ ‖



‖ ಸಂಹಿತಾಪಾಠಃ ‖

ನಿ ಷೂ ನಮಾತಿಮತಿಂ ಕಯಸ್ಯ ಚಿತ್ತೇಜಿಷ್ಠಾಭಿರರಣಿಭಿರ್ನೋತಿಭಿರುಗ್ರಾ-
ಭಿರುಗ್ರೋತಿಭಿಃ ।
ನೇಷಿ ಣೋ ಯಥಾ ಪುರಾನೇನಾಃ ಶೂರ ಮನ್ಯಸೇ ।
ವಿಶ್ವಾನಿ ಪೂರೋರಪ ಪರ್ಷಿ ವಹ್ನಿರಾಸಾ ವಹ್ನಿರ್ನೋ ಅಚ್ಛ ‖ ೫ ‖

‖ ಪದಪಾಠಃ ‖

ನಿ । ಸು । ನಮ । ಅತಿಽಮತಿಂ । ಕಯಸ್ಯ । ಚಿತ್ । ತೇಜಿಷ್ಠಾಭಿಃ । ಅರಣಿಽಭಿಃ । ನ । ಊತಿಽಭಿಃ
ಉಗ್ರಾಭಿಃ । ಉಗ್ರ । ಊತಿಽಭಿಃ ।
ನೇಷಿ । ನಃ । ಯಥಾ । ಪುರಾ । ಅನೇನಾಃ । ಶೂರ । ಮನ್ಯಸೇ ।
ವಿಶ್ವಾನಿ । ಪೂರೋಃ । ಅಪ । ಪರ್ಷಿ । ವಹ್ನಿಃ । ಆಸಾ । ವಹ್ನಿಃ । ನಃ । ಅಚ್ಛ ‖ ೫ ‖

॥ ಸಾಯಣಭಾಷ್ಯಂ ॥

ಹೇ ಇಂದ್ರ ಕೆಯುಸ್ಯ ಕಸ್ಯ ಚಿತ್ ತ್ವದ್ಭಕ್ತಸ್ಯ ಯಜಮಾನಸ್ಯಾತಿಮತಿಮತಿಕ್ರಾಂತಮನನಂ ವಿರುದ್ಧಮನಸ್ಕಂ ಶತ್ರುಂ ನಿ ಷೂ ನಮ । ನಿತರಾಂ ಸುಷ್ಠು ನಾಮಯ । ಅಸ್ಮತ್ಪ್ರಣತಂ ಕುರು ॥ ಅಂತರ್ಭಾವಿತಣ್ಯರ್ಥೋಽಯಂ ॥ ಹೇ ಉಗ್ರೋದ್ಗೂರ್ಣಬಲ ಊತಿಭೀ ರಕ್ಷಣೈಃ ಪ್ರೀತಿಭಿರ್ವಾ ಯುಕ್ತಃ ಸನ್ ತೇಜಿಷ್ಠಾಭಿರರಣಿಭಿರ್ನಾತಿಶಯೇನ ತೇಜಸ್ವಿಭಿರ್ಯುದ್ಧಾದಿರೂಪೈರ್ಮಾರ್ಗೈರಿವ ॥ ತೇಜಸ್ವಚ್ಛಬ್ದಾದಾತಿಶಾಯನಿಕ ಇಷ್ಠನ್ । ವಿನ್ಮತೋರ್ಲುಕ್ । ಟೇರಿತಿ ಟಿಲೋಪಃ ॥ ಅತಿಮತಿಂ ವೃತ್ರಾದಿಂ ಯಥಾ ನಾಮಿತವಾನ್ ತಥಾಸ್ಮದ್ವಿರೋಧಿನಮಪೀತ್ಯರ್ಥಃ । ಯದ್ವಾ । ಉತ್ತರತ್ರಾನ್ವಯಃ । ತೇಜಿಷ್ಠಾಭಿರರಣಿಭಿರ್ನ ತೇಜೋಯುಕ್ತೈರ್ಗಮನಸಾಧನೈರ್ಯಜ್ಞಾದಿಮಾರ್ಗೈರ್ಯಥಾಸ್ಮಾನ್ಯೋಜಿತವಾನಸಿ ತಥೋಗ್ರಾಭಿಃ ಪ್ರಕಾಶಕಾಭಿರೂತಿಭೀ ರಕ್ಷಣೈರ್ಯಾಗಫಲಭೂತೈರ್ನೋಽಸ್ಮಾನ್ ನೇಷಿ । ನಯಸಿ । ಅಭಿಮತಸ್ವರ್ಗಾದಿಫಲಂ ಪ್ರಾಪಯಸೀತ್ಯರ್ಥಃ॥ ನಯತೇಶ್ಛಾಂದಸಃ ಶಪೋ ಲುಕ್॥ ತತ್ರ ದೃಷ್ಟಾಂತಃ। ಪುರಾ ಪೂರ್ವಸ್ಮಿನ್ಕಾಲೇಽಸ್ಮತ್ಪಿತ್ರಾದಿನ್ಯಥೋತಿಭಿರ್ನೀತವಾನಸಿ । ತಥಾ ನೇಷೀತ್ಯರ್ಥಃ । ಹೇ ಶೂರ ವಿಕ್ರಾಂತ ತ್ವಮನೇನಾ ಮನ್ಯಸೇ । ಸರ್ವೈರಪಾಪತ್ವೇನಾವಬುಧ್ಯಸೇ । ಸ್ವರ್ಗಾದ್ಯಭಿಮತಸಾಧಕತ್ವಾದಿತಿ ಭಾವಃ। ಯದ್ವಾ। ಅನೇನಾಸ್ತ್ವಮಸ್ಮಾನಪ್ಯನೇನಸೋ ಮನ್ಯಸೇ । ಕಿಂಚ ಹೇ ಇಂದ್ರ ವಹ್ನಿರ್ವೃಷ್ಟ್ಯಾದಿಪ್ರದಾನೇನ ಜಗತಾಂ ನಿರ್ವಾಹಕಃ ಸನ್ ಪೂರೋರ್ಮನುಷ್ಯಸ್ಯ ಯಜಮಾನಸ್ಯ । ಪೂರುರಿತಿ ಮನುಷ್ಯನಾಮ ಪೂರವೋ ಜಗತ ಇತಿ ತನ್ನಾಮಸು ಪಾಠಾತ್ ॥ ತಸ್ಯ ವಿಶ್ವಾನಿ ಸರ್ವಾಣ್ಯೇನಾಂಸ್ಯಪ ಪರ್ಷಿ । ಅಪಕೃತ್ಯ ಪಾಲಯಸಿ ॥ ಪೃಣೋತೇಶ್ಛಾಂದಸಃ ಶಪೋ ಲುಕ್ ॥ ಅತೋ ನೋಽಸ್ಮಾಕಮಪ್ಯಾಸಾಂತಿಕೇ ದೇವಯಜನದೇಶೇಽಚ್ಛಾಭಿಮುಖ್ಯೇನಾಗತ್ಯ ವಹ್ನಿರಭಿಮತಾನಾಂ ವೋಢಾ ಸನ್ನಪಾನಭಿಮತಮಪಕೃತ್ಯ ಪರ್ಷಿ । ಅಭಿಮತಫಲಂ ಪೂರಯಸಿ ॥

॥ ಪ್ರತಿಪದಾರ್ಥ ॥

**ಉಗ್ರ**—ಉಗ್ರನಾದ ಎಲೈ (ಇಂದ್ರನೇ) । **ಕೆಯುಸ್ಯ ಚಿತ್**—(ನಿನ್ನ ಭಕ್ತನಾದ) ಯಜಮಾನನಿಗೆ । **ಅತಿಮತಿಂ**—ವಿರುದ್ಧಮನಸ್ಕನನ್ನು (ಶತ್ರುವನ್ನು) । **ಊತಿಭಿಃ**—ನಿನ್ನ ರಕ್ಷಣಾಕಾರ್ಯಗಳಿಂದ । **ತೇಜಿಷ್ಠಾಭಿಃ**—ವಿಶೇಷವಾದ ತೇಜಸ್ಸಿನಿಂದ ಕೂಡಿದ । **ಅರಣಿಭಿಃ ನ**—(ಯುದ್ಧಾದಿರೂಪ) ಮಾರ್ಗಗಳಿಂದ । **ನಿ ಷೂ ನಮ**—ಚೆನ್ನಾಗಿ ನಮ್ರನನ್ನಾಗಿ ಮಾಡು ; । **ತೇಜಿಷ್ಠಾಭಿಃ**—ತೇಜೋವಿಶಿಷ್ಟವಾದ । **ಅರಣಿಭಿಃ ನ**—ಗಮನಸಾಧನಗಳಾದ (ಯಜ್ಞಾದಿ ಮಾರ್ಗಗಳಲ್ಲಿ ನಮ್ಮನ್ನು ಒಯ್ದಿರು)ವಂತೆ । **ಉಗ್ರಾಭಿಃ**—ಪ್ರಕಾಶಪಡಿಸುವ । **ಊತಿಭಿಃ**—(ಯಾಗಫಲಭೂತವಾದ) ರಕ್ಷಣೆಗಳಿಂದ । **ನಃ**—ನಮ್ಮನ್ನು । **ಪುರಾ**—ಹಿಂದೆ (ನಮ್ಮ ಪಿತ್ರಾದಿಗಳನ್ನು) । **ಯಥಾ**—ಹೇಗೆ (ರಕ್ಷಿಸಿ ದಾರಿತೋರಿಸಿದೆಯೋ) । (**ತಥಾ**—ಹಾಗೆ) । **ನೇಷಿ**—(ಸ್ವರ್ಗಾದಿ ಫಲವನ್ನು ಪಡೆಯುವಂತೆ) ಮಾಡುತ್ತಿ ; । **ಶೂರ**—ಎಲೈ ಪರಾಕ್ರಮಿಯೇ । **ಅನೇನಾಃ**—ಪಾಪರಹಿತ(ನೆಂದು) । **ಮನ್ಯಸೇ**—ತಿಳಿಯಲ್ಪಡುತ್ತಿ । **ಅನೇನಾಃ**—ಪಾಪರಹಿತನಾದ (ನೀನು) । **ಮನ್ಯಸೇ**—(ನಮ್ಮನ್ನೂ ಪಾಪರಹಿತರೆಂದು) ಭಾವಿಸುತ್ತಿ । (**ಇಂದ್ರ**—ಎಲೈ ಇಂದ್ರನೇ) । **ವಹ್ನಿಃ**—ವೃಷ್ಟ್ಯಾದಿಗಳಿಂದ ಜಗನ್ನಿರ್ವಾಹಕನಾಗಿ । **ಪೂರೋಃ**—ಮನುಷ್ಯನ (ಯಜಮಾನನ) । **ವಿಶ್ವಾನಿ**—ಎಲ್ಲಾ (ಪಾಪಗಳನ್ನೂ) । **ಅಪ ಪರ್ಷಿ**—ಸೆಳೆದು, ಕಾಪಾಡುತ್ತಿ ।

(**ಅತಃ**—ಆದ್ದರಿಂದ) | **ನಃ**—ನಮಗೂ | **ಆಸ್ತಾ**--ಸಮೀಪದಲ್ಲಿ (ಯಾಗಶಾಲೆಯಲ್ಲಿ) | **ಅಚ್ಛ**—ಅಭಿಮುಖನಾಗಿ (ಬಂದು) | **ವಹ್ನಿಃ**—ಇಷ್ಟಾರ್ಥವಾಹಕನಾಗಿ | (**ಅಪ ಪರ್ಷಿ**—ಅನಿಷ್ಟವನ್ನು ಪರಿಹರಿಸಿ, ರಕ್ಷಿಸುತ್ತಿ) |

॥ ಭಾವಾರ್ಥ ॥

ಉಗ್ರನಾದ (ಇಂದ್ರನೇ), ಉಗ್ರವಾದ ಯುದ್ಧಾದಿ ಮಾರ್ಗಗಳಿಂದ (ಶತ್ರುಗಳನ್ನು) ಹೇಗೋ ಹಾಗೆ, (ನಿನ್ನ) ರಕ್ಷಣಾಕರ್ಮಗಳಿಂದ, ಯಜಮಾನನ ಶತ್ರುಗಳನ್ನು ನಮ್ರರನ್ನಾಗಿ ಮಾಡು; (ತೇಜೋವಿಶಿಷ್ಟವಾದ ಯಜ್ಞಾದಿ ಮಾರ್ಗಗಳಲ್ಲಿ ನಮ್ಮನ್ನು ನಿಯೋಜಿಸಿದಂತೆ) ಪ್ರಕಾಶಕಗಳಾದ (ಯಾಗಫಲಭೂತವಾದ) ರಕ್ಷಣೆಗಳಿಂದ ಹಿಂದೆ (ನಮ್ಮ ಪಿತ್ರಾದಿಗಳಿಗೆ) ಹೇಗೋ ಹಾಗೆ, ನಮಗೆ (ಅಭಿಮತವಾದ ಸ್ವರ್ಗಾದಿ ಫಲವನ್ನೂ) ದೊರಕಿಸು; ಪರಾಕ್ರಮಿಯಾದ (ಇಂದ್ರನೇ), ಪಾಪರಹಿತನೆಂದು (ನಿನ್ನನ್ನು ಎಲ್ಲರೂ) ಭಾವಿಸುತ್ತಾರೆ; ಪಾಪರಹಿತನಾದ ನೀನು ನಮ್ಮನ್ನೂ ಪಾಪರಹಿತರೆಂದೇ ಭಾವಿಸುತ್ತಿ. ಎಲೈ ಇಂದ್ರನೇ, ವೃಷ್ಟ್ಯಾದಿಗಳಿಂದ ಜಗನ್ನಿರ್ವಾಹಕನಾಗಿ, ಯಜಮಾನನ ಎಲ್ಲಾ ಪಾಪಗಳನ್ನು ಪರಿಹರಿಸಿ ಕಾಪಾಡುತ್ತಿ; ಆದ್ದರಿಂದ ನಮ್ಮ (ಯಾಗಶಾಲೆಗೂ) ಹತ್ತಿರಕ್ಕೂ ಬಂದು, (ನಮಗೆ ಅಭಿಮತ ಫಲ) ವಾಹಕನಾಗಿ, (ಅನಿಷ್ಟವನ್ನು ಪರಿಹರಿಸಿ ಕಾಪಾಡು.)

## English Translation

Humble the adversary of every one (your worshipper), fierce (Indra), by your aids, like radiant paths, (to glory); by your powerful aids, guide us; hero, as you have guided our forefather, for you are honoured (by all). You, (Indra), who are the sustainer (of the world), remove all (the sins) of man: present at our sacrifice, you are the bearer (of good things).

॥ ವಿಶೇಷವಿಷಯಗಳು ॥

**ಕಯಸ್ಯ ಚಿತ್ ಅತಿಮತಿಂ ನಿ ಷೂ ನಮ—ಕಸ್ಯಚಿತ್ ತ್ವದ್ಭಕ್ತಸ್ಯ ಯಜಮಾನಸ್ಯ ವಿರುದ್ಧ-ಮನಸ್ಕಂ ಶತ್ರುಂ ಅಸ್ಮತ್ಪ್ರಣತಂ ಕುರು |** ನಿನ್ನ ಭಕ್ತನಾಗಿ ನಿನ್ನ ಪ್ರೀತಿಯನ್ನು ಸಂಪಾದಿಸಲು ಯತ್ನಮಾಡುವ ಯಜಮಾನನ ವಿಷಯದಲ್ಲಿ, ವಿರುದ್ಧವಾದ ನಡುವಳಿಕೆಯಿಂದ ಶತ್ರುವಿನ ರೀತಿಯಿಂದ ಇರುವ ದುರ್ಬುದ್ಧಿಯುಳ್ಳವನನ್ನು ಯಜಮಾನನಿಗೆ ವಿಧೇಯನಾಗಿ ಇರುವಂತೆ ಮಾಡು ಎಂದು ಇಂದ್ರನನ್ನು ಪ್ರಾರ್ಥಿಸಿದೆ.

**ಊತಿಭಿಃ ತೇಜಿಷ್ಠಾಭಿರರಣಿಭಿರ್ನ**—ಎಂಬ ವಾಕ್ಯವು ಶತ್ರುವನ್ನು ವಿಧೇಯನನ್ನಾಗಿರಿಸುವ ವಿಷಯದಲ್ಲಿ ದೃಷ್ಟಾಂತವಾಗಿ ಉಕ್ತವಾಗಿದೆ. ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. ಇಂದ್ರನು ಸಂಪೂರ್ಣವಾದ ಬಲದಿಂದ ಕೂಡಿದವನಾಗಿರುತ್ತಾ, ತನ್ನ ಆಶ್ರಿತರನ್ನು ರಕ್ಷಿಸುವ ಉಪಾಯಗಳಾದ ಯುದ್ಧವೇ ಮೊದಲಾದ ಬಹಳ ತೇಜೋಯುಕ್ತವಾದ ಮಾರ್ಗಗಳಿಂದಲೂ, ತನ್ನ ಆಶ್ರಿತರಲ್ಲಿ ಪ್ರೀತಿಯಿಂದಲೂ ಕೂಡಿದವನಾಗಿ ಲೋಕಕ್ಕೆ ವಿರುದ್ಧವಾದ ಕರ್ಮಾಚರಣೆಯುಳ್ಳ ವೃತ್ರಾಸುರನೇ ಮೊದಲಾದವರನ್ನು ನಿಗ್ರಹಮಾಡಿರುವಂತೆ, ಯಜಮಾನರ ವಿರೋಧಿಗಳನ್ನು ನಿಗ್ರಹಿಸು ಎಂದು ಒಂದು ವಿಧವಾದ ಅರ್ಥವನ್ನು ಹೇಳಿದೆ.

ಎರಡನೆಯ ಅರ್ಥದಲ್ಲಿ—ತೇಜಸ್ಸನ್ನು ಬಹಳವಾಗಿ ಹೆಚ್ಚಿಸಿ ಉತ್ತಮವಾದ ಗತಿಯನ್ನು ಯಜಮಾನರಿಗೆ ಉಂಟುಮಾಡುವ ಯಜ್ಞಾದಿಕರ್ಮಾಚರಣೆಯಲ್ಲಿ ಯಜಮಾನರು ಉದ್ಯುಕ್ತರಾಗಿರುವಂತೆ ಅನುಗ್ರಹಿಸಿರುವ ಇಂದ್ರನು ಕಾಂತಿಯುಳ್ಳ ರಕ್ಷಣೆಗಳಿಂದ ಯಜ್ಞಮಾಡುವ ನಮ್ಮನ್ನು ರಕ್ಷಿಸಿ, ಯಜ್ಞಕ್ಕೆ ಫಲವಾಗಿರುವ, ನಮ್ಮ ಇಷ್ಟನಾಗಿರುವ ಸ್ವರ್ಗಾದಿ ಪ್ರಾಪ್ತಿರೂಪವಾದ ಫಲವನ್ನು ಅನುಗ್ರಹಿಸಲಿ ಎಂದು ಆಶಿಸಿದೆ.

**ಪುರಾ ಯಥಾ**—ಎಂಬ ವಾಕ್ಯವೂ ಈ ವಿಷಯದಲ್ಲಿ ಉಪಮಾನರೀತಿಯಿಂದ ಉಕ್ತವಾಗಿದೆ. ಈಗ ಯಜ್ಞಮಾಡುವವರ ಪಿತ್ರಾದಿಗಳನ್ನು ಇಂದ್ರನು ಹಿಂದೆ ರಕ್ಷಿಸಿ ಅವರವರ ಇಷ್ಟಪ್ರಾಪ್ತಿಯನ್ನು ಉಂಟುಮಾಡಿದಂತೆ ಈಗ ನಮ್ಮ ಇಷ್ಟವನ್ನು ನೆರವೇರಿಸಲಿ ಎಂದು ಅರ್ಥವನ್ನು ವಿವರಿಸಿದೆ.

ಅನೇನಾಃ **ಮನ್ಯಸೇ—ಸರ್ವೈರಪಾಪತ್ವೇನ ಅವಬುಧ್ಯಸೇ ಯದ್ವಾ ಅನೇನಾಃ ತ್ವಂ ಅಸ್ಮಾನನೇನಸಃ ಮನ್ಯಸೇ** । ಇಂದ್ರನು ಸ್ವರ್ಗವೇ ಮೊದಲಾದ ಪುಣ್ಯ ಫಲಗಳನ್ನು ಯಜಮಾನರ ಇಷ್ಟಕ್ಕನುಸಾರವಾಗಿ ಸಾಧಿಸಿಕೊಡುವುದರಿಂದ ಮಹಿಮೆಯುಳ್ಳವನಾಗಿಯೂ ಪಾಪರಹಿತನಾಗಿಯೂ ಇರುವವನೆಂದು ತಿಳಿಯಲ್ಪಡುತ್ತಾನೆ. ಅಥವಾ, ಯಜ್ಞಮಾಡಿ ತೃಪ್ತಿಪಡಿಸುವ ಯಜಮಾನರನ್ನು ಇಂದ್ರನು ಪಾಪರಹಿತರನ್ನಾಗಿ ತಿಳಿಯುತ್ತಾನೆ ಎಂದು ಅರ್ಥ. ಅನೇನಾಃ ಎಂಬ ಪದವು ಆವೃತ್ತವಾಗಿ ಇಂದ್ರನಿಗೂ ಯಜಮಾನರಿಗೂ ವಿಶೇಷಣದ ರೀತಿಯಿಂದಪ್ರಯುಕ್ತವಾಗಿ ಈ ಎರಡುವಿಧವಾದ ಅರ್ಥಗಳನ್ನು ಹೇಳುವುದಕ್ಕೆ ಅವಕಾಶವಾಗಿದೆ.

**ವಹ್ನಿಃ ಪೂರೋಃ ವಿಶ್ವಾನಿ ಏನಾಂಸಿ ಅಪ ಪರ್ಷಿ—ವೃಷ್ಟ್ಯಾದಿ ಪ್ರದಾನೇನ ಜಗತಾಂ ನಿರ್ವಾಹಕಸ್ಸನ್ ಯಜಮಾನಸ್ಯ ಸರ್ವಾಣಿ ಏನಾಂಸಿ ಅಪಕೃಷ್ಯ ಪಾಲಯಸಿ**। ಇಲ್ಲಿ ಇಂದ್ರನ ವಿಷಯದಲ್ಲಿ ವಹ್ನಿ ಶಬ್ದವನ್ನು ಪ್ರಯೋಗಿಸಿದೆ. ವೃಷ್ಟಿಯನ್ನೂ ಆಶ್ರಿತರಿಗೆ ಬೇಕಾದುವುಗಳನ್ನೂ ಅನುಗ್ರಹಿಸುವುದರಿಂದ ಇಂದ್ರನು ಜಗತ್ತಿನ ರಕ್ಷಣೆಯ ಕಾರ್ಯವನ್ನು ನಿರ್ವಹಿಸುವವನೆಂದು ವರ್ಣಿಸಿದೆ. ಯಜಮಾನನನ್ನು ರಕ್ಷಿಸುವುದಕ್ಕಾಗಿ ಅವನ ಪಾಪಗಳೆಲ್ಲವನ್ನೂ ಪರಿಹರಿಸುವನು ಎಂದೂ ಹೇಳಿದೆ.

**ಪೂರು**—ಎಂಬ ಶಬ್ದವು ಮನುಷ್ಯನಾಮಗಳಲ್ಲಿ (ನಿ. ೩-೮) ಪಠಿತವಾಗಿದೆ. ಮತ್ತು,

**ಪ್ರ ನೂ ಮಹಿತ್ವಂ ವೃಷಭಸ್ಯ ವೋ॒ಚಂ ಯಂ ಪೂರವೋ ವೃತ್ರಹಣಂ ಸಚಂತೇ ।**
**ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ ॥**

(ಋ ಸಂ. ೧-೫೯-೬)

ಈ ಋಕ್ಕಿನಲ್ಲಿ **ಪೂರವಃ ಪೂರಯಿತವ್ಯಾಃ ಮನುಷ್ಯಾಃ** (ನಿ. ೭-೨೩) ಅರ್ಥವನ್ನು ವಿವರಿಸಿದೆ.

**ಆಸಾ — ಅಂತಿಕೇ ಆಸಾತ್** ಎಂಬ ಪದವು ಅಂತಿಕನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಸಮೀಪದಲ್ಲಿ ಎಂದು ಅರ್ಥ. ದೇವಯಜನದೇಶದಲ್ಲಿ ಎಂದು ಅರ್ಥಮಾಡಿದೆ.

**ನಃ—ಆಸಾ ಅಚ್ಛ ಅಭಿಮುಖೇನಾಗತ್ಯ ಅಭಿಮತೀನಾಂ ವೋಢಾ ಸನ್ ಅನಭಿಮತಮಪಕೃಷ್ಯ ಅಭಿಮತಂ ಪೂರಯಸಿ**— ಇಂದ್ರನು ಯಜ್ಞಮಾಡುವ ಪ್ರದೇಶಕ್ಕೆ ಬಂದು ಋತ್ವಿಜರ ಮತ್ತು ಯಜಮಾನರ ಇಷ್ಟಗಳನ್ನು ಸಾಧಿಸಲು ಅವರ ಅನಿಷ್ಟಗಳನ್ನು ಪರಿಹರಿಸಿ ಇಷ್ಟಗಳನ್ನು ನೆರವೇರಿಸುವನು ಎಂದು ಅರ್ಥವನ್ನು ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ನಮ**—ಣಮು ಪ್ರಹ್ವತ್ವೇ ಧಾತು. **ಣೋ ನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಪ್ರಯೋಜಕ ವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ನಮ ಎಂದು ರೂಪವಾಗುತ್ತದೆ.

**ಅತಿಮತಿಮ್**—ಅತಿಕ್ರಾಂತಾ ಮತಿಃ ಯಸ್ಮಾತ್ ಸಃ ಅತಿಮತಿಃ, ತಮ್. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ತೇಜಿಷ್ಠಾಭಿಃ**—ತೇಜಃ ಅಸ್ಯ ಅಸ್ತಿ ಇತಿ ತೇಜಸ್ವೀ. **ಅಸ್ಮಾಯಾಮೇಧಾ**—ಎಂಬುದರಿಂದ ವಿನಿ ಪ್ರತ್ಯಯ. ಅತಿಶಯೇನ ತೇಜಸ್ವೀ ತೇಜಿಷ್ಠಃ. ಅತಿಶಯಾರ್ಥ ತೋರುವಾಗ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ವಿನ್ನಿಗೆ ಲುಕ್. **ಟೇಃ** (ಪಾ. ಸೂ. ೬-೪-೧೪೩) ಎಂಬುದರಿಂದ ಟಿಗೆ (ಅಸ್) ಲೋಪ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಟಾಪ್. ತೃತೀಯಾ ಬಹುವಚನಾಂತರೂಪ.

**ಉಗ್ರಾಭಿಃ**—ಉಚ ಸಮವಾಯೇ ಧಾತು. **ಋಜ್ರೇಂದ್ರ** (ಉ. ಸೂ. ೨-೧೮೬) ಎಂಬುದರಿಂದ ರನ್ನಂತವಾಗಿ ನಿಪಾತಿತವಾಗಿದೆ. ಸ್ತ್ರೀತ್ವದಲ್ಲಿ ಟಾಪ್. ಉಗ್ರ ಎಂಬಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

**ನೇಷಿ**—ಣೀಞ್ ಪ್ರಾಪಣೇ ಧಾತು. **ಣೋ ನಃ** ಎಂಬುದರಿಂದ ಆದಿಗೆ ನತ್ವ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಸಾರ್ವಧಾತುಕಾರ್ಧಧಾ-** ಎಂಬುದರಿಂದ ಧಾತುವಿನ ಇಕಿಗೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಅನೇನಾಃ**—ನ ವಿದ್ಯತೇ ಏನಃ ಯಸ್ಯ ಸಃ ಅನೇನಾಃ **ನಞ್ಸುಭ್ಯಾಮ್** (ಪಾ. ಸೂ. ೬-೧-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಮನ್ಯಸೇ**—ಮನು ಅವಬೋಧನೇ ಧಾತು ದಿವಾದಿ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ಯಥಾ ಎಂಬುದರ ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪರ್ಷಿ**—ಪೄ ಪಾಲನಪೂರಣಯೋಃ ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಸಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರ ಪರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಪ್ರ ತದ್ವೋಚೇಯಂ ಭವ್ಯಾಯೇಂದವೇ ಹವ್ಯೋ ನ ಯ ಇಷವಾನ್ಮನ್ಮ
ರೇಜತಿ ರಕ್ಷೋಹಾ ಮನ್ಮ ರೇಜತಿ ।
ಸ್ವಯಂ ಸೋ ಅಸ್ಮದಾ ನಿದೋ ವಧೈರಜೇತ ದುರ್ಮತಿಂ ।
ಅವ ಸ್ರವೇದಘಶಂಸೋಽವತರಮವ ಕ್ಷುದ್ರಮಿವ ಸ್ರವೇತ್ ॥ ೬ ॥

॥ ಪದಪಾಠಃ ॥

ಪ್ರ । ತತ್ । ವೋಚೇಯಂ । ಭವ್ಯಾಯ । ಇಂದವೇ । ಹವ್ಯಃ । ನ । ಯಃ । ಇಷಽವಾನ್ । ಮನ್ಮ ।
ರೇಜತಿ । ರಕ್ಷಃಽಹಾ । ಮನ್ಮ । ರೇಜತಿ ।
ಸ್ವಯಂ । ಸಃ । ಅಸ್ಮತ್ । ಆ । ನಿದಃ । ವಧೈಃ । ಅಜೇತ । ದುಃಽಮತಿಂ ।
ಅವ । ಸ್ರವೇತ್ । ಅಘಽಶಂಸಃ । ಅವಽತರಂ । ಅವ । ಕ್ಷುದ್ರಂಽಇವ । ಸ್ರವೇತ್ ॥ ೬ ॥

॥ ಸಾಯಣಭಾಷ್ಯಂ ॥

ಭವ್ಯಾಯ ಭವನಶೀಲಾಯ ಪ್ರತಿದಿನಂ ಕಲಾಭಿವೃದ್ಧ್ಯಾ ವರ್ಧನಶೀಲಾಯೇಂದವೇಽಮೃತೇನ ಸರ್ವಸ್ಯ ಕ್ಲೇದಯಿತ್ರೇ ತದರ್ಥಂ ತದ್ವಕ್ಷ್ಯಮಾಣಂ ಕರ್ಮ ಸ್ತೋತ್ರಂ ವಾ ಪ್ರ ವೋಚೇಯಂ । ಪ್ರಕರ್ಷೇಣ ವಕ್ತುಂ ಶಕ್ತೋ ಭೂಯಾಸಂ । ಸ್ತುತೇರತಿಮಹತ್ತ್ವಾದಿತಿ ಭಾವಃ ॥ ವಚೇರ್ಲಿಙ್ಯಾಶಿಷ್ಯಙ್ । ವಚ ಉಮ್ ॥ ಕಸ್ಯ ತದಿತಿ । ಯ ಇಂದುರಿಷವಾನೇಷಣವಾನ್ ಮನ್ಮ ಮನನೀಯಂ ಸ್ತೋತ್ರಂ ಕರ್ಮ ವೋದ್ದಿಶ್ಯ ರೇಜತಿ ಗಚ್ಛತಿ । ರೇಜತಿರ್ಗತ್ಯರ್ಥಃ ರೇಜತಿ ದಕ್ಷ್ಯತೀತಿ ತನ್ನಾಮಸು ಪಾಠಾತ್ । ಆಗಮನೇ ದೃಷ್ಟಾಂತಃ । ಹವ್ಯೋ ನ ಹೋತವ್ಯ ಆಹ್ವಾತವ್ಯೋ ವಾ ಹವ್ಯ ಇಂದ್ರ ಇವ । ಪ್ರಾಯೇಣೇಂದ್ರ ಆಗಚ್ಛೇತ್ಯಾದಿನೇಂದ್ರ ಏವಾಹೂಯತೇ । ಸ ಇವ । ಸ ಏವ ವಿಶೇಷ್ಯತೇ । ರಕ್ಷೋಹಾ ಯಜ್ಞವಿಘಾತಕಾನಾಂ ರಕ್ಷಸಾಂ ಹಂತಾ ಮನ್ಮ ತೇಷಾಮೇವ ಕರ್ಮ ಹನನಾದಿರೂಪಂ ರೇಜತಿ ಗಚ್ಛತಿ । ಚಾಲಯತಿ ನಾಶಯತೀತ್ಯರ್ಥಃ । ಸ ಏವೇಂದುಃ ಸ್ವಯಂ ನಿದಃ ॥ ಣಿದಿ ಕುತ್ಸಾಯಾಂ । ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತಾ ॥ ಅಸ್ಮನ್ನಿಂದಿತುರ್ವೈರಿಣೋ ವಧೈರ್ಹನನೋಪಾಯೈಃ ॥ ಹನಶ್ಚ ವಧ ಇತಿ ಭಾವೇಽಪ್ ತತ್ಸನ್ನಿಯೋಗೇನ ವಧಾದೇಶಃ । ನ ಚಾದಂತೋಽಂತೋದಾತ್ತಃ ॥ ದುರ್ಮತಿಂ ದುರ್ಬುದ್ಧಿಮಸ್ಮದಸ್ಮತ್ತ ಆಜೇತ । ಆಕ್ಷಿಪೇತ್ । ಆಅವನಯೇತ್ । ಕಿಂಚಾಘಶಂಸೋಽಘಾನಾಂ ಪಾಪಾನಾಂ ಹಿಂಸಾದೀನಾಂ

**ಶಂಸಿತಾ ಸ್ತೇನೋಽವತರಮತ್ಯಂತನಿಕೃಷ್ಟಮವ ಸ್ವಸ್ಥಾನಾದವಾಙ್ಮುಖೋ ಭೂತ್ವಾ ಸ್ರವೇತ್ । ಗಚ್ಛತು । ಅಧಃ ಪತತ್ವಿತ್ಯರ್ಥಃ । ಅಘಶಂಸಃ ಸ್ತೇನಃ ಅಘಶಂಸೋ ವೃಕ ಇತಿ ತನ್ನಾಮಸು ಪಾಠಾತ್ । ಅವಸ್ರವಣಮೇವ ಪ್ರಾರ್ಥ್ಯತೇ । ಕ್ಷುದ್ರಮಿವ ಕ್ಷೇಪ್ತುಂ ಶಕ್ಯಮುದಕಾದಿಕಮಿವ । ಉದಕಂ ಯಥಾ ತಿಷ್ಠತಿ ಸ್ರವನ್ನಶ್ಯತಿ ತಥಾಸಾವಪೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಯಃ**—ಯಾವಸೋಮರಸವು । **ಇಷವಾನ್**—ಯಥೇಚ್ಛವಾದಷ್ಟು ಅನ್ನಸಹಿತವಾಗಿ **ಮನ್ಮ**—ಸ್ತುತಿಯನ್ನು (ಕರ್ಮವನ್ನು) ಉದ್ದೇಶಿಸಿ । **ಹವ್ಯಃ ನ**—ಹೋಮಕ್ಕೆ ಪಾತ್ರನಾದ ಅಥವಾ ಆಹೂಯಮಾನನಾದ (ಇಂದ್ರ) ನಂತೆ । **ರೇಜತಿ**—ಹೋಗುತ್ತದೆಯೋ (ಅಂತಹ) । **ಭವ್ಯಾಯ**—ಅಭಿವೃದ್ಧಿಶೀಲವೂ । **ಇಂದವೇ**—(ಅಮೃತದಿಂದ ಸರ್ವರಿಗೂ) ಕ್ಲೇದನವುಂಟುಮಾಡುವ (ಸೋಮರಸದ) । **ತತ್**—ಆ ಕರ್ಮವನ್ನು । **ಪ್ರವೋಚೇಯಂ**—ಹೆಚ್ಚಾಗಿ ಹೇಳಲು (ಸ್ತುತಿಸಲು) ಸಾಮರ್ಥ್ಯವುಂಟಾಗಲಿ । **ರಕ್ಷೋಹಾ**—(ಯಜ್ಞವಿಘಾತಕರಾದ) ರಾಕ್ಷಸರನ್ನು ಸಂಹರಿಸುವ (ಇಂದ್ರನು) । **ಮನ್ಮ**—(ಆ ರಾಕ್ಷಸರ ಹನನಾದಿ) ಕರ್ಮವನ್ನು । **ರೇಜತಿ**—ನಾಶಮಾಡುತ್ತಾನೆ । **ಸಃ**—ಆ ಸೋಮರಸವು । **ನಿದಃ**—ನಿಂದಕರಾದ (ವೈರಿಗಳನ್ನು) । **ದುರ್ಮತಿಂ**—ದುರ್ಬುದ್ಧಿಯನ್ನು । **ವಧೈಃ**—ಹನನೋಪಾಯಗಳಿಂದ । **ಅಸ್ಮತ್**—ನಮ್ಮ ಸಮೀಪದಿಂದ । **ಸ್ವಯಂ**—ಸ್ವತಃ । **ಆ ಅಜೇತ**—ದೂರ ಮಾಡಲಿ । (**ಕಿಂಚ**—**ಮತ್ತು**) । **ಅಘಶಂಸಃ**—ಪಾಪವನ್ನು ಶಂಸನೆಮಾಡುವ (ಕಳ್ಳನು) । **ಕ್ಷುದ್ರಂ**—ಅಲ್ಪವಾದ (ಜಲವು) । **ಅವ ಸ್ರವೇತ್ ಇವ**—ಅಧೋಮುಖವಾಗಿ ಹರಿದುಹೋಗಿ (ಅದೃಶ್ಯವಾಗು) ವಂತೆ । **ಅವತರಂ**—ಅತ್ಯಂತ ನಿಕೃಷ್ಟನಾಗಿ । **ಅವ ಸ್ರವೇತ್**—(ತನ್ನ ಸ್ಥಾನದಿಂದ) ಅಧೋಮುಖನಾಗಿ ಹೋಗಲಿ (ನಾಶವಾಗಲಿ).

॥ ಭಾವಾರ್ಥ ॥

ಅಪರಿಮಿತಾನ್ನದಾಯಕವಾಗಿ, ಆಹೂಯಮಾನನಾದ ಇಂದ್ರನಂತೆ, ಸ್ತುತಿ (ಕರ್ಮ) ಯನ್ನು ಉದ್ದೇಶಿಸಿ ಹೋಗುವುದೂ, ಅಭಿವೃದ್ಧಿಶೀಲವೂ, ಸರ್ವರ್ಕ್ಕೂ ಜೀವನಾಧಾರವೂ ಆದ ಸೋಮರಸದ (ಸಾಹಸ) ಕರ್ಮವನ್ನು ಸ್ತುತಿಸೋಣ. ಇಂದ್ರನು ಯಜ್ಞವಿಘಾತಕರಾದ ರಾಕ್ಷಸರನ್ನು ವಧಿಸಿ, ಅವರ ಹಿಂಸಾಕೃತ್ಯಗಳನ್ನು ನಾಶಮಾಡುತ್ತಾನೆ; ಸೋಮರಸವೂ, ನಿಂದಕರ ದುರ್ಬುದ್ಧಿಯನ್ನು (ತನ್ನ) ಹನನಾದಿ ಉಪಾಯಗಳಿಂದ, ತಾನೇ, ನಮ್ಮಿಂದ ದೂರಮಾಡಲಿ; ಪಾಪಶಂಸಕನಾದ ಕಳ್ಳನು, ಅಲ್ಪವಾದ ಜಲವು ಸ್ರವಿಸಿ (ಅದೃಶ್ಯವಾಗಿ) ಹೋಗುವಂತೆ, ಅಧೋಮುಖನಾಗಿ ಬೀಳಲಿ (ನಾಶವಾಗಲಿ).

## English Translation.

May I be competent to utter (praise) for the (Soma) libation, sustaining existence, which, like the (deity) to be invoked, (Indra), goes abounding with food to (each) venerable (rite); the destroyer of Rakshasas at (each) venerable (rite); May that (libation) of itself repress with chastisement the malevolence of him who reviles us: let the thief fall downwards (and) perish), like a little (water) running down (a declivity).

॥ ವಿಶೇಷವಿಷಯಗಳು ॥

**ಭವ್ಯಾಯ ಇಂದವೇ ತತ್ ಪ್ರ ವೋಚೇಯಂ**—ಭವನಶೀಲಾಯ ಕಲಾಭಿವೃದ್ಧ್ಯಾ ಪ್ರತಿದಿನಂ ವರ್ಧನಶೀಲಾಯ ಅಮೃತೇನ ಸರ್ವಸ್ಯ ಕ್ಲೇದಯಿತ್ರೇ ವಕ್ಷ್ಯಮಾಣಂ ಕರ್ಮ ಸ್ತೋತ್ರಂ ವಾ ಪ್ರಕರ್ಷೇಣ ವಕ್ತುಂ ಶಕ್ತೋ ಭೂಯಾಸಂ । **ಇಂದವೇ ದ್ರವತಿ ಇತಿ ಇಂದುದ್ರವಃ ಇಂದ್ರಃ** (ನಿ ೧೦-೮) ಇಂದುವೆಂದರೆ ಸೋಮನು. ಸೋಮರಸವನ್ನು ಪಾನಮಾಡುವುದಕ್ಕಾಗಿ ಓಡಿಬರುವವನಾದುದರಿಂದ ಇಂದ್ರನೆಂದು ಇಂದ್ರಶಬ್ದಾರ್ಥ ನಿರ್ವಚನವನ್ನು ನಿರುಕ್ತಕಾರರು ವಿಮರ್ಶೆಮಾಡಿರುವರು. ಅಥವಾ **ಇಂದೌ ರಮತೆ ಇತಿ ವಾ**—ಸೋಮಪಾನದಲ್ಲಿ ವಿಹರಿಸುತ್ತಿರುವವನಾದುದರಿಂದ ಇಂದ್ರನು ಎಂದೂ ಹೇಳಿರುವರು. ಈ ನಿರ್ವಚನವನ್ನು ಅನುಸರಿಸಿ ಈ ಋಕ್ಕಿನಲ್ಲಿ ಸೋಮನ ಮಹಿಮೆಯನ್ನು ವಿವರಿಸಿದೆ ಮತ್ತು ಪ್ರಕರಣದಿಂದ ಅವಶ್ಯವಾಗಿ ಹೇಳಬೇಕಾಗಿರುವ ಇಂದ್ರನ ಮಾಹಾತ್ಮ್ಯವನ್ನು ವರ್ಣಿಸಿದೆ.

ಆಯಾಯ ದಿನಗಳಲ್ಲಿ ಉದಯವನ್ನು ಹೊಂದಿರುವವನೂ, ತನ್ನ ಕಲೆಗಳ ಅಭಿವೃದ್ಧಿಯಿಂದ ವೃದ್ಧಿಯನ್ನೂ ಹೊಂದುತ್ತಿರುವವನೂ ಆದ ಮತ್ತು ಅಮೃತವನ್ನು ಎಲ್ಲರಿಗೂ ಬೀರುತ್ತಾ ಎಲ್ಲರನ್ನೂ ಆನಂದಗೊಳಿಸುವವನೂ ಆಗಿರುವ ಸೋಮನ (ವಿಷಯವಾದ) ಮಹಿಮೆಯು ಪ್ರಭೂತವಾಗಿರುವುದರಿಂದ ಸೋಮ ಸಂಬಂಧಿಯಾದ ಕರ್ಮವನ್ನಾಗಲಿ ಸ್ತೋತ್ರವನ್ನಾಗಲಿ ವಿಶದಪಡಿಸಲು ಸಮರ್ಥನಾದೇನು ಎಂದು ಮಂತ್ರದ್ರಷ್ಟೃವಾದ ಋಷಿಯು ಹೇಳಿರುವನು ಎಂದು ವರ್ಣಿಸಿದೆ. ನಿರುಕ್ತಕಾರರು—

**ಇಂದು ರಿಂಧೇರುನತ್ತೇರ್ವಾ**—ಎಂದು ಇಂದು ಪದಕ್ಕೆ ಅರ್ಥವನ್ನು ವಿವರಿಸಿದ್ದಾರೆ. ದುರ್ಗಾಚಾರ್ಯರು ದೀಪ್ತಿ ಎಂಬ ಅರ್ಥವನ್ನು ಬೋಧಿಸುವ ಇಂಧಿ ಧಾತುವಿನಿಂದಲಾಗಲಿ, ಕ್ಲೇದನವೆಂಬ ಅರ್ಥವನ್ನು ಬೋಧಿಸುವ ಉಂದೀ ಧಾತುವಿನಿಂದಲಾಗಲಿ, ಇಂದು ಪದವು ನಿಷ್ಪನ್ನವಾಗಿದೆ, ಚಂದ್ರನೆಂದು ಅರ್ಥ ಎಂದು ಹೇಳಿದ್ದಾರೆ. ಮತ್ತು ನಿರುಕ್ತಕಾರರು ಇದೇ ಋಕ್ಕನ್ನು ಉದಹರಿಸಿ,

> **ಪ್ರಬ್ರವೀಮಿ ತದ್ಭವ್ಯಾಯೇಂದವೇ ಹವನಾರ್ಹ ಇವ ಯ ಇಷಾವಾನನ್ನವಾನ್ ಕಾಮವಾನ್ ವಾ ಮನನಾನಿ ಚ ನೋ ರೇಜಯತಿ ರಕ್ಷೋಹಾ ಚ ಬಲೇನ ರೇಜಯತಿ ಸ್ವಯಂ ಸೋ ಅಸ್ಮದಭಿನಿಂದಿತಾರಂ । ವಧೈರಜೇತ ದುರ್ಮತಿಂ । ಅವಸ್ರವೇದಘಶಂಸಃ । ತತಶ್ಚಾವತರಂ ಕ್ಷುದ್ರಮಿವಾವಸ್ರವೇತ್** । ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಮತ್ತು,

> **ಅಭ್ಯಾಸೇ ಭೂಯಾಂ ಸಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯೇತಿ । ತತ್ಪರುಚ್ಛೇಪಸ್ಯ ಶೀಲಂ ॥**
>
> (ನಿ. ೧೦-೪೨)

ಎಂದೂ ಹೇಳಿರುವರು. ದುರ್ಗಾಚಾರ್ಯರು—

ಚಂದ್ರನಿಗೆ ಪ್ರೀತಿಕರವಾದ ಮಾತುಗಳನ್ನು ಹೇಳುತ್ತೇನೆ. ಈ ವಚನವೂ ಚಂದ್ರನ ಪ್ರೀತಿಯನ್ನು ಸಂಪಾದಿಸುವುದಾಗಿ ಇರುವುದು. ಚಂದ್ರನು ಇಷ್ಟಗಳನ್ನು ಅಪೇಕ್ಷಿಸುವವರ ಅಭಿಲಾಷೆಗಳನ್ನು ನೆರವೇರಿಸುವನು. ಆದ್ದರಿಂದ

ಆತ್ಮವಂತನಾಗಿರುವನು ಎಂದು ಒಂದು ವಿಧವಾದ ಅರ್ಥ. ಧ್ಯಾನಾಸ್ಪದನಾಗಿರುವಂತೆ ಹವಿಸ್ಸಿನಿಂದಲೇ ಭಾವನೆಯನ್ನು ಹೊಂದಲ್ಪಡುವುದಕ್ಕೆ ಅರ್ಹನು. ಹವಿರ್ಭಾಗಿಯಲ್ಲದಿರುವುದರಿಂದ ಭಾವಿಸಲ್ಪಡುವುದಿಲ್ಲ ಎಂದು ಎರಡನೆಯ ಅರ್ಥ.

ಹೋಮದಿಂದ ಆಹುತಿಯನ್ನು ಹೊಂದುವ ದೇವತೆಯಂತೆ, ಯಜ್ಞದಿಂದ ಪುನಃ ಆಹ್ವಾನಿತನಾಗುವುದಿಲ್ಲ. ಯಾವಾಗಲೂ ಇವನು ಅನ್ನವುಳ್ಳವನಾಗಿಯೂ, (ಕಾಮಿಗಳಾದವರಿಗೆ) ಕಾಮವುಳ್ಳವರಿಗೆ ಅವರವರ ಇಷ್ಟಗಳನ್ನು ನೆರವೇರಿಸಿಕೊಡುವವನಾಗಿಯೂ ಇರುವನು. ಇದರಿಂದ ನಮ್ಮ ಪ್ರಜ್ಞಾನವನ್ನೂ ಸೆಳೆಯುವನು. ಆದರೆ ನಮ್ಮ ಮನಸ್ಸುಗಳನ್ನು ಕಾಮೋನ್ಮುಖವಾಗಿ ಮಾಡುವ ಇವನನ್ನು ಸ್ತುತಿಸಬಾರದೆಂದು ಆಶಂಕೆಯು ಉಂಟಾಗುವುದು. ಇವನು ರಾಕ್ಷಸರುಗಳನ್ನು ತನ್ನ ಸಾಮರ್ಥ್ಯದಿಂದ ನಾಶಮಾಡುವನು.

ಮತ್ತು ಇವನು (ನಮ್ಮನ್ನು ನಿಂದಿಸುವವರನ್ನು) ನಮ್ಮ ನಿಂದಕರನ್ನು ವಜ್ರಾಯುಧದಿಂದ ಪ್ರಹರಿಸಿ ಜಯಿಸುವನು. ನಮ್ಮಲ್ಲಿ ಕೆಟ್ಟಮನಸ್ಸುಳ್ಳವರನ್ನೂ ನಾಶಮಾಡುವನು. ನಮ್ಮನ್ನು ದೂಷಿಸುವವನು ಆಯಾಯ ಪ್ರದೇಶಗಳಲ್ಲಿ ಪ್ರಸಿದ್ಧನಾಗಿದ್ದರೂ ಅಧೋಗತಿಯನ್ನು ಹೊಂದುವನು. ಸ್ವಲ್ಪಮಟ್ಟಿಗೆ ವೃದ್ಧಿಯನ್ನು ಹೊಂದಿದ ದ್ರವ್ಯವು ಕೊಂಚಕೊಂಚವಾಗಿ ನಾಶವಾಗುತ್ತಾ ಸಂಪೂರ್ಣವಾಗಿ ನಾಶವಾಗುವಹಾಗೆ ನಮ್ಮಲ್ಲಿ ನೀಚಬುದ್ಧಿಯಿಂದ ಇರುವವನೂ ಕೂಡ ಕ್ರಮಕ್ರಮವಾಗಿ ಅಧೋಗತಿಯನ್ನು ಹೊಂದುವನು ಎಂದು ಅರ್ಥವನ್ನು ವಿವರಿಸಿದ್ದಾರೆ. ಮತ್ತು ಈ ಪರುಚ್ಛೇಪಋಷಿಯು ಶಬ್ದಗಳನ್ನು ಆವೃತ್ತಿಮಾಡಿ ಹೇಳುವುದರಿಂದ ಅರ್ಥವು ಅತಿಶಯವಾಗಿರುವುದೆಂದು ಯಾಸ್ಕರು ವಿವರಿಸಿ **ಅಹೋ ದರ್ಶನೀಯಾ ಅಹೋ ದರ್ಶನೀಯಾ** ಎಂದು ದೃಷ್ಟಾಂತವನ್ನೂ ಉದಾಹರಿಸಿರುತ್ತಾರೆ.

**ಮನ್ಮ— ಮನನೀಯಂಸ್ತೋತ್ರಂ ಕರ್ಮ ವಾ ।**
**ಉಪ ಪ್ರಾಗಾತ್ಸುಮನ್ಮೇಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ ।**
**ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಂ ॥**

(ಋ. ಸ. ೧-೧೬೨-೭)

ಈ ಋಕ್ಕಿನಲ್ಲಿ ಮನ್ಮ ಶಬ್ದಕ್ಕೆ **ಮನನೀಯಂ ಅರ್ಥಜಾತಂ**— ಧ್ಯಾನಮಾಡಲು ಅರ್ಹವಾದದ್ದೆಂದು ಅರ್ಥವನ್ನು ವಿವರಿಸಿದೆ.

ಎರಡನೆಯ **ಮನ್ಮ** ಶಬ್ದಕ್ಕೆ **ತೇಷಾಮೇವ ಕರ್ಮ ಹನನಾದಿರೂಪಂ**— ಯಜ್ಞ ವಿಘ್ನಕರ್ತೃಗಳಾದ ರಾಕ್ಷಸರನ್ನು ನಿಗ್ರಹಮಾಡುವ ಕರ್ಮವೆಂದು ಅರ್ಥವನ್ನು ಹೇಳಿದೆ.

**ಅಘಶಂಸಃ ಅವತರಂ ಅವಸ್ವನೇತ್— ಅಘಾನಾಂ ಪಾಪಾನಾಂ ಹಿಂಸಾದೀನಾಂ ಶಂಸಿತಾ ಸ್ತೇನಃ ಅತ್ಯಂತನಿಕೃಷ್ಟಂ ಅವಾಙ್ಮುಖೋ ಭೂತ್ವಾ ಅಧಃ ಪತೆತು ।** ಪಾಪಕರ್ಮಗಳನ್ನೂ ಹಿಂಸೆಯೇ ಮೊದಲಾದವುಗಳನ್ನೂ ಆಚರಿಸುವ ಕಳ್ಳನು, ತಾನು ಇರುವ ಸ್ಥಿತಿಗಿಂತಲೂ (ಕಡಿಮೆಯಾಗಿರುವ) ನೀಚವಾದ ಸ್ಥಿತಿಯನ್ನು ಹೊಂದಲಿ ಎಂದು ಪ್ರಾರ್ಥಿಸಿದೆ. ಈ ವಿಷಯದಲ್ಲಿ **ಕ್ಷುದ್ರಮಿವ— ಕ್ಷೇಪ್ತುಂ ಶಕ್ಯಮುದಕಾದಿಕಮಿವ** (ಎಸೆಯಲು) ಬಿಸಾಡಲು ಅರ್ಹವಾದ ನೀರೇ ಮೊದಲಾದವುಗಳಹಾಗೆ ಎಂದು ದೃಷ್ಟಾಂತವನ್ನು ಉದಹರಿಸಿದೆ. (ನೀರು) ಉದಕವು ತಾನು ಇರುವ ಪ್ರದೇಶದಿಂದ ಸ್ರವಿಸುತ್ತಾ ಕ್ರಮಕ್ರಮವಾಗಿ ನಾಶವಾಗುವಹಾಗೆ ಕಳ್ಳನೂ ನಾಶವನ್ನು ಹೊಂದುವ

ನೆಂದು ವಿವರಿಸಿದೆ. ಅಘಶಂಸ ಶಬ್ದವೂ **ತೃಪುಃ ತಕ್ವಾ** ಎಂಬ ಹದಿನಾಲ್ಕು ಸ್ತೇನನಾಮಗಳಲ್ಲಿ (ನಿ. ೩-೧೯) ಪಠಿತ ವಾಗಿದೆ. ಮತ್ತೂ—

**ಇಂದ್ರಾಸೋಮಾ ಸಮಘಶಂಸಮಭ್ಯ೧ಘಂ ತಪುರ್ಯಯಸ್ತು ಚರುರಗ್ನಿವಾँ ಇವ ।**
**ಬ್ರಹ್ಮದ್ವಿಷೇ ಕ್ರವ್ಯಾದೇ ಘೋರಚಕ್ಷಸೇ ದ್ವೇಷೋ ಧತ್ತಮನವಾಯಂ ಕಿಮೀದಿನೇ ॥**
(ಋ. ಸಂ. ೭-೧೦೪-೨)

ಈ ಋಕ್ಕನ್ನು ಉದಹರಿಸಿ ಯಾಸ್ಕರು **ಅಘಶಂಸಂ ಅಭ್ಯಘಂ** ಎಂಬ ಪದಗಳಿಗೆ **ಅಘಸ್ಯ ಶಂಸಿತಾರಂ, ಅಘಂ ಹಂತೇರ್ನಿರ್ಹ್ರಸಿತೋಽಪಸರ್ಗ ಆಹಂತೀತಿ** । ಎಂದು ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು **ಅಘಸ್ಯ ಶಂಸಿತಾರಂ**—ಪಾಪಗಳನ್ನು ಪ್ರಶಂಸಿಸುವನು. ಅಭ್ಯಘಂ ಪಾಪಗಳನ್ನೇ ಆಚರಿಸುವುದಕ್ಕಾಗಿ ತನ್ನ ಜೀವಿತಕಾಲ ವನ್ನು ಉಪಯೋಗಿಸುವವನು ಎಂದು ಅರ್ಥವನ್ನು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ವೋಚೇಯಮ್**—ವಚ ಪರಿಭಾಷಣೇ ಧಾತು. ಲಿಙ್ ಉತ್ತಮಪುರುಷ ಏಕವಚನದಲ್ಲಿ ಮಿಪಿಗೆ **ತಸ್‌ಥಸ್‌ಥ**—ಎಂಬುದರಿಂದ ಅಮಾದೇಶ. ಯಾಸುಟಾಗಮ. **ಲಿಙ್ಯಾಶಿಷ್ಯಙ್** (ಪಾ. ಸೂ. ೩-೧-೮೬) ಎಂಬುದ ರಿಂದ ಲಿಙ್ ಪರವಾದಾಗ ಅಙ್. ಇದು ಪರವಾದಾಗ **ವಚಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಧಾತು ವಿಗೆ ಉಮಾಗಮ. **ಅತೋಯೇಯಃ** (ಪಾ. ಸೂ. ೭-೨-೮೦) ಎಂಬುದರಿಂದ ಯಾಸುಟಿಗೆ ಇಯಾದೇಶ. ಉಮ್ ಪರವಾದಾಗ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭವ್ಯಾಯ**—ಭೂ ಸತ್ತಾಯಾಂ ಧಾತು. **ಭವ್ಯಗೇಯಪ್ರವಚನೀಯ**—(ಪಾ. ಸೂ. ೩-೪-೬೮) ಎಂಬುದ ರಿಂದ ಯತ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಇಂದವೇ**—ಉಂದೀ ಕ್ಲೇದನೇ ಧಾತು. **ಉಂದೇರಿಚ್ಚಾದೇಃ** (ಉ. ಸೂ. ೧-೧೨) ಎಂಬುದರಿಂದ ಉನ್ ಪ್ರತ್ಯಯ. ಧಾತುವಿನ ಉಕಾರಕ್ಕೆ ಇಕಾರಾದೇಶ. ಉನತ್ತಿ ಕ್ಲೇದಯತಿ ಇತಿ ಇಂದುಃ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರೇಜತಿ**—ರೇಜೃ ಗತೌ ಧಾತು. ರೇಜತಿ ದಧ್ಯತಿ (ನಿರು. ೨-೧೪) ಎಂದು ಗತಿಕರ್ಮಕ ಧಾತುಗಳ ಮಧ್ಯೆ ಪಠಿತವಾಗಿದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ತಿಪ್, ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ರಕ್ಷೋಹಾ**—ಹನ ಹಿಂಸಾಗತ್ಯೋಃ ಧಾತು. ರಕ್ಷಸಾಂ ಹಂತಾ ರಕ್ಷೋಹಾ. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಪ್ರಥಮಾ ಏಕವಚನಾಂತರೂಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಸ್ಮತ್**—**ಸುಪಾಂಸುಲುಕ್** ಎಂಬುದರಿಂದ ವಿಭಕ್ತಿಗೆ ಲುಕ್ ಬರುತ್ತದೆ.

**ನಿದಃ**—ಣಿದಿ ಕುತ್ಸಾಯಾಂ ಧಾತು. **ಣೋ ನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಇದಕ್ಕೆ ಕ್ವಿಪ್ ಪ್ರತ್ಯಯ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಧೈಃ**—ಹನ ಹಿಂಸಾಗತ್ಯೋಃ ಧಾತು. **ಹನಶ್ಚ ವಧಃ** (ಪಾ. ಸೂ. ೩-೩-೭೬) ಎಂಬುದರಿಂದ ಭಾವಾರ್ಥದಲ್ಲಿ ಅಪ್ ಪ್ರತ್ಯಯ. ಪ್ರಕೃತಿಗೆ ವಧಾದೇಶ. ಇದು ಅದಂತವಾಗಿಯೂ ಅಂತೋದಾತ್ತವಾಗಿಯೂ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ಅಜೇತ**—ಅಜ ಗತಿಕ್ಷೇಪಣಯೋಃ ಧಾತು. ವ್ಯತ್ಯಯದಿಂದ ಆತ್ಮನೇಪದಿಯಾಗುತ್ತದೆ. ಲಿಙ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ರವೇತ್**—ಸ್ರು ಪ್ರಸ್ರವಣೇ ಧಾತು ಲಿಙ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅಘಶಂಸಃ**—ಅಘೇ ಪಾಪೇ ಶಂಸಃ ಮನಸಿ ಅಭಿಲಾಷಃ ಯಸ್ಯ ಸೋಽಯಮಘಶಂಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಕ್ಷುದ್ರಮ್**—ಕ್ಷುದಿರ್ ಸಂಪೇಷಣೇ ಧಾತು. **ಸ್ಫಾಯಿತಂಚಿ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ‖ ೬ ‖



‖ ಸಂಹಿತಾಪಾಠಃ ‖

ವನೇಮ ತದ್ಧೋತ್ರಯಾ ಚಿತಂತ್ಯಾ ವನೇಮ ರಯಿಂ ರಯಿವಃ ಸುವೀರ್ಯಂ

ರಣ್ವಂ ಸಂತಂ ಸುವೀರ್ಯಂ ।

ದುರ್ಮನ್ಮಾನಂ ಸುಮಂತುಭಿರೇಮಿಷಾ ಪೃಚೀಮಹಿ ।

ಆ ಸತ್ಯಾಭಿರಿಂದ್ರಂ ದ್ಯುಮ್ನಹೂತಿಭಿರ್ಯಜತ್ರಂ ದ್ಯುಮ್ನಹೂತಿಭಿಃ ‖ ೭ ‖

॥ ಪದಪಾಠಃ ॥

ವನೇಮ । ತತ್ । ಹೋತ್ರಯಾ । ಚಿತಂತ್ಯಾ । ವನೇಮ । ರಯಿಂ । ರಯಿಽವಃ । ಸುಽವೀರ್ಯಂ । ರಣ್ವಂ ।
ಸಂತಂ । ಸುಽವೀರ್ಯಂ ।
ದುಃಽಮನ್ಮಾನಂ । ಸುಮಂತುಽಭಿಃ । ಆ । ಈಂ । ಇಷಾ । ಪೃಚೀಮಹಿ ।
ಆ । ಸತ್ಯಾಭಿಃ । ಇಂದ್ರಂ । ದ್ಯುಮ್ನಹೂತಿಽಭಿಃ । ಯಜತ್ರಂ । ದ್ಯುಮ್ನಹೂತಿಽಭಿಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಯಂ ಯಜಮಾನಾಸ್ತತ್ತಾದೃಶಂ ಸ್ತುತ್ಯಂ ತವ ರೂಪಂ ಯದ್ವಾ ತತ್ತೇ ವಯಂ ಚಿತಂತ್ಯಾ ತವ ಗುಣಾನ್ ಜ್ಞಾಪಯಂತ್ಯಾ ॥ ಚಿತೀ ಸಂಜ್ಞಾನೇ । ಅಸ್ಮಾಣ್ಯಂತಾಚ್ಛತರಿ ವ್ಯತ್ಯಯೇನ ಶಃ ॥ ಹೋತ್ರಯಾ ಹೋಮಸಾಧನಭೂತಯಾ ಸ್ತುತಿರೂಪಯಾ ವಾಚಾ ವನೇಮ । ಸಂಭಜೇಮ । ಯದ್ವಾ । ಶಬ್ದಯೇಮ । ಸ್ತುತಿಂ ಕರವಾಮೇತ್ಯರ್ಥಃ । ಹೋತ್ರೇತಿ ವಾಙ್ನಾಮ ಹೋತ್ರಾ ಗೀರಿತಿ ತನ್ನಾಮಸು ಪಾಠಾತ್ । ಕಿಂಚೈವಂ ಸ್ತೋತಾರೋ ವಯಮಪಿ ಹೇ ರಯಿವೋ ವಿಶಿಷ್ಟಧನವನ್ನಿಂದ್ರ ರಯಿಂ ಧನಂ ವನೇಮ । ಸಂಭಜೇಮ । ಕೀದೃಶಂ ರಯಿಂ । ಸುವೀರ್ಯಂ ಶೋಭನಸಾಮರ್ಥ್ಯೋಪೇತಂ ರಣ್ವಂ ರಮಣೀಯಂ ಗಂತವ್ಯಂ ವಾರ್ಥಿಭಿಃ ಸಂತಂ ಸರ್ವದಾ ವರ್ತಮಾನಂ ಯಜ್ಞಾದಿದ್ವಾರಾ ಬಹುಶೋ ದೀಯಮಾನಮಪಿ ಪ್ರವರ್ಧಮಾನಂ । ಪುನಸ್ತದೇವ ವಿಶೇಷ್ಯತೇ । ಸುವೀರ್ಯಂ ಶೋಭನಪುತ್ರಭೃತ್ಯಾದ್ಯುಪೇತಂ ಧನೇನ ತೇಷಾಂ ಸಂಪಾದಯಿತುಂ ಶಕ್ಯತ್ವಾತ್ ॥ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ ॥ ಕಿಂಚ ಹೇ ಇಂದ್ರ ದುರ್ಮನ್ಮಾನಂ ದುಃಖೇನ ಮಂತುಂ ಶಕ್ಯಂ ತ್ವಾಂ ತವ ಮಹಿಮ್ನೋಽತಿಮಹತ್ತ್ವಾತ್ ಸುಮಂತುಭಿಃ ಶೋಭನೈರ್ಮನನೈಸ್ತತ್ಸಾಧನೈಃ ಸ್ತೋತ್ರೈರ್ವೇಷಾ ಹವೀರೂಪೇಣಾನ್ನೇನ ಚಾ ಪೃಚೀಮಹಿ । ಸರ್ವತಃ ಸಂಪೃಕ್ತಾ ಭೂಯಾಸ್ಮ । ಯದ್ವಾ । ಇಷಾನ್ನೇನ ನಿಮಿತ್ತೇನ । ಪೂರ್ವಂ ಧನಸ್ಯ ಪ್ರಾರ್ಥಿತತ್ವಾದಿದಾನೀಮನ್ನಂ ಪ್ರಾರ್ಥ್ಯತೇ ॥ ಪೃಚೀ ಸಂಪರ್ಕೇ । ಲಿಙಿ ಛಾಂದಸೋ ವಿಕರಣಸ್ಯ ಲುಕ್ ॥ ಕಿಂಚ ಯಜತ್ರಂ ಯಾಗನಿಷ್ಪಾದಕಮಿಂದ್ರಂ ಸತ್ಯಾಭಿರವಿಸಂವಾದಿನೀಭಿರ್ಯಥಾಭಿಲಾಷಮುಪಜಾಯಮಾನಫಲಾಭಿರ್ದ್ಯುಮ್ನಹೂತಿಭಿಃ । ಹರಿವ ಆಗಚ್ಛ ಮೇಧಾತಿಥೇರ್ಮೇಷೇತ್ಯಾಹ್ವಾನೈರಿತ್ಯರ್ಥಃ । ಪುನಸ್ತಾ ಏವ ವಿಶೇಷ್ಯಂತೇ । ದ್ಯುಮ್ನಹೂತಿಭಿರ್ಹವಿರ್ಲಕ್ಷಣಾನ್ನನಿಮಿತ್ತೈರಾಹ್ವಾನೈರಾ ಪೃಚೀಮಹೀತಿ ಶೇಷಃ । ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವಾ । ನಿಂ. ೫-೫. । ಇತಿ ಯಾಸ್ಕಃ ॥

॥ ಪ್ರತಿಪದಾರ್ಥ ॥

(**ಹೇ ಇಂದ್ರ**—ಎಲೈ ಇಂದ್ರನೇ) । **ತತ್**—ಅಂತಹ (ಸ್ತುತ್ಯವಾದ ನಿನ್ನ ರೂಪವನ್ನು) । **ಚಿತಂತ್ಯಾ**—ನಿನ್ನ ಗುಣಗಳನ್ನು ಜ್ಞಾಪಿಸುವ ಮತ್ತು । **ಹೋತ್ರಯಾ**—ಹೋಮಸಾಧನಭೂತವಾದ (ಸ್ತುತಿರೂಪವಾದ) ವಾಕ್ಕಿ

ನಿಂದ | **ವನೇಮ**—ಸ್ತುತಿಸೋಣ; | **ರಯಿವಃ**—ವಿಶೇಷ ಧನಯುಕ್ತನಾದ ಎಲೈ ಇಂದ್ರನೇ, | (**ಕಿಂಚ**—ಮತ್ತು ಸ್ತೋತೃಗಳಾದ ನಾವೂ ಕೂಡ) **ಸುವೀರ್ಯಂ**—ಶುಭಕರನಾದ ಸಾಮರ್ಥ್ಯಯುಕ್ತವಾಗಿಯೂ, | **ರಣ್ವಂ**—ರಮಣೀಯವಾಗಿಯೂ (ಅರ್ಥಿಗಳಿಂದ ಗಮ್ಯವಾಗಿಯೂ), | **ಸಂತಂ**—ಚಿರಸ್ಥಾಯಿಯಾಗಿಯೂ (ಯಾಗದಲ್ಲಿ ಯಥೇಚ್ಛವಾಗಿ ದಾನಮಾಡಿದರೂ, ಪುನಃ ಅಭಿವೃದ್ಧವೂ), | **ಸುವೀರ್ಯಂ**—ಒಳ್ಳೆಯ ವೀರರಾದ (ಪುತ್ರಾದಿ) ಯುಕ್ತವಾಗಿಯೂ (ಇರುವ) | **ರಯಿಂ**—ಧನವನ್ನು | **ವನೇಮ**—ಹೊಂದೋಣ; | (**ಕಿಂಚ**—ಮತ್ತು) **ದುರ್ಮರ್ಶ್ನಾನಂ**—ತಿಳಿಯಲು ಕಷ್ಟಸಾಧ್ಯನಾದ | **ಈಂ**—ಆ (ನಿನ್ನನ್ನು) | **ಸುಮಂತುಭಿಃ**—ಶುಭವಾದ ಚಿಂತನಾದಿಗಳಿಂದ (ಸ್ತುತಿಗಳಿಂದ) | **ಇಷಾ** (**ಚ**)—(ಹವೀರೂಪವಾದ) ಅನ್ನದಿಂದಲೂ (ಕೂಡ) (ಅನ್ನಕ್ಕೋಸ್ಕರವಾಗಿ) | **ಆ ಪೃಚೀಮಹಿ**—ಚೆನ್ನಾಗಿ ಪ್ರಾಪ್ತರಾಗೋಣ; | (**ಕಿಂಚ**—ಮತ್ತೂ) | **ಯಜತ್ರಂ**—ಯಾಗಾದಿ ಪೂಜ್ಯನಾದ (ಯಾಗನಿಷ್ಪಾದಕನಾದ) | **ಇಂದ್ರಂ**—ಇಂದ್ರನನ್ನು | **ಸತ್ಯಾಭಿಃ**—ಸತ್ಯವಾದ (ಇಷ್ಟಾರ್ಥಫಲದಾಯಕಗಳಾದ) | **ದ್ಯುಮ್ನಹೂತಿಭಿಃ**—ಯಶಸ್ವಿಗಳಾದ ಸ್ತುತಿರೂಪ ಆಹ್ವಾನಗಳಿಂದ (ಮತ್ತು) | **ದ್ಯುಮ್ನಹೂತಿಭಿಃ**—(ಹವಿರ್ಲಕ್ಷಣಾನ್ನಸ್ವೀಕಾರನಿಮಿತ್ತಕವಾದ) ಆಹ್ವಾನಗಳಿಂದ | **ಆ ಪೃಚೀಮಹಿ**—ಪ್ರಾಪ್ತರಾಗೋಣ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಗುಣದ್ಯೋತಕವಾದಮತ್ತು ಹೋಮಸಾಧನಭೂತವಾದ (ಸ್ತುತಿರೂಪವಾದ) ವಾಕ್ಕುಗಳಿಂದ (ನಿನ್ನನ್ನು) ಸ್ತುತಿಸುತ್ತೇವೆ; ಐಶ್ವರ್ಯಯುಕ್ತನಾದ ಎಲೈ ಇಂದ್ರನೇ, ವೀರ್ಯವನ್ನುಂಟುಮಾಡುವುದೂ, ಇಷ್ಟವಾದುದೂ, ಶಾಶ್ವತವಾದುದೂ (ದಾನಮಾಡುತ್ತಿದ್ದರೂ, ಇನ್ನೂ ಅಭಿವೃದ್ಧಿಯಾಗುತ್ತಲೇ ಇರುವುದೂ), ವೀರರಾದ ಪುತ್ರಾದಿಗಳನ್ನು ಕೊಡುವುದೂ ಆದ ಧನವನ್ನು (ನಾವು) ಅಪೇಕ್ಷಿಸುತ್ತೇವೆ; ಚೆನ್ನಾಗಿ ತಿಳಿದುಕೊಳ್ಳಲು ಅಸಾಧ್ಯನಾದ ನಿನ್ನನ್ನು ಸ್ತುತಿಗಳಿಂದ ಮತ್ತು ಹವಿರ್ಲಕ್ಷಣವಾದ ಅನ್ನಾದಿಗಳಿಂದ ಯುಕ್ತರಾಗಿ (ಅನ್ನಾದಿಗಳಿಗೋಸ್ಕರ) ಸಮೀಪಿಸುತ್ತೇವೆ; ಎಲೈ ಇಂದ್ರನೇ, ಯಾಗಾದಿ ಪೂಜ್ಯನಾದ ನಿನ್ನನ್ನೂ ಸತ್ಯವಾದ (ಯಥಾರ್ಥಫಲದಾಯಕವಾದ), ಹವಿರಾದಿ ಸಹಿತವಾದ; ಮತ್ತು ಸಾರ್ಥಕವಾದ ಆಹ್ವಾನಗಳಿಂದ (ಸ್ತುತಿಗಳಿಂದ) ಸಮೀಪಿಸುತ್ತೇವೆ.

## English Translation.

We praise you, Indra, with praises, making known (your glory): we solicit, giver of riches, the wealth that bestows vigour, that is agreeable, durable, and the support of progeny. May we (ever) be possessed of (abundant) food, through the praises of you, whom it is difficult adequately to honour: may we attain the adorable (Indra) by true and earnest invocation ; by invocations, (offering sacrificial) food.

॥ ವಿಶೇಷವಿಷಯಗಳು ॥

**ತತ್ ಚಿತಂತ್ವಾ ಹೋತ್ರಯಾ ವನೇಮ**—ಇಲ್ಲಿ ತತ್ ಎಂಬ ಶಬ್ದಕ್ಕೆ ಸ್ತೋತ್ರಾರ್ಹವಾದ ಇಂದ್ರನ ರೂಪವೆಂತಲೂ, ಯಜ್ಞಮಾಡುವದರಲ್ಲಿ ಪ್ರಸಿದ್ಧರಾದ ಯಜಮಾನರೆಂತಲೂ ಎರಡು ವಿಧವಾದ ಅರ್ಥವನ್ನೂ ವರ್ಣಿಸಿದೆ.

**ಹೋತ್ರಾ** ಎಂಬ ಪದವು **ಯಜ್ಞಃ ವೇನಃ** ಎಂದು ಹದಿನೈದು **ಯಜ್ಞ**ನಾಮಗಳಲ್ಲಿಯೂ (ನಿ. ೩–೧೯). **ಶ್ಲೋಕಃ, ಧಾರಾ,** ಎಂಬ ಐವತ್ತೇಳು **ವಾಙ್ನಾಮ**ಗಳಲ್ಲಿಯೂ, (ನಿ. ೨–೨೩) ಉಕ್ತವಾಗಿದೆ. ಇಲ್ಲಿ **ಹೋಮಸಾಧನಭೂತಯಾ ಸ್ತುತಿರೂಪಯಾ ವಾಚಾ**-ಹೋಮವನ್ನು ಮಾಡುವಾಗ ಪಠಿಸುವ ಸ್ತುತಿರೂಪವಾದ ವಾಕ್ಕೆಂದು ಅರ್ಥವನ್ನು ಹೇಳಿದೆ.

ಯಜ್ಞಾಚರಣೆಯಲ್ಲಿ ನಿಪುಣರಾದವರು ಸ್ತುತ್ಯವಾದ ಇಂದ್ರನ ರೂಪವನ್ನೂ ಗುಣಗಳನ್ನೂ ಪ್ರಕಟಮಾಡುವ, ಹೋಮಕಾಲಗಳಲ್ಲಿ ಪಠಿಸುವ ಮಂತ್ರಗಳಿಂದ (ಸ್ತುತಿಮಾಡುವರೆಂದು ಅರ್ಥವನ್ನು ವರ್ಣಿಸಿದೆ.) ಸ್ತುತಿಮಾಡಲು ಅರ್ಹರಾಗುವರೆಂದು ಪ್ರಾರ್ಥಿಸಿದೆ.

**ರಣ್ವಂ ಸುವೀರ್ಯಂ ಸಂತಂ ರಯಿಂ ವನೇಮ—ರಯಿ** ಶಬ್ದವು ಉದಕನಾಮಗಳಲ್ಲಿಯೂ (ನಿ. ೨–೨೪) **ಧನ** ನಾಮಗಳಲ್ಲಿಯೂ (ನಿ. ೩–೯) ಪಠಿತವಾಗಿದೆ. **ರಯಿರಿತಿ ಧನನಾಮ, ರಾತೇರ್ದಾನಕರ್ಮಣಃ** (ನಿ. ೪–೧೭) ದಾನ ಎಂಬ ಅರ್ಥವನ್ನು ಬೋಧಿಸುವ ರಾ ಧಾತುವಿನಿಂದ ನಿಷ್ಪನ್ನವಾದ ರಯಿ ಶಬ್ದಕ್ಕೆ ಧನವೆಂಬ ಅರ್ಥವು ನಿರುಕ್ತದಲ್ಲಿ ಉಕ್ತವಾಗಿದೆ.

**ಸುವೀರ್ಯಂ** ಎಂಬ ಪದವು ಧನ ಶಬ್ದಕ್ಕೆ ವಿಶೇಷಣವಾಗಿದೆ. ಧನವು ಉತ್ತಮವಾದ ಮತ್ತು ಬಹಳವಾದ ಸಾಮರ್ಥ್ಯವನ್ನು ಉಂಟುಮಾಡುವುದಾಗಿಯೂ ಪುತ್ರರು ಮತ್ತು ಸೇವಕರು ಇವರನ್ನು ಉಂಟುಮಾಡುವುದಾಗಿಯೂ ಆಗಿರುತ್ತದೆ ಎಂದು ಅರ್ಥಮಾಡಿದೆ. ಯಜ್ಞಾದಿ ಸತ್ಕಾರ್ಯಗಳಿಗೆ ವ್ಯಯಮಾಡಿದರೂ ಧನವು ವೃದ್ಧಿಯನ್ನು ಹೊಂದುವುದೆಂದು **ಸಂತಂ** ಎಂಬ ಶಬ್ದಕ್ಕೆ ಅರ್ಥವನ್ನು ವಿವರಿಸಿದೆ. ಮನೋಹರವಾಗಿ ಸುಖವನ್ನು ಉಂಟುಮಾಡುವ, ಯಾಚಕರಿಗೆ ದಾನಮಾಡಲರ್ಹವಾದ ಸತ್ಕಾರ್ಯದಿಂದ ವೃದ್ಧಿಹೊಂದುವ ಧನವನ್ನು ಧನವಂತನಾದ ಇಂದ್ರನಿಂದ ಹೊಂದಲು ಅಪೇಕ್ಷಿಸಿ ಪ್ರಾರ್ಥಿಸಿದೆ.

**ಮರ್ಮೃಜೇನ್ಯಂ ಸುಮಂತುಭಿರಿಷಾ ಆ ಪೃಚೀಮಹಿ—**ಇಂದ್ರನ ಮಹಿಮೆಯು ತಿಳಿಯುವುದಕ್ಕೂ ಧ್ಯಾನಮಾಡುವುದಕ್ಕೂ ಅಶಕ್ಯವಾಗಿರುವುದರಿಂದ ಅಪಾರವಾದ ಮಹಿಮೆಯುಳ್ಳ ಇಂದ್ರನನ್ನು ಅತಿ ಪ್ರಯಾಸದಿಂದಲಾದರೂ ಧ್ಯಾನಮಾಡಲು ಅರ್ಹವಾದ ಸ್ತುತಿಗಳಿಂದ ಸ್ತುತಿಮಾಡಿ, ಹವಿಸ್ಸನ್ನು ಅರ್ಪಿಸಿ, ಅನ್ನವನ್ನು ಹೊಂದುವುದಕ್ಕಾಗಿ ಪ್ರಾರ್ಥಿಸಿದೆ. ಹಿಂದಿನ ವಾಕ್ಯದಿಂದ ಧನವನ್ನು ಪ್ರಾರ್ಥನೆಮಾಡಿದೆ. ಈ ವಾಕ್ಯದಿಂದ ಅನ್ನವನ್ನು ಪ್ರಾರ್ಥಿಸಿದೆ ಎಂದು ವಿವರಿಸಿದೆ.

**ದ್ಯುಮ್ನಹೂತಿಭಿಃ—** ಎಂಬ ಪದವು ಎರಡುಸಾರಿ ಪ್ರಯುಕ್ತವಾಗಿದೆ. ಈ ಪದಕ್ಕೆ ಎರಡುವಿಧವಾದ ಅರ್ಥವನ್ನು ಮಾಡಿದೆ. "ಹರಿವ ಆಗಚ್ಛ ಮೇಧಾತಿಥೇರ್ಮೇಷ" ಎಂದು ಯಜ್ಞದಲ್ಲಿ ಇಂದ್ರನನ್ನು ಆಹ್ವಾನಮಾಡುವ, ನಿಯತವಾದ ಫಲವನ್ನುಂಟುಮಾಡುವ ಇಂದ್ರನ ಆಹ್ವಾನಪ್ರಕಾರವೆಂದು ಮೊದಲನೆಯ ಅರ್ಥವನ್ನು ವಿವರಿಸಿದೆ. ಎರಡನೆಯ ಅರ್ಥದಲ್ಲಿ **ದ್ಯುಮ್ನ** ಶಬ್ದವು **ಧನ** ನಾಮಗಳಲ್ಲಿ (ನಿ. ೩–೯) ಉಕ್ತವಾಗಿರುವುದರಿಂದಲೂ, **ದ್ಯುಮ್ನಂ ದ್ಯೋತತೇರ್ಯಶೋವಾ ಅನ್ನಂ ವಾ,** (ನಿ. ೫–೬) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿರುವುದರಿಂದ ಇಲ್ಲಿ ಅನ್ನವೆಂದು ಅರ್ಥವನ್ನು ಹೇಳಿ ಈಪ್ರಕಾರವಾದ ಆಹ್ವಾನಗಳಿಂದ ಇಂದ್ರನನ್ನು ಯಜ್ಞದಲ್ಲಿ ಆಹ್ವಾನಮಾಡಿ ಹವಿಸ್ಸುಗಳನ್ನು ಅರ್ಪಿಸಿ ಅನ್ನವನ್ನು ಹೊಂದಲು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ವನೇಮ** — **ವನ** ಷಣ ಸಂಭಕ್ತೌ ಧಾತು. ಲಿಙ್ ಉತ್ತಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಾಸುಟ್ ಉದಾತ್ತವಾದುದರಿಂದ ಅದಕ್ಕೆ ಬಂದ ಆದೇಶವೂ ಉದಾತ್ತವಾಗುವುದರಿಂದ **ಏಕಾದೇಶ ಉದಾತ್ತೇನೋದಾತ್ತಃ** (ಪಾ ಸೂ. ೮-೨-೫) ಎಂಬುದರಿಂದ ಏಕಾರ ಉದಾತ್ತವಾಗುತ್ತದೆ.

**ಚಿತಂತ್ಯಾ** — ಚಿತೀ ಸಂಜ್ಞಾನೇ ಧಾತು. ಇದಕ್ಕೆ ಣ್ಯಂತದಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧.೮೫) ಎಂಬುದರಿಂದ ಶ ವಿಕರಣ ಬರುತ್ತದೆ. **ಸಾರ್ವಧಾತುಕಮಪಿತ್** ಎಂಬುದರಿಂದ ಇದು ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಶತ್ರಂತದ ಮೇಲೆ ಸ್ತ್ರೀತ್ವ ವಿವಕ್ಷಾ ಮಾಡಿದಾಗ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್ ವಿಕರಣಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ರಯಿಂವಃ** — ರಯಿಃ ಅಸ್ಯ ಅಸ್ತಿ ಇತಿ ರಯಿವಾನ್. **ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ **ಮತುವಸೋರುಃ ಸಂಬುದ್ಧೌ** ಎಂಬುದರಿಂದ ಸಂಬುದ್ಧಿಯಲ್ಲಿ ರುತ್ವ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತ ಸ್ವರ ಬರುತ್ತದೆ.

**ಸುವೀರ್ಯಮ್** — ಶೋಭನಂ ವೀರ್ಯಂ ಯಸ್ಯ ತಮ್. **ವೀರವೀರ್ಯೌ ಚ** (ಪಾ. ಸೂ. ೬-೨-೧೨೦) ಎಂಬುದರಿಂದ ಸುಸ್ವರಕ್ಕೆ ಬಾಧಕವಾಗಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ದುರ್ಮನ್ಮಾನಮ್** — ದುಃಖೇನ ಮಂತುಂ ಶಕ್ಯಃ ದುರ್ಮನ್ಮಾ, ತಮ್. ಮನ ಜ್ಞಾನೇ ಧಾತು. ಇದಕ್ಕೆ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತವೆ. ದ್ವಿತೀಯಾ ಏಕವಚನಾಂತರೂಪ.

**ಸುಮಂತುಭಿಃ** — ಶೋಭನಾಃ ಮಂತವಃ. ಸುಮಂತವಃ ಮನ ಜ್ಞಾನೇ ಧಾತು. ಔಣಾದಿಕ ತುನ್ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ಸಮಾಸವಾದಾಗ ಹಿಂದಿನಂತೆ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ಇಷಾ** — ತೃತೀಯಾ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೃಚೀಮಹಿ** — ಪೃಚೀ ಸಂಪರ್ಕೇ ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಅದಕ್ಕೆ ಸೀಯುಟಾಗಮ. **ಲಿಙಃ ಸಲೋಪೋನಂತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಸಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಲೋಪೋವ್ಯೋರ್ವಲಿ** ಎಂಬುದರಿಂದ ಸೀಯುಟಿನ ಯಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ದ್ಯುಮ್ನಹೂತಿಭಿಃ** — ಬಹುವ್ರೀಹಿ ಸಮಾಸ. ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಯಜತ್ರಮ್**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಅಮಿನಕ್ಷಿಯಜಿ**—(ಉ. ಸೂ. ೩-೩೮೫) ಎಂಬುದರಿಂದ ಅತ್ರನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ಪ್ರಪ್ರಾ ವೋ ಅಸ್ಮೇ ಸ್ವಯಶೋಭಿರೂತೀ ಪರಿವರ್ಗ ಇಂದ್ರೋ ದುರ್ಮ-
ತೀನಾಂ ದರೀಮನ್ದುರ್ಮತೀನಾಂ ।
ಸ್ವಯಂ ಸಾ ರಿಷಯಧ್ಯೈ ಯಾ ನ ಉಪೇಷೇ ಅತ್ರೈಃ ।
ಹತೇಮಸನ್ನ ವಕ್ಷತಿ ಕ್ಷಿಪ್ತಾ ಜೂರ್ಣಿರ್ನ ವಕ್ಷತಿ ॥ ೮ ॥

॥ ಪದಪಾಠಃ ॥

ಪ್ರಽಪ್ರ । ವಃ । ಅಸ್ಮೇ ಇತಿ । ಸ್ವಯಶಃಽಭಿಃ । ಊತೀ । ಪರಿಽವರ್ಗೇ । ಇಂದ್ರಃ । ದುಃಽಮತೀನಾಂ ।
ದರೀಮನ್ । ದುಃಽಮತೀನಾಂ ।
ಸ್ವಯಂ । ಸಾ । ರಿಷಯಧ್ಯೈ । ಯಾ । ನಃ । ಉಪಽಈಷೇ । ಅತ್ರೈಃ ।
ಹತಾ । ಈಂ । ಅಸತ್ । ನ । ವಕ್ಷತಿ । ಕ್ಷಿಪ್ತಾ । ಜೂರ್ಣಿಃ । ನ । ವಕ್ಷತಿ ॥ ೮ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ವೋ ಯುಷ್ಮದರ್ಥಮಸ್ಮೇ ಅಸ್ಮದರ್ಥಂ ಚಾಯಮಿಂದ್ರಃ ಸ್ವಯಶೋಭಿಃ ಸ್ವಕೀಯಯಶೋಯುಕ್ತೈರೂತಿಭೀ ರಕ್ಷಣೈರ್ದುರ್ಮತೀನಾಂ ದುರ್ಮನನಯುಕ್ತಾನಾಂ ವಿರೋಧಿನಾಂ ಪರಿವರ್ಗೇ ಪರಿತೋ ವರ್ಜನೇ ನಿಮಿತ್ತಭೂತೇ ಸತಿ ಪ್ರಪ್ರ । ಪ್ರಕೃಷ್ಟೋ ಭವತಿ । ಸಮರ್ಥೋ ಭವತೀತ್ಯರ್ಥಃ । ದ್ವಿರ್ಭಾವಃ ಪಾದಪೂರಣಃ । ಯದ್ವಾ । ಹೇ ಋತ್ವಿಜಃ ವೋ ಯುಷ್ಮದರ್ಥಮಸ್ಮೇ ಅಸ್ಮಾಕಂ ಸಂಬಂಧಿಭಿಃ ಸ್ವಯಶೋಭಿಃ ಸ್ವಯಮೇವಾನ್ಯೈರಪೇಕ್ಷ್ಯೇಣ ಸ್ತೋತುಂ ಸಮರ್ಥೈಃ ಸ್ತೋತ್ರೈಸ್ತುಷ್ಟಃ ಸನ್ ಊತೀ ಊತೌ ರಕ್ಷಣೇ ಪ್ರಪ್ರ । ಪ್ರಕೃಷ್ಟೋ ಭವತಿ ॥ ಉಪಸರ್ಗಶ್ರುತೇ-ರ್ಯೋಗ್ಯಕ್ರಿಯಾಧ್ಯಾಹಾರಃ ॥ ಕುತ್ರೇತಿ ತದುಚ್ಯತೇ । ದುರ್ಮತೀನಾಂ ದುಷ್ಟಾನಾಂಪರಿವರ್ಗೇ ಪರಿತೋ

**ವರ್ಜನವತಿ ಸಂಗ್ರಾಮೇ ಯಾಗೇ ವಾ । ಪುನಃ ಸ ಏವ ವಿಶೇಷ್ಯತೇ । ದುರ್ಮರ್ತೀನಾಂ ದುಷ್ಟಬಹು-ಮಾನವತಾಂ ಹನನಬುದ್ಧೀನಾಂ ದರೀಮನ್ ದರೀಮಣ್ಯತಿಶಯೇನ ದಾರಯಿತರಿ । ಏವಮಿಂದ್ರೇ ಸಮ್ಯಕ್ ಪಾಲಯತಿ ಸತ್ಯತ್ರೈರ್ಭಕ್ಷಕೈರಸ್ಮದ್ವಿರೋಧಿಭಿರ್ಯಾ ಜೂರ್ಣಿರ್ಜವವತೀ ಸೇನಾ । ಜೂರ್ಣಿ-ರ್ಜವತೇರ್ವಾ ದ್ರವತೇರ್ವಾ ದೂನೋತೇರ್ವೇತಿ ಯಾಸ್ಕಃ । ನಿ. ೬-೪ । ನೋಽಸ್ಮಾನ್ ಪ್ರತಿರಿಷ ಯಧ್ಯೈ ಹಿಂಸಿತುಂ ॥ ರಿಷೇರ್ಣ್ಯಂತಾತ್ತುಮರ್ಥೇ ಶಧ್ಯೈ ಪ್ರತ್ಯಯಃ ॥ ಉಪೇಷ ಉಪಗಂತುಮಸ್ಮಾನ್ ಪ್ರಾಪ್ತುಂ ॥ ಈಜ್ ಗತೌ । ತುಮರ್ಥೇ ಕ್ಸೇಪ್ರತ್ಯಯಃ । ಕ್ಷಿಪ್ತಾ ಪ್ರೇರಿತಾ ಸಾ ಸೇನಾ ಸ್ವಯಂ ಹತೇ-ಮಸತ್। ಹಿಂಸಿತೈವಾಸೀತ್। ನ ವಕ್ಷತಿ । ಅಸ್ಮಾನ್ನ ವಹೇತ್ । ನ ಪ್ರಾಪ್ನೋತಿ । ತಥಾಸ್ಮದ್ಧಿಂಸಕಾಞ್ಛತ್ರೂ-ನಪಿ ಪುನರ್ನ ವಕ್ಷತಿ । ನ ವಹತಿ ॥ ವಹೇರ್ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ಇಂದ್ರಸಾಮ-ರ್ಥ್ಯೇನ ತತ್ರೈವ ನಷ್ಟಾಭೂದಿತ್ಯರ್ಥಃ ॥**

॥ ಪ್ರತಿಪದಾರ್ಥ ॥

(**ಹೇ ಋತ್ವಿಜಃ**—ಎಲೈ ಋತ್ವಿಜರೇ) । **ವಃ**—ನಿಮಗೋಸ್ಕರಲೂ । **ಅಸ್ಮೇ**—ನಮಗೋಸ್ಕರಲೂ । **(ಅಯಂ) ಇಂದ್ರಃ**—(ಈ) ಇಂದ್ರನು । **ಸ್ವಯಶೋಭಿಃ**—ತನ್ನ ಯಶಸ್ಸಿನಿಂದ ಯುಕ್ತವಾದ । **ಊತೀ**—ರಕ್ಷಣಕರ್ಮಗಳಿಂದ । **ದುರ್ಮರ್ತೀನಾಂ**—ದುಷ್ಟಬುದ್ಧಿಯುಳ್ಳವರ (ನಮ್ಮ ವಿರೋಧಿಗಳ) । **ಪರಿವರ್ಗೇ**—ಪರಾಭವ ವಿಷಯದಲ್ಲಿ । **ಪ್ರಪ್ರ**—ಪ್ರಬಲನಾಗುತ್ತಾನೆ । [ಅಥವಾ **ವಃ**—ನಿಮಗೋಸ್ಕರ । **ಇಂದ್ರಃ**—ಇಂದ್ರನು । **ಅಸ್ಮೇ**—ನಮ್ಮ ಸಂಬಂಧವಾದ । **ಸ್ವಯಶೋಭಿಃ**—ಇತರ ಸಹಾಯವಿಲ್ಲದೆ ಸ್ತುತಿಸುವ ಸಾಮರ್ಥ್ಯವುಳ್ಳ (ಸ್ತುತಿಗಳಿಂದ (ತುಷ್ಟನಾಗಿ) । **ದುರ್ಮರ್ತೀನಾಂ**—ದುಷ್ಟರ । **ಪರಿವರ್ಗೇ**—ವರ್ಜನಯುಕ್ತವಾದ ಸಂಗ್ರಾಮದಲ್ಲಿ (ಯಾಗದಲ್ಲಿ) ಮತ್ತು । **ಊತೀ** (ನಿಮ್ಮ) ರಕ್ಷಣ ವಿಷಯದಲ್ಲಿ । **ಪ್ರಪ್ರ**—ಪ್ರಕೃಷ್ಟನಾಗುತ್ತಾನೆ ।] **ದುರ್ಮರ್ತೀನಾಂ**—ದುಷ್ಟರ(ನ್ನು) । **ದರೀಮನ್**—ನಾಶಮಾಡುವ (ಇಂದ್ರನು ರಕ್ಷಕನಾಗಿರಲು) । **ಅತ್ರೈಃ**—ಭಕ್ಷಕರಾದ (ನಮ್ಮ ಶತ್ರುಗಳಿಂದ) । **ಯಾ**—ಯಾವ । **ಜೂರ್ಣಿಃ**—ವೇಗಶಾಲಿಯಾದ ಸೇನೆಯು । **ನಃ**—ನಮ್ಮನ್ನು । **ರಿಷಯಧ್ಯೈ**—ಹಿಂಸಿಸಲು । **ಉಪೇಷೇ**—ಸಮೀಪಿಸುವಂತೆ । **ಕ್ಷಿಪ್ತಾ**—ಪ್ರೇರಿಸಲ್ಪಟ್ಟಿತೋ । **ಸಾ**—ಆ ಸೇನೆಯು । **ಸ್ವಯಂ**—ತಾನೇ । **ಹತಾ ಈಂ ಅಸತ್**—ಹಿಂಸಿತವಾಯಿತು (ನಷ್ಟವಾಯಿತು) । **ನ ವಕ್ಷತಿ**—ನಮ್ಮನ್ನು ಸಮೀಪಿಸುವುದಿಲ್ಲ (ಮತ್ತೂ) । **ನ ವಕ್ಷತಿ**—(ನಮ್ಮ ಶತ್ರುಗಳ ಹತ್ತಿರಕ್ಕೆ ಹಿಂತಿರುಗಿ) ಹೋಗುವುದೂ ಇಲ್ಲ.

॥ ಭಾವಾರ್ಥ ॥

ಎಲೈ ಋತ್ವಿಜರೇ, ಈ ಇಂದ್ರನು, ನಮ್ಮ ಮತ್ತು ನಿಮ್ಮ ಶತ್ರುಗಳನ್ನು ನಿವಾರಿಸುವ ವಿಷಯದಲ್ಲಿ, ಯಶಸ್ವಿಗಳಾದ ತನ್ನ ರಕ್ಷಣಾಕಾರ್ಯಗಳಿಂದ ಪ್ರಬಲನಾಗುತ್ತಾನೆ (ಇತರರ ಸಹಾಯವಿಲ್ಲದೇ ಸ್ತುತಿಸುವ ಸಾಮರ್ಥ್ಯವುಳ್ಳ ನಮ್ಮ ಸ್ತುತಿವಾಕ್ಯಗಳಿಂದ ಪ್ರೀತನಾದ ಇಂದ್ರನು, ನಿಮಗೋಸ್ಕರ, ಶತ್ರುಪರಾಭವ ವಿಷಯದಲ್ಲಿ, ತನ್ನ ರಕ್ಷಣಾ ಕಾರ್ಯಗಳಿಂದ ಪ್ರಬಲನಾಗಿರುತ್ತಾನೆ); ದುಷ್ಟದಮನನಾದ ಇಂದ್ರನು ರಕ್ಷಕನಾಗಿರಲು, ನಮ್ಮ ಶತ್ರುಗಳಿಂದ, ನಮ್ಮನ್ನು ಸಮೀಪಿಸಿ ಹಿಂಸಿಸುವಂತೆ ಪ್ರೇರಿತವಾದ, ವೇಗಶಾಲಿಯಾದ ಸೇನೆಯು ತಾನೇ ನಷ್ಟವಾಗುತ್ತದೆ; ನಮ್ಮನ್ನು ಸಮೀಪಿಸುವುದಿಲ್ಲ; ಅಥವಾ (ನಮ್ಮ ಶತ್ರುಗಳ ಹತ್ತಿರ ಹಿಂತಿರುಗಿ) ಹೋಗುವುದೂ ಇಲ್ಲ.

English Translation.

Indra is powerful in the discomfiture of the malevolent by his self-glorifying aids, (granted) unto you and unto us: (he is) the tearer of the malevolent (to pieces): the impetuous host that was sent against us by devouring (foes) to destroy us, has been itself destroyed: it will not reach us; it will not do us harm.

॥ ವಿಶೇಷವಿಷಯಗಳು ॥

**ಇಂದ್ರಃ ಸ್ವೈಯಶೋಭಿಃ ಊತೀ ದುರ್ಮತೀನಾಂ ಪರಿವರ್ಗೇ ಪ್ರಪ್ರ**—ಇಂದ್ರನು ತನ್ನ ಕೀರ್ತಿಗಳಿಂದ ಪ್ರಸಿದ್ಧವಾಗಿರುವ ರಕ್ಷಣೋಪಾಯಗಳಿಂದ ಕೂಡಿದವನಾಗಿ ಯಜಮಾನರ ಮತ್ತು ಋತ್ವಿಕ್ಕುಗಳ ವಿಷಯದಲ್ಲಿ ದುರ್ಬುದ್ಧಿಯುಳ್ಳ ಶತ್ರುಗಳನ್ನು ನಿಗ್ರಹಮಾಡಲು ಸಮರ್ಥನಾಗಿರುತ್ತಾನೆ. ಪ್ರಕೃಷ್ಟಾರ್ಥಬೋಧಕವಾದ ಪ್ರ ಎಂಬ ಉಪಸರ್ಗವು ಇಲ್ಲಿ ಪ್ರಯುಕ್ತವಾಗಿರುವುದರಿಂದ ಅದಕ್ಕೆ ಅನುರೂಪವಾದ ಕ್ರಿಯಾಪದವನ್ನು ಸೇರಿಸಿ **ಪ್ರಕೃಷ್ಟೋ ಭವತಿ** ಸಮರ್ಥನಾಗುತ್ತಾನೆ ಎಂದು ಅರ್ಥವನ್ನು ವಿವರಿಸಿದೆ.

ಅಥವಾ ಯಜಮಾನರೂ ಋತ್ವಿಜರೂ ಪಠಿಸುವ ಸ್ತೋತ್ರಗಳಿಂದ ಸಂತುಷ್ಟನಾದ ಇಂದ್ರನು ರಕ್ಷಿಸುವುದರಲ್ಲಿ ಸಮರ್ಥನಾಗಿರುತ್ತಾನೆ ಎಂದು ಎರಡನೆಯ ಅರ್ಥವನ್ನೂ ಈ ವಾಕ್ಯಕ್ಕೆ ವಿವರಿಸಿದೆ.

**ದುರ್ಮತೀನಾಂ ದುರ್ಮನನಯುಕ್ತಾನಾಂ ವಿರೋಧಿನಾಂ**—ಕೆಟ್ಟದ್ದನ್ನು ಧ್ಯಾನಮಾಡುವ ಶತ್ರುಗಳು ಅಥವಾ, **ದುಷ್ಟಬಹುಮಾನವತಾಂ ಹನನಬುದ್ಧೀನಾಂ** ದುರಭಿಮಾನದಿಂದ ಕೊಲೆಮಾಡುವ ಯೋಚನೆಯುಳ್ಳ ಜನರ ಅಥವಾ **ದುಷ್ಟಾನಾಂ** ಕೆಟ್ಟಮನುಷ್ಯರ ಎಂದು ದುರ್ಮತಿ ಶಬ್ದಕ್ಕೆ ಮೂರುವಿಧವಾದ ಅರ್ಥವನ್ನು ಹೇಳಿದೆ.

**ಪರಿವರ್ಗೇ—ಪರಿತೋ ವರ್ಜನವತಿ ಸಂಗ್ರಾಮೇ ಯಾಗೇ ವಾ**—ದುಷ್ಟರನ್ನು ನಾಶಮಾಡುವ ಯುದ್ಧದಲ್ಲಿ ಅಥವಾ ದುಷ್ಟರಿಂದ ದೂರಮಾಡಲ್ಪಟ್ಟ ಯಜ್ಞದಲ್ಲಿ ಎಂದು ಎರಡು ವಿಧವಾದ ಅರ್ಥವನ್ನು ವಿವರಿಸಿದೆ.

**ಜೂರ್ಣಿಃ—ಜವವತೀ ಸೇನಾ |** ಜೂರ್ಣಿ ಶಬ್ದವು ಕ್ರೋಧನಾಮಗಳಲ್ಲಿಯೂ (ನಿ. ೩-೯) ಕ್ಷಿಪ್ರನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. ಮತ್ತು ಯಾಸ್ಕರು **ಜೂರ್ಣಿಃ** ಎಂಬ ಶಬ್ದವು **ಜವತೇರ್ವಾ, ದ್ರವತೇರ್ವಾ, ದೂನೋತೇರ್ವಾ** ಎಂದು ನಿಷ್ಪನ್ನವಾಗಿರುವುದು ಎಂದು ಹೇಳಿರುವರು. ದುರ್ಗಾಚಾರ್ಯರು **ಜವನಾದ್ವಾ, ದ್ರವಣಾದ್ವಾ, ದವನಾದ್ವಾ** ಎಂದು ವ್ಯಾಖ್ಯಾನಮಾಡಿದ್ದಾರೆ. ಗತ್ಯರ್ಥದಲ್ಲಿಯೂ, ಹಿಂಸಾರ್ಥದಲ್ಲಿಯೂ ಪ್ರಯುಕ್ತವಾಗಿದೆ ಎಂದು ಅರ್ಥ.

ಮತ್ತು ಯಾಸ್ಕರು **ಕ್ಷಿಪ್ತಾ ಜೂರ್ಣಿರ್ನ ವಕ್ಷತಿ** ಎಂಬ ವಾಕ್ಯವನ್ನು ಉದಹರಿಸಿದ್ದಾರೆ. ದುರ್ಗಾಚಾರ್ಯರು ಈ ಋಕ್ಕನ್ನೇ ಉದಹರಿಸಿ, ಇಂದ್ರನು ತನ್ನ ಕೀರ್ತಿಗಳಿಂದ ಕೂಡಿರುವ ಸ್ತುತಿಗಳನ್ನು ಕೇಳಿ ನಮ್ಮನ್ನು ರಕ್ಷಿಸುವನು. ಯುದ್ಧಕಾಲಗಳಲ್ಲಿಯೂ ರಕ್ಷಕನಾಗಿರುವನು. ಕೆಟ್ಟ ಬುದ್ಧಿಯುಳ್ಳ ನಮ್ಮ ಶತ್ರುಗಳನ್ನು ನಾಶಮಾಡುವನು. ಸ್ವಭಾವದಿಂದಲೇ ಇಂದ್ರನ ಗುಣವು (ಹೀಗೆ ಇರುವಾಗ) ದುಷ್ಟರನ್ನು ನಿಗ್ರಹಮಾಡುವುದಾಗಿ ಇರುವಾಗ ಅವನನ್ನು ಕುರಿತು ನಾವು ಹೇಳುವ ಸ್ತುತಿಯು ಇಂದ್ರನ ಮಹಿಮೆಯನ್ನು ಪ್ರಕಟಮಾಡಿ ನಮ್ಮನ್ನು ಹಿಂಸಿಸುವ

ದುಷ್ಟರನ್ನು ತಾವಾಗಿಯೇ ನಾಶವಾಗುವಂತೆ ಮಾಡುವುದು ಶತ್ರುಸೇನೆಯು ಶಕ್ತಿಯುಳ್ಳದ್ದಾಗಿ ಪ್ರೇರಿತವಾದಾಗ್ಯೂ ಇಂದ್ರನ ಶಕ್ತಿಯಿಂದ ತಡೆಯಲ್ಪಟ್ಟದ್ದಾಗಿ ನಮ್ಮನ್ನು ಹಿಂಸೆಪಡಿಸಲು ಶಕ್ತವಾಗುವುದಿಲ್ಲ ಎಂದು ಮಾಹಾತ್ಮ್ಯ ಪೂರಿತವಾದ ಇಂದ್ರನ ಶಕ್ತಿಯು ವರ್ಣಿತವಾಗಿದೆ. ಎಂದು ವಿವರಿಸಿ **ಕ್ಷೇಪಣಸಂಬಂಧಾತ್ ಜೂರ್ಣಿಃ ಶಕ್ತಿಃ,** ವೇಗವುಳ್ಳದ್ದಾದಕಾರಣ **ಜೂರ್ಣಿ** ಎಂದರೆ **ಶಕ್ತಿ** ಎಂದು ಅರ್ಥವನ್ನು ಹೇಳಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಪ್ರಪ್ರ—**ಉಪಸರ್ಗ ಶ್ರವಣದಿಂದ ಯೋಗ್ಯ ಕ್ರಿಯಾಪದವು ಅಧ್ಯಾಹೃತವಾಗುತ್ತದೆ. ಪಾದಪೂರಣಾರ್ಥ ದಲ್ಲಿ ದ್ವಿತ್ವ ಬಂದಿದೆ. **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅಸ್ಮೇ—**ಅಸ್ಮದ್ ಶಬ್ದ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಶೇ ಆದೇಶ.

**ಊತೀ—ಊತಿಯೂತಿ ಜೂತಿ—**(ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತಕ್ತಿನ್ನಂತದಿಂದ ನಿಪಾತಿತವಾಗಿದೆ. ಅದಕ್ಕೆ (ತೃತೀಯಾ) ವಿಭಕ್ತಿ ಪರವಾದಾಗ **ಸುಪಾಂ ಸುಲುಕ್** ಎಂಬುದರಿಂದ ಪೂರ್ವಸವರ್ಣ ದೀರ್ಘ ಬರುತ್ತದೆ

**ದುರ್ಮತೀನಾಮ್—**ದುಷ್ಟಾ ಮತಿಃ ಯೇಷಾಂ ತೇ ತೇಷಾಮ್. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ನಾಮ್ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ದರೀಮನ್—ಸುಪಾಂ ಸುಲುಕ್** ಎಂಬುದರಿಂದ ಸಪ್ತಮಿಗೆ ಲುಕ್ ಬಂದಿದೆ.

**ರಿಷಯಧ್ಯೈ**—ರಿಷ ಹಿಂಸಾಯಾಂ ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಪ್ರಯೋಜಕವ್ಯಾಪಾರ ತೋರುವಾಗ ಣಿಚ್. ಣಿಜಂತದ ಮೇಲೆ ತುಮುನರ್ಥ ತೋರುವಾಗ **ತುಮರ್ಥೇ ಸೇಸೇನಸೇ—** (ಪಾ. ಸೂ. ೩-೪-೯) ಎಂಬುದರಿಂದ ಶಧ್ಯೈ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ, ಅಯಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಏಜಂತವಾದ ಕೃದಂತವಾದುದರಿಂದ ಅವ್ಯಯಸಂಜ್ಞೆಯನ್ನು ಹೊಂದುತ್ತದೆ.

**ಉಪೇಷೇ—**ಉಪ ಎಂಬುದು ಉಪಸರ್ಗ. ಈಜ್ ಗತೌ ಧಾತು. ತುಮುನರ್ಥ ತೋರುವಾಗ **ತುಮರ್ಥೇ ಸೇಸೇನಸೇ—**(ಪಾ. ಸೂ. ೩-೪-೯) ಎಂಬುದರಿಂದ ಕ್ಸೇ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಆದೇಶ ಪ್ರತ್ಯಯಯೋಃ** ಎಂಬುದರಿಂದ ಅದಕ್ಕೆ ಷತ್ವ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಹತಾ—**ಹನ ಹಿಂಸಾಗತ್ಯೋಃ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಅನುದಾತ್ತೋಪದೇಶವನತಿ—** (ಪಾ. ಸೂ. ೬-೪-೩೭) ಎಂಬುದರಿಂದ ಅನುನಾಸಿಕ ನಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ. ಸ್ತ್ರೀತ್ವದಲ್ಲಿ ಅದಂತನಿಬಂಧನವಾಗಿ ಟಾಪ್.

**ಅಸತ್—**ಅಸ ಭುವಿ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸ್ಯಮಾಙ್—**(ಪಾ. ಸೂ. ೬-೪-೭೫) ಎಂಬುದರಿಂದ ಆಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ವಕ್ಷತಿ**—ವಹ ಪ್ರಾಪಣೇ, ಧಾತು, ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಷಢೋಃ ಕಃ ಸಿ.** ಎಂಬುದರಿಂದ ಅದಕ್ಕೆ ಕತ್ವ. ಅದನ್ನು ನಿಮಿತ್ತೀಕರಿಸಿ ಸಕಾರಕ್ಕೆ ಷತ್ವ. ವಕ್ಷತಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಕ್ಷೇಪ್ತಾ**—ಕ್ಷಿಪ ಪ್ರೇರಣೇ. ಧಾತು ಕರ್ತರಿಯಲ್ಲಿ ತೃಚ್ ಪ್ರತ್ಯಯ, ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಜೂರ್ಣಿಃ** – ಜ್ವರ ಸಂತಾಪೇ. ಧಾತು. **ವೀಜ್ಯಾಜ್ವರಿಭ್ಯೋ ನಿಃ** (ಉ. ಸೂ. ४–४೮) ಎಂಬುದರಿಂದ ನಿ ಪ್ರತ್ಯಯ. **ಜ್ವರತ್ವರ**—(ಪಾ. ಸೂ. ೬-೪-೨೦) ಎಂಬುದರಿಂದ ಊಠ್. ಯಾಸ್ಕರು ಇನ್ನೊಂದು ರೀತಿಯಿಂದ ನಿರ್ವಚನ ಮಾಡಿರುತ್ತಾರೆ. ಜೂರ್ಣಿರ್ಜವತೇರ್ವಾ ದ್ರುವತೇರ್ವಾ ದೂನೋತೇರ್ವಾ (ನಿರು. ೬-೪) ಎಂದು ಹೇಳಿರುತ್ತಾರೆ. ‖ ೮ ‖



‖ ಸಂಹಿತಾಪಾಠಃ ‖

ತ್ವಂ ನ ಇಂದ್ರ ರಾಯಾ ಪರೀಣಸಾ ಯಾಹಿ ಪಥಾँ ಅನೇಹಸಾ ಪುರೋ ಯಾಹ್ಯರಕ್ಷಸಾ ।
ಸಚಸ್ವ ನಃ ಪರಾಕ ಆ ಸಚಸ್ವಾಸ್ತಮೀಕ ಆ ।
ಪಾಹಿ ನೋ ದೂರಾದಾರಾದಭಿಷ್ಟಿಭಿಃ ಸದಾ ಪಾಹ್ಯಭಿಷ್ಟಿಭಿಃ ‖ ೯ ‖

‖ ಪದಪಾಠಃ ‖

ತ್ವಂ । ನಃ । ಇಂದ್ರ । ರಾಯಾ । ಪರೀಣಸಾ । ಯಾಹಿ । ಪಥಾ । ಅನೇಹಸಾ । ಪುರಃ । ಯಾಹಿ । ಅರಕ್ಷಸಾ ।
ಸಚಸ್ವ । ನಃ । ಪರಾಕೇ । ಆ । ಸಚಸ್ವ । ಅಸ್ತಂಽಈಕೇ । ಆ ।
ಪಾಹಿ । ನಃ । ದೂರಾತ್ । ಆರಾತ್ । ಅಭಿಷ್ಟಿಽಭಿಃ । ಸದಾ । ಪಾಹಿ । ಅಭಿಷ್ಟಿಽಭಿಃ ‖ ೯ ‖

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ನಃ ಪಥಾಸ್ಮತ್ಸಂಬಂಧಿನಾ ಮಾರ್ಗೇಣ ಪುರೋ ಯಾಹಿ । ಆಗಚ್ಛ ॥ ಥಸ್ಯ ಟೇಲ್ಲೋಪಃ । ಉದಾತ್ತನಿವೃತ್ತಿಸ್ವರೇಣ ತೃತೀಯಾಯಾ ಉದಾತ್ತತ್ವಂ ॥ ಕೀದೃಶೇನ ಮಾರ್ಗೇಣ । ಅರಕ್ಷಸಾ ರಕ್ಷೋವರ್ಜಿತೇನ ಅನೇಹಸಾಪಾಪೇನ । ಯಜ್ಞಗಮನಮಾರ್ಗಸ್ಯ ಸ್ತುತಿಚೋದಿತತ್ವಾದನೇಹಸ್ತ್ವಂ । ಯದ್ವಾ । ನೋಽಸ್ಮಾನುದ್ದಿಶ್ಯ ಯಾಹಿ । ಕಿಂ ವಿಶಿಷ್ಟ ಇತಿ । ಪರೀಣಸಾ ಪರಿತೋ ನದ್ಧೇನ ರಾಯಾಸ್ಮಭ್ಯಂ ದಾತವ್ಯೇನ ಬಹುವಿಧಧನೇನ ಯುಕ್ತಃ ಸನ್ । ಹೇ ಇಂದ್ರ ನೋಽಸ್ಮಾನ್ ಪರಾಕೇಽತ್ಯಂತದೂರದೇಶಾತ್ ಸ್ವರ್ಗಲಕ್ಷಣಾದಾ ಸಚಸ್ವ। ಸಮವೇತೋ ಭವ । ಪರಾಕ ಇತಿ ದೂರನಾಮ ಪರಾಕೇ ಪರಾಚೈರಿತಿ ತನ್ನಾಮಸು ಪಾಠಾತ್ । ತಥಾಸ್ತಮೀಕೇಽತ್ಯಂತಾಂತಿಕೇ ದೇವಯಜನದೇಶೇ ಸಚಸ್ವ । ಅಸ್ಮತ್ಪ್ರತ್ತಂ ಹವಿಃ ಸೇವಸ್ವ । ಸಂಗಚ್ಛಸ್ವ ವಾ । ಕಿಂಚ ನೋಽಸ್ಮಾನ್ ದೂರಾದ್ದೂರದೇಶಾತ್ಸ್ವರ್ಗಾದೇಃ ಸಕಾಶಾತ್ ಪಾಹಿ । ರಕ್ಷ । ಆರಾತ್ ಸಂನಿಹಿತಾದಿಹ ಲೋಕಾತ್ ಪಾಹಿ । ಪಾಲಯ । ಯದ್ವಾ । ದೂರಾದಯಾಗಕಾಲೇ ಸ್ವರ್ಗ ಏವೋಷಿತ್ವಾಸ್ಮಾನ್ಪಾಹಿ । ಪಾಲಯ । ಆರಾದ್ಯಾಗಕಾಲೇ ಸಂನಿಹಿತೇ ದೇವಯಜನದೇಶೇ ಪಾಹಿ । ಕೇನೇತಿ ತದುಚ್ಯತೇ । ಅಭಿಷ್ಟಿಭಿರಭಿಮುಖೈರ್ಯಾಗೈಸ್ತನ್ನಿರ್ವಾಹೈಃ । ಯದ್ವಾ । ಅಭ್ಯಾಗಮನೈಃ । ಕಿಂ ಬಹುನಾ । ಸದಾ ಸರ್ವಕಾಲಂ ಯಾಗಕಾಲೇಽಯಾಗಕಾಲೇ ದೂರೇಽಂತಿಕೇ ಚಾಭಿಷ್ಟಿಭಿರಭಿತ ಏಷಣೈಃ ಪಾಹಿ । ಸಮ್ಯಕ್ ಪರಿಪಾಲಯ ॥

॥ ಪ್ರತಿಪದಾರ್ಥ ॥

(**ಹೇ**) ಇಂದ್ರ—(ಎಲೈ) ಇಂದ್ರನೇ । **ತ್ವಂ**—ನೀನು । **ನಃ**—ನಮ್ಮ (ನಮಗೋಸ್ಕರ) । **ಅರಕ್ಷಸಾ**—ರಾಕ್ಷಸಾದಿ ವರ್ಜಿತವೂ । **ಅನೇಹಸಾ**—ಪಾಪರಹಿತವೂ (ಆದ) । **ಪಥಾ**—ಮಾರ್ಗದಿಂದ । **ಪುರಃ ಯಾಹಿ**—ಮುಂದೆ ಬಾ । **ಪರೀಣಸಾ**—ಸುತ್ತಲೂ ಬದ್ಧವಾದ (ಸುರಕ್ಷಿತವಾದ) । **ರಾಯಾ**—(ನಮಗೆ ದಾತವ್ಯವಾದ) ಧನದಿಂದ (ಯುಕ್ತನಾಗಿ) । **ಯಾಹಿ**—ಬಾ । (**ಹೇ ಇಂದ್ರ**—ಎಲೈ ಇಂದ್ರನೇ) । **ನಃ**—ನಮ್ಮನ್ನು । **ಪರಾಕೇ**—ದೂರದಲ್ಲಿ (ಸ್ವರ್ಗಲೋಕದಲ್ಲೇ) ಇದ್ದು । **ಆ ಸಚಸ್ವ**—ಯುಕ್ತನಾಗಿರು (ರಕ್ಷಿಸು) । (**ತಥಾ**—ಹಾಗೆಯೇ) । **ಅಸ್ತಮೀಕೇ**—ಸಮೀಪದಲ್ಲಿ (ಯಾಗಶಾಲೆಯಲ್ಲಿ) ಇದ್ದು । **ಆ ಸಚಸ್ವ**—ನಮ್ಮೊಡನೆ ಇರು (ರಕ್ಷಿಸು) । (**ಕಿಂಚ**—ಮತ್ತು) । **ನಃ**—ನಮ್ಮನ್ನು । **ದೂರಾತ್**—(ಯಾಗಮಾಡದೇ ಇರುವಾಗ) ದೂರದಿಂದಲೇ (ಸ್ವರ್ಗಲೋಕದಿಂದಲೇ) । **ಪಾಹಿ**—ರಕ್ಷಿಸು । **ಆರಾತ್**—ಸಮೀಪದಿಂದ (ಯಾಗಕಾಲದಲ್ಲಿ ಯಾಗಶಾಲೆಯಲ್ಲಿಯೇ ಇದ್ದು) । **ಅಭಿಷ್ಟಿಭಿಃ**—ಅಭಿಮುಖವಾಗಿರುವ ಯಾಗದ (ನಿರ್ವಾಹರೂಪವಾಗಿ) ಅಥವಾ ಇಷ್ಟಾರ್ಥದಾನಗಳಿಂದ ಅಥವಾ ಅಭ್ಯಾಗಮನಗಳಿಂದ । **ಪಾಹಿ**—ರಕ್ಷಿಸು । **ಸದಾ**—(ಮೇಲೆ ಹೇಳಿದ) ಎಲ್ಲಾ ಸಂದರ್ಭಗಳಲ್ಲಿಯೂ । **ಅಭಿಷ್ಟಿಭಿಃ**—ಅಭ್ಯಾಗಮನಗಳಿಂದ । **ಪಾಹಿ**—ರಕ್ಷಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ರಾಕ್ಷಸರಹಿತವಾದ, (ಆದುದರಿಂದಲೇ) ನಿರ್ದುಷ್ಟವಾದ ಮಾರ್ಗದಿಂದ (ನಮಗೆ ಕೊಡಬೇಕಾದ) ಸುರಕ್ಷಿತವಾದ ಧನಯುಕ್ತನಾಗಿ, ನಮ್ಮ ಸಮೀಪಕ್ಕೆ ಆಗಮಿಸು; ಬಹಳ ದೂರದಲ್ಲಿರುವಾಗಲೂ ನಮ್ಮೊಡನೆ ಇರು; ಹತ್ತಿರದಲ್ಲಿರುವಾಗಲೂ ನಮ್ಮೊಡನೆ ಇರು; (ಯಾಗಮಾಡದೇ ಇರುವಾಗ) ದೂರವಾದ ಸ್ವರ್ಗಾದಿ

ಲೋಕಗಳಲ್ಲಿದ್ದು, (ಯಾಗಮಾಡುವಾಗ) ಹತ್ತಿರದಲ್ಲಿ, ಯಾಗಶಾಲೆಯಲ್ಲಿಯೇ ಇದ್ದು, ಯಾಗ ವಿಷಯದಲ್ಲಿ (ಯಾಗಸಾಧನ ವಿಷಯದಲ್ಲಿ) ಅನುಗ್ರಹಮಾಡು ; ಸರ್ವದಾ ಇಷ್ಟಾರ್ಥಪ್ರದನಾಗಿ (ಯಾಗಕ್ಕೆ ಬಂದು), ನಮ್ಮನ್ನು ಪಾಲಿಸು.

English Translation

Indra, come to us with abundant riches by a path free from evil; (by a path) unobstructed by Rakshasas: be with us when afar; be with us when nigh; favour us, whether afar or nigh, with the objects of our desires; ever favour us with the objects of our desires.

॥ ವಿಶೇಷವಿಷಯಗಳು ॥

**ಅರಕ್ಷಸಾ ಅನೇಹಸಾ ಪಥಾ ಯಾಹಿ—ರಕ್ಷೋವರ್ಜಿತೇನ ಅಪಾಪೇನ ಅಸ್ಮತ್ಸಂಬಂಧಿನಾ ಮಾರ್ಗೇಣ । ಯದ್ವಾ ನಃ ಅಸ್ಮಾನ್ ಉದ್ದಿಶ್ಯ ಯಾಹಿ । ಯಜ್ಞಗಮನಮಾರ್ಗಸ್ಯ ಸ್ತುತಿಚೋದಿತತ್ವಾತ್ ಅನೇಹಸ್ತ್ವಂ ।** ರಾಕ್ಷಸರು ಸಂಚರಿಸದಿರುವ ಪಾಪರಹಿತವಾಗಿ ಪರಿಶುದ್ಧವಾಗಿರುವ ಮಾರ್ಗದಿಂದ ಇಂದ್ರನನ್ನು ಯಜ್ಞಕ್ಕೆ ಬರಲು ಆಹ್ವಾನ ಮಾಡುವುದರಿಂದ ನಾವು ಕರೆಯುವ ಮಾರ್ಗದಿಂದ ಇಂದ್ರನು ನಮ್ಮ ಯಾಗಕ್ಕೆ ಬರಲಿ ಎಂದು ಪ್ರಾರ್ಥಿಸಿದೆ. ಅಥವಾ ಇಂದ್ರನನ್ನು ಸ್ತುತಿಮಾಡುವ ನಮ್ಮನ್ನು ರಕ್ಷಿಸುವುದಕ್ಕಾಗಿ ಇಂದ್ರನ ಆಗಮನವು ಆಗಲಿ ಎಂದು ಎರಡು ವಿಧವಾದ ಅರ್ಥವನ್ನೂ ವಿವರಿಸಿದೆ.

**ನಃ ಪರಾಕೇ ಆ ಸಚಸ್ವ—ಅಸ್ಮಾನ್ ಅತ್ಯಂತದೂರದೇಶಾತ್ ಸ್ವರ್ಗಲಕ್ಷಣಾತ್ ಸಮವೇತೋ ಭವ ।** ಬಹಳ ದೂರದೇಶದಲ್ಲಿರುವ ಸ್ವರ್ಗದಿಂದ ಇಂದ್ರನು ಬಂದು ನಮ್ಮನ್ನು ಸೇರಿಕೊಳ್ಳಲಿ ಎಂದು ಪ್ರಾರ್ಥಿಸಿದೆ. **ಆಕೇ, ಪರಾಕೈ, ಪರಾಚೈಃ** ಎಂದು ಐದು ದೂರನಾಮಗಳಲ್ಲಿ (ನಿ. ೩-೨೦) ಪಠಿತವಾಗಿರುವುದರಿಂದ ಪರಾಕೇ ಎಂಬ ಶಬ್ದಕ್ಕೆ ದೂರ ಎಂದು ಅರ್ಥ.

**ಅಸ್ತಮೀಕೇ ಸಚಸ್ವ—ಅತ್ಯಂತಾಂತಿಕೇ ದೇವಯಜನದೇಶೇ ಅಸ್ಮತ್ಪ್ರತ್ತಂ ಹವಿಃ ಸೇವಸ್ವ ಸಂಗಚ್ಛಸ್ವ ವಾ ।** ತಳಿತ್, ಆಸಾತ್, ಮೊದಲಾದ ಹನ್ನೊಂದು ಅಂತಿಕನಾಮಗಳಲ್ಲಿ (ನಿ. ೩-೯) **ಅಸ್ತಮೀಕೇ** ಎಂಬ ಪದವು ಉಕ್ತವಾಗಿರುವುದರಿಂದ, ಬಹಳ ಹತ್ತಿರದಲ್ಲಿರುವ, ದೇವತೆಗಳನ್ನು ಉದ್ದೇಶಮಾಡಿ ಯಜ್ಞವನ್ನು ಆಚರಿಸುವ ಯಾಗಶಾಲೆಗೆ ಇಂದ್ರನು ಬಂದು ನಾವು ಅರ್ಪಿಸುವ ಹವಿಸ್ಸುಗಳನ್ನು ಸ್ವೀಕರಿಸಲಿ ಅಥವಾ ನಮ್ಮೊಡನೆ ಸೇರಲಿ ಎಂದು ಪ್ರಾರ್ಥಿಸಿದೆ.

**ಆರಾತ್—ಸನ್ನಿಹಿತಾತ್ ಇಹಲೋಕಾತ್ ಯದ್ವಾ ದೂರಾತ್ ।** ಇಂದ್ರನು ಯಜ್ಞಕ್ಕೆ ಬಂದು ಹವಿಸ್ಸನ್ನು ಸ್ವೀಕರಿಸುವುದರಿಂದ ಸಮೀಪದಲ್ಲಿ ಇರುವವನಾಗಿಯೂ, ಯಾಗವೂ ನಡೆಯದಿರುವ ಕಾಲದಲ್ಲಿ ದೂರವಾದ ಸ್ವರ್ಗದಲ್ಲಿ ಇರುವವನಾಗಿಯೂ, ದೇಶ ಮತ್ತು ಕಾಲಕೃತವಾದ ದೂರವಾದ ಮತ್ತು ಸನ್ನಿಕೃಷ್ಟವಾದ ಪ್ರದೇಶಗಳನ್ನೂ ಕಾಲವನ್ನೂ ಲೆಕ್ಕಿಸದೆ ನಮ್ಮನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

**ಅಭಿಷ್ಟಿಭಿಃ— ಅಭಿಮುಖ್ಯೈಃ ಯಾಗೈಃ ಯದ್ವಾ ತನ್ನಿರ್ವಾಹ್ಯೈಃ ಯಾಗೈಃ ಯದ್ವಾ ಅಭ್ಯಾಗಮನೈಃ ಅಭಿತ ಏಷಣೈಃ ।** ಇಂದ್ರನನ್ನು ಅಭಿಮುಖನನ್ನಾಗಿ ಮಾಡಿಕೊಳ್ಳುವ ಯಾಗವನ್ನು ನೆರವೇರಿಸುವ ಉಪಾಯಗಳಿಂದ, ಅಥವಾ ಇಂದ್ರನ ಆಗಮನಗಳಿಂದ, ಅಥವಾ, ಯಾಗಮಾಡುವ ಕಾಲದಲ್ಲಿ, ಯಾಗಮಾಡದಿರುವ ಕಾಲದಲ್ಲಿ, ದೂರದಲ್ಲಿ, ಅಥವಾ ಹತ್ತಿರದಲ್ಲಿ ಯಜಮಾನರು ಪ್ರಾರ್ಥಿಸುವ ಅನೇಕ ವಿಧವಾದ ಇಷ್ಟಗಳನ್ನು ಅನುಗ್ರಹಿಸಿ ರಕ್ಷಿಸಲಿ ಎಂದು ಆಶಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ರಾಯಾ** —ರೈ ಶಬ್ದ. ತೃತೀಯಾ ಏಕವಚನಾಂತರೂಪ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಪರೀಣಸಾ**—ಣಸ ಕೌಟಿಲ್ಯೇ. ಧಾತು. ಪರಿತೋ ನಸಂತಿ ಇತಿ ಪರೀಣಸಃ. **ಣೋ ನಃ** ಎಂಬುದರಿಂದ ಆದಿಗೆ ನತ್ವ. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಉಪಸರ್ಗಕ್ಕೆ ದೀರ್ಘ. **ಉಪಸರ್ಗಾದಸಮಾಸೇऽಪಿ ಣೋಪದೇಶಸ್ಯ** (ಪಾ. ಸೂ. ೮-೪-೧೪) ಎಂಬುದರಿಂದ ಧಾತುನಕಾರಕ್ಕೆ ಣತ್ವ. ತೃತೀಯಾ ಏಕವಚನಾಂತರೂಪ. ಪ್ರತ್ಯಯದಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಯಾಹಿ**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ಹಿಗೆ ಅಪಿತ್ವ ವಿಧಾನಮಾಡಿರುವುದರಿಂದ ಉದಾತ್ತಸ್ವರ ಬರುತ್ತದೆ.

**ಪಥಾ**—ಪಥಿನ್ ಶಬ್ದ. ಇದಕ್ಕೆ ತೃತೀಯಾ ಏಕವಚನ ಪರವಾದಾಗ **ಭಸ್ಯ ಟೇರ್ಲೋಪಃ** (ಪಾ. ಸೂ. ೭-೧-೮೮) ಎಂಬುದರಿಂದ ಟಿಗೆ (ಇನ್) ಲೋಪ. **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. **ಅಣೋಪ್ರಗೃಹ್ಯಸ್ಯಾ**— (ಪಾ. ಸೂ. ೮-೪-೫೭) ಎಂಬುದರಿಂದ ಆಕಾರ ಅನುನಾಸಿಕವಾಗುತ್ತದೆ.

**ಅನೇಹಸಾ, ಅರಕ್ಷಸಾ**—ನಞ್ ಪೂರ್ವಪದ ಬಹುವ್ರೀಹಿ ಸಮಾಸ. **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ

**ಸಚಸ್ವ**—ಷಚ ಸಮವಾಯೇ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪಾಹಿ** —ಪಾ ರಕ್ಷಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರು ವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಅಪಿತ್ವ ವಿಧಾನಮಾಡಿರುವುದರಿಂದ ಪ್ರತ್ಯಯಸ್ವರ ಬರುತ್ತದೆ.

**ಅಭಿಷ್ಟಿಭಿಃ**—ಇಷು ಇಚ್ಛಾಯಾಂ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. **ತಿತುತ್ರ**— (ಪಾ. ಸೂ. ೭-೨-೯) ಎಂಬುದರಿಂದ ಇಡಾಗಮ ನಿಷೇಧ ಬರುತ್ತದೆ. **ಏಮನ್ನಾದಿಷು ಛಂದಸಿ ಪರರೂಪಂ ವಕ್ತವ್ಯಮ್** (ಪಾ. ಸೂ. ೬-೧-೯೪-೬) ಎಂಬುದರಿಂದ ಪರರೂಪ ಬರುತ್ತದೆ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಅಭಿ) ಪ್ರಕೃತಿಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ. ॥ ೯ ॥



॥ ಸಂಹಿತಾಪಾಠಃ ॥

ತ್ವಂ ನ ಇಂದ್ರ ರಾಯಾ ತರೂಷಸೋಗ್ರಂ ಚಿತ್ತ್ವಾ ಮಹಿಮಾ ಸಕ್ಷದವಸೇ
ಮಹೇ ಮಿತ್ರಂ ನಾವಸೇ ।
ಓಜಿಷ್ಠ ತ್ರಾತರವಿತಾ ರಥಂ ಕಂ ಚಿದಮರ್ತ್ಯ ।
ಅನ್ಯಮಸ್ಮದ್ರಿರಿಷೇಃ ಕಂ ಚಿದದ್ರಿವೋ ರಿರಿಕ್ಷಂತಂ ಚಿದದ್ರಿವಃ ॥ ೧೦ ॥

॥ ಪದಪಾಠಃ ॥

ತ್ವಂ । ನಃ । ಇಂದ್ರ । ರಾಯಾ । ತರೂಷಸಾ । ಉಗ್ರಂ । ಚಿತ್ । ತ್ವಾ । ಮಹಿಮಾ । ಸಕ್ಷತ್ । ಅವಸೇ ।
ಮಹೇ । ಮಿತ್ರಂ । ನ । ಅವಸೇ ।
ಓಜಿಷ್ಠ । ತ್ರಾತಃ । ಅವಿತಃ । ರಥಂ । ಕಂ । ಚಿತ್ । ಅಮರ್ತ್ಯ ।
ಅನ್ಯಂ । ಅಸ್ಮತ್ । ರಿರಿಷೇಃ । ಕಂ । ಚಿತ್ । ಅದ್ರಿಽವಃ । ರಿರಿಕ್ಷಂತಂ । ಚಿತ್ । ಅದ್ರಿಽವಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ನೋಽಸ್ಮಾಂಸ್ತರೂಷಸಾ ತರಣಕುಶಲೇನಾಸ್ಮಾನಾಪದ್ಭ್ಯ ಉತ್ತಾರೀತ್ರುಣ ಶಕ್ತೇನ ರಾಯಾ ಧನೇನೋಪ್ಸತಾರ್ಭವೇತಿ ಶೇಷಃ । ಹೇ ಇಂದ್ರ ತ್ವಾ ತ್ವಾಮುಗ್ರಂ ಚಿದುದ್ಗೂರ್ಣಬಲಂ ಸಂತಂ ತ್ವಾಮೇವ ಮಹಿಮಾ ಮಹತ್ತ್ವಮಸ್ಮತ್ಸ್ತೋತ್ರಜನಿತಃ ಕಶ್ಚಿದತಿಶಯಃ ಸಕ್ಷತ್ । ಸೇವತೇ । ಸಂಭಜತೇ । ಉತ್ಕರ್ಷಯತೀತ್ಯರ್ಥಃ । ಕಿಮರ್ಥಂ । ಅವಸೇ ತ್ವತ್ಪ್ರೀತಯೇ । ತತ್ರ ದೃಷ್ಟಾಂತಃ । ಮಹೇ ಮಹತೇಽವಸೇ ರಕ್ಷಣಾಯ ಪ್ರಕಾಶಾರೋಗ್ಯಾದಿರೂಪಾಯ ಮಿತ್ರಂ ನ ಸರ್ವಜನಮಿತ್ರಂ ಸೂರ್ಯಮಿವ । ತಂ ಯಥಾ ಮಹತ್ತ್ವೇನ ಸಂಯೋಜಯಂತಿ ತಥೇತ್ಯರ್ಥಃ ॥ ಯದ್ವಾ । ಮಿತ್ರಂ ನ ಪ್ರಿಯಹಿತರೂಪಂ ಸಖಾಯಮಿವ । ತಂ ಯಥಾ ಮಹತ್ಯೈ ಪ್ರೀತಯೇ ಸಂಭಜಂತೇ ತದ್ವತ್ । ಕಿಂಚ ಹೇ ಓಜಿಷ್ಠೌಜಸ್ವಿತ್ವಾತಿಶಯೇನ ಬಲವನ್ ತ್ರಾತಾ ರಕ್ಷಿತರಸ್ಮಾನ್ಪಾಲಯಿತರ್ವಾ ಅಮರ್ತ್ಯಾಮರಣಧರ್ಮನ್ನಿಂದ್ರ ಅವಿತರಸ್ಮಾನ್ಪ್ರೀಣನೇನ ತರ್ಪಯಿತಃ ತ್ವಂ ಕಂ ಚಿದ್ರಥಂ ವೇಗವಂತಮಾರುಹ್ಯಾಸ್ಮದ್ದೇವಯಜನಂ ಶೀಘ್ರಮಾಗಚ್ಛೇತಿ ಶೇಷಃ । ತಥಾ ಹೇ ಅದ್ರಿವಃ ಶತ್ರೂಣಾಮತಿಶಯೇನ ಭಕ್ಷಕೇಂದ್ರ ಅಸ್ಮದನ್ಯಂ ರಿರಿಕ್ಷಂತಂ ಚಿದಲ್ಪಂ ಮಹಾಂತಂ ವಾ । ಶತ್ರುಮಿತಿ ಶೇಷಃ । ರಿರಿಷೇಃ । ಬಾಧಸ್ವ । ತಥಾ ಹೇ ಅದ್ರಿವೋಽದ್ರೇರಾದರ್ತರ್ಭಕ್ಷಕ ವಾ ಶತ್ರೂಣಾಂ । ಅದ್ರಿವನ್ನದ್ರಿರಾದೃಣಾತ್ಯನೇನಾಪಿ ವಾತ್ತೇಃ ಸ್ಯಾದಿತಿ ನಿರುಕ್ತಂ । ನಿ. ೪-೪। ರಿರಿಕ್ಷಂತಂ

**ಚಿದತ್ಯಂತಂ ಕುತ್ಸಿತಂ ಹಿಂಸಂತಮಪಿ ಶತ್ರುಂ ರಿರಿಷೇಃ । ಬಾಧಸ್ವ ॥ ರಿಷ ಹಿಂಸಾಯಾಂ । ಛಾಂದಸಃ ಶಪಃ ಶ್ಲುಃ । ಪುನರ್ವ್ಯತ್ಯಯೇನ ಶಃ । ರಿರಿಕ್ಷಂತಂ । ಅಸ್ಮಾದೇವ ಸನಿ ಹಲಂತಾಚ್ಚೇತಿ ಸನಃ ಕಿತ್ತ್ವಾದ್ಗುಣಾಭಾವಃ । ಚಿದಿತ್ಯವಕುತ್ಸಿತಃ । ಕುಲ್ಮಾಷಾಂಶ್ಚಿದಾಹರೇತ್ಯವಕುತ್ಸಿತ ಇತಿ ಯಾಸ್ಕೇನೋಕ್ತತ್ವಾತ್ । ನಿ. ೧-೪ । ಯದ್ವಾ । ಸಮುಚ್ಚಯಾರ್ಥಃ । ಕಂಚಿದಿತ್ಯನೇನ ಸಹ ಸಮುಚ್ಚೀಯತೇ ॥**

॥ ಪ್ರತಿಪದಾರ್ಥ ॥

(**ಹೇ**) **ಇಂದ್ರ**—(ಎಲೈ) ಇಂದ್ರನೇ । **ತ್ವಂ**—ನೀನು । **ನಃ**—ನಮ್ಮನ್ನು । **ತರೂಷಸಾ**—(ಆಪತ್ತುಗಳಿಂದ ನಮ್ಮನ್ನು) ಪಾರುಮಾಡುವುದರಲ್ಲಿ ಸಮರ್ಥವಾದ । **ರಾಯಾ**—ಧನದಿಂದ (ಉದ್ಧರಿಸು) । **ಉಗ್ರಂ**—ಉಗ್ರನಾದ । **ತ್ವಾ ಚಿತ್**—ನಿನ್ನನ್ನೇ । **ಮಹಿಮಾ**—(ನಮ್ಮ ಸ್ತುತಿಜನಿತವಾದ) ಮಾಹಾತ್ಮ್ಯ (ವಿಶೇಷ) ವು । **ಮಹೇ**—ಹೆಚ್ಚಾದ । **ಅವಸೇ**—(ಆರೋಗ್ಯವೇ ಮೊದಲಾದ) ರಕ್ಷಣೆಗೋಸ್ಕರ (ಪ್ರೀತಿಗೋಸ್ಕರ) । **ಮಿತ್ರಂ ನ**—ಸೂರ್ಯನನ್ನು (ಸ್ನೇಹಿತನನ್ನು) ಹೇಗೋ ಹಾಗೆ । **ಅವಸೇ**—ನಿನ್ನ ಪ್ರೀತಿಗೋಸ್ಕರ । **ಸಕ್ಷತ್**—ಸೇವಿಸುತ್ತದೆ । (**ಕಿಂ ಚ**—ಮತ್ತು) । **ಓಜಿಷ್ಠ**—ಅತ್ಯಂತಬಲಶಾಲಿಯೂ । **ತ್ರಾತಃ**—ರಕ್ಷಕನೂ । **ಅಮರ್ತ್ಯ**—ಮರಣರಹಿತನೂ(ಆದ) ಎಲೈ ಇಂದ್ರನೇ । **ಅವಿತಃ**-(ನಮ್ಮನ್ನು ಧನಾದಿಗಳಿಂದ) ತೃಪ್ತಿಪಡಿಸುವ (ನೀನು) । **ಕಂ ಚಿತ್ ರಥಂ**-ಯಾವುದಾದರೊಂದು ರಥವನ್ನು (ಹತ್ತಿಕೊಂಡು ನಮ್ಮ ಯಾಗಶಾಲೆಗೆ ಬಾ) । **ಅದ್ರಿವಃ**—ಶತ್ರುಭಕ್ಷಕ (ನಾಶಕ) ನಾದ ಇಂದ್ರನೇ । **ಅಸ್ಮತ್**—ನಮ್ಮನ್ನು । **ಅನ್ಯಂ ರಿರಿಕ್ಷಂತಂ ಚಿತ್**—ಹಿಂಸಿಸುವ ಯಾವನನ್ನಾಗಲೀ । **ರಿರಿಷೇಃ**—ಹಿಂಸಿಸು । **ಹೇ ಅದ್ರಿವಃ**—ಪರ್ವತಗಳನ್ನು ಸೀಳುವವನೇ (ಶತ್ರುನಾಶಕನೇ) । **ಕಂ ಚಿತ್**—(ಹಿಂಸಕನು) ಯಾವನಾದರೂ (ಅವನನ್ನು) । (**ರಿರಿಷೇಃ**—ಬಾಧಪಡಿಸು).

॥ ಭಾವಾರ್ಥ ॥

ಎಲೈ ಇಂದ್ರನೇ, ಆಪತ್ಪರಿಹರಣಸಮರ್ಥವಾದ ಧನದಿಂದ ನಮ್ಮನ್ನು ಉದ್ಧರಿಸು ; (ನಮ್ಮ ಸ್ತುತಿಯಿಂದ ಬರುವ ಮಾಹಾತ್ಮ್ಯವಿಶೇಷವು, ಸೂರ್ಯನನ್ನು (ಸ್ನೇಹಿತನನ್ನು) ಹೆಚ್ಚಾದ ಆರೋಗ್ಯಾದಿಗಳಿಗೋಸ್ಕರ (ಪ್ರೀತಿಗೋಸ್ಕರ) (ಮಹತ್ತ್ವಾರೋಪಣೆ) ಸೇವಿಸುವಂತೆ, ಉಗ್ರನಾದ ನಿನ್ನನ್ನೇ ಸೇವಿಸುತ್ತದೆ; ಬಲಿಷ್ಠನೂ, ರಕ್ಷಕನೂ, ಅಮರನೂ, (ನಮ್ಮನ್ನು ಧನಾದಿಗಳಿಂದ) ತೃಪ್ತಿಪಡಿಸುವವನೂ (ಆದ) ನೀನು, ಯಾವುದಾದರೊಂದು (ವೇಗಶಾಲಿಯಾದ) ರಥವನ್ನು (ಏರಿಕೊಂಡು ನಮ್ಮ ಯಾಗಶಾಲೆಗೆ ಆಗಮಿಸು); ಹಾಗೆಯೇ ಶತ್ರುನಾಶಕನಾದ (ನೀನು) ನಮ್ಮನ್ನು ಹಿಂಸಿಸುವವನು (ಯಾರೇ ಆಗಲಿ ಅವನನ್ನು) ಹಿಂಸಿಸು (ನಾಶಮಾಡು); ಪರ್ವತಗಳನ್ನು ಸೀಳುವ ಎಲೈ ಇಂದ್ರನೇ, (ನಮ್ಮ ಶತ್ರುಗಳನ್ನು ನಾಶಪಡಿಸು).

## English Translation.

Indra, (sustain us) with wealth that transports (man beyond (calamity); for, (enhanced) greatness accrues to you. however mighty (from our thanks) for (your) protection, as it does to Mitra for his powerful,

protection, most potent and immortal (Indra) our defender and preserver, (ascend) some chariot (and come hither): devourer (of foes), repel any one assailing us; any one assailing us, devourer (of foes)

॥ ವಿಶೇಷವಿಷಯಗಳು ॥

**ತರೂಷಸಾ—ತರಣಕುಶಲೇನ ಅಸ್ಮಾನಾಪದ್ಭ್ಯಃ ಉತ್ತಾರೀತುಂ ಶಕ್ತೇನ ।** ಆಪತ್ತುಗಳಿಂದ ನಮ್ಮನ್ನು ರಕ್ಷಿಸಲು ಸಮರ್ಥವಾದ ಶಕ್ತಿಯುಳ್ಳ ಧನವನ್ನು ಇಂದ್ರನು ಅನುಗ್ರಹಿಸಿ ರಕ್ಷಿಸಲಿ ಎಂದು ಅರ್ಥ.

**ಉಗ್ರಂ ಚಿತ್ ಮಹಿಮಾ ಸಕ್ಷತ್—ಉದ್ಗೂರ್ಣಬಲಂ ಅಸ್ಮತ್ ಸ್ತೋತ್ರಜನಿತಃ ಕಶ್ಚಿದತಿಶಯಃ ಉತ್ಕರ್ಷಯತಿ ।** ಪ್ರಭೂತವಾದ ಸಾಮರ್ಥ್ಯದಿಂದ ವ್ಯಾಪ್ತನಾದ ಇಂದ್ರನನ್ನು ಯಜಮಾನರು ಆಚರಿಸುವ ಯಜ್ಞದಲ್ಲಿ ಪಠಿಸುವ ಸ್ತೋತ್ರಗಳಿಂದ ಒಂದು ವಿಧವಾದ ಅಭಿವೃದ್ಧಿಯು ಉಂಟಾಗಿ ಉತ್ಕರ್ಷವಂತನನ್ನಾಗಿ ಮಾಡುತ್ತದೆ ಎಂದು ಅರ್ಥ.

**ಅವಸೇ**—ಎಂಬ ಪದವು ಎರಡುಸಾರಿ ಪಠಿತವಾಗಿದೆ. ಮೊದಲನೆಯ **ಅವಸೇ** ಎಂಬ ಪದಕ್ಕೆ ಇಂದ್ರನ ಪ್ರೀತಿಗಾಗಿ ಎಂದೂ, ಎರಡನೆಯದಕ್ಕೆ ಯಜಮಾನರಿಗೆ ಇಂದ್ರನು ಅನುಗ್ರಹಿಸುವ ಕಾಂತಿ ಮತ್ತು (ರಕ್ಷಣೆ) ಆರೋಗ್ಯ ರೂಪವಾದ ರಕ್ಷಣೆ ಎಂದೂ ಅರ್ಥವನ್ನು ಹೇಳಿದೆ.

**ಮಿತ್ರಂ ನ—ಸರ್ವಜನಮಿತ್ರಂ ಸೂರ್ಯಮಿವ ।** ಎಲ್ಲರಿಗೂ ಪೂಜ್ಯನಾಗಿರುವ ಸೂರ್ಯನ ಮಹತ್ತ್ವವನ್ನು ಸ್ತುತಿಗಳು ಅಭಿವೃದ್ಧಿಗೊಳಿಸುವಂತೆ ಎಂದು ಒಂದು ವಿಧವಾದ ಅರ್ಥವನ್ನೂ, ಎಲ್ಲರಿಗೂ ಯಾವಾಗಲೂ ಸುಖಕರವಾದ ಪ್ರಿಯವಾದ ಹಿತವನ್ನು ಉಂಟುಮಾಡುವ ಸ್ನೇಹಿತನಂತೆ ಎಂದೂ ಎರಡನೆಯ ಅರ್ಥವನ್ನು ಹೇಳಿ ಇಂದ್ರನು ಮಹತ್ತ್ವಪೂರಿತನಾಗುವನೆಂದು ಹೋಲಿಸಿದೆ. ಮಿತ್ರನು ತನಗೆ ಹಿತವಲ್ಲದಿದ್ದರೂ ಇತರರಿಗೆ ಹಿತವನ್ನು ಉಂಟುಮಾಡುವ ನಿಷ್ಕಾಮಕರ್ಮಾಚರಣೆಯಿಂದ ಅತಿಶಯವಾದ ಪ್ರೀತ್ಯಾಸ್ಪದನಾಗಿರುವನೆಂದು ತಾತ್ಪರ್ಯವು.

**ಓಜಿಷ್ಠ—ಅತಿಶಯೇನ ಓಜಸ್ವಿತಮ, ಬಲವನ್ ।** **ಓಜಃ** ಎಂಬ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಬಲನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. ಇಂದ್ರನು ಬಹಳ ಬಲವುಳ್ಳವನೆಂದು ಅರ್ಥವನ್ನು ಹೇಳಿ ಇಂದ್ರನನ್ನು ಸಂಬೋಧಿಸಿದೆ.

**ಅದ್ರಿವಃ**—ಈ ಪದವು ಆವೃತ್ತವಾಗಿದೆ. ಮೊದಲನೆಯ **ಅದ್ರಿವಃ** ಎಂಬ ಪದಕ್ಕೆ ಇಂದ್ರನು ಶತ್ರುಗಳನ್ನು ಅತಿಶಯವಾಗಿ ನಾಶಮಾಡುವವನೆಂದು ಅರ್ಥಮಾಡಿದೆ. ಎರಡನೆಯ **ಅದ್ರಿವಃ** ಎಂಬ ಪದಕ್ಕೆ **ಅದ್ರೇರಾಪರ್ತ-ರ್ಭಕ್ಷಕ, ವಾ ಶತ್ರೂಣಾಂ ।** **ಅದ್ರಿ** ಶಬ್ದವು—ಮೇಘನಾಮಗಳಲ್ಲಿ (ನಿ. ೨-೨೧) ಉಕ್ತವಾಗಿದೆ. **ಅದ್ರಿವನ್** ಎಂಬ ಪದವು ಯಾಸ್ಕರದಿಂದ **ಅದ್ರಿರಾದೃಣಾತ್ಯನೇನ ಅಪಿ ವಾತ್ತೇಃ ಸ್ಯಾತ್** (ನಿ. ೪-೪) ಎಂದು ಪಠಿತವಾಗಿ ಆದೃಣಾತಿ, ಅಥವಾ ಅತ್ತಿ ಎಂಬ ಧಾತುವಿನಿಂದ ಅದ್ರಿಯು (ಮೇಘವು) ಇವನಿಂದ ಹಿಂಸಿಸಲ್ಪಡುತ್ತದೆ. ಅಥವಾ ನಾಶವನ್ನು ಹೊಂದುತ್ತದೆ ಎಂದು ವ್ಯಾಖ್ಯಾತವಾಗಿದೆ. ಇಂದ್ರನು—ಬಹಳ ಕೆಟ್ಟರೀತಿಯಿಂದ ಹಿಂಸೆಯನ್ನು ಉಂಟುಮಾಡುವ ಶತ್ರುವನ್ನೂ ಕೂಡ ಬಾಧಿಸುವ ಶಕ್ತಿಯುಳ್ಳವನಾಗಿರುವಕಾರಣ ಯಾಗಕರ್ತರಾದ ನಮ್ಮ ಶತ್ರುಗಳನ್ನೂ ಬಾಧಿಸಲಿ ಎಂದು ಅರ್ಥವನ್ನು ವಿವರಿಸಿದೆ.

**ಚಿತ್**—ಈ (ಉಪಸರ್ಗ) ಅವ್ಯಯವು ನಿರುಕ್ತಕಾರರಿಂದ **ಚಿದಿತ್ಯೇಷೋಽನೇಕಕರ್ಮಾ ।** ಚಿತ್ (ನಿ. ೧-೪) ಎಂಬುವುದು ಬಹಳವಿಧವಾದ ಅರ್ಥವನ್ನು ಬೋಧಿಸುವದು ಎಂದು ವ್ಯಾಖ್ಯಾತವಾಗಿದೆ. **ಆಚಾರ್ಯಶ್ಚಿದಿದಂ ಬ್ರೂಯಾತ್ ಇತಿ ಪೂಜಾಯಾಂ** ಈ ಉದಾಹರಣೆಯಲ್ಲಿ ಚಿತ್ ಎಂಬುವುದು ಆಚಾರ್ಯನ ಮಹತ್ವವನ್ನು ಬೋಧಿಸುವುದರಿಂದ ಪೂಜಾರ್ಥದಲ್ಲಿ ಪ್ರಯುಕ್ತವಾಗಿದೆ. ಎಂದೂ **ದಧಿ ಚಿತ್** ಎಂಬಲ್ಲಿ ದಧಿರೂಪವಾದ ಅನ್ನವೆಂದು ಅರ್ಥಮಾಡುವುದರಿಂದ ಉಪಮಾ (ಹೋಲಿಕೆ) ಎಂಬ ಅರ್ಥದಲ್ಲೂ ಪ್ರಯುಕ್ತವಾಗಿದೆ, ಎಂದೂ **ಕುಲ್ಮಾಷಾಂಶ್ಚಿದಾ ಹರೇತ್ಯವಕುತ್ಸಿತೇ** ಈ ವಾಕ್ಯದಲ್ಲಿ ಚಿತ್ ಎಂಬುವುದು ಬಹಳ ಕುತ್ಸಿತವಾದದ್ದು ಎಂಬ ಅರ್ಥಲ್ಲಿಯೂ ಪ್ರಯುಕ್ತವಾಗಿದೆ ಎಂದು ಅರ್ಥವನ್ನೂ ವಿವರಿಸಿರುವರು. ಸಾಯಣರು ಚಿತ್ ಎಂಬ ನಿಪಾತಕ್ಕೆ **ಚಿದಿತ್ಯವಕುತ್ಸಿತಃ । ಚಿತ್** ಎಂಬುದು ಬಹಳ ನಿಂದ್ಯವಾದದ್ದೆಂದು ಅರ್ಥವನ್ನು ಬೋಧಿಸುವುದು, ಅಥವಾ **ಸಮುಚ್ಚಯಾರ್ಥಃ**—ಸಮುಚ್ಚಯ (ಕೂಡ) ಎಂಬ ಅರ್ಥವನ್ನು ಬೋಧಿಸುವುದು ಎಂದು ಅರ್ಥವನ್ನು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ತರೂಷಸಾ**—ತೄ ಪ್ಲವನತರಣಯೋಃ ಧಾತು. ಇದಕ್ಕೆ ಔಣಾದಿಕ ಉಸಿನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಛಾಂದಸವಾಗಿ ದೀರ್ಘ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಉಗ್ರಂ**—ಉಚ ಸಮವಾಯೇ ಧಾತು. **ಋಜ್ರೇಂದ್ರ**-(ಉ. ಸೂ. ೨-೧೮೬) ಎಂಬುದರಿಂದ ರನ್ನಂತವಾಗಿ ನಿಪಾತಿತವಾಗಿದೆ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ.

**ಮಹಿಮಾ**—ಮಹತ್ ಶಬ್ದ. ಇದಕ್ಕೆ ಭಾವಾರ್ಥದಲ್ಲಿ ಇಮನಿಚ್ ಪ್ರತ್ಯಯ. ಟಿ ಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಏಕವಚನಾಂತರೂಪ.

**ಸಕ್ಷತ್**—ಷಹ ಮರ್ಷಣೇ ಧಾತು **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಪ್ರತ್ಯಯದ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ ಸೂ. ೩-೧-೩೪) ಎಂಬುದರಿಂದ ಸಿಪ್. ಹಕಾರಕ್ಕೆ ಢತ್ವ, ಕತ್ವ. ಷತ್ವ. ತಿಙಂತ ನಿಘಾತಸ್ವರ ಬರುತ್ತದೆ.

**ಓಜಿಷ್ಠ**—ಓಜಃ ಅಸ್ಯ ಅಸ್ತಿ ಇತಿ ಓಜಸ್ವೀ. ಮತ್ವರ್ಥದಲ್ಲಿ ಅಸಂತವಾದುದರಿಂದ ವಿನ್ ಪ್ರತ್ಯಯ. ಇದರ ಮೇಲೆ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ಇಷ್ಠನ್ ಪರವಾದಾಗ ವಿನಿಗೆ ಲುಕ್. **ಟೇಃ** (ಪಾ. ಸೂ. ೬-೪-೧೪೩) ಎಂಬುದರಿಂದ ಅಸಿಗೆ ಲೋಪ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪಾದಾದಿಯಲ್ಲಿರುವುದರಿಂದ ಆಮಂತ್ರಿತ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತ್ರಾತಃ**—ತ್ರೈಙ್ ಪಾಲನೇ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. **ಆದೇಚ ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ. ಸಂಬುದ್ಧಿಯಲ್ಲಿ ತ್ರಾತಃ ಎಂದು ರೂಪವಾಗುತ್ತದೆ.

**ಆಮಂತ್ರಿತಂ ಪೂರ್ವಮವಿದ್ಯಮಾನವತ್** ಎಂಬುದರಿಂದ ಪೂರ್ವದ ಶಬ್ದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಪದವ ಪರದಲ್ಲಿ ಬಾರದಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. ಹಿಂದಿನಂತೆ ಆದ್ಯುದಾತ್ತಸ್ವರ ಬರುತ್ತದೆ.

**ಅವಿತಃ**—ಅವ ರಕ್ಷಣೇ ಧಾತು. ಹಿಂದಿನಂತೇ ತೃಚ್ ಪ್ರತ್ಯಯ. ಅದಕ್ಕೆ ಇಡಾಗಮ. ಹಿಂದಿನಂತೇ ಸ್ವರ ಬರುತ್ತದೆ.

**ರಿರಿಷೇಃ**—ರಿಷ ಹಿಂಸಾಯಾಂ ಧಾತು. ಲಿಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರ ಲೋಪ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಪುನಃ ವ್ಯತ್ಯಯದಿಂದ ಶ ವಿಕರಣ. ಇದು ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ತಿಙಂತ ನಿಘಾತಸ್ವರಬರುತ್ತದೆ.

**ಅದ್ರಿವಃ**—ಅದ್ರಿಃ ವಜ್ರಮ್. ತದಸ್ಯ ಅಸ್ತಿ ಎಂದು ಅರ್ಥವಿವಕ್ಷಾಮಾಡುವಾಗ ಮತುಪ್ ಪ್ರತ್ಯಯ. ಇಕಾರದ ಪರದಲ್ಲಿ ಬಂದುದರಿಂದ **ಛಂದಸೀರಃ** (ಪಾ. ಸೂ ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಸಂಬುದ್ಧಿ ಏಕವಚನದಲ್ಲಿ **ಉಗಿದಚಾಂ ಸ**—(ಪಾ. ಸೂ. ೭-೧-೭೧) ಎಂಬುದರಿಂದ ನುಮ್. **ಹಲ್ ಙ್ಯಾಭ್ಯೋ**—ಸೂತ್ರದಿಂದ ಸುಲೋಪ. ಸಂಯೋಗಾಂತ ಲೋಪದಿಂದ ತಕಾರ ಲೋಪ. **ಮತುವಸೋ ರು ಸಂಬುದ್ಧೌ ಛಂದಸಿ** (ಪಾ. ಸೂ. ೮-೩-೧) ಎಂಬುದರಿಂದ ರುತ್ವ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ರಿರಿಕ್ಷಂತಮ್**—ರಿಷ ಹಿಂಸಾಯಾಂ ಧಾತು. ಇಚ್ಛಾರ್ಥದಲ್ಲಿ ಸನ್. ಇಕಾರದ ಪರದಲ್ಲಿ ಹಲ್ ಬಂದು ಅದರ ಪರದಲ್ಲಿ ಸನ್ ಬಂದುದರಿಂದ **ಹಲಂತಾಚ್ಚ** (ಪಾ. ಸೂ. ೧-೨-೧೦) ಎಂಬುದರಿಂದ ಅದು ಕಿತ್ತಾಗುತ್ತದೆ. ಸನನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. **ಷಢೋಃ ಕಃ ಸಿ** ಎಂಬುದರಿಂದ ಷಕಾರಕ್ಕೆ ಕತ್ವ. ಅದನ್ನು ನಿಮಿತ್ತೀಕರಿಸಿ ಸನಿನ ಸಕಾರಕ್ಕೆ ಷತ್ವ. ಸನಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ದ್ವಿತೀಯಾ ಏಕವಚನಾಂತರೂಪ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧೦ ॥



॥ ಸಂಹಿತಾಪಾಠಃ ॥

ಪಾಹಿ ನ ಇಂದ್ರ ಸುಷ್ಟುತ ಸ್ರಿಧೋಽವಯಾತಾ ಸದಮಿದ್ದುರ್ಮತೀನಾಂ
ದೇವಃ ಸನ್ದುರ್ಮತೀನಾಂ ।
ಹಂತಾ ಪಾಪಸ್ಯ ರಕ್ಷಸಸ್ತ್ರಾತಾ ವಿಪ್ರಸ್ಯ ಮಾವತಃ ।
ಅಧಾ ಹಿ ತ್ವಾ ಜನಿತಾ ಜೀಜನದ್ವಸೋ ರಕ್ಷೋಹಣಂ ತ್ವಾ ಜೀಜನದ್ವಸೋ ॥

॥ ಪದಪಾಠಃ ॥

ಪಾಹಿ । ನಃ । ಇಂದ್ರ । ಸುಽಸ್ತುತ । ಸ್ರಿಧಃ । ಅವಽಯಾತಾ । ಸದಂ । ಇತ್ । ದುಃಽಮತೀನಾಂ । ದೇವಃ । ಸನ್ । ದುಃಽಮತೀನಾಂ ।

ಹಂತಾ । ಪಾಪಸ್ಯ । ರಕ್ಷಸಃ । ತ್ರಾತಾ । ವಿಪ್ರಸ್ಯ । ಮಾಽವತಃ ।

ಅಧ । ಹಿ । ತ್ವಾ । ಜನಿತಾ । ಜೀಜನತ್ । ವಸೋ ಇತಿ । ರಕ್ಷಃಽಹನಂ । ತ್ವಾ । ಜೀಜನತ್ । ವಸೋ ಇತಿ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸುಷ್ಟುತ ಶೋಭನಸ್ತುತ ತಂ ಸ್ರಿಧೋ ದುಃಖಾತ್ ತದುತ್ಪಾದಕಾತ್ಪಾಪಾದ್ವಾ ನೋಽಸ್ಮಾನ್ಪಾಹಿ । ರಕ್ಷ । ಯತಸ್ತ್ವಂ ದುರ್ಮತೀನಾಂ ದುರ್ಮನಸ್ಕಾನಾಂ ರಕ್ಷಃಪ್ರಭೃತೀನಾಂ ॥ ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ ॥ ಸದಮಿತ್ ಸರ್ವದೈವಾವಯಾತಾಧೋಯಾಪಯಿತಾ ಪ್ರಾಪಯಿತಾಸಿ । ಅತಃ ಪಾಹಿ । ಅತ ಏವ ಹೇ ಇಂದ್ರ ದೇವೋಽಸ್ಮತ್ಸ್ತುತ್ಯಾ ಹೃಷ್ಟಃ ಸನ್ ದುರ್ಮತೀನಾಂ ದುಷ್ಟಮನನವತಾಂ ಯಾಗವಿಘಾತಕಾನಾಮವಯಾತಾಸಿ । ತಥಾ ರಕ್ಷಸೋ ರಕ್ಷಣನಿಮಿತ್ತಭೂತಸ್ಯ । ರಕ್ಷೋ ರಕ್ಷಿತವ್ಯಮಸ್ಮಾದಿತಿ ಯಾಸ್ಕಃ । ನಿ. ४-೧೮ । ತಾದೃಶಸ್ಯ ಪಾಪಸ್ಯ ಫಲಪ್ರತಿಬಂಧರೂಪಸ್ಯ ಹಂತಾ ಘಾತಕೋಽಸಿ । ಯದ್ವಾ । ಪಾಪಸ್ಯ ಪಾಪಿನೋ ರಕ್ಷಸೋ ರಾಕ್ಷಸಾದೇರ್ಹಂತಾಸಿ । ತಥಾ ಮಾವತೋ ಮತ್ಸದೃಶಸ್ಯ ವಿಪ್ರಸ್ಯ ಮೇಧಾವಿನೋ ಯಜಮಾನಸ್ಯ ತ್ರಾತಾ ರಕ್ಷಿತಾಸಿ । ಅಧಾತೋ ಹೇತೋರ್ಹೇ ಇಂದ್ರ ವಸೋ ಸರ್ವೇಷಾಂ ನಿವಾಸಭೂತ ತ್ವಾ ತ್ವಾಂ ಜನಿತಾ ಸರ್ವಸ್ಯ ಜನಯಿತಾದಿಕರ್ತಾ ಪರಮೇಶ್ವರೋ ಜೀಜನತ್ । ಅಜನಯತ್ । ಉತ್ಪಾದಿತವಾನ್ । ತಥಾ ಹೇ ವಸೋ ವಾಸಯಿತಃ ತ್ವಾ ತ್ವಾಂ ರಕ್ಷೋಹಣಂ ಜೀಜನತ್ । ರಕ್ಷೋಹನನಾಯೋತ್ಪಾದಿತವಾನ್ ॥ ಜನಯತೇರ್ಲುಙಿ ಚಙಿ ರೂಪಂ ॥ ಯಜ್ಞಾದಿವಿಘಾತಿನಾಂ ರಕ್ಷಃಪ್ರಭೃತೀನಾಂ ವಿಘಾತಾಯ ಹೀಂದ್ರಸ್ಯಾವತಾರಃ । ತಮಿಂದ್ರೋ ದೇವತಾನ್ವಸೃಜ್ಯತೇತ್ಯಾದಿಪ್ರಸಿದ್ಧದ್ಯೋತನಾರ್ಥೋ ಹಿಶಬ್ದಃ ॥

॥ ಪ್ರತಿಪದಾರ್ಥ ॥

(ಹೇ) **ಇಂದ್ರ**—(ಎಲೈ) ಇಂದ್ರನೇ । (**ತ್ವಂ**—ನೀನು) । **ದುರ್ಮತೀನಾಂ**—ದುಷ್ಟಮತಿಗಳಾದ ರಾಕ್ಷಸಾದಿಗಳನ್ನು । **ಸದಂ ಇತ್**—ಯಾವಾಗಲೂ । **ಅವಯಾತಾ**—ತುಳಿಯುವವನು । (**ಅತಃ**—ಆದುದರಿಂದ) । **ಸುಷ್ಟುತ**—ಚೆನ್ನಾಗಿ ಸ್ತುತನಾದ (ನೀನು) । **ಸ್ರಿಧಃ**—ದುಃಖದಿಂದ (ದುಃಖಜನಕವಾದ ಪಾಪದಿಂದ) । **ನಃ**—ನಮ್ಮನ್ನು । **ಪಾಹಿ**—ರಕ್ಷಿಸು । **ದೇವಃ ಸನ್**—(ನಮ್ಮ ಸ್ತುತಿಯಿಂದ) ಹೃಷ್ಟನಾಗಿ । **ದುರ್ಮತೀನಾಂ**—ದುರ್ಮತಿಗಳಾದ (ಯಜ್ಞವಿಘಾತಕರನ್ನು) । (**ಅವಯಾತಾ**)—ನಾಶಪಡಿಸುವವನಾಗು) । (**ತಥಾ**—ಹಾಗೆಯೇ) । **ಪಾಪಸ್ಯ**—ಪಾಪಿಗಳಾದ । **ರಕ್ಷಸಃ**—ರಾಕ್ಷಸರ(ನ್ನು) । **ಹಂತಾ**—ವಧಿಸುವವನು

(ಆಗಿದ್ದಿ) | **ಮಾವತಃ**—(ನೀನು) ನನ್ನಂತಹ | **ವಿಪ್ರಸ್ಯ**—ಮೇಧಾವಿಯಾದ (ಯಜಮಾನನ) | **ತ್ರಾತಾ**—ರಕ್ಷಕನು | **ಅಧ**—ಇದೇ ಕಾರಣದಿಂದಲೇ | **ವಸೋ**—(ಸರ್ವರಿಗೂ) ನಿವಾಸಹೇತುವಾದ ಎಲೈ ಇಂದ್ರನೇ | **ತ್ವಾ**—ನಿನ್ನನ್ನು | **ಜನಿತಾ**—ಸೃಷ್ಟಿಕರ್ತೃವು | **ಜೀಜನತ್ ಹಿ**—ಸೃಜಿಸಿದನಷ್ಟೇ | **ವಸೋ**—(ಸರ್ವರಿಗೂ) ಆಶ್ರಯನಾದ ಎಲೈ ಇಂದ್ರನೇ | **ತ್ವಾ**—ನಿನ್ನನ್ನು | **ರಕ್ಷೋಹಣಂ**—ರಾಕ್ಷಸಹನನಕ್ಕಾಗಿ | **ಜೀಜನತ್**—ಪಡೆದನು.

॥ ಭಾವಾರ್ಥ ॥

ಎಲೈ ಇಂದ್ರನೇ, ಸರ್ವದಾ ರಾಕ್ಷಸರನ್ನು ತುಳಿಯುವ ನೀನು (ನಮ್ಮಿಂದ) ಚೆನ್ನಾಗಿ ಸ್ತುತನಾಗಿ, ಪಾಪದಿಂದ (ದುಃಖದಿಂದ) ನಮ್ಮನ್ನು ರಕ್ಷಿಸು. (ನಮ್ಮ ಸ್ತುತಿಯಿಂದ) ತುಷ್ಟನಾಗಿ, ದುರ್ಮತಿಗಳಾದ ಯಜ್ಞವಿಘಾತಕರನ್ನೂ, ಪಾಪಿಗಳಾದ ರಾಕ್ಷಸರನ್ನೂ ನಾಶಪಡಿಸುತ್ತಿ; ನನ್ನಂತೆ ಮೇಧಾವಿಯಾದ ಯಜಮಾನನಿಗೂ ರಕ್ಷಕನಾಗಿದ್ದಿ; ಆದುದರಿಂದಲೇ, ಸೃಷ್ಟಿಕರ್ತೃವು, (ಸಮಸ್ತರಿಗೂ) ನಿವಾಸಭೂತನಾದ ನಿನ್ನನ್ನು ಸೃಜಿಸಿದನು; ಎಲೈ (ಸರ್ವರಿಗೂ) ಆಧಾರನಾದ ಇಂದ್ರನೇ, ರಾಕ್ಷಸಸಂಹಾರಕ್ಕಾಗಿಯೇ ನಿನ್ನನ್ನು (ಸೃಷ್ಟಿಕರ್ತನು) ಉತ್ಪತ್ತಿಮಾಡಿದಾನೆ.

## English Translation.

Deservedly-lauded Indra, preserve us from suffering; for you are always verily the chastiser of the malevolent: you, being divine, (are the chastiser) of the malevolent: (you are) the slayer of the wicked Rakshas, the preserver of a pious (worshipper), such as I am: for, asylum (of all men), the progenitor has begotten you (for this purpose); has begotten you, asylum (of all men), the destroyer of the Rakshasas.

॥ ವಿಶೇಷವಿಷಯಗಳು ॥

**ಸ್ರಿಧಃ—ದುಃಖಾತ್ ತದುತ್ಪಾದಕಾತ್ ಪಾಪಾದ್ವಾ** | ಇಂದ್ರನು ದುಃಖಗಳಿಂದಲೂ, ಅಥವಾ ದುಃಖವನ್ನು ಉಂಟುಮಾಡುವ ಪಾಪಗಳಿಂದಲೂ ನಮ್ಮನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

**ದುರ್ಮತೀನಾಂ ಸದಮಿತ್ ಅವಯಾತಾ ದುರ್ಮನಸ್ಕಾನಾಂ ರಕ್ಷಃ ಪ್ರಭೃತೀನಾಂ ಸದೈವ ಅಧಃ ಪ್ರಾಪಯಿತಾ**—ಕೆಟ್ಟಮನಸ್ಸುಳ್ಳವರಾದ ರಾಕ್ಷಸರೇ ಮೊದಲಾದವರನ್ನು ಯಾವಾಗಲೂ ಉನ್ನತಸ್ಥಿತಿಗೆ ಬರದಂತೆ ಕೆಳಕ್ಕೆ ತಳ್ಳುತ್ತಿರುವವನು ಎಂದು ಅರ್ಥಮಾಡಿದೆ.

**ದುರ್ಮತೀನಾಂ**—ಎಂಬ ಪದವು ಎರಡುಸಾರಿ ಪ್ರಯುಕ್ತವಾಗಿರುವುದರಿಂದ ಎರಡನೆಯ ದುರ್ಮತಿಪದಕ್ಕೆ **ದುಷ್ಟಮನನವತಾಂ ಯಾಗವಿಘಾತಕಾನಾಂ** ಕೆಟ್ಟದ್ದನ್ನು ಇತರರಿಗೆ ಹಾರೈಸುವವರು, ಯಜ್ಞವನ್ನು ಹಾಳುಮಾಡುವವರು ಎಂದು ಅರ್ಥಮಾಡಿ; ಇವರನ್ನು ಇಂದ್ರನು ನಾಶಮಾಡಲಿ ಎಂದು ಪ್ರಾರ್ಥಿಸಿದೆ.

**ರಕ್ಷಸಃ ಪಾಪಸ್ಯ ಹಂತಾ—ರಕ್ಷಣನಿಮಿತ್ತಭೂತಸ್ಯ ಫಲಪ್ರತಿಬಂಧರೂಪಸ್ಯ ಘಾತಕಃ | ಯದ್ವಾ ಪಾಪಿನಃ ರಾಕ್ಷಸಾದೇಃ ಹಂತಾ ಅಸಿ** | ಪಾಪವೆಂಬುದು ಮುಂದೆ ಉಂಟಾಗುವ ಒಳ್ಳೆಯದನ್ನು ಕೆಡಿಸುವುದು. ಆದ್ದರಿಂದ ಈ ರೀತಿಯಿಂದ ಇರುವ ಪಾಪದಿಂದ ರಕ್ಷಣೆಯು ಅಪೇಕ್ಷಿತವಾಗಿರುವ ಕಾರಣ ಇಂದ್ರನು ಯಜಮಾನರಿಗೆ

ಈ ವಿಧವಾದ ಪಾಪವು ಉಂಟಾಗದಂತೆ ರಕ್ಷಿಸುವವನೆಂದು ಒಂದು ಅರ್ಥವನ್ನು ಮಾಡಿದೆ. ಅಥವಾ ಪಾಪಕೆಲಸಗಳನ್ನು (ಇತರರಿಗೆ ಹಿಂಸೆಯಾಗುವಕಾರ್ಯಗಳನ್ನು) ಆಚರಿಸುವ ರಾಕ್ಷಸರನ್ನು ನಾಶಮಾಡುವವನೆಂದು ಇನ್ನೊಂದು ಅರ್ಥವನ್ನು ವಿವರಿಸಿದೆ. ಯಾಸ್ಕರೂ—

**ವಿ ಜ್ಯೋತಿಷಾ ಬೃಹತಾ ಭಾತ್ಯಗ್ನಿರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ ।**
**ಪ್ರಾದೇವೀರ್ಮಾಯಾಃ ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ॥**

(ಋ. ಸಂ. ೫-೨-೯)

ಈ ಋಕ್ಕಿನಲ್ಲಿರುವ ರಕ್ಷಸೇ ಎಂಬ ಪದದ ಅರ್ಥವನ್ನು ವಿವರಿಸುವಾಗ—**ರಕ್ಷೋ ರಕ್ಷಿತವ್ಯಮಸ್ಮಾತ್, ರಹಸಿ ಕ್ಷಣೋತೀತಿ ವಾ, ರಾತ್ರೌ ನಕ್ಷತ ಇತಿ ವಾ** (ನಿ. ೪-೧೮) ಎಂದು ರಕ್ಷಸ್ ಶಬ್ದಾರ್ಥವನ್ನು ವಿವರಿಸಿದ್ದಾರೆ. ಶರೀರವು ಇವರಿಂದ ಹಿಂಸೆಯುಂಟಾಗದಂತೆ ರಕ್ಷಣೆಗೆ ಅರ್ಹವಾದದ್ದು ಅಥವಾ, ಏಕಾಂತವಾದ (ಜನಸಂಚಾರವಿಲ್ಲದ) ಪ್ರದೇಶದಲ್ಲಿ ಹಿಂಸೆಮಾಡುವವನು, ಅಥವಾ ರಾತ್ರಿಯಲ್ಲಿ ಬಹಳವಾಗಿ ಸಂಚರಿಸುವವನು ರಾಕ್ಷಸನು ಎಂದು ಅರ್ಥ. ಈ ಪ್ರಕಾರವಾಗಿರುವ ರಾಕ್ಷಸನಿಂದ ರಕ್ಷಣೆಯನ್ನು ಮಾಡುವುದಕ್ಕಾಗಿ ಇಂದ್ರನು ರಾಕ್ಷಸನನ್ನು ನಾಶಮಾಡುವನೆಂದು ವರ್ಣಿಸಿದೆ.

**ವಿಪ್ರಸ್ಯ ತ್ರಾತಾ—ಯಜಮಾನಸ್ಯ ಮೇಧಾವಿನಃ ರಕ್ಷಿತಾ.** ಇಂದ್ರನು ಬುದ್ಧಿವಂತನಾದ ಯಜಮಾನ ನನ್ನು ರಕ್ಷಿಸತಕ್ಕವನೆಂದು ಅರ್ಥ. ವಿಪ್ರ ಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೬) ಪಠಿತವಾಗಿದೆ.

**ಯೋ ಅನಿಧ್ಮೋ ದೀದಯದಪ್ಸ್ವಂತರ್ಯಂ ವಿಪ್ರಾಸ ಈಳತೇ ಅಧ್ವರೇಷು ।**
**ಅಪಾಂ ನಪಾನ್ಮಧುಮತೀರಪೋ ದಾ ಯಾಭಿರಿಂದ್ರೋ ವಾವೃಧೇ ವೀರ್ಯಾಯ ॥**

(ಋ. ಸಂ. ೧೦-೩೦.೪)

ಈ ಋಕ್ಕಿನಲ್ಲಿ **ವಿಪ್ರಾಸಃ—ಮೇಧಾವಿನಃ** ಎಂದು ಅರ್ಥಮಾಡಿದೆ.

ಇಲ್ಲಿ **ವಸೋ ಜನಿತಾ**, ಎಂದು ಎರಡುಸಾರಿ ಪ್ರಯೋಗವಿದೆ **ತಮಿಂದ್ರೋ ದೇವತಾನ್ಸಸೃಜ್ಯತ** (ತೈ. ಸಂ. ೭-೧-೧-೪) ಎಂಬ ಶ್ರುತಿವಾಕ್ಯದಲ್ಲಿ ಉಕ್ತವಾಗಿರುವಂತೆ ಸಕಲವನ್ನೂ ಸೃಷ್ಟಿಮಾಡಿರುವ ಪರಮೇಶ್ವರನು ಇಂದ್ರನು ಎಲ್ಲರಿಗೂ ಆಶ್ರಯದಾತೃವಾಗಿರುವವನೆಂದೂ, ಯಜ್ಞಕಂಟಕರಾದ ರಾಕ್ಷಸರೇ ಮೊದಲಾದವರನ್ನು ನಾಶ ಮಾಡುವುದಕ್ಕಾಗಿ ಸೃಷ್ಟನಾಗಿರುವನೆಂದೂ ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸುಷ್ಟುತ**—ಷ್ಟುಞ್ ಸ್ತುತೌ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಶೋಭನಂ ಸ್ತುತಃ ಸುಷ್ಟುತಃ. ಸಂಬುದ್ಧಿಯಲ್ಲಿ ಆಮಂತ್ರಿತನಿಘಾತಸ್ವರ ಬರುತ್ತದೆ.

**ಸ್ರಿಧಃ**—ಸ್ರಿಧು ಶೋಷಣೇ ಧಾತು. ಇದಕ್ಕೆ ಕ್ವಿಪ್ ಪ್ರತ್ಯಯ. ಪಂಚಮೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅವಯಾತಾ**—ಅವ ಉಪಸರ್ಗ. ಯಾ ಪ್ರಾಪಣೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದುರ್ಮತೀನಾಮ್**—ದುಷ್ಟಾ ಮತಿಃ ಯೇಷಾಂ ತೇ· ದುರ್ಮತಯಃ. ಷಷ್ಠೀ ಬಹುವಚನಾಂತರೂಪ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಹಂತಾ**—ಹನ ಹಿಂಸಾಗತ್ಯೋಃ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಅನಿಟ್ಟಾದುದರಿಂದ ಇಡಾಗಮ ಬರುವುದಿಲ್ಲ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಮಾವತಃ**—ಮತ್ಸದೃಶಸ್ಯ ಮಾವತಃ **ವತುಪ್ ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಮ್** (ಪಾ. ಸೂ. ೫-೨-೩೯-೧) ಎಂಬ ವಚನದಿಂದ ಅಸ್ಮತ್ ಶಬ್ದಕ್ಕೆ ವತುಪ್ ಪ್ರತ್ಯಯ. **ಪ್ರತ್ಯಯೋತ್ತರಪದಯೋಶ್ಚ** (ಪಾ. ಸೂ ೭-೨-೯೮) ಎಂಬುದರಿಂದ ಮಪರ್ಯಂತಕ್ಕೆ ಮಾದೇಶ. **ಅತೋ ಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ. **ದೃಗ್‌ದೃಶವತುಷು** ಎಂದು ಅನುವೃತ್ತವಾಗುವಾಗ **ಆ ಸರ್ವನಾಮ್ನಃ** (ಪಾ. ಸೂ. ೬-೩-೯೧) ಎಂಬುದರಿಂದ ಆಕಾರ ಅಂತಾದೇಶವಾಗಿ ಬರುತ್ತದೆ. **ಮಾವತ್** ಎಂದು ರೂಪವಾಗುತ್ತದೆ. ವತುಪ್ ಪಿತ್ತಾದುದರಿಂದ ಪ್ರಾತಿಪದಿಕಸ್ವರ ಉಳಿಯುತ್ತದೆ. ಷಷ್ಠೀ ಏಕವಚನಾಂತರೂಪ.

**ಜನಿತಾ**—ಜನೀ ಪ್ರಾದುರ್ಭಾವೇ. ಧಾತು. ಅಂತರ್ಭಾವಿತಣ್ಯರ್ಥಕವಾಗಿದೆ. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಇಡಾಗಮ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಜೀಜನತ್**—ಪೂರ್ವೋಕ್ತವಾದ ಧಾತುವಿಗೆ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಜಂತದ ಮೇಲೆ ಲುಙ್. ಪ್ರಥಮಪುರುಷ ಏಕವಚನ ಪರವಾದಾಗ **ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್** (ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** ಎಂಬುದರಿಂದ ಧಾತುವಿಗೆ ದ್ವಿತ್ವ. **ಸನ್ವಲ್ಲಘುನಿ ಚಙ್**—(ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವವಿರುವುದರಿಂದ **ಸನ್ಯತಃ** (ಪಾ. ಸೂ. ೭-೪-೭೯) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ದೀರ್ಘೋ ಲಘೋಃ** (ಪಾ. ಸೂ ೭-೪-೯೪) ಎಂಬುದರಿಂದ ಅದಕ್ಕೆ ದೀರ್ಘ. **ಬಹುಲಂ ಛಂದಸ್ಯಮಾಙ್ ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧ ೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಸೋ**—ವಸ ನಿವಾಸೇ. ಧಾತು. **ಶೃಸ್ವೃಸ್ನಿಹಿ**—(ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ. ಸಂಬುದ್ಧಿಯಲ್ಲಿ **ಹ್ರಸ್ವಸ್ಯ ಗುಣಃ** ಎಂಬುದರಿಂದ ಗುಣ ಬರುತ್ತದೆ. **ಏಙ್ ಹ್ರಸ್ವಾತ್ ಸಂಬುದ್ಧೇಃ** ಎಂಬುದರಿಂದ ಸುಲೋಪ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ರಕ್ಷೋಹನಂ**—ಹನ ಹಿಂಸಾಗತ್ಯೋಃ ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ **ಇನ್‌ಹನ್ ಪೂಷಾರ್ಯಮ್ಣಾಂ ಶೌ** ಎಂದು ನಿಯಮಮಾಡಿರುವುದರಿಂದ ದೀರ್ಘ ಬರುತ್ತದೆ. ‖ ೧೧ ‖

ಇಲ್ಲಿಗೆ ನೂರ ಇಪ್ಪತ್ತೊಂಭತ್ತನೇ ಸೂಕ್ತವು ಮುಗಿದುದು.



# ನೂರ ಮೂವತ್ತನೆಯ ಸೂಕ್ತವು

**ಏಂದ್ರ ಯೊಾಹ್ಯುಪ ನ ಇತಿ ದಶರ್ಚಂ ಚತುರ್ಥಂ ಸೂಕ್ತಂ ಪಾರುಚ್ಛೇಪಮೈಂದ್ರಂ। ಅಂತ್ಯಾ ಸ ನೋ ನವ್ಯೇಭಿರಿತ್ಯೇಷಾ ತ್ರಿಷ್ಟುಪ್ ಶಿಷ್ಟಾ ಅತ್ಯಷ್ಟಯಃ। ಅತ್ರ ತ್ರಿಷ್ಟುಬಂತ ಪರಿಭಾಷಾ ನಾಶ್ರೀಯತೇ, ಸರ್ವಮಾತ್ಯಷ್ಟಮಿತಿ ವಿಶೇಷೇಣ ಪ್ರತಿಜ್ಞಾತತ್ವಾತ್। ಏಂದ್ರ ಯಾಹಿ ದಶಾಂತ್ಯಾ ತ್ರಿಷ್ಟುಬಿತ್ಯನುಕ್ರಮಣಿಕಾ॥ ಪೃಷ್ಠ್ಯಷಡಹಸ್ಯ ಷಷ್ಠೇಽಹನಿ ನಿಷ್ಕೇವಲ್ಯಮೇತತ್ಸೂಕ್ತಂ। ಷಷ್ಠಸ್ಯೇತಿ ಖಂಡೇ ಸೂತ್ರಿತಂ। ಏಂದ್ರ ಯೊಾಹ್ಯುಪ ನಃ ಪ್ರ ಘಾನ್ವಸ್ಯ। ಆ. ೮-೧। ಇತಿ॥ ಮಹಾವ್ರತೇ ಮಾಧ್ಯಂದಿನಸವನೇ ಬ್ರಾಹ್ಮಣಾಚ್ಛಂಸಿನೋಽನುರೂಪತೃಚೇ ಪ್ರಥಮಮೈಂದ್ರ ಯಾಹಿತ್ಯೇಷಾ। ಮಹಾವ್ರತಸ್ಯ ಪಂಚವಿಂಶತಿಮಿತಿ ಖಂಡೇ ಶೌನಕೇನ ಸೂತ್ರಿತಂ। ಏಂದ್ರ ಯೊಾಹ್ಯುಪ ನಃ ಪರಾವತ ಇಂದ್ರಾಯ ಹಿ ದ್ಯೌರಸುರೋ ಅನಮ್ನತ। ಐ. ಆ. ೫-೧-೧। ಇತಿ॥**

ಅನುವಾದವು—**ಏಂದ್ರ ಯೊಾಹ್ಯುಪ ನ** ಎಂಬ ಸೂಕ್ತವು ಹತ್ತೊಂಭತ್ತನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪರುಚ್ಛೇಪನು ಋಷಿಯು. ಇಂದ್ರನು ದೇವತೆಯು. **ಸ ನೋ ನವ್ಯೇಭಿಃ** ಎಂಬ ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳು ಅತ್ಯಷ್ಟಿ ಛಂದಸ್ಸಿನವು ಅನುಕ್ರಮಣಿಕೆಯಲ್ಲಿ—**ಏಂದ್ರ ಯಾಹಿ ದಶಾಂತ್ಯಾ ತ್ರಿಷ್ಟುಬಿತಿ** ಎಂದು ಹೇಳಿರುವುದು. ಪೃಷ್ಠ್ಯಷಡಹವೆಂಬ ಯಾಗದ ಆರನೆಯ ದಿನದಲ್ಲಿ ಪಠಿಸಬೇಕಾದ ನಿಷ್ಕೇವಲಶ್ಯಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಷಷ್ಠಸ್ಯ** ಎಂಬ ಖಂಡದ **ಏಂದ್ರ ಯೊಾಹ್ಯುಪ ನಃ ಪ್ರ ಘಾನ್ವಸ್ಯ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧) ಮಹಾವ್ರತವೆಂಬ ಯಾಗದಲ್ಲಿಯೂ ಸಹ ಮಾಧ್ಯಂದಿನಸವನಕಾಲದಲ್ಲಿ **ಬ್ರಾಹ್ಮಣಾಚ್ಛಂಸಿ** ಎಂಬ ಋತ್ವಿಜನು (ಉದ್ಗಾತೃವೆಂಬ ಋತ್ವಿಜನು) ಪಠಿಸುವ ಸಾಮಮಂತ್ರಗಳಿಗೆ ಅನುರೂಪವಾದ ಋಕ್ಕುಗಳನ್ನು ಪಠಿಸುವಾಗ **ಏಂದ್ರ ಯಾಹಿ** ಎಂಬ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಐತರೇಯಾರಣ್ಯಕದಲ್ಲಿ—**ಮಹಾವ್ರತಸ್ಯ ಪಂಚವಿಂಶತಿಂ** ಎಂಬ ಖಂಡದಲ್ಲಿ **ಏಂದ್ರ ಯೊಾಹ್ಯುಪ ನಃ ಪರಾವತ ಇಂದ್ರಾಯ ಹಿ ದ್ಯೌರಸುರೋ ಅನಮ್ನತ**। ಎಂಬ ಸೂತ್ರದಿಂದ ಶೌನಕಮಹರ್ಷಿಯು ನಿರ್ದೇಶಿಸಿರುವರು (ಐ. ಆ. ೫-೧-೧).

# ಸೂಕ್ತ—೧೩೦

ಮಂಡಲ—೧ ॥ ಅನುವಾಕ—೧೯ ॥ ಸೂಕ್ತ—೧೩೦ ॥
ಅಷ್ಟಕ—೨ ॥ ಅಧ್ಯಾಯ—೧ ॥ ವರ್ಗ—೧೮, ೧೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಪರುಚ್ಛೇಪೋ ದೈವೋದಾಸಿಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧-೯ ಅತ್ಯಷ್ಟಿಃ । ೧೦ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಏಂದ್ರ ಯಾಹ್ಯುಪ ನಃ ಪರಾವತೋ ನಾಯಮಚ್ಛಾ ವಿದಥಾನೀವ
ಸತ್ಪತಿರಸ್ತಂ ರಾಜೇವ ಸತ್ಪತಿಃ ।
ಹವಾಮಹೇ ತ್ವಾ ವಯಂ ಪ್ರಯಸ್ವಂತಃ ಸುತೇ ಸಚಾ ।
ಪುತ್ರಾಸೋ ನ ಪಿತರಂ ವಾಜಸಾತಯೇ ಮಂಹಿಷ್ಠಂ ವಾಜಸಾತಯೇ ॥ ೧ ॥

॥ ಪದಪಾಠಃ ॥

ಆ । ಇಂದ್ರ । ಯಾಹಿ । ಉಪ । ನಃ । ಪರಾಽವತಃ । ನ । ಅಯಂ । ಅಚ್ಛ । ವಿದಥಾನಿಽಇವ ।
ಸತ್ಽಪತಿಃ । ಅಸ್ತಂ । ರಾಜಾಽಇವ । ಸತ್ಽಪತಿಃ ।
ಹವಾಮಹೇ । ತ್ವಾ । ವಯಂ । ಪ್ರಯಸ್ವಂತಃ । ಸುತೇ । ಸಚಾ ।
ಪುತ್ರಾಸಃ । ನ । ಪಿತರಂ । ವಾಜಽಸಾತಯೇ । ಮಂಹಿಷ್ಠಂ । ವಾಜಽಸಾತಯೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪರಾವತೋ ದೂರದೇಶಾತ್ ಸ್ವರ್ಗಲಕ್ಷಣಾನ್ನೋಽಸ್ಮಾನುಪ ಯಾಹಿ । ಅಸ್ಮತ್ಸಮೀಪಂ ಪ್ರತ್ಯಾಗಚ್ಛ । ತತ್ರ ದೃಷ್ಟಾಂತಃ । ಅಯಂ ನ । ಪುರೋವರ್ತ್ಯಗ್ನಿರಭಿಷುತಃ ಸೋಮೋ ವಾ ಪ್ರಸ್ತುತತ್ವಾನ್ನಿರ್ದಿಶ್ಯತೇ । ಸ ಇವ । ಯದ್ಯಪಿ ಪುರಸ್ತಾದುಪಾಚಾರಾನಿಷೇಧಾರ್ಥೀಯೋ ನಕಾರಃ ಸರ್ವತ್ರ ತಥಾಪ್ಯತ್ರಾಚಿತ್ಯೇನೋಪಮಾರ್ಥೀಯೋ ಗೃಹ್ಯತೇ । ಯದ್ವಾ । ಪರಾವತೋ ನ ದೂರದೇಶಾದಿವ । ಯದ್ಯಪಿ ಯಜ್ಞೇ ಸರ್ವದಾ ಸಂನಿಹತಸ್ತಥಾಪಿ ಸ್ವರ್ಗಾಖ್ಯಾದ್ದೂರದೇಶಾದಿವಾಸ್ಮಿನ್ಯಜ್ಞೇ ॥

ಅಯಮಿತಿ ವಿಭಕ್ತಿವ್ಯತ್ಯಯಃ । ಅಮುಂ ದೇವಯಜನದೇಶಮುಚ್ಛಾಭಿಸ್ರಾಪ್ತುಮಾಯಾಹೀತಿ ಶೇಷಃ । ತತ್ರ ದೃಷ್ಟಾಂತಃ । ಸತ್ಪತಿಃ ಸತಾಂ ಸರ್ವದಾ ವರ್ತಮಾನಾನಾಮೃತ್ವಿಜಾಂ ಪಾಲಕೋ ಯಜಮಾನ ಇವ ॥ ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ ॥ ಸ ಯಥಾ ವಿದಥಾನಿ ವೇದನಾನ್ಯನುಷ್ಠೇಯ- ಜ್ಞಾನಾನಿ । ಯದ್ವಾ । ಸತಾಂ ವಿದ್ಯಮಾನಾನಾಂ ಫಲಾನಾಂ ಪಾಲಕೋಽಗ್ನಿಃ । ಸ ಯಥಾ ವಿದಥಾನಿ ಯಜ್ಞಗೃಹಾಣ್ಯಾಗಚ್ಛತಿ ತದ್ವತ್ತ್ವಮಪಿ ಯಜ್ಞಗೃಹಾಣ್ಯಾಗಚ್ಛ । ಯದ್ವಾ ಸತಾಂ ನಕ್ಷತ್ರಾಣಾಂ ಪತೀ ರಾಜಾ ಚಂದ್ರಮಾ ಅಸ್ತಮಿವ। ಸ ಯಥಾ ಸ್ವಧಾಮಸ್ಥಾನಮಾಗಚ್ಛತಿ ತದ್ವತ್। ಕಿಂಚ ಪ್ರಯಸ್ವಂತೋ ಹವಿರ್ಲಕ್ಷಣಾನ್ನವಂತೋ ವಯಂ ಯಜಮಾನಾಸ್ತ್ವಾ ತ್ವಾಂ ಹವಾಮಹೇ । ಆಹ್ವಯಾಮಃ । ಕಿಮರ್ಥಂ ಸುತೇಽಭಿಷುತೇ ಸೋಮೇ ನಿಮಿತ್ತಭೂತೇ ಸತಿ । ಕೀದೃಶಾ ವಯಂ । ಸಚಾ ಋತ್ವಿಗ್ಭಿಃ ಸಹಿತಾಃ । ಸಚಾ ಸಹೇತ್ಯರ್ಥ ಇತಿ ಯಾಸ್ಕಃ । ನಿ. ೫-೫ । ಆಹ್ವಾನೇ ದೃಷ್ಟಾಂತಃ । ಪುತ್ರಾಸಃ ಪುತ್ರಾಃ ಪಿತರಂ ನ ಪಾಲಕಂ ಜನಕಮಿವ ತಂ ಯಥಾ ವಾಜಸಾತಯೇಽನ್ನಸ್ಯ ಸಂಭಜನಾಯಾಹ್ವಯಂತಿ ತಥಾ ವಯಮಪಿ ತ್ವಾಂ ತದರ್ಥಮಾಹ್ವಯಾಮಃ । ಕಿಂಚ ಮಂಹಿಷ್ಠಂ ಮಂಹನೀಯಂ ತ್ವಾಂ ವಾಜಸಾತಯೇ ಸಂಗ್ರಾಮಪ್ರಾಪ್ತಯೇ ತಜ್ಜಯಾಯ ಹವಿಃಸ್ವೀಕಾರಾಯ ವಾಹ್ವಯಾಮಃ॥

॥ ಪ್ರತಿಪದಾರ್ಥ ॥

(ಹೇ) **ಇಂದ್ರ**—(ಎಲೈ) ಇಂದ್ರನೇ । **ಪರಾವತಃ**—ಬಹು ದೂರಪ್ರದೇಶದಿಂದ । (ಸ್ವರ್ಗಲೋಕದಿಂದ) **ಅಯಂ ನ**—ಈ (ಪುರೋವರ್ತಿಯಾದ) ಅಗ್ನಿಯಂತೆ [ಅಥವಾ (ಅಭಿಸುತವಾದ) ಈ ಸೋಮದಂತೆ । **ನಃ**—ನಮ್ಮಗಳನ್ನು । **ಉಪ ಯಾಹಿ**—ಸಮೀಪಿಸು । ಅಥವಾ । **ಪರಾವತಃ ನ**—(ಸದಾ ಯಜ್ಞದಲ್ಲಿ ಸನ್ನಿಹಿತನಾಗಿದ್ದರೂ) ದೂರದೇಶದಿಂದಲೋ ಎಂಬಂತೆ । **ನಃ**—ನಮ್ಮನ್ನು । **ಅಯಂ**—ಈ ಯಾಗಶಾಲೆಯಲ್ಲಿ । **ಉಪ ಯಾಹಿ**—ಸಮೀಪಿಸು] । **ಸತ್ಪತಿಃ**—ಸರ್ವದಾ ಇರುವ ಋತ್ವಿಜರಿಗೆ ಪಾಲಕನಾದ ಯಜಮಾನನು ಅಥವಾ ವಿದ್ಯಮಾನ ಫಲಗಳಿಗೆ ಯಜಮಾನನಾದ ಅಗ್ನಿಯು । **ವಿದಥಾನಿ ಇವ**—ಅನುಷ್ಠೇಯ ಕರ್ಮಗಳ ಜ್ಞಾನವನ್ನು ಹೇಗೆ ಪಡೆಯುತ್ತಾನೋ ಹಾಗೆ ಅಥವಾ ಯಾಗಗೃಹಗಳಿಗೆ ಹೇಗೆ ಆಗಮಿಸುತ್ತಾನೋ ಹಾಗೆ । ಅಥವಾ । **ಸತ್ಪತಿಃ**—ನಕ್ಷತ್ರಗಳಿಗೆ ಯಜಮಾನನಾದ । **ರಾಜಾ**—ಚಂದ್ರನು । **ಅಸ್ತಂ ಇವ**—ಸ್ವಸ್ಥಾನಕ್ಕೆ ಹೇಗೆ ಆಗಮಿಸುವನೋ ಹಾಗೆ । (**ಅಯಂ**—ಈ ಯಾಗಪ್ರದೇಶವನ್ನು) । **ಅಚ್ಛ ಆ (ಯಾಹಿ)**—ಸೇರಲು ಅಭಿಮುಖನಾಗಿ (ಆಗಮಿಸು); (**ಕಿಂಚ**—ಮತ್ತೂ) । **ಪ್ರಯಸ್ವಂತಃ**—ಹವಿರ್ಲಕ್ಷಣ ಅನ್ನಯುಕ್ತರೂ । **ಸಚಾ**—ಋತ್ವಿಜರಿಂದ ಸಹಿತರೂ (ಆದ) । **ವಯಂ**—ನಾವು (ಯಜಮಾನರು), । **ಪುತ್ರಾಸಃ**—ಪುತ್ರರು । [**ವಾಜಸಾತಯೇ**—ಅನ್ನವನ್ನು ಹಂಚಲು । **ಪಿತರಂ ನ**—ತಂದೆಯನ್ನು ಕರೆಯುವಂತೆ, । **ಸುತೇ**—ಅಭಿಸುತವಾದ ಸೋಮನಿಮಿತ್ತವಾಗಿ । **ತ್ವಾ**—ನಿನ್ನನ್ನು **ಹವಾಮಹೇ**—ಆಹ್ವಾನಿಸುತ್ತೇವೆ । (**ಕಿಂಚ**—ಮತ್ತು) । **ಮಂಹಿಷ್ಠಂ**—ಮಹನೀಯನಾದ ನಿನ್ನನ್ನು । **ವಾಜಸಾತಯೇ**—ಸಂಗ್ರಾಮಪ್ರಾಪ್ತಿಗೋಸ್ಕರ (ಸಂಗ್ರಾಮದಲ್ಲಿ ಜಯಕ್ಕೋಸ್ಕರ) ಅಥವಾ ಹವಿಸ್ಸ್ವೀಕಾರಕ್ಕೋಸ್ಕರ । (**ಹವಾಮಹೇ**—ಆಹ್ವಾನಿಸುತ್ತೇವೆ).

॥ ಭಾವಾರ್ಥ ॥

ಎಲೈ ಇಂದ್ರನೇ, (ಸದಾ ಸನ್ನಿಹಿತನಾಗಿದ್ದರೂ) ಬಹಳ ದೂರದಿಂದಲೋ ಎಂಬಂತೆ ಅಥವಾ ಈ ಪುರೋವರ್ತಿಯಾದ ಅಗ್ನಿ (ದೂರದಿಂದ ಬಂದಿರುವಂತೆ) ಯಂತೆ, ನಮ್ಮನ್ನು ಸಮೀಪಿಸು; ಯಜಮಾನನು ಯಜ್ಞದಲ್ಲಿ

ಅನುಷ್ಠೇಯ ಕರ್ಮಗಳ ಜ್ಞಾನಕ್ಕೋಸ್ಕರ ಬರುವಂತೆ (ಅಥವಾ ವಿದ್ಯಮಾನ ಫಲಗಳಿಗೆ ಯಜಮಾನನಾದ ಅಗ್ನಿಯು ಯಾಗಶಾಲೆಗಳಿಗೆ ಹೋಗುವಂತೆ) ಅಥವಾ ನಕ್ಷತ್ರಾಧಿಪನಾದ ಚಂದ್ರನು ಸ್ವಸ್ಥಾನವನ್ನು ಸೇರುವಂತೆ, ನಮ್ಮ ಯಾಗ ಶಾಲೆಗೆ ಅಭಿಮುಖನಾಗಿ ಹೊರಡು; ಹೋಮದ್ರವ್ಯಗಳನ್ನು ಸಿದ್ಧಪಡಿಸಿಕೊಂಡು, ಋತ್ವಿಕ್ಸಹಿತರಾದ ನಾವು (ಯಜಮಾನರು), ತಂದೆಯನ್ನು ಮಕ್ಕಳು ಆಹಾರವನ್ನು ಹಂಚಲು (ಕರೆಯುವಂತೆ), ಅಭಿಷುತವಾದ ಸೋಮರಸ ಸ್ವೀಕಾರಕ್ಕೋಸ್ಕರ ನಿನ್ನನ್ನು ಕರೆಯುತ್ತೇವೆ; ಮಹನೀಯನಾದ ನಿನ್ನನ್ನು ಸಂಗ್ರಾಮ ಜಯಕ್ಕೋಸ್ಕರ ಅಥವಾ ಹವಿಸ್ಸ್ವೀಕಾರಕ್ಕೋಸ್ಕರ ಕರೆಯುತ್ತೇವೆ.

## English Translation.

Come to us, Indra, from afar ; not as this (fire) which is before us, (but) like the pious institutor of sacrifices, or like the royal lord of the constellations (when going) to his setting. Bearing oblations, we, along with (the priests), invoke you to accept the effused (juices), as sons (invite) a father to partake of food : (we invoke) you, who are most entitled to reverence, to (accept of) the sacrificial viands.

॥ ವಿಶೇಷವಿಷಯಗಳು ॥

**ಪರಾವತಃ ನಃ ಉಪ ಯಾಹಿ ಅಯಂ ನ। ಸ್ವರ್ಗಲಕ್ಷಣಾತ್ ದೂರದೇಶಾತ್ ಅಸ್ಮತ್ಸಮೀಪಂ ಪ್ರತ್ಯಾಗಚ್ಛ । ಪುರೋವರ್ತೀ ಅಗ್ನಿರಿವ**— ಪರಾವತ ಶಬ್ದವು ದೂರನಾಮಗಳಲ್ಲಿ (ನಿ. ೩-೨೦) ಪಠಿತವಾಗಿದೆ. ದೂರವಾಗಿರುವ ಸ್ವರ್ಗದಿಂದ ಇಂದ್ರನು ನಮ್ಮ ಹತ್ತಿರಕ್ಕೆ ಯಾಗಕ್ಕಾಗಿ ಬರಬೇಕೆಂದು ಪ್ರಾರ್ಥಿಸಿದೆ **ಅಯಂ ನ** ಎಂಬ ವಾಕ್ಯದಿಂದ ಋತ್ವಿಜರಿಗೂ ಯಜಮಾನರಿಗೂ ಪ್ರತ್ಯಕ್ಷವಾಗಿ ಎದುರಿಗೆ ಇರತಕ್ಕ ಅಗ್ನಿಯಾಗಲಿ, ಹಿಂಡಿರಸವನ್ನು ತೆಗದಿರುವ ಸೋಮನಾಗಲಿ ಹತ್ತಿರಕ್ಕೆ ಬಂದಿರುವಹಾಗೆ ಎಂದು ನಿರ್ದೇಶಮಾಡಿ ಹೋಲಿಸಿದೆ. ನ ಎಂಬ ನಿಪಾತವು ಯಾವಾಗಲೂ ನಿಷೇಧರೂಪವಾದ ಅರ್ಥವನ್ನು ಬೋಧಿಸುವುದು. ಆದರೆ ಇಲ್ಲಿ ಮಾತ್ರ ಉಪಮಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ.

ಎರಡನೆಯ ಅರ್ಥದಲ್ಲಿ **ಪರಾವತೋ ನ-ದೂರದೇಶಾದಿವ** ಎಂದು ಉಪಮಾವಾಚಕವಾದ ನ ಎಂಬುದನ್ನು ಪರಾವತಃ ಎಂಬ ಶಬ್ದದೊಡನೆ ಹೇಳಿದೆ. ಅಗ್ನಿಯೇ ಆಗಲಿ ಇಂದ್ರನೇ ಆಗಲಿ ಯಾವಾಗಲೂ ಯಜ್ಞವು ನಡೆಯುವ ಪ್ರದೇಶದಲ್ಲಿ ನಿಯತರಾಗಿರುವವರೇ ಆದಾಗ್ಯೂ ಅವರನ್ನು ದೂರವಾದ ಸ್ವರ್ಗದಲ್ಲಿರುವವರ ಹಾಗೆ ಭಾವಿಸಿ ಯಜ್ಞವು ನೆರವೇರುವ ಪ್ರದೇಶವನ್ನು ಕುರಿತು ಬರಬೇಕೆಂದು ಪ್ರಾರ್ಥಿಸುವುದು ರೂಢಿಯಾಗಿದೆ.

**ಸತ್ಪತಿಃ— ಸತಾಂ ಸರ್ವದಾ ವರ್ತಮಾನಾನಾಂ ಋತ್ವಿಜಾಂ ಪಾಲಕಃ ಯಜಮಾನ ಇವ ।** ಯಾಗವು ನಡೆಯುತ್ತಿರುವಾಗ ಯಾಗಶಾಲೆಯಲ್ಲಿ ಯಾವಾಗಲೂ ಇರುವ ಋತ್ವಿಜರನ್ನು ರಕ್ಷಿಸುವ ಯಜಮಾನನು ಅಲ್ಲಿಯೇ ಸಮೀಪದಲ್ಲಿ ಇರುವಹಾಗೆ ಇಂದ್ರನೂ ಇರಬೇಕೆಂದು ಯಜಮಾನನಿಗೆ ಹೋಲಿಸಿದೆ ಮತ್ತು ಯಜಮಾನನು ಋತ್ವಿಜರು ಯಜ್ಞದಲ್ಲಿ ಆಚರಿಸಬೇಕಾದ ಕರ್ತವ್ಯ ಕರ್ಮಗಳ ಜ್ಞಾನವನ್ನು ಹೊಂದಿ ಯಜ್ಞವನ್ನು ಪಾಲಿಸುವಂತೆ ಎಂಬ ಅರ್ಥವನ್ನು **ವಿದಥಾನೀವ ಸತ್ಪತಿಃ** ಎಂಬ ವಾಕ್ಯದಿಂದ ವಿವರಿಸಿ ಮೊದಲನೆಯ ಅರ್ಥವನ್ನು ವರ್ಣಿಸಿದೆ.

ಎರಡನೆಯ ಅರ್ಥದಲ್ಲಿ **ಸತಾಂ ವಿದ್ಯಮಾನಾನಾಂ ಫಲಾನಾಂ ಪಾಲಕೋ ಅಗ್ನಿಃ ವಿದಥಾನಿ ಯಜ್ಞ ಗೃಹಾಣಿ ಆಗಚ್ಛತಿ ತದ್ವತ್ ।** ಅನುಷ್ಠಿತವಾದ ಯಜ್ಞಕರ್ಮಗಳ ಫಲವು ನಿಯತವಾಗಿರುವಂತೆ ರಕ್ಷಿಸುವ ಅಗ್ನಿಯು ಯಾಗಶಾಲೆಗೆ ಬರುವಂತೆ ಇಂದ್ರನೂ ಯಜ್ಞರಕ್ಷಕನಾಗಿ ಬರಲಿ ಎಂದು ಹೋಲಿಸಿದೆ.

ಇಂದ್ರನು ಯಾಗಶಾಲೆಗೆ ಬರುವ ವಿಷಯದಲ್ಲಿ **ಅಸ್ತಂ ರಾಜೇವ ಸತ್ಪತಿಃ** ಎಂಬ ಈ ವಾಕ್ಯವು ಉಪಮಾನ ರೀತಿಯಿಂದ ಪ್ರಯುಕ್ತವಾಗಿದೆ. **ಗಯಃ ಕೃದರಃ** ಎಂಬ ಇಪ್ಪತ್ತೆರಡು ಗೃಹನಾಮಗಳಲ್ಲಿ (ನಿ. ೩-೧೩) **ಅಸ್ತ** ಶಬ್ದವು ಪಠಿತವಾಗಿದೆ. ಗೃಹವೆಂದು ಅರ್ಥ. ನಕ್ಷತ್ರಗಳಿಗೆ ರಾಜನಾಗಿರುವ ಚಂದ್ರನು ತನ್ನ ಸ್ವಸ್ಥಾನವನ್ನು ಕುರಿತು ಬರುವಂತೆ ಇಂದ್ರನೂ ಯಾಗಶಾಲೆಗೆ ಬರಲಿ ಎಂದು ಹೋಲಿಸಿದೆ.

**ಪ್ರಯಸ್ವಂತಃ— ಹವಿರ್ಲಕ್ಷಣಾನ್ನವಂತಃ. ಪ್ರಯಸ್** ಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಯಜ್ಞಮಾಡುವ ಯಜಮಾನರು ಹವಿಸ್ಸಿನರೂಪವಾದ ಅನ್ನವನ್ನು ಸಿದ್ಧಪಡಿಸಿಕೊಂಡಿರುವರೆಂದು ಅರ್ಥ.

**ಸಚಾ**—ಎಂಬ ಪದವು ಯಾಸ್ಕರಿಂದ ಸಹ ಎಂಬ ಅರ್ಥವುಳ್ಳದ್ದೆಂದು ವಿವೃತವಾಗಿದೆ. (ನಿ. ೫-೫) ಇಲ್ಲಿ ಋತ್ವಿಜರೊಡನೆ ಎಂದು ಅರ್ಥವನ್ನು ವಿವರಿಸಿದೆ.

**ಪುತ್ರಾಸಃ ಪಿತರಂ ನ ವಾಜಸಾತಯೇ—ಪುತ್ರಾಃ (ಪಿತರಂ) ಜನಕಂ ಪಾಲಕನಿವ ಅನ್ನಸ್ಯ ಸಂಭಜನಾಯ ಆಹ್ವಯಂತಿ ತದ್ವತ್ ।** ಮಕ್ಕಳು ತಂದೆಯನ್ನು (ರಕ್ಷಿಸುವವನನ್ನು) ಅನ್ನಕ್ಕಾಗಿ ಆಹ್ವಾನಮಾಡು ವಂತೆಯಜ್ಞಮಾಡುವ ಯಜಮಾನರು ಋತ್ವಿಜರೊಡನೆ ಸೋಮರಸವನ್ನು (ಹಿಂಡಿ) ಸಿದ್ಧಮಾಡಿ ಇಂದ್ರನನ್ನು ಅದರ ಸ್ವೀಕಾರಕ್ಕಾಗಿ ಆಹ್ವಾನ ಮಾಡುವರೆಂದು ಅರ್ಥ.

**ಮಂಹಿಷ್ಠಂ ವಾಜಸಾತಯೇ—ಮಂಹನೀಯಂ ತಜ್ಞ ಯಾಯ ಸಂಗ್ರಾಮಪ್ರಾಪ್ತಯೇ ಹವಿಸ್ಸ್ವೀಕಾರಾಯ ವಾ ಆಹ್ವಯಾಮಃ ।** ಮರ್ಯಾದೆಗೆ ಅಥವಾ ಪೂಜೆಗೆ ಅರ್ಹನಾದ ಇಂದ್ರನನ್ನು ಯುದ್ಧವು ಪ್ರಾಪ್ತ ವಾದಾಗ ಯುದ್ಧದಲ್ಲಿ ಜಯವು ಉಂಟಾಗುವುದಕ್ಕೂ, ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿಯೂ ಕರೆಯುತ್ತೇವೆ ಎಂದು ಅರ್ಥಮಾಡಿದೆ.

**ವಾಜಸಾತೌ**—ಈ ಶಬ್ದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಯಾಹಿ**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅಯಂ—ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ದ್ವಿತೀಯಾಕ್ಕೆ ಪ್ರಥಮಾ ಬಂದಿದೆ.

**ಅಚ್ಛ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸತ್ಪತಿಃ**—ಸತಾಂ ಪತಿಃ ಸತ್ಪತಿಃ. **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವಿದಥಾನಿ**—ವಿದ ಜ್ಞಾನೇ. ಧಾತು. **ರುದಿವಿದಿಭ್ಯಾಂ ಙಿತ್** (ಉ. ಸೂ. ೩-೩೯೫) ಎಂಬುದರಿಂದ ಅಥ ಪ್ರತ್ಯಯ. ಙಿತ್ವ ವಿಧಾನಮಾಡಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಟ್ ಉತ್ತಮಪುರುಷ ಬಹುವಚನಾಂತ ರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪ್ರಯಸ್ವಂತಃ**—ಪ್ರಯಃ ಯೇಷಾಮಸ್ತಿ ಇತಿ ಪ್ರಯಸ್ವಂತಃ. ಮತುಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಸುತೇ**—ಷುಞ್ ಅಭಿಷವೇ ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ ಸಪ್ತಮ್ಯಂತರೂಪ.

**ಪುತ್ರಾಸಃ**—ಪೂಞ್ ಪವನೇ. ಧಾತು **ಪುವೋ ಹ್ರಸ್ವಶ್ಚ** (ಉ. ಸೂ. ೪-೬೦೪) ಎಂಬುದರಿಂದ ಕ್ತ್ರ ಪ್ರತ್ಯಯ. ಧಾತುವಿಗೆ ಹ್ರಸ್ವ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ.

**ವಾಜಸಾತಯೇ**—ಷಣ ಸಂಭಕ್ತೌ. ಧಾತು. **ಊತಿಯೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ನಂತವಾಗಿ ನಿಪಾತಿತವಾಗಿದೆ. ಬಹುವ್ರೀಹಿ ಸಮಾಸ. ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥ್ಯಂತರೂಪ.

**ಮಂಹಿಷ್ಠಂ**- ಅತಿಶಯೇನ ಮಂಹಿತಾ ಮಂಹಿಷ್ಠಃ. **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ತೃಜಂತದ ಮೇಲೆ ಅತಿಶಯಾರ್ಥ ತೋರುವಾಗ ಇಷ್ಠನ್ ಪ್ರತ್ಯಯ. **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ಇಷ್ಠನ್ ಪರವಾದಾಗ ತೃಚಿಗೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ಪಿಬಾ ಸೋಮಮಿಂದ್ರ ಸುವಾನಮದ್ರಿಭಿಃ ಕೋಶೇನ ಸಿಕ್ತಮವತಂ ನ
ವಂಸಗಸ್ತಾತೃಷಾಣೋ ನ ವಂಸಗಃ ।
ಮದಾಯ ಹರ್ಯತಾಯ ತೇ ತುವಿಷ್ಟಮಾಯ ಧಾಯಸೇ ।
ಆ ತ್ವಾ ಯಚ್ಛಂತು ಹರಿತೋ ನ ಸೂರ್ಯಮಹಾ ವಿಶ್ವೇವ ಸೂರ್ಯಂ ॥ ೨ ॥

॥ ಪದಪಾಠಃ ॥

ಪಿಬ । ಸೋಮಂ । ಇಂದ್ರ । ಸುವಾನಂ । ಅದ್ರಿಽಭಿಃ । ಕೋಶೇನ । ಸಿಕ್ತಂ । ಅವತಂ । ನ । ವಂಸಗಃ ।

ತತೃಷಾಣಃ । ನ । ವಂಸಗಃ ।

ಮದಾಯ । ಹರ್ಯತಾಯ । ತೇ । ತುವಿಃಽತಮಾಯ । ಧಾಯಸೇ ।

ಆ । ತ್ವಾ । ಯಚ್ಛಂತು । ಹರಿತಃ । ನ । ಸೂರ್ಯಂ । ಅಹಾ । ವಿಶ್ವಾಽಇವ । ಸೂರ್ಯಂ ॥ ೨ ॥

॥ ಸಾಯಣಭಾಷ್ಯಂ॥

ಷಷ್ಠೇಽಹನಿ ಮಾಧ್ಯಂದಿನೇ ಸವನೇ ಪ್ರಸ್ಥಿತಯಾಜ್ಯಾನಾಂ ಪುರಸ್ತಾದನ್ಯಾ ಋಚಃ ಪ್ರಕ್ಷೇಪಣೀಯಾಃ । ತತ್ರ ಹೋತುಃ ಪುರಸ್ತಾತ್ ಪಿಬಾ ಸೋಮಮಿಂದ್ರೇತ್ಯೇಷಾ । ಷಷ್ಠಸ್ಯ ಪ್ರಾತಃಸವನ ಇತಿ ಖಂಡೇ ಸೂತ್ರಿತಂ । ಪಿಬಾ ಸೋಮಮಿಂದ್ರ ಸುವಾನಮದ್ರಿಭಿರಿಂದ್ರಾಯ ಹಿ ದ್ಯೌರಸುರೋ ಅನಮ್ನತ । ಆ ೮. ೧. । ಇತಿ ॥

ಹೇ ಇಂದ್ರ ವಂಸಗೋ ವನನೀಯಗಮನಸ್ತ್ವಂ ಸೋಮಂ ಪಿಬ ॥ ದ್ವ್ಯಚೋಽತಸ್ತಿಙ ಇತಿ ದೀರ್ಘಃ ॥ ಕೀದೃಶಂ ತಂ । ಅದ್ರಿಭಿರಭಿಷವಸಾಧನೈರ್ಗ್ರಾವಭಿಃ ಸುವಾನಂ ಸೂಯಮಾನಂ ॥ ಕರ್ಮಣಿ ಕರ್ತೃಪ್ರತ್ಯಯಃ ॥ ಕೋಶೇನ ಸಿಕ್ತಂ ಕೋಶಸ್ಥಾನೀಯೇನ ದಶಾಪವಿತ್ರೇಣ ಶೋಧಿತಂ । ಯದ್ವಾ । ಅವತಮಿತ್ಯನೇನ ಸಹ ಸಂಬಂಧಃ । ಕೋಶೇನೇತಿ ಲಕ್ಷಣೇನ ಸಿಕ್ತಂ ಸ್ವೋಚಿತಜಲೇನ ಪೂರಿತಮವತಂ ನಾಹಾವಲಕ್ಷಣಮವಟಮಿವ । ತಂ ಯಥಾ ವಂಸಗೋ ವನನೀಯಗಮನಸ್ತೃಷಾ ಶೀಘ್ರಗಾಮೀ ವೃಷಭಃ ಪಿಬತಿ ತದ್ವತ್ । ತತೃಷಾಣೋ ನ ವಂಸಗಃ । ಯಥಾತ್ಯಂತಂ ತೃಷಿತೋ ವಂಸಗೋ ವನನೀಯಗಮನಃ ಶೀಘ್ರಗಾಮೀ ಪುರುಷ ಆಹಾವಾದಿಕಮಾಗತ್ಯ ಪಿ . ತಿ ತದ್ವತ್ । ಕಿಮರ್ಥಂ ಪಾನಮಿತಿ ತತ್ರಾಹ । ತೇ ತವ ಮದಾಯ ತೃಪ್ತಯೇ ಹರ್ಯತಾಯ ವಿಕ್ರಾಂತಿಹೇತವೇ ಕಾಂತ್ಯರ್ಥಂ ವಾ ॥ ಹರ್ಯ ಗತಿಕಾಂತ್ಯೋಃ । ಭೃಮೃದೃಶೀತ್ಯಾದಿನಾತಚ್ ॥ ತುವಿಷ್ಟಮಾಯ ಮಹತ್ತಮಾಯ ಪ್ರವೃದ್ಧತಮಾಯ ಧಾಯಸೇ ಯದರ್ಥಂ ಮದ ಉಪಜಾಯತೇ ತದರ್ಥಾಯ ॥ ಧಾಞೋ ವಹಿಹಾಧಾಞ್ಭ್ಯ ಇತ್ಯಸುನಿ ಣಿದಿತ್ಯನುವೃತ್ತೇರಾತೋ ಯುಗಿತಿ ಯುಕ್ ॥ ೦ದ್ವಾ । ತೇ ತವ ತುವಿಷ್ಟಮಾಯ ಧಾಯಸೇಽತಿಪ್ರಭೂತಾಯ ಪಾನಾಯ । ತ್ವಾ ತ್ವಾಮಾ ಯಚ್ಛಂತು । ಆಭಿಮುಖ್ಯೇನ ಗಮಯಂತು । ಅಶ್ವಾ ಇತಿ ಶೇಷಃ । ತತ್ರ ದೃಷ್ಟಾಂತಃ । ಹರಿತೋ ನ ಸೂರ್ಯಂ ಹರಿದ್ವರ್ಣವಿಶಿಷ್ಟಾ ಏತನ್ನಾಮಕಾ ಅಶ್ವಾಃ ಸೂರ್ಯಮಿವ । ತಂ ಯಥಾತಿತ್ವರಯಾಭಿಮತದೇಶಮಭಿಪ್ರೇರಿತಾ ವಹಂತಿ ತದ್ವತ್ । ಕಿಂಚಾಹಾ ವಿಶ್ವಾ ಸರ್ವಾಣ್ಯಹಾನಿ ಸೂರ್ಯಮಿವ । ತಂ ಯಥಾ ತ ಏವ ಪ್ರತಿದಿನಂ ವಹಂತಿ ತಥಾಸ್ಮದ್ಯಾಗದಿವಸೇಷು ಪ್ರತಿದಿನಮಾವಹಂತು ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—(ಎಲೈ) ಇಂದ್ರನೇ, । **ವಂಸಗಃ**—ಶೀಘ್ರಗಾಮಿಯಾದ (ನೀನು) । **ಅದ್ರಿಭಿಃ**—(ಅಭಿಷವಸಾಧನವಾದ) ಶಿಲೆಗಳಿಂದ । **ಸುವಾನಂ**—ಸುರಿಯುತ್ತಿರುವುದೂ । **ಕೋಶೇನ**—ದಶಾಪವಿತ್ರದಿಂದ । **ಸಿಕ್ತಂ**—ಪವಿತ್ರಿತವಾದುದೂ (ಆದ) । **ಸೋಮಂ**—ಸೋಮರಸವನ್ನು । **(ಕೋಶೇನ ಸಿಕ್ತಂ**—ಜಲದಿಂದ ಪೂರಿತವಾದ) । **ಅವತಂ**—ಬಾನೆಯನ್ನು (ಸಮೀಪಿಸಿ) । **ವಂಸಗಃ ನ**—(ತೃಷೆಯಿಂದ) ಶೀಘ್ರಗತಿಯಾದ ವೃಷಭವು ಜಲಪಾನ ಮಾಡುವಂತೆ (ಅಥವಾ) । **ತತೃಷಾಣಃ** - ಅತ್ಯಂತ ಬಾಯಾರಿದ । **ವಂಸಗಃ ನ**—ಶೀಘ್ರಗಾಮಿಯಾದ ಪುರುಷನು (ಬಾವಿಯನ್ನು ಸಮೀಪಿಸಿ ಜಲಪಾನ ಮಾಡುವಂತೆ) । **ಪಿಬ**—ಪಾನಮಾಡು । **ತೇ**—ನಿನ್ನ । **ಮದಾಯ**—ತೃಪ್ತಿಗೋಸ್ಕರ । **ಹರ್ಯತಾಯ**—ಪರಾಕ್ರಮಕ್ಕೋಸ್ಕರ (ಕಾಂತಿಗೋಸ್ಕರ) (ಮತ್ತು) **ತುವಿಷ್ಟಮಾಯ**-ವೃದ್ಧಿ (ಮಹತ್ತ್ವ) **ಕಾರಕವಾದ** । **ಧಾಯಸೇ**—ಮದಕ್ಕೋಸ್ಕರ (ಪಾನಮಾಡು) । **(ಅಥವಾ) ತುವಿಷ್ಟಮಾಯ**—ಅತಿ ಹೆಚ್ಚಾದ । **ಧಾಯಸೇ**—ಪಾನಕ್ಕೋಸ್ಕರ । **ತ್ವಾ**—ನಿನ್ನನ್ನು । **ಹರಿತಃ**—ಸೂರ್ಯಾಶ್ವಗಳು । **ಸೂರ್ಯಂ ನ**—ಸೂರ್ಯನನ್ನು (ಉದ್ದಿಷ್ಟಸ್ಥಳಕ್ಕೆ) ಒಯ್ಯುವಂತೆ । **ಆ ಯಚ್ಛಂತು**—(ನಿನ್ನ ಅಶ್ವಗಳು ಯಜ್ಞಾಭಿಮುಖವಾಗಿ) ಹೊರಡಿಸಲಿ । **(ಕಿಂಚ**—ಮತ್ತೂ) । **ವಿಶ್ವಾ ಅಹಾ**—ಸಮಸ್ತ ದಿನಗಳಲ್ಲಿ (ಪ್ರತಿದಿನವೂ) । **ಸೂರ್ಯಂ ಇವ**—ಸೂರ್ಯನನ್ನು (ವಹಿಸು) ವಂತೆ (ನಿನ್ನನ್ನೂ ಪ್ರತಿದಿನವೂ ಯಾಗಶಾಲೆಗೆ **ಕ**ರತರಲಿ).

॥ ಭಾವಾರ್ಥ ॥

ಎಲೈ ಇಂದ್ರನೇ, ಶಿಲೆಗಳಿಂದ ಅಭಿಷುತವಾಗಿ, ದಶಾಪವಿತ್ರದಿಂದ ಪವಿತ್ರಿತವಾದ ಸೋಮರಸವನ್ನು, ಬಾಯಾರಿದ ವೃಷಭವು ಅಥವಾ ಬಾಯಾರಿದ ಮನುಷ್ಯನು ಶೀಘ್ರವಾಗಿ ಹೋಗಿ ಬಾವಿಯಲ್ಲಿ (ನೀರು ಕುಡಿಯುವಂತೆ), ಪಾನಮಾಡು; ನಿನ್ನ ತೃಪ್ತ್ಯರ್ಥವಾಗಿಯೂ, ವಿಕ್ರಾಂತಿ (ಕಾಂತಿ) ಗಾಗಿಯೂ ಮತ್ತು ವೃದ್ಧಿ (ಮಹತ್ತ್ವ) ಕಾರಕವಾದ ಮದಕ್ಕಾಗಿಯೂ (ಪಾನಮಾಡು); ಸೂರ್ಯಾಶ್ವಗಳು ಸೂರ್ಯನನ್ನು (ಅಭಿಮತ ಪ್ರದೇಶಕ್ಕೆ ಒಯ್ಯುವಂತೆ), ನಿನ್ನನ್ನೂ (ಅಶ್ವಗಳು) (ಯಾಗಾಭಿಮುಖವಾಗಿ) ಹೊರಡಿಸಲಿ; ಪ್ರತಿದಿನವೂ ಸೂರ್ಯನನ್ನು (ಅವನ ಅಶ್ವಗಳು ವಹಿಸುವಂತೆ, ನಿನ್ನ ಅಶ್ವಗಳು) ಪ್ರತಿದಿನವೂ (ನಮ್ಮ ಯಾಗಶಾಲೆಗೆ ನಿನ್ನನ್ನು ಕರತರಲಿ).

## English Translation.

Drink, Indra, the Soma juice, that has been expressed by the stones, and sprinkled with the sacred grass, as a thirsty ox or a thirsty man hastens to a well. (Drink) for your exhilaration, for your invigoration, for your exceedingly great augmentation : let your horses bring you hither, as his steeds convey the sun ; as they carry him (through heaven) day by day.

॥ ವಿಶೇಷವಿಷಯಗಳು ॥

(ಪೃಷ್ಠ್ಯವೆಂಬ) ಯಾಗದ ಆರನೆಯ ದಿವಸ ಮಾಧ್ಯಂದಿನಸವನಕಾಲದಲ್ಲಿ ಪ್ರಸ್ಥಿತಯಾಜ್ಯಾಮಂತ್ರಗಳನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ ಕೆಲವು ಋಕ್ಕುಗಳನ್ನು ಪಠಿಸುವರು. ಆಗ ಹೋತೃವು **ಪಿಬಾ ಸೋಮಂ** ಎಂಬ

ಈ ಋಕ್ಕನ್ನು ಯಾಜ್ಯಾನುಮಂತ್ರಕ್ಕೆ ಪೂರ್ವಭಾವಿಯಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಷಷ್ಠಸ್ಯ ಪ್ರಾತಸ್ಸವನ** ಎಂಬ ಖಂಡದ **ಪಿಬಾ ಸೋಮಮಿಂದ್ರ ಸುವಾನಮದ್ರಿಭಿರಿಂದ್ರಾಯ ಹಿ ದ್ಯೌಃಸುರೋ ಅನನ್ನುತ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧)

**ವಂಸಗಃ—ವನನೀಯಗಮನಃ** । ಅಭಿಲಷಣೀಯವಾದ ಗಮನವುಳ್ಳವನು. ಇಂದ್ರನ ಗಮನವು ಅಪೇಕ್ಷಣೀಯವಾದುದೆಂದು ವರ್ಣಿಸಿದೆ.

**ಅದ್ರಿಭಿಃ—ಅಭಿಷವಸಾಧನೈಃ ಗ್ರಾವಭಿಃ**। ಸೋಮಲತೆಯನ್ನು ಜಜ್ಜಿ ಹಿಂಡುವುದಕ್ಕಾಗಿ ಉಪಯೋಗಿಸುವ ಕಲ್ಲುಗಳೆಂದು ಅರ್ಥ. **ಅದ್ರಿ** ಶಬ್ದವು ಮೇಘನಾಮಗಳಲ್ಲಿಯೂ (ನಿ. ೨-೨೧) ಉಕ್ತವಾಗಿದೆ. **ಅದ್ರಿರಾದೃಣಾತ್ಯನೇನ ಅಪಿವಾತ್ತೇಃ ಸ್ಯಾತ್** (ನಿ. ೪-೪) ಎಂದು ವ್ಯಾಖ್ಯಾತವಾಗಿದೆ.

**ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯೋ ವಾಚಂ ವದತಾ ವದದ್ಭ್ಯಃ ।**
**ಯದದ್ರಯಃ ಪರ್ವತಾಃ ಸಾಕಮಾಶವಃ ಶ್ಲೋಕಂ ಘೋಷಂ ಭರಥೇಂದ್ರಾಯ ಸೋಮಿನಃ ॥**
(ಋ. ಸಂ. ೧೦-೯೪-೧)

ಈ ಋಕ್ಕಿನಲ್ಲಿ **ಆದರಣೀಯಾಃ ಅದ್ರಯಃ** ಎಂದು ವಿವರಿಸಿದೆ.

**ಕೋಶೇನ ಸಿಕ್ತಂ—ಕೋಶಸ್ಥಾನೀಯೇನ ದಶಾಪವಿತ್ರೇಣ ಶೋಧಿತಂ । ಯದ್ವಾ ಸ್ವೋಚಿತ-ಜಲೇನ ಪೂರಿತಂ** । ಸೋಮರಸವು ಕೋಶಸ್ಥಾನವನ್ನು ಹೊಂದಿರುವ ಪವಿತ್ರದಿಂದ ಶೋಧಿಸಲ್ಪಟ್ಟದ್ದಾಗಿ ಇರುವುದು. ಕೋಶವೆಂದರೆ ಹಿಂಡಿದ ಸೋಮರಸವನ್ನು ತುಂಬಿಡುವ ದೊಡ್ಡ (ಮರದ) ಪಾತ್ರೆಯು. ಅಥವಾ ಈ ಪದಕ್ಕೆ **ಅವಟ** ಎಂಬ ಪದದೊಡನೆ ಅನ್ವಯವನ್ನು ಹೇಳಿರುವುದರಿಂದ ತನ್ನ ಪ್ರಮಾಣಕ್ಕನುಸಾರವಾದ ಜಲದಿಂದ ಸೋಮರಸವೂ ಕೂಡಿರುವುದು ಎಂದು ಅರ್ಥ.

**ಅವತಂ ನ—ಆಹಾವಲಕ್ಷಣಂ ಅವಟಮಿವ** । ಕುಡಿಯುವ ನೀರಿನಿಂದ ಪೂರಿತವಾದ (ಗರ್ತ) ಹಳ್ಳದಲ್ಲಿರುವ ನೀರನ್ನು ವೇಗವಾಗಿ ಸಂಚರಿಸುವ ಗೂಳಿಯು ಕುಡಿಯುವ ಹಾಗೆ ಇಂದ್ರನು ಕಲ್ಲುಗಳಿಂದ ಹಿಂಡಿ ತೆಗೆದಿರುವ ಪವಿತ್ರದಿಂದ ಸಂಸ್ಕೃತವಾದ ಸೋಮರಸವನ್ನು ಪಾನಮಾಡಲಿ ಎಂದು ವಿವರಿಸಿದೆ.

**ತತೃಷಾಣಃ ನ ವಂಸಗಃ—ಅತ್ಯಂತಂ ತೃಷಿತಃ** । ಬಹಳ ಬಾಯಾರಿಕೆಯುಳ್ಳವನೆಂದು ಅರ್ಥ. ಬಹಳ ಬಾಯಾರಿದವನು ಬೇಗನೆ ಹೋಗಿ (ಆಹಾವಾದಿಗಳಲ್ಲಿ) ಬಾವಿಯೇ ಮೊದಲಾದವುಗಳಲ್ಲಿ ನೀರನ್ನು ಕುಡಿಯುವ ಹಾಗೆ ಎಂದು ಹೋಲಿಸಿ ಇಂದ್ರನು ಸೋಮಪಾನಮಾಡಲಿ ಎಂದು ಹೇಳಿದೆ.

**ಹರ್ಯತಾಯ—ವಿಕ್ರಾಂತಿಹೇತವೇ ಕಾಂತ್ಯರ್ಥಾಯ ವಾ** । ಹರ್ಯಧಾತುವು ಗಮನ ಅಥವಾ ಕಾಂತಿ ಎಂಬ ಎರಡು ಅರ್ಥಗಳನ್ನು ಬೋಧಿಸುವುದರಿಂದ ಸೋಮಪಾನದಿಂದ ಪರಾಕ್ರಮವೂ ಕಾಂತಿಯೂ ಅಭಿವೃದ್ಧಿಯಾಗುವುದೆಂದೂ, ಇದಕ್ಕಾಗಿಯೇ ಇಂದ್ರನು ಸೋಮರಸವನ್ನು ಪಾನಮಾಡುವನೆಂದೂ ವರ್ಣಿಸಿದೆ.

**ತುವಿಷ್ಟಮಾಯ ಧಾಯಸೇ**—ತುವಿಷ್ಟಮಾಯ ಎಂಬಪದಕ್ಕೆ ಎರಡು ವಿಧವಾಗಿ ಅನ್ವಯವನ್ನು ಹೇಳಿದೆ. **ತುವಿ** ಎಂಬ ಶಬ್ದವು ಬಹುನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಅತಿಶಯವಾದ ಮದವು ಉಂಟಾಗುವುದಕ್ಕಾಗಿ ಸೋಮಪಾನವು ಇಂದ್ರನಿಗೆ ಉಂಟಾಗಿದೆ ಎಂದು ಮೊದಲನೆಯ ಅರ್ಥ ಮಾಡಿದೆ. ಎರಡನೆಯ ಅರ್ಥದಲ್ಲಿ **ತ್ವಾ**

**ಆಯುಚ್ಛಂತು** ಎಂದು ಕ್ರಿಯಾಪದದೊಡನೆ ಅನ್ವಯವನ್ನು ಹೇಳಿರುವುದರಿಂದ ಇಂದ್ರನ ಕುದುರೆಗಳು ಇಂದ್ರನನ್ನು ಬಹಳವಾದ ಸೋಮಪಾನಕ್ಕಾಗಿ (ಕರೆದು ತರಲಿ) ಕರೆದುಕೊಂಡು ಬರಲಿ ಎಂದು ಅರ್ಥವನ್ನು ವಿವರಿಸಿದೆ.

**ಹರಿತೋ ನ ಸೂರ್ಯಂ**— ಈ ವಾಕ್ಯವು ಈ ವಿಷಯದಲ್ಲಿ ಉಪಮಾನ ವಿಧದಿಂದ ಉಕ್ತವಾಗಿದೆ. **ಹರಿತ್** ಶಬ್ದವು **ದಿಙ್ನಾ**ಮಗಳಲ್ಲಿಯೂ (ನಿ. ೨-೧೬) **ನದೀ** ನಾಮಗಳಲ್ಲಿಯೂ (ನಿ. ೨-೨೪) ಉಕ್ತವಾಗಿದೆ. ಮತ್ತು,

**ಹರೀ ಇಂದ್ರಸ್ಯ, ರೋಹಿತೋಽಗ್ನೇಃ, ಹರಿತ ಆದಿತ್ಯಸ್ಯ, ರಾಸಭಾವಶ್ವಿನೋಃ, ಅಜಾಃ ಪೂಷ್ಣಃ, ಪೃಷತ್ಯೋ ಮರುತಾಂ, ಅರುಣ್ಯೋ ಗಾವ ಉಷಸಃ, ಶ್ಯಾವಾಃ ಸವಿತುಃ, ವಿಶ್ವರೂಪಾ ಬೃಹಸ್ಪತೇಃ, ನಿಯುತೋ ವಾಯೋಃ,** (ನಿ. ೨-೪೮)

ಎಂದು ಆದಿಷ್ಟೋಪಯೋಜನಗಳಲ್ಲಿ **ಹರಿತ್** ಶಬ್ದವು ಸೂರ್ಯನಿಗೆ ವಾಹನವೆಂದು ಉಕ್ತವಾಗಿರುತ್ತದೆ. ಇದರಿಂದ ಹರಿತಶಬ್ದಕ್ಕೆ ಸಾಯಣರು **ಹರಿದ್ವರ್ಣವಿಶಿಷ್ಟಾಃ** ಹಸರು ಬಣ್ಣವುಳ್ಳ ಹರಿತ್ ಎಂಬ ಹೆಸರುಳ್ಳ ಅಶ್ವಗಳು ಎಂದು ಅರ್ಥವನ್ನು ವಿವರಿಸಿದ್ದಾರೆ. ಈ ಕುದುರೆಗಳು ಸೂರ್ಯನನ್ನು ಬಹಳತ್ವರೆಯಿಂದ ಕೂಡಿದವುಗಳಾಗಿ ಸಾರಥಿಯಿಂದ ಪ್ರೇರಿತಗಳಾಗಿ (ವಹಿಸುವಂತೆ) ಗಂತವ್ಯಪ್ರದೇಶವನ್ನು ತಲಪಿಸುವಂತೆ ಇಂದ್ರನನ್ನು ಅವನ ಕುದುರೆಗಳು ಯಾಗಕ್ಕಾಗಿ ಕರೆದುತರಲಿ ಎಂದು ವರ್ಣಿಸಿದೆ.

**ಅಹಾ ವಿಶ್ವಾ ಸೂರ್ಯಮಿವ—ಸರ್ವಾಣ್ಯಹಾನೀವ । ಯಥಾ ತ ಏವ ಪ್ರತಿದಿನಂ ವಹಂತಿ ತಥಾ ಅಸ್ಮದ್ಯಾಗದಿವಸೇಷು ಪ್ರತಿದಿನಮಾವಹಂತು**—ಈ ವಾಕ್ಯವು ಇಂದ್ರನ ಆಗಮನ ವಿಷಯದಲ್ಲಿ ಉಪಮಾನ ವಾಕ್ಯವಾಗಿ ಉಕ್ತವಾಗಿದೆ. ದಿವಸಗಳೆಲ್ಲವೂ (ಪ್ರತಿದಿವಸವೂ) ಸೂರ್ಯನನ್ನು ಅವನ ಗಮ್ಯವಾದ ಪ್ರದೇಶಕ್ಕೆ ತಲಪಿಸುವಂತೆ ಇಂದ್ರನನ್ನು ಅವನ ಕುದುರೆಗಳು ಯಾಗಶಾಲೆಯನ್ನು ಪ್ರತಿದಿನವೂ ತಲಪಿಸಲಿ ಎಂದು ಹೋಲಿಸಿ ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪಿಬ**— ಪಾ ಪಾನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್ ವಿಕರಣ. **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಪಿಬಾದೇಶ. **ಅತೋ ಹೇಃ** ಎಂಬುದರಿಂದ ಹಿಗೆ ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸುವಾನಂ**— ಷುಞ್ ಅಭಿಷವೇ. ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಕರ್ಮಣಿಯಲ್ಲಿ ಕರ್ತೃ ಪ್ರತ್ಯಯ ಬರುತ್ತದೆ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಛಾಂದಸವಾಗಿ ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಗುಣ ಬರುವುದಿಲ್ಲ. ಉವಙಾದೇಶ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸಿಕ್ತಂ**— ಷಿಚಿರ್ ಕ್ಷರಣೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಚೋಃ ಕುಃ** ಎಂಬುದರಿಂದ ಧಾತು ಚಕಾರಕ್ಕೆ ಕುತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅವತಂ**— ಅವಟಂ ಎಂಬಲ್ಲಿ ವರ್ಣವ್ಯತ್ಯಯದಿಂದ ಟಕಾರಕ್ಕೆ ತಕಾರ ಬಂದಿದೆ. ಪ್ರಾತಿಪದಿಕಸ್ವರದಿಂದ ಅಂತೋದಾತ್ತವಾಗುತ್ತದೆ.

**ವಂಸಗಃ**—**ಪೃಷೋದರಾದೀನಿ ಯಥೋಪದಿಷ್ಟಂ** (ಪಾ. ಸೂ. ೬-೩-೧೦೯) ಎಂಬುದರಿಂದ ಅಭಿಮತ ರೂಪವೂ ಸ್ವರವೂ ಸಿದ್ಧವಾಗುತ್ತದೆ.

**ತತೃಷಾಣಃ**—ಞಿತೃಷಾ ಪಿಪಾಸಾಯಾಂ ಧಾತು. ಇದಕ್ಕೆ ಲಿಟ್ ಬಂದಾಗ **ಲಿಟಃ ಕಾನಜ್ವಾ** (ಪಾ. ಸೂ ೩-೨-೧೦೬) ಎಂಬುದರಿಂದ ಅದಕ್ಕೆ ಕಾನಚಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಉರತ್** ಎಂಬುದರಿಂದ ಅಭ್ಯಾಸಕ್ಕೆ ಅತ್ವ ರಪರವಾಗಿ ಬಂದಾಗ ಆದಿಹಲ್‌ಶೇಷ. **ಅಟ್ ಕುಪ್ವಾಙ್**—ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಸಂಹಿತಾದಲ್ಲಿ ಛಾಂದಸವಾಗಿ ದೀರ್ಘ ಬರುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಮುದಾಯ**—ಮುದ ತೃಪ್ತಿಯೋಗೇ. ಧಾತು. **ಮುದೋನುಪಸರ್ಗೇ** (ಪಾ. ಸೂ. ೩-೩-೬೭) ಎಂಬುದರಿಂದ ಅಪ್ ಪ್ರತ್ಯಯ. ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಚತುರ್ಥ್ಯಂತರೂಪ.

**ಹರ್ಯತಾಯ**—ಹರ್ಯ ಗತಿಕಾಂತ್ಯೋಃ ಧಾತು. **ಭೃಮೃದೃಶಿ**—(ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಧಾಯಸೇ**—ಡುಧಾಞ್ ಧಾರಣಪೋಷಣಯೋಃ ಧಾತು. **ವಹಿಹಾಧಾಞ್‌ಭ್ಯಶ್ಛಂದಸಿ** (ಉ. ಸೂ. ೪-೬೬೦) ಎಂಬುದರಿಂದ ಅಸುನ್ ಪ್ರತ್ಯಯ. ಣಿತ್ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವುದರಿಂದ **ಆತೋ ಯುಕ್ ಚಿಣ್ ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಚ್ಛಂತು**—ದಾಣ್ ದಾನೇ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ **ಪಾಘ್ರಾಧ್ಮಾಸ್ಥಾ**—(ಪಾ. ಸೂ. ೭-೩-೭೮) ಎಂಬುದರಿಂದ ಯಚ್ಛಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಅಹಾ ವಿಶ್ವಾ**—ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ॥ ೨ ॥

॥ ಸಂಹಿತಾಪಾಠಃ ॥

ಅವಿಂದದ್ದಿವೋ ನಿಹಿತಂ ಗುಹಾ ನಿಧಿಂ ವೇರ್ನ ಗರ್ಭಂ ಪರಿವೀತಮ-
ಶ್ಮನ್ಯನಂತೇ ಅಂತರಶ್ಮನಿ ।
ವ್ರಜಂ ವಜ್ರೀ ಗವಾಮಿವ ಸಿಷಾಸನ್ನಂಗಿರಸ್ತಮಃ ।
ಅಪಾವೃಣೋದಿಷ ಇಂದ್ರಃ ಪರೀವೃತಾ ದ್ವಾರ ಇಷಃ ಪರೀವೃತಾಃ ॥ ೩ ॥

॥ ಪದಪಾಠಃ ॥

ಅವಿಂದತ್ । ದಿವಃ । ನಿऽಹಿತಂ । ಗುಹಾ । ನಿऽಧಿಂ । ವೇಃ । ನ । ಗರ್ಭಂ । ಪರಿऽವೀತಂ । ಅಶ್ಮನಿ । ಅನಂತೇ । ಅಂತಃ । ಅಶ್ಮನಿ ।

ವ್ರಜಂ । ವಜ್ರೀ । ಗವಾಂऽಇವ । ಸಿಸಾಸನ್ । ಅಂಗಿರಃऽತಮಃ ।

ಅಪ । ಅವೃಣೋತ್ । ಇಷಃ । ಇಂದ್ರಃ । ಪರಿऽವೃತಾಃ । ದ್ವಾರಃ । ಇಷಃ । ಪರಿऽವೃತಾಃ ॥ ೩ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ದಿವೋ ದ್ಯುಲೋಕಾದಾನೀತಂ ಸೋಮಮವಿಂದತ್ । ಅಲಭತ । ಲಬ್ಧವಾನ್ । ದ್ಯುಲೋಕಾದ್ಗಾಯತ್ರ್ಯಾ ಪಕ್ಷಿರೂಪಯಾಪಹೃತಂ ಭೂಮಾವಾನೀತಂ ಸ್ವೀಕೃತವಾನಿತ್ಯರ್ಥಃ । ದ್ಯುಲೋಕಾದಾನಯನಂ ತೈತ್ತಿರೀಯೇ ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ತಂ ಗಾಯತ್ರ್ಯಾಹರತ್ । ತೈ. ಬ್ರಾ. ೩-೨-೧-೧ । ಇತ್ಯಾದಿಷು ಪ್ರಸಿದ್ಧಂ । ಸ ಏವ ವಿಶೇಷ್ಯತೇ । ಗುಹಾ । ನಿಹಿತಮತಿಗೋಪ್ಯೇ ಪ್ರದೇಶೇ ಪರ್ವತಾದೌ ಸ್ಥಾಪಿತಂ ಅತ ಏವ ನಿಧಿಂ ನಿಧಿಸ್ಥಾನೀಯಂ । ಅನಾಶಮಿತ್ಯರ್ಥಃ । ಅನಯನೇ ದೃಷ್ಟಾಂತಃ । ವೇಃ ಪಕ್ಷಿಣೋ ಗರ್ಭಂ ನ ಶಿಶುಮಿವ । ಯಥಾ ಕಪೋತಾದಿಸ್ತ್ರೀ ಪಕ್ಷಿಣೀ ಸ್ವಶಿಶುಂ ವ್ಯಾಧಾದಿಭಯಾತ್ಕಸ್ಮಿಂಶ್ಚಿದ್ದುರ್ಗಮೇ ಸ್ಥಾಪಯಿತ್ವಾ ತತ್ಸ್ಥಾನಮಜಾನತೀ ಪರಿಭ್ರಮ್ಯ ವಿಂದತೇ ತದ್ವದಿತ್ಯರ್ಥಃ । ಪುನಃ ಕೀದೃಶಂ । ಅಶ್ಮನಿ ಪಾಷಾಣೇऽತಿಮಹತಿ ವಿಸ್ತೃತೇऽನಂತೇऽಶ್ಮನ್ಯಪರಿಮಿತಪಾಷಾಣೇ ಪರ್ವತಾದೌ ಪರಿವೀತಂ ಲತಾಕಂಟಕಾದಿನಾ ಪರಿತೋ ವೇಷ್ಟಿತಂ । ಸತ್ಸ್ವಪೀತರೇಷು ದೇವೇಷು ಕೋऽಸ್ಯಾತಿಶಯ ಇತಿ ತತ್ರಾಹ । ಅಯಮಿಂದ್ರೋ ವಜ್ರೀ ವಜ್ರವಾನ್ ಗವಾಂ ವ್ರಜಮಿವ ಪಣಿನಾಸುರೇಣಾಪಹೃತಂ ಭೂಮೌ ಖನಿತ್ವಾ ಪಾಷಾಣೇನ ಪಿಹಿತದ್ವಾರಂ ಗವಾಂ ವ್ರಜಂ ಯಥಾ ತಮಸುರಂ ಜಿತ್ವಾ ದ್ವಾರಮುದ್ಘಾಟ್ಯ ಲಬ್ಧವಾನ್ ತದ್ವತ್ಸೋಮಂ ಸಿಷಾಸನ್ ಸಂಭಕ್ತುಮಿಚ್ಛನ್ ॥ ಸನೀವಂತರ್ಧೇತಿ ವಿಕಲ್ಪನಾದಿಡಭಾವೇ ಜನಸನೇತ್ಯಾತ್ವಂ ॥ ಅವಿಂದತ್ । ಅಯಮರ್ಥಃ ಪಣಿನೇವ ಗಾವಃ । ಋ. ೧-೩೨-೧೧ । ಇತ್ಯಾದಿಶ್ರುತಿಷು ಪ್ರಸಿದ್ಧಃ । ತಥಾಯಮಿಂದ್ರಃ ಪರಿವೃತಾಃ ಪರಿತೋ ಮೇಘೇನಾವೃತಾ ಇಷೋऽನ್ನಹೇತುಭೂತಸ್ಯೋದಕಸ್ಯ ದ್ವಾರೋ ದ್ವಾರಾಣ್ಯಪಾವೃಣೋತ್ । ಅಪವೃತಾನ್ಯಕರೋತ್ । ಉದ್ಘಾಟಿತವಾನಿತ್ಯರ್ಥಃ । ತಥಾ ಕೃಷ್ಯೇಷ ಇಷ್ಯಮಾಣಾನಿ ವ್ರೀಹ್ಯಾದ್ಯನ್ನಾನಿ ಪರಿವೃತಾ ಭೂಮೌ ಪರಿತೋ ವ್ಯಾಪ್ತಾನ್ಯಕರೋತ್ । ವಜ್ರೇಣ ಮೇಘಂ ಭಿತ್ವಾ ಜಲವರ್ಷಣೇನ ಸಸ್ಯಾದಿಸಮೃದ್ಧಿಂ ಕೃತ್ವಾ ವ್ರೀಹ್ಯಾದಿಕಂ ಭೂಮೌ ವ್ಯಾಪ್ತಮಕರೋದಿತ್ಯರ್ಥಃ । ಯತೋऽಯಮೇವಂ ಕೃತವಾನ್ ಅತಃ ಸೋಮಸ್ವೀಕಾರೋ ಯುಕ್ತಃ ॥

॥ ಪ್ರತಿಪದಾರ್ಥ ॥

**ಅಂಗಿರಸ್ತಮಃ**—ಶತ್ರುಗಳನ್ನು ಎದುರಿಸಿ ಹೋಗುವವರಲ್ಲಿ (ಅಂಗಿರಸರಲ್ಲಿ) ಶ್ರೇಷ್ಠನಾದ । (**ಅಯಂ**) **ಇಂದ್ರಃ**—ಈ ಇಂದ್ರನು । **ವಜ್ರೀ** – ವಜ್ರಾಯುಧಧಾರಿಯಾಗಿ । **ಗವಾಂ ವ್ರಜಂ ಇವ**—(ಪಣಿನಾಮಕ ಅಸುರನಿಂದ ನಿರುದ್ಧವಾಗಿದ್ದ) ಗೋವ್ರಜದ (ದ್ವಾರವನ್ನು ಒಡೆದು ಗೋವುಗಳನ್ನು ಪಡೆ) ದಂತೆ । **ಸಿಷಾಸನ್**—

(ಸೋಮರಸವನ್ನು) ಪಡೆಯಲು ಇಚ್ಛಿಸಿದವನಾಗಿ । **ಅವಿಂದತ್**—(ಸೋಮರಸವನ್ನು) ಪಡೆದನು । **ತಥಾ**—ಹಾಗೆಯೇ । (**ಅಯಂ**—ಇವನು) । **ಪರೀವೃತಾಃ**—ಸುತ್ತಲೂ (ಮೇಘಗಳಿಂದ) ಆಚ್ಛಾದಿತವಾಗಿದ್ದ । **ಇಷಃ**—ಅನ್ನ (ಹೇತು ಭೂತವಾದ ಉದಕ) ದ । **ದ್ವಾರಃ**—ದ್ವಾರಗಳನ್ನು । **ಅಪ ಅವೃಣೋತ್**—ತೆರೆದನು । (ಮತ್ತು) (ಹಾಗೆ ದ್ವಾರಗಳನ್ನು ತೆರೆದು) । **ಇಷಃ**—ವ್ರೀಹ್ಯಾದಿಗಳನ್ನು । **ಪರೀವೃತಾಃ**—ಭೂಮಿಯಲ್ಲಿ ವ್ಯಾಪ್ತವನ್ನಾಗಿ ಮಾಡಿದನು; (ಆದುದರಿಂದ) । **ಅಯಂ ಇಂದ್ರಃ**—ಈ ಇಂದ್ರನು । **ಅಶ್ಮನಿ ಅಂತಃ**—ಶಿಲೆಗಳ ಮಧ್ಯದಲ್ಲಿ । **ಗುಹಾ**—ಗೋಪ್ಯವಾದ ಪ್ರದೇಶದಲ್ಲಿ । **ನಿಹಿತಂ**—ಬಚ್ಚಿಟ್ಟ । **ನಿಧಿಂ**—ನಿಧಿಯಂತೆ ಇರುವುದೂ । **ಅನಂತೇ ಅಶ್ಮನಿ**—ಅಪರಿಮಿತಪಾಷಾಣಗಳುಳ್ಳ ಪರ್ವತಾದಿಗಳಲ್ಲಿ । **ಪರಿವೀತಂ**—(ಲತಾಕಂಟಕಾದಿಗಳಿಂದ) ಪರಿವೃತವೂ । **ದಿವಃ**—ದೇವಲೋಕದಿಂದ (ಆನೀತವೂ ಆದ ಸೋಮರಸವನ್ನು) । **ವೇಃ**—(ಕಪೋತ) ಪಕ್ಷಿಯು । **ಗರ್ಭಂ ನ**—(ಬಚ್ಚಿಟ್ಟದ್ದ) ಶಿಶುವನ್ನು (ಬಹಳ ಹುಡುಕಿ, ಅನಂತರ ಪಡೆಯು) ವಂತೆ, । **ಅವಿಂದತ್** –ಪಡೆದನು ॥

॥ ಭಾವಾರ್ಥ ॥

ಶತ್ರುಗಳನ್ನು ಎದುರಿಸುವವರಲ್ಲಿ ಅಗ್ರಗಣ್ಯನಾದ ಇಂದ್ರನು (ಪಣಿನಾಮಕ ಅಸುರನಿಂದ ನಿರುದ್ಧವಾದ) ಗೋವ್ರಜದ ದ್ವಾರವನ್ನು, ವಜ್ರಾಯುಧಧಾರಿಯಾಗಿ (ಒಡೆದು, ಗೋವುಗಳನ್ನು ಪಡೆದಂತೆ), ಸೋಮರಸವನ್ನು ಪಡೆಯಲಿಚ್ಛಿಸಿದನು; ಮತ್ತು (ಮೇಘಗಳಿಂದ) ಸುತ್ತಲೂ ಆವೃತವಾಗಿದ್ದ ಅನ್ನ (ಹೇತುಭೂತವಾದ ಉದಕದ); ದ್ವಾರಗಳನ್ನು ತೆರೆದು, (ಹೋಮಸಾಧನವಾದ) ವ್ರೀಹ್ಯಾದಿಗಳನ್ನು ಭೂಮಿಯಲ್ಲಿ ಹರಡುವಂತೆ (ಮಾಡಿದನು). ಆದುದರಿಂದ, ಇವನು ಸ್ವರ್ಗಲೋಕದಿಂದ ಆನೀತವಾಗಿ, ಅಪರಿಮಿತ ಪಾಷಾಣಮಯವಾದ (ಪರ್ವತಗಳಲ್ಲಿ) ಲತಾಕಂಟಕಾದಿ ಪರಿವೃತವಾಗಿ ಶಿಲೆಗಳ ಮಧ್ಯೆ ನಿಗೂಢವಾದ ನಿಧಿಯಂತೆ ಇದ್ದ ಸೋಮರಸವನ್ನು, ಕಪೋತಪಕ್ಷಿಯು (ವ್ಯಾಧಾದಿ ಭಯದಿಂದ) ಮರಿಯನ್ನು (ಬಚ್ಚಿಟ್ಟು, ಬಹಳ ಹುಡುಕಿ, ಅನಂತರ ಅದನ್ನು ಪಡೆಯು) ವಂತೆ, ಪಡೆದನು.

## English Translation

He (Indra) found the (Soma) treasure (that had been brought) from heaven, and hidden like the nestlings of a bird in a rock ; amidst (a pile of) vast rocks inclosed (by bushes) : desiring to partake (of the beverage), the thunderer (found it), as the chief of the Angirasas (discovered), the hiding-place of the cows : he opened the doors of (the waters, the sources of) food, when shut up (in the clouds ; the sourcer of) food. that were spread (over the earth).

॥ ವಿಶೇಷವಿಷಯಗಳು ॥

**ದಿವಃ ಅವಿಂದತ—ದ್ಯುಲೋಕಾತ್ ಆನೀತಂ ಸೋಮಂ ಅಯಮಿಂದ್ರಃ ಲಬ್ಧವಾನ್ ।** ಸೋಮಲತೆಯು ಮೊದಲು ಸ್ವರ್ಗದಲ್ಲಿ ಮಾತ್ರವೇ ಇದ್ದಿತು. ಅದನ್ನು ಗಾಯಿತ್ರೀದೇವಿಯು ಪಕ್ಷಿರೂಪದಿಂದ ಭೂಮಿಗೆ ತಂದಳು. ಈ ಅಂಶವು **ತೃತಿಯಸ್ಯಾಮಿತೋ ದಿವಿ ಸೋಮ ಆಸೀತ್ । ತಂ ಗಾಯಿತ್ರ್ಯಾಹರತ್** (ತೈ. ಬ್ರಾ. ೩-೨-೧-೧) ಎಂಬ ಶ್ರುತಿಯಿಂದ ಉಕ್ತವಾಗಿದೆ. ಇದನ್ನು ಇಂದ್ರನು ಯಾಗದಲ್ಲಿ ಹೊಂದಿದನು ಎಂದು ಅರ್ಥ.

**ಗುಹಾನಿಧಿಂ—ಅತಿಗೋಪ್ಯೇ ಪರ್ವತಾದೌ ಪ್ರದೇಶೇ ಸ್ಥಾಪಿತಂ ನಿಧಿಸ್ಥಾನೀಯಂ** । ಸೋಮಲತೆಯು ಪರ್ವತಗಳಲ್ಲಿ ಬೆಳೆಯುವುದು. ಇದು ಇತರ ಬಳ್ಳಿಗಳು, ಮುಳ್ಳುಗಳು ಮೊದಲಾದವುಗಳ ಮಧ್ಯದಲ್ಲಿರುವುದರಿಂದ ಇದು ನಿಧಿ (ಹಣ) ವನ್ನು ಬಚ್ಚಿಡುವಂತೆ ಗೋಪ್ಯವಾಗಿ ಯಾರಿಗೂ ಗೋಚರವಾಗದಂತೆ ಇರುವುದು ಅದನ್ನು ಅಲ್ಲಿಂದ ತರಬೇಕಾದರೂ ಬಹಳ ಶ್ರಮದಿಂದ ತರಬೇಕಾಗಿರುವುದು ಎಂದಭಿಪ್ರಾಯವು.

**ವೇಃ ಗರ್ಭಂ ನ—ಪಕ್ಷಿಣಃ ಶಿಶುಮಿವ**। ಕಪೋತ ಪಕ್ಷಿಯು ತನ್ನ (ಮರಿಯನ್ನು) ಶಿಶುವನ್ನು ಬೇಡರೇ ಮೊದಲಾದವರು ನಾಶಪಡಿಸುವರೆಂಬ ಭಯದಿಂದ ಯಾರಿಗೂ ತಿಳಿಯದಂತೆಯೂ ಹೊಂದಲಶಕ್ಯವಾಗಿಯೂ ಇರುವ ಪ್ರದೇಶದಲ್ಲಿ ಇರಿಸಿ ಅನಂತರ ತಾನೂ ಆ ಪ್ರದೇಶವನ್ನು ಗುರತಿಸಲಾರದೆ ಹುಡುಕಿ ಶ್ರಮದಿಂದ ಗೊತ್ತುಮಾಡುವಂತೆ ಎಂದು ಈ ಸೋಮವನ್ನು ಹುಡುಕುತ್ತಾರೆಂದು ಹೋಲಿಸಿದೆ.

**ಅಶ್ಮನಿ ಅನಂತೇ ಅಶ್ಮನಿ ಪರಿವೀತಂ—ಅತಿಮಹತಿ ವಿಸ್ತೃತೇ ಪಾಷಾಣೇ, ಅಪರಿಮಿತಪಾಷಾಣೇ ಪರ್ವತಾದೌ ಲತಾಕಂಟಕಾದಿನಾ ಪರಿವೀತಂ** ಈ ಸೋಮಲತೆಯು ದೊಡ್ಡದಾದ ಮುಳ್ಳುಗಳಿರುವ ಪ್ರದೇಶದಲ್ಲಿಯೂ ಬಹಳ ಕಲ್ಲುಗಳಿಂದ ತುಂಬಿರುವ ಪರ್ವತವೇ ಮೊದಲಾದ ಪ್ರದೇಶಗಳಲ್ಲಿಯೂ ಬೇರೆಯ ಜಾತಿಯ ಬಳ್ಳಿಗಳು, ಮತ್ತು ಮುಳ್ಳುಗಿಡಗಳು ಇವುಗಳಿಂದ ಸುತ್ತುವರಿಯಲ್ಪಟ್ಟಿರುವುದು ಎಂದು ಅರ್ಥ.

**ಅಶ್ಮನ್** ಶಬ್ದವು ಮೇಘನಾಮಗಳಲ್ಲಿ (ನಿ. ೨-೨೧) ಉಕ್ತವಾಗಿದೆ.

**ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ ।**
**ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ ।**

(ಋ. ಸಂ. ೨-೧-೧)

ಈ ಋಕ್ಕಿನಲ್ಲಿ **ಅಶ್ಮನಃ ಪರಿ ಪರಿತಃ ಸರ್ವತಃ ಇತರೇತರಾಭಿಘಾತಾತ್ ಜಾಯಸೇ** ಅಗ್ನಿಯು ಕಲ್ಲುಗಳ ಪರಸ್ಪರವಾದ ಸಂಘರ್ಷಣೆ ಉಂಟಾಗುವುದು ಎಂದು ಅರ್ಥಮಾಡಿರುವುದರಿಂದ ಅಶ್ಮ ಶಬ್ದಕ್ಕೆ ಪಾಷಾಣವೆಂದು ಅರ್ಥವನ್ನು ವಿವರಿಸಿದೆ.

**ಯೋ ಹತ್ವಾಹಿಮರಿಣಾತ್ಸಪ್ತ ಸಿಂಧೂನ್ಯೋ ಗಾ ಉದಾಜದಪಧಾ ವಲಸ್ಯ ।**
**ಯೋ ಅಶ್ಮನೋರಂತರಗ್ನಿಂ ಜಜಾನ ಸಂವೃಕ್ಸಮತ್ಸು ಸ ಜನಾಸ ಇಂದ್ರಃ ॥**

(ಋ. ಸಂ. ೨-೧೨-೩)

ಇಲ್ಲಿ **ಅಶ್ಮನೋಃ ಅಶನವತ್ಯೋಃ ದ್ಯಾವಾಪೃಥಿವ್ಯೋಃ** ಎಂದು ವ್ಯಾಖ್ಯಾನಮಾಡಿರುವುದರಿಂದ **ಅಶ್ಮ** ಶಬ್ದಕ್ಕೆ ಅನ್ನವನ್ನು ಕೊಡುವ ದ್ಯಾವಾಪೃಥಿವಿಗಳು ಎಂಬ ಅರ್ಥವನ್ನು ವರ್ಣಿಸಿದೆ.

**ವಜ್ರೀ ಗವಾಂ ವ್ರಜಮಿವ ಸಿಷಾಸನ್—ಪಣಿನಾ ಅಸುರೇಣಾಪಹೃತಂ ಭೂಮೌ ಖನಿತಾ ಪಾಷಾಣೇನ ಪಿಹಿತದ್ವಾರಂ ಗವಾಂ ವ್ರಜಂ ಯಥಾ ತಮಸುರಂ ಜಿತ್ವಾ ದ್ವಾರಮುದ್ಘಾಟ್ಯ ಲಬ್ಧವಾನ್ ತದ್ವತ್ ಸೋಮಂ ಸಿಷಾಸನ್ ಸಂಭಕ್ತುಮಿಚ್ಛನ್**—ವಜ್ರಾಯುಧವನ್ನು ಧರಿಸಿರುವ ಇಂದ್ರನು—ಪಣಿ ಎಂಬ ಅಸುರನು ಗೋವುಗಳನ್ನು ಅಪಹರಿಸಿ ಭೂಮಿಯಲ್ಲಿ ಗುಹೆಯನ್ನು ಮಾಡಿ ಅಲ್ಲಿ ಅವುಗಳನ್ನು ರಹಸ್ಯವಾಗಿರುವಂತೆ

ಬಚ್ಚಿರಿಸಿ ಗುಹೆಯ ಬಾಗಿಲಿಗೆ ಕಲ್ಲನ್ನು ಮುಚ್ಚಿರಿಸಿದ್ದನ್ನು ಹುಡುಕಿ ಆ ಅಸುರನನ್ನು ನಾಶಮಾಡಿ ಬಿಲದ ಬಾಗಿಲನ್ನು ತೆರೆದು ಗೋವುಗಳನ್ನು ಹಿಂತಿರಿಗಿತಂದು ರಕ್ಷಿಸಿದಂತೆ ಇಲ್ಲಿ ಸೋಮವನ್ನು ಇಂದ್ರನು ಹೊಂದಲು ಯತ್ನಿಸಿದನು ಎಂದು ವರ್ಣಿಸಿದೆ.

**ದಾಸಪತ್ನೀರಹಿಗೋಪಾ ಅತಿಷ್ಠನ್ನಿರುದ್ಧಾ ಆಪಃ ಪಣಿನೇವ ಗಾವಃ ।**
**ಅಪಾಂ ಬಿಲಮಪಿಹಿತಂ ಯದಾಸೀದ್ವೃತ್ರಂ ಜಘನ್ವಾ ಅಪ ತದ್ವವಾರ ॥**

(ಋ. ಸಂ. ೧-೩೨-೧೧)

ಈ ಋಕ್ಕಿನಲ್ಲಿ ಅಸುರನು ಅಪಹರಿಸಿದ ಗೋವುಗಳನ್ನು ಇಂದ್ರನು ರಕ್ಷಿಸಿರುವುದು ವಿವೃತವಾಗಿದೆ.

**ಅಂಗಿರಸ್ತಮಃ—ಅತಿಶಯೇನ ಶತ್ರೂನ್ ಗಮನಶೀಲಃ ಅಂಗಾರವತ್ ತೇಜಸ್ವೀ ವಾ ।** ಇಂದ್ರನು ಶತ್ರುಗಳನ್ನು ನಿಗ್ರಹಮಾಡಲು ವೇಗವಾಗಿ ಹೋಗುವ ಸ್ವಭಾವವುಳ್ಳವನು ಅಥವಾ ಅಗ್ನಿಯ ಕೆಂಡಗಳಂತೆ ತೇಜೋವಂತನಾಗಿರುವವನು ಎಂದು ಅರ್ಥವನ್ನು ವಿವರಿಸಿದೆ.

**ಇಂದ್ರಃ ಪರೀವೃತಾಃ ಇಷಃ ದ್ವಾರಾಃ ಅಪಾವೃಣೋತ್—**ಇಂದ್ರನು ಭೂಮಿಯಲ್ಲಿ ವೃಷ್ಟಿಯು ಆಗದಿರುವಂತೆ ತಡೆದು ಇರುವ ಮೇಘಗಳ ಉದಕಮಾರ್ಗಗಳನ್ನು ಬಿಡಿಸಿ (ಅನ್ನವು) ಬೆಳೆಯು ಉಂಟಾಗುವಂತೆ ಮಾಡಿದನು ಎಂದು ಅರ್ಥ.

**ಇಷಃ ಪರೀವೃತಾಃ–ಇಷ್ಯಮಾಣಾನಿ ವ್ರೀಹ್ಯಾದ್ಯನ್ನಾದಿ ಭೂಮೌ ಪರಿತೋ ವ್ಯಾಪ್ತಾನ್ಯಕರೋತ್.** ವಜ್ರಾಯುಧದಿಂದ ಮೇಘವನ್ನು ಭೇದಿಸಿ ವೃಷ್ಟಿಯು ಭೂಮಿಯಲ್ಲಿ ಉಂಟಾಗುವಂತೆ ಮಾಡಿ ಭೂಮಿಯಲ್ಲಿ ಅನ್ನವು ಉಂಟಾಗಲು ಕಾರಣವಾದ ವ್ರೀಹ್ಯಾದಿಗಳು ಭೂಮಿಯಲ್ಲಿ ಬೆಳೆದು ತುಂಬಿರುವಂತೆ ಇಂದ್ರನು ಮಾಡಿರುವುದರಿಂದ ಇಂದ್ರನು ಸೋಮವನ್ನು ಹವಿಸ್ಸಿನ ರೂಪದಿಂದ ಯಜ್ಞದಲ್ಲಿ ಸ್ವೀಕರಿಸುವುದು ಉಚಿತವಾಗಿರುವುದೆಂದು ವರ್ಣಿಸಿದೆ.

**ಇಷಃ—ಇಷಂ** ಎಂಬ ಶಬ್ದವು ಅನ್ನನಾಮಗಳಲ್ಲಿ (ನಿ ೩-೯) ಉಕ್ತವಾಗಿದೆ. ಈ ಋಕ್ಕಿನಲ್ಲಿ ಇಷಃ ಎಂದು ಎರಡುಸಾರಿ ಪ್ರಯುಕ್ತವಾಗಿದೆ ಎಲ್ಲರಿಗೂ ಅಭಿಲಷಣೀಯವಾದ ಅನ್ನವೆಂದು ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅವಿಂದತ್—**ವಿದ್ಲೃ ಲಾಭೇ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ. ಶ ವಿಕರಣ. **ಶೇಮುಚಾದೀನಾಂ** (ಪಾ. ಸೂ. ೭-೧-೫೯) ಎಂಬುದರಿಂದ ನುಮಾಗಮ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತಸ್ವರ ಬರುತ್ತದೆ

**ದಿವಃ—ಊಡಿದಂ ಪದಾದಿ—**(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ನಿಹಿತಮಂ—**ಧಾಞ್ ಧಾತುವಿಗೆ ಕರ್ಮಣಿಯಲ್ಲಿ ನಿಷ್ಠಾ ಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. **ಗತಿರನಂತರಃ** (ಪಾ. ಸೂ ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಗುಹಾ—ಸುಪಾಂ ಸುಲುಕ್—**ಎಂಬುದರಿಂದ ಸಪ್ತಮಿಗೆ ಲುಕ್ ಬಂದಿದೆ.

**ನಿಧಿಂ**—**ಉಪಸರ್ಗೇ ಘೋಃ ಕಿಃ** (ಪಾ. ಸೂ. ೩-೩-೯೨) ಎಂಬುದರಿಂದ ಧಾಞ್ ಧಾತುವಿಗೆ ಕಿ ಪ್ರತ್ಯಯ. **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪರಿವೀತಮ್**—ವೀ ಗತ್ಯಾದಿಷು. ಹಿಂದಿನಂತೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ ಬಂದಾಗ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ.

**ಅನಂತೇ**—ನ ವಿದ್ಯತೇ ಅಂತಃ ಯಸ್ಯ. ತಸ್ಮಿನ್. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ವಜ್ರೀ**—ವಜ್ರಮಸ್ಯಾಸ್ತೀತಿ ವಜ್ರೀ. **ಅತಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ.

**ಸಿಷಾಸನ್**—ಷಣ ಸಂಭಕ್ತೌ. ಧಾತು. **ಧಾತೋಃ ಕರ್ಮಣಃ ಸ**—(ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನೀವಂತರ್ಧ**—(ಪಾ ಸೂ. ೭-೨-೪೯) ಎಂಬುದರಿಂದ ವಿಕಲ್ಪವಿಧಾನಮಾಡುವುದರಿಂದ ಇಡಾಗಮ ಬರುವುದಿಲ್ಲ. **ಜನಸನಖನಾಂ ಸನ್ ಝಲೋಃ** (ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. **ಸನ್ಯಜತೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. **ಸನ್ಯತಃ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅವೃಣೋತ್**—ವೃಞ್ ವರಣೇ. ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪರೀವೃತಾಃ**—ಪೂರ್ವೋಕ್ತಧಾತುವಿಗೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಅನ್ಯೇಷಾಮಪಿದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ದಾದೃಹಾಣೋ ವಜ್ರಮಿಂದ್ರೋ ಗಭಸ್ತ್ಯೋಃ ಕ್ಷದ್ಮೇವ ತಿಗ್ಮಮಸನಾಯ ಸಂ
ಶ್ಯದಹಿಹತ್ಯಾಯ ಸಂ ಶ್ಯತ್ ।
ಸಂವಿವ್ಯಾನ ಓಜಸಾ ಶವೋಭಿರಿಂದ್ರ ಮಜ್ಮನಾ ।
ತಷ್ಟೇವ ವೃಕ್ಷಂ ವನಿನೋ ನಿ ವೃಶ್ಚಸಿ ಪರಶ್ವೇವ ನಿ ವೃಶ್ಚಸಿ ॥ ೪ ॥

॥ ಪದಪಾಠಃ ॥

ದದೃಹಾಣಃ । ವಜ್ರಂ । ಇಂದ್ರಃ । ಗಭಸ್ತ್ಯೋಃ । ಕ್ಷದ್ಮಽಇವ । ತಿಗ್ಮಂ । ಅಸನಾಯ । ಸಂ । ಶ್ಯತ್ ।

ಅಹಿಽಹತ್ಯಾಯ । ಸಂ । ಶ್ಯತ್ ।

ಸಂಽವಿವ್ಯಾನಃ । ಓಜಸಾ । ಶವಃಽಭಿಃ । ಇಂದ್ರ । ಮಜ್ಮನಾ ।

ತಷ್ಟಾಽಇವ । ವೃಕ್ಷಂ । ವನಿನಃ । ನಿ । ವೃಶ್ಚಸಿ । ಪರಶ್ವಾಽಇವ । ನಿ । ವೃಶ್ಚಸಿ ॥ ೪ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ಗಭಸ್ತ್ಯೋರ್ಬಾಹ್ವೋರ್ವಜ್ರಂ ದದೃಹಾಣೋ ದೃಢಂ ಗೃಹ್ಣನ್ ॥ ದೃಹ ದೃಹಿ ವೃದ್ಧೌ ॥ ಲಿಟಃ ಕಾನಚ್ । ಗಭಸ್ತೀ ಇತಿ ಬಾಹುನಾಮ ಗಭಸ್ತೀ ಬಾಹೂ ಇತಿ ತನ್ನಾಮಸು ಪಾಠಾತ್ । ಕಿಮರ್ಥಂ । ಅಸನಾಯ ಶತ್ರೋರುಪರಿ ಕ್ಷೇಪಣಾಯ । ತಿಗ್ಮಮತ್ಯಂತತೀಕ್ಷ್ಣಂ ವಜ್ರಂ ಸಂ ಶ್ಯತ್ । ಸಮ್ಯಕ್ ತೀಕ್ಷ್ಣೀಕರೋತಿ ॥ ಶೋ ತನೂಕರಣೇ । ಓತಃ ಶ್ಯನೀತ್ಯೋಕಾರಲೋಪಃ । ಛಾಂದಸೋಽಡಭಾವಃ । ಯದ್ವಾ । ಲೇಟೀತಶ್ಚ ಲೋಪ ಇತೀಕಾರಲೋಪಃ ॥ ತತ್ರ ದೃಷ್ಟಾಂತಃ । ಕ್ಷದ್ಮೇವ ಉದಕಮಿವ । ಉದಕಂ ಯಥಾ ಶತ್ರೂಣಾಂ ನಿರಸನಾಯಾಭಿಮಂತ್ರಣಾದಿಸಂಸ್ಕಾರೇಣ ತೀಕ್ಷ್ಣೀಕ್ರಿಯತೇ ತದ್ವತ್ । ಕ್ಷದ್ಮೇತ್ಯುದಕನಾಮ ಕ್ಷದ್ಮ ನಭ ಇತಿ ತನ್ನಾಮಸು ಪಾಠಾತ್ ॥ ಪುನರಪಿ ತದೇವ ವಿಶೇಷ್ಯತೇ । ಅಹಿಹತ್ಯಾಯಾಹೇರ್ವೃತ್ರಸ್ಯ ಮೇಘಸ್ಯ ವಾ ಹನನಾಯ ॥ ಹಂತೇರ್ಹನಸ್ತ ಚೇತಿ ಕ್ಯಪ್ ತಕಾರಾಂತಾದೇಶಶ್ಚ ॥ ಸಂ ಶ್ಯತ್ । ಪೂರ್ವಮೇವ ತೀಕ್ಷ್ಣಂ ಸತ್ ಪುನರಪಿ ವಧಾಯ ತೀಕ್ಷ್ಣಯತಿ । ಹೇ ಇಂದ್ರ ಓಜಸಾ ಬಲೇನ ಪರಾಭಿಭವನಸಾಮರ್ಥ್ಯೇನ ಶವೋಭಿಃ ಸೇನಾಲಕ್ಷಣೈರ್ಬಲೈರ್ಮಜ್ಮನಾ ಶಾರೀರೇಣ ಚ ಬಲೇನ ಸಂವಿವ್ಯಾನಃ । ಸಮ್ಯಗ್ಯುಕ್ತಃ ಸನ್ ॥ ವಿವ್ಯಾನ ಇತಿ ಲಿಟಃ ಕಾನಚ್ । ಗ್ರಹಿಜ್ಯಾವಯಿ ಇತಿ ಸಂಪ್ರಸಾರಣಂ ॥ ತಷ್ಟಾ ವೃಕ್ಷಮಿವ । ಯಥಾ ಕಶ್ಚಿತ್ತಷ್ಟಾ ವೃಕ್ಷಾಣಾಂ ತಕ್ಷಣಸ್ಯ ಸಾಧು ಕರ್ತಾ ವನಿನೋ ವನಸಂಬಂಧಿನೋ ವೃಕ್ಷಾನ್ನಿವೃಶ್ಚತಿ ಸ್ವೋಪಯೋಗಾಯ ನಿತರಾಂ ಛಿನತ್ತಿ ತಕ್ಷಣೇನ ತನೂಕರೋತಿ ತಥಾ ತ್ವಮಪ್ಯಸ್ಮಾಸು ವಕ್ರಮಾಚರಂತಂ ಶತ್ರುಂ ನಿ ವೃಶ್ಚಸಿ । ಕಿಂಚ ಪರಶ್ವೇವ ನಿ ವೃಶ್ಚಸಿ । ಯಥಾ ಪರಶುನಾ ಕಶ್ಚಿಚ್ಛಿನತ್ತಿ ವೃಕ್ಷಂ ತಥಾ ತ್ವಮಪ್ಯುಕ್ತೈಸ್ತ್ರಿವಿಧೈರ್ಬಲೈರ್ನಿತರಾಮಸ್ಮದ್ದ್ವೇಷಿಣಂ ವೃಶ್ಚಸಿ ॥

॥ ಪ್ರತಿಪದಾರ್ಥ ॥

**(ಅಯಂ) ಇಂದ್ರಃ**—(ಈ) ಇಂದ್ರನು । **ಗಭಸ್ತ್ಯೋಃ**—ಎರಡೂ ಬಾಹುಗಳಲ್ಲಿ । **ತಿಗ್ಮಂ**—ತೀಕ್ಷ್ಣವಾದ । **ವಜ್ರಂ**—ವಜ್ರಾಯುಧವನ್ನು । **ದದೃಹಾಣಃ**—ಬಲವಾಗಿ ಹಿಡಿದುಕೊಂಡು । **ಅಸನಾಯ**—(ಶತ್ರುವಿನ ಮೇಲೆ) ಎಸೆಯುವುದಕ್ಕೋಸ್ಕರ । **ಕ್ಷದ್ಮಾ ಇವ**—(ಮಂತ್ರಸಂಸ್ಕಾರದಿಂದ) ಉದಕವನ್ನು (ತೀಕ್ಷ್ಣವನ್ನಾಗಿ ಮಾಡುವಂತೆ) । (**ವಜ್ರಂ**—ವಜ್ರಾಯುಧವನ್ನು) । **ಸಂ ಶ್ಯತ್**—ಚೆನ್ನಾಗಿ ಹರಿತಮಾಡುತ್ತಾನೆ । **ಅಹಿಹತ್ಯಾಯ**—ವೃತ್ರನನ್ನು (ಮೇಘವನ್ನು) ವಧಿಸುವುದಕ್ಕೋಸ್ಕರ (ಭೇದಿಸಲು) । **ಸಂ ಶ್ಯತ್**—ಚೆನ್ನಾಗಿ ಹರಿತಮಾಡುತ್ತಾನೆ ।

**(ಹೇ) ಇಂದ್ರ**—(ಎಲೈ) ಇಂದ್ರನೇ। **ಓಜಸಾ** (ಪರಾಭಿಭವ) ಸಾಮರ್ಥ್ಯದಿಂದ। **ಶವೋಭಿಃ** ಸೇನಾರೂಪ ಬಲದಿಂದ (ಮತ್ತು)। **ಮಜ್ಮನಾ**—ಶರೀರ ಬಲದಿಂದ। **ಸಂವಿವ್ಯಾನಃ**—ಸಮ್ಯಗ್ಯುಕ್ತನಾಗಿ। **ತಷ್ಟಾ**—ಮರಗೆಲಸದವನು। **ವನಿನಃ**—ವನಸಂಬಂಧವಾದ। **ವೃಕ್ಷಂ ಇವ**—ಮರಗಳನ್ನು (ಕಡಿಯುವಂತೆ)। **ನಿ ವೃಶ್ಚಸಿ**—(ನಮ್ಮ ಶತ್ರುಗಳನ್ನು) ಛೇದಿಸುತ್ತಿ ಮತ್ತು। **ಪರಶ್ವಾ ಇವ**—ಕೊಡಲಿಯಿಂದ (ಮರವನ್ನು ಛೇದಿಸು) ವಂತೆ। **ನಿ ವೃಶ್ಚಸಿ**—ಚೆನ್ನಾಗಿ (ಶತ್ರುಗಳನ್ನು) ಛೇದಿಸುತ್ತಿ.

॥ ಭಾವಾರ್ಥ ॥

ಇಂದ್ರನು, ತನ್ನ ತೀಕ್ಷ್ಣವಾದ ವಜ್ರಾಯುಧವನ್ನು ಎರಡು ಕೈಗಳಲ್ಲಿಯೂ ಹಿಡಿದುಕೊಂಡು (ಶತ್ರುವಿನಮೇಲೆ) ಎಸೆಯುವುದಕ್ಕೋಸ್ಕರ, (ಮಂತ್ರಸಂಸ್ಕಾರಾದಿಗಳಿಂದ) ನೀರನ್ನು (ತೀಕ್ಷ್ಣಮಾಡುವಂತೆ), ಹರಿತವಾಗಿ ಮಾಡುತ್ತಾನೆ; ವೃತ್ರಾಸುರನನ್ನು (ಮೇಘವನ್ನು) ವಧಿಸುವುದಕ್ಕೋಸ್ಕರ, (ವಜ್ರಾಯುಧವನ್ನು) ಮಸೆಯುತ್ತಾನೆ; ಎಲೈ ಇಂದ್ರನೇ, (ಶತ್ರುಪರಾಭವಕಾರಕವಾದ) ಸಾಮರ್ಥ್ಯ, (ಸೇನಾರೂಪ) ಬಲ, ಕಾಯಕಶಕ್ತಿ, ಇವುಗಳಿಂದ ಯುಕ್ತನಾಗಿ, ಬಡಗಿಯು ಕಾಡಿನ ಮರಗಳನ್ನು (ಕತ್ತರಿಸುವಂತೆ), (ನಮ್ಮ ಶತ್ರುಗಳನ್ನು) ಛೇದಿಸು; ಪರಶುವಿನಿಂದ (ಅವನು ಮರವನ್ನು ಕಡಿಯುವಂತೆ ನೀನು ಶತ್ರುಗಳನ್ನು) ಛೇದಿಸು.

English Translation.

Grasping his sharp thunderbolt with both hands, Indra whetted it to hurl it (on his foes), like the water (of an imprecation): he whetted it for the destruction of Ahi. Indra, you are fully endowed with strength, with energy, with might, you cut (our enemies) to pieces, as a woodcutter the trees of a forest; you cut them to pieces as if with a hatchet.

॥ ವಿಶೇಷವಿಷಯಗಳು ॥

**ಗಭಸ್ತ್ಯೋಃ—ಬಾಹ್ವೋಃ ।** **ಗಭಸ್ತಿ** ಶಬ್ದವು **ರಶ್ಮಿ** ನಾಮಗಳಲ್ಲಿಯೂ, (ನಿ. ೨-೧೫) **ಬಾಹು** ನಾಮಗಳಲ್ಲಿಯೂ (ನಿ. ೩-೮) ಪಠಿತವಾಗಿದೆ. ಬಾಹುವೆಂದು ಇಲ್ಲಿ ಅರ್ಥವನ್ನು ವಿವರಿಸಿದೆ.

**ತಿಗ್ಮಂ—ಅತ್ಯಂತತೀಕ್ಷ್ಣಂ ।** ತಿಗ್ಮ ಶಬ್ದವು ವಜ್ರನಾಮಗಳಲ್ಲಿ (ನಿ. ೩-೧೧) ಉಕ್ತವಾಗಿದೆ.

**ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ ।**
**ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ॥**

(ಋ. ಸಂ. ೭-೪೬-೧)

ಈ ಋಕ್ಕಿನಲ್ಲಿ **ತಿಗ್ಮಾಯುಧಾಯ-ತೀಕ್ಷ್ಣಾಯುಧಾಯ** ಹರಿತವಾದ ಆಯುಧವುಳ್ಳವನೆಂದು ಅರ್ಥವನ್ನು ಮಾಡಿ. **ತಿಗ್ಮಂ ತೇಜತೇರುತ್ಸಾಹಕರ್ಮಣಃ** (ನಿ. ೧೦-೭) ಎಂದು ವ್ಯಾಖ್ಯಾತವಾಗಿದೆ. ಇಲ್ಲಿ ಬಹಳ ಹರಿತವಾದುದೆಂದು ವಜ್ರಾಯುಧಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ.

**ಕ್ಷದ್ಮೇವ— ಉದಕಮಿವ ।** ಕ್ಷದ್ಮ ಶಬ್ದವು ಉದಕನಾಮುಗಳಲ್ಲಿಯೂ, (ನಿ. ೨–೨೪) ಅನ್ನನಾಮಗಳಲ್ಲಿಯೂ (ನಿ. ೩–೯) ಉಕ್ತವಾಗಿದೆ. **ಉದಕಂ ಯಥಾ ಶತ್ರೂಣಾಂ ನಿರಸನಾಯ ಅಭಿಮಂತ್ರಣಾದಿಸಂಸ್ಕಾರೇಣ ತೀಕ್ಷ್ಣೀಕರೋತಿ ತದ್ವತ್ ।** ಶತ್ರುಗಳನ್ನು ನಾಶಮಾಡುವುದಕ್ಕಾಗಿ ಆಯಾಯ ಮಂತ್ರಗಳಿಂದ ಅಭಿಮಂತ್ರಿಸಿ, ಉದಕವನ್ನು ತೀಕ್ಷ್ಣವಾದ ಆಯುಧವನ್ನಾಗಿ ಉಪಯೋಗಿಸುವಹಾಗೆ ಇಂದ್ರನು ತನ್ನ ಬಾಹುಗಳಿಂದ ವಜ್ರಾಯುಧವನ್ನು ಧರಿಸಿ ಶತ್ರುಗಳನ್ನು ನಾಶಪಡಿಸುವಾಗ ಅದನ್ನು ಬಹಳ ಹರಿತವಾದದ್ದನ್ನಾಗಿ ಮಾಡುವನು ಎಂದು ದೃಷ್ಟಾಂತವನ್ನು ಉದಹರಿಸಿ ಹೇಳಿದೆ.

**ಅಹಿಹತ್ಯಾಯ— ಅಹೇರ್ವೃತ್ರಸ್ಯ ಮೇಘಸ್ಯ ವಾ ಹನನಾಯ ।** ಅಹಿ ಶಬ್ದವು ಇಣ್ ಗತೌ ಎಂಬ ಧಾತುವಿನಿಂದ **ಅಯನಾದಹಿಃ** ಎಂದೂ, ಹನ್ ಧಾತುವಿಗೆ ಆ ಎಂಬ ಉಪಸರ್ಗವು ಸೇರಿದಾಗ **ಆಹಂತೀತ್ಯಹಿಃ** ಎಂದೂ, ನಿರುಕ್ತಕಾರರು, **ಅಹಿರಯನಾದೇತ್ಯಂತರಿಕ್ಷೇ ಅಯಮಪೀತರೋ ಅಹಿರೇತಸ್ಮಾದೇವ ನಿರ್ಹ್ರಸಿತೋಪಸರ್ಗ ಆಹಂತೀತಿ** ಎಂಬ ವ್ಯಾಖ್ಯಾನದಿಂದ ಅರ್ಥವನ್ನು ವಿವರಿಸುತ್ತಾರೆ. **ಅಹಿ** ಶಬ್ದವು **ಮೇಘ** ನಾಮುಗಳಲ್ಲಿಯೂ, (ನಿ. ೨–೨೧) **ಉದಕ** ನಾಮುಗಳಲ್ಲಿಯೂ (ನಿ. ೨-೨೪) ಪಠಿತವಾಗಿದೆ.

ಸಾಯಣರು ಹಿಂಸೆಮಾಡುವ (ಶತ್ರುವಾದ) ವೃತ್ರಾಸುರನ, ಅಥವಾ ಮೇಘದ ನಾಶಕ್ಕಾಗಿ ಸ್ವಭಾವದಿಂದಲೇ ಹರಿತವಾಗಿರುವ ವಜ್ರಾಯುಧವನ್ನು ಬಹಳ ಹರಿತವಾದದ್ದನ್ನಾಗಿ ಮಾಡುತ್ತಾನೆ ಎಂದು ಅರ್ಥವನ್ನು ವರ್ಣಿಸಿದಾರೆ.

**ಓಜಸಾ, ಮಜ್ಮನಾ, ಶವೋಭಿಃ–ಪರಾಭಿಭವಸಾಮರ್ಥ್ಯೇನ, ಶಾರೀರೇಣ ಬಲೇನ ಸೇನಾಲಕ್ಷಣೈಃ ಬಲೈಃ ।** **ಓಜ**ಶ್ಶಬ್ದವು ಉದಕ ನಾಮುಗಳಲ್ಲಿ (ನಿ. ೨–೨೪) **ಬಲ** ನಾಮುಗಳಲ್ಲಿ (ನಿ. ೩–೯) ಉಕ್ತವಾಗಿದೆ. **ಮಜ್ಮನಾ** ಎಂಬ ಶಬ್ದವು ಬಲನಾಮುಗಳಲ್ಲಿ (ನಿ. ೩–೯) ಪಠಿತವಾಗಿದೆ. **ಶವಸ್** ಎಂಬ ಪದವು **ಉದಕ** ನಾಮುಗಳಲ್ಲಿಯೂ, (ನಿ. ೨–೨೪) **ಬಲ** ನಾಮುಗಳಲ್ಲಿಯೂ (ನಿ. ೩–೯) ಉಕ್ತವಾಗಿದೆ. ಈ ಮೂರು ಪದಗಳೂ ಬಲನಾಮುಗಳಲ್ಲಿ ಉಕ್ತವಾಗಿ ಬಲವೆಂದು ಒಂದೇ ಅರ್ಥವನ್ನು ಬೋಧಿಸುವುದರಿಂದ ಸಾಯಣರು ಬಲದಲ್ಲಿ ವ್ಯತ್ಯಾಸವನ್ನೂ, ಬಲದಲ್ಲಿ ಭೇದವನ್ನೂ ನಿರ್ದೇಶಮಾಡಿದ್ದಾರೆ. ಇದರಿಂದ ಓಜಸ್ಸೆಂದರೆ ಇತರರನ್ನು ತಿರಸ್ಕಾರ ಮಾಡುವ ಸಾಮರ್ಥ್ಯವೆಂದೂ, ಮಜ್ಮನಾ ಎಂದರೆ ಶರೀರದ ಶಕ್ತಿಯೆಂದೂ, ಸೇನೆಯೇ ಮೊದಲಾದ ರಕ್ಷಣೆಗೂ, ವ್ಯವಹಾರಕ್ಕೂ ಉಪಯುಕ್ತವಾಗುವ ಬಾಹ್ಯವಾದ ಶಕ್ತಿಯನ್ನು ಉಂಟುಮಾಡುವ ಸಾಮಗ್ರಿಗಳು ಎಂದೂ ಅರ್ಥವಾಗುತ್ತವೆ. ಇಂದ್ರನು ಈ ಮೂರು ವಿಧವಾದ ಬಲದಿಂದಲೂ ಯುಕ್ತನಾಗಿರುವನು ಎಂದು ವಿವರಿಸಿದೆ.

**ತಷ್ಟಾ ವೃಕ್ಷಮಿವ ವನಿನಃ ನಿವೃಶ್ಚಸಿ—ವೃಕ್ಷಾಣಾಂ ತಕ್ಷಣಸ್ಯ ಸಾಧುಕರ್ತಾ ವನಸಂಬಂಧಿನಃ ವೃಕ್ಷಾನ್ ಸ್ವೋಪಭೋಗಾಯ ಯಥಾ ನಿತರಾಂ ಛಿನತ್ತಿ ।** ಮರವನ್ನು ಕೆತ್ತುವವನು (ಕಾಡಿನಲ್ಲಿರುವ ಮರಗಳನ್ನು) ಕಾಡುಮರಗಳನ್ನೂ ಕೂಡ ತನಗೆ ಉಪಯುಕ್ತವಾಗುವ ವಸ್ತುಗಳನ್ನು ನಿರ್ಮಿಸುವುದಕ್ಕಾಗಿ ಕತ್ತರಿಸುವುದೇ ಮೊದಲಾದ ಕೆಲಸಗಳನ್ನು ಮಾಡುವಹಾಗೆಯೂ, ಪರಶ್ವೇವ ನಿವೃಶ್ಚಸಿ––ಕೊಡಲಿಯಿಂದ ಮರಗಳನ್ನು ಕಡಿದುಹಾಕುವ ಹಾಗೆಯೂ, ಇಂದ್ರನು ತನ್ನ ಮೂರು ವಿಧವಾದ ಸಾಮರ್ಥ್ಯಗಳಿಂದಲೂ ಯಾಗಮಾಡುವವರ ಶತ್ರುಗಳನ್ನು ನಾಶಪಡಿಸುವನೆಂದು (ತಷ್ಟೃವನ್ನು) ಮರವನ್ನು ಕತ್ತರಿಸಿ ಕೆಲಸಮಾಡುವವನ ಕಾರ್ಯವನ್ನು ಹೋಲಿಸಿ ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ದದೃಹಾಣಃ—**ದೃಹ ದೃಹಿ ವೃದ್ಧೌ. ಧಾತು. ಇದಕ್ಕೆ ಲಿಟ್ ಬಂದಾಗ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಅದಕ್ಕೆ ಕಾನಜಾದೇಶ. ಧಾತುವಿಗೆ ದ್ವಿತ್ವ. ಉರದತ್ವ ಬಂದಾಗ ಆದಿಹಲ್‌ಶೇಷ. ಸಂಹಿತಾವಲ್ಲಿ ಛಾಂದಸವಾಗಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಋಕಾರ ನಿಮಿತ್ತವಿರುವುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. **ಚಿತಃ** (ಪಾ. ಸೂ. ೬-೧-೧೬೧) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಜ್ರಂ—**ವಜ ಗತೌ. ಧಾತು. **ಋಜೇಂದ್ರಾಗ್ರವಜ್ರ—**(ಉ. ಸೂ. ೨-೧೮೬) ಎಂಬುದರಿಂದ ರನ್ನಂತ ವಾಗಿ ನಿಪಾತಿತವಾಗಿದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತಿಗ್ಮಂ—**ತಿಜ ನಿಶಾನೇ ಧಾತು. **ಯುಜಿರುಚಿತಿಜಾಂ ಕುಶ್ಚ** (ಉ. ಸೂ. ೧-೧೪೩) ಎಂಬುದರಿಂದ ಮಕ್ ಪ್ರತ್ಯಯ. ಧಾತುವಿನ ಅಂತ್ಯಕ್ಕೆ ಕುತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಅಸನಾಯ—**ಅಸು ಕ್ಷೇಪಣೇ. ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಶ್ಯತ್—**ಶೋ ತನೂಕರಣೇ. ಧಾತು. ದಿವಾದಿ. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಸೂತ್ರದಿಂದ ಶ್ಯನ್ ವಿಕರಣ. **ಓತಃ ಶ್ಯನಿ** (ಪಾ. ಸೂ. ೭-೩-೭೧) ಎಂಬುದರಿಂದ ಶ್ಯನ್ ಪರವಾದಾಗ ಧಾತುವಿನ ಓಕಾರಕ್ಕೆ ಲೋಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅಥವಾ ಲೇಟ್ ಪ್ರಥಮಪುರುಷ ಏಕವಚನದಲ್ಲಿ **ಇತಶ್ಚ ಲೋಪಃ—**(ಪಾ. ಸೂ. ೩-೪-೯೭) ಎಂಬುದರಿಂದ ಇಕಾರ ಲೋಪವಾದಾಗ ಉಕ್ತರೂಪ ಸಿದ್ಧಿಯಾಗುತ್ತದೆ.

**ಅಹಿಹತ್ಯಾಯ—**ಅಹೇಃ ಹತ್ಯಂ ತಸ್ಮೈ. ಹನ ಹಿಂಸಾಗತ್ಯೋಃ ಧಾತು. **ಹನಸ್ತ ಚ** (ಪಾ. ಸೂ. ೩-೧-೧೦೮) ಎಂಬುದರಿಂದ ಕ್ಯಪ್ ಪ್ರತ್ಯಯ. ಧಾತುವಿಗೆ ತಕಾರಾಂತಾದೇಶ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸಂವಿವ್ಯಾನಃ—**ವ್ಯೇಞ್ ತಂತುಸಂತಾನೇ ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ **ಲಿಟಃ ಕಾನಜ್ವಾ** ಸೂತ್ರದಿಂದ ಕಾನಚಾದೇಶ. ಇದು ಕಿತ್ತಾದುದರಿಂದ **ಗ್ರಹಿಜ್ಯಾ ವಯಿ ವ್ಯಧಿ—**(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ವಿವಿ+ಆನ ಎಂದಿರುವಾಗ ಯಣಾದೇಶ. **ಚಿತಃ** (ಪಾ. ಸೂ. ೬-೧-೧೬೧) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ತೆಷ್ಟಾ—**ತಕ್ಷೂ ತನೂಕರಣೇ. ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. **ಸ್ಕೋಃ ಸಂಯೋಗಾದ್ಯೋ-ರಂತೇ ಚ** ಎಂಬುದರಿಂದ ಧಾತುವಿನ ತಕಾರಕ್ಕೆ ಲೋಪ. ಷಕಾರ ನಿಮಿತ್ತವಾಗಿ ಪ್ರತ್ಯಯಕ್ಕೆ ಷ್ಟುತ್ವ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವನಿನಃ—**ವನಮಸ್ಯ ಅಸ್ತಿ ಇತಿ ವನೀ. ತಸ್ಯ. ಮತ್ವರ್ಥದಲ್ಲಿ ಇನಿ ಪ್ರತ್ಯಯ. ಷಷ್ಠೀ ಏಕವಚನಾಂತರೂಪ.

**ವೃಶ್ಚಸಿ**—ಓವ್ರಶ್ಚೂ ಛೇದನೇ. ಧಾತು ಲಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪರಶ್ವಾ**—ಪರಂ ಶೃಣಾತಿ ಇತಿ ಪರಶುಃ. ಶೄ ಹಿಂಸಾಯಾಂ ಧಾತು. **ಆಙ್ ಪರಯೋಃ ಖನಿಶೄಭ್ಯಾಂ ಡಿಚ್ಚ** (ಉ. ಸೂ. ೧-೩೩) ಎಂಬುದರಿಂದ ಪರದಲ್ಲಿರುವ ಶೄ ಧಾತುವಿಗೆ ಕು ಪ್ರತ್ಯಯ. ಅದಕ್ಕೆ ಡಿತ್ವ ವಿಧಾನ ಮಾಡಿರುವುದರಿಂದ ಧಾತುವಿನ ಟಿಗೆ (ಋೂ) ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ಜಸಾದಿಷು ಛಂದಸಿ ವಾ ವಚನಂ** ಎಂಬ ವಚನದಿಂದ ತೃತೀಯಾ ಏಕವಚನ ಪರವಾದಾಗ ನಾಭಾವ ಬರುವುದಿಲ್ಲ. ಯಣಾದೇಶ. **ಉದಾತ್ತಯಣೋ ಹಲ್ ಪೂರ್ವಾತ್** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ತ್ವಂ ವೃಥಾ ನದ್ಯ ಇಂದ್ರ ಸರ್ತವೇಽಚ್ಛಾ ಸಮುದ್ರಮಸೃಜೋ ರಥಾ ಇವ

ವಾಜಯತೋ ರಥಾ ಇವ ।

ಇತ ಊತೀರಯುಂಜತ ಸಮಾನಮರ್ಥಮಕ್ಷಿತಂ ।

ಧೇನೂರಿವ ಮನವೇ ವಿಶ್ವದೋಹಸೋ ಜನಾಯ ವಿಶ್ವದೋಹಸಃ ॥ ೫ ॥

॥ ಪದಪಾಠಃ ॥

ತ್ವಂ । ವೃಥಾ । ನದ್ಯಃ । ಇಂದ್ರ । ಸರ್ತವೇ । ಅಚ್ಛ । ಸಮುದ್ರಂ । ಅಸೃಜಃ । ರಥಾನ್ಽಇವ ।

ವಾಜಽಯತಃ । ರಥಾನ್ಽಇವ ।

ಇತಃ । ಊತೀಃ । ಅಯುಂಜತ । ಸಮಾನಂ । ಅರ್ಥಂ । ಅಕ್ಷಿತಂ ।

ಧೇನೂಃಽಇವ । ಮನವೇ । ವಿಶ್ವಽದೋಹಸಃ । ಜನಾಯ । ವಿಶ್ವಽದೋಹಸಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ವೃಥಾಪ್ರಯತ್ನೇನೈವ ನದ್ಯೋ ನದೀಃ ಸಮುದ್ರಮಚ್ಛಾಭಿಮುಖ್ಯೇನ ಸರ್ತವೇ ಪ್ರಾಪ್ತುಮಸೃಜಃ । ಮೇಘಂ ನಿರ್ಭಿದ್ಯೋತ್ಪಾದಿತವಾನಸಿ । ತತ್ರ ದೃಷ್ಟಾಂತಃ ರಥಾನಿವ । ಯಥಾ ತ್ವಂ ರಥಾನಸ್ಮದ್ಯಾಗಂ ಪ್ರತ್ಯಚ್ಛ ಸರ್ತವ ಅಭಿಮುಖೇನ ಪ್ರಾಪ್ತುಮಸೃಜಃ ಸೃಷ್ಟವಾನಸಿ ತದ್ವತ್ । ಕಿಂಚ

ವಾಜಯತೋ ರಥಾನಿವ । ಸಂಗ್ರಾಮಮನ್ನಂ ವೇಚ್ಛಂತೋ ರಾಜಾದಯೋ ರಥಾನಿವ । ತೇ ಯಥಾ ಸಂಗ್ರಾಮಂ ಪ್ರತ್ಯೋಷಧ್ಯಾದಿಕಂ ವಾತಿಸರ್ತುಂ ರಥಾನ್ ಸೃಜಂತಿ ತದ್ವತ್ ॥ ಕ್ಯಜಂತಾತ್ ಶತುರನುಮ ಇತಿ ವಿಭಕ್ತೇರುದಾತ್ತತ್ವಂ ॥ ಕಿಂಚೇತೋಽಸ್ಮತ್ಸಂನಿಧಿದೇಶಂ ॥ ದ್ವಿತೀಯಾರ್ಥೇ ತಸಿಲ್ ॥ ಅಸ್ಮಾನ್ ಪ್ರತ್ಯೇತೀರೂತ್ಯೋ ಗಮನವತ್ಯೋ ರಕ್ಷಣವತ್ಯೋ ವಾ ನದ್ಯಃ ಸಮಾನಮರ್ಥಂ ಸಮಾನಪ್ರಯೋಜನವದಕ್ಷಿತಮುದಕಮಯುಂಜತ। ಯೋಜಿತವತ್ಯಃ । ತ್ವತ್ಪ್ರಸಾದಾದಿತಿ ಭಾವಃ ॥ ಅರ್ಥಶಬ್ದ ಉದಕವಿಶೇಷಣಃ ಸನ್ನಪುಂಸಕಲಿಂಗಃ । ಅಕ್ಷಿತಮಿತ್ಯುದಕನಾಮ ಅಕ್ಷಿತಂ ಬರ್ಹಿರಿತಿ ತನ್ನಾಮಸು ಪಾಠಾತ್ । ತತ್ರ ದೃಷ್ಟಾಂತಃ । ಮನವೇ ಮನೋರರ್ಥಾಯ ಧೇನೂರಿವ ಧೇನವೋ ಯಥಾ ವಿಶ್ವದೋಹಸಃ ಸರ್ವಾರ್ಥಂ ದೋಗ್ಧ್ರ್ಯೋಽಭವನ್ । ಯಥಾ ವಾ ಜನಾಯ ಯಸ್ಮೈ ಕಸ್ಮೈ ಚಿತ್ಸಮರ್ಥಾಯ ತದರ್ಥಂ ವಿಶ್ವದೋಹಸೋ ಭವಂತಿ ಸರ್ವಕ್ಷೀರಪ್ರದಾ ಭವಂತಿ । ಯದ್ವಾ । ಜನಾಯ ಸರ್ವಜನಾರ್ಥಂ ಸಸ್ಯಾದೀನಭಿಲಕ್ಷ್ಯ ನದ್ಯೋ ವಿಶ್ವದೋಹಸಃ ಸಂಪೂರ್ಣದೋಗ್ಧ್ರ್ಯೋ ಭವಂತಿ । ಸರ್ವತ್ರ ಪ್ರವಹಂತಿ । ಅತ್ರ ನದ್ಯಃ ಪ್ರೀಣನಾದ್ದೋಹಸ ಇತ್ಯುಪಚರ್ಯತೇ । ಈದೃಗ್ಜಗದುಪಕಾರಿವೃಷ್ಟಿಪ್ರದ ಇತೀಂದ್ರಸ್ಯೈವ ಸ್ತುತಿಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ವೃಥಾ**—ಪ್ರಯತ್ನವೇ ಇಲ್ಲದೇ । **ನದ್ಯಃ**—ನದಿಗಳನ್ನು । **ಸಮುದ್ರಂ ಅಚ್ಛ**—ಸಮುದ್ರಾಭಿಮುಖವಾಗಿ । **ಸರ್ತವೇ**—ಪ್ರವಹಿಸುವುದಕ್ಕೋಸ್ಕರ । **ರಥಾನ್ ಇವ**—(ನಮ್ಮ ಯಾಗಾಭಿಮುಖವಾಗಿ ಬರುವುದಕ್ಕೆ) ರಥಗಳನ್ನು ಸೃಜಿಸುವಂತೆಯೂ । **ಕಿಂಚ**—ಮತ್ತು । **ವಾಜಯತಃ**—ಯುದ್ಧ ಅಥವಾ ಅನ್ನಾಭಿಲಾಷಿಗಳಾದ (ರಾಜಾದಿಗಳು)। **ರಥಾನ್ ಇವ**—ರಥಗಳನ್ನು ಸೃಜಿಸುವಂತೆಯೂ। **ಅಸೃಜಃ**—(ಮೇಘಗಳನ್ನು ಭೇದಿಸಿ) ಸೃಜಿಸಿರುವೆ । **(ಕಿಂಚ**—ಮತ್ತೂ**)** । **ಇತಃ**—ಈ ಕಡೆಗೆ (ನಮಗೆ ಸಮೀಪವಾದ ಪ್ರದೇಶಕ್ಕೆ) । **ಊತೀಃ**—ಪ್ರವಹಿಸುವ (ನಮ್ಮ ರಕ್ಷಣಯುಕ್ತವಾದ ನದಿಗಳು) । **ಸಮಾನಂ ಅರ್ಥಂ**—ಸಮಾನ ಪ್ರಯೋಜನವುಳ್ಳ । **ಅಕ್ಷಿತಂ**—ಉದಕವನ್ನು । **ಮನವೇ**—ಮನುವಿಗೋಸ್ಕರ । **ಧೇನೂರಿವ**—**ವಿಶ್ವದೋಹಸಃ** – ಗೋವುಗಳು ಸಮಸ್ತ ಪದಾರ್ಥಗಳನ್ನೂ ದೋಹನ ಮಾಡಿದಂತೆ । **ಜನಾಯ**—ಯಾವನೋ ಪುರುಷನಿಗೆ । **(ಧೇನೂರಿವ ವಿಶ್ವದೋಹಸಃ)**—ಗೋವುಗಳು (ಕ್ಷೀರವನ್ನು) ಸಂಪೂರ್ಣವಾಗಿ ದೋಹನ ಮಾಡುವಂತೆ) । ಅಥವಾ । **ಜನಾಯ**—ಜನರಿಗೋಸ್ಕರ । **ವಿಶ್ವದೋಹಸಃ (ಇವ)**—(ನದಿಗಳು) ಪ್ರವಹಿಸಿ ಸಸ್ಯಾದಿಗಳನ್ನು ಬೆಳೆಯುವಂತೆ ಮಾಡಿ ಇಷ್ಟಫಲಗಳನ್ನು ಉಂಟುಮಾಡುವಂತೆ । **ಅಯುಂಜತ**—(ನಿನ್ನ ಪ್ರಸಾದದಿಂದ) ಯೋಜನೆ ಮಾಡಿವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಿರಾಯಾಸವಾಗಿ, (ನಿನ್ನನ್ನು ಯಾಗಶಾಲೆಗೆ ಕರತರುವುದಕ್ಕೋಸ್ಕರ) ರಥಗಳನ್ನು ಸೃಜಿಸುವಂತೆ (ಅಥವಾ), ಯುದ್ಧಾ (ಅನ್ನಾ) ಭಿಲಾಷಿಗಳು ರಥಗಳನ್ನು (ಸೃಜಿಸು)ವಂತೆ, ನದಿಗಳನ್ನು ಸಮುದ್ರಾಭಿಮುಖವಾಗಿ ಹರಿಯುವುದಕ್ಕೋಸ್ಕರ, (ಮೇಘಗಳನ್ನು ಭೇದಿಸಿ) ಸೃಜಿಸಿರುವೆ ; (ಮತ್ತು) (ನಮಗೆ ಸಮೀಪವಾಗಿ) ಈ ಕಡೆ ಪ್ರವಹಿಸುವ ನದಿಗಳೂ (ಕೂಡ), ಒಂದೇ ಉದ್ದೇಶದಿಂದ, ಮನುವಿಗೆ ಗೋವುಗಳು ಸಮಸ್ತ ಪದಾರ್ಥಗಳನ್ನೂ

ದೋಹನ ಮಾಡಿದಂತೆ ಅಥವಾ ಮನುಷ್ಯರಿಗೆ ಎಲ್ಲಾ ಪದಾರ್ಥಗಳನ್ನೂ (ಗೋವುಗಳು ಅಥವಾ ನದಿಗಳು) ದೋಹನ ಮಾಡಿದಂತೆ, (ತಮ್ಮ) ನೀರನ್ನು (ಒಟ್ಟಾಗಿ) ಯೋಜನೆಮಾಡಿವೆ.

## English Translation.

You have without effort created the rivers (that are) to flow to the sea, like chariots (bearing you to sacrifices), as those (construct) chariots who are desirous of (going to) battle: (the streams) flowing hither have gathered together their water for a common purpose, like the cows that yielded all things to Manu; that yield all things to man.

॥ ವಿಶೇಷವಿಷಯಗಳು ॥

**ರಥಾನಿವ ವಾಜಯತೋ ರಥಾನಿವ—ತತ್ರ ದೃಷ್ಟಾಂತಃ ಯಥಾ ತ್ವಂ ರಥಾನ್ ಅಸ್ಮದ್ಯಾಗಂ ಪ್ರತಿ ಅಭಿಮುಖ್ಯೇನ ಪ್ರಾಪ್ತುಂ ಸೃಷ್ಟವಾನಸಿ ತದ್ವತ್ । ಸಂಗ್ರಾಮಮನ್ನಂ ವಾ ಇಚ್ಛಂತೋ ರಾಜಾದಯಃ ರಥಾನಿವ । ತೇ ಯಥಾ ಸಂಗ್ರಾಮಂ ಪ್ರತಿ ಓಷಧ್ಯಾದಿಕಂ ವಾ ಅತಿಸರ್ತುಂ ರಥಾನ್ ಸೃಜಂತಿ ತದ್ವತ್ ।** ಇಂದ್ರನು ಯಾವ ಪ್ರಯತ್ನವನ್ನೂ ಮಾಡದೆ ನದಿಗಳು ತಮ್ಮ ಉದಕವನ್ನು ಸಮುದ್ರಕ್ಕೆ ಸೇರಿಸುವಂತೆ ಮೇಘವನ್ನು ಭೇದಿಸಿ ನದಿಗಳಲ್ಲಿ ಉದಕವು (ಪ್ರಭೂತವಾಗಿ) ಬಹಳವಾಗಿ ಉಂಟಾಗುವಂತೆ ಮಾಡಿರುತ್ತಾನೆ. ಈ ವಿಷಯದಲ್ಲಿ ಎರಡು ಉಪಮಾನವಾಕ್ಯಗಳನ್ನು ಹೇಳಿದೆ. ಯಜ್ಞಮಾಡುವವರ ಯಾಗಕ್ಕೆ ಬರುವುದಕ್ಕಾಗಿ ರಥವನ್ನು ನಿರ್ಮಿಸುವ ಹಾಗೆ ಎಂದು ಮೊದಲನೆಯ ವಾಕ್ಯದ ಅರ್ಥ. ಎರಡನೆಯ ವಾಕ್ಯದಲ್ಲಿ ರಾಜರೇ ಮೊದಲಾದವರು ಯುದ್ಧ ಮಾಡಲು ಇಚ್ಛೆಯಿಂದಲಾಗಲಿ, ವ್ರೀಹ್ಯಾದಿಗಳನ್ನು ಶೇಖರಿಸುವುದಕ್ಕಾಗಲಿ ರಥಗಳನ್ನು ಸಿದ್ಧಮಾಡಿ ಅವುಗಳಿಂದ ವೇಗವಾಗಿ ಆಯಾಯ ಪ್ರದೇಶಗಳಲ್ಲಿ ತಮ್ಮ ರಥವು ಸಂಚರಿಸುವಂತೆ ಮಾಡುವರು ಎಂದೂ ಅರ್ಥ ಮಾಡಿದೆ.

**ವಾಜಃ** ಶಬ್ದವು **ಅನ್ನ** ನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. **ಸಂಗ್ರಾಮ** ನಾಮಗಳಲ್ಲಿಯೂ (ನಿ.೩-೯) ಪಠಿತವಾಗಿದೆ. ಋಭುರ್ವಿಭ್ವಾ ವಾಜ ಇತಿ (ನಿ ೧೧-೧೬) ಅಂಕಿತನಾಮವಾಗಿಯೂ ಹೇಳಲ್ಪಟ್ಟಿದೆ.

**ಪಾವಕಾನಸ್ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ ವಷ್ಟು ಧಿಯಾ ವಸುಃ ।**
(ಋ. ಸಂ. ೧-೩-೧೦)

ಈ ಋಕ್ಕಿನಲ್ಲಿ **ಅನ್ನೇನ ಹವಿಷಾ, ಉದಕೇನ ವಾ ತದ್ವತೀ ।** ಎಂದು ಅರ್ಥಮಾಡಿರುವುದರಿಂದ **ಅನ್ನ ಉದಕ** ಎಂಬ ಅರ್ಥಗಳಲ್ಲಿ ಪ್ರಯುಕ್ತವಾಗಿದೆ. ಸಾಯಣರೂ ಇಲ್ಲಿ ವಾಜಯತಃ ಎಂಬ ಪದಕ್ಕೆ ಯುದ್ಧ ಅಥವಾ ಅನ್ನ ಎಂದು ಅರ್ಥವನ್ನು ವಿವರಿಸಿದ್ದಾರೆ.

**ಊತೀಃ ಅಕ್ಷಿತಂ ಅಯುಂಜತ—ಗಮನವತ್ಯೋ ರಕ್ಷಣವತ್ಯೋ ವಾ ನದ್ಯಃ ಉದಕಂ ಯೋಜಿತವತ್ಯಃ । ಅಕ್ಷಿತ** ಶಬ್ದವು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿದೆ. **ಊತಿ** ಶಬ್ದಕ್ಕೆ

**ಆ ತ್ವಾ ರಥಂ ಯಥೋತಯೇ ಸುಮ್ನಾಯ ವರ್ತಯಾಮಸಿ ।**
**ತುವಿಕೂರ್ಮಿಮೃತೀಷಹಮಿಂದ್ರ ಶವಿಷ್ಠ ಸತ್ಪತೇ ।**

(ಋ. ಸಂ. ೮-೬೮-೧)

ಎಂಬ ಋಕ್ಕಿನಲ್ಲಿ **ಊತಿರವನಾತ್** (ನಿ. ೫-೩) ರಕ್ಷಣೆ ಎಂದು ಅರ್ಥ ಮಾಡಿದೆ. ಇಲ್ಲಿ ಪ್ರವಹಿಸುವ ಅಥವಾ ರಕ್ಷಿಸುವ ಎಂದು ಅರ್ಥವನ್ನು ಮಾಡಿ, ನದಿಗಳಿಗೆ ವಿಶೇಷಣವಾಗಿ ಪ್ರಯುಕ್ತವಾಗಿದೆ-

ನದಿಗಳು ಯಜ್ಞಶೀಲರಾದವರಿಗೆ ಉಪಕಾರವಾಗುವಂತೆ ಉದಕವನ್ನು ಯೋಜನೆಮಾಡಿ ರಕ್ಷಿಸುವುದು ಇಂದ್ರನ ಅನುಗ್ರಹದಿಂದಲೇ ಆಗಿರುತ್ತದೆ ಎಂದು ವರ್ಣಿಸಿದೆ.

**ಮನವೇ ಧೇನೂರಿವ ವಿಶ್ವದೋಹಸಃ, ಜನಾಯ ವಿಶ್ವದೋಹಸಃ** । ಎಂಬ ಎರಡು ವಾಕ್ಯಗಳೂ ದೃಷ್ಟಾಂತದ ರೀತಿಯಿಂದ ಉಕ್ತವಾಗಿವೆ. ಮನು ಎಂಬ ರಾಜನಿಗೆ ಬೇಕಾದ ವಸ್ತುಗಳೆಲ್ಲವನ್ನೂ ಧೇನುಗಳು ಒದಗಿಸಿಕೊಟ್ಟಂತೆ ನದಿಗಳು ಉಪಕಾರಗಳಾಗಿವೆ ಎಂದು ಹೋಲಿಸಿದೆ. ಮತ್ತು ನದಿಗಳು ಎಲ್ಲಾ ಜನರಿಗೂ ಅನುಕೂಲವಾಗುವಂತೆ ಸಸ್ಯಾದಿಗಳ ಬೆಳವಳಿಗೆಗೆ ಉಪಯುಕ್ತವಾಗುವರೀತಿಯಲ್ಲಿ ಪ್ರವಹಿಸಿ ಅನೇಕ ಉಪಕಾರಗಳನ್ನು ಮಾಡುವುವು ಎಂದೂ ಹೋಲಿಸಿ ಈ ರೀತಿಯಾದ ಉಪಕಾರವನ್ನು ನದಿಗಳು ಆಚರಿಸುವಂತೆ ವೃಷ್ಟಿಯನ್ನು ಇಂದ್ರನು ಉಂಟುಮಾಡುವವನೆಂದು ಇಂದ್ರನನ್ನು ಸ್ತುತಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸರ್ತವೇ**—ಸೃ ಗತೌ. ಧಾತು. ತುಮನರ್ಥ ತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತು**—ಎಂಬುದರಿಂದ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಕೃನ್ಮೇಜಂತಃ** ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ಅಚ್ಛ**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅಸೃಜಃ**—ಸೃಜ ವಿಸರ್ಗೇ. ಧಾತು. ತುದಾದಿ. ಲಙ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ವಾಜಯುತಃ**—ವಾಜಮಾತ್ಮನಃ ಇಚ್ಛಂತಿ ವಾಜಯಂತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಆತ್ಮೇಚ್ಛೆಯಲ್ಲಿ ಕ್ಯಚ್. **ನ ಛಂದಸ್ಯಪುತ್ರಸ್ಯ ಚ** (ಪಾ. ಸೂ. ೭-೪-೩೫) ಎಂಬುದರಿಂದ ಈತ್ವಾದಿಗಳು ಬರುವುದಿಲ್ಲ. ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ದ್ವಿತೀಯಾ ಬಹುವಚನಾಂತರೂಪ. ನುಮ್ ರಹಿತವಾದ ಶತೃ ಪ್ರತ್ಯಯದ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಊತೀಃ**—**ಊತಿಯೂತಿಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತಕ್ತಿನ್ನಂತದಿಂದ ನಿಪಾತಿತವಾಗಿದೆ. ಬಹುವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವ ಸವರ್ಣದೀರ್ಘ ಬರುತ್ತದೆ.

**ಅಯುಂಜತ**—ಯುಜಿರ್ ಯೋಗೇ ಧಾತು. ರುಧಾದಿ. ಲಙ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅರ್ಥಂ**—ಋ ಗತೌ ಧಾತು. **ಉಷಿಕುಷಿ ಗರ್ತಿಭ್ಯಸ್ಥನ್** (ಉ. ಸೂ. ೨-೧೬೧) ಎಂಬುದರಿಂದ ಥನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇದು ಪುಲ್ಲಿಂಗವಾದರೂ ಇಲ್ಲಿ ಉಕ್ಷಿತಮ್ ಎಂಬ ನಪುಂಸಕ ಶಬ್ದಕ್ಕೆ ವಿಶೇಷಣವಾದುದರಿಂದ ನಪುಂಸಕಲಿಂಗ ವಾಗುತ್ತದೆ.

**ವಿಶ್ವದೋಹಸಃ**—ವಿಶ್ವಂ ದೋಹಃ ಯಾಸಾಂ ತಾಃ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಇಮಾಂ ತೇ ವಾಚಂ ವಸೂಯಂತ ಆಯವೋ ರಥಂ ನ ಧೀರಃ ಸ್ವಪಾ
ಅತಕ್ಷಿಷುಃ ಸುಮ್ನಾಯ ತ್ವಾಮತಕ್ಷಿಷುಃ ।
ಶುಂಭಂತೋ ಜೇನ್ಯಂ ಯಥಾ ವಾಜೇಷು ವಿಪ್ರ ವಾಜಿನಂ ।
ಅತ್ಯಮಿವ ಶವಸೇ ಸಾತಯೇ ಧನಾ ವಿಶ್ವಾ ಧನಾನಿ ಸಾತಯೇ ॥ ೬ ॥

॥ ಪದಪಾಠಃ ॥

ಇಮಾಂ । ತೇ । ವಾಚಂ । ವಸುಽಯಂತಃ । ಆಯವಃ । ರಥಂ । ನ । ಧೀರಃ । ಸುಽಅಪಾಃ । ಅತಕ್ಷಿಷುಃ ।
ಸುಮ್ನಾಯ । ತ್ವಾಂ । ಅತಕ್ಷಿಷುಃ ।
ಶುಂಭಂತಃ । ಜೇನ್ಯಂ । ಯಥಾ । ವಾಜೇಷು । ವಿಪ್ರ । ವಾಜಿನಂ ।
ಅತ್ಯಂಽಇವ । ಶವಸೇ । ಸಾತಯೇ । ಧನಾ । ವಿಶ್ವಾ । ಧನಾನಿ । ಸಾತಯೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದರ್ಥಂ ವಸೂಯಂತೋ ಧನಮಾತ್ಮನ ಇಚ್ಛಂತ ಆಯವೋ ದಾತ್ತವ್ಯಹವೀರೂಪಾನ್ನವಂತ ಋತ್ವಿಜಃ । ಆಯವ ಇತಿ ಮನುಷ್ಯನಾಮ ಆಯವೋಽನವ ಇತಿ ತನ್ನಾಮಸು ಪಾಠಾತ್ । ತ ಇಮಾಂ ಕ್ರಿಯಮಾಣಾಂ ಸ್ತುತಿರೂಪಾಂ ವಾಚಮತಕ್ಷಿಷುಃ । ಸಂಪಾದಿತವಂತಃ । ಸ್ವಪಾಃ ಶೋಭನಕರ್ಮವಾನ್ ಕುಶಲೀ ॥ ಬಹುವ್ರೀಹೌ ಸೋರ್ಮನಸೀ ಇತ್ಯುತ್ತರಪದಾದ್ಯುದಾತ್ತತ್ವಂ ॥ ಧೀರೋ ಧೀಮಾನ್ ರಥಂ ನ ರಥಮಿವ । ತಂ ಯಥಾ ಪ್ರಯತ್ನೇನ ಸಾಧು ಕರೋತಿ ತದ್ವತ್ । ಏವಂ ಕೃತ್ವಾ ತ್ವಾಂ ಸುಮ್ನಾಯ ಸುಖಾಯಾತಕ್ಷಿಷುಃ । ಅನುಕೂಲಮುತ್ಪಾದಯಂತಿ । ಸುಮ್ನಮಿತಿ ಸುಖ ನಾಮ । ಸುಮ್ನಂ ಸುಗ್ಮ್ಯಮಿತಿ ತನ್ನಾಮಸು ಪಾಠಾತ್ । ಕಿಂಚ ಹೇ ವಿಪ್ರ ಮೇಧಾವಿನ್ನಿಂದ್ರ ವಾಜೇಷು ಸಂಗ್ರಾಮೇಷು ವಾಜಿನಂ ವೇಗವಂತಂ ತ್ವಾಂ ಶುಂಭಂತೋ ಗುಣೈರ್ದೀಪಯಂತೋಽತಕ್ಷಿಷುಃ । ಸ್ತುತ್ಯಾ ಪ್ರೀಣಯಂತಿ । ತತ್ರ ದೃಷ್ಟಾಂತಃ । ಜೇನ್ಯಂ ಯಥಾ । ಜಯಶೀಲಂ ಶೂರಂ ಯಥಾ ಭಟಾಃ ಸ್ತುವಂತಿ ತದ್ವತ್ । ಯದ್ವಾ । ಜೇನ್ಯಂ ಜಯಶೀಲಂ ವಾಜಿನಂ ವೇಗವಂತಮಶ್ವಂ ವಾಜೇಷು ಸಂಗ್ರಾಮೇಷು ಯಥೋತ್ಸಾಹಯಂತಿ ತದ್ವತ್ । ಕಿಂಚ ಶವಸೇ ಬಲಾಯ ಧನಾ ಧನಾನಾಂ ಸಾತಯೇ ಲಾಭಾಯ ಚ ಸ್ತುಮ ಇತಿ ಶೇಷಃ ॥ ಊತಿಯೂತಿಜೂತಿಸಾತೀತ್ಯಾದಿನಾ ಕ್ತಿನ ಉದಾತ್ತತ್ವಂ ॥ ನ ಕೇವಲಂ ಧನಮಾತ್ರಂ ಕಿಂತು ವಿಶ್ವಾ ಧನಾನಿ ಸಾತಯೇ ಕೃತ್ಸ್ನಾನಿ ಪ್ರೀಣನಸಾಧನಾನಿ ಗವಾದಿಧನಾನಿ ॥ ಷಷ್ಠ್ಯರ್ಥೇ ದ್ವಿತೀಯಾ ॥ ತೇಷಾಂ ಲಾಭಾಯ । ತತ್ರ ದೃಷ್ಟಾಂತಃ । ಧನಾ ಧನೇ ಸಂಗ್ರಾಮೇ ಶವಸೇ ವೈರಿಜಯಸಾಧನಬಲಾಯ ಸಾತಯೇ ತೇಷಾಮೇವ ಧನಾನಾಂ ಪ್ರಾಪ್ತಯೇ ಚಾತ್ಯಮಿವ ಸತತಗಾಮಿನಮಶ್ವಮಿವ । ತಂ ಯಥಾ ಸ್ತುವಂತಿ ತದ್ವತ್ ॥

॥ ಪ್ರತಿಪದಾರ್ಥ ॥

(**ಹೇ ಇಂದ್ರ**—ಎಲೈ ಇಂದ್ರನೇ) । **ವಸೂಯಂತಃ**—ಧನಕಾಮರೂ. । **ಆಯವಃ**—(ದಾತವ್ಯವಾದ ಹವೀರೂಪ ಅನ್ನ ಯುಕ್ತರೂ ಆದ) ಋತ್ವಿಜರು । **ಸ್ವಪಾಃ**—ಕುಶಲನೂ । **ಧೀರಃ**—ಧೀರನೂ (ಆದವನು) । **ರಥಂ ನ**—ರಥವನ್ನು ಹೇಗೆ (ಪ್ರಯತ್ನದಿಂದ ಸರಿಪಡಿಸಿಕೊಳ್ಳುತ್ತಾನೆಯೋ) ಹಾಗೆ । **ತೇ**—ನಿನಗೋಸ್ಕರ । **ಇಮಾಂ**—ಈ (ಸ್ತುತಿರೂಪವಾದ) । **ವಾಚಂ**—ವಾಕ್ಯವನ್ನು । **ಅತಕ್ಷಿಷುಃ**—ಸಂಪಾದಿಸಿದಾರೆ (ಸಂಪಾದಿಸಿ) । **ತ್ವಾಂ**—ನಿನ್ನನ್ನು । **ಸುಮ್ನಾಯ**—ಸುಖಕ್ಕೋಸ್ಕರ । **ಅತಕ್ಷಿಷುಃ**—(ಅನುಕೂಲನನ್ನಾಗಿ) ಮಾಡಿಕೊಂಡಿದಾರೆ । (**ಹೇ**) **ವಿಪ್ರ**—ಮೇಧಾವಿಯಾದ ಎಲೈ ಇಂದ್ರನೇ । **ವಾಜೇಷು**—ಸಂಗ್ರಾಮಗಳಲ್ಲಿ । **ವಾಜಿನಂ** – ವೇಗಶಾಲಿಯಾದ । **ಶುಂಭಂತಃ**—(ನಿನ್ನಲ್ಲಿ ಗುಣಗಳಿಂದ) ಮಹತ್ವಾರೋಪಮಾಡಿದವರಾಗಿ । (**ಸಂಗ್ರಾಮೇಷು**—ಯುದ್ಧಗಳಲ್ಲಿ) । **ಜೇನ್ಯಂ ಯಥಾ**—ಜಯಶೀಲನಾದವನನ್ನು (ಭಟಾದಿಗಳು ಸ್ತುತಿಸುವಂತೆ) ಅಥವಾ (ಜಯಶೀಲವಾದ ಮತ್ತು ವೇಗಶಾಲಿಯಾದ ಅಶ್ವವನ್ನು ಯುದ್ಧ ಭೂಮಿಯಲ್ಲಿ ಪ್ರೋತ್ಸಾಹಿಸುವಂತೆ) **ಅತಕ್ಷಿಷುಃ**—(ಸ್ತುತಿವಾಕ್ಯಗಳಿಂದ) ಪ್ರೀತಿಪಡಿಸುತ್ತಾರೆ । (**ಕಿಂಚ**—ಮತ್ತು) । **ಶವಸೇ**—ಬಲಕ್ಕೋಸ್ಕರಲೂ । **ಧನಾ**—ಧನಗಳ । **ಸಾತಯೇ**—ಪ್ರಾಪ್ತಿಗೋಸ್ಕರಲೂ (ಮತ್ತು) । **ವಿಶ್ವಾ ಧನಾನಿ**—ಗವಾದಿ ಧನಗಳ । **ಸಾತಯೇ**— ಪ್ರಾಪ್ತಿಗೋಸ್ಕರಲೂ । **ಅತ್ಯಂ ಇವ**—(ವೈರಿಜಯಸಾಧನವಾದ ಬಲಕ್ಕೋಸ್ಕರ) ಉತ್ತಮಾಶ್ವವನ್ನು (ಸುತ್ತಿಸುವಂತೆ ನಿನ್ನನ್ನು ಸ್ತುತಿಸುತ್ತೇವೆ).

॥ ಭಾವಾರ್ಥ ॥

ಐಶ್ವರ್ಯಾಪೇಕ್ಷಿಗಳೂ, (ನಿನಗೋಸ್ಕರ ಸಿದ್ಧಮಾಡಿರುವ ಹವೀರೂಪಾನ್ನಯುಕ್ತರೂ ಆದ) ಮನುಷ್ಯರು, ಕುಶಲನೂ, ಧೀರನೂ ಆದವನು ರಥವನ್ನು (ಸಿದ್ಧಪಡಿಸುವಂತೆ ನಿನ್ನ ಸ್ತುತಿರೂಪವಾದ) ಈ ವಾಕ್ಯವನ್ನು ಸಂಪಾದಿಸಿದ್ದಾರೆ ; ತಮ್ಮ ಸುಖಕ್ಕೋಸ್ಕರ ನಿನ್ನನ್ನು ಅನುಕೂಲ ಪಡಿಸಿಕೊಂಡಿದ್ದಾರೆ ; ಜ್ಞಾನಿಯಾದ ಎಲೈ ಇಂದ್ರನೇ, ಸಂಗ್ರಾಮದಲ್ಲಿ ವೇಗಶಾಲಿಯಾದ ನಿನ್ನನ್ನು (ಸ್ತುತಿವಾಕ್ಯಗಳಿಂದ) ಪ್ರೋತ್ಸಾಹಿಸುತ್ತಾ, (ಯುದ್ಧದಲ್ಲಿ) ಜಯಶಾಲಿಯಾದವನನ್ನು (ಹೇಗೆ ಸ್ತುತಿಸುತ್ತಾರೋ) ಹಾಗೆ, ಸ್ತುತಿಸುತ್ತಾರೆ. (ನಾವೂ), ಬಲ, ಐಶ್ವರ್ಯ ಮತ್ತು ಇತರ ಎಲ್ಲಾ ವಿಧವಾದ ಸಂಪತ್ತು, ಇವುಗಳಿಗೋಸ್ಕರ, (ಯುದ್ಧದಲ್ಲಿ ವೈರಿಜಯಸಾಧನೆಗಾಗಿ) ಉತ್ತಮಾಶ್ವವನ್ನು (ಸ್ತುತಿಸುವಂತೆ) ನಿನ್ನನ್ನು ಸ್ತುತಿಸುತ್ತೇವೆ.

English Translation.

Men who are desirous of wealth have recited this your praise, as a resolute and provident man (prepares) a chariot (for a journey): they have propitiated you for their good: glorifying you, sage Indra, as impetuous in conficts, they have praised you (as men praise) a conqueror. We praise you for (the acquirement of) strength, wealth, and every kind of affluence; as (they commend) a courser (for his good qualities) in battle.

॥ ವಿಶೇಷವಿಷಯಗಳು ॥

**ವಸೂಯಂತಃ ಆಯವಃ—ಧನಮಾತ್ಮನ ಇಚ್ಛಂತಃ ದಾತವ್ಯಹವೀರೂಪಾನ್ನವಂತಃ ಋತ್ವಿಜಃ ।** ಆಯವಃ ಎಂಬ ಪದವು ಮನುಷ್ಯನಾಮಗಳಲ್ಲಿ (ನಿ. ೩-೮) ಉಕ್ತವಾಗಿದೆ. ಯಜ್ಞದಲ್ಲಿ ದೇವತೆಗಳ ಉದ್ದೇಶದಿಂದ ಹೋಮವನ್ನು ಅರ್ಪಿಸಲು ಹವಿಸ್ಸಿನ ರೂಪವಾದ ಅನ್ನವನ್ನು ಹೊಂದಿರುವ ಋತ್ವಿಜರು ಎಂದು ಅರ್ಥವನ್ನು ಮಾಡಿದೆ. ಮತ್ತು ಇವರು ತಮಗೆ ಧನವು ದೊರೆಯಬೇಕೆಂಬ ಇಚ್ಛೆಯಿಂದ ಇಂದ್ರನನ್ನು ಈ ಋಕ್ಕುಗಳಿಂದ ಸ್ತುತಿ ಮಾಡುವರೆಂದೂ ವರ್ಣಿಸಿದೆ.

**ಸ್ವಪಾಃ ಧೀರಃ ರಥಂ ನ—ಶೋಭನಕರ್ಮವಾನ್ ಕುಶಲೀ ಧೀಮಾನ್ ರಥಮಿವ । ತಂ ಯಥಾ ಪ್ರಯತ್ನೇನ ಸಾಧುಕರೋತಿ । ತದ್ವತ್ । ಸ್ವಪಾಃ** ಎಂಬ ಪದವು,

**ಆ ನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹ ಚೇತಯಂತೀ ।**
**ತಿಸ್ರೋ ದೇವೀರ್ಬರ್ಹಿರೇದಂ ಸ್ಯೋನಂ ಸರಸ್ವತೀ ಸ್ವಪಸಃ ಸದಂತು ॥**
(ಋ. ಸಂ. ೧೦-೧೧೦-೮)

ಎಂಬಋಕ್ಕಿನಲ್ಲಿ **ಸುಕರ್ಮಾಣಃ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ಚೆನ್ನಾಗಿ ಕೆಲಸವನ್ನು ಮಾಡುವವನಾಗಿಯೂ ಬುದ್ಧಿವಂತನಾಗಿಯೂ ಇರುವವನು ಯಾವ ಕಾರ್ಯಕ್ಕೂ ಉಪಯೋಗವಾಗದಿರುವ ರಥವನ್ನು ತನ್ನ ಪ್ರಯತ್ನದಿಂದ ಎಲ್ಲಾ ಕಾರ್ಯಗಳಿಗೂ ಅನುಕೂಲವಾಗುವ ರೀತಿಯಿಂದ

ಇರುವಂತೆ ಮಾಡಿಕೊಳ್ಳುವನು ಎಂದು ಇಂದ್ರನನ್ನು ಋತ್ವಿಜರು ತಮಗೆ ಅಭಿಮುಖನನ್ನಾಗಿ ಮಾಡಿಕೊಳ್ಳುವ ವಿಷಯದಲ್ಲಿ ಹೋಲಿಸಿದೆ.

**ಸುಮ್ನಾಯ—ಸುಖಾಯ. ಸುಮ್ನ** ಪದವು **ಶಂಬಾತಾ ಇತ್ಯಾದಿ** ಇಪ್ಪತ್ತು ಸುಖನಾಮಗಳಲ್ಲಿ (ನಿ. ೩-೧೬) ಪಠಿತವಾಗಿದೆ ಋತ್ವಿಜರು ತಮಗೆ ಇಂದ್ರನು ಸುಖವನ್ನು ಉಂಟುಮಾಡುವುದಕ್ಕಾಗಿ ಇಂದ್ರನನ್ನು ಸ್ತುತಿಮಾಡುತ್ತಾರೆ ಎಂದು ಅರ್ಥ.

**ವಿಪ್ರ—ಮೇಧಾವಿನ್ ಇಂದ್ರ. ವಿಪ್ರ** ಶಬ್ದವು ಮೇಧಾವಿನಾಮಗಳಲ್ಲಿ(ನಿ. ೩-೧೯) ಉಕ್ತವಾಗಿದೆ. ಇಂದ್ರನನ್ನು ವಿಪ್ರ ಶಬ್ದದಿಂದ ಸಂಬೋಧಿಸಿ ಮೇಧಾವಿ ಎಂದು ಅರ್ಥಮಾಡಿದೆ.

**ಜೇನ್ಯಂ ಯಥಾ—ಜಯಶೀಲಂ ಶೂರಂ ಯಥಾ ಭಟಾಃ ಸ್ತುವಂತಿ ತದ್ವತ್ । ಯದ್ವಾ । ಜೇನ್ಯಂ ಜಯಶೀಲಂ ವೇಗವಂತಂ ಅಶ್ವಂ ಸಂಗ್ರಾಮೇಷು ಯಥಾ ಉತ್ಸಾಹಯಂತಿ ತದ್ವತ್ ।** ಜಯಶೀಲನಾದ ಶೂರನನ್ನು ಸೈನಿಕರು ಸ್ತುತಿಮಾಡುವಂತೆ ಎಂದೂ ಅಥವಾ ಜಯವನ್ನು ನಿಯತವಾಗಿ ಹೊಂದುವ ವೇಗಶಾಲಿಯಾದ ಕುದುರೆಯನ್ನು ಯುದ್ಧಕ್ಕಾಗಿ ಪ್ರೋತ್ಸಾಹಿಸುವಂತೆಯೂ, ಯುದ್ಧಗಳಲ್ಲಿ ವೇಗಶಾಲಿಯಾಗಿ ಜಯವನ್ನು ಹೊಂದುವ ಇಂದ್ರನನ್ನು ಅವನ ಗುಣಗಳನ್ನು ಪ್ರಕಟಮಾಡುವ ಸ್ತುತಿಗಳಿಂದ ಸಂತೋಷಪಡಿಸುತ್ತಾರೆ ಎಂದು ಶೂರನಿಗೂ ಅಶ್ವಕ್ಕೂ ಹೋಲಿಸಿ ಅರ್ಥವನ್ನು ವಿವರಿಸಿದೆ.

**ಅತ್ಯಮಿವ ವಿಶ್ವಾ ಧನಾನಿ ಸಾತಯೇ—ಕೃತ್ಸ್ನಾನಿ ಪ್ರೀಣನಸಾಧನಾನಿ ಗವಾದಿಧನಾನಿ ತೇಷಾಂ ಲಾಭಾಯ । ತತ್ರ ದೃಷ್ಟಾಂತಃ ಅತ್ಯಮಿವ ಇತಿ.** ಅತ್ಯ ಶಬ್ದವೂ ಅಶ್ವನಾಮಗಳಲ್ಲಿ (ನಿ. ೨-೨೭) ಪಠಿತವಾಗಿದೆ. ಇದರ ಹಿಂದಿನ **ಶವಸೇ ಧನಾ ಸಾತಯೇ ಸ್ತುಮಃ** ಎಂಬ ವಾಕ್ಯದಲ್ಲಿ ಇಂದ್ರನು ಬಲವನ್ನೂ ಧನವನ್ನೂ ಅನುಗ್ರಹಿಸಲಿ ಎಂದು ಸ್ತುತಿಮಾಡಿದೆ. ಈ ವಾಕ್ಯದಲ್ಲಿ ಇಂದ್ರನನ್ನು ಸಂತೋಷಪಡಿಸುವ ಯಜ್ಞಾದಿ ಕರ್ಮಗಳ ಆಚರಣೆಗೆ ಸಾಧನವಾದ ಗೋವು ಮತ್ತು ಧನ ಎಂಬ ಇವೆಲ್ಲವೂ ದೊರೆಯುವುದಕ್ಕಾಗಿ ಇಂದ್ರನನ್ನು ಸ್ತುತಿಮಾಡಿದೆ ಎಂದು ಅರ್ಥವನ್ನು ವಿವರಿಸಿದೆ.

ಯುದ್ಧದಲ್ಲಿ ಬಲವೂ ಧನವೂ ಪ್ರಭೂತವಾಗಿ ಉಂಟಾಗುವುದಕ್ಕಾಗಿಯೂ, ಜಯವನ್ನು ಹೊಂದಿ ಶತ್ರುಗಳ ಧನವನ್ನೂ ಹೊಂದುವುದಕ್ಕಾಗಿಯೂ ಕೂಡ ಯಾವಾಗಲೂ ವೇಗಶಾಲಿಯಾಗಿ ಸಂಚರಿಸುವ ಅಶ್ವವನ್ನು ಸ್ತುತಿಮಾಡಿ ಪ್ರೋತ್ಸಾಹಮಾಡುವಂತೆ ಇಲ್ಲಿ ಇಂದ್ರನನ್ನು ಸ್ತುತಿಮಾಡಿದೆ ಎಂದು ಅಶ್ವವನ್ನು ಹೋಲಿಸಿ ಅರ್ಥವನ್ನು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಸೂಯಂತಃ**—ವಸುಮಾತ್ಮನಃ ಇಚ್ಛಂತಃ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. **ಅಕೃತ್ ಸಾರ್ವಧಾತುಕಯೋರ್ದೀರ್ಘಃ** (ಪಾ. ಸೂ. ೭-೪-೨೫) ಎಂಬುದರಿಂದ ಪೂರ್ವಕ್ಕೆ ದೀರ್ಘ. ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಕ್ಯಚ್ ಸ್ವರ ಉಳಿಯುತ್ತದೆ.

**ಆಯವಃ**—ಇಣ್ ಗತೌ. ಧಾತು **ಛಂದಸೀಣಃ** (ಉ. ಸೂ. ೧-೨) ಎಂಬುದರಿಂದ ಉಣ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. ಆಯಾದೇಶ. ಅಂತೋದಾತ್ತಸ್ವರ ಬರುತ್ತದೆ.

**ಧೀರಃ**—ಡುಧಾಞ್ ಧಾರಣಪೋಷಣಯೋಃ ಧಾತು. **ಸುಸೂಧಾಗೃಧಿಭ್ಯಃ ಕ್ರನ್** (ಉ. ಸೂ. ೧-೧೮೨) ಎಂಬುದರಿಂದ ಕ್ರನ್ ಪ್ರತ್ಯಯ. **ಘುಮಾಸ್ಥಾಗಾಪಾಜ**—(ಪಾ. ಸೂ. ೬-೪-೬೬) ಎಂಬುದರಿಂದ ಈತ್ವ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸ್ವಪಾಃ**—ಶೋಭನಂ ಅಪಃ ಯಸ್ಯ ಸಃ ಸ್ವಪಾಃ. ಅಸಂತವಾದುದು ಉತ್ತರಪದವಾಗಿರುವುದರಿಂದ **ಸೋರ್ಮನಸೀ ಅಲೋಮೋಷಸೀ** (ಪಾ. ಸೂ. ೬-೨-೧೧೭) ಎಂಬುದರಿಂದ ಸುಸ್ವರಕ್ಕೆ ಬಾಧಕವಾಗಿ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಅತಿಕ್ಷ್ಣುಷುಃ**—ತಕ್ಷೂ ತನೂಕರಣೇ. ಧಾತು. ಲುಙ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಶುಂಭಂತಃ**—ಶುಂಭ ಶೋಭಾರ್ಥೇ. ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ತುದಾದಿಭ್ಯಃ ಶಃ** ಎಂಬುದ ರಿಂದ ಶ ವಿಕರಣ. ವಿಕರಣಸ್ವರ ಉಳಿಯುತ್ತದೆ. ಪ್ರಥಮಾ ಬಹುವಚನಾಂತರೂಪ.

**ಜೇನ್ಯಂ**—ಜಿ ಜಯೇ. ಧಾತು. ಇದಕ್ಕೆ ಔಣಾದಿಕ ಏನ್ಯ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ವಿಪ್ರ**—ಡುವಪ್ ಬೀಜಸಂತಾನೇ. ಧಾತು. **ಋಜ್ರೇಂದ್ರ**—(ಉ. ಸೂ. ೧-೧೮೬) ಎಂಬುದರಿಂದ ರನ್ನಂತವಾಗಿ ನಿಪಾತಿತವಾಗಿದೆ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಾತಯೇ**—ಷಣು. ದಾನೇ. **ಊತಿಯೂತಿ ಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಉದಾತ್ತವಾಗಿ ನಿಪಾತಿತವಾಗಿದೆ. ಚತುರ್ಥೀ ಏಕವಚನಾಂತರೂಪ.

**ಧನಾ ವಿಶ್ವಾ**—ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ ವ್ಯತ್ಯಯದಿಂದ ಷಷ್ಠ್ಯರ್ಥದಲ್ಲಿ ದ್ವಿತೀಯಾ ಬಂದಿದೆ. ॥ ೬ ॥



॥ ಸಂಹಿತಾಪಾಠಃ ॥

ಭಿನತ್ಪುರೋ ನವತಿಮಿಂದ್ರ ಪೂರವೇ ದಿವೋದಾಸಾಯ ಮಹಿ ದಾಶುಷೇ
ನೃತೋ ವಜ್ರೇಣ ದಾಶುಷೇ ನೃತೋ ।
ಅತಿಥಿಗ್ವಾಯ ಶಂಬರಂ ಗಿರೇರುಗ್ರೋ ಅವಾಭರತ್ ।
ಮಹೋ ಧನಾನಿ ದಯಮಾನ ಓಜಸಾ ವಿಶ್ವಾ ಧನಾನ್ಯೋಜಸಾ ॥ ೭ ॥

॥ ಪದಪಾಠಃ ॥

ಭಿನತ್ । ಪುರಃ । ನವತಿಂ । ಇಂದ್ರ । ಪೂರವೇ । ದಿವಃऽದಾಸಾಯ । ಮಹಿ । ದಾಶುಷೇ । ನೃತೋ ಇತಿ । ವಜ್ರೇಣ । ದಾಶುಷೇ । ನೃತೋ ಇತಿ ।

ಅತಿಥಿऽಗ್ವಾಯ । ಶಂಬರಂ । ಗಿರೇಃ । ಉಗ್ರಃ । ಅವ । ಅಭರತ್ ।

ಮಹಃ । ಧನಾನಿ । ದಯಮಾನಃ । ಓಜಸಾ । ವಿಶ್ವಾ । ಧನಾನಿ । ಓಜಸಾ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನೃತೋ ರಣೇ ನರ್ತನಶೀಲ ತ್ವಂ ದಾಶುಷೇ ಹವಿರ್ದತ್ತವತೇ ಪೂರವೇऽಭಿಮತ-ಪೂರಕಾಯ । ಮನುಷ್ಯನಾಮೈತತ್ । ಮಹಿ ಮಹತೇ ದಿವೋದಾಸಾಯೈತನ್ನಾಮಕಾಯ ರಾಜ್ಞೇ ॥ ದಿವೋ ದಾಸೇ ಷಷ್ಠ್ಯಾ ಅಲುಕ್ । ಕಾ. ೬-೩-೨೧-೫ । ಇತ್ಯಲುಕ್ । ದಿವೋದಾಸಾದೀನಾಂ ಛಂದಸೀತಿ ಪೂರ್ವಪದಾದ್ಯುದಾತ್ತತ್ವಂ ॥ ನವತಿಮೇತತ್ಸಂಖ್ಯಾಕಾನಿ ಪುರಃ ಶತ್ರೂಣಾಂ ಪುರಾಣಿ ಭಿನತ್ । ಭಿನ್ನವಾನಸಿ । ತಥಾ ಹೇ ನೃತೋ ಗಾತ್ರವಿಕ್ಷೇಪಣಕುಶಲ ಹಸ್ತಪಾದಾದಿಪ್ರಕ್ಷೇಪೇಣ ಶತ್ರೂಣಾಂ ಹಿಂಸಕ ವಜ್ರೇಣ ಕ್ಷೇಪಣಸಮರ್ಥೇನಾಯುಧೇನ ದಾಶುಷೇ ಹವಿರ್ದತ್ತವತೇ ದಿವೋದಾಸಾಯಾನ್ಯಸ್ಮೈ ವಾ ಭಿನತ್ । ತಮಪಿ ಶತ್ರುಂ ಭಿನ್ನವಾನಸಿ । ಇದಾನೀಂ ಪರೋಕ್ಷೇಣಾಹ । ಅತಿಥಿಗ್ವಾಯ ಪೂಜಾರ್ಥ-ಮತಿಥಿಂ ಗಚ್ಛತೇ ದಿವೋದಾಸಾಯ ತದರ್ಥಂ ॥ ಗಮೇರೌಣಾದಿಕೋ ಡ್ವಪ್ರತ್ಯಯಃ ॥ ಉಗ್ರ ಉದ್ಗೂರ್ಣಬಲ ಇಂದ್ರಃ ಪೂರ್ವಂ ಪುರಭೇದನಸಮಯೇ ವಿದ್ಧಮಪ್ಯಮ್ರಿಯಮಾಣಂ ಗಿರಿಮಾರೂಢಂ ಶಂಬರಮೇತನ್ನಾಮಾನಮಸುರಂ ಗಿರೇರ್ದುರ್ಗಮಾತ್ಪರ್ವತಾದೇಃ ಸಕಾಶಾದೋಜಸಾ ಸ್ವಕೀಯೇನ ಬಲೇನಾವಾಭರತ್ । ಅವಾಙ್ಮುಖಮವಕೃಷ್ಯ ಪ್ರಾಣಂ ಹೃತವಾನ್ । ಕಿಂ ಕುರ್ವನ್ । ಮಹೋ ಮಹಾಂತಿ ಧನಾನಿ ತದೀಯಗವಾಶ್ವಾದೀನಿ ದಯಮಾನೋ ದಿವೋದಾಸಾಯ ರಾಜ್ಞೇ ಸಾಧಯನ್ ॥ ದಯ ದಾನಗತಿಹಿಂಸಾದಾನೇಷು । ಶಪಃ ಪಿತ್ತ್ವಾದನುದಾತ್ತತ್ವೇ ಶಾನಚೋ ಲಸಾರ್ವಧಾತುಕಸ್ವರೇಣ ಧಾತುಸ್ವರಃ ॥ ನ ಕೇವಲಮಲ್ಪಂ ಧನಂ ಕಿಂತು ವಿಶ್ವಾ ಧನಾನಿ ಸರ್ವಾಣ್ಯಪಿ ತೇಷಾಂ ಮಣಿಮುಕ್ತಾದೀ-ನ್ಯೋಜಸಾ ಸ್ವಕೀಯೇನ ಬಲೇನ ದಯಮಾನಃ ಸಾಧಯನ್ನವಾಭರತ್ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—(ಎಲೈ) ಇಂದ್ರನೇ । **ನೃತೋ**—(ರಣರಂಗದಲ್ಲಿ) ನರ್ತನಮಾಡುವ (ನೀನು) । **ದಾಶುಷೇ**—ಹವಿರ್ದಾನಮಾಡಿದ । **ಪೂರವೇ**—ಪೂರು ಎಂಬ (ಮನುಷ್ಯನಿಗೋಸ್ಕರ ಮತ್ತು) । **ಮಹಿ**—ಮಹಾತ್ಮನಾದ । **ದಿವೋದಾಸಾಯ**—ದಿವೋದಾಸ ಎಂಬ ರಾಜನಿಗೋಸ್ಕರ । **ನವತಿಂ**—ತೊಂಭತ್ತು । **ಪುರಃ**—(ಶತ್ರು) ನಗರಗಳನ್ನು । **ಭಿನತ್**—ಭೇದಿಸಿದೆ । **(ತಥಾ**—ಹಾಗೆಯೇ) । **ನೃತೋ**—ನರ್ತನ ಕುಶಲನೇ (ಅಂಗಾಂಗ ವಿಕ್ಷೇಪಣದಿಂದ ಯುದ್ಧದಲ್ಲಿ ಶತ್ರುಗಳನ್ನು ನಾಶಪಡಿಸುವವನೇ) । **ವಜ್ರೇಣ**—ವಜ್ರಾಯುಧದಿಂದ । **ದಾಶುಷೇ**—

ಹವಿರ್ದಾನಮಾಡಿದ (ದಿವೋದಾಸ) ವನಿಗೋಸ್ಕರ । **(ಭಿನತ್**—ಶತ್ರುನಾಶಮಾಡಿದೆ) । **ಅತಿಥಿಗ್ವಾಯ**—(ಪೂಜಾರ್ಹವಾಗಿ) ಅತಿಥಿಯನ್ನು ಹೊಂದಿರುವ (ದಿವೋದಾಸನಿಗೋಸ್ಕರ) । **ಉಗ್ರಃ**—(ಯುದ್ಧದಲ್ಲಿ) ಭಯಂಕರನಾದ (ಇಂದ್ರನು) । **ಶಂಬರಂ**—ಶಂಬರಾಸುರನನ್ನು । **ಓಜಸಾ**—(ಸ್ವಕೀಯ) ಬಲದಿಂದ । **ಮಹಃ**—ಹೆಚ್ಚಾದ । **ಧನಾನಿ**—(ಶಂಬರನ ಗವಾಶ್ವಾದಿ ಧನಗಳನ್ನು । **ದಯಮಾನಃ**—(ದಿವೋದಾಸನಿಗೆ) ಕೊಡಿಸುವವನಾಗಿ । **ಗಿರೇಃ ಅವ ಅಭರತ್**— ಪರ್ವತದ ಮೇಲಿನಿಂದ ಅಧೋಮುಖವಾಗಿ ಎಳೆದು ಸಂಹರಿಸಿದನು । (ಮತ್ತು) **ವಿಶ್ವಾ ಧನಾನಿ**—(ಶಂಬರನ) ವಿಶಿಷ್ಟ ಸಂಪತ್ತನ್ನೂ । **ಓಜಸಾ**—(ತನ್ನ) ಬಲದಿಂದ । **(ದಯಮಾನಃ**—ದಿವೋದಾಸನಿಗೋಸ್ಕರ ಸಾಧಿಸುವವನಾಗಿ । **ಅವಾಭರತ್**—ಎಳೆದು ಸಂಹರಿಸಿದನು).

॥ ಭಾವಾರ್ಥ ॥

ಎಲೈ ಇಂದ್ರನೇ, (ರಣರಂಗದಲ್ಲಿ) ನರ್ತಿಸುವ (ನೀನು) (ನಿನಗೆ) ಹವಿರಾದಿಗಳನ್ನು ಅರ್ಪಿಸಿದ ಪೂರು ಮತ್ತು ದಿವೋದಾಸನೆಂಬ ಮಹಾಪುರುಷ, ಇವರಿಬ್ಬರಿಗೋಸ್ಕರ, ತೊಂಭತ್ತು (ಶತ್ರು) ನಗರಗಳನ್ನು ನಾಶಪಡಿಸಿದೆ; (ಯುದ್ಧದಲ್ಲಿ) **ನರ್ತಿಸುತ್ತಾ** ಎಲೈ (ಶತ್ರುಗಳನ್ನು ನಾಶಮಾಡುವ) ಇಂದ್ರನೇ, ಹವಿರ್ದಾನಮಾಡಿದವನಿಗೋಸ್ಕರ, ವಜ್ರಾಯುಧದಿಂದ, (ಶತ್ರುಗಳನ್ನು) ನಾಶಮಾಡಿದೆ; ಅತಿಥಿಪೂಜಕನಾದ (ದಿವೋದಾಸನಿಗೋಸ್ಕರ), ಘೋರನಾದ ಇಂದ್ರನು,ಶಂಬರಾಸುರನನ್ನು ಪರ್ವತದ ಮೇಲಿನಿಂದ ಎಳೆದು, (ಅವನ ಗವಾದಿ) ಧನವನ್ನು (ದಿವೋದಾಸನಿಗೆ) ಕೊಡಿಸಿ, ತನ್ನ ಬಲದಿಂದ ಸಂಹರಿಸಿದನು; (ಅವನ ವಿಶಿಷ್ಟಸಂಪತ್ತನ್ನೂ ದಿವೋದಾಸನಿಗೆ ಕೊಡಿಸಿ, ಸ್ವಸಾಮರ್ಥ್ಯದಿಂದ (ಶಂಬರನನ್ನು) ಸಂಹರಿಸಿದನು.

## English Translation

For Puru, the giver of offerings, for the mighty Divodasa, you, Indra, the dancer (with delight in battle), have destroyed ninety cities; dancer (in battle), you have destroyed them with (your thunderbolt), for (the sake of) the giver of offerings. For (the sake of) Atithigwa, the fierce (Indra) hurled Shambara from off the mountain, bestowing (upon the prince) immense treasure, (acquired) by (his) prowess; all kinds of wealth (acquired) by (his) prowess.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನು ತನ್ನನ್ನು ಯಜ್ಞವೇ ಮೊದಲಾದವುಗಳಿಂದ ಸಂತೋಷಪಡಿಸಿದ ದಿವೋದಾಸನೆಂಬ ರಾಜನ ಶತ್ರುಗಳನ್ನು ನಿಗ್ರಹಮಾಡಿ ದಿವೋದಾಸನನ್ನು ರಕ್ಷಿಸಿ ಅವನ ಶತ್ರುಗಳ ಐಶ್ವರ್ಯವೆಲ್ಲವನ್ನೂ ಕೊಟ್ಟಿರುವ ಕಥೆಯು ಸಂಕ್ಷೇಪವಾಗಿ ಸೂಚಿಸಿದೆ.

**ನೃತೋ** ಎಂಬ ಪದವು ಎರಡುಸಾರಿ ಉಕ್ತವಾಗಿದೆ. ಮೊದಲನೆಯ **ನೃತೋ** ಎಂಬ ಪದಕ್ಕೆ **ರಣೇ ನರ್ತನಶೀಲ** ಯುದ್ಧವು ಒದಗಿದಾಗಲೂ ಅಥವಾ ಯುದ್ಧದಲ್ಲಿಯೂ ಹೆದರದೆ ಉತ್ಸಾಹದಿಂದ ಇರುತ್ತಾ ಕುಣಿದಾಡುವವನೆಂದು ಯುದ್ಧಮಾಡುವ ವಿಷಯದಲ್ಲಿ ಇರುವ ಇಂದ್ರನ ಆನಂದ ಮತ್ತು ಉತ್ಸಾಹವನ್ನೂ ವಿವರಿಸಿದೆ.

ಎರಡನೆಯ **ನೃತೋ** ಎಂಬ ಪದಕ್ಕೆ ಯುದ್ಧವನ್ನು ಮಾಡುವಾಗ ಯುದ್ಧಕಾಲದಲ್ಲಿ ಶತ್ರುಗಳನ್ನು ನಿಗ್ರಹ ಮಾಡಲು ಅರ್ಹವಾದ ಯುದ್ಧಚಮತ್ಕಾರಗಳಿಗೆ ತಕ್ಕಂತೆ ಹಸ್ತಪಾದಪ್ರಕ್ಷೇಪಗಳನ್ನೂ (ಕೈಚಳಕ ಮತ್ತು ಪಟ್ಟುಗಳನ್ನು) ಮತ್ತು ತನ್ನ ಶರೀರವನ್ನೂ ಸಹ ಸರಿಯಾಗಿ ಉಪಯೋಗಿಸುವುದರಲ್ಲಿ ಇಂದ್ರನು ನಿಪುಣನಾಗಿರುವನೆಂದೂ ಇವುಗಳಿಂದ ತನ್ನನ್ನು ರಕ್ಷಿಸಿಕೊಂಡು ಶತ್ರುಗಳನ್ನು ಕೊಲ್ಲುವನೆಂದೂ, **ಗಾತ್ರವಿಕ್ಷೇಪಣಕುಶಲ ಹಸ್ತಪಾದಾದಿಪ್ರಕ್ಷೇಪೇಣ ಶತ್ರೂಣಾಂ ಹಿಂಸಕ** ಎಂಬ ವಾಖ್ಯಾನದಿಂದ ವರ್ಣಿಸಿದೆ.

**ದಾಶುಷೇ— ದಾಶ್ವಾನ್ ಸಾಹ್ವಾನ್** ಎಂಬುದಾಗಿ ನಿಪಾತಿತವಾಗಿರುವ ಈ ಶಬ್ದಕ್ಕೆ ದಾನಶೀಲನೆಂಬ ಅರ್ಥವು ಇದ್ದರೂ ಇಲ್ಲಿ **ಹವಿರ್ದತ್ತವತೇ—** ಹವಿಸ್ಸನ್ನು ಅರ್ಪಿಸಿದವನಿಗಾಗಿ ಎಂದು ಅರ್ಥಮಾಡಿದೆ.

**ಪೂರವೇ— ಅಭಿಮತಪೂರಕಾಯ । ಮನುಷ್ಯಾಃ ನರಃ** ಎಂಬ ಇಪ್ಪತ್ತೈದು ಮನುಷ್ಯನಾಮಗಳಲ್ಲಿ **ಪೂರವಃ** ಎಂಬ ಪದವು (ನಿ. ೩-೮) ಪಠಿತವಾಗಿದೆ ಮತ್ತು **ಕಾಮ್ಯೈಃ ಪೂರಯಿತವ್ಯಾಃ** (ಅಭಿಲಾಷೆ) ಆಸೆಯ ಪೂರಣವನ್ನು ಹೊಂದಲರ್ಹರಾದವರು ಎಂದು ವ್ಯಾಖ್ಯಾತವಾಗಿದೆ. ಇಲ್ಲಿ ಇಂದ್ರನಿಗೆ (ಅಭಿಮತ) ಇಷ್ಟವಾದದ್ದನ್ನು ಆಚರಿಸಿದವನು ಎಂದು ದಿವೋದಾಸಾಯ ಎಂಬ ಪದಕ್ಕೆ ವಿಶೇಷಣವಾಗಿ ಹೇಳಿ ದಿವೋದಾಸನೆಂದು ಹೆಸರುಳ್ಳ ರಾಜನು ಇಂದ್ರನ ಅಭಿಮತವನ್ನು ಅನುಸರಿಸಿ ಹವಿಷ್ಪ್ರದಾನಾದಿಗಳಿಂದ ಇಂದ್ರನನ್ನು ಸಂತೋಷಪಡಿಸಿದನೆಂದೂ ಅದಕ್ಕಾಗಿ ಇಂದ್ರನು ಅವನ ಶತ್ರುಗಳ ತೊಂಭತ್ತು ಪಟ್ಟಣಗಳನ್ನು ಭೇದಿಸಿ ರಾಜನಿಗೆ ಸಹಾಯಮಾಡಿದನೆಂದೂ ವರ್ಣಿಸಿದೆ. ಈ ಉದಾಹರಣೆಯಿಂದ ಇಂದ್ರನನ್ನು ಹವಿಷ್ಪ್ರದಾನಾದಿಗಳಿಂದ ತೃಪ್ತಿಗೊಳಿಸುವ ಮನುಷ್ಯಗೆ ಇಂದ್ರನು ಅವನ ಇಷ್ಟವನ್ನು ಸಾಧಿಸಿಕೊಡುವನು ಎಂದು ಸೂಚಿತವಾಗುತ್ತದೆ.

**ಅತಿಥಿಗ್ವಾಯ— ಪೂಜಾರ್ಥಮತಿಥಿಂ ಗಚ್ಛತೇ ದಿವೋದಾಸಾಯ ।** ಅತಿಥಿಯಾದವನಿಗೆ ಅರ್ಹವಾದ ಪೂಜೆಯನ್ನು ಮಾಡಿ ಅವರನ್ನು ತೃಪ್ತಿಪಡಿಸುವ ದಿವೋದಾಸನೆಂಬ ರಾಜನಿಗಾಗಲಿ ಅಥವಾ ಇತರ ಮನುಷ್ಯನಿಗಾಗಲಿ ಇಂದ್ರನು ಅವರ ಶತ್ರುಗಳನ್ನು ನಿಗ್ರಹಿಸುವನೆಂದು ಅರ್ಥವನ್ನು ಹೇಳಿದೆ

ಅತಿಥಿ ಶಬ್ದವು—ಯಾಸ್ಕರಿಂದ **ಅತಿಥಿರಭ್ಯತಿತೋ ಗೃಹಾನ್ ಭವತಿ । ಅಭ್ಯೇತಿ ತಿಥಿಷು ಪರಕುಲಾನೀತಿ ವಾ ಪರಗೃಹಾಣೀತಿ ವಾ ।** ಮಧ್ಯಾಹ್ನ ಕಾಲದಲ್ಲಿ ಮನೆಗಳನ್ನು ಹುಡುಕಿಕೊಂಡು ಬರುವವನೂ, ಆಯಾಯ ದಿನಗಳಲ್ಲಿ ಇತರರ ಮನೆಗಳನ್ನೂ ಅಥವಾ ಯಜಮಾನರ ಮನೆಗಳನ್ನೂ ಹುಡುಕಿಕೊಂಡು ಬರುವವನು ಅತಿಥಿಯಾಗಿರುವನೆಂದು (ನಿ. ೪-೬) ಅರ್ಥಮಾಡಿ ವರ್ಣಿಸಲ್ಪಟ್ಟಿದೆ.

**ಉಗ್ರಃ ಶಂಬರಂ ಓಜಸಾ ಅವಾಭರತ್—** ಸಾಯಣರು ಈ ವಾಕ್ಯದಿಂದ ಒಂದು ಇತಿಹಾಸವನ್ನು ಸೂಚಿಸಿರುವರು. ಇಂದ್ರನು ಶತ್ರುವಿನ ತೊಂಭತ್ತು ಪಟ್ಟಣಗಳನ್ನು ನಾಶಮಾಡುವಾಗ ಶಂಬರನೆಂಬ ಅಸುರನು ಇಂದ್ರನಿಂದ ಪ್ರಹೃತನಾಗಿ ಪರ್ವತದಲ್ಲಿ (ಅವಿತು) ಅಡಗಿಕೊಂಡನು. ಬಹಳ ಬಲಿಷ್ಠನಾದ ಇಂದ್ರನು ಯಾರಿಂದಲೂ ಹೊಂದಲಶಕ್ಯವಾದ ಪರ್ವತವನ್ನು ಹತ್ತಿ ಅಲ್ಲಿ ಆ ರಾಕ್ಷಸನನ್ನು ಹಿಡಿದು ತನ್ನ ಸಾಮರ್ಥ್ಯದಿಂದ ಅವನನ್ನು (ಅವಾಙ್ಮುಖ) ಕೆಳಮುಖನನ್ನಾಗಿ ಮಾಡಿ ಕೊಂದನು ಎಂದು ಹೇಳಿದೆ.

**ಮಹಃ— ಮಹಾಂತಿ । ಮಹಃ** ಎಂಬ ಶಬ್ದವು ಉದಕನಾಮಗಳಲ್ಲಿ (ನಿ. ೨-೨೪) ಪಠಿತವಾಗಿದೆ.

**ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಂ ।**
**ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ ॥**

(ಋ. ಸಂ. ೧-೧೮೭-೧)

ಇಲ್ಲಿ **ಮಹಃ ಮಹತಃ** ಎಂದು ಅರ್ಥವನ್ನು ವಿವರಿಸಿದೆ. ಸಾಯಣರು ಮಹಶ್ಶಬ್ದಕ್ಕೆ ಪ್ರಭೂತವೆಂದು ಅರ್ಥವನ್ನು ವಿವರಿಸಿದ್ದಾರೆ.

**ಧನಾನಿ ಓಜಸಾ ವಿಶ್ವಾ ಧನಾನಿ ಓಜಸಾ ।** ಇಲ್ಲಿ **ಧನಾನಿ ಓಜಸಾ** ಎಂಬ ಎರಡು ಪದಗಳೂ ಎರಡು ಸಾರಿ ಪ್ರಯುಕ್ತವಾಗಿವೆ. ಮೊದಲನೆಯ ಧನ ಶಬ್ದಕ್ಕೆ **ಗವಾಶ್ವಾದೀನಿ** ಎಂದು ಅರ್ಥಮಾಡಿದೆ. ಇಂದ್ರನು ದಿವೋದಾಸ ರಾಜನಿಗೋಸ್ಕರ ದಯೆಯಿಂದ ಶಂಬರಾಸುರನ ಗೋವುಗಳು ಮತ್ತು ಅಶ್ವಗಳು ಇವೇ ಮೊದಲಾದವುಗಳನ್ನು ತಂದು ಕೊಟ್ಟನು ಎಂದು ಅರ್ಥವನ್ನು ಹೇಳಿದೆ.

ಎರಡನೆಯ **ಧನಾನಿ** ಎಂಬ ಪದಕ್ಕೆ ಹಿಂದೆ ಹೇಳಿದಂತೆ ಇರುವ ಗವಾಶ್ವಾದಿ ರೂಪವಾದ ಧನಕ್ಕಿಂತಲೂ ಬೇರೆಯಾಗಿರುವ ರತ್ನ, ಮುತ್ತು ಇವೇ ಮೊದಲಾದವುಗಳೆಂದು ಅರ್ಥಮಾಡಿ, ಆ ರಾಜನಿಗಾಗಿ ತನ್ನ ಸಾಮರ್ಥ್ಯದಿಂದ ಅವುಗಳನ್ನು ತಂದು ದಯೆಯಿಂದ ರಾಜನನ್ನು ರಕ್ಷಿಸಿದನು ಎಂದು ವಿವರಿಸಿದೆ.

**ಓಜಸ್** ಎಂಬ ಪದವು ಹಿಂದೆ ಅನೇಕಸಾರಿ ಬಲವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವಂತೆ ಇಲ್ಲಿಯೂ ಅದೇ ಅರ್ಥದಲ್ಲಿ ಪ್ರಯುಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಭಿನತ್**—ಭಿದಿರ್ ವಿದಾರಣೇ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. **ರುಧಾದಿಭ್ಯಃ ಶ್ನಮ್** ಸೂತ್ರದಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಪ್ರತ್ಯಯಕ್ಕೆ ಲೋಪ. ಧಾತು ದಕಾರಕ್ಕೆ ಚರ್ತ್ವ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ದಿವೋದಾಸಾಯ**—ಷಷ್ಠೀ ತತ್ಪುರುಷ ಸಮಾಸ. **ದಿವೋದಾಸೇ ಷಷ್ಠ್ಯಾ ಅಲುಕ್** (ಕಾ. ೬-೩-೨೧-೫) ಎಂಬುದರಿಂದ ದಿವಃ ಎಂಬಲ್ಲಿ ಷಷ್ಠಿಗೆ ಲುಕ್ ಬರುವುದಿಲ್ಲ. **ದಿವೋದಾಸಾದೀನಾಂ ಛಂದಸಿ** ಎಂಬ ವಾರ್ತಿಕದಿಂದ ಪೂರ್ವಪದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ದಾಶುಷೇ**—ದಾಶೃ ದಾನೇ. ಧಾತು. **ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚತುರ್ಥೀ ಏಕವಚನದಲ್ಲಿ ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಂ** ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. **ಶಾಸಿವಸಿಘಸೀನಾಂ ಚ** ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ.

**ನೃತೋ**—ನೃತೀ ಗಾತ್ರವಿಕ್ಷೇಪೇ. ಧಾತು. ಇದಕ್ಕೆ ಔಣಾದಿಕ ಕು ಪ್ರತ್ಯಯ. ಕಿತ್ತಾದುದರಿಂದ ಲಘೂಪಧ ಗುಣ ಬರುವುದಿಲ್ಲ. ಸಂಬುದ್ಧಿಯಲ್ಲಿ **ಹ್ರಸ್ವಸ್ಯ ಗುಣಃ** ಎಂಬುದರಿಂದ ಗುಣ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅತಿಥಿಗ್ವಾಯ**—ಅತಿಥಿಂ ಗಚ್ಛತಿ ಇತಿ ಅತಿಥಿಗ್ವಃ ಗಮ್ಲೃ ಗತೌ. ಧಾತು. ಇದಕ್ಕೆ ಔಣಾದಿಕ ಡ್ವ ಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ (ಅಮ್) ಲೋಪ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಅಭರತ್**—ಭೃ ಞ್ ಭರಣೇ. ಧಾತು. ಭ್ವಾದಿ. ಲಙ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಹಃ**—ಮಹ ಪೂಜಾಯಾಂ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿತೀಯಾ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದಯಮಾನಃ**—ದಯ ದಾನಗತಿಹಿಂಸಾದಾನೇಷು. ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಓಜಸಾ**—ಉಬ್ಜ ಆರ್ಜವೇ. ಧಾತು. **ಉಬ್ಜೇರ್ಬಲೇ ಬಲೋಪಶ್ಚ** (ಉ. ಸೂ. ೪-೬೩೧) ಎಂಬುದರಿಂದ ಅಸುನ್ ಪ್ರತ್ಯಯ. ಧಾತುವಿನ ಬಕಾರಕ್ಕೆ ಲೋಪ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಅಸುನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತ ರೂಪ. ॥ ೭ ॥



॥ ಸಂಹಿತಾಪಾಠಃ ॥

ಇಂದ್ರಃ ಸಮತ್ಸು ಯಜಮಾನಮಾರ್ಯಂ ಪ್ರಾವದ್ವಿಶ್ವೇಷು ಶತಮೂತಿರಾಜಿಷು ಸ್ವರ್ಮೀಳ್ಹೇಷ್ವಾಜಿಷು ।
ಮನವೇ ಶಾಸದವ್ರತಾನ್ತ್ವಚಂ ಕೃಷ್ಣಾಮರಂಧಯತ್ ।
ದಕ್ಷನ್ನ ವಿಶ್ವಂ ತತೃಷಾಣಮೋಷತಿ ನ್ಯರ್ಶಸಾನಮೋಷತಿ ॥ ೮ ॥

॥ ಪದಪಾಠಃ ॥

ಇಂದ್ರಃ । ಸಮತ್ಽಸು । ಯಜಮಾನಂ । ಆರ್ಯಂ । ಪ್ರ । ಆವತ್ । ವಿಶ್ವೇಷು । ಶತಂಽಊತಿಃ । ಆಜಿಷು । ಸ್ವಃಽಮೀಳ್ಹೇಷು । ಆಜಿಷು ।

ಮನವೇ । ಶಾಸತ್ । ಅವ್ರತಾನ್ । ತ್ವಚಂ । ಕೃಷ್ಣಾಂ । ಅರಂಧಯತ್ ।

ಧಕ್ಷತ್ । ನ । ವಿಶ್ವಂ । ತತೃಷಾಣಂ । ಓಷತಿ । ನಿ । ಅರ್ಶಸಾನಂ । ಓಷತಿ ॥ ೮ ॥

॥ ಸಾಯಣಭಾಷ್ಯಂ ॥

ಅಯಮಿಂದ್ರಃ ಸಮತ್ಸು ರಣೇಷು ಪ್ರಹಾರನಿಮಿತ್ತೇಷು ಯಜಮಾನಂ ಯಷ್ಟಾರಮಾರ್ಯಮರಣೀಯಂ ಸರ್ವೈರ್ಗಂತವ್ಯಂ ಪ್ರಾವತ್ । ರಕ್ಷತಿ । ಸಮತ್ಸ್ವಿತಿ ಸಂಗ್ರಾಮನಾಮ ಸಮತ್ಸು ಸಮರಣ ಇತಿ ತನ್ನಾಮಸು ಪಾಠಾತ್ । ಕಿಂಚ ಶತಮೂತಿಃ ಸ್ವಭಕ್ತೇಷ್ವಪರಿಮಿತರಕ್ಷಣ ಇಂದ್ರೋ ವಿಶ್ವೇಷು ॥ ಲಿಂಗವ್ಯತ್ಯಯಃ ॥ ಆಜಿಷು ಸರ್ವೇಷು ಸ್ಪರ್ಧಾನಿಮಿತ್ತೇಷು ಸಂಗ್ರಾಮೇಷು ಯಜಮಾನಂ ಪ್ರಾವತ್ । ತಥಾ ಸ್ವರ್ಮೀಳ್ಹೇಷು ಸ್ವರ್ಗದೇಶೇಷು ಸುಖಸ್ಯ ಸೇಚಯಿತೃಷ್ವಾಜಿಷು ಮಹಾಸಂಗ್ರಾಮೇಷು ಪ್ರಾವತ್। ಸ್ವರ್ಗಪ್ರದಾನೇನ ರಕ್ಷತಿ । ರಣ ಆಭಿಮುಖ್ಯೇನ ಹತಾನಾಂ ವೀರಾಣಾಂ ಸ್ವರ್ಗಃ ಪರಾಶರೇಣ ಸ್ಮರ್ಯತೇ । ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲಭೇದಿನೌ । ಪರಿವ್ರಾಡ್ಯೋಗಯುಕ್ತಶ್ಚ ರಣೇ ಯೋಽಭಿಮುಖೋ ಹತಃ । ಪರಾ. ೩-೨೫ । ಇತಿ । ಅತ್ರೇತಿಹಾಸಮಾಚಕ್ಷತೇ । ಅಂಶುಮತೀ ನಾಮ ನದೀ । ತಸ್ಯಾಸ್ತೀರೇ ಕೃಷ್ಣನಾಮಾಸುರೋ ವರ್ಣತಶ್ಚ ಕೃಷ್ಣೋ ದಶಸಹಸ್ರೈರನುಚರೈರುಪೇತಸ್ತದ್ದೇಶವರ್ತಿನಃ ಪೀಡಯನ್ನಾಸ್ತೇ । ತತ್ರೇಂದ್ರೋ ಬೃಹಸ್ಪತಿನಾ ಪ್ರೇರಿತಃ ಸನ್ ಮರುದ್ಭಿಃ ಸಹಿತಃ ಕೃಷ್ಣಾಂ ತದೀಯತ್ವಚಮುತ್ಕೃತ್ಯ ಸಾನುಚರಮವಧೀತ್। ಅಯಮದ್ರ್ಯೋಽವ ದ್ರಪ್ಸೋ ಅಂಶುಮತೀಮತಿಷ್ಠತ್। ಋ. ೮-೯೬-೧೩ । ಇತ್ಯಾದಿನೋಪರಿಷ್ಟಾದ್ವಕ್ಷ್ಯತೇ । ತದತ್ರೋಚ್ಯತೇ । ಅಯಮಿಂದ್ರೋ ಮನವೇ ಮನುಷ್ಯಾಯ ॥ ವಿಭಕ್ತಿವ್ಯತ್ಯಯಃ ॥ ಮನುಷ್ಯಾಣಾಮರ್ಥಾಯಾವ್ರತಾನ್ । ವ್ರತಮಿತಿ ಕರ್ಮನಾಮ । ತದ್ರಹಿತಾನ್। ಯಾಗವಿದ್ವೇಷಿಣಃ ಶಾಸತ್ । ಶಿಕ್ಷಿತವಾನ್ । ಹಿಂಸಿತವಾನ್ ॥ ಶಾಸೇರ್ಲೇಟ್ಯಡಾಗಮಃ ॥ ತಥಾ ಕೃಷ್ಣಾಂ ತ್ವಚಂ ಕೃಷ್ಣನಾಮ್ನೋಽಸುರಸ್ಯ ಕೃಷ್ಣವರ್ಣಾಂ ತ್ವಚಮುತ್ಕೃತ್ಯಾರಂಧಯತ್। ಹಿಂಸಿತವಾನ್ ॥ ರಧ ಹಿಂಸಾಯಾಂ। ರಧಿಜಭೋರಚೀತಿ ನುಮ್ ॥ ಕೇನ ಪ್ರಕಾರೇಣೇತಿ ತದುಚ್ಯತೇ । ಧಕ್ಷತ್। ಭಸ್ಮೀಕರೋತಿ ॥ ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ತಥಾ ವಿಶ್ವಂ ತತೃಷಾಣಮೋಷತಿ। ಸರ್ವಮಪಿ ಹಿಂಸಕಂ ತದನುಚರಸಂಘಂ ದಹತಿ । ಯತ್ಕಿಂಚಿದವಶಿಷ್ಟಮಿತಿ ನೇತ್ಯಾಹ । ಅರ್ಶಸಾನಂ ಹಿಂಸಾರುಚಿಂ ಹತಾವಶಿಷ್ಟಂ ಸರ್ವಮಪಿ ನ್ಯೋಷತಿ । ನಿಃಶೇಷೇಣ ದಹತಿ ॥

॥ ಪ್ರತಿಪದಾರ್ಥ ॥

(ಅಯಂ) ಇಂದ್ರಃ-(ಈ) ಇಂದ್ರನು । **ಸಮತ್ಸು**-ಸಂಗ್ರಾಮಗಳಲ್ಲಿ । **ಯಜಮಾನಂ**-ಯಾಗಕರ್ತೃವೂ । ಆರ್ಯಂ—ಆರ್ಯನೂ (ಆದ ಯಜಮಾನನನ್ನು) । **ಪ್ರ ಆವತ್**—ರಕ್ಷಿಸುತ್ತಾನೆ । **ಶತಂ ಊತಿಃ**—(ತನ್ನ ಭಕ್ತರ

ವಿಷಯದಲ್ಲಿ ಅಪರಿಮಿತ ರಕ್ಷಣಯುಕ್ತನಾದ ಇಂದ್ರನು | **ವಿಶ್ವೇಷು**—ಸಮಸ್ತವಾದ | **ಆಜಿಷು**—ಸಂಗ್ರಾಮಗಳಲ್ಲಿ (**ಪ್ರ ಆವತ್**—ಯಜಮಾನನನ್ನು ರಕ್ಷಿಸುತ್ತಾನೆ) | (**ತಥಾ**—ಹಾಗೆಯೇ) | **ಸ್ವರ್ಮೀಳ್ಹೇಷು**—ಸ್ವರ್ಗಸುಖ ಸಾಧನವಾದ | **ಆಜಿಷು**—ಸಂಗ್ರಾಮಗಳಲ್ಲಿಯೂ | (**ಪ್ರಾವತ್**—ರಕ್ಷಿಸುತ್ತಾನೆ) | (**ಕಿಂಚ**—ಮತ್ತು) (**ಅಯಂ ಇಂದ್ರಃ**—ಈ ಇಂದ್ರನು) **ಮನವೇ**—ಮನುಷ್ಯನಿಗೋಸ್ಕರ | **ಅವ್ರತಾನ್**—ಕರ್ಮರಹಿತರಾದವರನ್ನು (ಯಾಗ ದ್ವೇಷಿಗಳನ್ನು) | **ಶಾಸತ್**—ಶಿಕ್ಷಿಸುತ್ತಾನೆ | (**ತಥಾ**—ಹಾಗೆಯೇ) | **ಕೃಷ್ಣಾಂ**—(ಕೃಷ್ಣನಾಮಕ ಅಸುರನ) ಕೃಷ್ಣವರ್ಣವಾದ | **ತ್ವಚಂ**—ಚರ್ಮವನ್ನು (ಸುಲಿದು) | **ಧಕ್ಷತ್ ನ**—ಭಸ್ಮಮಾಡುತ್ತಾನೋ ಎಂಬಂತೆ | **ಅರಂಧಯತ್**—ಹಿಂಸಿಸಿದನು | **ತತೃಷಾಣಂ**—ಹಿಂಸಕವಾದ | **ಸರ್ವಂ**—(ಅವನ ಅನುಚರವರ್ಗ) ವೆಲ್ಲವನ್ನೂ **ಓಷತಿ**—ದಹಿಸುತ್ತಾನೆ | **ಅರ್ಶಸಾನಂ**—ಹಿಂಸಾರುಚಿಯುಳ್ಳ ಅಥವಾ ಹತಾವಶಿಷ್ಟವಾದ (ಸಮಸ್ತವನ್ನೂ) **ನಿ ಓಷತಿ**—ನಿಶ್ಶೇಷವಾಗಿ ದಹಿಸುತ್ತಾನೆ.

॥ ಭಾವಾರ್ಥ ॥

ಭಕ್ತರನ್ನು ನಾನಾರೀತಿ ರಕ್ಷಿಸುವ ಇಂದ್ರನು ತನ್ನನ್ನು ಪೂಜಿಸುವ ಶ್ರೇಷ್ಠನಾದ ಯಜಮಾನನನ್ನು ಎಲ್ಲಾ ಸಂಗ್ರಾಮಗಳಲ್ಲಿಯೂ ರಕ್ಷಿಸುತ್ತಾನೆ; ಸ್ವರ್ಗಸುಖದಾಯಕವಾದ ಸಮಸ್ತಸಂಗ್ರಾಮಗಳಲ್ಲಿಯೂ ರಕ್ಷಿಸುತ್ತಾನೆ; ಮನುಷ್ಯನಿಗೋಸ್ಕರ ಯಾಗದ್ವೇಷಿಗಳನ್ನು ಶಿಕ್ಷಿಸಿದನು; (ಕೃಷ್ಣನಾಮಕ ಅಸುರನ) ಕಪ್ಪಾದ ಚರ್ಮವನ್ನು ಸುಲಿದು (ಆ ರಾಕ್ಷಸನನ್ನು) ಹಿಂಸಿಸಿದನು; (ಅಗ್ನಿಯಂತೆ) ಪ್ರಜ್ವಲಿಸುತ್ತಾ ಹಿಂಸಕರೆಲ್ಲರನ್ನೂ (ಅವನ ಅನುಚರರನ್ನೂ ಧ್ವಂಸಮಾಡುತ್ತಾನೆ; ಹಿಂಸ ರುಚಿಯುಳ್ಳವರನ್ನೂ ನಿಃಶೇಷವಾಗಿ ನಾಶಮಾಡುತ್ತಾನೆ.

## English Translation.

Indra, the manifold protector (of his votaries) in battles, defends his Arya worshipper in all conflicts; in conflicts that confer heaven: he punished for (the benefit of) man the neglecters of religious rites: he tore off the black skin (of the aggressor): as if burning (with flame), he consumes the malignant; he utterly consumes him who delights in cruelty.

॥ ವಿಶೇಷವಿಷಯಗಳು ॥

**ಸಮತ್ಸು—ರಣೇಷು ಪ್ರಹಾರನಿಮಿತ್ತೇಷು ।** ಅಪಾಯಗಳು ಉಂಟಾಗುವುದಕ್ಕೆ ಕಾರಣವಾದ ಸನ್ನಿವೇಶಗಳಲ್ಲಿ ಅಥವಾ ಯುದ್ಧಗಳಲ್ಲಿ ಎಂದು ಅರ್ಥ. ಸಮತ್ಸು ಎಂಬ ಪದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ.

**ಯಜಮಾನಂ ಆರ್ಯಂ—ಅರಣೀಯಂ ಯಷ್ಟಾರಂ ।** ಯಜ್ಞಮಾಡುವ ಯಜಮಾನನು ಎಲ್ಲರಿಗೂ ಗೌರವಾಸ್ಪದನಾಗಿರುವನು ಎಂದು ಅರ್ಥ.

**ಶತಮೂತಿಃ ವಿಶ್ವೇಷು ಆಜಿಷು ಪ್ರಾವತ್—ಸರ್ವೇಷು ಸ್ಪರ್ಧಾನಿಮಿತ್ತೇಷು ಇಂದ್ರಃ ಯಜಮಾನಂ ಪ್ರಾವತ್ ।** ಅನ್ಯೋನ್ಯವಾಗಿ ವಿವಾದಮಾಡಿ (ಉತ್ಕರ್ಷವನ್ನು) ತನ್ನ ಅಭಿವೃದ್ಧಿಯನ್ನು ಸಂಪಾದಿಸುವ

ಅಭಿನಿವೇಶಗಳಲ್ಲಿ ಬಹಳ ವಿಧದಿಂದ ರಕ್ಷಿಸಲು ನಿಪುಣನಾದ ಇಂದ್ರನು ಯಜಮಾನನನ್ನು ಸರ್ವವಿಧದಿಂದಲೂ ರಕ್ಷಿಸುವನು ಎಂದು ಅರ್ಥ. ಆಜಿಶಬ್ದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ.

**ಸ್ವರ್ಮೀಳ್ಹೇಷು ಆಜಿಷು ಪ್ರಾವತ್—ಸ್ವರ್ಗದೇಶೇಷು ಸುಖಸ್ಯ ಸೇಚಯಿತೃಷು ವಾ ಮಹಾಸಂಗ್ರಾಮೇಷು ಸ್ವರ್ಗಪ್ರದಾನೇನ ರಕ್ಷತಿ ।** ಈ ಋಕ್ಕಿನಲ್ಲಿ ಆಜಿ ಶಬ್ದವು ಎರಡುಸಾರಿ ಪ್ರಯುಕ್ತವಾಗಿದೆ. ಇದಕ್ಕೆ ನಿರುಕ್ತಕಾರರು ಸಂಗ್ರಾಮ (ಯುದ್ಧ)ವೆಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ವಿಶೇಷಣಗಳ ಸಂಬಂಧದಿಂದ ಆಜಿಶಬ್ದಕ್ಕೆ ಸ್ಪರ್ಧಾ ನಿಮಿತ್ತವೆಂದೂ, ಸ್ವರ್ಗಪ್ರಾಪಕವಾದ ಮಹಾಸಂಗ್ರಾಮವೆಂದೂ ಅರ್ಥಮಾಡಿದ್ದಾರೆ. ಮತ್ತು ಸ್ವರ್ಮೀಳ್ಹ ಶಬ್ದವು ಸ್ವರ್ಗದಲ್ಲಿರುವ ಸುಖವನ್ನು ಉಂಟುಮಾಡುವುದೆಂದು ಅರ್ಥವನ್ನು ವಿವರಿಸಿದ್ದಾರೆ. ಇಂದ್ರನು ದೊಡ್ಡ ಯುದ್ಧಗಳಲ್ಲಿ ಪ್ರಾಣಗಳ ವಿಷಯದಲ್ಲಿ ಉಪೇಕ್ಷೆಯಿಂದ ವರ್ತಿಸಿದವರಿಗೆ ಎಂದರೆ ಶೌರ್ಯದಿಂದ ಯುದ್ಧ ಮಾಡಿದವರಿಗೆ ಸ್ವರ್ಗಸೌಖ್ಯವನ್ನು ಉಂಟುಮಾಡಿ ಅವರನ್ನು ರಕ್ಷಿಸುವನು ಎಂದು ಹೇಳಿದೆ. ಪರಾಶರರು,

**ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲಭೇದಿನೌ ।**
**ಪರಿವ್ರಾಡ್ಯೋಗಯುಕ್ತಶ್ಚ ರಣೇ ಚಾಭಿಮುಖೋ ಹತಃ ॥**

(ಪರಾಶರಸ್ಮೃತಿ. ೩-೩೫)

ಯೋಗಾಭ್ಯಾಸದಲ್ಲಿ ನಿರತನಾಗಿ ಐಹಿಕವಾದ ಸುಖಗಳಲ್ಲಿ ವೈರಾಗ್ಯದಿಂದ ಇರುತ್ತಾ ಆತ್ಮಸಾಕ್ಷಾತ್ಕಾರವನ್ನು ಸಂತತವಾಗಿ ಹೊಂದುತ್ತಿರುವ ಯೋಗಿಯೂ, ದೊಡ್ಡ ಯುದ್ಧಗಳಲ್ಲಿ ತನ್ನ ಪ್ರಾಣದಮೇಲಿನ ಆಸೆಯನ್ನೂ ಬಿಟ್ಟು ಹಿಂತಿರುಗದೆ ಯುದ್ಧಮಾಡಿ ಯುದ್ಧದಲ್ಲಿ ಪ್ರಾಣವನ್ನು ಕಳೆದುಕೊಂಡ ವೀರನೂ, ಇವರಿಬ್ಬರೂ ಕೂಡ ಪುನಃ ಜನ್ಮಗಳು ಉಂಟಾಗದಿರುವ ಸ್ಥಿತಿಪ್ರಾಪಕವಾದ ಸೂರ್ಯಮಂಡಲದಿಂದ ಸಂಚರಿಸಲರ್ಹವಾದ ಸ್ಥಿತಿಯನ್ನು ಹೊಂದುವರು ಎಂದು ಪರಾಶರ ಸ್ಮೃತಿಯಲ್ಲಿ ಉಕ್ತವಾಗಿರುತ್ತದೆ. ಶಾಶ್ವತವಾದ ಅಪುನರಾವೃತ್ತಿರೂಪವಾದ ಗತಿಯನ್ನು ಹೊಂದುವ ಇವರಿಗೆ ಸ್ವರ್ಗಸುಖವೂ ಲೆಕ್ಕಮಾಡಲರ್ಹವಾಗಿಲ್ಲವೆಂಬುದು ಇದರಿಂದ ಸೂಚಿತವಾಗುತ್ತದೆ. ಆದರೆ ಇಂದ್ರನು ಇಂತಹ ವೀರರಿಗೆ ಸನ್ಮಾನದಿಂದ ಸ್ವರ್ಗಸುಖವನ್ನೂ ಉಂಟುಮಾಡಿ ರಕ್ಷಿಸುವನು ಎಂದು ಇಂದ್ರನ ರಕ್ಷಣೆಯ ಮಹತ್ವವನ್ನು ವರ್ಣಿಸಿದೆ.

**ಮನವೇ ಶಾಸದವ್ರತಾನ್ ತ್ವಚಂ ಕೃಷ್ಣಾಮರಂಧಯತ್—ಮನುಷ್ಯಾಣಾಮರ್ಥಾಯ ಯಾಗವಿದ್ವೇಷಿಣಃ ಹಿಂಸಿತವಾನ್ । ಕೃಷ್ಣನಾಮ್ನೋ ಅಸುರಸ್ಯ ಕೃಷ್ಣವರ್ಣಾಂ ತ್ವಚಮುತ್ಕೃತ್ಯ ಹಿಂಸಿತವಾನ್।** ಮನು ಶಬ್ದಕ್ಕೆ ಮನುಷ್ಯರು ಎಂದು ಅರ್ಥವನ್ನು ಮಾಡಿದೆ. ಇಂದ್ರನು ಮನುಷ್ಯರಿಗೆ ಹಿತವನ್ನೂ, ಸುಖವನ್ನೂ ಉಂಟುಮಾಡುವುದಕ್ಕಾಗಿ ಯಜ್ಞಕಂಟಕರಾದವರನ್ನು (ಶಿಕ್ಷೆಗೆ ಗುರಿಮಾಡುತ್ತಾನೆ.) ಹಿಂಸೆಮಾಡಿ ನಾಶಮಾಡಿದ್ದಾನೆ. ಕೃಷ್ಣನೆಂಬ ಅಸುರನ ಕಪ್ಪುಬಣ್ಣವಾದ ಚರ್ಮವನ್ನು ಸುಲಿದು ಅವನನ್ನು ಕೊಂದಿದ್ದಾನೆ ಎಂದು ಅರ್ಥವನ್ನು ವಿವರಿಸಿದೆ. ಈ ವಿಷಯದಲ್ಲಿ ಸಾಯಣರು ಒಂದು ಇತಿಹಾಸವನ್ನು ಉದಹರಿಸಿದ್ದಾರೆ.

**ಅತ್ರೇತಿಹಾಸಮಾಚಕ್ಷತೇ । ಅಂಶುಮತೀನಾಮ ನದೀ । ತಸ್ಯಾಸ್ತೀರೇ ಕೃಷ್ಣನಾಮಾ ಅಸುರಃ ವರ್ಣತಶ್ಚ ಕೃಷ್ಣಃ ದಶಸಹಸ್ರೈರನುಚರೈರುಪೇತಃ ತದ್ದೇಶವರ್ತಿನಃ ಪೀಡಯನ್ನಾಸ್ತೇ । ತತ್ರೇಂದ್ರಃ ಬೃಹಸ್ಪತಿನಾ ಪ್ರೇರಿತಸ್ಸನ್ ಮರುದ್ಭಿಃ ಸಹಿತಃ ಕೃಷ್ಣಾಂ ತದೀಯತ್ವಚಮುತ್ಕೃತ್ಯ ಸಾನುಚರಮವಧೀತ್ । ಅಯಮರ್ಥಃ ॥**

**ಅವ ದ್ರಪ್ಸೋ ಅಂಶುಮತೀಮತಿಷ್ಠದಿಯಾನಃ ಕೃಷ್ಣೋ ದಶಭಿಃ ಸಹಸ್ರೈಃ ।**
**ಆವತ್ತಮಿಂದ್ರಃ ಶಚ್ಯಾ ಧಮಂತಮಪ ಸ್ನೇಹಿತೀರ್ನೃಮಣಾ ಅಧತ್ತ ॥**
(ಋ. ಸಂ. ೮-೯೬-೧೩)

**ಇತ್ಯಾದಿನಾ ಉಪರಿಷ್ಟಾತ್ ವಕ್ಷ್ಯತೇ । ತದತ್ರೋಚ್ಯತೇ** । ಅಂಶುಮತೀ ಎಂದು ಪ್ರಸಿದ್ಧವಾದ ನದಿಯು ಹರಿಯುತ್ತಿರುವ ದೇಶದಲ್ಲಿ ಕೃಷ್ಣನೆಂದು ಹೆಸರುಳ್ಳ ಒಬ್ಬ ಅಸುರನು ಇದ್ದನು. ಅವನು ತನ್ನ ಹೆಸರಿಗೆ ತಕ್ಕಹಾಗೆ ಕಪ್ಪು ಬಣ್ಣವುಳ್ಳವನಾಗಿದ್ದನು. ಇವನೊಡನೆ ಹತ್ತುಸಾವಿರ ಜನರು ಇವನಿಗೆ ವಿಧೇಯರಾಗಿ ಇವನಂತೆಯೇ ಕೆಲಸಗಳನ್ನು ಮಾಡುತ್ತಿದ್ದರು. ಇವನು ಇವರೊಡನೆ ಆ ದೇಶದಲ್ಲಿ ವಾಸಮಾಡುವವರೆಲ್ಲರಿಗೂ ಬಹಳವಾಗಿ ಹಿಂಸೆಯನ್ನು ಉಂಟುಮಾಡಿ ಅವರನ್ನು ಕೊಲ್ಲುತ್ತಿದ್ದನು; ದೇವತೆಗಳೆಲ್ಲರಿಗೂ ಪುರೋಹಿತನಾದ ಮತ್ತು ಇಂದ್ರನಿಗೆ ಮಂತ್ರಿಯಾದ ಬೃಹಸ್ಪತಿಯು ಇದನ್ನು ತಿಳಿದು ಈ ಅಸುರನನ್ನೂ ಯಜ್ಞಕಂಟಕರಾದ ಇವನ ಅನುಚರರನ್ನೂ ನಿಗ್ರಹಿಸಬೇಕೆಂದು ಇಂದ್ರನಿಗೆ ತಿಳಿಸಿದನು. ಆಗ ಇಂದ್ರನು ಮರುದ್ದೇವತೆಗಳೊಡನೆ ಕೂಡಿ ಈ ಅಸುರನ ಸಂಗಡ ಯುದ್ಧವನ್ನು ಮಾಡಿ ಕೃಷ್ಣನೆಂಬ ಅಸುರನ ಚರ್ಮವನ್ನು ಸುಲಿದು ಅವನನ್ನೂ ಅವನ ಅನುಚರರನ್ನೂ ಕೊಂದು ಆ ದೇಶದವರೆಲ್ಲರನ್ನೂ ರಕ್ಷಿಸಿದನು ಎಂದೂ ಈ ಅಂಶವು "ಅವದ್ರಪ್ಸೋ ಅಂಶುಮತೀಮತಿಷ್ಠತ್" ಎಂಬ **ಋಕ್ಕಿನ** ಅರ್ಥವನ್ನು ವಿವರಿಸುವಾಗ ವಿವೃತವಾಗಿದೆ ಎಂದೂ ವರ್ಣಿಸಿದೆ.

**ಧಕ್ಷತ್—ಭಸ್ಮೀಕರೋತಿ ।** ಇಂದ್ರನು ಲೋಕದಲ್ಲಿ ಇತರರಿಗೆ ಹಿಂಸೆಮಾಡುವ ಯಜ್ಞಕಂಟಕರನ್ನು ಕೊಲ್ಲುವನು ಎಂದು ಅರ್ಥ.

**ತತೃಷಾಣಮೋಷತಿ—ನ್ಯರ್ಶಸಾನಮೋಷತಿ** ಎಂದು ಓಷತಿ ಪದವು ದ್ವಿರುಕ್ತವಾಗಿದೆ. **ಸರ್ವಮಪಿ ಹಿಂಸಕಂ ತದನುಚರಸಘಂ ದಹತಿ** ಇಂದ್ರನು ಹಿಂಸೆಯನ್ನು ಉಂಟುಮಾಡುವವರನ್ನೂ ಮತ್ತು ಅವರ ಸೇವಕರನ್ನೂ ಸಹ ನಾಶಮಾಡುತ್ತಾನೆ ಎಂದೂ, **ಅರ್ಶಸಾನಂ ಹಿಂಸಾರುಚಿಂ ಹತಾವಶಿಷ್ಟಂ ಸರ್ವಮಪಿ ನಿಶ್ಶೇಷೇಣ ದಹತಿ** ಹಿಂಸೆಮಾಡುವವರಲ್ಲಿ ಯಾರೂ ಉಳಿಯದಹಾಗೆ ಅವರೆಲ್ಲರನ್ನೂ ಇಂದ್ರನು ನಾಶಪಡಿಸುವನೆಂದೂ ಅರ್ಥವನ್ನು ವಿವರಿಸಿದೆ.

**ಆರ್ಯ.—ಅರಣೀಯಂ, ಸರ್ವೈರ್ಗಂತವ್ಯಂ ।** ಎಲ್ಲರಿಂದಲೂ ಹೊಂದಲರ್ಹವಾದದ್ದು ಎಂದು ಅರ್ಥಮಾಡಿದೆ. ನಿರುಕ್ತಕಾರರು

**ಯವಂ ವೃಕೇಣಾಶ್ವಿನಾ ವಪಂತೇಷಂ ದುಹಂತಾ ಮನುಷಾಯ ದಸ್ರಾ ।**
**ಅಭಿ ದಸ್ಯುಂ ಬಕುರೇಣಾ ಧಮಂತೋರು ಜ್ಯೋತಿಶ್ಚಕ್ರಥುರಾರ್ಯಾಯ ॥**
(ಋ. ಸಂ. ೧-೧೧೭-೨೧)

ಈ ಋಕ್ಕಿನಲ್ಲಿ ಆರ್ಯಶಬ್ದಕ್ಕೆ ಈಶ್ವರಪುತ್ರನೆಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು **ಆರ್ಯಾಯ ವಿದುಷೇ** ತಿಳುವಳಿಕೆಯುಳ್ಳವನೆಂಬ ಅರ್ಥವನ್ನು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಆರ್ಯಂ**—ಋ ಗತೌ. ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಣಿತ್ತಾದುದರಿಂದ ವೃದ್ಧಿ ಬರುತ್ತದೆ. ರಪರವಾಗಿ ಬರುತ್ತದೆ.

**ಆವತ್**—ಅವ ರಕ್ಷಣೇ. ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶತಮೂತಿಃ**—ಶತಂ ಅಪರಿಮಿತಂ ಊತಿಃ ರಕ್ಷಣಂ ಯಸ್ಯ ಸಃ ಶತಮೂತಿಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವಿಶ್ವೇಷು**—ಇದು ಆಜಿಷು ಎಂಬುದಕ್ಕೆ ವಿಶೇಷಣವಾಗಿರುವಾಗ **ಯಲ್ಲಿಂಗಂ ಯದ್ವಚನಂ**—ಎಂಬ ವಚನದಿಂದ ಸ್ತ್ರೀಲಿಂಗವಾಗಬೇಕು. ಆದರೆ ವ್ಯತ್ಯಯದಿಂದ ಪುಲ್ಲಿಂಗದಲ್ಲಿ ಪ್ರಯುಕ್ತವಾಗಿದೆ.

**ಸ್ವಃ ಮೀಳ್ಹೇಷು**—ಮಿಹ ಸೇಚನೇ. ಧಾತು. ಕ್ತ ಪ್ರತ್ಯಯ. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಝಷಸ್ತಥೋರ್ಧೋಽಧಃ** (ಪಾ. ಸೂ. ೮-೨-೪೦) ಎಂಬುದರಿಂದ ಪ್ರತ್ಯಯ ತಕಾರಕ್ಕೆ ಧತ್ವ ಬಂದಾಗ ಅದಕ್ಕೆ ಷ್ಟುತ್ವ. **ಢೋಢೇ ಲೋಪಃ** (ಪಾ. ಸೂ. ೮-೩-೧೩) ಎಂಬುದರಿಂದ ಪೂರ್ವದ ಢಕಾರಕ್ಕೆ ಲೋಪ ಬಂದಾಗ **ಢ್ರಲೋಪೇ ಪೂರ್ವಸ್ಯ**—ಎಂಬುದರಿಂದ ಪೂರ್ವದ ಇಕಾರಕ್ಕೆ ದೀರ್ಘ. ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಶಾಸತ್**—ಶಾಸು ಅನುಶಿಷ್ಟೌ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ **ಲೇಟೋ ಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಚಾದಿಲೋಪೇ**—(ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ಅವ್ರತಾನ್**—ನ ವಿದ್ಯತೇ ವ್ರತಂ ಯೇಷಾಂ ತೇ ಅವ್ರತಾಃ. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ಕೃಷ್ಣಾಂ**—ಕೃಷ ವಿಲೇಖನೇ. ಧಾತು. **ಕೃಷೇರ್ವರ್ಣೇ** (ಉ. ಸೂ. ೩-೨೮೪) ಎಂಬುದರಿಂದ ನಕ್ ಪ್ರತ್ಯಯ. ಷ್ಟುತ್ವದಿಂದ ಅದಕ್ಕೆ ನಕಾರಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸ್ತ್ರೀತ್ವ ವಿವಕ್ಷಾ ಮಾಡಿದಾಗ ಅದಂತವಾದುದರಿಂದ ಟಾಪ್. ದ್ವಿತೀಯಾ ಏಕವಚನಾಂತರೂಪ.

**ಮನವೇ**—ವ್ಯತ್ಯಯದಿಂದ ಷಷ್ಠೀಗೆ ಚತುರ್ಥೀ ವಿಭಕ್ತಿ ಬಂದಿದೆ.

**ಅರಂಧಯತ್**—ರಧ ಹಿಂಸಾಯಾಂ ಧಾತು. ಣಿಜಂತದ ಮೇಲೆ ಲಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ. ಶಪ್ ವಿಕರಣ. **ರಧಿ ಜಭೋರಚಿ** (ಪಾ ಸೂ. ೭-೧-೬೧) ಎಂಬುದರಿಂದ ಧಾತುವಿಗೆ ನುಮಾಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಣಿಚಿಗೆ ಶಪ್ ನಿಮಿತ್ತವಾಗಿ ಗುಣ, ಅಯಾದೇಶ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಧಕ್ಷತ್**—ದಹ ಭಸ್ಮೀಕರಣೇ. ಧಾತು.. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ, ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. **ದಾದೇರ್ಧಾತೋರ್ಘಃ**

ಎಂಬುದರಿಂದ ಧಾತುಹಕಾರಕ್ಕೆ ಘತ್ವ. **ಖರಿ ಚ** ಎಂಬುದರಿಂದ ಚರ್ತ್ವ. ಕಕಾರವನ್ನು ನಿಮಿತ್ತೀಕರಿಸಿ ಸಿಪ್ಪಿನ ಸಕಾರಕ್ಕೆ ಷತ್ವ. **ಏಕಾಚೋಬಶೋ**—ಎಂಬುದರಿಂದ ಧಾತ್ವಾದಿಗೆ ಧತ್ವ. ಧಕ್ಷತ್ ಎಂದು ರೂಪವಾಗುತ್ತದೆ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ತತೃಷಾಣಂ**—ಞಿತೃಷಾ ಪಿಪಾಸಾಯಾಂ ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ ಕಾನಚಾದೇಶ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಓಷತಿ**—ಉಷ ದಾಹೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅರ್ಣಸಾನಂ**—ಋ ಗತೌ ಧಾತು. **ಅರ್ತೇರ್ಗುಣಃ ಶುಟ್ ಚ** (ಉ. ಸೂ. ೨-೨೪೫) ಎಂಬುದರಿಂದ ಅಸಾನಚ್ ಪ್ರತ್ಯಯ. ಧಾತುವಿಗೆ ಗುಣ. ಶುಟಾಗಮ. ಗುಣ ರಪರವಾಗಿ ಬರುತ್ತದೆ. ಆಗಮ ಟಿತ್ತಾದುದರಿಂದ ಪ್ರತ್ಯಯದ ಆದಿಗೆ ಬರುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ‖ ೮ ‖

‖ ಸಂಹಿತಾಪಾಠಃ ‖

ಸೂರಶ್ಚಕ್ರಂ ಪ್ರ ವೃಹಜ್ಜಾತ ಓಜಸಾ ಪ್ರಪಿತ್ವೇ ವಾಚಮರುಣೋ
ಮುಷಾಯತೀಶಾನ ಆ ಮುಷಾಯತಿ ।
ಉಶನಾ ಯತ್ಪರಾವತೋಽಜಗನ್ನೂತಯೇ ಕವೇ ।
ಸುಮ್ನಾನಿ ವಿಶ್ವಾ ಮನುಷೇವ ತುರ್ವಣಿರಹಾ ವಿಶ್ವೇವ ತುರ್ವಣಿಃ ‖ ೯ ‖

‖ ಪದಪಾಠಃ ‖

ಸೂರಃ । ಚಕ್ರಂ । ಪ್ರ । ವೃಹತ್ । ಜಾತಃ । ಓಜಸಾ । ಪ್ರಽಪಿತ್ವೇ । ವಾಚಂ । ಅರುಣಃ । ಮುಷಾಯತಿ ।
ಈಶಾನಃ । ಆ । ಮುಷಾಯತಿ ।
ಉಶನಾ । ಯತ್ । ಪರಾಽವತಃ । ಅಜಗನ್ । ಊತಯೇ । ಕವೇ ।
ಸುಮ್ನಾನಿ । ವಿಶ್ವಾ । ಮನುಷಾಽಇವ । ತುರ್ವಣಿಃ । ಅಹಾ । ವಿಶ್ವಾಽಇವ । ತುರ್ವಣಿಃ ‖ ೯ ‖

॥ ಸಾಯಣಭಾಷ್ಯಂ ॥

ಅತ್ರಾಪೀತಿಹಾಸಮಾಚಕ್ಷತೇ । ಕೇಚನಾಸುರಾಃ ಪೂರ್ವಮಿಂದ್ರವಜ್ರೇಣ ವಧೋ ಮಾ ಭೂದಿತಿ ಬ್ರಹ್ಮಣೋ ವರಂ ಲಬ್ಧ್ವೇಂದ್ರಮಗಣಯಿತ್ವೋದ್ವೃತ್ತಾ ಆಸನ್ । ತಾನ್ ಹಂತುಮಿಂದ್ರಃ ಸೂರ್ಯ-ರಥಸ್ಯ ಚಕ್ರಮಾದಾಯಾವಧೀದಿತಿ । ತದಿದಮುಚ್ಯತೇ । ಅಯಮಿಂದ್ರಃ ಸೂರಃ ಸೂರ್ಯಸ್ಯ ॥ ಷಷ್ಠ್ಯರ್ಥೇ ಪ್ರಥಮಾ ॥ ಚಕ್ರಂ ರಥಸ್ಯ ಚಕ್ರಮಾದಾಯೌಜಸಾ ಶಾರೀರೇಣ ಬಲೇನ ಜಾತಃ ಸಮೃದ್ಧಃ ಸನ್ ಪ್ರ ವೃಹತ್ । ಪ್ರಕ್ಷಿಪ್ತವಾನ್ ॥ ವೃಹೂ ಉದ್ಯಮನೇ । ತೌದಾದಿಕಃ ॥ ಕಿಂಚಾರುಣೋಽರುಣವರ್ಣೋಽತ್ಯಂತ ತೇಜೋಯುಕ್ತಃ ಸನ್ ಯದ್ವಾ ಗಮನಶೀಲಃ ಸನ್ ಪ್ರಪಿತ್ವೇ ತೇಷಾಂ ಸಮೀಪೇ ತತ್ಸಮೀಪಮಾಗತ್ಯ ವಾಚಂ ವಾಗುಪಲಕ್ಷಿತಂ ಪ್ರಾಣಂ ಮುಷಾಯತಿ । ಮುಮೋಷ ಮುಷ್ಣಾತಿ ವಾ । ಪ್ರಪಿತ್ವೆ ಇತ್ಯಾಸನ್ನ-ನಾಮ । ಯದ್ವಾ । ವಾಚಂ ತೇಷಾಂ ಪ್ರಹಾರಧ್ವನಿಂ ಮುಷಾಯತಿ । ತೇಷು ಹತೇಷು ಧ್ವನಿಃ ಸ್ವಯಮೇವ ವಿಶ್ರಾಂತೋ ಭವತಿ । ಅವಧೀದಿತ್ಯರ್ಥಃ । ಅಥವಾ । ಇಂದ್ರ ಏವ ದ್ಯುಸ್ಥಾನಃ ಸನ್ನಾದಿತ್ಯಾತ್ಮನಾ ಸ್ತೂಯತೇ । ಸುರಃ ಸೂರ್ಯೋ ಜಾತ ಉದಿತಃ ಸನ್ನೋಜಸಾ ಸ್ವಕೀಯೇನ ತೇಜಸಾ ಯುಕ್ತಶ್ಚಕ್ರಂ ಪ್ರ ವೃಹತ್ । ತಮೋನಿವಾರಣಾರ್ಥಮಸುರಜಯಾಯ ವಾ ಚಕ್ರೋಪಲಕ್ಷಿತಂ ರಥಂ ಪ್ರಕರ್ಷೇಣೋದ್ಯತಂ ಕರೋತಿ । ತತಃ ಪೂರ್ವಮರುಣಸ್ತದ್ರಥಯಂತಾ ಪ್ರಪಿತ್ವೇ ಮಂದೇಹಾದ್ಯಸುರಾಣಾಂ ಪ್ರಪಿತ್ವೇ ಸಮೀಪೇ ವಾಚಂ ತೇಷಾಂ ಜಹಿ ಭಿಂದೀತ್ಯಾದಿಧ್ವನಿಂ ಮುಷಾಯತಿ । ಮುಷ್ಣಾತಿ ॥ ಮುಷೇರುತ್ತರಸ್ಯ ಶ್ನೋಽಹಾವಪಿ ಛಂದಸಿ ಶಾಯಜಪೀತಿ ಶಾಯಜಾದೇಶಃ ॥ ತದನಂತರಂ ಸೂರ್ಯ ಈಶಾನಃ ಸರ್ವಾಣಿ ತಮಾಂಸ್ಯಸುರಾನ್ವಾ ನಿರಾಕರ್ತುಂ ಸಮರ್ಥಃ ಸನ್ ಆ ಮುಷಾಯತಿ । ಸಮಂತಾನ್ಮುಷ್ಣಾತಿ । ಅಥ ಪ್ರತ್ಯಕ್ಷಕೃತಃ । ಹೇ ಕವೇ ಕ್ರಾಂತದರ್ಶಿನ್ ಯದ್ಯಸ್ತ್ವಮುಶನೋಶನಸ ಏತನ್ನಾಮ್ನೋ ಮಹರ್ಷೇ-ರೂತಯೇ ರಕ್ಷಣಾಯ ಪರಾವತೋ ದೂರಾತ್ಸ್ವರ್ಗಸ್ಥಾನಾದಜಗನ್ ಗತವಾನಸಿ ಪ್ರಾಪ್ತವಾನಸಿ ॥ ಗಮೇಃ ಸಿಪಿ ಛಾಂದಸಃ ಶಪಃ ಶ್ಲುಃ । ಹಲ್ಙ್ಯಾದಿಲೋಪೇ ಮೋ ನೋ ಧಾತೋಃ । ಪಾ. ೮-೨-೬೪ । ಇತಿ ನತ್ವಂ ॥ ಯದ್ವಾ । ಉಶನೋಶನಸಾ ಯುಕ್ತಃ ಸನ್ನಜಗನ್ । ಆಗಚ್ಛ । ಆಗತ್ಯ ಚ ವಿಶ್ವಾ ವಿಶ್ವಾನಿ ಸುಮ್ನಾನಿ ಸುಖಸಾಧನಾನಿ ಧನಾನ್ಯಾದಾಯಾಸ್ಮಾಕಂ ತುರ್ವಣಿಸ್ತೂರ್ಣವನಿಃ ಕ್ಷಿಪ್ರಂ ಸಂಭಕ್ತಾ ಭವೇತಿ ಶೇಷಃ । ತುರ್ವಣಿಸ್ತೂರ್ಣವನಿರಿತಿ ನಿರುಕ್ತಂ । ೬-೧೪ । ತತ್ರ ದೃಷ್ಟಾಂತಃ । ಮನುಷೇವ ಮನುಷ್ಯೇಣೇವ । ಯಥಾ ತ್ವೋತೇನ ಪರಿವೃಢಾಯ ದೇಶಾಂತರಾದಭಿಮತಂ ಧನಮಾನೀಯತೇ ತದ್ವತ್ । ಯದ್ವಾ । ಮನುಷೇವ ಮನುಷ್ಯಾಣಾಮಿವ । ಇತರೇಷಾಮೃತ್ವಿಜಾಂ ವಿಶ್ವಾ ಸುಮ್ನಾನಿ ಸರ್ವಾಣಿ ಧನಾನ್ಯಾದಾಯ ತುರ್ವಣಿರ್ಭವಸಿ । ತದ್ವದಸ್ಮಾಕಮಪಿ । ನ ಕೇವಲಮೇಕಸ್ಮಿನ್ನೇವ ಯಾಗದಿನೇ ಕಿಂತ್ವಿಹಾ ವಿಶ್ವೇವ ವಿಶ್ವಾನ್ಯಪ್ಯಹಾನಿ ಸರ್ವೇಷ್ವಪ್ಯಹಃಸು ತುರ್ವಣಿರ್ಭವ । ಯದ್ವಾ । ತುರ್ವಣಿಸ್ತ್ವಮಹಾ ವಿಶ್ವೇವ ವಿಶ್ವಾನ್ಯ-ಹಾನ್ಯತಿದೀರ್ಘಮಾಯುಷ್ಯಂ ಯಥಾ ದದಾಸಿ ತಥಾ ಸುಮ್ನಾನ್ಯಪಿ । ಉಭಯಮಪಿ ದೇಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಅಯಂ ಇಂದ್ರಃ—ಈ ಇಂದ್ರನು) । **ಸೂರಃ**—ಸೂರ್ಯನ । **ಚಕ್ರಂ**—ರಥ ಚಕ್ರವನ್ನು (ತೆಗೆದುಕೊಂಡು) ಓಜಸಾ—ಶರೀರಬಲದಿಂದ । **ಜಾತಃ**—ಸಮೃದ್ಧನಾಗಿ । **ಪ್ರ ವೃಹತ್**—(ಶತ್ರುಗಳಮೇಲೆ) ಎಸೆದನು । (**ಕಿಂಚ**—

ಮತ್ತು) | **ಅರುಣಃ**—ಅರುಣವರ್ಣನಾಗಿ ಅಥವಾ ತೇಜೋವಿಶಿಷ್ಟನಾಗಿ ಅಥವಾ ಗಮನಶೀಲನಾಗಿ | **ಪ್ರಪಿತ್ವೇ**—(ಅವರ) ಸಮೀಪದಲ್ಲಿ (ಸಮೀಪಕ್ಕೆ ಹೋಗಿ) | **ವಾಚಂ**— ವಾಗ್ರೂಪ ಪ್ರಾಣವನ್ನು ಅಥವಾ ಪ್ರಹಾರಧ್ವನಿಯನ್ನು | **ಮುಷಾಯತಿ**—ನೀಗಿಸುತ್ತಾನೆ [ ಅಥವಾ | **ಸೂರಃ**—ಆದಿತ್ಯ(ರೂಪಿಯಾದ ಇಂದ್ರ)ನು | **ಜಾತಃ**— ಉದಿತನಾಗಿ | **ಓಜಸಾ**—ಸ್ವಕೀಯ ತೇಜಸ್ಸಿನಿಂದ | **ಚಕ್ರಂ** ಚಕ್ರವನ್ನು (ರಥವನ್ನು) | **ಪ್ರ ವೃಹತ್**—(ತಮೋನಿವಾರಣ) ಕಾರ್ಯೋನ್ಮುಖವನ್ನಾಗಿ ಮಾಡುತ್ತಾನೆ; (ಅದಕ್ಕೆ ಪೂರ್ವದಲ್ಲಿ ) **ಅರುಣಃ**—ಅರುಣನಾಮಕನಾದ ಸೂರ್ಯಸಾರಥಿಯು | **ಪ್ರಪಿತ್ವೇ**—(ಮಂದೇಹಾದಿ ಅಸುರರ) ಸಮೀಪದಲ್ಲಿ | **ವಾಚಂ** – (ಹೊಡಿ, ಕಡಿ ಎಂಬ ಅವರ) ವಸ್ತುಗಳನ್ನು | **ಮುಷಾಯತಿ**— ಇಲ್ಲದಂತೆ ಮಾಡುತ್ತಾನೆ ] (ಅನಂತರ ಸೂರ್ಯನು) | **ಈಶಾನಃ** – (ತಮಸ್ಸನ್ನು ಅಥವಾ ಅಸುರರನ್ನು) ನಿರಾಕರಿಸಲು ಸಮರ್ಥನಾಗಿ | **ಆ ಮುಷಾಯತಿ**—(ಅವರನ್ನು) ನಿಶ್ಶೇಷವಾಗಿ ನಾಶಮಾಡುತ್ತಾನೆ; | **(ಹೇ) ಕವೇ**—(ಎಲೈ)ಜ್ಞಾನಿಯೇ | **ಉಶನಾ** — ಉಶನಸನೆಂಬ ಋಷಿಯೊಡನೆ | **ಊತಯೇ**--(ನಮ್ಮ) ರಕ್ಷಣೆಗೋಸ್ಕರ | **ಪರಾವತಃ**—ಬಹಳ ದೂರದೇಶದಿಂದ (ಸ್ವರ್ಗಲೋಕದಿಂದ)| **ಅಜಗನ್**—ಆಗಮಿಸು | [ಅಥವಾ **ಯತ್**—ಯಾವ ನೀನು | **ಉಶನಾ**— ಉಶನಸನೆಂಬ ಋಷಿಯ | **ಊತಯೇ**—ರಕ್ಷಣೆಗೋಸ್ಕರ | **ಪರಾವತಃ**—ಬಹಳ ದೂರದೇಶದಿಂದ (ಸ್ವರ್ಗದಿಂದ) | **ಅಜಗನ್**-ಬಂದೆಯೋ | ( **ಸಃ**—ಅಂಥಾ ನೀನು) ] **ವಿಶ್ವಾ ಸುಮ್ನಾನಿ**— ಎಲ್ಲಾ ಸುಖಸಾಧನ ದ್ರವ್ಯಗಳನ್ನೂ (ತೆಗೆದುಕೊಂಡು ಬಂದು) | **ಮನುಷಾ ಇವ**—(ದೂರದೇಶದಿಂದ ಬರುವ) ಮನುಷ್ಯನಿಂದ (ಅಭಿಮತ ಪದಾರ್ಥಗಳು ಆನೀತವಾಗುವಂತೆ) ಅಥವಾ ಇತರ ಋತ್ವಿಜಾದಿಗಳಿಗೆ (ಧನಾಧಿಗಳನ್ನನುಗ್ರಹಿಸುವಂತೆ) | **ತುರ್ವಣಿಃ (ಭವ)**—ಕ್ಷಿಪ್ರವಾಗಿ ಅನುಗ್ರಹಿಸುವವನಾಗು | **ವಿಶ್ವಾ ಅಹಾ ಇವ**—ಸಮಸ್ತ ದಿನಗಳಲ್ಲಿಯೂ | **ತುರ್ವಣಿಃ (ಭವ)**—ಕ್ಷಿಪ್ರವಾಗಿ (ಧನಾದಿಗಳನ್ನು) ಅನುಗ್ರಹಿಸು | [ ಅಥವಾ | **ತುರ್ವಣಿಃ**—ದಾನಶೀಲನಾದ ನೀನು | **ವಿಶ್ವಾ ಅಹಾ ಇವ**—ದೀರ್ಘಾಯುಷ್ಯವನ್ನು (ಅನುಗ್ರಹಿಸುವಂತೆ) ] **ವಿಶ್ವಾ ಸುಮ್ನಾನಿ**—ಸಮಸ್ತಸುಖಸಾಧನಗಳನ್ನೂ | **ತುರ್ವಣಿಃ ( ಭವ)**—ಕ್ಷಿಪ್ರವಾಗಿ ಅನುಗ್ರಹಿಸುವವನಾಗು.

॥ ಭಾವಾರ್ಥ ॥

ಅತಿಶಯವಾದ ಶರೀರಬಲದಿಂದ ಯುಕ್ತನಾದ ಇಂದ್ರನು-ಸೂರ್ಯನ ಚಕ್ರದ ರಥವನ್ನು (ಶತ್ರುಗಳ ಮೇಲೆ) ಎಸೆದನು; ಅರುಣವರ್ಣನಾಗಿ (ಅವರನ್ನು) ನಿರ್ನಾಮಮಾಡಿದನು; (ರಾಕ್ಷಸಸಂಹಾರಕ್ಕೆ) ಸಮರ್ಥನಾಗಿ, (ಅವರನ್ನು) ನಿರ್ಮೂಲಮಾಡಿದನು; ಎಲೈ ಜ್ಞಾನಿಯಾದ ಇಂದ್ರನೇ, ಉಶನಸನೆಂಬುವನ ರಕ್ಷಣೆಗಾಗಿ ದೂರದ ಸ್ವರ್ಗಲೋಕದಿಂದ ಬಂದಹಾಗೆ ಮತ್ತು ಇತರ ಋತ್ವಿಜಾದಿಗಳಿಗೆ (ಸಮಸ್ತಸುಖಸಾಧನಗಳನ್ನನುಗ್ರಹಿಸುವಂತೆ), ಸಮಸ್ತಸುಖಸಾಧನವಿಶಿಷ್ಟನಾಗಿ ಬಂದು, (ಅವುಗಳನ್ನು) ನಮಗೆ ಬೇಗ ಅನುಗ್ರಹಿಸು; ಸರ್ವದಾ ನಮಗೆ ಸುಖಪ್ರದನಾಗು.

## English Translation.

Endowed with augmented vigour, he hurled (against the foes) the wheel (of the chariot) of the sun; and, ruddy of hue, deprived them of existence; he, the sovereign lord, deprived them of existence. As you, sage Indra, come from afar to the succour of Ushanas, so do you come

quickly, bearing all good things (to us), as you bear to (other) men; come quickly (to us) every day.

॥ ವಿಶೇಷವಿಷಯಗಳು ॥

**ಸೂರಃ ಚಕ್ರಂ ಓಜಸಾ ಪ್ರ ವೃಹತ್—ಸೂರ್ಯಸ್ಯ ರಥಸ್ಯ ಚಕ್ರಮಾದಾಯ ಶಾರೀರೇಣ ಬಲೇನ ಸಮೃದ್ಧಸ್ಸನ್ ಪ್ರಕ್ಷಿಪ್ತವಾನ್ । ಅತ್ರಾಪಿ ಇತಿಹಾಸಮಾಚಕ್ಷತೇ । ಕೇಚನ ಅಸುರಾಃ ಇಂದ್ರಸ್ಯ ವಜ್ರಾಯುಧೇನ ಅಸ್ಮಾಕಂ ವಧೋ ಮಾಭೂದಿತಿ ಬ್ರಹ್ಮಣಾ ವರಂ ಲಬ್ಧ್ವಾ ಇಂದ್ರಂ ಅಗಣಯ್ಯ ಉದ್ವೃತ್ತಾಃ ಸ್ಥಿತಾಃ। ತಾನ್ ಹಂತುಮಿಂದ್ರಃ ಸೂರ್ಯರಥಸ್ಯ ಚಕ್ರಂ ಆದಾಯ ಅವಧೀತ್ ಇತಿ । ತದತ್ರೋಚ್ಯತೇ ।** ಕೆಲವು ಅಸುರರು ಇಂದ್ರನ ವಜ್ರಾಯುಧದಿಂದ ಮರಣವಾಗಬೇಡವೆಂದು ಬ್ರಹ್ಮನಿಂದ ವರವನ್ನು ಹೊಂದಿ ಇಂದ್ರನನ್ನು ಲಕ್ಷ್ಯಮಾಡದೆ ದುರ್ಮಾರ್ಗದಿಂದ ವರ್ತಿಸುತ್ತಿದ್ದರು. ಆಗ ಇಂದ್ರನು ಸೂರ್ಯನ ರಥದ ಚಕ್ರವನ್ನೇ ಆಯುಧವನ್ನಾಗಿ ಮಾಡಿಕೊಂಡು ಅವರೆಲ್ಲರನ್ನೂ ನಾಶಮಾಡಿದನು ಎಂಬ ಇತಿಹಾಸವನ್ನು ವರ್ಣಿಸಿದ್ದಾರೆ.

**ಯಮೇನ ದತ್ತಂ ತ್ರಿತ ಏನಮಾಯುನಗಿಂದ್ರ ಏಣಂ ಪ್ರಥಮೋ ಅಧ್ಯತಿಷ್ಠತ್ ।**
**ಗಂಧರ್ವೋ ಅಸ್ಯ ರಶನಾಮಗೃಭ್ಣಾತ್ಸೂರಾದಶ್ವಂ ವಸವೋ ನಿರತಷ್ಟ ॥**
(ಋ ಸಂ. ೧-೧೬೩-೨)

ಈ ಋಕ್ಕಿನಲ್ಲಿ ದುರ್ಗಾಚಾರ್ಯರು **ಸೂರಾತ್** ಎಂಬ ಪದಕ್ಕೆ **ಸೂರ್ಯಾತ್** ಸೂರ್ಯನಿಂದ ಎಂದು ಅರ್ಥವನ್ನು ಮಾಡಿದ್ದಾರೆ. ಇಲ್ಲಿ ಸಾಯಣರು **ಸೂರಃ** ಎಂಬ ಶಬ್ದಕ್ಕೆ ಸೂರ್ಯಸ್ಯ ಎಂದು ಅರ್ಥವನ್ನು ವಿವರಿಸಿ, ಓಜಸಾ ಪದಕ್ಕೆ ನಿರುಕ್ತದಲ್ಲಿ ಬಲನಾಮಗಳಲ್ಲಿ ಪಠಿತವಾಗಿದ್ದರೂ (ನಿ. ೩-೯) ಶರೀರಸಂಬಂಧವಾದ ಬಲವೆಂದು ಅರ್ಥವನ್ನು ಹೇಳಿದ್ದಾರೆ.

**ಅರುಣಃ ಪ್ರಪಿತ್ವೇ ವಾಚಂ ಮುಷಾಯತಿ—ಅರುಣವರ್ಣಃ ಅತ್ಯಂತ ತೇಜೋಯುಕ್ತಃ ಯದ್ವಾ ಗಮನಶೀಲಃ ತತ್ಸಮೀಪಮಾಗತ್ಯ ವಾಗುಪಲಕ್ಷಿತಂ ಪ್ರಾಣಂ ಮುಷೋಷ ಮುಷ್ಣಾತಿ ವಾ ।** ಈ ವಾಕ್ಯಕ್ಕೆ ಸಾಯಣರು ಮೂರು ವಿಧವಾಗಿ ಅರ್ಥವನ್ನು ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ಇಂದ್ರನು ಬಹಳ ತೇಜೋವಂತನಾಗಿ ಅರುಣವರ್ಣದಿಂದ (ಕೆಂಪುಬಣ್ಣದಿಂದ) ಕೂಡಿದವನಾಗಿ ಅಥವಾ ಸರ್ವದಾ ಸಂಚರಿಸುವವನಾಗಿ ಯುದ್ಧಗಳಲ್ಲಿ ಅಸುರರ ಸಮೀಪವನ್ನು ಹೊಂದಿ ಅವರು ಮಾತನಾಡುವುದಕ್ಕೂ ಅವಕಾಶ ಕೊಡದಿರುವಂತೆ ಅವರ ಪ್ರಾಣಗಳು ಹೋಗುವಂತೆ ಮಾಡುವವನು ಎಂದು ಅರ್ಥ ಮಾಡಿದ್ದಾರೆ.

ಎರಡನೆಯ ಅರ್ಥದಲ್ಲಿ—**ವಾಚಂ ತೇಷಾಂ ಪ್ರಹಾರಧ್ವನಿಂ ಮುಷಾಯತಿ ತೇಷು ಹತೇಷು ಧ್ವನಿಃ ಸ್ವಯಮೇವ ವಿಶ್ರಾಂತಃ । ಅವಧೀದಿತ್ಯರ್ಥಃ—** ಇಂದ್ರನು ಯುದ್ಧಗಳಲ್ಲಿ ಅಸುರರು ತನ್ನ ಆಯುಧದ ಏಟಿನಿಂದ ಯಾವ ಶಬ್ದವನ್ನೂ ಮಾಡದಿರುವ ಹಾಗೆ ಹೊಡದು ವಧಿಸುವನು ಎಂದೂ, ಅಸುರರ ಪ್ರಾಣವು ತನ್ನ ಪ್ರಹಾರದಿಂದ ಧ್ವನಿಯೊಡನೆ ನಿಂತುಹೋಗುವಂತೆ ವಧೆ ಮಾಡುವನೆಂದೂ ವರ್ಣಿಸಿದೆ. ಮೂರನೆಯ ಅರ್ಥದಲ್ಲಿ—

**ಅಥವಾ ಇಂದ್ರ ಏವ ದ್ಯುಸ್ಥಾನಸ್ಸನ್ ಆದಿತ್ಯಾತ್ಮನಾ ಸ್ತೂಯತೇ ।** ಇಂದ್ರನೇ ದ್ಯುಸ್ಥಾನದಲ್ಲಿ ಇರುತ್ತಾ ಆದಿತ್ಯರೂಪದಿಂದ ಸ್ತುತ್ಯನಾಗಿದ್ದಾನೆ ಎಂದು ಅರ್ಥವನ್ನು ಹೇಳಿದ್ದಾರೆ. ಇದರ ವಿವರಣೆಯು ಹೀಗೆ ಇರುತ್ತದೆ.

**ಸೂರಃ ಸೂರ್ಯಃ ಜಾತಃ ಉದಿತಸ್ಸನ್ ಓಜಸಾ ಸ್ವಕೀಯೇನ ತೇಜಸಾ ಯುಕ್ತಃ ತಮೋನಿವಾರಣಾರ್ಥಂ ಅಸುರಜಯಾಯ ವಾ ಚಕ್ರೋಪಲಕ್ಷಿತಂ ರಥಂ ಪ್ರಕರ್ಷೇಣ ಉದ್ಯತಂ ಕರೋತಿ। ತತಃ ಪೂರ್ವಮರುಣಃ ತದ್ರಥಯಂತಾ ಮಂದೇಹಾದ್ಯಸುರಾಣಾಂ ಸಮೀಪೇ ವಾಚಂ ತೇಷಾಂ ಜಹಿ ಭಿಂದಿ ಇತ್ಯಾದಿಧ್ವನಿಂ ಮುಷಾಯತಿ ಮುಷ್ಣಾತಿ।**

ಸೂರ್ಯನು ಉದಯವನ್ನು ಹೊಂದಿದ ಕೂಡಲೆ ತನ್ನ ತೇಜಸ್ಸಿನಿಂದ ಕೂಡಿದವನಾಗಿ ಕತ್ತಲೆಯನ್ನು ನಾಶಮಾಡುವುದಕ್ಕಾಗಿಯೂ, ಅಥವಾ ಅಸುರರನ್ನು ಜಯಿಸುವುದಕ್ಕಾಗಿಯೂ ಚಕ್ರಾಯುಧದಿಂದ ಕೂಡಿರುವ ರಥವನ್ನು ಬಹಳವಾಗಿ ಸಂಚರಿಸುವಂತೆ ಮಾಡುತ್ತಾನೆ. ಇದಕ್ಕಿಂತಲೂ ಮುಂಚಿತವಾಗಿ ಈ ರಥವನ್ನು ನಡೆಸುವ ಸಾರಥಿಯಾದ ಅರುಣನು ಮಂದೇಹ ಎಂಬ ಹೆಸರಿನಿಂದ ಪ್ರಸಿದ್ಧರಾದ ರಾಕ್ಷಸರ ಗುಂಪಿನ ಹತ್ತಿರಕ್ಕೆ ಸೂರ್ಯನ ರಥವನ್ನು ತಂದು ಅವರು ಯುದ್ಧಕಾಲದಲ್ಲಿ ಹೇಳಬಹುದಾದ ಕಡಿ, ಹೊಡಿ ಮುಂತಾದ ವಾಕ್ಕುಗಳೂ ಅವರ ಬಾಯಿಂದ ಹೊರಡದಂತೆ ಅವರನ್ನು ಅಡಗಿಸುತ್ತಾನೆ ಎಂದು ವಿವರಿಸಿದೆ. ನಿರುಕ್ತಕಾರರು,

**ಯದುದಂಚೋ ವೃಷಾಕಪೇ ಗೃಹಮಿಂದ್ರಾಜಗಂತನ।**
**ಕ್ವ೧ಸ್ಯ ಪುಲ್ವಘೋ ಮೃಗಃ ಕಮಗಂಜನಯೋಪನೋ ವಿಶ್ವಸ್ಮಾದಿಂದ್ರ ಉತ್ತರಃ॥**
(ಋ. ಸಂ. ೧೦-೮೬-೨೨)

ಎಂಬ ಈ ಋಕ್ಕನ್ನು ಉದಹರಿಸಿ **ಕಮಗಮದ್ದೇಶಂ ಜನಯೋಪನಃ ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ಬ್ರೂಮ ಆದಿತ್ಯಂ** (ನಿ. ೧೩-೩) ಇಂದ್ರನು ಅದೃಶ್ಯನಾಗಿರುವನು. ಜನರೆಲ್ಲರೂ ಆದಿತ್ಯನ ಉದಯಾಸ್ತ (ಮಯ)ಗಳ ರೂಪವಾದ ಜ್ಞಾನದಿಂದ ಇಂದ್ರನೂ ಆದಿತ್ಯನೂ ಬೇರೆಯಾಗಿರುವರೆಂದು ಮೋಹಗೊಂಡಿದ್ದಾರೆ. ಆದರೆ ಇದು ತಾತ್ವಿಕವಾದ ಜ್ಞಾನವಲ್ಲವು. ದೇವತೆಗಳಲ್ಲಿ ಇಂದ್ರನು ಶ್ರೇಷ್ಠನಾಗಿರುವನು. ಆದ್ದರಿಂದ ಇಂದ್ರನೇ ಆದಿತ್ಯರೂಪದಿಂದ ಇರುವನೆಂದು ವರ್ಣಿಸಿದ್ದಾರೆ. ಮತ್ತೂ ಇಂದ್ರನು ಮತ್ತು ಸೂರ್ಯನು ಇವರ ತಾದಾತ್ಮ್ಯವು ಈ ಋಕ್ಸಂಹಿತೆಯಲ್ಲಿ ಬೇರೆಯ ಋಕ್ಕುಗಳಲ್ಲಿಯೂ ಉದಾಹೃತವಾಗಿರುವುದು.

**ಪ್ರಪಿತ್ವೇ—ತೇಷಾಂ ಸಮೀಪೇ ಪ್ರಪಿತ್ವೇಽಭೀಕ ಇತ್ಯಾಸನ್ನಸ್ಯ। ಪ್ರಪಿತ್ವೇ ಪ್ರಾಪ್ತೇ।** ಎಂದು ನಿರುಕ್ತಕಾರರು ಪಾಠಮಾಡಿ (ನಿ. ೩-೨೦) **ಪ್ರಪಿತ್ವೇ-ಪ್ರಾಪ್ತೇ, ಅಭೀಕೇ-ಅಭ್ಯಕ್ತೇ—**ಈ ಎರಡು ಪದಗಳಿಗೂ ಅರ್ಥಭೇದವನ್ನು ತೋರಿಸಿ, **ಪ್ರಪಿತ್ವೇ ಅಭೀಕೇ ಇತ್ಯಾಸನ್ನಸ್ಯ** ಎಂದು ವ್ಯಾಖ್ಯಾನಮಾಡಿ ಈ ಎರಡು ಶಬ್ದಗಳೂ ಸಮೀಪವಾಚಕಗಳಾಗಿರುವುವು ಎಂದು ಅರ್ಥವನ್ನು ವಿವರಿಸಿದ್ದಾರೆ. ಮತ್ತು

**ಯಥಾ ಗೌರೋ ಅಪಾ ಕೃತಂ ತೃಷ್ಯನ್ನೇತ್ಯವೇರಿಣಂ।**
**ಆಪಿತ್ವೇ ನಃ ಪ್ರಪಿತ್ವೇ ತೂಯಮಾ ಗಹಿ ಕಣ್ವೇಷು ಸಚಾ ಪಿಬ॥**
(ಋ. ಸಂ. ೮-೪-೩)

ಈ ಋಕ್ಕನ್ನು ಉದಹರಿಸಿ **ಪ್ರಪಿತ್ವೇ** ಎಂಬ ಪದಕ್ಕೆ **ಪ್ರಾಪ್ತೇ** ಎಂದು ಅರ್ಥವನ್ನು ಮಾಡಿದ್ದಾರೆ. ಇದರಿಂದ ಕಾಲಕೃತವಾದ ಅವ್ಯವಹಿತತ್ವವು ಉಕ್ತವಾಗಿದೆ

**ಈಶಾನಃ ಆ ಮುಷಾಯತಿ—ಸರ್ವಾಣಿ ತಮಾಂಸಿ ಅಸುರಾನ್ ವಾ ನಿರಾಕರ್ತುಂ ಸಮರ್ಥಸ್ಸನ್ ಸಮಂತಾತ್ ಮುಷ್ಣಾತಿ।** ಸೂರ್ಯನು ಉದಯಿಸುವುದಕ್ಕೆ ಪೂರ್ವದಲ್ಲಿ ಅರುಣನು ಅಸುರರ ಯುದ್ಧೋತ್ಸಾಹವನ್ನು

ನಿಲ್ಲಿಸಿರುವಾಗ ಸೂರ್ಯನು ಕತ್ತಲೆಯನ್ನೂ ಅಥವಾ ಅಸುರರನ್ನೂ ನಿಗ್ರಹಮಾಡುವ ಸಾಧನ ಮತ್ತು ಸಾಮರ್ಥ್ಯಗಳಿಂದ ಕೂಡಿದವನಾಗಿ ಅಸುರರನ್ನು ಸಂಪೂರ್ಣವಾಗಿ ನಾಶಮಾಡುವನು ಎಂದು ಅರ್ಥ.

**ಕವೇ ಯತ್ ಉಶನಾ ಊತಯೇ ಪರಾವತಃ ಅಜಗನ್—ಕ್ರಾಂತದರ್ಶಿನ್ ಉಶನಸ್ ಇತಿ ನಾಮ್ನಃ ಮಹರ್ಷೇಃ ರಕ್ಷಣಾಯ ದೂರಾತ್ ಸ್ವರ್ಗಸ್ಥಾನಾತ್ ಪ್ರಾಪ್ತವಾನಸಿ ।** ಈ ವಾಕ್ಯಕ್ಕೆ ಎರಡು ವಿಧವಾಗಿ ಅರ್ಥವನ್ನು ವಿವರಿಸಿದೆ. ಇಂದ್ರನನ್ನು ಕವಿ ಎಂಬ ಶಬ್ದದಿಂದ ಸಂಬೋಧಿಸಿದೆ. ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುವವನೆಂದು ಅರ್ಥ ಮಾಡಿದೆ. ಉಶನಸ್ ಎಂಬ ಋಷಿಯು ಇಂದ್ರನಿಂದ ರಕ್ಷಣೆಯನ್ನು ಹೊಂದುವುದಕ್ಕಾಗಿ ಪ್ರಾರ್ಥಿಸಿದಾಗ ದೂರದೇಶವಾದ ಸ್ವರ್ಗದಿಂದ ಇಂದ್ರನು ಬಂದು ಅವನನ್ನು ರಕ್ಷಿಸಿದ ಕಥೆಯು ಇಲ್ಲಿ ಸೂಚಿತವಾಗಿದೆ. ಇದು ಒಂದು ವಿಧವಾದ ಅರ್ಥ. ಎರಡನೆಯ ಅರ್ಥದಲ್ಲಿ—**ಉಶನಾ** ಎಂಬ ಪದಕ್ಕೆ **ಉಶನಸಾ** ಎಂದು ವ್ಯಾಖ್ಯಾನ ಮಾಡಿದೆ. (ಶುಕ್ರಾಚಾರ್ಯ) ಭಾರ್ಗವನೊಡನೆ ಇಂದ್ರನ ಆಗಮನವನ್ನೂ ರಕ್ಷಣೆಯನ್ನೂ ಪ್ರಾರ್ಥಿಸಿದೆ.

**ವಿಶ್ವಾ ಸುಮ್ನಾನಿ ತುರ್ವಣಿಃ—ಸರ್ವಾಣಿ ಸುಖಸಾಧನಾನಿ ಧನಾನಿ ಆದಾಯ ಅಸ್ಮಾಕಂ ಕ್ಷಿಪ್ರಂ ಸಂಭಕ್ತಾ ಭವ ।** ಸುಮ್ನ ಶಬ್ದವು ಇಪ್ಪತ್ತು ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. **ತುರ್ವಣಿ** ಶಬ್ದವು **ತುರ್ವಣಿಸ್ತೂರ್ಣವನಿಃ** (ನಿ. ೬-೧೪) ಎಂದು ಉಕ್ತವಾಗಿದೆ. ಇಲ್ಲಿ ಸುಮ್ನ ಶಬ್ದಕ್ಕೆ ಸುಖವನ್ನು ಉಂಟುಮಾಡುವುದರಲ್ಲಿ ಸಾಧನವಾದ ಧನವೆಂದು ಅರ್ಥಮಾಡಿ ಇಂದ್ರನು ಧನವನ್ನು ನಮಗೆ ತಂದುಕೊಟ್ಟು ಸುಖವನ್ನು ಜಾಗ್ರತೆಯಾಗಿ ಉಂಟುಮಾಡಲಿ ಎಂದು ಪ್ರಾರ್ಥಿಸಿದೆ.

**ಮನುಷೇವ ತುರ್ವಣಿಃ – ಮನುಷೇವ ಮನುಷ್ಯೇಣೇವ ಯಥಾ ತ್ವೋತೇನ ಪರಿವೃಢಾಯ ದೇಶಾಂತರಾದಭಿಮತಂ ಧನಮಾನೀಯತೇ ತದ್ವತ್ । ಯದ್ವಾ ಮನುಷೇವ ಮನುಷ್ಯಾಣಾಮಿವ ಇತರೇಷಾಂ ಋತ್ವಿಜಾಂ ವಿಶ್ವಾ ಸುಮ್ನಾನಿ ಸರ್ವಾಣಿ ಧನಾನ್ಯಾದಾಯ ತುರ್ವಣಿಃ ಭವಸಿ ತದ್ವದಸ್ಮಾಕಮಪಿ॥** ಸಮರ್ಥನಾದ ಮನುಷ್ಯನು ಬೇರೆಯ ದೇಶಕ್ಕೆ ಹೋಗಿ ಅಲ್ಲಿಂದ ತನಗೆ ಬೇಕಾಗಿರುವ ಧನವನ್ನು ತಂದುಕೊಡುವ ಹಾಗೆ ಯಜಮಾನರಿಗೆ ಇಂದ್ರನು ಧನವನ್ನು ತಂದುಕೊಡುವನು ಎಂದು ಹೋಲಿಸಿ ಹೇಳಿದೆ. ಅಥವಾ ಯಜ್ಞದಲ್ಲಿ ಋತ್ವಿಜರಿಗಾಗಿ ಸುಖಸಾಧನವಾದ ಧನವನ್ನು ಮನುಷ್ಯರು ಒದಗಿಸಿಗೂಡುವಂತೆ ಇಂದ್ರನೂ ಬೇಗನೆ ತಂದು ಕೊಡುವನು ಎಂದು ವರ್ಣಿಸಿದೆ.

**ಅಹಾ ವಿಶ್ವೇವ ತುರ್ವಣಿಃ—ಸರ್ವೇಷ್ವಪಿ ಅಹಸ್ಸು ತುರ್ವಣಿಃ ಭವ । ಯದ್ವಾ ತುರ್ವಣಿಸ್ತ್ವಂ ಅಹಾ ವಿಶ್ವೇವ ಅತಿದೀರ್ಘಮಾಯುಷ್ಯಂ ಯಥಾ ದದಾಸಿ ತಥಾ ಸುಮ್ನಾನ್ಯಪಿ ಉಭಯಮಪಿ ದೇಹಿ ॥** ಯಜ್ಞವು ಆಚರಿತವಾಗುವಾಗ ಧನವನ್ನು ಕೊಡುವಂತೆ ಇತರವಾದ ಎಲ್ಲಾ ದಿನಗಳಲ್ಲಿಯೂ ಧನವನ್ನು ಇಂದ್ರನು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದೆ. ಇದು ಒಂದು ವಿಧವಾದ ಅರ್ಥ. ಬಹು ಜಾಗ್ರತೆಯಿಂದ ಇರುವ ಇಂದ್ರನು ಸುಖಕರವಾದ ದ್ರವ್ಯವನ್ನು ಕೊಡುವಂತೆ ಬಹುಕಾಲದವರಿಗೂ ಜೀವಿಸಲು ಅರ್ಹವಾದ ದೀರ್ಘಾಯುಷ್ಯವನ್ನು ಅನುಗ್ರಹಿಸಲಿ ಎಂದು ಆಶಂಸಿಸಿದೆ ಎಂದು ಬೇರೆ ವಿಧವಾದ ಅರ್ಥವನ್ನೂ ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸೂರಃ**—ಷೂಙ್ ಪ್ರಾಣಿಗರ್ಭವಿಮೋಚನೇ ಧಾತು. ಆದಿಗೆ ಸತ್ವ. **ಸುಸೂಧಾ ಗೃಧಿಭ್ಯಃ ಕ್ರನ್** (ಉ. ಸೂ. ೨-೧೮೨) ಎಂಬುದರಿಂದ ಕ್ರನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ವ್ಯತ್ಯಯದಿಂದ ಷಷ್ಠ್ಯರ್ಥದಲ್ಲಿ ಪ್ರಥಮಾ ವಿಭಕ್ತಿ ಬಂದಿದೆ.

**ಬೃಹತ್**—ಬೃಹೂ ಉದ್ಯಮನೇ. ಧಾತು. ತುದಾದಿ. ಲಙ್ ಪ್ರಥಮಪುರುಷ ಏಕವಚನದಲ್ಲಿ **ಇತಶ್ಚ** ಎಂಬುದರಿಂದ ಇಕಾರಲೋಪ. **ತುದಾದಿಭ್ಯಃ ಶಃ** ಎಂಬುದರಿಂದ ಶ ವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಇದು ಙಿತ್ತಾಗುವುದರಿಂದ ಇದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಬಹುಲಂ ಛಂದಸ್ಯ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮುಷಾಯತಿ**—ಮುಷ ಸ್ತೇಯೇ. ಧಾತು. **ಘಞರ್ಥೇ ಕವಿಧಾನಂ** ಎಂಬ ವಚನದಿಂದ ಕಪ್ರತ್ಯಯ. ಮುಷಂ ಆತ್ಮನಃ ಇಚ್ಛತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ದೀರ್ಘಾದಿಗಳನ್ನು ನಿಷೇಧಮಾಡಿದರೂ ವ್ಯತ್ಯಯದಿಂದ ಪೂರ್ವಕ್ಕೆ ದೀರ್ಘ. ಕ್ಯಜಂತದ ಮೇಲೆ ಲಟ್ ಪ್ರಥಮಪುರುಷ ಏಕವಚನದಲ್ಲಿ ಮುಷಾಯತಿ ಎಂದು ರೂಪವಾಗುತ್ತದೆ. ಅಥವಾ **ಬಹುಲಂ ಛಂದಸಿ** ಎಂಬುದರಿಂದ ಣಿಚ್ ವಿಕರಣ ಬರುತ್ತದೆ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಲಘೂಪಧಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. ಅಥವಾ ಲಟಿನಲ್ಲಿ ಶ್ನಾ ವಿಕರಣ ಬಂದಾಗ ಹಿ ಪರದಲ್ಲಿ ಇಲ್ಲದಿದ್ದರೂ **ಛಂದಸಿ ಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ಅದಕ್ಕೆ ಶಾಯಜಾದೇಶ. ಹಿಂದಿನಂತೆ ರೂಪವಾಗುತ್ತದೆ.

**ಈಶಾನಃ**—ಈಶ ಐಶ್ವರ್ಯೇ. ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಉಶನಾ**—ವಶ ಕಾಂತೌ. ಧಾತು. **ವಶೇಃ ಕನಸಿಃ** (ಉ ಸೂ. ೪-೬೭೮) ಎಂಬುದರಿಂದ ಕನಸಿ ಪ್ರತ್ಯಯ. ಕಿತ್ತಾದುದರಿಂದ **ಗ್ರಹಿಜ್ಯಾವಯಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಉಶನನಸ್ ಶಬ್ದವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ವ್ಯತ್ಯಯದಿಂದ ಷಷ್ಠಿಗೆ ಪ್ರಥಮಾ ಬಂದಿದೆ.

**ಅಜಗನ್**—ಗಮ್ಲೃ ಗತೌ. ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** ಸೂತ್ರದಿಂದ ಅಭ್ಯಾಸ ಗಕಾರಕ್ಕೆ ಜಕಾರಾದೇಶ. **ಹಲ್ಙ್ಯಾಭ್ಯೋದೀರ್ಘಾ**—ಸೂತ್ರದಿಂದ ಸಿಪಿಗೆ ಲೋಪ. **ಮೋನೋ ಧಾತೋಃ** (ಪಾ. ಸೂ. ೮-೨-೬೪) ಎಂಬುದರಿಂದ ಮಕಾರಕ್ಕೆ ನಕಾರಾದೇಶ. ಅಂಗಕ್ಕೆ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ತುರ್ವಣಿಃ**—ತುರ್ವೀ ಹಿಂಸಾಯಾಂ. ಧಾತು. ಇದಕ್ಕೆ ಔಣಾದಿಕ ಅನಿ ಪ್ರತ್ಯಯ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅಹಾ—ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ॥ ೯ ॥



॥ ಸಂಹಿತಾಪಾಠಃ ॥

ಸ ನೋ ನವ್ಯೇಭಿರ್ವೃಷಕರ್ಮನ್ನುಕ್ಥೈಃ ಪುರಾಂ ದರ್ತಃ ಪಾಯುಭಿಃ ಪಾಹಿ ಶಗ್ಮೈಃ ।
ದಿವೋದಾಸೇಭಿರಿಂದ್ರ ಸ್ತವಾನೋ ವಾವೃಧೀಥಾ ಅಹೋಭಿರಿವ ದ್ಯೌಃ ॥ ೧೦ ॥

॥ ಪದಪಾಠಃ ॥

ಸಃ । ನಃ । ನವ್ಯೇಭಿಃ । ವೃಷಽಕರ್ಮನ್ । ಉಕ್ಥೈಃ । ಪುರಾಂ । ದರ್ತರಿತಿ ದರ್ತಃ । ಪಾಯುಽಭಿಃ । ಪಾಹಿ । ಶಗ್ಮೈಃ ।
ದಿವಃಽದಾಸೇಭಿಃ । ಇಂದ್ರ । ಸ್ತವಾನಃ । ವವೃಧೀಥಾಃ । ಅಹೋಭಿಃಽಇವ । ದ್ಯೌಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವೃಷಕರ್ಮನ್ನಭಿಮತವರ್ಷಣವ್ಯಾಪಾರವನ್ ಪುರಾಂ ದರ್ತರಸುರಪುರಾಣಾಂ ದಾರಯಿತಃ ॥ ಸುಬಾಮಂತ್ರಿತ ಇತಿ ಷಷ್ಠ್ಯಾಃ ಪರಾಂಗವದ್ಭಾವಾತ್ ಷಷ್ಠ್ಯಾಮಂತ್ರಿತಸಮುದಾಯಸ್ಯ ಪಾದಾದಿತ್ವಾದಾಷ್ಟಮಿಕಮಾದ್ಯುದಾತ್ತತ್ವಂ ॥ ಸ ತಾದೃಶೋ ಮಹಾನುಭಾವಸ್ತ್ವಂ ನೋಽಸ್ಮತ್ಸಂಬಂಧಿಭಿರ್ನವ್ಯೇಭಿರ್ನೂತನೈರುಕ್ಥೈರಿದಾನೀಂ ಪ್ರತಿಪಾದಿತಪ್ರಕಾರೈಃ ಸ್ತೋತ್ರೈಃ ಸ್ತುತಃ ಸನ್ ಪಾಯುಭಿಃ ಪಾಲನಪ್ರಕಾರೈಃ ಶಗ್ಮೈಃ ಸುಖೈರೈಹಿಕಾಮುಷ್ಮಿಕರೂಪೈಃ ಪಾಹಿ । ಪಾಲಯ । ಕಿಂ ಚ ಹೇ ಇಂದ್ರ ದಿವೋದಾಸೇಭಿರ್ದಿವೋದಾಸಗೋತ್ರೋತ್ಪನ್ನೈಃ ॥ ಅರ್ಶಆದಿತ್ವಾದಚ್ ॥ ಅಸ್ಮಾಭಿಃ ಪರುಚ್ಛೇಪೈಃ । ಯದ್ವಾ । ಪೂಜಾರ್ಥಂ ಬಹುವಚನಂ । ಸ್ತವಾನಃ ಸ್ತೂಯಮಾನಃ ॥ ಕರ್ಮಣಿ ಕರ್ತೃಪ್ರತ್ಯಯಃ ॥ ವವೃಧೀಥಾಃ । ಪ್ರವೃದ್ಧೋ ಭವ ॥ ವೃಧೇರ್ಲಿಙಿ ಛಾಂದಸಃ ಶಪಃ ಶ್ಲುಃ ॥ ಕಿಮಿವ । ಅಹೋಭಿರಿವ ದ್ಯೌಃ । ದ್ಯೋತನಶೀಲ ಆದಿತ್ಯೋಽಹೋಭಿಃ ಪ್ರಸಿದ್ಧೈರ್ಯಥಾ ಪ್ರವೃದ್ಧೋ ಭವತಿ । ತಥಾಸ್ಮತ್ಸ್ತೋತ್ರೈರತ್ಯಂತಂ ಪ್ರವೃದ್ಧೋ ಭವೇತ್ಯರ್ಥಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—(ಎಲೈ) ಇಂದ್ರನೇ । **ವೃಷಕರ್ಮನ್**—ಅಭಿಮತಾರ್ಥಗಳನ್ನು ವರ್ಷಿಸುವವನೂ । **ಪುರಾಂ ದರ್ತಃ**—(ಶತ್ರು) ನಗರಗಳನ್ನು ನಾಶಮಾಡುವವನೂ (ಆದ) । **ಸಃ**—ಆ (ಮಹಾಮಹಿಮನಾದ ನೀನು) । **ನಃ**—ನಮ್ಮ । **ನವ್ಯೇಭಿಃ ಉಕ್ಥೈಃ**—(ಉಕ್ತವಾದ) ನೂತನ ಸ್ತುತಿಗಳಿಂದ (ತುಷ್ಟನಾಗಿ) । **ಪಾಯುಭಿಃ**—ರಕ್ಷಣಾಕಾರ್ಯಗಳಿಂದಲೂ । **ಶಗ್ಮೈಃ**—(ಐಹಿಕಾಮುಷ್ಮಿಕ) ಸುಖಗಳಿಂದಲೂ । **ಪಾಹಿ**—(ನಮ್ಮನ್ನು) ರಕ್ಷಿಸು । (**ಹೇ ಇಂದ್ರ**—ಎಲೈ ಇಂದ್ರನೇ)। **ದಿವೋದಾಸೇಭಿಃ**—ದಿವೋದಾಸ ವಂಶೀಯರಾದ (ಪರುಚ್ಛೇಪರೆಂಬ) ನಮ್ಮಿಂದ ಅಥವಾ ದಿವೋದಾಸನಿಂದ (ನನ್ನಿಂದ) । **ಸ್ತವಾನಃ**—ಸ್ತುತನಾಗಿ । **ದ್ಯೌಃ**—ಸೂರ್ಯನು । **ಅಹೋಭಿಃ ಇವ**—ಅಹಸ್ಸುಗಳಿಂದ (ಅಭಿವೃದ್ಧಿ ಪಡೆಯುವಂತೆ) । **ವವೃಧೀಥಾಃ**—ಪ್ರವೃದ್ಧನಾಗು.

॥ ಭಾವಾರ್ಥ ॥

ಇಷ್ಟಾರ್ಥವರ್ಷಕನೂ, (ಶತ್ರು) ಪುರಗಳನ್ನು ಭೇದಿಸುವವನೂ, (ಆದುದರಿಂದಲೇ ಮಹಾಮಹಿಮನೂ ಆದ) ಎಲೈ ಇಂದ್ರನೇ, (ನಮ್ಮ) ಈ ನೂತನ ಸ್ತುತಿಗಳಿಂದ ತುಷ್ಟನಾಗಿ, (ನಿನ್ನ) ರಕ್ಷಣಾಕಾರ್ಯಗಳು ಮತ್ತು ಐಹಿಕಾಮುಷ್ಮಿಕ ಸುಖಗಳು (ಇವೆರಡನ್ನು ಅನುಗ್ರಹಿಸಿ) ನಮ್ಮನ್ನು ರಕ್ಷಣೆ ಮಾಡು; (ಮತ್ತು) ಎಲೈ ಇಂದ್ರನೇ, ಸೂರ್ಯನು ಹಗಲಿನಲ್ಲಿ ಪ್ರವೃದ್ಧನಾಗುವಂತೆ, ದಿವೋದಾಸವಂಶೀಯರಾದ (ನಮ್ಮಿಂದ) ಅಥವಾ ದಿವೋದಾಸನಾದ (ನನ್ನಿಂದ) ಸ್ತುತನಾಗಿ, ಅಭಿವೃದ್ಧಿ ಹೊಂದು.

## English Translation.

Showerer of benefits, destroyer of cities, propitiated by our new songs, reward us with gratifying blessings: glorified, Indra, by the descendants of Divodasa, increase (in power), like the sun in (revolving) days.

॥ ವಿಶೇಷವಿಷಯಗಳು ॥

**ವೃಷಕರ್ಮನ್—ಅಭಿಮತವರ್ಷಣವ್ಯಾಪಾರವನ್** । ಇಂದ್ರನು ಲೋಕವೆಲ್ಲಕ್ಕೂ ಇಷ್ಟಕರವಾದ ವೃಷ್ಟಿಯನ್ನು ಉಂಟುಮಾಡುವ ಕೆಲಸವನ್ನು ಆಚರಿಸುವವನೆಂದು ವಿವರಿಸಿದೆ.

**ಪುರಾಂ ದರ್ತಃ—ಅಸುರಪುರಾಣಾಂ ದಾರಯಿತಃ** । ಅಸುರರು ವಾಸಮಾಡುವ ನಗರಗಳನ್ನು ನಾಶ ಮಾಡುವವನು ಇಂದ್ರನು ಎಂದು ಅರ್ಥ.

**ನವ್ಯೇಭಿರುಕ್ಥೈಃ ಪಾಯುಭಿಃ ಶಗ್ಮೈಃ ಪಾಹಿ**—ಮಂತ್ರದ್ರಷ್ಟೃವಾದ ಋಷಿಯು ಹೊಸದಾಗಿರುವ ರೀತಿಯಿಂದ ಸ್ತುತಿಮಾಡಿರುವ ಸ್ತುತಿಗಳಿಂದ ಸಂತುಷ್ಟನಾದ ಇಂದ್ರನು ಆಯಾಯ ವಿಧವಾದ ರಕ್ಷಣಾಪ್ರಕಾರಗಳಿಂದಲೂ ಐಹಿಕಾಮುಷ್ಮಿಕರೂಪವಾದ ಸುಖವನ್ನು ಅನುಗ್ರಹಿಸುವುದರಿಂದಲೂ ನಮ್ಮನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

**ಅಹೋಭಿರಿವ ದ್ಯೌಃ**—**ದ್ಯೋತನಶೀಲಃ ಆದಿತ್ಯಃ** ಅಹೋಭಿಃ **ಪ್ರಸಿದ್ಧೈರ್ಯಥಾ ಪ್ರವೃದ್ಧೋ ಭವತಿ ತಥಾ ಅಸ್ಮತ್ಸ್ತುತ್ಯಾ ಅತ್ಯಂತಂ ಪ್ರವೃದ್ಧೋ ಭವ**। ದಿವೋದಾಸಗೋತ್ರದಲ್ಲಿ ಉತ್ಪನ್ನನಾದ ಪರುಚ್ಛೇಪ ಋಷಿಯಿಂದ ಸ್ತುತನಾದ ಇಂದ್ರನು ಆಯಾಯ ದಿನಗಳಲ್ಲಿ ವೃದ್ಧಿಯನ್ನು ಹೊಂದುತ್ತಿರುವ ಸೂರ್ಯನಹಾಗೆ ವೃದಿಯನ್ನು ಹೊಂದಿ ಇರಲಿ ಎಂದು ಆಶಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ನವ್ಯೇಭಿಃ**—**ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೨-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್ ಭಾವ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ

**ವೃಷಕರ್ಮನ್**—**ನಙಿ ಸಂಬುದ್ಧ್ಯೋಃ**—ಎಂಬುದರಿಂದ ಸಂಬುದ್ಧಿಯಲ್ಲಿ ನಲೋಪ ಬರುವುದಿಲ್ಲ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಉಕ್ಥೈಃ**—ವಚ ಪರಿಭಾಷಣೇ. ಧಾತು. **ಪಾತೃತುದಿವಚಿ**—(ಉ. ಸೂ. ೧-೧೬೪) ಎಂಬುದರಿಂದ ಥಕ್ ಪ್ರತ್ಯಯ. ಕಿತ್ತಾದುದರಿಂದ **ವಚಿಸ್ವಪಿ ಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. **ಚೋಃ ಕುಃ** ಎಂಬುದರಿಂದ ಚಕಾರಕ್ಕೆ ಕುತ್ವ. ಪ್ರತ್ಯಯಸ್ವರದಿಂದ ಅಂತೋದಾತ ವಾಗುತ್ತದೆ.

**ಪುರಾಂ ದರ್ತಃ**—ದೄ ವಿದ್ಹಾರಣೇ. ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಸಂಬುದ್ಧಿಯಲ್ಲಿ ದರ್ತಃ ಎಂದು ರೂಪವಾಗುತ್ತದೆ. **ಸುಬಾಮಂತ್ರಿತೇ ಪರಾಂಗವತ್ ಸ್ವರೇ** (ಪಾ ಸೂ. ೨-೧-೨) ಎಂಬುದರಿಂದ ಪುರಾಂ ಎಂಬ ಷಷ್ಠ್ಯಂತಕ್ಕೆ ಪರಾಂಗವದ್ಭಾವವಿರುವುದರಿಂದ ಪಾದಾದಿಯಲ್ಲಿ ಬಂದಂತಾಗುವುದರಿಂದ ಅಷ್ಟಮಿಕ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪಾಯುಭಿಃ**—ಪಾ ರಕ್ಷಣೇ. ಧಾತು. **ಕೃವಾಪಾ**—(ಉ. ಸೂ. ೧-೧) ಎಂಬುದರಿಂದ **ಉಣ್** ಪ್ರತ್ಯಯ. **ಆತೋ ಯುಕ್ ಚಿಣ್ ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಬಹುವಚನಾಂತರೂಪ.

**ಪಾಹಿ**—ಪೂರ್ವೋಕ್ತವಾದ ಧಾತುವಿಗೆ ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ದಿವೋದಾಸೇಭಿಃ**—**ದಿವೋದಾಸೇ ಷಷ್ಠ್ಯಾ ಅಲುಕ್** (ಕಾ. ೬-೩-೨೧-೫) ಎಂಬುದರಿಂದ ಷಷ್ಠಿಗೆ ಅಲುಕ್. ದಿವೋದಾಸಃ ಅಸ್ಯ ಅಸ್ತಿ ಇತಿ ದಿವೋದಾಸಃ. **ಅರ್ಶ ಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಭಿಸಿಗೆ ಐಸ್ ಭಾವ ವಿಕಲ್ಪವಾದುದರಿಂದ ಏತ್ವ ಬಂದಿದೆ.

**ಸ್ತವಾನಃ**—ಷ್ಟುಞ್ ಸ್ತುತೌ. ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಗುಣ, ಅವಾದೇಶ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವವೃಧೀಥಾಃ**—ವೃಧು ವೃದ್ಧೌ ಧಾತು. ಲಿಙ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲು ಎಂಬುದರಿಂದ ಧಾತುವಿಗೆ ದ್ವಿತ್ವ. **ಉರತ್** ಸೂತ್ರದಿಂದ ಅಭ್ಯಾಸಕ್ಕೆ ಅತ್ವ ರಪರವಾಗಿ ಬಂದಾಗ ಆದಿಹಲ್‌ಶೇಷ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಸೀಯುಟಾಗಮ. **ಸುಟ್ ತಿಥೋಃ** (ಪಾ. ಸೂ ೩-೪-೧೦೭) ಎಂಬುದರಿಂದ ಸುಟಾಗಮ. **ಲಿಙಃ ಸಲೋಪೋ**— (ಪಾ. ಸೂ. ೭-೨-೭೯) ಎಂಬುದರಿಂದ ಎರಡು ಸಕಾರಗಳಿಗೂ ಲೋಪ. **ಲೋಪೋವ್ಯೋ**—ಎಂಬುದರಿಂದ ಯಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ. || ೧೦ ||

ಇಲ್ಲಿಗೆ ನೂರ ಮೂವತ್ತನೇ ಸೂಕ್ತ ಮುಗಿದುದು



# ನೂರ ಮೂವತ್ತೊಂದನೆಯ ಸೂಕ್ತವು

**ಇಂದ್ರಾಯ ಹೀತಿ ಸಪ್ತರ್ಚಂ ಪಂಚಮಂ ಸೂಕ್ತಂ । ಇಂದ್ರಾಯ ಸಪ್ತೇತ್ಯನುಕ್ರಮಣಿಕಾ । ಪರುಚ್ಛೇಪ ಋಷಿಃ । ಅತ್ಯಷ್ಟಿಶ್ಛಂದಃ । ಇಂದ್ರೋ ದೇವತಾ ॥ ಪೃಷ್ಠ್ಯಸ್ಯ ಷಷ್ಠೇಽಹನಿ ಮಾಧ್ಯಂದಿನ-ಸವನೇ ಹೋತ್ರಕಾಃ ಸ್ವಸ್ವಶಸ್ತ್ರ ಏತತ್ಸೂಕ್ತಂ ತೃಚತ್ರಯಂ ಕೃತ್ವಾರಂಭಣೀಯಾಭ್ಯ ಊರ್ಧ್ವ-ಮಾವಪೇಯುಃ । ಅತ್ರಾಯಂ ವಿಭಾಗಃ । ಆದ್ಯಾಸ್ತಿಸ್ರೋ ಮೈತ್ರಾವರುಣಸ್ಯ । ತೃತೀಯಾದ್ಯಾಸ್ತಿಸ್ರೋ ಬ್ರಾಹ್ಮಣಾಚ್ಛಂಸಿನಃ । ಪಂಚಮ್ಯಾದ್ಯಾಸ್ತಿಸ್ರೋಽಚ್ಛಾವಾಕಸ್ಯ । ಏತಚ್ಚತುರ್ಥೇಽಹನೀತಿ ಖಂಡೇ ಸೂತ್ರಿತಂ । ಷಷ್ಠೇಽಹನೀಂದ್ರಾಯ ಹಿ ದ್ಯೌರಸುರೋ ಅನಮ್ನತೇತ್ಯೇವಮೇವ । ಆ. ೭-೧೧ ॥ ಇತಿ ॥ ತತ್ರೈವಾಹನಿ ತಸ್ಮಿನ್ನೇವ ಸವನೇ ಪ್ರಶಾಸ್ತ್ರಾದೀನಾಂ ಪ್ರಸ್ಥಿತಯಾಜ್ಯಾಭ್ಯಃ ಪುರಸ್ತಾದಾದಿತಃ ಷಡೃಚ ಏಕೈಕಶಃ ಪ್ರಕ್ಷೇಪಣೀಯಾಃ । ಷಷ್ಠಸ್ಯೇತಿ ಖಂಡೇ ಸೂತ್ರಿತಂ । ಇಂದ್ರಾಯ ಹಿ ದ್ಯೌರಸುರೋ ಅನಮ್ನತೇತಿ ಷಟ್ । ಆ. ೮-೧ । ಇತಿ ॥ ಮಹಾವ್ರತೇ ನಿಷ್ಕೇವಲ್ಯ ಇಂದ್ರಾಯ ಹೀತಿ ತೃಚೋ ವೈಕಲ್ಪಿ-ಕಾನುರೂಪದ್ವಿತೀಯಃ । ಮಹಾವ್ರತಸ್ಯೇತಿ ಖಂಡೇ ಸೂತ್ರಿತಂ । ಐಂದ್ರಂ ಯಾಹ್ಯುಪ ನಃ ಪರಾವತ ಇಂದ್ರಾಯ ಹಿ ದ್ಯೌರಸುರೋ ಅನಮ್ನತ । ಐ. ಆ. ೫ ೧-೧ । ಇತಿ ॥**

ಅನುವಾದವು—**ಇಂದ್ರಾಯ ಹಿ** ಎಂಬ ಈ ಸೂಕ್ತವು ಹತ್ತೊಂಭತ್ತನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಇಂದ್ರಾಯ ಸಪ್ತ** ಎಂದು ಮೊದಲಾಗಿ ಹೇಳಿರುವುದು. ಈ ಸೂಕ್ತಕ್ಕೆ ಪರುಚ್ಛೇಪನು ಋಷಿಯು. ಇಂದ್ರನು ದೇವತೆಯು. ಅತ್ಯಷ್ಟಿ ಛಂದಸ್ಸು. ಪೃಷ್ಠ್ಯಯಾಗದ ಆರನೆಯ ದಿವಸ ಮಾಧ್ಯಂದಿನಸವನಕಾಲದಲ್ಲಿ ಹೋತೃವರ್ಗದ ಋತ್ವಿಕ್ಕುಗಳು ತಾವು ಪಠಿಸಬೇಕಾದ ಶಸ್ತ್ರಮಂತ್ರ

ಪಠನಕಾಲದಲ್ಲಿ ಈ ಸೂಕ್ತವನ್ನು ಮೂರು ತೃಚಗಳನ್ನಾಗಿ (ತೃಚವೆಂದರೆ ಮೂರು ಋಕ್ಕುಗಳು) ಮಾಡಿಕೊಂಡು ಆರಂಭಮಾಡಿ ಅಲ್ಲಿಂದ ಮುಂದಕ್ಕೆ ಸ್ತೋಮಾವಾಪವನ್ನು ಮಾಡಬೇಕೆಂದು ಹೇಳಿರುವುದು. ಈ ವಿಷಯದಲ್ಲಿ ವಿಭಾಗ ಕ್ರಮವು ಈ ರೀತಿ ಇರುವುದು—ಈ ಸೂಕ್ತದ ಮೊದಲಿನ ಮೂರು ಋಕ್ಕುಗಳನ್ನು ಮೈತ್ರಾವರುಣನೆಂಬ ಋತ್ವಿಜನೂ, ಮೂರರಿಂದ ಆರು ಋಕ್ಕುಗಳವರೆಗಿನ ಮೂರು ಋಕ್ಕುಗಳನ್ನು **ಬ್ರಾಹ್ಮಣಾಚ್ಛಂಸಿ** ಎಂಬ ಋತ್ವಿಜನೂ, ಐದರಿಂದ ಏಳರವರೆಗಿನ ಮೂರು ಋಕ್ಕುಗಳನ್ನು ಅಚ್ಛಾವಾಕನೆಂಬ ಋತ್ವಿಜನೂ ಪಠಿಸಬೇಕಾಗಿರುವುದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ--**ಏತಚ್ಚತುರ್ಥೇಽಹನಿ** ಎಂಬ ಖಂಡದ **ಷಷ್ಠೇಽಹನೀಂದ್ರಾಯ ಹಿ ದ್ಯೌರಸುರೋ ಅನಮ್ನತ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೭-೧೧) ಅದೇ ದಿವಸ ಅದೇ ಸವನಕಾಲದಲ್ಲಿ ಪ್ರಶಾಸ್ತ್ರ ಮೊದಲಾದ ಋತ್ವಿಜರು ಪ್ರಸ್ಥಿತಯಾಜ್ಯಾಮಂತ್ರಗಳನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ ಈ ಸೂಕ್ತದ ಮೊದಲಿನ ಆರು ಋಕ್ಕುಗಳನ್ನು ಒಬ್ಬೊಬ್ಬರು ಒಂದೊಂದು ಋಕ್ಕಿನಂತೆ ಹೇಳಬೇಕೆಂದು ಆಶ್ವಲಾಯನಶ್ರೌತಸೂತ್ರದ **ಷಷ್ಠಸ್ಯ** ಎಂಬ ಖಂಡದ **ಇಂದ್ರಾಯ ಹಿ ದ್ಯೌರಸುರೋ ಅನಮ್ನತೇತಿ ಷಟ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧) ಮಹಾವ್ರತವೆಂಬ ಯಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಮಾಡುವಾಗ **ಇಂದ್ರಾಯ** ಹಿ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಅನುರೂಪ ಋಕ್ಕುಗಳಿಗೆ ವಿಕಲ್ಪವಾಗಿ ಪಠಿಸಬೇಕೆಂದು ಐತರೇಯ ಆರಣ್ಯಕದಲ್ಲಿ **ಮಹಾವ್ರತಸ್ಯ** ಎಂಬ ಖಂಡದ **ಐಂದ್ರ ಯಾಹ್ಯುಪ ನಃ ಪರಾವತ ಇಂದ್ರಾಯ ಹಿ ದ್ಯೌರಸುರೋ ಅನಮ್ನತ** ಎಂಬ ಸೂತ್ರವಾಕ್ಯದಿಂದ ನಿರ್ದೇಶಿಸಲ್ಪಟ್ಟಿರುವುದು (ಐ. ಆ. ೫-೧-೧).

## ಸೂಕ್ತ—೧೩೧

ಮಂಡಲ—೧ ‖ ಅನುವಾಕ—೧೯ ‖ ಸೂಕ್ತ—೧೩೧ ‖

ಅಷ್ಟಕ— ೨ ‖ ಅಧ್ಯಾಯ—೧ ‖ ವರ್ಗ—೨೦ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ— ೭ ‖

‖ ಋಷಿಃ— ಪರುಚ್ಛೇಪೋ ದೈವೋದಾಸಿಃ ‖

‖ ದೇವತಾ— ಇಂದ್ರಃ ‖

‖ ಛಂದಃ—ಅತ್ಯಷ್ಟಿಃ ‖

‖ ಸಂಹಿತಾಪಾಠಃ ‖

ಇಂದ್ರಾಯ ಹಿ ದ್ಯೌರಸುರೋ ಅನಮ್ನತೇಂದ್ರಾಯ ಮಹೀ ಪೃಥಿವೀ
ವರೀಮಭಿರ್ದ್ಯುಮ್ನಸಾತಾ ವರೀಮಭಿಃ ।
ಇಂದ್ರಂ ವಿಶ್ವೇ ಸಜೋಷಸೋ ದೇವಾಸೋ ದಧಿರೇ ಪುರಃ ।
ಇಂದ್ರಾಯ ವಿಶ್ವಾ ಸವನಾನಿ ಮಾನುಷಾ ರಾತಾನಿ ಸಂತು ಮಾನುಷಾ ‖ ೧ ‖

॥ ಪದಪಾಠಃ ॥

ಇಂದ್ರಾ॑ಯ । ಹಿ । ದ್ಯೌಃ । ಅಸು॑ರಃ । ಅನ॑ಮ್ನತ । ಇಂದ್ರಾ॑ಯ । ಮ॒ಹೀ । ಪೃ॒ಥಿ॒ವೀ । ವರೀ॑ಮಽಭಿಃ ।
ದ್ಯು॒ಮ್ನಽಸಾ॑ತಾ । ವರೀ॑ಮಽಭಿಃ ।
ಇಂದ್ರಂ॑ । ವಿಶ್ವೇ॑ । ಸ॒ಽಜೋಷ॑ಸಃ । ದೇ॒ವಾಸಃ॑ । ದ॒ಧಿ॒ರೇ॒ । ಪು॒ರಃ ।
ಇಂದ್ರಾ॑ಯ । ವಿಶ್ವಾ॑ । ಸವ॑ನಾನಿ । ಮಾನು॑ಷಾ । ರಾ॒ತಾನಿ॑ । ಸ॒ಂತು॒ । ಮಾನು॑ಷಾ ॥ ೧ ॥

॥ ಸಾಯಣಭಾಷ್ಯಂ ॥

ದ್ಯೌರ್ದ್ಯೋತನಶೀಲೋ ದ್ಯುಲೋಕಸ್ತನ್ನಿವಾಸೀ ದೇವಸಂಘೋ ವಾ ಸ ಚಾಸುರೋ ನಿರಸನಶೀಲಃ ಶತ್ರೂಣಾಂ ಪುಣ್ಯಕೃತಾಮೇವ ತನ್ನಿವಾಸಾತ್ ಇಂದ್ರಾಯ ಹೀಂದ್ರಾಯೈವಾನಮ್ನತ । ಸ್ವಯಮೇವ ಪ್ರಹ್ವೀಭವತಿ ॥ ನಮೇಶ್ಛಾಂದಸೇ ಲಙಿ ಕರ್ಮಕರ್ತರ್ಯಾತ್ಮನೇಪದಂ । ನ ದುಹಸ್ನುನಮಾಮಿತಿ ಯಗಭಾವಃ । ಪಾ. ೩-೧-೮೯ । ಛಾಂದಸಃ ಶಪಃ ಶ್ಲುಃ । ಹಲಾದಿಶೇಷಾಭಾವಶ್ಚ । ಅನುನಾಸಿಕಲೋಪಃ ॥ ಹಿಶಬ್ದಃ ಪ್ರಸಿದ್ಧ್ಯರ್ಥೋ ವಾ । ತಥೇಂದ್ರಾಯೇಂದ್ರಾರ್ಥಂ ಮಹೀ ಮಹತೀ ಪೃಥಿವೀ ಭೂಮಿಸ್ತತ್ರತ್ಯಃ ಸರ್ವೋ ಜನೋ ವಾನಮ್ನತ । ಉಭಯತ್ರಾಶ್ರಯವಾಚಿಶಬ್ದೇನಾಶ್ರಯೀ ಲಕ್ಷ್ಯತೇ ಗ್ರಾಮ ಆಗತ ಇತಿವತ್ । ಕೇನ ಸಾಧನೇನೇತಿ ತದುಚ್ಯತೇ । ವರೀಮಭಿರ್ವರಣೀಯೈಃ ಸ್ತೋತ್ರೈರ್ಹವಿರ್ಭಿರ್ವಾ । ಕಿಂಚ ದ್ಯುಮ್ನಸಾತಾ ದ್ಯುಮ್ನಸಾತಾವನ್ನಸ್ಯ ಯಶಸೋ ವಾ ಲಾಭೇ ನಿಮಿತ್ತೇ ಸತಿ ವರೀಮಭಿರ್ವರಣೀಯೈರ್ಹವಿರ್ಭಿರ್ಯುಕ್ತಾ ಯಜಮಾನಾಃ ಪ್ರಹ್ವಾ ಭವಂತಿ । ಕಿಂಚೇಂದ್ರಮೇವ ವಿಶ್ವೇ ಸರ್ವೇ ದೇವಾಸೋ ದೇವಾಃ ಸಜೋಷಸಃ ಸಮಾನಪ್ರೀತಿಯುಕ್ತಾ ಐಕಮತ್ಯಭಾಜಃ ಪೂರ್ವಮಸುರಜಯಾರ್ಥಂ ಪುರೋ ದಧಿರೇ । ಪುರತಃ ಸ್ಥಾಪಿತವಂತಃ । ಇಂದ್ರಮುಖೇನೈವಾಸುರಾಞ್ಜಿತವಂತ ಇತ್ಯರ್ಥಃ । ತಥಾ ಮಾನುಷಾ ಸವನಾನಿ ಮನುಷ್ಯಾಣಾಂ ಸಂಬಂಧೀನ್ಯಭಿಷವಯುಕ್ತಾನಿ ಪ್ರಾತರಾದಿಸವನಾನೀಂದ್ರಾಯ ಸಂತು । ಇಂದ್ರಾಯೈವ ಭವಂತು । ತಥಾ ಮಾನುಷಾ ಮನುಷ್ಯಾಣಾಮೃತ್ವಿಜಾಂ ಸಂಬಂಧೀನಿ ರಾತಾನಿ ದಾತವ್ಯಾನಿ ಪುರೋಡಾಶಾದೀನೀಂದ್ರಾಯ ಹೀಂದ್ರಾಯೈವ ಸಂತು । ಇಂದ್ರಂ ಪ್ರೀಣಯಿತುಂ ಸಮರ್ಥಾನಿ ಭವಂತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಸುರಃ**— ಶತ್ರುಗಳನ್ನು ನಿರಾಕರಿಸುವ (ಶತ್ರುಗಳು ಪ್ರವೇಶಿಸಲವಕಾಶಕೊಡದೇ ಇರುವ) । **ದ್ಯೌಃ**— ದ್ಯುಲೋಕವು । **ಇಂದ್ರಾಯ ಹಿ**— ಇಂದ್ರನಿಗೆ ಮಾತ್ರವೇ । **ಅನಮ್ನತ**— ಪ್ರಹ್ವ (ವಿಧೇಯ) ವಾಗಿದೆ । **ಇಂದ್ರಾಯ**— ಇಂದ್ರನಿಗೇ । **ಮಹೀ**— ದೊಡ್ಡದಾದ । **ಪೃಥಿವೀ**— ಭೂಮಿಯು (ಭೂಮಿಯಲ್ಲಿರುವ ಜನರು) । **ವರೀಮಭಿಃ**— ಸ್ತೋತ್ರಗಳಿಂದ (ಹವಿರಾದಿಗಳಿಂದ) । **ಅನಮ್ನತ**— ತಲೆಬಾಗುತ್ತದೆ (ತಲೆಬಾಗುತ್ತಾರೆ) । **ದ್ಯುಮ್ನಸಾತಾ**— ಅನ್ನ ಅಥವಾ ಯಶಸ್ಸಿನ ಲಾಭಕ್ಕೋಸ್ಕರ । **ವರೀಮಭಿಃ**— ಹವಿರಾದಿಗಳಿಂದ (ಸ್ತೋತ್ರಗಳಿಂದ) । (**ಅನಮ್ನತ**— ಯಜ

ಮಾನರುಗಳು (ನಮಸ್ಕರಿಸುತ್ತಾರೆ) | (**ಕಿಂಚ**—ಮತ್ತೂ)| **ಇಂದ್ರಂ (ಏವ)**—ಇಂದ್ರನನ್ನೇ | **ವಿಶ್ವೇ ದೇವಾಸಃ**—ಸಮಸ್ತ ದೇವತೆಗಳೂ | **ಸಜೋಷಸಃ**—ಸಮಾನವಾದ ಪ್ರೀತಿಯುಕ್ತರಾಗಿ (ಅಸುರ ಜಯಕ್ಕೋಸ್ಕರ ಐಕಮತ್ಯವುಳ್ಳವರಾಗಿ) | **ಪುರಃ ದಧಿರೇ**—ಮುಂದೆ ಸ್ಥಾಪಿಸಿಕೊಂಡರು (ಇಂದ್ರನ ನೇತೃತ್ವದಲ್ಲೇ ಅಸುರಜಯವನ್ನು ಗಳಿಸಿದರು) | **ಮಾನುಷಾ**—ಮನುಷ್ಯಸಂಬಂಧವಾದ | **ವಿಶ್ವಾ ಸವನಾನಿ** - (ಅಭಿಷವಯುಕ್ತವಾದ ಪ್ರಾತರಾದಿ) ಸಮಸ್ತಸವನಗಳು | **ಇಂದ್ರಾಯ ಸಂತು**—ಇಂದ್ರನಿಗೋಸ್ಕರಲೇ ಇರಲಿ | **ಮಾನುಷಾ**—ಮನುಷ್ಯಸಂಬಂಧವಾದ (ಋತ್ವಿಜರ ಸಂಬಂಧವಾದ) | **ರಾತಾನಿ**—ದಾತವ್ಯವಾದ ಹವಿರಾದಿಗಳು | (**ಇಂದ್ರಾಯ ಸಂತು**—ಇಂದ್ರನಿಗೋಸ್ಕರಲೇ ಇರಲಿ).

॥ ಭಾವಾರ್ಥ ॥

ದುಷ್ಟರಿಗೆ ಪ್ರವೇಶಾವಕಾಶ ಕೊಡದೇ ಇರುವ ಸ್ವರ್ಗಲೋಕವು ಇಂದ್ರನಿಗೇ ಅಲ್ಲವೇ ಅಧೀನವಾಗಿರುವುದು; ಅಪೇಕ್ಷ್ಯವಾದ ಹವಿರಾದಿಗಳಿಂದ (ಕೂಡಿ), ಈ ದೊಡ್ಡದಾದ ಭೂಲೋಕವು ಇಂದ್ರನಿಗೆ ವಿಧೇಯವಾಗಿದೆ; ಹವಿರಾದಿಗಳಿಂದ, (ಯಾಗಕರ್ತೃಗಳು) ಅನ್ನ ಅಥವಾ ಯಶಸ್ಸನ್ನು ಪಡೆಯುವುದಕ್ಕೋಸ್ಕರ, ಇಂದ್ರನನ್ನು ಪೂಜಿಸುತ್ತಾರೆ; ಸಮಾನ ಪ್ರೀತಿಯುಕ್ತರಾದ (ಅಸುರ ಜಯಕ್ಕೋಸ್ಕರ ಐಕಮತ್ಯದಿಂದ ಕೂಡಿದ) ದೇವತೆಗಳು ಇಂದ್ರನಿಗೇ ಅಗ್ರಸ್ಥಾನವನ್ನು ಕೊಟ್ಟಿದಾರೆ; ಮನುಷ್ಯರ ಆಹುತಿಗಳೆಲ್ಲ ಇಂದ್ರನಿಗೇ ಇರಲಿ; ಮನುಷ್ಯರಿಂದ ದಾತವ್ಯವಾದ (ಪುರೋಡಾಶಾದಿಗಳೆಲ್ಲವೂ) ಇಂದ್ರನಿಗೇ ಇರಲಿ.

English Translation.

To Indra heaven, that excludes the wicked, verily has bowed : to Indra the wide-spread earth (has offered homage) with acceptable (praises); with acceptable praises (the worshipper has propitiated Indra) for the sake of food : all the gods well pleased have given precedence to Indra : let all the sacrifices of men (be appropriated) to Indra ; let all the offerings of men be (presented to him).

॥ ವಿಶೇಷವಿಷಯಗಳು ॥

**ದ್ಯಾಃ**—**ದ್ಯೋತನಶೀಲಃ [ದ್ಯುಲೋಕಃ ತನ್ನಿವಾಸೀ ದೇವಸಂಘೋ ವಾ । ವಸ್ತೋಃ, ದ್ಯಾಃ, ಭಾನುಃ,** ಇವೇ ಮೊದಲಾದ ಹನ್ನೆರಡು ಅಹರ್ನಾಮಗಳಲ್ಲಿ (ನಿ. ೨-೨೧) **ದ್ಯಾಃ** ಎಂಬ ಶಬ್ದವು ಉಕ್ತವಾಗಿದೆ.

**ತ್ವಮಗ್ನೇ ದ್ಯುಭಿ ಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ ।**
**ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ ॥**

(ಋ. ಸಂ. ೨-೫-೧೭-೧)

ಇಲ್ಲಿ **ದ್ಯುಭಿರಹೋಭಿಃ** ಎಂದು ದ್ಯುಭಿಃ ಶಬ್ದಕ್ಕೆ ಅಹಸ್ಸೆಂದು ಅರ್ಥವನ್ನು ಹೇಳಿದೆ.

**ಉಪ ಶ್ವಾಸಯ ಪೃಥಿವೀಮುತ ದ್ಯಾಂ ಪುರುತ್ರಾ ತೇ ಮನುತಾಂ ವಿಷ್ಠಿತಂ ಜಗತ್ ।**
**ಸ ದುಂದುಭೇ ಸಜೂರಿಂದ್ರೇಣ ದೇವೈರ್ದೂರಾದ್ದವೀಯೋ ಅಪ ಸೇಧ ಶತ್ರೂನ್ ॥**

(ಋ. ಸಂ. ೬-೪೭-೨೯)

ಈ ಋಕ್ಕಿನಲ್ಲಿ ದ್ಯು ಶಬ್ದಕ್ಕೆ **ದ್ಯಾಂ-ದಿವಂ** ಎಂದು ಅರ್ಥಮಾಡಿದೆ. ಸಾಯಣರು ದ್ಯೌಃ ಎಂಬ ಶಬ್ದಕ್ಕೆ ಸ್ವರ್ಗಲೋಕವೆಂದೂ, ಅದು ಬಹಳ ಪ್ರಕಾಶವುಳ್ಳದ್ದಾಗಿರುವುದೆಂದೂ, ಅಥವಾ ಸ್ವರ್ಗಲೋಕದಲ್ಲಿ ವಾಸಮಾಡುವ ದೇವತೆಗಳ ಸಮೂಹವೆಂದೂ ಅರ್ಥವನ್ನು ವಿವರಿಸಿದ್ದಾರೆ.

**ಅಸುರಃ ಇಂದ್ರಾಯ ಹಿ ಅನಮ್ನತೆ—ಶತ್ರೂಣಾಂ ನಿರಸನಶೀಲಃ ಇಂದ್ರಾಯೈವ ಸ್ವಯಮೇವ ಪ್ರಹ್ವೋ ಭವತಿ ।** ಅಸುರ ಶಬ್ದವು ಮೇಘನಾಮಗಳಲ್ಲಿ (ನಿ. ೨-೩೧) ಪಠಿತವಾಗಿದೆ. ನಿರುಕ್ತಕಾರರು—

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾಁ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಮ್ ॥**

(ಋ. ಸಂ. ೧೦-೫೩-೪)

ಈ ಋಕ್ಕನ್ನು ಉದಹರಿಸಿ, **ಅಸುರಾ ಅಸುರತಾಃ ಸ್ಥಾನೇಷ್ವಸ್ತಾ ಸ್ಥಾನೇಭ್ಯ ಇತಿ ವಾ ಅಪಿ ವಾ ಅಸುರಿತಿ ಪ್ರಾಣನಾಮಾಸ್ತಃ ಶರೀರೇ ಭವತಿ ತೇನ ತದ್ವಂತಃ । ಸೋರ್ದೇವಾನಸೃಜತ ತತ್ ಸುರಾಣಾಂ ಸುರತ್ವಂ, ಅಸೋರಸುರಾನಸೃಜತ ತದಸುರಾಣಾಮಸುರತ್ವಮಿತಿ ವಿಜ್ಞಾಯತೇ ।** ಎಂದು ವ್ಯಾಖ್ಯಾನ ಮಾಡಿರುವರು. ದುರ್ಗಾಚಾರ್ಯರು, ಒಂದು ಸ್ಥಾನದಲ್ಲಿ ಸ್ಥಿರವಾಗಿ ಇರದೆ ಚಪಲಬುದ್ಧಿಯುಳ್ಳವರು ಅಸುರರು, ಅಥವಾ ದೇವತೆಗಳಿಂದ ಆಯಾಯ ಸ್ಥಾನಗಳಿಂದ ಓಡಿಸಲ್ಪಟ್ಟವರು ಅಥವಾ ಪ್ರಾಣವು ಇವರಲ್ಲಿ ಸ್ಥಿರವಾಗಿ ನಿಂತಿರುವಕಾರಣ ಇವರಿಗೆ ಅಸುರರೆಂದೂ, ಅಥವಾ **"ಊರ್ಧ್ವಮುದತೃಣತ್ ಪೂರ್ವಪಕ್ಷಃ ಪಂಚದಶಃ ತೇನ ಸೋರ್ದೇವಾನಸೃಜತ ತತ್ ಸುರಾಣಾಂ ಸುರತ್ವಮಿತಿ ವಿಜ್ಞಾಯತೇ ।"** ಎಂದು ಶ್ರುತಿಯಲ್ಲಿ ಉಕ್ತವಾಗಿರುವಂತೆ ಪ್ರಶಸ್ತವಾದ ಅತ್ಮಸ್ವರೂಪದಿಂದ ಬ್ರಹ್ಮನು ದೇವತೆಗಳನ್ನು ನಿರ್ಮಿಸಿದಕಾರಣ ಸುರರಾಗಿರುವವರು. **ಅರ್ವಾಙ್ನ್ಯಾತಿರದಪರಪಕ್ಷಃ ತೇನ ಅಸುರಾನಸೃಜತ ।** ಅಪರಪಕ್ಷವು ಅಸು ಎಂದು ಹೆಸರನ್ನು ಹೊಂದಿರುವುದೆಂದೂ, ಅದರಿಂದ ಅಪ್ರಶಸ್ತವಾದ ರೂಪದಿಂದ ಸೃಷ್ಟಿಸಲ್ಪಟ್ಟಕಾರಣ ಅಸುರರೆಂದೂ ಅರ್ಥವನ್ನು ಹೇಳಿದ್ದಾರೆ. (ಋ. ಸಂ· ಭಾಗ ೧೦ ಪುಟಗಳು 8–9 ನೋಡಿ).

ಸಾಯಣರು ಅಸುರನು ದೇವಸಂಘದಿಂದ ನಿರಾಸಮಾಡಲ್ಪಡುವವನೆಂದು ಅರ್ಥಮಾಡಿ, ಸ್ವರ್ಗಲೋಕದಲ್ಲಿ ಪುಣ್ಯಕರ್ತರಿಗೆ ಮಾತ್ರವೇ ವಾಸವು ದೊರೆಯುವ ಕಾರಣ ಅಸುರರು ಅಲ್ಲಿ ಇರಲು ಅನರ್ಹರೆಂದು ಅರ್ಥಮಾಡಿದ್ದಾರೆ. ಹೀಗಿರುವ ಮಹತ್ತ್ವಪೂರಿತವಾದ ದ್ಯುಲೋಕವು ತಾನಾಗಿಯೇ ಇಂದ್ರನಿಗೆ ವಶವರ್ತಿಯಾಗಿರುವುದೆಂದು ಹೇಳಿ ಇಂದ್ರನ ಮಾಹಾತ್ಮ್ಯಾತಿಶಯವನ್ನು ಸೂಚಿಸಿದ್ದಾರೆ.

**ಇಂದ್ರಾಯ ಮಹೀ ಪೃಥಿವೀ ಅನಮ್ನತ—ಇಂದ್ರಾರ್ಥಂ ಮಹತೀ ಪೃಥಿವೀ ತತ್ರತ್ಯಃ ಸರ್ವೋ ಜನೋ ವಾ ಅನಮ್ನತ । ಉಭಯತ್ರ ಆಶ್ರಯವಾಚಿಶಬ್ದೇನ ಆಶ್ರಯಿಣ ಲಕ್ಷ್ಯತೇ । ಗ್ರಾಮಃ ಆಗತ ಇತಿವತ್ ।** ದೇವತೆಗಳಿಗೂ, ಮನುಷ್ಯರಿಗೂ ವಾಸಸ್ಥಾನವಾದ ಸ್ವರ್ಗ, ಭೂಮಿವಾಚಕಗಳಾದ ಆಯಾಯ ದ್ಯೌಃ ಪೃಥಿವೀ ಶಬ್ದಗಳು ಇಲ್ಲಿ ಉಪಾತ್ತವಾಗಿವೆ. ಈ ಶಬ್ದಗಳಿಂದ ಅಲ್ಲಿ ವಾಸಮಾಡುವವರೆಂಬುದಾಗಿ ಅರ್ಥವನ್ನು ಇಲ್ಲಿ ಹೇಳಿದೆ.

ಗ್ರಾಮವು ಬಂದಿತು ಎಂದು ಹೇಳಿದಾಗ ಅಚೇತನವಾದ ಗ್ರಾಮಕ್ಕೆ ಬರುವ ಶಕ್ತಿಯು ಇಲ್ಲದೇ ಇರುವುದರಿಂದ ಬರುವ ಶಕ್ತಿಯುಳ್ಳ ಗ್ರಾಮದಲ್ಲಿರುವ ಜನರು ಗ್ರಾಮ ಶಬ್ದದಿಂದ ಹೇಳಲ್ಪಡುವಂತೆ ಎಂದು ಇಲ್ಲಿಯೂ ಅರ್ಥವನ್ನು ವಿವರಿಸಿದೆ. ದೇವತೆಗಳೂ ಇಂದ್ರನ ವಿಷಯದಲ್ಲಿ ನಮ್ರರಾಗಿರುವರು. ಭೂಮಿಯಲ್ಲಿರುವ ಜನಗಳೂ ಕೂಡ ಇಂದ್ರನಿಗೆ ತಾವಾಗಿಯೇ ವಿಧೇಯರಾಗಿರುವರು. ಮತ್ತು ಭೂಮಿಯು ಎಲ್ಲವೂ ಇಂದ್ರನಿಗೆ ವಶವರ್ತಿಯಾಗಿರುವುದು ಎಂದು ಅರ್ಥ.

**ವರೀಮಭಿಃ ದ್ಯುಮ್ನಸಾತಾ ವರೀಮಭಿಃ— ಸ್ತೋತ್ರೈಃ ಹವಿರ್ಭಿರ್ವಾ ಅನ್ನಸ್ಯ ಯಶಸೋ ವಾ ಲಾಭೇ ಸತಿ ಹವಿರ್ಭಿರ್ಯುಕ್ತಾಃ ಯಜಮಾನಾಃ ಪ್ರಹ್ವಾಃ ಭವಂತಿ।** ಯಜ್ಞಮಾಡುವ ಯಜಮಾನರು ತಮ್ಮ ಅಭಿಮತವಾದ ದೇವತೆಯನ್ನು ಒಲಿಸಿಕೊಳ್ಳಲು ಅರ್ಹವಾದ ಸ್ತುತಿಗಳಿಂದಲೂ ಅಥವಾ ಹವಿಸ್ಸುಗಳಿಂದಲೂ ಸಂತೋಷಪಡಿಸಿ, ಅವರಿಂದ ಅನ್ನವನ್ನೂ ಮತ್ತು ಯಶಸ್ಸನ್ನೂ ಹೊಂದಿದ ಕಾರಣ ಪುನಃ ದೇವತೆಗಳನ್ನು ಕುರಿತು ಹವಿಸ್ಸುಗಳನ್ನು ಅರ್ಪಿಸುವುದಕ್ಕಾಗಿ ನಮ್ರತೆಯುಳ್ಳವರಾಗಿ ಇರುತ್ತಾರೆ ಎಂದು ಅರ್ಥ. ಎರಡುಸಾರಿ ಪ್ರಯುಕ್ತವಾಗಿರುವ ವರೀಮಭಿಃ ಎಂಬ ಪದಗಳಲ್ಲಿ ವರಣೀಯವೆಂದು ಒಂದು ವಿಧವಾಗಿ ಅರ್ಥವನ್ನು ಮಾಡಿದೆ. ಎರಡನೆಯ ಅರ್ಥವು ವರಣೀಯವಾದ ಹವಿಸ್ಸೆಂದಾಗಿದೆ.

ದ್ಯುಮ್ನ ಶಬ್ದವು ಧನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಮತ್ತು **ದ್ಯುಮ್ನಮಧಿರತ್ನಂ ಚ ಧೇಹಿ** ಎಂಬಲ್ಲಿ **ದ್ಯುಮ್ನಂ- ದ್ಯೋತತೇರ್ಯಶೋ ವಾ ಅನ್ನಂ ವಾ** (ನಿ. ೫-೬) ದ್ಯುತಿ ಧಾತುವಿನಿಂದ ನಿಷ್ಪನ್ನವಾದ ದ್ಯುಮ್ನ ಪದಕ್ಕೆ ಯಶಸ್ಸು ಅಥವಾ ಅನ್ನ ಎಂದು ಅನೇಕಾರ್ಥಗಳಾಗುತ್ತವೆ ಎಂದು ಯಾಸ್ಕರಿಂದ ಉಕ್ತವಾಗಿರುತ್ತದೆ.

**ಸಜೋಷಸಃ ಪುರಃ ದಧಿರೇ— ಸಮಾನಪ್ರೀತಿಯುಕ್ತಾಃ ಐಕಮತ್ಯಭಾಜಃ।** ದೇವತೆಗಳು ಇಂದ್ರನಲ್ಲಿ ತಮ್ಮ ತಮ್ಮಲ್ಲಿರುವ ಪ್ರೀತಿಗೆ ಸಮವಾದ ಪ್ರೀತಿಯುಳ್ಳವರಾಗಿ ಅಸುರರನ್ನು ಜಯಿಸುವುದಕ್ಕಾಗಿ ಐಕಮತ್ಯದಿಂದ ಇರುತ್ತಾ ಇಂದ್ರನನ್ನು ಮುಂದುಗಡೆಯಲ್ಲಿರುವಂತೆ ಎಂದರೆ ತಮ್ಮ ನಾಯಕನಾಗಿರುವಂತೆ ಮಾಡಿ ಇಂದ್ರನ ಮೂಲಕವಾಗಿಯೇ ಜಯವನ್ನು ಹೊಂದಿದರೆಂದು ಅರ್ಥ.

**ಸಜೋಷಸ್** ಎಂಬ ಶಬ್ದಕ್ಕೆ ನಿರುಕ್ತದಲ್ಲಿ ಒಡಗೂಡಿರುವುದು ಎಂದು ಅರ್ಥಮಾಡಿದೆ. (ನಿ. ೮-೮)

**ಆಜುಹ್ವಾನ ಈಡ್ಯೋ ವಂದ್ಯಶ್ಚಾ ಯಾಹ್ಯಗ್ನೇ ವಸುಭಿಃ ಸಜೋಷಾಃ।**
**ತ್ವಂ ದೇವಾನಾಮಸಿ ಯಹ್ವ ಹೋತಾ ಸ ಏನಾನ್ಯಕ್ಷೀಷಿತೋ ಯಜೀಯಾನ್ ॥**

(ಋ. ಸಂ. ೧೦-೧೧೦-೩)

ಈ ಋಕ್ಕಿನಲ್ಲಿ **ಸಜೋಷಾಃ** ಎಂಬ ಪದಕ್ಕೆ **ಸಹ ಜೋಷಣಃ** ಸಮಾನಪ್ರೀತಿಯುಳ್ಳವನೆಂದು ಅರ್ಥ ಮಾಡಿದೆ.

**ಆ ರುದ್ರಾಸ ಇಂದ್ರವಂತಸ್ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ।**
**ಇಯಂ ವೋ ಅಸ್ಮತ್ಪ್ರತಿಹರ್ಯತೇ ಮತಿಸ್ತೃಷ್ಣಜೇ ನ ದಿವ ಉತ್ಸಾ ಉದನ್ಯವೇ ॥**

(ಋ. ಸಂ. ೪-೩-೨೧-೧)

ಇಲ್ಲಿ **ಇಂದ್ರೇಣ ಸಹ ಜೋಷಣಾಃ ಸಜೋಷಸಃ ಪರಮೈಶ್ವರ್ಯೇಣನಿತ್ಯಮಾಸೇವಿತಾಃ** ಇಂದ್ರನೊಡನೆ ಉತ್ಕೃಷ್ಟವಾದ ಐಶ್ವರ್ಯದಿಂದ ಸೇವಿತರಾದವರು ಎಂದು ಅರ್ಥವನ್ನು ಹೇಳಿದೆ.

**ಮಾನುಷಾ ಸವನಾನಿ ಇಂದ್ರಾಯ ಸಂತು**—ಮನುಷ್ಯರು ಸೋಮವನ್ನು ತಂದು ಅದನ್ನು ಹಿಂಡಿ ಸಿದ್ಧ ಪಡಿಸಿದ ಪ್ರಾತಃಕಾಲದಲ್ಲಿ ಆಚರಿಸುವ ಸವನವು (ಸೋಮರಸದ ಅರ್ಪಣೆಯು) ಇಂದ್ರನಿಗಾಗಿ ಸಂಬಂಧಿಸಲಿ.

**ಮಾನುಷಾ ರಾತಾನಿ**—ಋತ್ವಿಜರಿಂದ ಅರ್ಪಿತವಾದ ಪುರೋಡಾಶವೇ ಮೊದಲಾದವುಗಳು ಇಂದ್ರನನ್ನು ಮಾತ್ರವೇ ಸಂತೋಷಪಡಿಸಲು ಸಮರ್ಥಗಳಾಗಿ ಆಗಲಿ ಎಂದು ಮಂತ್ರದ್ರಷ್ಟೃವಾದ ಋಷಿಯು ಆದೇಶರೂಪದಿಂದ ಪ್ರಾರ್ಥಿಸಿರುವನು ಎಂದು ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಸುರಃ**—ಅಸು ಕ್ಷೇಪಣೇ ಧಾತು. **ಅಸೇರುರನ್** (ಉ. ಸೂ ೧-೪೨) ಎಂಬುದರಿಂದ ಉರನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅನಮ್ನತ**—ಣಮು ಪ್ರಹ್ವತ್ವೇ ಶಬ್ದೇ ಚ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಕರ್ಮಕ್ಕೇ ಕರ್ತೃತ್ವವಿವಕ್ಷಾ ಮಾಡಿರುವುದರಿಂದ ಕರ್ಮಕರ್ತರಿಯಲ್ಲಿ **ಕರ್ಮವತ್ ಕರ್ಮಣಾ ತುಲ್ಯಕ್ರಿಯಃ** (ಪಾ. ಸೂ. ೩-೧-೮೭) ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ನದುಹಸ್ನುನಮಾಮ್** (ಪಾ. ಸೂ. ೩-೧-೮೯) ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಬಂದಾಗ ಛಾಂದಸವಾಗಿ ಅಭ್ಯಾಸಕ್ಕೆ ಹಲಾದಿಶೇಷ ಬರುವುದಿಲ್ಲ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಅನುದಾತ್ತೋಪದೇಶವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಅನುನಾಸಿಕ ಮಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. ಹಿ ಎಂಬುದರ ಸಂಬಂಧವಿರುವುದರಿಂದ **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಪೃಥಿವೀ**—ಪ್ರಥ ಪ್ರಖ್ಯಾನೇ. ಧಾತು. **ಪ್ರಥೇಃ ಷಿವನ್ ಸಂಪ್ರಸಾರಣಂ ಚ** (ಉ. ಸೂ. ೧.೧೪೮) ಎಂಬುದರಿಂದ ಷಿವನ್ ಪ್ರತ್ಯಯ. ಸ್ತ್ರೀತ್ವದಲ್ಲಿ **ಷಿದ್ಗೌರಾದಿಭ್ಯಶ್ಚ** (ಪಾ. ಸೂ. ೪-೧-೪೧) ಎಂಬುದರಿಂದ ಙೀಷ್ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ವರೀಮಭಿಃ**—ವೃಙ್ ವರಣೇ: ಧಾತು. ಇದಕ್ಕೆ ಔಣಾದಿಕ ಈಮನಿನ್ ಪ್ರತ್ಯಯ. ಪ್ರತ್ಯಯ ನಿಮಿತ್ತ ವಾಗಿ ಧಾತುವಿನ ಇಕಿಗೆ ಗುಣ ರಪರವಾಗಿ ಬರುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಧಿರೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸವನಾನಿ**—ಷುಞ್ ಅಭಿಷವೇ. ಧಾತು. ಇದಕ್ಕೆ ಲ್ಯುಟ್ ಪ್ರತ್ಯಯ ಬಂದಾಗ **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಮಾನುಷಾ**—ಮನುಷಸ್ಯ ಇಮಾನಿ ಮಾನುಷಾಣಿ. ಸಂಬಂಧಾರ್ಥದಲ್ಲಿ ಅಣ್ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** (ಪಾ· ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ರಾತಾನಿ**—ರಾ ಆದಾನೇ. ಧಾತು· ಕ್ತಪ್ರತ್ಯಯ. ಪ್ರತ್ಯಯಸ್ವರ ಬರುತ್ತದೆ.

**ಸಂತು**—ಅಸ ಭುವಿ. ಧಾತು. ಲೋಟ್ ಮಧ್ಯಮಪುರುಷ ಬಹುವಚನಾಂತರೂಪ· ತಿಙಂತನಿಘಾತಸ್ವರ ಬರುತ್ತದೆ. ‖ ೧ ‖



‖ ಸಂಹಿತಾಪಾಠಃ ‖

ವಿಶ್ವೇಷು ಹಿ ತ್ವಾ ಸವನೇಷು ತುಂಜತೇ ಸಮಾನಮೇಕಂ ವೃಷಮಣ್ಯವಃ
ಪೃಥಕ್ ಸ್ವಃ ಸನಿಷ್ಯವಃ ಪೃಥಕ್ ।
ತಂ ತ್ವಾ ನಾವಂ ನ ಪರ್ಷಣಿಂ ಶೂಷಸ್ಯ ಧುರಿ ಧೀಮಹಿ ।
ಇಂದ್ರಂ ನ ಯಜ್ಞೈಶ್ಚಿತಯಂತ ಆಯವಃ ಸ್ತೋಮೇಭಿರಿಂದ್ರಮಾಯವಃ ‖

‖ ಪದಪಾಠಃ ‖

ವಿಶ್ವೇಷು । ಹಿ । ತ್ವಾ । ಸವನೇಷು । ತುಂಜತೇ । ಸಮಾನಂ । ಏಕಂ । ವೃಷ॰ಮನ್ಯವಃ । ಪೃಥಕ್ ।
ಸ್ವರಿತಿ ಸ್ವಃ । ಸನಿಷ್ಯವಃ । ಪೃಥಕ್ ।
ತಂ । ತ್ವಾ । ನಾವಂ । ನ । ಪರ್ಷಣಿಂ । ಶೂಷಸ್ಯ । ಧುರಿ । ಧೀಮಹಿ ।
ಇಂದ್ರಂ । ನ । ಯಜ್ಞೈಃ । ಚಿತಯಂತಃ । ಆಯವಃ । ಸ್ತೋಮೇಭಿಃ । ಇಂದ್ರಂ । ಆಯವಃ ‖ ೨ ‖

‖ ಸಾಯಣಭಾಷ್ಯಂ ‖

ಹೇ ಇಂದ್ರ ತ್ವಾ ತ್ವಾಮೇಕಮೇಕಮೇವ ಸಂತಂ ವಿಶ್ವೇಷು ಸರ್ವೇಷು ಸವನೇಷು ತದ್ವತ್ಸ್ವೈ- ಕಾಹಾಹೀನಸತ್ರರೂಪೇಷು ಸರ್ವೇಷು ಸೋಮಯಾಗೇಷು ಯಜಮಾನಾಸ್ತುಂಜತೇ । ತ್ವರಯಂತಿ । ಹವಿರಾದೀನಿ ದದತೇ । ಕೀದೃಶಂ ತ್ವಾಂ । ಸಮಾನಂ ಸರ್ವೇಷಾಮೇಕರೂಪಂ । ಕೀದೃಶಾ- ಯಜಮಾನಾಃ । ವೃಷಮಣ್ಯವೋಽಭಿಮತವರ್ಷಣಾಯ ತ್ವಾಮೇವ ಮನ್ಯಮಾನಾಃ ಪೃಥಗ್ವಿವಿಚ್ಯ

**ಸ್ವಸ್ವಯಾಗೇ | ಕಿಮಿಚ್ಛಂತಃ | ಸ್ವಃ ಸ್ವರ್ಗಂ ಸುಖವಿಶೇಷಂ ವಾ ಸನಿಷ್ಯವಃ ಸಂಭಕ್ತುಕಾಮಾಃ ಪೃಥಕ್ ತುಂಜತೇ | ಪೃಥಗೇವ ತ್ವರಯಂತಿ | ತುಂಜತಿರ್ದಾನಾರ್ಥಃ ಶಿಕ್ಷತಿ ತುಂಜತಿ ಇತಿ ತನ್ನಾಮಸು ಪಾಠಾತ್ | ತಂ ತಾದೃಶಂ ತ್ವಾ ತ್ವಾಂ ಶೂಷಸ್ಯ ಬಲಸ್ಯ ಸೇನಾರೂಪಸ್ಯ ಧುರಿ ವಹನೇ ತಜ್ಜಯಾಯ ಧೀಮಹಿ | ಸ್ಥಾಪಯಾಮಃ | ಯದ್ವಾ | ಶೂಷಸ್ಯಾಸ್ಮದೀಯಶಾರೀರಬಲಸ್ಯ ಧುರಿ ಧೀಮಹಿ | ಶೂಷಮಿತಿ ಬಲನಾಮ ಶೂಷಂ ಸಹ ಇತಿ ತನ್ನಾಮಸು ಪಾಠಾತ್ | ತತ್ರ ದೃಷ್ಟಾಂತಃ | ಪರ್ಷಣಿಂ ನಾವಂ ನ ಪಾರಸ್ಯ ಸಂಭಕ್ತ್ರೀಂ ಪೂರಯಿತ್ರೀಂ ವಾ ಫಲಸ್ಯ ನಾವಮಿವ | ತಾಂ ಯಥಾ ಭಾರವಹನೇ ಸ್ಥಾಪಯಂತಿ || ಪಾರ ತೀರ ಕರ್ಮಸಮಾಪ್ತೌ | ಛಂದಸಿ ವನಸನೇತಿ ಸನೇರಿನ್ಪ್ರತ್ಯಯಃ | ಪಾ. ೩-೨-೨೭ | ಪೃಷೋದರಾದಿಃ | ಪಿಪರ್ತೇರೌಣಾದಿಕಃ ಸನಿಪ್ರತ್ಯಯೋ ವಾ || ಕೀದೃಶಾ ವಯಂ | ಆಯವೋ ಮನುಷ್ಯಾ ಯಜಮಾನಾ ಯಜ್ಞೈಃ ಸಾಧನೈರಿಂದ್ರಂ ನ ಚಿತಯಂತಃ ಪರಮೇಶ್ವರಮಿವ ತ್ವಾಂ ಚೇತಯಂತಃ | ಪರಮೇಶ್ವರಬುದ್ಧ್ಯಾ ಭಾವಯಂತ ಇತ್ಯರ್ಥಃ | ಯದ್ವಾ | ನಶಬ್ದ ಏವಕಾರಾರ್ಥಃ | ಇಂದ್ರಮೇವ ತ್ವಾಂ ಜಾನಂತಃ | ತಥಾ ಸ್ತೋಮೇಭಿಃ ಸ್ತೋತ್ರೈರಿಂದ್ರಮಿಂದ್ರಮೇವಾಯವೋ ಗಚ್ಛಂತೋ ವಯಂ ಧೀಮಹಿ || ದಧಾತೇರ್ಲಿಙಿ ಛಾಂದಸಃ ಶಪೋ ಲುಕ್ ||**

|| ಪ್ರತಿಪದಾರ್ಥ ||

**ಹೇ ಇಂದ್ರ**—ಎಲೈ ಇಂದ್ರನೇ | **ವಿಶ್ವೇಷು ಸವನೇಷು**—ಸಮಸ್ತ ಸೋಮಯಾಗಗಳಲ್ಲಿಯೂ (ಯಜಮಾನರು) | **ಪೃಥಕ್**—(ಒಬ್ಬೊಬ್ಬರೂ) ಪ್ರತ್ಯೇಕವಾಗಿ (ತಮ್ಮ ತಮ್ಮ ಯಾಗಗಳಲ್ಲಿ) | **ವೃಷಮಣ್ಯವಃ**—(ನಿನ್ನನ್ನೇ) ಕಾಮವರ್ಷಕನನ್ನಾಗಿ ತಿಳಿದವರಾಗಿ | **ಸಮಾನಂ**—(ಸರ್ವರಿಗೂ) ಸಮನಾದ | **ತ್ವಾ ಏಕಂ**—ನಿನ್ನೊಬ್ಬನನ್ನೇ (ಆರಾಧಿಸಲು) | **ತುಂಜತೇ**—ತ್ವರೆಮಾಡುತ್ತಾರೆ | **ಹಿ**—(ಇದು) ಪ್ರಸಿದ್ಧವಷ್ಟೆ | **ಸ್ವಃ**—ಸ್ವರ್ಗಲೋಕವನ್ನು (ಸುಖವನ್ನು) | **ಸನಿಷ್ಯವಃ**—ಪಡೆಯಲು ಇಚ್ಛೆಯುಳ್ಳವರಾಗಿ | **ಪೃಥಕ್**—ಪ್ರತ್ಯೇಕವಾಗಿಯೇ | (**ತುಂಜತೇ**—ತ್ವರೆಯಿಂದ ಪ್ರಾಪ್ತರಾಗುತ್ತಾರೆ) | **ತಂ**—ಅಂತಹ | **ತ್ವಾ**—ನಿನ್ನನ್ನು | **ಶೂಷಸ್ಯ**—(ಸೇನಾರೂಪ) ಬಲದ | **ಧುರಿ**—ವಹನಕಾರ್ಯದಲ್ಲಿ (ಜಯಪ್ರಾಪ್ತಿಗೋಸ್ಕರ) | **ಪರ್ಷಣಿಂ**—ಪಾರವನ್ನು ಸೇರಿಸುವ | **ನಾವಂ ನ**—ನಾವೆಯನ್ನು (ಭಾರವಹನಕಾರ್ಯದಲ್ಲಿ ನಿಯೋಜಿಸುವಂತೆ) | **ಧೀಮಹಿ**—ಸ್ಥಾಪಿಸೋಣ | **ಆಯವಃ**—ಮನುಷ್ಯರಾದ ನಾವು (ಯಜಮಾನರು) | **ಯಜ್ಞೈಃ**—ಯಜ್ಞರೂಪ ಸಾಧನಗಳಿಂದ | **ಇಂದ್ರಂ ನ**—(ನೀನೇ) ಪರಮೇಶ್ವರನೆಂದು (ಇಂದ್ರನೆಂಬುದಾಗಿಯೇ) | **ಚಿಂತಯಂತಃ**—ಭಾವಿಸಿದವರಾಗಿ | (**ತಥಾ**—ಹಾಗೆಯೇ) | **ಸ್ತೋಮೇಭಿಃ**—ಸ್ತೋತ್ರಗಳಿಂದ | **ಇಂದ್ರಂ**—ಇಂದ್ರನನ್ನೇ | **ಆಯವಃ**—(ಸ್ತುತಿಸಲು) ಪ್ರಾಪ್ತರಾಗಿ | (**ಧೀಮಹಿ**—ತುಷ್ಟಿಪಡಿಸುತ್ತೇವೆ).

|| ಭಾವಾರ್ಥ ||

(ನಿನ್ನ ಆರಾಧಕರು) ನಿನ್ನನ್ನೇ ಅಭೀಷ್ಟವರ್ಷಕನೆಂದು ಭಾವಿಸಿದವರಾಗಿ, ಸಮಸ್ತ ಯಾಗಗಳಲ್ಲಿ ಒಬ್ಬೊಬ್ಬರೂ ಪ್ರತ್ಯೇಕವಾಗಿ (ನಿನ್ನ ಸಮೀಪಕ್ಕೆ) ಧಾವಿಸುತ್ತಾರೆ; ಪ್ರತಿಯೊಬ್ಬರೂ ಸ್ವರ್ಗ (ಸುಖ) ಕಾಮರಾಗಿ (ನಿನ್ನಲ್ಲಿಗೆ) ಧಾವಿಸುತ್ತಾರೆ; ನಮ್ಮ ಬಲಕ್ಕೆ ಆಧಾರ ಭೂತನಾದ ನಿನ್ನನ್ನು, (ಜನರನ್ನು) ದಾಟಿಸುವ ದೋಣಿಯಂತೆ, (ನಾವು) ಆರಾಧಿಸುತ್ತೇವೆ; ಮನುಷ್ಯರಾದ ನಾವು, ನಿನ್ನನ್ನು ಇಂದ್ರನೆಂದು ಭಾವಿಸಿ ನಿನ್ನನ್ನೇ ಪ್ರಾಪ್ತರಾಗಿ ಸ್ತುತಿವಾಕ್ಯಗಳಿಂದ ತುಷ್ಟಿಪಡಿಸುತ್ತೇವೆ.

English Translation·

Hoping to partake of your bounties, (your worshippers) hasten severally in every rite to (adore) you, who ask one and all; each severally seeking heaven. We meditate on you, the sustainer of our strength, like a boat that bears (passengers) across (a stream): mortals, indeed, knowing Indra, propitiate him with sacrifices; mortals (propitiate him) with hymns.

॥ ವಿಶೇಷವಿಷಯಗಳು ॥

**ವೃಷಮಣ್ಯವಃ ಸಮಾನಮೇಕಂ ವಿಶ್ವೇಷು ಸವನೇಷು ತುಂಜತೇ—ಅಭಿಮತವರ್ಷಣಾಯ ತ್ವಾಮೇವ ಮನ್ಯಮಾನಾಃ ಸರ್ವೇಷಾಮೇಕರೂಪಂ ಏಕಮೇವ ಸಂತಂ ಏಕಾಹೀನಸತ್ರರೂಪೇಷು ಸೋಮಯಾಗೇಷು ತ್ವರಯಂತಿ ಹವಿರಾದೀನಿ ದದತೇ.** ಯಜಮಾನರು ತಮ್ಮ ತಮ್ಮ ಇಷ್ಟಾರ್ಥಗಳನ್ನು ನೆರವೇರಿಸುವುದರಲ್ಲಿ ಎಲ್ಲರ ವಿಷಯದಲ್ಲಿಯೂ ಒಂದೇಸಮನಾಗಿ ಇಂದ್ರನು ಪಕ್ಷಪಾತವಿಲ್ಲದೆ ಇರುವವನು ಇಂದ್ರನೊಬ್ಬನೇ ಆಗಿರುವನೆಂದು ತಿಳಿದು ಇರುತ್ತಾರೆ. ಮತ್ತು ಪ್ರಾತರಾದಿ ಮೂರುಸವನಗಳಿಂದ ಕೂಡಿರುವ ಸತ್ರಯಾಗರೂಪವಾಗಿರುವ ಏಕಾಹೀನಕ್ರತುವೇ ಮೊದಲಾದ ಸೋಮಯಾಗಗಳಲ್ಲಿ ಇಂದ್ರನಿಗೆ ಹವಿಸ್ಸೇ ಮೊದಲಾದವುಗಳನ್ನು ಅರ್ಪಿಸುತ್ತಾರೆ ಎಂದು ಅರ್ಥ,

ನಿರುಕ್ತಕಾರರು— **ದಾತಿ, ದಾಶತಿ** ಇವೇಮೊದಲಾದ ಹತ್ತು ದಾನಕರ್ಮಗಳಲ್ಲಿ **ತುಂಜತಿ** ಎಂಬ ಪದವು (ನಿ. ೩-೧೬) ಪಠಿತವಾಗಿದೆ ಎಂದು ವಿವರಿಸಿದ್ದಾರೆ. ಮತ್ತು

**ತುಂಜೇತುಂಜೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣಃ ।**
**ನ ವಿಂಧೇ ಅಸ್ಯ ಸುಷ್ಟುತಿಂ ॥**　　(ಋ. ಸಂ. ೧-೭-೭).

ಈ ಋಕ್ಕನ್ನು ಉದಹರಿಸಿ **ತುಂಜೇ ತುಂಜೇ** ಎಂಬ ಪದಕ್ಕೆ **ದಾನೇದಾನೇ** ಎಂದು ಅರ್ಥವನ್ನು ಹೇಳಿದ್ದಾರೆ. ದುರ್ಗಾಚಾರ್ಯರು ತುಂಜ ಶಬ್ದವು ದಾನಪರ್ಯಾಯವಚನವಾಗಿರುತ್ತದೆ. ತುಂಜಧಾತುವು ದಾನವೆಂಬ ಅರ್ಥವನ್ನು ಬೋಧಿಸುವುದು ಎಂದು ವಿವರಿಸಿದ್ದಾರೆ.

**ಪೃಥಕ್ ಸ್ವಃ ಸನಿಷ್ಯವಃ—** ಯಜಮಾನರು ಅವರವರು ಬೇರೆಬೇರೆಯಾಗಿ ಆಚರಿಸುವ ಯಾಗಗಳಲ್ಲಿ ಬೇರೆ ಬೇರೆಯಾಗಿ ಇಂದ್ರನಿಗೆ ಹವಿರಾದಿಗಳನ್ನು ಅರ್ಪಿಸಿ ಸ್ವರ್ಗವನ್ನು ಅಥವಾ ಅತಿಶಯವಾದ ಸುಖವನ್ನು ಹೊಂದಲು ಅಪೇಕ್ಷಿಸುವರು ಎಂದು ಅರ್ಥ ಮಾಡಿದೆ.

**ಸ್ವಃ** ಎಂಬ ಪದವು **ಸ್ವಃ ಪೃಶ್ನಿಃ** ಎಂದು ಆರು ಸಾಧಾರಣ ನಾಮಗಳಲ್ಲಿ (ನಿ. ೨-೧೩) ಉಕ್ತವಾಗಿದೆ. **ಸ್ವರಾದಿತ್ಯೋ ಭವತಿ, ಸು ಅರಣಃ, ಸು ಈರಣಃ, ಸ್ವೃತೋ ರಸಾನ್, ಸ್ವೃತೋ ಭಾಸಂ ಜ್ಯೋತಿಷಾಂ, ಸ್ವೃತೋ ಭಾಸೇತಿ ವಾ** (ನಿ. ೨-೧೪) ಎಂದು ವ್ಯಾಖ್ಯಾತವಾಗಿದೆ. ನೂರೊಂದು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿದೆ. ಮತ್ತು—

**ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।**
**ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ॥**

(ಋ. ಸಂ. ೧೦-೧೮-೧)

ಈ ಋಕ್ಕಿನಲ್ಲಿ **ಸ್ವಃ** ಎಂಬ ಪದಕ್ಕೆ ಸ್ವೀಯನೆಂದು ಅರ್ಥವನ್ನು ವಿವರಿಸಿದೆ.

**ಶೂಷಸ್ಯ ಧುರಿ ಧೀಮಹಿ—ಸೇನಾರೂಪಸ್ಯ ಬಲಸ್ಯ ವಹಸೇ ಜಯಾಯ ಸ್ಥಾಪಯಾಮಃ । ಯದ್ವಾ ಅಸ್ಮದೀಯಶಾರೀರಬಲಸ್ಯ ಧುರಿ ಧೀಮಹಿ।** **ಶೂಷ** ಶಬ್ದಕ್ಕೆ ಎರಡುವಿಧವಾದ ಅರ್ಥವನ್ನು ವಿವರಿಸಿದೆ. ಮೊದಲನೆಯ ಅರ್ಥದಲ್ಲಿ ಸೇನಾರೂಪದಿಂದ ಇರುವ ಬಲವೆಂದು ಅರ್ಥಮಾಡಿ ಸೇನೆಯನ್ನು ಜಯಿಸುವ ವಿಷಯದಲ್ಲಿ ಮುಂದಾಳಾಗಿ ಇರುವಂತೆ ಯಜಮಾನರಾದ ನಾವು ಆಶಂಸೆಮಾಡಿದ್ದೇವೆ ಎಂದು ಅರ್ಥವನ್ನು ವಿವರಿಸಿದೆ. ಯಜ್ಞವನ್ನು ಆಚರಿಸುವ ನಮ್ಮ ಶರೀರದ ಸಾಮರ್ಥ್ಯವನ್ನು ಅತಿಶಯವಾಗಿ ಉಂಟುಮಾಡುವುದಕ್ಕಾಗಿ ಇಂದ್ರನನ್ನು ಮೊದಲು ಪ್ರಾರ್ಥಿಸಿದೆ ಎಂದು ಎರಡನೆಯ ಅರ್ಥವನ್ನು ಹೇಳಿದೆ. **ಶೂಷ** ಶಬ್ದವು ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಬಲವೆಂದು ಅರ್ಥಮಾಡಿ, ಬಲವು ಸೇನೆಯೂ, ಅಥವಾ ಶರೀರಬಲವೂ ಆಗಬಹುದೆಂದು ಸಾಯಣರು ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ.

**ಪರ್ಷಣಿಂ ನಾವಂ ನ—ಪಾರಸ್ಯ ಸಂಭಕ್ತ್ರೀಂ ಪೂರಯಿತ್ರೀಂ ವಾ ಫಲಸ್ಯ ನಾವಮಿವ।** ಬಹಳವಾದ ಭಾರವನ್ನೂ ಅಪಾರವಾದ ಸಾಮಾನುಗಳನ್ನೂ ವಹಿಸಿರುವ ನಾವೆಯು (ಹಡಗು) ಸಮುದ್ರದ ದಡವನ್ನು ಸೇರಿಸುವಂತೆಯೂ, ಫಲವನ್ನು ಉಂಟುಮಾಡುವಂತೆಯೂ ಎಂದು ಹೋಲಿಸಿ ಇಂದ್ರನು ಯಜಮಾನರಿಗೆ ಯಜ್ಞಸಮಾಪ್ತಿಯನ್ನು ಉಂಟುಮಾಡಿ ಅದರ ಫಲವನ್ನು ಕೊಡುವನು ಎಂದು ಅರ್ಥವನ್ನು ಹೇಳಿದೆ.

**ಆಯವಃ ಇಂದ್ರಂ ನ ಚಿತಯಂತಃ—ಮನುಷ್ಯಾಃ ಯಜಮಾನಾಃ ಪರಮೇಶ್ವರಮಿವ ತ್ವಾಂ ಭಾವಯಂತಃ । ಯದ್ವಾ ನಶಬ್ದ ಏವಕಾರಾರ್ಥಃ । ಇಂದ್ರಮೇವ ತ್ವಾಂ ಜಾನಂತಃ ಇಂದ್ರಮೇವ ಆಯವಃ ಗಚ್ಛಂತಃ ಸ್ತೋತ್ರೈಃ ವಯಂ ಧೀಮಹಿ** । ಇಲ್ಲಿ **ಆಯವಃ** ಎಂಬ ಪದವು ಎರಡುಸಾರಿ ಪ್ರಯುಕ್ತವಾಗಿದೆ. ನಿರುಕ್ತಕಾರರು **ಆಯವಃ** ಎಂಬ ಪದವನ್ನು ಮನುಷ್ಯನಾಮಗಳಲ್ಲಿ (ನಿ. ೩-೮) ಪಾಠಮಾಡಿರುತ್ತಾರೆ. ಇಲ್ಲಿ ಮೊದಲನೆಯ ಅರ್ಥದಲ್ಲಿ ಯಜ್ಞಮಾಡುವ ಯಜಮಾನನೆಂದು ಅರ್ಥಮಾಡಿದೆ. ಇಂದ್ರನನ್ನು ಪರಮೇಶ್ವರನೆಂದು ತಿಳಿದು ಯಜ್ಞಗಳಿಂದ ತೃಪ್ತಿಪಡಿಸುತ್ತಾರೆಂದು ಅರ್ಥವನ್ನು ಹೇಳಿದೆ. **ಇಂದತೇರ್ವೈಶ್ವರ್ಯಕರ್ಮಣಃ** (ನಿ. ೧೦-೮) ಐಶ್ವರ್ಯವಾಚಿಯಾಗಿರುವ ಇಂದ ಧಾತುವಿನಿಂದ ನಿಷ್ಪನ್ನವಾದ ಇಂದ್ರಪದವು ಐಶ್ವರ್ಯವನ್ನು (ಕೊಡುವುದರಿಂದ ಲಾಗಲಿ) ಅನುಗ್ರಹಿಸುವ ನಿರತಿಶಯವಾದ ಈಶಿತೃತ್ವವುಳ್ಳವನಾಗಿರುವುದರಿಂದ ಇಂದ್ರಬೋಧಕವಾಗಿರುವುದೆಂದೂ, ಇದರಿಂದ ಪರಮೈಶ್ವರ್ಯಭಾವದಲ್ಲಿರುವುದರಿಂದ ಯಜ್ಞಮಾಡುವವರು ಪರಮೇಶ್ವರನೆಂದೇ ಭಾವಿಸುವರೆಂದೂ ಅರ್ಥಮಾಡಿದೆ. ಅಥವಾ ನಿರುಕ್ತಕಾರರು ಇಂದ್ರಶಬ್ದದ ಅರ್ಥವನ್ನು ವಿವರಿಸುವಾಗ **ಇಂಧೇ ಭೂತಾನೀತಿ ವಾ ತದ್ಯದ್ಯೈನಂ ಪ್ರಾಣೈಸ್ಸಮೈಂಧಂಸ್ತದಿಂದ್ರಸ್ಯೇಂದ್ರತ್ವಂ ಇತಿ ವಿಜ್ಞಾಯತೇ** ಪ್ರಾಣಿಗಳನ್ನು ಕಾಂತಿಯುಳ್ಳವರನ್ನಾಗಿ ಮಾಡುವವನು ಎಂದು ಅರ್ಥಮಾಡಿದ್ದಾರೆ. ದುರ್ಗಾಚಾರ್ಯರು **ಭೂತಾನಿ ಹ್ಯಸೌ ಅನ್ನೇನೋತ್ಪತ್ತ್ಯಾ ಅಧಿದೇವಸ್ಥಃ ಅಧ್ಯಾತ್ಮಸ್ಥೋ ವಾ ಅಭ್ಯವಹಾರಯನ್ ವಿಭಜಮಾನಶ್ಚ ದೀಪಯತಿ ದ್ಯುತಿಮಂತಿ ಕರೋತಿ ।**

ಪ್ರಾಣಿಗಳಲ್ಲಿ ಅಧಿದೇವಭಾವದಿಂದಲೂ, ಅಧ್ಯಾತ್ಮಭಾವದಿಂದಲೂ ಇರುವವನಾಗಿ ಅವರನ್ನು ಕಾಂತಿಯುಳ್ಳವರನ್ನಾಗಿ ಮಾಡುತ್ತಾನೆ. ಆದಕಾರಣ ಇಂದ್ರನು ಪರಮೇಶ್ವರನ ಹಾಗೆ ಇರುವವನೆಂದು ಇಂದ್ರಶಬ್ದಾರ್ಥವನ್ನು ವಿವರಿಸಿದ್ದಾರೆ.

ಎರಡನೆಯ ಅರ್ಥದಲ್ಲಿ **ಆಯವಃ** ಎಂಬ ಪದಕ್ಕೆ ತಿಳಿಯುವವರು ಎಂದು ಅರ್ಥವನ್ನು ಹೇಳಿ, ಇಂದ್ರನನ್ನು ಪರಮೈಶ್ವರ್ಯಭಾವದಿಂದ ಇರುವ ಕಾರಣ ಪರಮೇಶ್ವರನೆಂದೇ ತಿಳಿದು ಯಜ್ಞಗಳಿಂದಲೂ, ಸ್ತೋತ್ರಗಳಿಂದಲೂ ಯಜಮಾನರಾದ ನಾವು ಧ್ಯಾನಮಾಡುತ್ತೇವೆ ಎಂದು ಅರ್ಥವನ್ನು ವಿವರಿಸಿದೆ. ಮತ್ತು ನಿಪಾತಗಳಿಗೆ ಅನೇಕಾರ್ಥಗಳು ಇರುವುದರಿಂದ ನ ಎಂಬುದಕ್ಕೆ ಉಪಮಾರ್ಥವನ್ನೂ ಅವಧಾರಣಾರ್ಥವನ್ನೂ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ತುಂಜತೇ**—ತುಜಿ ಎಂಬುದು ದಾನಾರ್ಥಕವಾದ ಸೌತ್ರಧಾತು. ಶಿಕ್ಷತಿ ತುಂಜತೇ (ನಿರು. ೩-೨೦-೮) ಎಂದು ದಾನಾರ್ಥಕ ಧಾತುಮಧ್ಯದಲ್ಲಿ ಪಠಿತವಾಗಿದೆ. ಲಟ್ ಪ್ರಥಮಪುರುಷ ಬಹುವಚನಾಂತರೂಪ. **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ವೃಷಮನ್ಯವಃ**—ಮನ ಜ್ಞಾನೇ· ಧಾತು **ಯುಜಿಮನಿ**—(ಉ. ಸೂ. ೩-೩೦೦) ಎಂಬುದರಿಂದ ಯುಚ್ ಪ್ರತ್ಯಯ· ಸಮಾಸದಲ್ಲಿ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ,

**ಸ್ವಃ**—**ನ್ಯಙ್ಸ್ವರೌ ಸ್ವರಿತೌ** (ಫಿ. ಸೂ. ೭೪) ಎಂಬುದರಿಂದ ಸ್ವರಿತವಾಗುತ್ತದೆ.

**ಸನಿಷ್ಯವಃ**—ಷಣು ದಾನೇ· ಧಾತು. **ಇನ್ ಸರ್ವಧಾತುಭ್ಯಃ** ಎಂಬುದರಿಂದ ಇನ್ ಪ್ರತ್ಯಯ. ಸನಿಮಾತ್ಮನಃ ಇಚ್ಛತಿ ಎಂದು ಅರ್ಥವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ· **ಸರ್ವಪ್ರಾತಿಪದಿಕೇಭ್ಯೋ ಲಾಲಸಾಯಾಂ ಅಸುಕ್ ವಕ್ತವ್ಯಃ ಸುಗಾಗಮೋಽಪಿ ವಕ್ತವ್ಯಃ** (ಕಾ. ೭-೧-೫೧-೩) ಎಂಬುದರಿಂದ ಸುಕ್. ಸನಿಷ್ಯ ಎಂಬ ಕ್ಯಜಂತದ ಮೇಲೆ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಉ ಪ್ರತ್ಯಯ. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಪರ್ಷಣಿಂ**—ಪಾರ ಕರ್ಮಸಮಾಪ್ತೌ· ಧಾತು. ಷಣ ಸಂಭಕ್ತೌ ಧಾತು· **ಛಂದಸಿ ವನಸನ**—(ಪಾ. ಸೂ. ೩-೨-೨೭) ಎಂಬುದರಿಂದ ಇನ್ ಪ್ರತ್ಯಯ. ಹೀಗೆ ಇವುಗಳ ಮೇಲನದಿಂದ **ಪೃಷೋದರಾದೀನಿ ಯಥೋಪದಿಷ್ಟಂ** ಎಂಬುದರಿಂದ ಸಿದ್ಧವಾಗುತ್ತದೆ. ಅಥವಾ ಪೄ ಪಾಲನಪೂರಣಯೋಃ ಧಾತು. ಇದಕ್ಕೆ ಔಣಾದಿಕ ಸನಿ ಪ್ರತ್ಯಯ. ಧಾತುವಿಗೆ ಗುಣ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಧೀಮಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ· ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯ ಙಿತ್ತಾದುದರಿಂದ **ಘುಮಾಸ್ಥಾಗಾಪಾಜಹಾತಿಸಾಂ ಹಲಿ** (ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವ. ತಿಙಂತ ನಿಘಾತಸ್ವರ ಬರುತ್ತದೆ.

**ಚಿತಯಂತಃ**—ಚಿತೀ ಸಂಜ್ಞಾನೇ. ಧಾತು. **ಸತ್ಯಾಪಪಾಶ**—ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಗುಣ. ಬರುವುದಿಲ್ಲ. ಣಿಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಣಿಚಿಗೆ ಗುಣ ಅಯಾದೇಶ. ಣಿಚ್ ಸ್ವರ ಬರುತ್ತದೆ.

**ಆಯವಃ**—ಇಣ್ ಗತೌ. ಧಾತು. **ಛಂದಸೀಣಃ** (ಉ. ಸೂ. ೧-೨) ಎಂಬುದರಿಂದ ಉಣ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. ಅಯಾದೇಶ. ಪ್ರಥಮಾ ಬಹುವಚನಾಂತರೂಪ.

**ಸ್ತೋಮೇಭಿಃ**—**ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್‌ಭಾವ ವಿಕಲ್ಪವಾದುದರಿಂದ **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ. ॥ ೨ ॥



॥ ಸಂಹಿತಾಪಾಠಃ ॥

ವಿ ತ್ವಾ ತತಸ್ರೇ ಮಿಥುನಾ ಅವಸ್ಯವೋ ವ್ರಜಸ್ಯ ಸಾತಾ ಗವ್ಯಸ್ಯ ನಿಃಸೃಜಃ
ಸಕ್ಷಂತ ಇಂದ್ರ ನಿಃಸೃಜಃ ।
ಯದ್ಗವ್ಯಂತಾ ದ್ವಾ ಜನಾ ಸ್ವ೧ರ್ಯಂತಾ ಸಮೂಹಸಿ ।
ಆವಿಷ್ಕರಿಕ್ರದ್ವೃಷಣಂ ಸಚಾಭುವಂ ವಜ್ರಮಿಂದ್ರ ಸಚಾಭುವಂ ॥ ೩ ॥

॥ ಪದಪಾಠಃ ॥

ವಿ । ತ್ವಾ । ತತಸ್ರೇ । ಮಿಥುನಾಃ । ಅವಸ್ಯವಃ । ವ್ರಜಸ್ಯ । ಸಾತಾ । ಗವ್ಯಸ್ಯ । ನಿಃಽಸೃಜಃ । ಸಕ್ಷಂತಃ ।
ಇಂದ್ರ । ನಿಃಽಸೃಜಃ ।
ಯತ್ । ಗವ್ಯಂತಾ । ದ್ವಾ । ಜನಾ । ಸ್ವಃ । ಯಂತಾ । ಸಂಽಊಹಸಿ ।
ಆವಿಃ । ಕರಿಕ್ರತ್ । ವೃಷಣಂ । ಸಚಾಽಭುವಂ । ವಜ್ರಂ । ಇಂದ್ರ । ಸಚಾಽಭುವಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಮುದ್ದಿಶ್ಯ ಮಿಥುನಾಃ ಪತ್ನೀಸಹಿತಾ ಯಜಮಾನಾಃ ವಿ ತತಸ್ರೇ । ಯಜ್ಞಂ ವಿತನ್ವತೇ । ಯದ್ವಾ । ಯಜ್ಞೇ ಪಯೋವ್ರತಾದಿನಾತ್ಮಾನಮುಪಕ್ಷಯಂತಿ ॥ ತಸು ಉಪಕ್ಷಯೇ । ಛಾಂದಸೇ ಲಿಟೀರಯೋ ರ ಇತಿ ರೇಭಾವಃ ॥ ಕಿಮರ್ಥಂ । ಗವ್ಯಸ್ಯ ವ್ರಜಸ್ಯ ಸಾತಾ ಗವಾಂ ಸಂಬಂಧಿನೋ ಯೂಥಸ್ಯ ಲಾಭೇ ನಿಮಿತ್ತಭೂತೇ ಸತಿ । ನ ಚ ಸರ್ವತ್ರಾಗ್ನಿಹೋತ್ರಾದಿನಿತ್ಯವಾಕ್ಯೇಷು ಕಾರೀರೀಚಿತ್ರಾದಿಕಾಮ್ಯವಾಕ್ಯೇಷು ಯಸ್ಯೋದಯಂ ಯಸ್ಯ ಗೃಹಾನಿತ್ಯಾದಿನೈಮಿತ್ತಿಕವಾಕ್ಯೇಷು ಪುರುಷಸ್ಯೈವಾರ್ಥಿತ್ವಾದೇಃ ಸದ್ಭಾವಾತ್ತಸ್ಯೈವಾಧಿಕಾರಃ ಸ್ತ್ರಿಯಾಸ್ತು ಸತ್ಯಪ್ಯರ್ಥಿತ್ವೇಽಧ್ಯಯನಾಭಾವೇನ ವಿದ್ವತ್ತಾಯಾ ಅಭಾವಾದತ ಏವ ಸಾಮರ್ಥ್ಯಾಭಾವಾಚ್ಚ ನಾಸ್ತ್ಯಧಿಕಾರ ಇತಿ ವಾಚ್ಯಂ । ಯದ್ಯಪಿ ಸ್ತ್ರಿಯಾ ನಾಸ್ತಿ ಪೃಥಗಧಿಕಾರಸ್ತಥಾಪಿ ಪೂರ್ವಮೀಮಾಂಸಾಯಾಂ ಷಷ್ಠೇಽಧಿಕಾರಾಧ್ಯಾಯೇ ತೃತೀಯ-ಚತುರ್ಥಾಭ್ಯಾಮಧಿಕರಣಾಭ್ಯಾಂ ಅಸ್ತ್ಯೇವ ಸ್ತ್ರಿಯಾ ಅಧಿಕಾರಃ ಸ ಚ ಪತ್ಯಾ ಸಹೇತಿ ಪ್ರಪಂಚಿತತ್ವಾತ್ ಜಾಯಾಪತೀ ಅಗ್ನಿಮಾದಧೀಯಾತಾಮಿತ್ಯಾಧಾನವಿಧಾನಾತ್ ಸ್ಮೃತಿಷು ಚ ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ । ಮ. ೫-೧೫೫ । ಇತಿ ಪೃಥಗಧಿಕಾರಸ್ಯೈವ ನಿವಾರಿತತ್ವಾದಸ್ತ್ಯೇವ ಸ್ತ್ರಿಯಾಃ ಪತ್ಯಾ ಸಹಾಧಿಕಾರಃ । ಅಧ್ಯಯನಾಭಾವೇಽಪಿ ವೇದಂ ಪತ್ನ್ಯೈ ಪ್ರದಾಯ ವಾಚಯೇತ್ । ಅ. ೧೦-೧೧ ॥ ಇತಿ ಸೂತ್ರಕಾರವಚನಾತ್ ಪತ್ನ್ಯನ್ವಾಸ್ತ ಇತ್ಯಾದಿವಿಧಿಷು ಸುಪ್ರಜಸಸ್ತ್ವಾ ವಯಂ । ತೈಂ. ಸಂ. ೧-೧-೧೦-೧ । ಇತ್ಯಾದಿಮಂತ್ರವಿಧಾನಾದ್ಯತ್ರ ವಚನಮಸ್ತಿ ತತ್ರಾಸ್ತ್ಯೇವ ಮಂತ್ರೇಽಧಿಕಾರಃ ಕಿಂ ಹಿ ವಚನೇನ ಕುರ್ಯಾನ್ನಾಸ್ತಿ ವಚನಸ್ಯಾತಿಭಾರ ಇತಿ ನ್ಯಾಯಾತ್ । ತಸ್ಮಾನ್ಮಿಥುನಾ ಯಜ್ಞಂ ತತಸ್ರ ಇತ್ಯೇತದ್ಯುಕ್ತಂ । ಕೀದೃಶಾಸ್ತೇ । ಅವಸ್ಯವ ಇಂದ್ರಾಯಾತ್ಮನೇ ವಾ ತೃಪ್ತಿಮಿಚ್ಛಂತಃ ನಿಃಸೃಜೋ ನಿಃಶೇಷೇಣ ಹವಿಸ್ತ್ಯಜಂತಃ ಸಕ್ಷಂತಃ ॥ ಸಕ್ಷತಿರ್ಗತ್ಯರ್ಥಃ ॥ ತ್ವಾಂ ಸಂಭಜಮಾನಾಃ । ಪುನಸ್ತ ಏವ ವಿಶೇಷ್ಯಂತೇ । ನಿಃಸೃಜಃ ಫಲಪ್ರತಿಬಂಧಕಂ ಪಾಪಂ ನಿರ್ಗಮಯಂತಃ । ಕಸ್ತ್ವವ ವಿಶೇಷ ಇತಿ ತದುಚ್ಯತೇ । ಯದ್ಯಸ್ಮಾತ್ಕಾರಣಾದ್ಗವ್ಯಂತಾ ಗಾಮಾತ್ಮನ ಇಚ್ಛಂತೌ ॥ ಗೋಶಬ್ದಾತ್ಸುಪ ಆತ್ಮನಃ ಕ್ಯಚ್ । ವಾಂತೋ ಯಿ ಪ್ರತ್ಯಯ ಇತ್ಯವಾದೇಶಃ ॥ ಸ್ವರ್ಯಂತಾ ಸ್ವರ್ಗಂ ಯಂತೌ ಗಂತುಮುದ್ಯುಕ್ತೌ ದ್ವಾ ಜನಾ ದ್ವೌ ಜಾಯಾಪತಿರೂಪೌ ಜನೌ ಸಮೂಹಸಿ । ಸಂಯುಕ್ತಯೋರೇವಾಭಿಮತಂ ಸ್ವರ್ಗಾದಿಕಂ ಪ್ರಾಪಯಸಿ । ಯದ್ವಾ । ಸಮ್ಯಗನುಷ್ಠಿತವಂತಾವಿತ್ಯೂಹಸಿ ನಿಶ್ಚಿನೋಷಿ । ಅತಃ ಪತ್ನೀಸಹಿತಾ ಅನುತಿಷ್ಠಂತೀತ್ಯರ್ಥಃ । ಕಿಂ ಚ ಹೇ ಇಂದ್ರ ತ್ವಂ ವೃಷಣಂ ವರ್ಷಕಂ ಕಾಮಾನಾಂ ಸಚಾಭುವಂ ಸಹೈವೋತ್ಪನ್ನಂ ತ್ವಯಾ ವಿನಾ ಭೂತಂ ತಥಾ ಸಚಾಭುವಂ ಶತ್ರುವಧಾದಿವ್ಯಾಪಾರಸಾಮರ್ಥ್ಯೇನ ಸಹೈವೋತ್ಪನ್ನಂ ವಜ್ರಮಾವಿಷ್ಕರಿಕ್ರತ್ । ಆವಿಷ್ಕುರ್ವನ್ಪ್ರಕಟಯನ್ವರ್ತಸ ಇತಿ ಶೇಷಃ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—(ಎಲೈ) ಇಂದ್ರನೇ । **ಯತ್**— ಯಾವ ಕಾರಣ (ನೀನು) । **ಗವ್ಯಂತಾ**— ಗೋವುಗಳನ್ನು (ತಮ್ಮ ಉಪಯೋಗಕ್ಕೋಸ್ಕರ) ಇಚ್ಛಿಸುವವರೂ । **ಸ್ವಃ ಯಂತಾ**–ಸ್ವರ್ಗಕ್ಕೆ ಹೋಗಬೇಕೆಂದು ಅಪೇಕ್ಷೆಪಡುವವರೂ (ಆದ) । **ದ್ವಾ ಜನಾ**—(ಜಾಯಾಪತಿ ರೂಪರಾದ) ಇಬ್ಬರನ್ನೂ । **ಸಂ ಊಹಸಿ** - ಸಂಯುಕ್ತರಾದ ಅವರಿಬ್ಬರನ್ನು

(ಅಭಿಮತವಾದ ಸ್ವರ್ಗಾದಿ ಲೋಕಗಳಿಗೆ) ಸೇರಿಸುತ್ತೀಯೋ, ಅಥವಾ, ಕರ್ಮವನ್ನು ಚೆನ್ನಾಗಿ ಅನುಷ್ಠಾನಮಾಡಿದಾರೆಂದು ನಿಶ್ಚಯಿಸುತ್ತೀಯೋ । (**ಕಿಂಚ**—ಮತ್ತು) । (ಹೇ) **ಇಂದ್ರ**—(ಎಲೈ) ಇಂದ್ರನೇ । (**ತ್ವಂ**— ನೀನು) । **ವೃಷಣಂ**—ಕಾಮವರ್ಷಕವೂ । **ಸಚಾಭುವಂ**—ನಿನ್ನೊಡನೆಯೇ ಉದ್ಭೂತವಾದುದು (ನಿನ್ನನ್ನಗಲದೇ ಇರುವುದೂ । **ಸಚಾಭುವಂ**—(ಶತ್ರುವಧಾದಿ ವ್ಯಾಪಾರ) ಸಹಚರಿತವಾಗಿಯೇ ಉತ್ಪನ್ನವಾದುದೂ (ಆದ) । **ವಜ್ರಂ**—ವಜ್ರಾಯುಧವನ್ನು । **ಆವಿಃ ಕರಿಕ್ರತ್**—ಪ್ರಕಟಿಸುತ್ತಿರುತ್ತೀಯೋ । (**ತತ್**—ಆದಕಾರಣ) । (**ಹೇ ಇಂದ್ರ**—ಎಲೈ ಇಂದ್ರನೇ) । **ಅವಸ್ಯವಃ**—(ತಮಗೆ ಅಥವಾ ನಿನಗೆ) ತೃಪ್ತಿಯನ್ನು ಇಚ್ಛಿಸುವವರೂ । **ನಿಃ ಸೃಜಃ**—ನಿಃಶೇಷವಾಗಿ (ಹವಿಸ್ಸನ್ನು) ತ್ಯಾಗಮಾಡುವವರೂ । **ಸಕ್ಷಂತಃ**—(ನಿನ್ನನ್ನುದ್ದೇಶಿಸಿ) ಗಮಿಸುವವರೂ । **ನಿಃ ಸೃಜಃ**—(ಫಲಪ್ರತಿಬಂಧಕವಾದ ಪಾಪವನ್ನು) ಹೊರಡಿಸುವವರೂ (ಆದ) । **ಮಿಥುನಾಃ**—ಪತ್ನೀಸಹಿತರಾದ ಯಾಗಕರ್ತೃಗಳು । **ತ್ವಾ**—ನಿನ್ನನ್ನು (ಉದ್ದೇಶಿಸಿ) । **ಗವ್ಯಸ್ಯ**—ಗೋಸಂಬಂಧವಾದ । **ವ್ರಜಸ್ಯ**—ಹಿಂಡಿನ । **ಸಾತಾ**—ಪ್ರಾಪ್ತಿಗೋಸ್ಕರ । **ವಿ ತತಸ್ರೇ**—(ಯಜ್ಞಗಳನ್ನು) ಆಚರಿಸುತ್ತಾರೆ (ಅಥವಾ) (ಪಯೋವ್ರತಾದಿಗಳಿಂದ ದೇಹವನ್ನು) ದಂಡಿಸುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಗವಾದ್ಯಪೇಕ್ಷಿಗಳೂ, ಸ್ವರ್ಗಕಾಮಿಗಳೂ ಆದ ದಂಪತಿಗಳಿಗೆ ಸ್ವರ್ಗಾದಿ ಫಲಪ್ರದನಾಗುತ್ತೀಯೆ ; ಮತ್ತು ಇಷ್ಟಾರ್ಥವರ್ಷಕವೂ ನಿನ್ನೊಡನೆಯೇ ಸದಾ ಇರತಕ್ಕದ್ದೂ, (ಶತ್ರುವಧಾದಿ ಗುಣ) ಸಹಿತವಾಗಿಯೇ ಉತ್ಪನ್ನವಾದುದೂ ಆದ ವಜ್ರಾಯುಧವನ್ನು ಪ್ರಕಟಿಸುತ್ತಿರುತ್ತೀಯೇ ; ಆದುದರಿಂದ, ನಿನಗೆ ಮತ್ತು ತಮಗೆ (ಇಬ್ಬರಿಗೂ) ತೃಪ್ತಿಯನ್ನಪೇಕ್ಷಿಸುವವರೂ, ನಿಃಶೇಷವಾಗಿ ಹವಿರ್ದಾನಮಾಡುವವರೂ, (ನಿನ್ನನ್ನೇ ಉದ್ದೇಶಿಸಿ) ಬರುವವರೂ, (ಫಲಪ್ರತಿಬಂಧಕವಾದ ಪಾಪವನ್ನು) ಹೊರದೂಡುವವರೂ ಆದ ಯಜಮಾನ ದಂಪತಿಗಳು, ಗೋವ್ರಜಪ್ರಾಪ್ತಿಗೋಸ್ಕರ ನಿನ್ನನ್ನುದ್ದೇಶಿಸಿ, ಯಜ್ಞವನ್ನು (ಪಯೋವ್ರತಾದಿಗಳನ್ನು) ಆಚರಿಸುತ್ತಾರೆ.

## English Translation.

The (married) couples, anxious to satisfy you, and presenting (oblations) together, celebrate (your worship), for the sake of (obtaining) herds of cattle; presenting (you), Indra (oblations): you well know that these two persons are desirous of cattle, are desirous of heaven, and (you abide), displaying your thunderbolt, the shower (of benefits), your constant companion, ever Indra, associated (with you).

॥ ವಿಶೇಷವಿಷಯಗಳು ॥

**ನ ಚ ಅಗ್ನಿಹೋತ್ರಾದಿನಿತ್ಯವಾಕ್ಯೇಷು ಸರ್ವತ್ರ ಕಾರೀರೀಚಿತ್ರಾದಿಕಾಮ್ಯವಾಕ್ಯೇಷು ಯಸ್ಯೋಭಯಂ ಯಸ್ಯ ಗೃಹಾನ್ ಇತ್ಯಾದಿ ನೈಮಿತ್ತಿಕವಾಕ್ಯೇಷು ಪುರುಷಸ್ಯೈವಾರ್ಥಿತ್ವಾದೇಃ ಸದ್ಭಾವಾತ್ ತಸ್ಯೈವಾಧಿಕಾರಃ । ಸ್ತ್ರಿಯಾಸ್ತು ಸತ್ಯಪಿ ಅರ್ಥಿತ್ವೇ ಅಧ್ಯಯನಾಭಾವೇನ ವಿದ್ವತ್ತ್ವಾಯಾ ಅಭಾವಾತ್ ಅತ ಏವ ಸಾಮರ್ಥ್ಯಾಭಾವಾಚ್ಚ ನಾಸ್ತ್ಯಧಿಕಾರ ಇತಿ ವಾಚ್ಯಮ್ । ಯಾವಜ್ಜೀವಮಗ್ನಿಹೋತ್ರಂ**

**ಕುರ್ವೀತ** ಎಂಬ ಇವೇ ಮೊದಲಾದ ಶ್ರುತಿವಾಕ್ಯಗಳು ಅಗ್ನಿಹೋತ್ರವನ್ನು ಬದುಕಿರುವವರಿಗೂ ತಪ್ಪದೆ ನಿಯತವಾಗಿ ಆಚರಿಸಬೇಕು ಎಂದು ಬೋಧಿಸುವುದರಿಂದ ನಿತ್ಯವಾಕ್ಯಗಳೆನಿಸುತ್ತವೆ. **ವೃಷ್ಟಿಕಾಮಃ ಕಾರೀರ್ಯಾ ಯಜೇತ** ಎಂಬ ಇವೇ ಮೊದಲಾದ ವಾಕ್ಯಗಳು ಕಾಮನೆಯನ್ನು ಬೋಧಿಸಿ ಆಯಾಯ ಕಾಮನೆಯುಳ್ಳವರು ಆಯಾಯ ಕಾಮಗಳನ್ನು ಹೊಂದುವುದಕ್ಕಾಗಿ ಆಯಾಯ ಯಾಗಗಳನ್ನು ಆಚರಿಸಬೇಕೆಂದು ಬೋಧಿಸುವ ಕಾರಣ ಕಾಮ್ಯವಾಕ್ಯಗಳೆನಿಸಿರುತ್ತವೆ. **ಯಸ್ಯೋದಯಂ ಯಸ್ಯ ಗೃಹಾನ್** ಎಂಬ ವಾಕ್ಯಗಳು ಆಯಾಯ ನಿಮಿತ್ತಗಳನ್ನು ತಿಳಿದುಕೊಂಡು ಆಯಾಯ ಕಾಲಗಳಲ್ಲಿ ಮಾತ್ರವೇ ಯಾಗಾದಿಗಳನ್ನು ಆಚರಿಸಬೇಕೆಂದು ವಿಧಿಸುವ ಕಾರಣ ನೈಮಿತ್ತಿಕ ವಾಕ್ಯಗಳಾಗಿರುತ್ತವೆ. ನಿತ್ಯ, ಕಾಮ್ಯ, ನೈಮಿತ್ತಿಕ ಎಂಬ ಮೂರು ವಿಧವಾದ ಯಾಗಗಳನ್ನು ಆಚರಿಸುವ ವಿಷಯದಲ್ಲಿ ಪುರುಷನಿಗೆ ಅರ್ಥಿತ್ವವು (ಅಭಿಲಾಷೆಯು) ಇರುವುದರಿಂದ ಅವನಿಗೆ ಮಾತ್ರವೇ ಅಧಿಕಾರವಿರುವುದೆಂದು ತಿಳಿದುಬರುತ್ತದೆ. ಆದರೆ ಪುರುಷನಿಗೆ ಇವುಗಳಲ್ಲಿ ಅಭಿಲಾಷೆಯು ಇರುವ ಹಾಗೆ ಸ್ತ್ರೀಯೂ ಅಭಿಲಾಷೆಯನ್ನು ಹೊಂದಿರುವುದಾದರೂ ಅವಳಿಗೆ ಮಂತ್ರಗಳನ್ನು ಅಧ್ಯಯನಮಾಡದೆ ಇರುವ ಕಾರಣ ಸರಿಯಾದ ತಿಳುವಳಿಕೆಯು ಇಲ್ಲದಿರುವುದರಿಂದ ಯಾಗಮಾಡುವ ಸಾಮರ್ಥ್ಯವಿಲ್ಲದೆ ಇರುವುದರಿಂದ ಅಧಿಕಾರವು ಇರುವುದಿಲ್ಲ ಎಂದು ಸ್ತ್ರೀಯರಿಗೆ ಯಜ್ಞಕರ್ಮಾಚರಣೆಯಲ್ಲಿ ಅಧಿಕಾರವು ನಿಷೇಧಮಾಡಿರುತ್ತದೆ ಎಂದು ಶಾಸ್ತ್ರದಲ್ಲಿ ಹೇಳಿರುತ್ತದೆ.

**ಯದ್ಯಪಿ ಸ್ತ್ರಿಯಾಃ ನಾಸ್ತಿ ಪೃಥಗಧಿಕಾರಃ ತಥಾಪಿ ಪೂರ್ವಮೀಮಾಂಸಾಯಾಂ ಷಷ್ಠೇ ಅಧಿಕಾರಾಧ್ಯಾಯೇ ತೃತೀಯಚತುರ್ಥಾಭ್ಯಾಂ ಅಧಿಕರಣಾಭ್ಯಾಂ ಅಸ್ತ್ಯೇವ ಸ್ತ್ರಿಯಾ ಅಧಿಕಾರಃ ಸ ಚ ಪತ್ಯಾ ಸಹೇತಿ ಪ್ರಸಂಚಿತತ್ವಾತ್ "ಜಾಯಾಪತೀ ಅಗ್ನಿಮಾದಧೀಯಾತಾಂ" ಇತ್ಯಾಧಾನವಿಧಾನಾತ್ ।** ಹೀಗೆ ಶಾಸ್ತ್ರಾರ್ಥವಿಚಾರವನ್ನು ವಿಮರ್ಶೆಮಾಡುವಲ್ಲಿ ಸ್ತ್ರೀಯರಿಗೆ, ಮಂತ್ರಗಳನ್ನು ಅಧ್ಯಯನಮಾಡದಿರುವುದು, ಶಾಸ್ತ್ರಜ್ಞಾನವಿಲ್ಲದಿರುವುದು, ಇವುಗಳಿಂದ ಕರ್ಮಾಚರಣೆಯ ಸಾಮರ್ಥ್ಯವು ಇಲ್ಲದಿರುವುದರಿಂದ ಯಜ್ಞಾಚರಣೆಯಲ್ಲಿ ಅಧಿಕಾರವಿಲ್ಲವೆಂದು ಹೇಳಬಹುದು. ಆದರೆ, ಪೂರ್ವಮೀಮಾಂಸಾಶಾಸ್ತ್ರದಲ್ಲಿ ಆರನೇ ಅಧ್ಯಾಯದಲ್ಲಿ ಯಜ್ಞವನ್ನು ಆಚರಿಸುವ ಅಧಿಕಾರಿಗಳು, ಅಧಿಕಾರವಿಲ್ಲದವರು ಇವರನ್ನು ವಿವೇಚನೆ ಮಾಡಿ ತಿಳಿಸುವುದರಿಂದ ಅದಕ್ಕೆ ಅಧಿಕಾರಾಧ್ಯಾಯವೆಂದು ಹೆಸರು ಬಂದಿರುತ್ತದೆ. ಅದರಲ್ಲಿ ಮೂರನೆಯ ಮತ್ತು ನಾಲ್ಕನೆಯ ಅಧಿಕರಣಗಳಲ್ಲಿ ಸ್ತ್ರೀಯರಿಗೂ ಅಧಿಕಾರವು ಇರುವುದು. ಅದೂ ಕೂಡ ಪತಿಗೆ ಇರುವ ಅಧಿಕಾರವನ್ನು ನಿಮಿತ್ತಮಾಡಿಕೊಂಡು ಇರುತ್ತದೆ ಎಂದು ವಿಸ್ತಾರವಾಗಿ ವಿಮರ್ಶೆಮಾಡಿ ಹೇಳಿರುತ್ತದೆ. ಈ ವಿಷಯದಲ್ಲಿ (ಸ್ತ್ರೀಯರಿಗೆ ಪತಿಯ ಅಧಿಕಾರವನ್ನು ನಿಮಿತ್ತಮಾಡಿಕೊಂಡು ಇರುವುದು) **"ಜಾಯಾಪತೀ ಅಗ್ನಿಮಾದಧೀಯಾತಾಂ"** ದಂಪತಿಗಳು ಅಗ್ನ್ಯಾಧಾನವನ್ನು ಆಚರಿಸುವರು ಎಂಬ ಶ್ರುತಿವಚನವು ಪ್ರಮಾಣವಾಗಿರುತ್ತದೆ. ಮನುಸ್ಮೃತಿಯಲ್ಲಿ **"ನಾಸ್ತಿ ಸ್ತ್ರೀಣಾಂ ಪೃಥಕ್ ಯಜ್ಞೋ ನ ವ್ರತಂ"** (ಮನು ೫-೧೫೫) ಇತಿ **ಪೃಥಗಧಿಕಾರಸ್ಯೈವ ನಿವಾರಿತತ್ವಾತ್. ಅಸ್ತ್ಯೇವ ಸ್ತ್ರಿಯಾಃ ಪೃಥಗಧಿಕಾರಃ.** ಸ್ತ್ರೀಯರಿಗೆ ವ್ರತ ಯಜ್ಞಾಚರಣೆ ಇವುಗಳಲ್ಲಿ ಸ್ವತಂತ್ರವಾದ ಅಧಿಕಾರವು ಇರುವುದಿಲ್ಲ ಎಂದೂ ಪತಿಯ ಜೊತೆಯಲ್ಲಿ ಇವರು ಕರ್ಮಗಳನ್ನು ಆಚರಿಸಬಹುದು ಎಂದೂ, ಅಧಿಕಾರವನ್ನು ವಿಮರ್ಶೆಮಾಡಿ ಹೇಳಿರುತ್ತದೆ.

**ಅಧ್ಯಯನಾಭಾವೇಽಪಿ ವೇದಂ ಪತ್ನ್ಯೈ ಪ್ರದಾಯ ವಾಚಯೇತ್** (ಆ. **ಶ್ರೌ. ಸೂತ್ರ** ೧-೧೧) ಇತಿ **ಸೂತ್ರಕಾರವಚನಾತ್ ಪತ್ನ್ಯನ್ವಾಸ್ತೇ ಇತ್ಯಾದಿ ವಿಧಿಷು ಸುಪ್ರಜಸಸ್ತ್ವಾವಯಂ (ತೈ ಸಂ** ೧-೧-೧೦-೧).

**ಇತ್ಯಾದಿಮಂತ್ರವಿಧಾನಾತ್ ಯತ್ರ ವಚನಮಸ್ತಿ ತತ್ರ ಅಸ್ತ್ಯೇವ ಮಂತ್ರೇ ಅಧಿಕಾರಃ । ಕಿಂ ಹಿ ವಚನೇನ ಕುರ್ಯಾತ್ ನಾಸ್ತಿ ವಚನಸ್ಯಾತಿಭಾರಃ ಇತಿ ನ್ಯಾಯಾತ್ । ತಸ್ಮಾತ್ ಮಿಥುನಾಃ ಯಜ್ಞಂ ತತಸ್ರೇ ಇತ್ಯೇತತ್ ಯುಕ್ತಂ ।** ತೈತ್ತಿರೀಯ ಸಂಹಿತೆಯಲ್ಲಿ ಸಮಾಚೀನವಾದ ಪ್ರಜೆಯಿಂದ ನಾವು ಕೂಡಿರುತ್ತೇವೆ ಎಂದು ಉಕ್ತವಾಗಿರುವುದು. ಆಶ್ವಲಾಯನ ಶ್ರೌತಸೂತ್ರದಲ್ಲಿ ದರ್ಭೆಯನ್ನು ಪತ್ನಿಯ ಹಸ್ತದಲ್ಲಿ ಕೊಟ್ಟು ಮಂತ್ರವನ್ನು ಹೇಳಿಸಬೇಕು ಎಂದು ವಿಧಿವಾಕ್ಯವು ಇರುವುದು. ಇವುಗಳಿಂದ ಸ್ತ್ರೀಯರಿಗೆ ಶ್ರೌತಕರ್ಮದಲ್ಲಿ ಅಧಿಕಾರವು, ವೇದಾಧ್ಯಯನವು ಇಲ್ಲದಿದ್ದಾಗ್ಯೂ ಶ್ರುತಿಯಲ್ಲಿ ಉಕ್ತವಾಗಿರುವ ವಚನಕ್ಕೆ ಅನುಸಾರವಾಗಿ ಆಯಾಯ ಮಂತ್ರಗಳನ್ನು ಪಠಿಸುವುದರಲ್ಲಿ ಅಧಿಕಾರವು ಇರುವುದೆಂದು ಶ್ರುತಿಯಲ್ಲಿಯೇ ಗಮಕವು ಕಂಡುಬರುತ್ತದೆ. ಮತ್ತು ಶ್ರುತಿಯಲ್ಲಿ ಉಕ್ತವಾಗಿರುವ ಅರ್ಥವನ್ನು ಬೋಧಿಸುವ ವಚನವು ಸಾರ್ಥಕ್ಯವನ್ನು ಹೊಂದುವುದು. ವ್ಯರ್ಥವಾಗಿ ವಚನವು ಇರುವುದಿಲ್ಲವೆಂದು ಅರ್ಥವನ್ನು ವಿವರಿಸಿರುವುದರಿಂದ ಶ್ರುತಿಪ್ರೋಕ್ತವಾದ ವಚನದಂತೆ ಅನ್ವಾಧಾನಾದಿಗಳಲ್ಲಿ ಸ್ತ್ರೀಯರಿಗೆ ಪತಿಯೊಡನೆಯೇ ಅಧಿಕಾರವು ಇರುವ ಕಾರಣ ಈ ಮಂತ್ರದಲ್ಲಿ **ಮಿಥುನಾಃ ಯಜ್ಞಃ ತತಸ್ರೇ** ಎಂದು ಉಕ್ತವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ.

**ಅವಸ್ಯವಃ ನಿಸ್ಸೃಜಃ—ಇಂದ್ರಾಯ ಆತ್ಮನೇ ವಾ ತೃಪ್ತಿಮಿಚ್ಛಂತಃ ನಿಶ್ಶೇಷೇಣ ಹವಿಸ್ಸೃಜಂತಃ।** ಇಂದ್ರನಿಗೆ ತೃಪ್ತಿಯನ್ನುಂಟುಮಾಡುವುದಕ್ಕಾಗಲಿ ಅಥವಾ ಯಜಮಾನರು ತಮ್ಮ ಉದ್ದೇಶಾನುಸಾರವಾಗಿ ಯಜ್ಞವನ್ನು ಆಚರಿಸಿ ಸಂತೋಷವನ್ನು ಹೊಂದುವುದಕ್ಕಾಗಲಿ ಹವಿಸ್ಸುಗಳನ್ನು ಬಹಳವಾಗಿ ಅರ್ಪಿಸುತ್ತಾರೆಂದು ಅರ್ಥ. **ನಿಸ್ಸೃಜಃ** ಎಂಬ ಪದವು ಎರಡುಸಾರಿ ಪಠಿತವಾಗಿದೆ. ಇದಕ್ಕೆ ಎರಡನೆಯ ಅರ್ಥದಲ್ಲಿ **ಫಲಪ್ರತಿಬಂಧಕಂ ಪಾಪಂ ನಿರ್ಗಮಯಂತಃ** ಯಜಮಾನರು ತಮ್ಮ ಅಭಿಲಷಣೀಯವಾದ ಫಲವನ್ನು ಹೊಂದಲು ತಡೆಮಾಡುವ ಪಾಪಗಳನ್ನು ಪೂರ್ಣವಾಗಿ ಯಜ್ಞಾಚರಣೆಯಿಂದ ಕಳೆದುಕೊಳ್ಳುವರು ಎಂದು ವಿವರಿಸಿದೆ.

**ಗವ್ಯಂತಾ, ಸ್ವರ್ಯಂತಾ ದ್ವಾ ಜನಾ ಸಮೂಹಸಿ—ಗಾಮಾತ್ಮನ ಇಚ್ಛಂತೌ ಸ್ವರ್ಗಂ ಗಂತುಮುದ್ಯುಕ್ತೌ ಜಾಯಾಪತಿರೂಪೌ ಜನೌ ಅಭಿಮತಂ ಸ್ವರ್ಗಂ ಪ್ರಾಪಯಸಿ । ಯದ್ವಾ ಸಮ್ಯಗನುಷ್ಠಿತವಂತೌ ಇತಿ ನಿಶ್ಚಿನೋಷಿ ।** ಯಜಮಾನರು ಪತ್ನೀಸಹಿತರಾಗಿ ಗೋವುಗಳನ್ನು ಹೊಂದಲಿಚ್ಛೆಯುಳ್ಳವರಾಗಿಯೂ, ಸ್ವರ್ಗವನ್ನು ಹೊಂದಲು ಅಪೇಕ್ಷೆಯುಳ್ಳವರಾಗಿಯೂ ಇರುವುದರಿಂದ ಇಂದ್ರನು ಅವರಿಬ್ಬರ ಇಷ್ಟಗಳನ್ನು ನೆರವೇರಿಸುವನೆಂದು ಒಂದು ವಿಧವಾದ ಅರ್ಥವನ್ನೂ, ಯಜ್ಞರೂಪವಾದ ಕರ್ಮವನ್ನು ಸರಿಯಾದ ರೀತಿಯಿಂದ ಆಚರಿಸಿರುತ್ತಾರೆಂದು ಇಂದ್ರನು ತಿಳಿಯುವನೆಂದು ಎರಡನೆಯ ಅರ್ಥವನ್ನೂ ವಿವರಿಸಿ, ಇವರಿಬ್ಬರ ಅಭಿಮತವನ್ನು ಇಂದ್ರನು ಪೂರ್ಣಮಾಡುವುದರಿಂದ ಪತ್ನೀಸಹಿತರಾಗಿಯೇ ಯಜ್ಞವನ್ನು ಆಚರಿಸುತ್ತಾರೆಂದು ವರ್ಣಿಸಿದೆ.

**ವರ್ಷಣಂ ಸಚಾಭುವಂ—ಕಾಮಾನಾಂ ವರ್ಷಕಂ ಅವಿನಾಭೂತಂ ।** ಇಂದ್ರನು ತನ್ನನ್ನು ಆಶ್ರಯಿಸಿದವರ ವಿಷಯದಲ್ಲಿ ಅವರವರ ಇಷ್ಟಗಳನ್ನು ನೆರವೇರಿಸಿ ಕೊಡುವುದರಿಂದ ಇವನು ಯಾವಾಗಲೂ ಕಾಮಪೂರಣ ಕಾರ್ಯದಲ್ಲಿ ಸರ್ವದಾ ನಿರತನಾಗಿರುವನೆಂದು ಅರ್ಥ.

**ಸಚಾಭುವಂ ವಜ್ರಂ ಆ ವಿಷ್ಕರಿಕ್ರತ್—ಶತ್ರುವಧಾದಿ ವ್ಯಾಪಾರಸಾಮರ್ಥ್ಯೇನ ಸಹೈವೋತ್ಪನ್ನಂ ವಜ್ರಂ ಪ್ರಕಟಯನ್ ವರ್ತತೇ ।** ಇಂದ್ರನು ಶತ್ರುಗಳನ್ನು ನಾಶಮಾಡುವ ಶಕ್ತಿಯಿಂದ ಕೂಡಿರುವ ವಜ್ರಾಯುಧವನ್ನು ನಿಯತವಾಗಿ (ಯಾವಾಗಲೂ) ಧರಿಸಿರುವನೆಂದು ಇಂದ್ರನ ಅವ್ಯಭಿಚರಿತವಾದ ಮಾಹಾತ್ಮ್ಯವನ್ನು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ತತಸ್ರೇ**—ತಸು ಉಪಕ್ಷಯೇ. ಧಾತು. **ಛಂದಸಿ ಲುಙ್‌ಲಙ್**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಬಹುವಚನದಲ್ಲಿ **ಲಿಟಸ್ತಝಯೋ**—ಎಂಬುದರಿಂದ ಇರೇ ಆದೇಶ. **ಇರಯೋರೇ** (ಪಾ. ಸೂ. ೬-೪-೭೬) ಎಂಬುದರಿಂದ ಅದಕ್ಕೆ ರೇ ಆದೇಶ. ಧಾತುವಿಗೆ ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಅವಸ್ಯವಃ**—ಅವಂತೀತಿ ಅವಾಃ ದೇವಾಃ, ತಾನ್ ಇಚ್ಛಂತಿ ಎಂದು ವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. **ಸರ್ವಪ್ರಾತಿಪದಿಕೇಭ್ಯಃ ಲಾಲಸಾಯಾಂ ಸುಕ್ ವಕ್ತವ್ಯಃ** ಎಂಬ ವಚನದಿಂದ ಸುಕ್. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ.

**ಸಾತಾ**—ಷಣು ದಾನೇ. ಧಾತು. **ಊತಿಯೂತಿಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತವಾದ ಕ್ತಿನ್ನಂತದೊಡನೆ ನಿಪಾತಿತವಾಗಿದೆ. ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ. ಡಿತ್ತಾದುದರಿಂದ ಟಿಗೆ (ಇಕಾರ) ಲೋಪ. ಉದಾತ್ತನಿವೃತ್ತಿ ಸ್ವರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಗವ್ಯಸ್ಯ**—**ಗೋಪಯಸೋರ್ಯತ್** ಎಂಬುದರಿಂದ ಸಂಬಂಧಾರ್ಥದಲ್ಲಿ ಯತ್ ಪ್ರತ್ಯಯ. **ವಾಂತೋ ಯಿ ಪ್ರತ್ಯಯೇ** ಎಂಬುದರಿಂದ ಅವಾದೇಶ. **ಯತೋ ನಾವಃ** (ಪಾ. ಸೂ. ೬-೧-೨೧೩) ಎಂಬುದ ರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನಿಃಸೃಜಃ**—ಸೃಜ ವಿಸರ್ಗೇ. ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಪ್ರಾದಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಸಕ್ಷಂತಃ**—ಸಕ್ಷ ಗತೌ. ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಗವ್ಯಂತಾ**—ಗಾಂ ಆತ್ಮನಃ ಇಚ್ಛಂತೌ. ಗವ್ಯಂತೌ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ವಾಂತೋ ಯಿ ಪ್ರತ್ಯಯೇ** (ಪಾ. ಸೂ. ೬-೧-೭೯) ಎಂಬುದರಿಂದ ಓಕಾರಕ್ಕೆ ಅವಾದೇಶ. ಗವ್ಯ ಎಂಬ ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಕ್ಯಚ್ ಸ್ವರ ಉಳಿಯುತ್ತದೆ. ಪ್ರಥಮಾ ದ್ವಿವಚನ ಪರವಾದಾಗ **ಉಗಿದಚಾಂ ಸರ್ವ**—ಎಂಬುದರಿಂದ ನುಮಾಗಮ. **ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶ. ದ್ವಾ, ಜನಾ, ಎಂಬಲ್ಲಿಯೂ ಹೀಗೆ ಆಕಾರಾದೇಶ ಬರುತ್ತದೆ.

**ಯಂತಾ**—ಇಣ್ ಗತೌ. ಧಾತು. ಲಟಿಗೆ ಶತ್ರಾದೇಶ. ಶಪಿಗೆ ಲುಕ್. **ಇಣೋ ಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಹಿಂದಿನಂತೆ ದ್ವಿವಚನಕ್ಕೆ ಡಾದೇಶ. ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ.

**ಸಂ ಊಹಸಿ**—ಊಹ ವಿತರ್ಕೇ ಧಾತು. ಲಟ್ ಮಧ್ಯಮಪುರುಷ ಏಕವಚನಾಂತರೂಪ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ಸಿಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. **ತಿಙ್ ಚೋದಾತ್ತವತಿ** ಎಂಬುದರಿಂದ ಗತಿಗೆ (ಸಂ) ಅನುದಾತ್ತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ವಿದುಷ್ಟೇ ಅಸ್ಯ ವೀರ್ಯಸ್ಯ ಪೂರವಃ ಪುರೋ ಯದಿಂದ್ರ ಶಾರದೀರವಾತಿರಃ
ಸಾಸಹಾನೋ ಅವಾತಿರಃ ।
ಶಾಸಸ್ತಮಿಂದ್ರ ಮರ್ತ್ಯಮಯಜ್ಯುಂ ಶವಸಸ್ಪತೇ ।
ಮಹೀಮಮುಷ್ಣಾಃ ಪೃಥಿವೀಮಿಮಾ ಅಪೋ ಮಂದಸಾನ ಇಮಾ
ಅಪಃ ॥ ೪ ॥

॥ ಪದಪಾಠಃ ॥

ವಿದುಃ । ತೇ । ಅಸ್ಯ । ವೀರ್ಯಸ್ಯ । ಪೂರವಃ । ಪುರಃ । ಯತ್ । ಇಂದ್ರ । ಶಾರದೀಃ । ಅವಽಅತಿರಃ ।
ಸಸಹಾನಃ । ಅವಽಅತಿರಃ ।
ಶಾಸಃ । ತಂ । ಇಂದ್ರ । ಮರ್ತ್ಯಂ । ಅಯಜ್ಯುಂ । ಶವಸಃ । ಪತೇ ।
ಮಹೀಂ । ಅಮುಷ್ಣಾಃ । ಪೃಥಿವೀಂ । ಇಮಾಃ । ಅಪಃ । ಮಂದಸಾನಃ । ಇಮಾಃ । ಅಪಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ವೀರ್ಯಸ್ಯ ತವ ಸಂಬಂಧಿನೋಽಸ್ಯ ವೀರ್ಯಸ್ಯ ॥ ಕರ್ಮಣಿ ಷಷ್ಠೀ ॥ ವಕ್ಷ್ಯಮಾಣಮೇತದ್ವೀರ್ಯಂ ವಿದುಃ । ಯೇ ಪೂರವೋ ಮನುಷ್ಯಾ ಯಜಮಾನಾಸ್ತವ ಮಹತ್ತ್ವಂ ಜಾನಾನಾಸ್ತ್ವಾಮೇವ ಯಜಂತಿ ತೇ ವಿದುಃ । ಯದ್ವಾ । ಅಸ್ಯ ವೀರ್ಯಸ್ಯ ಮಾಹಾತ್ಮ್ಯಮಿತಿ ಶೇಷಃ ॥ ವಿದುಷ್ಟ ಇತ್ಯತ್ರ ಯುಷ್ಮತ್ತತ್ತತಕ್ಷುಃಷ್ವಿತಿ ವಿಸರ್ಜನೀಯಸ್ಯ ಸತ್ವಂ ॥ ವೀರ್ಯಮೇವ ವಿಶೇಷ್ಯತೇ । ಹೇ ಇಂದ್ರ ಯದ್ಯಸ್ಮಾತ್ಕಾರಣಾತ್ ಶಾರದೀಃ ಸಂವತ್ಸರಸಂಬಂಧಿನೀಃ ಸಂವತ್ಸರಪರ್ಯಂತಂ

ಪ್ರಾಕಾರಪರಿಖಾದಿಭಿರ್ದೃಢೀಕೃತಾಃ ಪುರಃ ಶತ್ರೂಣಾಂ ಪುರೀರವಾತಿರಃ ಅನಾಶಯಃ ॥ ಅವಪೂರ್ವ-ಸ್ತಿರತಿರ್ನಾಶನಾರ್ಥಃ ॥ ಕಿಂ ಕುರ್ವನ್ । ಸಸಹಾನಸ್ತತ್ರತ್ಯಾನಭಿಭವನ್ ಧನಾದ್ಯಪಹಾರೇಣ ಪೀಡಯನ್ ॥ ಸಹತೇರ್ಯಙ್ಲುಗಂತಾತ್ತಾಚ್ಛೀಲಿಕಶ್ಚಾನಶ್ ॥ ಅವಾತಿರಃ । ಕಿಂಚ ಹೇ ಇಂದ್ರ ತಂ ಮರ್ತ್ಯಂ ಮರಣಧರ್ಮಾಣಮಯಜ್ಯುಮಯಷ್ಟಾರಂ ಯಜ್ಞವಿಘಾತಿನಂ ರಾಕ್ಷಸಾದಿ ಶಾಸಃ । ನಿಗೃಹೀತವಾನಸಿ । ಹೇ ಶವಸಸ್ಪತೇ ಬಲಸ್ಯ ಪಾಲಕೇಂದ್ರ ತ್ವಂ ಮಹೀಂ ಮಹತೀಂ ಪೃಥಿವೀಮಿಮಾ ಅಪಶ್ಚ ಸಮುದ್ರ-ನದ್ಯಾತ್ಮಕಾನ್ಯುದಕಾನಿ ಚಾಮುಷ್ಣಾಃ । ಬಲಾದಪಹೃತವಾನಸಿ । ಅಸುರೈರನ್ಯೈರ್ವಾ ಯಜ್ಞವಿದ್ವೇಷಿಭಿ-ರಾಕ್ರಾಂತಾಂ ಭೂಮಿಂ ತತ್ಸಂಬಂಧಿನೀರಪಶ್ಚ ತೇಷಾಂ ಪುರಾಣಿ ಭಿತ್ವಾಪಹೃತವಾನಸೀತ್ಯರ್ಥಃ । ಕಿಂ ದುಃಖೇನ । ನೇತ್ಯಾಹ । ಮಂದಸಾನೋ ಹೃಷ್ಯನ್ನೇವೇಮಾ ಅಪ ಇಮಾನ್ಯಪ್ಕಾರ್ಯಾಣಿ ವ್ರೀಹ್ಯಾದ್ಯನ್ನಾನ್ಯಮುಷ್ಣಾಃ । ಲಬ್ಧವಾನಸಿ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—(ಎಲೈ) ಇಂದ್ರನೇ । **ಯತ್**—ಯಾವ ಕಾರಣದಿಂದ । **ಶಾರದೀಃ**—ಸಂವತ್ಸರ ಸಂಬಂಧಿಯಾದ (ಅನೇಕ ಸಂವತ್ಸರಗಳು ದೃಢವಾಗಿರುವಂತೆ ಕಟ್ಟಲ್ಪಟ್ಟ) । **ಪುರಃ**—(ಶತ್ರು) ನಗರಗಳನ್ನು । **ಅವ ಅತಿರಃ**—ನಾಶಮಾಡಿದೆಯೋ । **ಸಸಹಾನಃ**—(ಆ ನಗರಗಳಲ್ಲಿದ್ದವರನ್ನು ಧನಾದ್ಯಪಹಾರದಿಂದ) ಪೀಡಿಸುತ್ತಾ । **ಅವ ಅತಿರಃ**—ನಾಶಮಾಡಿದೆಯೋ । **(ಕಿಂಚ**—ಮತ್ತೂ) । **(ಹೇ) ಇಂದ್ರ**—(ಎಲೈ) ಇಂದ್ರನೇ । **ತಂ**—ಆ । **ಮರ್ತ್ಯಂ**—ಮರಣಶೀಲನಾದ ಮತ್ತು । **ಅಯಜ್ಯುಂ**—ಯಜ್ಞಮಾಡದೇ ಇರುವವನನ್ನು (ಯಜ್ಞವಿಘಾತಕನನ್ನು)। **ಶಾಸಃ**—ನಿಗ್ರಹಿಸಿದೆಯೋ । **(ಹೇ) ಶವಸಸ್ಪತೇ**—ಶಕ್ತಿಗೆ ಪಾಲಕನಾದ ಇಂದ್ರನೇ (ನೀನು) । **ಮಹೀಂ**—ದೊಡ್ಡದಾದ । **ಪೃಥಿವೀಂ**—ಭೂಮಿಯನ್ನು । **ಇಮಾಃ ಅಪಃ (ಚ)**—ಈ (ಸಮುದ್ರಾ)ದ್ಯುದಕಗಳನ್ನೂ । **ಅಮುಷ್ಣಾಃ**-ಬಲಾತ್ಕಾರದಿಂದ ಅಪಹರಿಸಿದೆಯೋ ಮತ್ತು । **ಮಂದಸಾನಃ**—ನಗುನಗುತ್ತಲೇ । **ಇಮಾಃ ಅಪಃ**—ಈ ಉದಕ ಕಾರ್ಯವಾದ (ವ್ರೀಹ್ಯಾದಿಗಳನ್ನು) । **(ಅಮುಷ್ಣಾಃ**—ಪಡೆದೆಯೋ) । **ತತ್**—ಆದುದರಿಂದ । **ತೇ**—ಅಂತಹ (ನಿನ್ನ) । **ಅಸ್ಯ ವೀರ್ಯಸ್ಯ**—ಈ ವೀರ್ಯ (ಕರ್ಮಗಳನ್ನು, ಕರ್ಮಗಳ ಮಾಹಾತ್ಮ್ಯೆಯನ್ನು) । **ಪೂರವಃ**—ಮನುಷ್ಯರಾದ ಯಾಗಕರ್ತೃಗಳು । **ವಿದುಃ**—ತಿಳಿದರು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಅನೇಕ ಸಂವತ್ಸರಗಳವರೆಗೂ (ದೃಢವಾಗಿರುವಂತೆ ಕಟ್ಟಲ್ಪಟ್ಟಿದ್ದ ಶತ್ರು) ನಗರಗಳನ್ನು ನಾಶಮಾಡಿದೆ; (ಅಲ್ಲಿದ್ದವರನ್ನು ಧನಾದ್ಯಪಹಾರದಿಂದ) ಹಿಂಸೆಪಡಿಸಿ ನಾಶಮಾಡಿದೆ; ಯಜ್ಞವಿಘಾತುಕರೂ ಮರ್ತ್ಯರೂ ಆದ ಅವರನ್ನು ಶಾಸನಮಾಡಿದೆ; ಬಲಕ್ಕೆ ಆಶ್ರಯನಾದ (ಪಾಲಕನಾದ) ಇಂದ್ರನೇ, (ರಾಕ್ಷಸರಿಂದ ಅಪಹೃತವಾಗಿದ್ದ) ಈ ದೊಡ್ಡದಾದ ಭೂಮಿಯನ್ನೂ, ಉದಕಗಳನ್ನೂ ಬಲಾತ್ಕಾರವಾಗಿ (ಅವರಿಂದ) ಸಂಪಾದಿಸಿದೆ; ನಗುನಗುತ್ತಲೇ ಈ ಉದಕಗಳನ್ನು ಸಂಪಾದಿಸಿದೆ. ಇಂತಹ ನಿನ್ನ ಪರಾಕ್ರಮ ಕಾರ್ಯಗಳ ಮಹತ್ತ್ವವನ್ನು ಯಜಮಾನರು ತಿಳಿದಿದ್ದಾರೆ.

English Translation.

The ancients have known of that your prowess, by which, Indra, you destroy the perennial cities (of the Asuras): you have destroyed them, humiliating (their defenders). You have chastised, Lord of Strength, the mortal who offers not sacrifice: You have rescued this spacious earth and these waters; exulting, (you have recovered) these waters.

॥ ವಿಶೇಷವಿಷಯಗಳು ॥

**ಪೂರವಃ ತೇ ಅಸ್ಯ ವೀರ್ಯಸ್ಯ ವಿದುಃ—ಮನುಷ್ಯಾಃ ಯಜಮಾನಾಃ ತವ ಮಹತ್ತ್ವಂ ಜಾನಾನಾಃ ತ್ವಾಮೇವ ಯಜಂತಿ, ಯದ್ವಾ ಅಸ್ಯ ವೀರ್ಯಸ್ಯ ಮಾಹಾತ್ಮ್ಯಂ ವಿದುಃ** । ಯಜ್ಞಮಾಡುವವರು ಇಂದ್ರನ ಮಹತ್ತ್ವವನ್ನು ತಿಳಿದುಕೊಂಡು ಇಂದ್ರನ ಉದ್ದೇಶದಿಂದಲೇ ಹವಿಸ್ಸುಗಳನ್ನು ಅರ್ಪಿಸುತ್ತಿರುವರು ಅಥವಾ ಯಜ್ಞಮಾಡುವವರಿಗೇನೇ ಇಂದ್ರನ ಪರಾಕ್ರಮದ ಮಹಿಮೆಯು ಚೆನ್ನಾಗಿ ತಿಳಿದು ಇರುವುದು ಎಂದು ಎರಡು ವಿಧವಾದ ಅರ್ಥವನ್ನು ವಿವರಿಸಿದೆ.

**ಪೂರವಃ**— ಎಂಬ ಪದವು ಮನುಷ್ಯನಾಮಗಳಲ್ಲಿ (ನಿ. ೩-೮) ಪಠಿತವಾಗಿದೆ. ಮತ್ತು—

**ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।**
**ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾँ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ ॥**

(ಋ. ಸಂ. ೧-೫೯-೬)

ಈ ಋಕ್ಕಿನಲ್ಲಿ **ಪೂರಯಿತವ್ಯಾಃ ಪೂರವಃ** ಅಭಿಲಾಷೆಗಳ ಪೂರಣವನ್ನು ಹೊಂದಲು ಅರ್ಹರಾದವರು ಮನುಷ್ಯರು ಎಂದು ಅರ್ಥ.

**ಶಾರದೀಃ—ಸಂವತ್ಸರಸಂಬಂಧಿನೀಃ** । ಇಂದ್ರನು ವರ್ಷದವರಿಗೂ (ಅಭೇದ್ಯವಾಗಿರುವಂತೆ) ಕೆಲಸ ಮಾಡಿ, ಇತರರಿಂದ ಪ್ರವೇಶಿಸಲಸಾಧ್ಯವಾಗಿರುವಂತೆ ಮಾಡಿರುವ ಅಗಳು, ಕೋಟೆ ಇವುಗಳಿಂದ ಸುರಕ್ಷಿತವಾದ ಶತ್ರುಗಳ ನಗರಗಳನ್ನು ಭೇದಿಸಿರುವನು ಎಂದು ಅರ್ಥ.

**ಪೃಥಿವೀಂ ಇಮಾಂ ಅಪಃ ಚ ಅಮುಷ್ಣಾಃ—ಮಹತೀಂ ಪೃಥಿವೀಂ ಸಮುದ್ರನದ್ಯಾತ್ಮಕಾನಿ ಉದಕಾನಿ ಚ ಬಲಾದಪಹೃತವಾನಸಿ** । ಅಸುರರೇ ಆಗಲಿ, ಯಜ್ಞವಿಘಾತಕರಾದ ಇತರರು ಯಾರೇ ಆಗಲಿ ಅವರಿಂದ ಅಪಹೃತವಾದ ಭೂಮಿಯನ್ನೂ, ಆ ಭೂಮಿಗೆ ಸಂಬಂಧಿಸಿದ ಉದಕಗಳನ್ನೂ ಕೂಡ, ಅಸುರರ ನಗರಗಳನ್ನು ಭೇದಿಸಿ ಇಂದ್ರನು ರಕ್ಷಿಸಿರುವನೆಂದು ವಿವರಿಸಿದೆ.

**ಅಮುಷ್ಣಾಃ—**ಎಂಬ ಪದವು ಎರಡುಸಾರಿ ಪ್ರಯುಕ್ತವಾಗಿದೆ. ಮೊದಲನೆಯ ಅರ್ಥದಲ್ಲಿ ಶತ್ರುಗಳ ನಗರಗಳನ್ನು ಇಂದ್ರನು ಭೇದಿಸಿ ರಕ್ಷಿಸಿದನು ಎಂದು ಅರ್ಥಮಾಡಿ, ಎರಡನೆಯ ಅಮುಷ್ಣಾಃ ಎಂಬ ಪದಕ್ಕೆ, ಉದಕಸಂಬಂಧವಾದ ಕಾರ್ಯಗಳನ್ನು ವ್ರೀಹಿಯೇ ಮೊದಲಾದವು ಭೂಮಿಯಲ್ಲಿ ಬೆಳದು ಅನ್ನಾದಿಗಳು ಉಂಟಾಗುವಂತೆ ಕಾರ್ಯಗಳನ್ನು ಇಂದ್ರನು ಲೀಲೆಯಿಂದಲೇ ಆಚರಿಸಿರುವನು ಎಂದು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಿದುಃ**— ವಿದ ಜ್ಞಾನೇ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ವಿದೋ ಲಟೋ ವಾ** (ಪಾ. ಸೂ. ೩-೪-೮೩) ಎಂಬುದರಿಂದ ಝಿಗೆ ಜುಸಾದೇಶ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವೀರ್ಯಸ್ಯ— ಕರ್ತೃಕರ್ಮಣೋಃ ಕೃತಿ** ಎಂಬುದರಿಂದ ಕರ್ಮಕ್ಕೆ ಷಷ್ಠೀ ಬಂದಿದೆ.

**ವಿದುಷ್ಟೇ**— ವಿದುಃ ತೇ ಎಂದಿರುವಾಗ **ಯುಷ್ಮತ್ತತ್ತತಕ್ಷುಷು**—(ಪಾ. ಸೂ. ೮-೩-೧೦೩) ಎಂಬುದರಿಂದ ವಿಸರ್ಗಕ್ಕೆ ಸತ್ವ. ಅದಕ್ಕೆ ಷತ್ವ.

**ಅವಾತಿರಃ**— ಅವ ಉಪಸರ್ಗ. ಅವಪೂರ್ವಕವಾದ ತಿರಧಾತುವು ನಾಶಾರ್ಥದಲ್ಲಿ ಪ್ರಯುಕ್ತವಾಗಿದೆ. ಲಙ್‌ಮಧ್ಯಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವೆಂದುದರಿಂದ ಆದ್ಯುದಾತ್ತವಾಗುತ್ತದೆ. **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅವ) ನಿಘಾತಸ್ವರ ಬರುತ್ತದೆ.

**ಸಾಸಹಾನಃ**— ಷಹ ಮರ್ಷಣೇ. ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. **ಧಾತೋರೇಕಾಚಃ ಹ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. **ಯಙೋಽಚಿ ಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಲುಕ್. **ದೀರ್ಘೋಽಕಿತಃ** (ಪಾ. ಸೂ. ೭-೪-೮೩) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಯಙ್‌ಲುಗಂತದ ಮೇಲೆ **ತಾಚ್ಛೀಲ್ಯವಯೋವಚನ**—(ಪಾ. ಸೂ. ೩-೨-೧೨೯) ಎಂಬುದರಿಂದ ಚಾನಶ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಶಾಸಃ**— ಶಾಸು ಅನುಶಿಷ್ಟೌ. ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. ಶಪಿಗೆ ಛಾಂದಸವಾಗಿ ಲುಕ್ ಬರುವುದಿಲ್ಲ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಅಯುಜ್ಯಂ**— ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಯಜಿ ಮನಿ ಶುಂಧಿ**—(ಉ. ಸೂ. ೩-೩೦೦) ಎಂಬುದರಿಂದ ಯುಚ್ ಪ್ರತ್ಯಯ. ನಞ್‌ತತ್ಪುರುಷ ಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**— (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಶವಸಸ್ಪತೇ— ಸುಬಾಮಂತ್ರಿತೇ ಪರಾಂಗವತ್‌ಸ್ವರೇ** ಎಂಬುದರಿಂದ ಷಷ್ಠ್ಯಂತಕ್ಕೆ ಪರಾಂಗವದ್ಭಾವ ಬರುವುದರಿಂದ ಸಮುದಾಯಕ್ಕೆ ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಅಮುಷ್ಣಾಃ** ಮುಷ ಸ್ತೇಯೇ. ಧಾತು. ಕ್ರ್ಯಾದಿ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. **ರಷಾಭ್ಯಾಂ ಣೋ ನಃ**— ಎಂಬುದರಿಂದ ಅದಕ್ಕೆ ಣತ್ವ. ಪ್ರತ್ಯಯಕ್ಕೆ ರುತ್ವ ವಿಸರ್ಗ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಪಃ**—ದ್ವಿತೀಯಾ ಬಹುವಚನಾಂತರೂಪ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮಂದಸಾನಃ**—ಮದಿ ಸ್ತುತಿಮೋದ ಮದ ಸ್ವಪ್ನ ಕಾಂತಿ ಗತಿಷು. ಧಾತು **ಅಸಾನಚ್** ಎಂದು ಅನುವೃತ್ತವಾಗುವಾಗ **ಋಂಜಿ ವೃಧಿಮಂದಿ**—(ಉ. ಸೂ. ೨-೨೪೪) ಎಂಬುದರಿಂದ ಅಸಾನಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಆದಿತ್ತೇ ಅಸ್ಯ ವೀರ್ಯಸ್ಯ ಚರ್ಕಿರನ್ಮದೇಷು ವೃಷನ್ನುಶಿಜೋ ಯದಾವಿಥ
ಸಖೀಯತೋ ಯದಾವಿಥ ।
ಚಕರ್ಥ ಕಾರಮೇಭ್ಯಃ ಪೃತನಾಸು ಪ್ರವಂತವೇ ।
ತೇ ಅನ್ಯಾಮನ್ಯಾಂ ನದ್ಯಂ ಸನಿಷ್ಣತ ಶ್ರವಸ್ಯಂತಃ ಸನಿಷ್ಣತ ॥ ೫ ॥

॥ ಪದಪಾಠಃ ॥

ಆತ್ । ಇತ್ । ತೇ । ಅಸ್ಯ । ವೀರ್ಯಸ್ಯ । ಚರ್ಕಿರನ್ । ಮದೇಷು । ವೃಷನ್ । ಉಶಿಜಃ । ಯತ್ ।
ಆವಿಥ । ಸಖಿಽಯತಃ । ಯತ್ । ಆವಿಥ ।
ಚಕರ್ಥ । ಕಾರಂ । ಏಭ್ಯಃ । ಪೃತನಾಸು । ಪ್ರಽವಂತವೇ ।
ತೇ । ಅನ್ಯಾಂಽಅನ್ಯಾಂ । ನದ್ಯಂ । ಸನಿಷ್ಣತ । ಶ್ರವಸ್ಯಂತಃ । ಸನಿಷ್ಣತ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಆದತ್ ಏವ ಹೇತೋಸ್ತೇ ವೀರ್ಯಸ್ಯ ತವ ಸಂಬಂಧಿನೇ ವೀರ್ಯಾಯ ತದಭಿವೃದ್ಧಯೇ ಚರ್ಕಿರನ್ । ಪುನಃಪುನಃ ಸೋಮಂ ವಿಕಿರಂತಿ॥ ಕಿರತೇರ್ಯಙ್‌ಲುಗಂತಾದ್ವ್ಯತ್ಯಯೇನ ಶಃ ॥ ಸರ್ವೇಷು ಸವನೇಷು ವಿತರಂತಿ ಯಜಮಾನಾಃ । ಅತ ಇತ್ಯುಕ್ತಂ ಕುತ ಇತ್ಯಾಹ । ಮದೇಷು ವೃಷನ್

**ಸೋಮಜನಿತಮದೇಷು ಸತ್ಸು ಹೇ ಕಾಮಾನಾಂ ವರ್ಷಿತಃ ಉಶಿಜಸ್ತ್ವಾಂ ಕಾಮಯಮಾನಾನ್ಯಜಮಾನಾನ್ ಯದ್ಯತಃ ಕಾರಣಾದಾವಿಥ ರಕ್ಷಸಿ । ಕಿಂ ಚ ಸಖೀಯತಸ್ತವ ಸಖಿತ್ವಮಾತ್ಮನ ಇಚ್ಛತೋಽಸ್ಮಾನ್ ಯದ್ಯಸ್ಮಾದಾವಿಥ ತರ್ಪಯಸಿ ಅಭಿಮತೇನ ಪ್ರೀಣಯಸಿ ಅತಶ್ಚ ಕಿರನ್ । ಕಿಂಚ ಹೇ ಇಂದ್ರ ಏಭ್ಯೋ ಯಜಮಾನೇಭ್ಯಃ ಕಾರಂ ಶಬ್ದಂ ಸಿಂಹನಾದಲಕ್ಷಣಂ ಚಕರ್ಥ । ಕರೋಷಿ ॥ ಕರೋತೇಃ ಕರ್ಮಣಿ ಘಞ್ । ಕರ್ಷಾತ್ವತ ಇತ್ಯಂತೋದಾತ್ತತ್ವಂ ॥ ಕುತ್ರೇತಿ ತದುಚ್ಯತೇ । ಪೃತನಾಸು ಸಂಗ್ರಾಮೇಷು । ಕಿಮರ್ಥಂ । ಪ್ರವಂತವೇ ಪ್ರಕರ್ಷೇಣ ವನಿತುಂ ಸಂಭಕ್ತುಂ । ಯುದ್ಧಾಯ ಹಿ ಧೀರಾಃ ಸಂಭಜಂತೇ ॥ ವನತೇಸ್ತುಮರ್ಥೇ ತವೇನ್ಪ್ರತ್ಯಯಃ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ ॥ ಕಿಂಚ ತೇ ತವ ಸಂಗ್ರಾಮಮಾಸಿನಸ್ತ್ವಯ್ಯನ್ಯಾಮನ್ಯಾಮನ್ಯಾಂಶ್ಚಾನ್ಯಾಂಶ್ಚಾನ್ಯಮನ್ಯಂ ಪ್ರತಿ ॥ ಕರ್ಮವ್ಯತಿಹಾರೇ ಸರ್ವನಾಮ್ನೋ ದ್ವಿರ್ವಚನಂ ॥ ನದ್ಯಂ ನದಿಂ ಸಂತೋಷಂ ಸಮೃದ್ಧಿಂ ॥ ಟುನದಿ ಸಮೃದ್ಧೌ । ಪೂರ್ವರೂಪಂ ಬಾಧಿತ್ವಾ ಛಾಂದಸೋ ಯಣಾದೇಶಃ ॥ ಸನಿಷ್ಣತ । ಸಂಭಜಂತೇ ॥ ಸನೇರ್ಲೇಟಿ ಸಿಬ್ಬಹುಲಮಿತಿ ಸಿಪ್ । ಇಟ್ । ವ್ಯತ್ಯಯೇನ ಪುನಃ ಶ್ನಾಪ್ರತ್ಯಯಃ । ಆತ್ಮನೇಪದೇಷ್ವನತ ಇತ್ಯದಾದೇಶೇ ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಛಾಂದಸಃ ಟೇರೇತ್ವಾಭಾವಃ ॥ ತಥಾ ಶ್ರವಸ್ಯಂತೋಽನ್ನಮಿಚ್ಛಂತೋ ಜಯೊಲ್ಲಬ್ಧಮನ್ನಂ ಕಾಂಕ್ಷಂತಃ ಸನಿಷ್ಣತ । ಸಂಭಜಂತೇ ॥**

॥ ಪ್ರತಿಪದಾರ್ಥ ॥

**ಹೇ ಇಂದ್ರ**—ಎಲೈ ಇಂದ್ರನೇ । (**ತ್ವಂ**—ನೀನು) । **ಯತ್**— ಯಾವಕಾರಣ । **ಮದೇಷು**— ಸೋಮಜನಿತಮದವು (ಸಂತೋಷವು) ಉಂಟಾಗಿರಲು । **ವೃಷನ್**—ಕಾಮವರ್ಷಕನಾಗಿ । **ಉಶಿಜಃ**—(ನಿನ್ನನ್ನು) ಅಪೇಕ್ಷಿಸುವ (ಯಜಮಾನರನ್ನು) ವರನ್ನು । **ಆವಿಥ**—ರಕ್ಷಿಸುತ್ತೀಯೋ । (**ಕಿಂಚ**—ಮತ್ತೂ) । **ಸಖೀಯತಃ**— (ನಿನ್ನ) ಸಖಿತ್ವವನ್ನು ಅಪೇಕ್ಷಿಸುವ (ನಮ್ಮನ್ನು) ವರನ್ನು । **ಯತ್**—ಯಾವಕಾರಣ । **ಆವಿಥ**—(ಅಭಿಮತವಾದುದನ್ನು ಅನುಗ್ರಹಿಸಿ) ತೃಪ್ತಿಪಡಿಸುತ್ತೀಯೋ । **ಆತ್ ಇತ್**—ಅದೇ ಕಾರಣದಿಂದ । **ತೇ**—ನಿನ್ನ ಸಂಬಂಧವಾದ । **ಅಸ್ಯ ವೀರ್ಯಸ್ಯ**—ಈ ವೀರ್ಯಕ್ಕೋಸ್ಕರ (ವೀರ್ಯಾಭಿವೃದ್ಧಿಗೋಸ್ಕರ) । **ಚಕಿರನ್**—ಪುನಃ ಪುನಃ (ಸೋಮರಸವನ್ನು) ಚೆಲ್ಲುತ್ತಾರೆ (ಹೋಮಮಾಡುತ್ತಾರೆ) । **ಏಭ್ಯಃ**— ಇವರಿಗೋಸ್ಕರ (ಯಜಮಾನರಿಗೋಸ್ಕರ) । **ಪೃತನಾಸು**—ಸಂಗ್ರಾಮಗಳಲ್ಲಿ । **ಕಾರಂ**—(ಸಿಂಹನಾದರೂಪವಾದ) ಶಬ್ದವನ್ನು । **ಪ್ರವಂತವೇ**—ಪ್ರೋತ್ಸಾಹಿಸುವುದಕ್ಕೋಸ್ಕರ । **ಚಕರ್ಥ**—ಮಾಡುತ್ತೀಯೇ । (**ಕಿಂಚ**—ಮತ್ತು) । **ತೇ**—ನಿನ್ನಲ್ಲಿ । **ಅನ್ಯಾಂ ಅನ್ಯಾಂ**— ಬೇರೆ ಬೇರೆ (ನಾನಾ ವಿಧವಾದ) ಅಥವಾ ಪರಸ್ಪರವಾದ । **ನದ್ಯಂ**—ಸಂತೋಷವನ್ನು । **ಸನಿಷ್ಣತ**—ಪಡೆಯುತ್ತಾರೆ । (**ತಥಾ**—ಹಾಗೆಯೇ) । **ಶ್ರವಸ್ಯಂತಃ**—(ಜಯಲಭ್ಯವಾದ) ಅನ್ನವನ್ನಪೇಕ್ಷಿಸುವವರಾಗಿ । **ಸನಿಷ್ಣತ**— (ಅದನ್ನು ನಿನ್ನಿಂದ) ಪಡೆಯುತ್ತಾರೆ.

॥ ಭಾವಾರ್ಥ ॥

(ಸೋಮರಸದಿಂದ) ಸಂತುಷ್ಟನಾದ (ನೀನು) ಕಾಮವರ್ಷಕನಾಗಿ, ನಿನ್ನ (ಪ್ರಸಾದವ)ನ್ನು ಅಪೇಕ್ಷಿಸುವವ (ಯಜಮಾನ) ರನ್ನು ರಕ್ಷಿಸುತ್ತೀಯೆ. ಮತ್ತು (ನಿನ್ನ) ಸಖಿತ್ವವನ್ನಪೇಕ್ಷಿಸುವವರನ್ನೂ ತೃಪ್ತಿಪಡಿಸುತ್ತೀಯೆ ; ಇವಕ್ಕೋಸ್ಕರಲೇ, (ನಿನ್ನ ಆರಾಧಕರು) ನಿನ್ನ ವೀರ್ಯಾಭಿವೃದ್ಧಿಗೋಸ್ಕರ (ಸೋಮರಸವನ್ನು) ಪುನಃ ಪುನಃ

ಹೋಮಮಾಡುತ್ತಾರೆ. ನೀನು ಸಂಗ್ರಾಮಗಳಲ್ಲಿ ಈ ಯಜಮಾನರನ್ನು ಪ್ರೋತ್ಸಾಹಿಸುವುದಕ್ಕೋಸ್ಕರ ಸಿಂಹನಾದ ಮಾಡುತ್ತೀಯೆ; ನಿನ್ನಿಂದಲೇ ನಾನಾವಿಧವಾದ ಸಂತೋಷವನ್ನು ಪಡೆಯುತ್ತಾರೆ. (ಯುದ್ಧದಲ್ಲಿ ಜಯದಿಂದ ಪ್ರಾಪ್ಯವಾದ) ಅನ್ನಾದಿಗಳನ್ನು ಅಪೇಕ್ಷಿಸಿ, (ಅದನ್ನು ನಿನ್ನಿಂದ) ಪಡೆಯುತ್ತಾರೆ.

## English Translation

Thenceforth have your worshippers scattered (libations) for the augmentation of your vigour, that in your exhilaration, showerer (of benefits), you may defend those who are solicitous (of your favour); that you may defend those who are desirous of (your) friendship: for them you have uttered a shout to encourage them in combats; from you they obtain many and many an enjoyment; anxious for food, they obtain it (from you).

॥ ವಿಶೇಷವಿಷಯಗಳು ॥

**ತೇ ವೀರ್ಯಸ್ಯ ಚಕಿರನ್—ತವ ಸಂಬಂಧಿನೇ ವೀರ್ಯಾಯ ತದಭಿವೃದ್ಧಯೇ ಪುನಃ ಪುನಃ ಸೋಮಂ ವಿಕಿರಂತಿ ।** ಯಜಮಾನರು ಇಂದ್ರನಿಗೆ ಶಕ್ತಿಯು ಹೆಚ್ಚಾಗುವುದಕ್ಕಾಗಿಯೂ, ಅಥವಾ ಸಾಮರ್ಥ್ಯವು ಉಂಟಾಗುವುದಕ್ಕಾಗಿಯೂ ಸೋಮವನ್ನು ಎಲ್ಲಾ ಸವನಗಳಲ್ಲಿಯೂ ಅನೇಕಸಾರಿ ಅರ್ಪಿಸುತ್ತಾರೆ ಎಂದು ಅರ್ಥ.

**ಉಶಿಜಃ ಆವಿಥ—ತ್ವಾಂ ಕಾಮಯಮಾನಾನ್ ಯಜಮಾನಾನ್ ರಕ್ಷಸಿ । ಉಶಿಜ** ಶಬ್ದವು **ವಶ್ಮಿ, ಉಶ್ಮಸಿ** ಎಂಬ ಹದಿನೆಂಟು ಕಾಂತಿಕರ್ಮಗಳಲ್ಲಿ (ನಿ. ೩-೯)ಉಕ್ತವಾಗಿದೆ. ಮೇಧಾವಿನಾಮಗಳಲ್ಲಿಯೂ (ನಿ. ೩-೧೯) ಉಕ್ತವಾಗಿದೆ. **ಉಶಿಕ್ ವಷ್ಟೇಃ ಕಾಂತಿಕರ್ಮಣಃ** ಕಾಂತ್ಯರ್ಥದಲ್ಲಿರುವ ವಶ ಧಾತುವಿನಿಂದ **ಉಶಿಕ್** ಶಬ್ದವು ನಿಷ್ಪನ್ನವಾಗಿದೆ. (ಬಹಳವಾಗಿ ಕಾಮನೆಗಳನ್ನು ಹೊಂದಿರುವ) ಇಂದ್ರನನ್ನು ಸಂತೋಷಪಡಿಸಲು ಬಹಳವಾಗಿ ಇಚ್ಛಿಸುವ ಯಜಮಾನರನ್ನು ಇಂದ್ರನು ರಕ್ಷಿಸುತ್ತಿರುವನೆಂದು ಅರ್ಥಮಾಡಿದೆ.

**ಆವಿಥ—**ಎಂಬ ಶಬ್ದವು ಎರಡುಸಾರಿ ಪ್ರಯುಕ್ತವಾಗಿದೆ. ಈ ಶಬ್ದಕ್ಕೆ ಮೊದಲನೆಯಸಾರಿ ರಕ್ಷಿಸುತ್ತಾನೆ ಎಂದು ಅರ್ಥಮಾಡಿದೆ. ಎರಡನೆಯ ಅರ್ಥದಲ್ಲಿ ಇಂದ್ರನು ಯಜಮಾನರು ತನ್ನ ಸಂಗಡ ಸ್ನೇಹವನ್ನು ಅಪೇಕ್ಷಿಸುವುದರಿಂದ ಯಜಮಾನರಿಗೆ ತೃಪ್ತಿಯನ್ನು ಉಂಟುಮಾಡಿ ಸಂತೋಷಪಡಿಸುವನೆಂದು ಅರ್ಥವನ್ನು ಹೇಳಿದೆ.

**ಪೃತನಾಸು ಪ್ರವಂತವೇ ಕಾರಂ ಚಕರ್ಥ—ಸಂಗ್ರಾಮೇಷು ಪ್ರಕರ್ಷೇಣ ಸಂಭಕ್ತುಂ ಸಿಂಹನಾದ-ಲಕ್ಷಣಂ ಶಬ್ದಂ ಕರೋಷಿ । ಪೃತನಾ** ಶಬ್ದವು ನಲವತ್ತಾರು ಸಂಗ್ರಾಮ ನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಇಂದ್ರನು ಯುದ್ಧಮಾಡುವಾಗ ಶತ್ರುಗಳನ್ನು ಅತಿಶಯವಾಗಿ ಎದುರಿಸಲು ಸಿಂಹನಾದರೂಪವಾದ ಧ್ವನಿಯನ್ನು ಮಾಡುವನು ಎಂದು ಅರ್ಥ. ವನು ಯಾಚನೇ ಎಂಬ ಧಾತುವಿಗೆ ಪ್ರ ಎಂಬ ಉಪಸರ್ಗವು ಸೇರಿರುವುದರಿಂದ ಧಾತುವಿನ ಅರ್ಥವು ಬೇರೆಯಾಗಿದೆ ಎಂದೂ ಮತ್ತು ಧೀರರಾದವರು ಯಾವಾಗಲೂ ಯುದ್ಧಮಾಡುವ ವಿಷಯದಲ್ಲಿ ಉತ್ಸಾಹದಿಂದ ಸಿದ್ಧರಾಗುತ್ತಾರೆ ಎಂದೂ ವರ್ಣಿಸಿದೆ.

**ಅನ್ಯಾಮನ್ಯಾಂ ನದ್ಯಂ ಸನಿಷ್ಣತ—ತವ ಸಂಗ್ರಾಮವಾಸಿನಃ ತ್ವಯಿ ಅನ್ಯಮನ್ಯಂ ಪ್ರತಿ ಸಂತೋಷಂ ಸಮೃದ್ಧಿಂ ಸಂಭಜಂತೇ ।** ಇಂದ್ರನು ಯುದ್ಧಮಾಡುವಾಗ ಅವನ ಸೇನೆಯಲ್ಲಿರುವ ವೀರರು (ಒಬ್ಬರಿಗಿಂತ ಒಬ್ಬರು) ಮೇಲ್ಮೆಯನ್ನು ಹೊಂದುವುದಕ್ಕಾಗಿ ಅಥವಾ ಪರಸ್ಪರ ಅತಿಶಯವನ್ನು ಸಂಪಾದಿಸುವುದಕ್ಕಾಗಿ ಉತ್ಸಾಹದಿಂದ ವರ್ತಿಸುತ್ತಾರೆ ಎಂದು ಅರ್ಥ. ಇಲ್ಲಿ ಅನ್ಯ ಶಬ್ದವು ಛಾಂದಸವಾಗಿ ನದ್ಯಂ ಎಂಬ ಪದಕ್ಕೆ ವಿಶೇಷಣ ವಾಗಿದೆ. ಮತ್ತು ದ್ವಿರುಕ್ತವಾಗಿದೆ. ನಿರುಕ್ತಕಾರರು—

**ನ ನೂನಮಸ್ತಿ ನೋ ಶ್ವಃ ಕಸ್ತದ್ವೇದ ಯದದ್ಭುತಂ ।**
**ಅನ್ಯಸ್ಯ ಚಿತ್ತಮಭಿಸಂಚರೇಣ್ಯಮುತಾಧೀತಂ ವಿ ನಶ್ಯತಿ ॥**
(ಋ. ಸಂ. ೧-೧೭೦-೧)

ಈ ಋಕ್ಕಿನಲ್ಲಿ **ಅನ್ಯಃ** ಎಂಬ ಪದಕ್ಕೆ **ನಾನೇಯಃ** ಎಂದು ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಸಾಯಣರು **ಅನ್ಯಂ ಅನ್ಯಂ ಪ್ರತಿ** ಎಂದು ಅರ್ಥವನ್ನು ಹೇಳಿದಾರೆ.

**ಶ್ರವಸ್ಯಂತಃ ಸನಿಷ್ಣತ—ಅನ್ನಮಿಚ್ಛಂತೋ ಜಯೋಲ್ಲಬ್ಧಮನ್ನಂ ಕಾಂಕ್ಷಂತಃ ಸಂಭಜಂತೇ ।** ಯುದ್ಧಕಾಲಗಳಲ್ಲಿ ಇಂದ್ರನ ವೀರರು ಅನ್ನವನ್ನು ಅಪೇಕ್ಷಿಸುವವರಾಗಿ ಅಥವಾ ಶತ್ರುಗಳಿಂದ ಜಯವನ್ನು ಹೊಂದಿ ಅದರಿಂದ ಪ್ರಾಪ್ತವಾಗುವ ಅನ್ನವನ್ನು ಅಪೇಕ್ಷಿಸುವವರಾಗಿ ಇಂದ್ರನ ಸಂಗಡ ಸೇರುತ್ತಾರೆ ಎಂದು ಅರ್ಥ.

**ಶ್ರವಸ್**—ಶಬ್ದವು ನಿರುಕ್ತಕಾರರಿಂದ ಧನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಯಶಸ್ಸು ಎಂಬ ಅರ್ಥದಲ್ಲಿಯೂ (ಋ. ಸಂ. ೨-೧-೧೧-೧ ; ನಿ. ೯-೧೧) ಪ್ರಯುಕ್ತವಾಗಿದೆ.

**ಆಸಸ್ರಾಣಾಸಃ ಶವಸಾನಮಚ್ಛೇಂದ್ರಂ ಸುಚಕ್ರೇ ರಥ್ಯಾಸೋ ಅಶ್ವಾಃ ।**
**ಅಭಿ ಶ್ರವ ಋಜ್ಯಂತೋ ವಹೇಯುರ್ನೂ ಚಿನ್ನು ವಾಯೋರಮೃತಂ ವಿ ದಸ್ಯೇತ್ ॥**
(ಋ. ಸಂ. ೬-೩೭-೩)

ಇಲ್ಲಿ **ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತಃ** ಎಂದು ವ್ಯಾಖ್ಯಾತವಾಗಿ ಅನ್ನವೆಂಬ ಅರ್ಥದಲ್ಲಿ ಪ್ರಯುಕ್ತ ವಾಗಿದೆ.

**ಶ್ರವಸ್**—ಶಬ್ದಕ್ಕೆ ಧನ, ಯಶಸ್ಸು, ಅನ್ನ ಎಂಬ ಅನೇಕಾರ್ಥಗಳು ಇರುವುದರಿಂದ ಸಾಯಣರು ಇಲ್ಲಿ ಶ್ರವಸ್ಯಂತಃ ಎಂಬ ಪದಕ್ಕೆ ಅನ್ನಮಿಚ್ಛಂತಃ ಅನ್ನವನ್ನು ಅಪೇಕ್ಷಿಸುವವರು ಎಂದು ಅರ್ಥವನ್ನು ಹೇಳಿದ್ದಾರೆ. ಮತ್ತು ಶತ್ರುಗಳನ್ನು ಜಯಿಸಿ ಜಯದಿಂದ ಉಂಟಾಗುವ ಅನ್ನವನ್ನು ಆಶಿಸುವರು ಎಂದು ವರ್ಣಿಸಿದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಚರ್ಕಿರನ್**—ಕೄ ವಿಕ್ಷೇಪೇ. ಧಾತು. ಇದಕ್ಕೆ ಅತಿಶಯಾರ್ಥ ತೋರುವಾಗ ಯಙ್ ಬಂದಾಗ ಅನೈಮಿತ್ತಿಕ ವಾಗಿ ಅದಕ್ಕೆ ಲುಕ್. **ಕುಹೋಶ್ಚುಃ** ಎಂಬುದರಿಂದ ಅಭ್ಯಾಸಕ್ಕೆ ಚುತ್ವ. ಯಙ್ಲುಗಂತದ ಮೇಲೆ ಛಾಂದಸವಾಗಿ ಲಙ್. ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ ಬಂದಾಗ ಇಕಾರಲೋಪ. ವ್ಯತ್ಯಯದಿಂದ ಶ ವಿಕರಣ. ಪರರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೃಷನ್**—ವೃಷು ಸೇಚನೇ. ಧಾತು. **ಕನಿನ್ ಯುವೃಷಿ**—(ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. **ನಙಿ ಸಂಬುದ್ಧ್ಯೋಃ** ಎಂಬುದರಿಂದ ಸಂಬುದ್ಧಿಯಲ್ಲಿ ನಲೋಪ ಬರುವುದಿಲ್ಲ. ಆಮಂತ್ರಿತ ನಿಘಾತ ಸ್ವರ ಬರುತ್ತದೆ.

**ಉಶಿಜಃ**—ವಶ ಕಾಂತೌ ಧಾತು. **ವಶೇಃ ಕಿತ್** (ಉ. ಸೂ. ೨-೨೨೯) ಎಂಬುದರಿಂದ ಇಜಿ ಪ್ರತ್ಯಯ. ಅದಕ್ಕೆ ಕಿತ್ವ ವಿಧಾನಮಾಡಿರುವುದರಿಂದ ಸಂಪ್ರಸಾರಣ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಆವಿಥ**—ಅವ ರಕ್ಷಣೇ. ಛಾಂದಸವಾಗಿ ಲಿಟ್. ಮಧ್ಯಮಪುರುಷ ಏಕವಚನಾಂತರೂಪ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಥಲ್ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಸಖೀಯತಃ**—ಸಖಾಯಂ ಆತ್ಮನಃ ಇಚ್ಛಂತಿ ಎಂದು ಅರ್ಥವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. ಛಾಂದಸವಾಗಿ ದೀರ್ಘ ಬರುತ್ತದೆ. ಕ್ಯಜಂತದ ಮೇಲೆ ಲಟಿಗೆ ಶತ್ರಾದೇಶ. ದ್ವಿತೀಯಾ ಬಹುವಚನಾಂತರೂಪ. **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಚಕರ್ಥ**—ಡುಕೃಞ್ ಕರಣೇ. ಧಾತು. ಲಿಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರು ವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಲಿತ್ತಾದುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಕಾರಂ**—ಪೂರ್ವೋಕ್ತವಾದ ಧಾತುವಿಗೆ ಕರ್ಮಣಿಯಲ್ಲಿ ಘಞ್ ಪ್ರತ್ಯಯ **ಅಚೋ ಞ್ಣಿತಿ** ಎಂಬುದರಿಂದ ವೃದ್ಧಿ. ರಪರವಾಗಿ ಬರುತ್ತದೆ. **ಕರ್ಷಾತ್ವತಃ**—(ಪಾ. ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಪ್ರವಂತವೇ**—ವನ ಸಂಭಕ್ತೌ. ಧಾತು. ಇದಕ್ಕೆ ತುಮನರ್ಥ ತೋರುವಾಗ **ತುಮರ್ಥೇ ಸೇಸೇ**— (ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. ಧಾತುನಕಾರಕ್ಕೆ ಅನುಸ್ವಾರ ಪರಸವರ್ಣ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಪ್ರ) ಉದಾತ್ತಸ್ವರ ಬರುತ್ತದೆ. ಏಜಂತವಾದುದರಿಂದ ಅವ್ಯಯ ಸಂಜ್ಞಾ ಬರುತ್ತದೆ.

**ಅನ್ಯಾಮನ್ಯಾಂ—ಕರ್ಮವ್ಯತಿಹಾರೇ ಸರ್ವನಾಮ್ನೋ ದ್ವೇ ವಾಚ್ಯೇ । ಸಮಾಸವಚ್ಚ** ಬಹುಲಂ ಎಂಬ ವಚನದಿಂದ ಕ್ರಿಯಾವಿನಿಮಯ ತೋರುವಾಗ ದ್ವಿರ್ವಚನ ಬರುತ್ತದೆ. ಬಹುಲಗ್ರಹಣ ಸಾಮರ್ಥ್ಯದಿಂದ ಅನ್ಯಶಬ್ದಕ್ಕೆ ಸಮಾಸವದ್ಭಾವವಿಲ್ಲದಿರುವುದರಿಂದ ಸುವಿಗೆ ಲುಕಾದಿಗಳು ಬರುವುದಿಲ್ಲ. ಪರಕ್ಕೆ ಆಮ್ರೇಡಿತಸಂಜ್ಞೆ ಇರುವಾಗ **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಸರ್ವಾನುದಾತ್ತವಾಗುತ್ತದೆ.

**ನದ್ಯಂ**—ಟುನದಿ ಸಮೃದ್ಧೌ. ಧಾತು. ಔಣಾದಿಕ ಇ ಪ್ರತ್ಯಯ. ಇದಕ್ಕೆ ಅಮ್ ಪರವಾದಾಗ **ಅಮಿ ಪೂರ್ವಃ** ಎಂಬುದರಿಂದ ಬರುವ ಪೂರ್ವರೂಪವನ್ನು ಬಾಧಿಸಿ ಛಾಂದಸವಾಗಿ ಯಣಾದೇಶ. **ಉದಾತ್ತಸ್ವರಿತಯೋರ್ಯಣಃ ಸ್ವ**—(ಪಾ. ಸೂ. ೮-೨-೪) ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ.

**ಸನಿಷ್ಣತ**—ಷಣ ಸಂಭಕ್ತೌ. ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಲೇಟ್. ಪ್ರಥಮಪುರುಷ ಬಹುವಚದಲ್ಲಿ ಝ ಪ್ರತ್ಯಯ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ. **ವ್ಯತ್ಯಯೋ ಬಹುಲಂ** ಎಂಬುದರಿಂದ ಪುನಃ ಅದರ ಮೇಲೆ ಶ್ನಾ ವಿಕರಣ. **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಪ್ರತ್ಯಯಕ್ಕೆ ಅತಾದೇಶ. ಇದಕ್ಕೆ ಙಿತ್ವವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಶ್ನಾ ವಿಕರಣದ ಆಕಾರಕ್ಕೆ ಲೋಪ. ಛಾಂದಸವಾಗಿ ಪ್ರತ್ಯಯದ ಟಿಗೆ ಏತ್ವ ಬರುವುದಿಲ್ಲ. **ಆದೇಶಪ್ರತ್ಯಯಯೋಃ** ಎಂಬುದರಿಂದ ಸಿಪಿನ ಸಕಾರಕ್ಕೆ ಷತ್ವ ಬಂದಾಗ ಅದನ್ನು ನಿಮಿತ್ತೀಕರಿಸಿ ವಿಕರಣ ನಕಾರಕ್ಕೆ ಣತ್ವ. ಸನಿಷ್ಣತ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಶ್ರವಸ್ಯಂತಃ—ಸುಪ ಆತ್ಮನಃ ಕ್ಯಚ್** ಎಂಬುದರಿಂದ ಶ್ರವಸ್ ಎಂಬುದರ ಮೇಲೆ ಕ್ಯಚ್ ಪ್ರತ್ಯಯ. ಕ್ಯಜಂತದ ಮೇಲೆ ಶತೃ ಪ್ರತ್ಯಯ. ಕ್ಯಚ್ ಸ್ವರ ಉಳಿಯುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಉತೋ ನೋ ಅಸ್ಯಾ ಉಷಸೋ ಜುಷೇತ ಹ್ಯ೧ರ್ಕಸ್ಯ ಬೋಧಿ ಹವಿಷೋ
ಹವೀಮಭಿಃ ಸ್ವರ್ಷಾತಾ ಹವೀಮಭಿಃ ।
ಯದಿಂದ್ರ ಹಂತವೇ ಮೃಧೋ ವೃಷಾ ವಜ್ರಿಞ್ಚಿಕೇತಸಿ ।
ಆ ಮೇ ಅಸ್ಯ ವೇಧಸೋ ನವೀಯಸೋ ಮನ್ಮ ಶ್ರುಧಿ ನವೀಯಸಃ ॥ ೬ ॥

॥ ಪದಪಾಠಃ ॥

ಉತೋ ಇತಿ । ನಃ । ಅಸ್ಯಾಃ । ಉಷಸಃ । ಜುಷೇತ । ಹಿ । ಅರ್ಕಸ್ಯ । ಬೋಧಿ । ಹವಿಷಃ ।
ಹವೀಮಭಿಃ । ಸ್ವಃಽಸಾತಾ । ಹವೀಮಽಭಿಃ ।
ಯತ್ । ಇಂದ್ರ । ಹಂತವೇ । ಮೃಧಃ । ವೃಷಾ । ವಜ್ರಿನ್ । ಚಿಕೇತಸಿ ।
ಆ । ಮೇ । ಅಸ್ಯ । ವೇಧಸಃ । ನವೀಯಸಃ । ಮನ್ಮ । ಶ್ರುಧಿ । ನವೀಯಸಃ ॥ ೬ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ನೋಽಸ್ಮಾಕಂ ಸಂಬಂಧಿನೀಮಸ್ಯಾ ಉಷಸಃ ॥ ಕರ್ಮಣಿ ಷಷ್ಠೀ ॥ ಏತಾಮುಷಸಂ ಸುತ್ಯಾಹಃಸಂಬಂಧಿನಮುಷಃಕಾಲಮುತೋ ಜುಷೇತ। ಅಪಿ ನಾಮ ಸೇವೇತ। ಉಷಸ್ಯೇಸುವಾಸ್ಮಾಕಮಯಮಿಂದ್ರೋ ಯಜ್ಞಂ ಗಚ್ಛೇದಿತ್ಯರ್ಥಃ। ಹಿಃ ಪೂರಣಾರ್ಥಃ। ಗತ್ವಾ ಚಾರ್ಕಸ್ಯ ಹವಿಷಃ॥ ಪೂರ್ವವತ್ಕರ್ಮಣಿ ಷಷ್ಠೀ॥ ಅರ್ಚನಸಾಧನಂ ಹವಿರ್ಹವೀಮಭಿರ್ಹವನಪ್ರಕಾರವಿಶೇಷೈರ್ದತ್ತಂ ಹವಿರುತೋ ಬೋಧಿ। ಅಪಿ ನಾಮ ಜಾನೀಹಿ। ಕಿಂಚ ಸ್ವರ್ಷಾತಾ ಸ್ವರ್ಗಸ್ಯಾನ್ಯಸ್ಯ ಸುಖವಿಶೇಷಸ್ಯ ವಾ ಸಂಭಜನಸ್ಥಾನೇ ಯಜ್ಞೇ ಹವೀಮಭಿರಾಹ್ವಾನೈರಾಹೂತೋ ಭವೇತಿ ಶೇಷಃ। ಅಸ್ಮಾಭಿರಾಹೂತಃ ಸನ್ ಉಷಸ್ಯೇವಾಗತ್ಯ ಹವಿಃ ಸ್ವೀಕರೋಷೀತ್ಯರ್ಥಃ। ಕಸ್ಮಾದಿದಮುಚ್ಯತೇ। ಯದ್ಯಸ್ಮಾತ್ಕಾರಣಾತ್ ಹೇ ವಜ್ರಿನ್ ವಜ್ರಯುಕ್ತೇಂದ್ರ ಮೃಧೋ ಹಿಂಸಕಾಞ್ಛತ್ರೂನ್ ಹಂತವೇ ಹಂತುಂ ವೃಷಾ ವರ್ಷಿತಾ ಸನ್ ಕಾಮಾನಾಂ ಚಿಕೇತಸಿ ಅವಬುಧ್ಯಸೇ॥ ಕಿತ ಜ್ಞಾನೇ। ಜೌಹೋತ್ಯಾದಿಕಃ। ಲೇಟ್ಯಡಾಗಮಃ। ನಾಭ್ಯಸ್ತಸ್ಯಾಚಿ ಪಿತೀತ್ಯತ್ರ ಛಂದಸಿ ಬಹುಲಮಿತಿ ವಚನಾಲ್ಲಘೂಪಧಗುಣಪ್ರತಿಷೇಧಾಭಾವಃ। ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ॥ ತಸ್ಮಾದ್ಬ್ರವಿಮಃ। ಹೇ ಇಂದ್ರ ಮೇ ಮಮ ಮನ್ಮ ಮನನೀಯಂ ಸ್ತೋತ್ರಮಾ ಶ್ರುಧಿ। ಸರ್ವತಃ ಶೃಣು ಕೀದೃಶಸ್ಯ ಮೇ। ವೇಧಸೋ ಮೇಧಾವಿನಃ ನವೀಯಸೋ ನವತರಸ್ಯ। ದೀಕ್ಷಿತಸಂಸ್ಕಾರೈಃ ಸಂಸ್ಕೃತತ್ವಾನ್ನವೀಯಸ್ತ್ವಂ। ಪುನರ್ವಿಶೇಷ್ಯತೇ। ನವೀಯಸೋಽತಿಶಯೇನ ನವನವತೋಽಸಾಧಾರಣಸ್ತುತಿಮತಃ। ಅತ್ರ ಯಜಮಾನವಿಶೇಷಣೈಸ್ತತ್ಕರ್ತೃಕಂ ಸ್ತೋತ್ರಮೇವ ವಿಶಿಷ್ಟಂ ಭವತಿ॥

॥ ಪ್ರತಿಪದಾರ್ಥ ॥

(**ಅಯಂ ಇಂದ್ರಃ**— ಈ ಇಂದ್ರನು) । **ನಃ** — ನಮ್ಮ ಸಂಬಂಧವಾದ । **ಅಸ್ಯಾಃ ಉಷಸಃ**— ಈ ಉಷಃ ಕಾಲವನ್ನು (ಉಷಃಕಾಲದ ಕರ್ಮವನ್ನು) । **ಉತೋ ಜುಷೇತ ಹಿ**—ಸೇವಿಸುವವನಷ್ಟೇ । **ಹೇ ಇಂದ್ರ**— ಎಲೈ ಇಂದ್ರನೇ । **ಹವೀಮಭಿಃ**—ಹವನಪ್ರಕಾರವಿಶೇಷಗಳಿಂದ (ದತ್ತವಾದ) । **ಅರ್ಕಸ್ಯ**—ಅರ್ಚನಸಾಧನವಾದ । **ಹವಿಷಃ**—ಹವಿಸ್ಸನ್ನು । **(ಉತೋ) ಬೋಧಿ**— ತಿಳಿಯುವವನಾಗುತ್ತೀಯಷ್ಟೇ । **ಕಿಂ ಚ**—ಮತ್ತು । **ಸ್ವರ್ಷಾತಾ**—ಸ್ವರ್ಗಸುಖ ಅಥವಾ ಸುಖಸಾಧನವಾದ (ಯಜ್ಞದಲ್ಲಿ) । **ಹವೀಮಭಿಃ**—ಆಹ್ವಾನಗಳಿಂದ (ಆಹೂತನಾಗು) । **ಯತ್**—ಯಾವ ಕಾರಣ । **ವಜ್ರಿನ್**—ವಜ್ರಾಯುಧಧಾರಿಯಾದ । **ಇಂದ್ರ**—ಎಲೈ ಇಂದ್ರನೇ (ನೀನು) । **ವೃಷಾ**—ಕಾಮವರ್ಷಕನಾಗಿ । **ಮೃಧಃ**—ಹಿಂಸಕರನ್ನು (ಶತ್ರುಗಳನ್ನು) । **ಹಂತವೇ**—ಹನನ ಮಾಡಲು । **ಚಿಕೇತಸಿ**—ಜಾಗರೂಕನಾಗಿದ್ದೀಯೋ । **ತತ್**—ಆದಕಾರಣ । **ವೇಧಸಃ**—ಮೇಧಾವಿಯೂ । **ನವೀಯಸಃ**—ಹೊಸದಾಗಿ ದೀಕ್ಷಾದಿಗಳಿಂದ ಸಂಸ್ಕೃತನಾಗಿಯೂ । **ನವೀಯಸಃ**—ಅಸಾಧಾರಣ ಸ್ತುತಿಯುಕ್ತನೂ (ಆದ) । **ಅಸ್ಯ ಮೇ**—ಈ ನನ್ನ । **ಮನ್ಮ**—ಸ್ತುತಿಯನ್ನು । **ಆ ಶ್ರುಧಿ**—ಆಲಿಸು.

॥ ಭಾವಾರ್ಥ ॥

ಇಂದ್ರನು ಉಷಃಕಾಲದಲ್ಲಿ (ಆಚರಿಸುವ ನಮ್ಮ ಕರ್ಮಕ್ಕೆ) ಆಗಮಿಸುವನು. ಎಲೈ ಇಂದ್ರನೇ, ಹವನ ಪ್ರಕಾರ ವಿಶೇಷಗಳಿಂದ (ಅರ್ಪಿತವಾದ ನಿನ್ನ) ಪೂಜಾಸಾಧನವಾದ ಹವಿಸ್ಸುಗಳನ್ನು ತಿಳಿಯುವವನಾಗು; ಸ್ವರ್ಗ

ಲಾಭಕ್ಕಾಗಿ ಸೂಕ್ತಕರ್ಮಗಳಿಂದ (ಅರ್ಪಿತವಾದ ಹವಿಸ್ಸುಗಳನ್ನು) ತಿಳಿಯುವವನಾಗು. ವಜ್ರಾಯುಧಧಾರಿಯೂ, ಕಾಮವರ್ಷಕನೂ (ಆದ) ಎಲೈ ಇಂದ್ರನೇ, ಯಜ್ಞಘಾತುಕರು ವಧ್ಯರೆಂಬುದು ನಿನಗೆ ತಿಳಿದಿದೆ; ಆದುದರಿಂದ, ನೂತನವಾಗಿ ಸಂಸ್ಕೃತನೂ, ಅಸಾಧಾರಣಸ್ತುತಿವಿಶಿಷ್ಟನೂ, ಮೇಧಾವಿಯೂ ಆದ ನನ್ನ ಸ್ತುತಿಯನ್ನು ಆಲಿಸು

English Translation.

Will (Indra) be present at this our morning rite: be apprized, (Indra), of the oblation offered with (due) observances; offered with (due) observances for the sake of (obtaining) heaven: and since, wielder of the thunderbolt, showerer (of benefits) you know how to destroy the malevolent, therefore, listen to my acceptable (praise) intelligent, though a novice; (hear it from me) a novice.

॥ ವಿಶೇಷವಿಷಯಗಳು ॥

**ಅಸ್ಯಾಃ ಉಷಸಃ ಉತೋ ಜುಷೇತ—ಏತಾಮುಷಸಂ ಸುತ್ಯಾಹಃಸಂಬಂಧಿನಮುಷಃಕಾಲಂ ಅಪಿ ನಾಮ ಸೇವೇತ ।** ಇಂದ್ರನು, ಯಜಮಾನರು ಆಚರಿಸುವ ಯಜ್ಞದ ಸುತ್ಯಾಹಸ್ಸಿನ ದಿವಸ ಉಷಃಕಾಲಕ್ಕೆ ಬಂದು ಹವಿಸ್ಸುಗಳನ್ನು ಸ್ವೀಕರಿಸಲಿ ಎಂದು ಆಶಿಸಿದೆ.

**ಹವೀಮಭಿಃ—ಹವನಪ್ರಕಾರವಿಶೇಷೈಃ ।** ದೇವತೆಗಳನ್ನು ಯಜ್ಞದಲ್ಲಿ ಹವಿಸ್ಸಿನ ಸ್ವೀಕಾರಕ್ಕಾಗಿ ಆಹ್ವಾನಮಾಡಿ ಸಂಸ್ಕೃತವಾದ ಹವಿಸ್ಸುಗಳನ್ನು ಆಯಾಯ ವಿಧ್ಯುಕ್ತಕ್ರಮದಿಂದ ಅಗ್ನಿಯಲ್ಲಿ ಹೋಮಮಾಡುವ ಪ್ರಕಾರಗಳೆಂದು ಅರ್ಥ.

**ಸ್ವರ್ಷಾತಾ ಹವೀಮಭಿಃ—ಸ್ವರ್ಗಸ್ಯಾನ್ಯಸ್ಯ ಸುಖವಿಶೇಷಸ್ಯ ವಾ ಸಂಭಜನಸ್ಥಾನೇ ಯಜ್ಞೇ ಆಹ್ವಾನೈರಾಹೂತೋ ಭವ ।** ಯಜ್ಞವು ಸ್ವರ್ಗವನ್ನಾಗಲಿ ಅಥವಾ ಬೇರೆಯ ವಿಧವಾದ ಅತಿಶಯದಿಂದ ಕೂಡಿದ ಸುಖವನ್ನಾಗಲಿ ನಿಯತವಾಗಿ ಉಂಟುಮಾಡುವುದರಿಂದ ಆ ಯಜ್ಞಗಳಲ್ಲಿ ಇಂದ್ರನು ಋತ್ವಿಜರಿಂದಲೂ ಯಜಮಾನರಿಂದಲೂ ಆಹ್ವಾನಿಸಲ್ಪಡುವನೆಂದೂ, ಉಷಃಕಾಲದಲ್ಲಿಯೇ ಆಹ್ವಾನಿತನಾಗಿ ಬಂದು ಹವಿಸ್ಸನ್ನು ಸ್ವೀಕರಿಸುವನೆಂದೂ ಅರ್ಥವನ್ನು ವಿವರಿಸಿದೆ

**ಮೃಧಃ ಹಂತವೇ ವೃಷಾ ಚಿಕೇತಸಿ—ಶತ್ರೂನ್ ಹಂತುಂ ಕಾಮಾನಾಂ ವರ್ಷಿತಾ ಅವಬುಧ್ಯಸೇ ।** ಹಿಂಸೆಮಾಡುವ ಶತ್ರುಗಳನ್ನು ಇಂದ್ರನು ನಾಶಪಡಿಸುವನೆಂದೂ ಯಜಮಾನರ ಇಷ್ಟಾರ್ಥಗಳನ್ನು ನೆರವೇರಿಸುವನೆಂದೂ ಯಜಮಾನರು ತಿಳಿದಿರುತ್ತಾರೆ ಎಂದು ಅರ್ಥ.

**ನವೀಯಸಃ**—ಎಂಬ ಪದವು ಎರಡುಸಾರಿ ಪ್ರಯುಕ್ತವಾಗಿದೆ ಮೊದಲನೆಯ ಪದಕ್ಕೆ **ನವೀಯಸಃ ವೇಧಸಃ** ಎಂದು ವಿಶೇಷಣವಾಗಿ ಹೇಳಿ ದೀಕ್ಷಿತರಾಗಬೇಕಾದ ಸಂಸ್ಕಾರಗಳಿಂದ ಸಂಸ್ಕೃತನಾದ ಮೇಧಾವಿಯ ಎಂದು ಅರ್ಥಮಾಡಿದೆ.

ಎರಡನೆಯ **ನವೀಯಸಃ** ಎಂಬ ಪದಕ್ಕೆ ಅತಿಶಯವಾಗಿಯೂ, ಇತರರು ಯಾರೂ ಹೇಳುವುದಕ್ಕಾಗದ ಸ್ತುತಿಯನ್ನು ಮಾಡುವವನೆಂದು ಅರ್ಥಮಾಡಿ ಯಜಮಾನನಿಗೆ ವಿಶೇಷಣವಾಗಿ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಉಷಸಃ**—ಕರ್ಮಕ್ಕೆ ಷಷ್ಠೀ ಬಂದಿದೆ. ಹೀಗೆಯೇ ಅರ್ಕಸ್ಯ ಹವಿಷಃ ಎಂಬಲ್ಲಿಯೂ ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

**ಜುಷೇತ**—ಜುಷೀ ಪ್ರೀತಿಸೇವನಯೋಃ ಧಾತು. ತುದಾದಿ. ಲಿಙ್ ಪ್ರಥಮಪುರುಷ ಏಕವಚನಾಂತ ರೂಪ. **ಚಾದಿ ಲೋಪೇ ವಿಭಾಷಾ** (ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುವುದರಿಂದ ವಿಕರಣಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಬೋಧಿ**—ಬುಧ ಅವಗಮನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ವಾ ಛಂದಸಿ** (ಪಾ. ಸೂ. ೩-೪-೮೮) ಎಂಬುದರಿಂದ ಅಪಿತ್ವ ಇಲ್ಲದೇ ಇರುವುದರಿಂದ ಙಿತ್ವ ಇಲ್ಲದಿರುವುದರಿಂದ ಪ್ರತ್ಯಯ ನಿಮಿತ್ತವಾಗಿ ಲಘೂಪಧಗುಣ ಬರುತ್ತದೆ. **ಹುಝಲ್ಭ್ಯೋಹೇರ್ಧಿಃ** (ಪಾ. ಸೂ. ೬-೪-೧೦೧) ಎಂಬುದರಿಂದ ಹಿ ಧಿ ಆದೇಶ. ಛಾಂದಸವಾಗಿ ಅಂತ್ಯ ಲೋಪ ಬರುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

**ಹವೀಮಭಿಃ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಕರ್ತರಿಯಲ್ಲಿ ಮನಿನ್ ಪ್ರತ್ಯಯ. (ಕರಣ ವ್ಯಾಪಾರ ಸ್ವಾತಂತ್ರ್ಯವಿವಕ್ಷೆಯಿಂದ ಕರ್ತೃತ್ವ ವಿವಕ್ಷಾ) ಅದಕ್ಕೆ ಛಾಂದಸವಾಗಿ ಈಡಾಗಮ. **ಬಹುಲಂ ಛಂದಸಿ** (ಪಾ. ಸೂ. ೬-೧-೩೪) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪದಕ್ಕೆ ಪೂರ್ವರೂಪ. ಪ್ರತ್ಯಯ ನಿಮಿತ್ತವಾಗಿ ಅದಕ್ಕೆ ಗುಣ, ಅವಾದೇಶ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸ್ವರ್ಷಾತಾ**—ಷಣ ಸಂಭಕ್ತೌ. ಧಾತು. ಕ್ತಿನ್ ಪ್ರತ್ಯಯ. **ಜನಸನಖನ**—(ಪಾ. ಸೂ. ೩-೨-೬೭) ಎಂಬುದರಿಂದ ಧಾತುವಿಗೆ ಆತ್ವ. ಸಪ್ತಮಿ ಏಕವಚನ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ.

**ಹಂತವೇ**—ಹನ ಹಿಂಸಾಗತ್ಯೋಃ ಧಾತು. ತುಮನರ್ಥ ತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮೃಧಃ**—ಮೃಧು ಉಂದನೇ. ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿತೀಯಾ ಬಹುವಚನಾಂತರೂಪ.

**ಚಿಕೇತಸಿ**—ಕಿತ ಜ್ಞಾನೇ. ಧಾತು. ಜುಹೋತ್ಯಾದಿ. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** (ಪಾ. ಸೂ ೭-೪-೬೨) ಎಂಬುದರಿಂದ ಕಕಾರಕ್ಕೆ ಚುತ್ವ.

**ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ** (ಪಾ. ಸೂ. ೭-೩-೮೭) ಎಂಬಲ್ಲಿ **ಬಹುಲಂ ಛಂದಸಿ** ಎಂಬುದರಿಂದ ಧಾತುವಿನ ಲಘೂಪಧಗುಣಕ್ಕೆ ನಿಷೇಧ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ನವೀಯಸಃ**--ಅತಿಶಯಾರ್ಥ ತೋರುವಾಗ ಈಯಸುನ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಮನ್ಮ**—ಮನ ಜ್ಞಾನೇ. ಧಾತು. ಔಣಾದಿಕ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶ್ರುಧಿ**—ಶ್ರು ಶ್ರವಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಶ್ರುಶೃಣು ಪೃಕೃವೃ**—(ಪಾ. ಸೂ. ೬-೪-೧೦೨) ಎಂಬುದರಿಂದ ಛಂದಸ್ಸಿನಲ್ಲಿ ಸಿಪಿಗೆ ಧಿ ಆದೇಶ. ಅಪಿತ್ವವಿರುವುದರಿಂದ ಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. || ೬ ||



|| ಸಂಹಿತಾಪಾಠಃ ||

ತ್ವಂ ತಮಿಂದ್ರ ವಾವೃಧಾನೋ ಅಸ್ಮಯುರಮಿತ್ರಯಂತಂ ತುವಿಜಾತ
ಮರ್ತ್ಯಂ ವಜ್ರೇಣ ಶೂರ ಮರ್ತ್ಯಂ |
ಜಹಿ ಯೋ ನೋ ಅಘಾಯತಿ ಶೃಣುಷ್ವ ಸುಶ್ರವಸ್ತಮಃ |
ರಿಷ್ಟಂ ನ ಯಾಮನ್ನಪ ಭೂತು ದುರ್ಮತಿರ್ವಿಶ್ವಾಪ ಭೂತು ದುರ್ಮತಿಃ ||

|| ಪದಪಾಠಃ ||

ತ್ವಂ | ತಂ | ಇಂದ್ರ | ವವೃಧಾನಃ | ಅಸ್ಮಯುಃ | ಅಮಿತ್ರಯಂತಂ | ತುವಿಜಾತ | ಮರ್ತ್ಯಂ |
ವಜ್ರೇಣ | ಶೂರ | ಮರ್ತ್ಯಂ |
ಜಹಿ | ಯಃ | ನಃ | ಅಘಯತಿ | ಶೃಣುಷ್ವ | ಸುಶ್ರವಃತಮಃ |
ರಿಷ್ಟಂ | ನ | ಯಾಮನ್ | ಅಪ | ಭೂತು | ದುಃಮತಿಃ | ವಿಶ್ವಾ | ಅಪ | ಭೂತು | ದುಃಮತಿಃ || ೭ ||

॥ ಸಾಯಣಭಾಷ್ಯಂ ॥

ಹೇ ಇಂದ್ರ ತುವಿಜಾತಾಸ್ಮತ್ಸ್ತುತ್ಯಾ ಬಹುಭಾವಮಾಪನ್ನ ಶೂರ ವಿಕ್ರಾಂತ ತ್ವಂ ವವೃಧಾನೋಽತ್ಯರ್ಥಂ ವರ್ಧಮಾನೋಽಸ್ಮಯುರಸ್ಮಾನ್ ತ್ವದ್ಭಕ್ತಾನ್ಕಾಮಯಮಾನಸ್ತ್ವಮಮಿತ್ರಯಂತಮಸ್ಮಾಸು ಶತ್ರುತ್ವಮಾಚರಂತಂ ಮರ್ತ್ಯಂ ಮರಣಸ್ವಭಾವಂ ತಂ ಮರ್ತ್ಯಂ ವಜ್ರೇಣ ಜಹಿ ॥ ಹಂತೇರ್ಜ ಇತಿ ಜಾದೇಶಃ । ತಸ್ಯಾಸಿದ್ಧವದತ್ರಾಭಾದಿತ್ಯಸಿದ್ಧತ್ವಾತ್ ಹೇರ್ಲುಗಭಾವಃ ॥ ತಮಿತ್ಯುಕ್ತಂ ಕಮಿತ್ಯಾಹ । ಯೋ ಮರ್ತ್ಯೋ ನೋಽಸ್ಮಾಕಮಘಾಯತಿ ಅಘಂ ಪಾಪಂ ದುಃಖಂ ವೇಚ್ಛತಿ ತಂ ಜಹಿ ॥ ಅಶ್ವಾಘಸ್ಯಾದಿತ್ಯಾತ್ವಂ ॥ ಕಿಂಚ ಸುಶ್ರವಸ್ತಮೋಽತಿಶಯೇನ ಶೋಭನಶ್ರವಣಸ್ತ್ವಂ ಶೃಣುಷ್ವ । ಶ್ರಾವಯಾಸ್ಮದ್ವಾಕ್ಯಂ । ಕೀದೃಶಂ ತದಿತಿ ತದುಚ್ಯತೇ । ಹೇ ಇಂದ್ರ ತ್ವತ್ಪ್ರಸಾದಾದ್ದುರ್ಮತಿರಸ್ಮಜ್ಜಿಘಾಂಸಾವಿಷಯಾ ದುಷ್ಟಾ ಬುದ್ಧಿರಪ ಭೂತು । ಅಪಗತಾ ಭವತು ॥ ಛಾಂದಸಃ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥ ನ ಕೇವಲಂ ಹಿಂಸಾರೂಪಾ ಅಪಿ ತು ವಿಶ್ವಾ ಸರ್ವಾಪಿ ಕ್ರೋಧಪರಿವಾದಾದಿರೂಪಾಪ ಭೂತು । ತತ್ರ ದೃಷ್ಟಾಂತಃ । ಯಾಮನ್ ಯಾಮನ್ಯಧ್ವನಿ ರಿಷ್ಟಂ ನ । ಅಧ್ವನಃ ಶ್ರಮೇಣ ಹಿಂಸಿತಂ ಪರಿಶ್ರಾಂತಂ ಯಥಾ ದುರ್ಮತಿಶ್ಚೋರಾದಿವಿಷಯಾ ಬಾಧತೇ ತದ್ವದಸ್ಮಾನ್ಬಾಧಮಾನಾ ದುರ್ಮತಿರಪಗಚ್ಛತು । ಯದ್ವಾ । ಯಾಮನಿ ಮಾರ್ಗೇ ಯಜ್ಞಾದಿರೂಪೇ ರಿಷ್ಟಮಸುರಕೃತಹಿಂಸಾದಿರೂಪಂ ವಿಘ್ನಂ ಪರಿಹರಸಿ ತದ್ವತ್ ॥

॥ ಪ್ರತಿಪದಾರ್ಥ ॥

**ತುವಿಜಾತ**—(ನಮ್ಮ ಸ್ತುತಿಯಿಂದ) ನಾನಾರೂಪಧಾರಿಯೂ । **ಶೂರ**—ಪರಾಕ್ರಮಿಯೂ (ಆದ) । **(ಹೇ) ಇಂದ್ರ**—(ಎಲೈ) ಇಂದ್ರನೇ । **ತ್ವಂ**—ನೀನು । **ವವೃಧಾನಃ**-ಅತ್ಯಂತ ಪ್ರವರ್ಧಮಾನನೂ । **ಅಸ್ಮಯುಃ**—ನಮ್ಮಲ್ಲಿ ವಿಶ್ವಾಸಿಯೂ (ಆಗಿ) । **ಯಃ**—ಯಾವನು । **ನಃ**—ನಮಗೆ । **ಅಘಾಯತಿ**—ಪಾಪಾಚರಣೆ ಮಾಡುತ್ತಾನೆಯೋ ಅಥವಾ ದುಃಖವನ್ನುಂಟುಮಾಡುತ್ತಾನೆಯೋ । **ತಂ**—ಅಂತಹ । **ಅಮಿತ್ರಯಾತಂ**—(ನಮಗೆ) ಶತ್ರುವಂತೆ ನಡೆದುಕೊಳ್ಳುತ್ತಿರುವ । **ಮರ್ತ್ಯಂ**—ಮರಣಶೀಲನಾದ । **ಮರ್ತ್ಯಂ**—ಮನುಷ್ಯನನ್ನು । **ವಜ್ರೇಣ**—ವಜ್ರಾಯುಧದಿಂದ । **ಜಹಿ**—ಹೊಡಿ । **(ಕಿಂಚ** ಮತ್ತು) । **ಸುಶ್ರವಸ್ತಮಃ**—(ಪ್ರಾರ್ಥನೆಗಳನ್ನು) ವಿಶೇಷವಾಗಿ ಆಲಿಸುವ (ನೀನು) । **ಶೃಣುಷ್ವ**—(ನಮ್ಮ ಪ್ರಾರ್ಥನೆಯನ್ನು) ಕೇಳು । **ದುರ್ಮತಿಃ**—(ನಮಗೆ ಹಿಂಸೆಮಾಡಬೇಕೆಂಬ) ದುರ್ಬುದ್ಧಿಯು । **ಅಪ ಭೂತು**—ಪರಿಹೃತವಾಗಲಿ । **ಯಾಮನ್**—ಮಾರ್ಗದಲ್ಲಿ । **ರಿಷ್ಟಂ ನ**—(ಚೋರಾದಿ ಭಯರೂಪವಾದ) ಅರಿಷ್ಟದಂತೆ (ನಮಗೆ ಬಾಧಕವಾದ) । **ಯಾಮನ್**—(ಯಜ್ಞಾಚರಣ) ಮಾರ್ಗದಲ್ಲಿ । **ರಿಷ್ಟಂ ನ**—(ಅಸುರಹಿಂಸಾದಿ) ಅರಿಷ್ಟದಂತೆ (ನಮಗೆ ಬಾಧಕವಾದ) । **ವಿಶ್ವಾ**—(ಕ್ರೋಧಾದಿರೂಪವಾದ) ಸಮಸ್ತ (ದುರ್ಬುದ್ಧಿಗಳೂ)ವೂ । **ಅಪ ಭೂತು**—ನಿವಾರಿತವಾಗಲಿ.

॥ ಭಾವಾರ್ಥ ॥

ನಾನಾಗುಣವಿಶಿಷ್ಟನೂ, (ನಮ್ಮ ಸ್ತುತಿಗಳಿಂದ) ಪ್ರವರ್ಧಮಾನನೂ, ನಮ್ಮಲ್ಲಿ ವಿಶ್ವಾಸವುಳ್ಳವನೂ ಆದ ಎಲೈ ಇಂದ್ರನೇ, ನಮಗೆ ಶತ್ರುವಾದ ಮತ್ತು ಮರಣಶೀಲನಾದ ಮರ್ತ್ಯನನ್ನು ವಜ್ರಾಯುಧದಿಂದ ವಧಿಸು; (ಪ್ರಾರ್ಥನೆಗಳನ್ನು) ವಿಶೇಷವಾಗಿ ಆಲಿಸುವ (ನೀನು) ನಮ್ಮ (ಪ್ರಾರ್ಥನೆಗೆ) ಕಿವಿಗೊಡು; (ನಮಗೆ ಹಿಂಸೆಕೊಡಬೇಕೆಂಬ)

ದುರ್ಬುದ್ಧಿಯು (ನಿನ್ನ ಪ್ರಸಾದದಿಂದ) ಹೋಗಲಿ; ಮಾರ್ಗದಲ್ಲಿ (ಉದ್ಭವಿಸುವ ಚೋರಭಯರೂಪವಾದ) ಅರಿಷ್ಟ ದಂತೆ ಅಥವಾ ಯಜ್ಞಾಚರಣೆಗೆ (ಬರಬಹುದಾದ ವಿಘಾತಾದಿ) ಅರಿಷ್ಟದಂತೆ, (ನಮಗೆ ಬಾಧಕವಾದ) ಸಮಸ್ತ (ಕ್ರೋಧಾದಿ ಅರಿಷ್ಟಗಳೂ) ಪರಿಹೃತವಾಗಲಿ.

## English Translation.

Indra, endowed with many (excellences), you are exalted (by our praises), and are well disposed towards us, (slay) the man who is unfriendly to us; (slay) such a man, hero, with your thunderbolt: kill him who sins against us; ever most prompt to hear, hear (us): let every ill-intent (towards us, such as alarms) a wearied (traveller) on the road, be counteracted; let every ill-intent be counteracted.

॥ ವಿಶೇಷವಿಷಯಗಳು ॥

ಇಂದ್ರನು ಋತ್ವಿಜರೂ ಯಜಮಾನರೂ ಪಠಿಸುವ ಸ್ತೋತ್ರಗಳಿಂದ ಬಹಳವಾಗಿ ವೃದ್ಧಿಹೊಂದುವವ ನೆಂದೂ, ಅನೇಕ ರೂಪಗಳನ್ನು ಧರಿಸಿ ಇರುವವನೆಂದೂ, **ತುವಿಜಾತ ವಾವೃಧಾನ** ಪದಗಳಿಗೆ ಅರ್ಥವನ್ನು ಮಾಡಿದೆ. ಮತ್ತು **ಅಸ್ಮಯುಃ** ಎಂಬ ವಿಶೇಷಣದಿಂದ ಇಂದ್ರನು ಪರಿಶುದ್ಧವಾದ ಮನಸ್ಸಿನಿಂದ ತನ್ನನ್ನು ಸ್ತುತಿಮಾಡುವವರನ್ನು ತನ್ನ ಭಕ್ತರನ್ನಾಗಿ ತಿಳಿದುಕೊಳ್ಳುವನೆಂದು ಅರ್ಥ ಮಾಡಿದೆ.

ಮರ್ತ್ಯಂ ಎಂಬ ಪದವು ಎರಡಾವರ್ತಿ ಪ್ರಯುಕ್ತವಾಗಿರುವುದರಿಂದ ಮೊದಲನೆಯ ಪದಕ್ಕೆ ಮರಣ ಸ್ವಭಾವವುಳ್ಳವನೆಂದೂ, ಎರಡನೆಯ ಮರ್ತ್ಯ ಪದಕ್ಕೆ **ಅಮಿತ್ರಯುಂತಂ** ಎಂಬ ಪದವನ್ನು ವಿಶೇಷಣಮಾಡಿ ಋತ್ವಿಜ ರನ್ನೂ ಯಜಮಾನರನ್ನೂ ಶತ್ರುಗಳನ್ನಾಗಿ ತಿಳಿಯುವ ಮನುಷ್ಯನನ್ನೂ ಇಂದ್ರನು ಶತ್ರುವನ್ನಾಗಿ ತಿಳಿದು, ವಜ್ರಾಯುಧದಿಂದ ನಾಶಪಡಿಸಲಿ ಎಂದು ಪ್ರಾರ್ಥಿಸಿದೆ. ಅಮಿತ್ರ ಶಬ್ದವು **ನ ಮಿತ್ರಂ** ಸ್ನೇಹಿತನಲ್ಲದವನು ಎಂದು ಅರ್ಥ ವನ್ನು ಬೋಧಿಸುವುದು. ಈ ಶಬ್ದದ ಮೇಲೆ (ನಾಮಧಾತು) ಕ್ಯಚ್ ಪ್ರತ್ಯಯವು ಆಚಾರಾರ್ಥದಲ್ಲಿ ಬಂದು, ಶತ್ರುವ ನ್ನಾಗಿ ತಿಳಿದು, ಶತ್ರುವು ಆಚರಿಸುವ ಕೆಲಸವನ್ನು ಆಚರಿಸುವವನು ಎಂದು ಅರ್ಥವನ್ನು ವಿವರಿಸಿದೆ. **ಮರ್ತ್ಯ** ಶಬ್ದವು ಮನುಷ್ಯನಾಮಗಳಲ್ಲಿ (ನಿ ೩-೮) ಪಠಿತವಾಗಿದೆ

**ಅಘಾಯತಿ—ಅಘಂ ಪಾಪಂ ದುಃಖಂ ವಾ ಇಚ್ಛತಿ ।** ಅಘ ಶಬ್ದವು **ಅಘಂ ಹಂತೇರ್ನಿರ್ಹ್ರಸಿತೋ-ಪಸರ್ಗ ಆಹಂತೀತಿ** (ನಿ ೬-೧೧) ಉಪಸರ್ಗಸಹಿತವಾಗಿರುವ ಹನ ಧಾತುವಿನಿಂದ ಅಘ ಎಂಬ ಶಬ್ದವು ನಿಷ್ಪನ್ನ ವಾಗಿ ಮನುಷ್ಯನನ್ನು ದುಃಖಕ್ಕಾಗಲಿ, ಪಾಪಕ್ಕಾಗಲಿ ಸೇರಿಸುವ ಕರ್ಮವೆಂದು ಅರ್ಥವನ್ನು ಬೋಧಿಸುವುದು. ಇಲ್ಲಿ ಋತ್ವಿಜರ ಅಥವಾ ಯಜಮಾನರ ವಿಷಯದಲ್ಲಿ ದುಃಖವನ್ನು ಅಥವಾ ಪಾಪವನ್ನು ಉಂಟುಮಾಡುವ ಕಾರ್ಯವನ್ನು ಮಾಡಲು ಇಚ್ಛೆಯುಳ್ಳವನೆಂದೂ, ಅವನನ್ನು ಇಂದ್ರನು ನಾಶಮಾಡಲಿ ಎಂದು ಅರ್ಥವನ್ನು ಹೇಳಿದೆ.

**ಸುಶ್ರವಸ್ತಮಃ—ಅತಿಶಯೇನ ಶೋಭನಶ್ರವಣಃ** ಇಂದ್ರನ ಬಲವೂ ಕೀರ್ತಿಯೂ ಅತಿಶಯವಾದ ಮಹತ್ವದಿಂದ ಪೂರ್ಣವಾಗಿರುವುದೆಂದೂ ಅದನ್ನು ಕೇಳಿದ ಮಾತ್ರದಿಂದಲೇ ಕಲ್ಯಾಣಪ್ರದವೆಂದೂ ವರ್ಣಿಸಿದೆ.

**ದುರ್ಮತಿಃ ಅಪಭೂತ್—ದುಷ್ಟಾಬುದ್ಧಿರಪಗತಾ ಭವತು ।** ಶತ್ರುಗಳಿಗೆ ಯಜಮಾನನ ವಿಷಯದಲ್ಲಿ ಉಂಟಾಗಿರುವ ಹಿಂಸೆಮಾಡಬೇಕೆಂಬ ಬುದ್ಧಿಯೂ, ಕೋಪದಿಂದ ಇರುವಿಕೆಯೂ, ನಿಂದೆಯನ್ನು ಮಾಡುವುದು, ಅಪವಾದಗಳನ್ನು ಹೇಳುವುದು ಇವೇ ಮೊದಲಾದವುಗಳು ಇಂದ್ರನ ಅನುಗ್ರಹದಿಂದ ನಾಶವನ್ನು ಹೊಂದಲಿ ಎಂದು ಪ್ರಾರ್ಥಿಸಿದೆ.

**ಯಾಮುನ್ ರಿಷ್ಟಂ ನೆ—ಅಧ್ವನಃ ಶ್ರಮೇಣ ಹಿಂಸಿತಂ ಪರಿಶ್ರಾಂತಂ ಯಥಾ ದುರ್ಮತಿಶ್ಚೋರಾದಿವಿಷಯಾ ಬಾಧತೇ ತದ್ವತ್ ಅಸ್ಮಾನ್ ಬಾಧಮಾನಾ ದುರ್ಮತಿರಪಗಚ್ಛತು । ಯದ್ವಾ । ಯಾಮನಿ ಯಜ್ಞಾದಿಮಾರ್ಗೇ ಯಜ್ಞಾದಿರೂಪೇ ರಿಷ್ಟಂ ಅಸುರಕೃತಹಿಂಸಾದಿರೂಪಂ ವಿಘ್ನಂ ಪರಿಹರಿಸಿ ತದ್ವತ್ ।** ಈ ವಾಕ್ಯಕ್ಕೆ ಸಾಯಣರು ಎರಡುವಿಧವಾದ ಅರ್ಥವನ್ನು ಹೇಳಿದ್ದಾರೆ. ದಾರಿನಡೆಯುವವನು ದಾರಿಯಲ್ಲಿ ನಡೆದು ಆಯಾಸಗೊಂಡು ಇರುವಾಗ ಅವನಿಗೆ ಕಳ್ಳರೇಮೊದಲಾದ ಹಿಂಸೆಮಾಡುವವರ ಭಯವು ಉಂಟಾಗಿ ತೊಂದರೆಯನ್ನು ಉಂಟುಮಾಡುವಂತೆ, ಋತ್ವಿಜರೇ ಮೊದಲಾದವರನ್ನು ಹಿಂಸೆಪಡಿಸುವವರ ಕೆಟ್ಟಬುದ್ಧಿಯು ಇಂದ್ರನ ಅನುಗ್ರಹದಿಂದ ನಾಶವಾಗಲಿ ಎಂದು ದೃಷ್ಟಾಂತರೀತಿಯಿಂದ ಹೇಳಿದೆ. ಎರಡನೆಯ ಅರ್ಥದಲ್ಲಿ–ಯಜ್ಞವೇ ಮೊದಲಾದ ಪುಣ್ಯಕಾರ್ಯಾಚರಣೆಯಲ್ಲಿ ವಿಘ್ನವನ್ನು ಉಂಟುಮಾಡುವುದಕ್ಕಾಗಿ ಅಸುರರು ಆಚರಿಸುವ ಹಿಂಸೆಯೇ ಮೊದಲಾದವುಗಳು ನಾಶವಾಗಿ ವಿಘ್ನಗಳು ಪರಿಹಾರವಾಗುವಂತೆ ಇಂದ್ರನು ರಕ್ಷಿಸುವನೆಂದು ಇಂದ್ರನಿಂದ ರಕ್ಷಣೆಯನ್ನು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ವವೃಧಾನಃ**—ವೃಧು ವೃದ್ಧೌ. ಧಾತು ಇದಕ್ಕೆ ಲಿಟ್ ಬಂದಾಗ **ಲಿಟಃ ಕಾನಜ್ವಾ** (ಪಾ. ಸೂ. ೩–೨–೧೦೬) ಎಂಬುದರಿಂದ ಅದಕ್ಕೆ ಕಾನಚಾದೇಶ. ಧಾತುವಿಗೆ ಪ್ರತ್ಯಯನಿಮಿತ್ತವಾಗಿ ದ್ವಿತ್ವಾದಿ. ಚಿತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅಸ್ಮಯುಃ**— ಅಸ್ಮಾನ್ ಆತ್ಮನಃ ಇಚ್ಛತಿ. ಎಂದು ಅರ್ಥವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩–೧–೮) ಎಂಬುದರಿಂದ ಕ್ಯಚ್. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. **ಅತೋ ಲೋಪಃ** ಎಂಬುದರಿಂದ ಕ್ಯಚಿನ ಅಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಮಿತ್ರಯಂತಂ**— ಹಿಂದಿನಂತೇ ಕ್ಯಚ್ ಬಂದಾಗ ಅದರ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಕ್ಯಚ್ ಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನದಲ್ಲಿ ನುಮಾಗಮ.

**ತುವಿಜಾತ**—ಸಂಬುದ್ಧಿಯಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಜಹಿ**—ಹನ ಹಿಂಸಾಗತ್ಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ವಿಕರಣಕ್ಕೆ ಲುಕ್. **ಹಂತೇರ್ಜಃ** (ಪಾ. ಸೂ. ೬–೪–೨೨) ಎಂಬುದರಿಂದ ಧಾತುವಿಗೆ ಜಾದೇಶ. **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೩೬) ಎಂಬುದರಿಂದ ಜಾಭಾವವು ಅಸಿದ್ಧವಾದುದರಿಂದ **ಅತೋಹೇಃ** ಎಂಬುದರಿಂದ ಹಿಗೆ ಲುಕ್ ಬರುವುದಿಲ್ಲ.

**ಅಘಾಯತಿ**—ಅಘಂ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. **ನ ಛಂದಸ್ಯಪುತ್ರಸ್ಯ** ಎಂಬುದರಿಂದ ಈತ್ವಾದಿಗಳಿಗೆ ನಿಷೇಧ ಬರುವಾಗ **ಅಶ್ವಾಘಸ್ಯಾತ್**·(ಪಾ. ಸೂ. ೭-೪-೩೭) ಎಂಬುದರಿಂದ ಆತ್ವ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಕ್ಯಚ್ ಸ್ವರ ಉಳಿಯುತ್ತದೆ.

**ಶೃಣುಷ್ವ**—ಶ್ರು ಶ್ರವಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯಾಮನ್**—**ಸುಪಾಂ ಸುಲುಕ್**—(ಪಾ ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್.

**ರಿಷ್ಟಂ**—ರಿಷ ಹಿಂಸಾಯಾಂ. ಧಾತು ಇದಕ್ಕೆ ಕ್ತ ಪ್ರತ್ಯಯ ಷಕಾರ ನಿಮಿತ್ತವಾಗಿ ಪ್ರತ್ಯಯಕ್ಕೆ ಷ್ಟುತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಭೂತು**—ಭೂ ಸತ್ತಾಯಾಂ ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಏರುಃ** ಎಂಬುದರಿಂದ ಉತ್ವ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಭೂಸುವೋಸ್ತಿಙಿ** (ಪಾ. ಸೂ. ೭-೩-೮೮) ಎಂಬುದರಿಂದ ಗುಣ ನಿಷೇಧ ಬರುತ್ತದೆ. ತಿಙಂತನಿಘಾತಸ್ವರ ಬರುವುದಿಲ್ಲ.

**ವಿಶ್ವಾ**—ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ. ॥ ೭ ॥

ಇಲ್ಲಿಗೆ ನೂರ ಮೂವತ್ತೊಂದನೇ ಸೂಕ್ತ ಮುಗಿದುದು



# ನೂರ ಮೂವತ್ತೆರಡನೆಯ ಸೂಕ್ತವು

**ತ್ವಯಾ ವಯಮಿತಿ ಷಡೃಚಂ ಷಷ್ಠಂ ಸೂಕ್ತಂ ಪಾರುಚ್ಛೇಪಮಾತ್ಯಷ್ಟಮೈಂದ್ರಂ । ಯುವಂ ತಮಿತ್ಯಯನ್ತ್ಯೈಂದ್ರಾಪಾರ್ವತೋಽರ್ಧರ್ಚಃ । ತ್ವಯಾ ವಯಂ ಷಡ್ಯುವಂ ತನ್ತ್ಯೈಂದ್ರಾಪಾರ್ವತೋಽರ್ಧರ್ಚ ಇತ್ಯನುಕ್ರಮಣಿಕಾ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ತ್ವಯಾ ವಯಂ** ಎಂಬ ಈ ಸೂಕ್ತವು ಹತ್ತೊಂಭತ್ತನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪರುಚ್ಛೇಪನು ಋಷಿಯು. ಇಂದ್ರನು ದೇವತೆಯು. ಅತ್ಯಷ್ಟಿ ಛಂದಸ್ಸು. **ಯುವಂ ತಂ** ಎಂಬ ಅರ್ಧಋಕ್ಕು ಇಂದ್ರಾಪರ್ವತಾದೇವತಾಕವು. ಅನುಕ್ರಮಣಿಕೆಯಲ್ಲಿ—**ತ್ವಯಾ ವಯಂ ಷಡ್ಯುವಂ ತನ್ತ್ಯೈಂದ್ರಾಪಾರ್ವತೋಽರ್ಧರ್ಚಃ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೧೩೨

ಮಂಡಲ—೧ ‖ ಅನುವಾಕ—೧೯ ‖ ಸೂಕ್ತ—೧೩೨ ‖
ಅಷ್ಟಕ—೨ ‖ ಅಧ್ಯಾಯ—೧ ‖ ವರ್ಗ—೨೧ ‖
‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ‖
‖ ಋಷಿಃ—ಪರುಚ್ಛೇಪೋ ದೈವೋದಾಸಿಃ ‖
‖ ದೇವತಾ—೧-೫, ೬ ಉತ್ತರಾರ್ಧಃ ಇಂದ್ರಃ ।
೬ ಪೂರ್ವಾರ್ಧಃ ಇಂದ್ರಾಪರ್ವತೌ ‖
‖ ಛಂದಃ—ಅತ್ಯಷ್ಟಿಃ ‖

‖ ಸಂಹಿತಾಪಾಠಃ ‖

ತ್ವಯಾ ವಯಂ ಮಘವನ್ಪೂರ್ವ್ಯೇ ಧನ ಇಂದ್ರತ್ವೋತಾಃ ಸಾಸಹ್ಯಾಮ
ಪೃತನ್ಯತೋ ವನುಯಾಮ ವನುಷ್ಯತಃ ।
ನೇದಿಷ್ಠೇ ಅಸ್ಮಿನ್ನಹನ್ಯಧಿ ವೋಚಾ ನು ಸುನ್ವತೇ ।
ಅಸ್ಮಿನ್ಯಜ್ಞೇ ವಿ ಚಯೇಮಾ ಭರೇ ಕೃತಂ ವಾಜಯಂತೋ ಭರೇ ಕೃತಂ ‖೧‖

‖ ಪದಪಾಠಃ ‖

ತ್ವಯಾ । ವಯಂ । ಮಘಽವನ್ । ಪೂರ್ವ್ಯೇ । ಧನೇ । ಇಂದ್ರತ್ವಾಽಊತಾಃ । ಸಸಹ್ಯಾಮ । ಪೃತನ್ಯತಃ ।
ವನುಯಾಮ । ವನುಷ್ಯತಃ ।
ನೇದಿಷ್ಠೇ । ಅಸ್ಮಿನ್ । ಅಹನಿ । ಅಧಿ । ವೋಚ । ನು । ಸುನ್ವತೇ ।
ಅಸ್ಮಿನ್ । ಯಜ್ಞೇ । ವಿ । ಚಯೇಮ । ಭರೇ । ಕೃತಂ । ವಾಜಽಯಂತಃ । ಭರೇ । ಕೃತಂ ‖ ೧ ‖

‖ ಸಾಯಣಭಾಷ್ಯಂ ‖

ಹೇ ಮಘವನ್ । ಮಘಃ ಸೌಖ್ಯಂ । ತದ್ವನ್ನಿಂದ್ರ ತ್ವಯಾ ಸಾಧನೇನ ಯುಕ್ತಾ ವಯಂ । ಅತ ಏವೇಂದ್ರತ್ವೋತಾ ಅತಿಪ್ರಬಲೇನೇಂದ್ರೇಣ ತ್ವಯಾ ರಕ್ಷಿತಾಃ ಸಂತಃ ‖ ಪ್ರತ್ಯಯೋತ್ತರಪದಯೋಶ್ಚೇತಿ ತ್ವಾದೇಶಃ । ಛಾಂದಸಮಾತ್ವಂ ‖ ಪೃತನ್ಯತಃ ಪೃತನಾಮಾತ್ಮನಃ ಇಚ್ಛತಃ ಪ್ರಬಲಸೇನಾಯುಕ್ತಾಞ್ಛತ್ರೂನ್

ಸಸಹ್ಯಾಮ । ಅಭಿಭವೇಮ । ತಥಾ ವನುಷ್ಯತೋಽಸ್ಮತ್ಪ್ರಹಾರಾಯಾಗಚ್ಛತಃ ಶತ್ರೂನ್ವನುಯಾಮ । ತೇಷಾಮಾಗಮನಾತ್ಪೂರ್ವಮೇವ ವಯಂ ಸಂಭಜೇಮ । ಕಿಂಚ ಪೂರ್ವ್ಯೇ ಧನೇಽಸ್ಮಿನ್ಯಜ್ಞೇ ನೇದಿಷ್ಠೇಽತ್ಯಂತಸಂನಿಹಿತೇಽಸ್ಮಿನ್ನಹನ್ಯಭಿಷವಯುಕ್ತೇಽದ್ಯತನೇಽಹನಿ ಸುನ್ವತೇ ಯಜಮಾನಾಯ ತದರ್ಥಮಧಿ ವೋಚ । ತಂ ಹವಿಷ್ಪ್ರದಂ ಯಜಮಾನಂ ಯಜ್ಞಂ ವಾ ನು ಕ್ಷಿಪ್ರಮಧಿಕಂ ಬ್ರೂಹಿ ॥ ಲೋಟಿ ವ್ಯತ್ಯಯೇನಾಙ್ । ವಚ ಉಮ್ ॥ ಕಿಂಚ ಹೇ ಇಂದ್ರ ವಯಂ ಯಜಮಾನಾ ಭರೇ ಸಂಗ್ರಾಮೇ ಕೃತಂ ಜಯಸ್ಯ ಕರ್ತಾರಂ ತ್ವಾಮುದ್ದಿಶ್ಯ ತೇಜ್ಜಯಾರ್ಥಂ ವಾಜಯಂತೋ ಹವಿರ್ಲಕ್ಷಣಾನ್ನಮುಪಾಚರಂತೋ ವಿ ಚಯೇಮ । ಸ್ತೋತ್ರಾದಿಕಂ ಹವಿರಾದಿಕಂ ವಾ ವಿಚಿನುಯಾಮ । ಚಿನೋತೇರ್ವ್ಯತ್ಯಯೇನ ಶಪ್ ॥ ಪುನಃ ಕೀದೃಶಂ ತ್ವಾಂ । ಭರೇ ದೇವಾನಾಂ ಸಂಗ್ರಾಮೇಽಸುರಜಯೇ ದೇವಾನಾಂ ಸಮ್ಯಗ್ಭರಣೇ ವಾ ಕೃತಂ ಕರ್ತಾರಂ । ಭರ ಇತಿ ಸಂಗ್ರಾಮನಾಮ ಭರತೇರ್ವಾ ಹರತೇರ್ವಾ । ನಿ. ೪–೨೪ । ಇತಿ ಯಾಸ್ಕಃ ॥

॥ ಪ್ರತಿಪದಾರ್ಥ ॥

(ಹೇ) **ಮಘವನ್**—ಸುಖವಿಶಿಷ್ಟನಾದ ಎಲೈ ಇಂದ್ರನೇ । **ತ್ವಯಾ**—ನಿನ್ನಿಂದ (ಯುಕ್ತರಾದ) । **ವಯಂ**—ನಾವು । **ಇಂದ್ರತ್ವೋತಾಃ**—(ಆದುದರಿಂದಲೇ) ಇಂದ್ರನಿಂದ ರಕ್ಷಿತರಾಗಿ (ಯುದ್ಧದಲ್ಲಿ ತಾವೇ ಜಯ ಶಾಲಿಗಳಾಗಬೇಕೆಂದು) । **ಪೃತನ್ಯತಃ**—ಪ್ರಬಲಸೇನಾಯುತರಾದ ಶತ್ರುಗಳನ್ನು । **ಸಾಸಹ್ಯಾಮ**—ಸೋಲಿಸೋಣ । **ವನುಷ್ಯತಃ**—ನಮ್ಮನ್ನು ಆಕ್ರಮಿಸಲು ಬರುತ್ತಿರುವವರನ್ನು । **ವನುಯಾಮ**—(ಅವರಿಗಿಂತ) ಮೊದಲೇ ಸಂಧಿಸೋಣ । **ಕಿಂಚ**—ಮತ್ತೂ । **ಪೂರ್ವ್ಯೇ ಧನೇ**—ಮೊದಲಿನ ಧನ ವಿಶಿಷ್ಟವಾದ । **ಅಸ್ಮಿನ್ ಯಜ್ಞೇ**—ಈ ಯಜ್ಞದಲ್ಲಿ । **ನೇದಿಷ್ಠೇ**—ಸನ್ನಿಹಿತವಾದ । **ಅಸ್ಮಿನ್ ಅಹನಿ**—(ಅಭಿಷವಯುಕ್ತವಾದ) ಈ ದಿನದಲ್ಲಿ । **ಸುನ್ವತೇ**—ಅಭಿಷವ ಮಾಡುವ ಯಜಮಾನನಿಗೆ । **ನು**—ಕ್ಷಿಪ್ರವಾಗಿ । **ಅಧಿ ವೋಚ**—(ಪ್ರೋತ್ಸಾಹಕರವಾಗಿ) ಮಾತನಾಡು । (**ಹೇ ಇಂದ್ರ**—ಎಲೈ ಇಂದ್ರನೇ) । **ವಯಂ**—ನಾವು । **ಭರೇ**—ಸಂಗ್ರಾಮದಲ್ಲಿ । **ಕೃತಂ**—ಜಯ ಕರ್ತೃವಾದ ನಿನ್ನನ್ನು (ಉದ್ದೇಶಿಸಿ) । **ವಾಜಯಂತಃ**—ಹವಿರ್ಲಕ್ಷಣಾನ್ನವನ್ನು ತರುವವರಾಗಿ । **ವಿ ಚಯೇಮ**—(ಹವಿರಾದಿಗಳನ್ನು) ಒಟ್ಟಾಗಿ ಸೇರಿಸೋಣ । **ಭರೇ**—ದೇವಾಸುರ ಯುದ್ಧದಲ್ಲಿ (ದೇವತೆಗಳಿಗೆ ಯುದ್ಧಸಾಧನಗಳನ್ನು ಒದಗಿಸುವುದರಲ್ಲಿ) । **ಕೃತಂ**—ಕಾರ್ಯಸಾಧಕನಾದ (ನಿನ್ನನ್ನುದ್ದೇಶಿಸಿ) । (**ವಿ ಚಯೇಮ**—ಹವಿರಾದಿಗಳನ್ನು ಸಂಪಾದಿಸೋಣ).

॥ ಭಾವಾರ್ಥ ॥

ಸುಖವಿಶಿಷ್ಟನಾದ ಎಲೈ ಇಂದ್ರನೇ, ನಿನ್ನಿಂದ ಯುಕ್ತರಾಗಿ, (ಆದುದರಿಂದಲೇ) ನಿನ್ನಿಂದ ರಕ್ಷಿತರಾಗಿ, ನಾವು ಪ್ರಬಲಸೇನಾಯುತರಾದ ಶತ್ರುಗಳನ್ನು ಪರಾಜಯಗೊಳಿಸೋಣ; (ನಮ್ಮ)ನ್ನಾಕ್ರಮಿಸಲು ಬರುವ ಶತ್ರುಗಳನ್ನು (ನಾವೇ) ಮೊದಲು ಸಂಧಿಸೋಣ. ಮೊದಲಿನಂತೆ ಸಮೃದ್ಧವಾದ ಈ ಯಜ್ಞದಲ್ಲಿ ಹೋಮಕಾಲವು ಸನ್ನಿಹಿತ ವಾಗಿರುವ ಈಗ ಅಭಿಷವಯುಕ್ತನಾದ ಯಜಮಾನನಿಗೆ ಪ್ರೋತ್ಸಾಹಕರವಾಗಿ ಮಾತನಾಡು; ಯುದ್ಧದಲ್ಲಿ ಜಯಕಾರಕನಾದ ನಿನ್ನನ್ನು (ಉದ್ದೇಶಿಸಿ) ಹವಿರಾದಿಗಳಿಂದ ನಿನ್ನನ್ನು ಉಪಚರಿಸುವ ನಾವು (ಹವಿರಾದಿಗಳನ್ನು) ಸಂಪಾದಿಸುತ್ತೇವೆ; ಅಸುರಜಯ ವಿಷಯದಲ್ಲಿ (ದೇವತೆಗಳಿಗೆ ಸಾಧನಗಳನ್ನೊದಗಿಸುವುದರಲ್ಲಿ) ಸಮರ್ಥನಾದ ನಿನ್ನನ್ನು (ಉದ್ದೇಶಿಸಿ ಹವಿರಾದಿಗಳನ್ನು ಸಂಪಾದಿಸುತ್ತೇವೆ).

## English Translation.

(Possessed of) former opulence, Maghavan, (through your bounty); protected, Indra, by you, may we overcome those who are arrayed in (hostile) hosts : may we anticipate (our) assailants. (The sacrifice) of to-day being nigh, speak encouragingly to the presenter of the libation : May we bring together at this rite (suitable offerings and praises) to you, the victor in war ; worshipping you, thc victor in war.

॥ ವಿಶೇಷವಿಷಯಗಳು ॥

**ಮಘವನ್—ಮಘಃ ಸೌಖ್ಯಂ ತದ್ವನ್ ಇಂದ್ರ ।** ಮಘ ಶಬ್ದವು **ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ** (ನಿ. ೧-೭) ದಾನಮಾಡು ಎಂಬ ಅರ್ಥವುಳ್ಳ ಮಂಹಧಾತುವಿನಿಂದ ನಿಷ್ಪನ್ನವಾದ ಮಘ ಶಬ್ದಕ್ಕೆ ಧನವೆಂದು ಅರ್ಥ. **ಮಘಂ ರೇಕ್ಣಃ** ಎಂದು ಇಪ್ಪತ್ತೆಂಟು ಧನನಾಮಗಳಲ್ಲಿ (ನಿ. ೩.೯) ಮಘ ಶಬ್ದವು ಪಠಿತವಾಗಿದೆ. ಸಾಯಣರು ಮಘ ಶಬ್ದಕ್ಕೆ ಸೌಖ್ಯವೆಂದು ಅರ್ಥವನ್ನು ಹೇಳಿ ಇಂದ್ರನು ಸುಖವನ್ನು ಹೊಂದಿರುವವನೆಂದು ಹೇಳಿದಾರೆ.

**ಇಂದ್ರತ್ವೋತಾಃ—ಅತಿಪ್ರಬಲೇನ ಇಂದ್ರೇಣ ತ್ವಯಾ ರಕ್ಷಿತಾಃ ।** ಇಂದ್ರ ಶಬ್ದಾರ್ಥವು **ಇರಾಂ ದೃಣಾತೀತಿ ವಾ** (ನಿ. ೧೦-೮) ಇತ್ಯಾದಿಯಾಗಿ ಅನೇಕ ವಿಧವಾಗಿ ಹಿಂದಿನ ಋಕ್ಕುಗಳಲ್ಲಿ ವಿವೃತವಾಗಿದೆ. ಇಲ್ಲಿ ಸಾಯಣರು ಇಂದ್ರನು ಬಹಳ ಬಲವುಳ್ಳವನಾಗಿರುವವನೆಂದೂ ಅವನಿಂದಲೇ ಋತ್ವಿಜರೇ ಮೊದಲಾದವರು ರಕ್ಷಣೆಯನ್ನು ಹೊಂದಿರುವವರೆಂದೂ ವರ್ಣಿಸಿದೆ.

**ಪೃತನ್ಯತಃ ಸಸಹ್ಯಾಮ—ಪ್ರಬಲಸೇನಾಯುಕ್ತಾನ್ ಶತ್ರೂನ್ ಅಭಿಭವೇಮ । ಪೃತನಾ** ಶಬ್ದವು (ನಿ. ೩. ೬) ಸಂಗ್ರಾಮನಾಮಗಳಲ್ಲಿ ಪಠಿತವಾಗಿದೆ. ಸಂಗ್ರಾಮಕ್ಕೆ ಅತ್ಯವಶ್ಯಕವಾಗಿ ಬೇಕಾಗುವ ಮುಖ್ಯವಾದ ಸಾಧನವನ್ನೂ ವಿವಕ್ಷೆಮಾಡಿರುವುದರಿಂದ ಪೃತನಾಶಬ್ದವು ಸೇನಾವಾಚಕವಾಗಿದೆಯೆಂದು ಸಾಯಣರು ಅರ್ಥವನ್ನು ವಿವರಿಸಿ, **ಪೃತನಾಂ ಆತ್ಮನ ಇಚ್ಛತಿ** ಸೇನೆಯನ್ನು ಬಹಳವಾಗಿ ಅಪೇಕ್ಷಿಸುವ ಶತ್ರುಗಳೆಂದು **ಪೃತನ್ಯತಃ** ಎಂಬ ಶಬ್ದಕ್ಕೆ ಅರ್ಥಮಾಡಿ ಇಂದ್ರನಿಂದ ರಕ್ಷಿತರಾಗಿರುವ ಯಜಮಾನರು ಪ್ರಬಲರಾದ ಶತ್ರುಗಳಿಂದ ತಿರಸ್ಕಾರವನ್ನು ಹೊಂದದೆ ಬಲಿಷ್ಠರಾದ ಶತ್ರುಗಳನ್ನು ತಿರಸ್ಕರಿಸುವವರೆಂದು ಅರ್ಥವನ್ನು ಹೇಳಿದ್ದಾರೆ

**ವನುಷ್ಯತಃ ವನುಯಾಮ**—ಈ ವಾಕ್ಯದಿಂದ ಶತ್ರುಗಳು ಪ್ರಹರಿಸುವುದಕ್ಕಾಗಿ ಬರುವುದಕ್ಕಿಂತ ಮೊದಲೇ ಅವರನ್ನು ಇಂದ್ರನಿಂದ ರಕ್ಷಿತರಾದ ಯಜಮಾನರೂ ಋತ್ವಿಜರೂ ಓಡಿಸುವರೆಂದು ಇಂದ್ರನ ಶಕ್ತಿಯ ಮಹಿಮೆಯನ್ನು ವರ್ಣಿಸಿದೆ.

**ನು—ತಂ ಹವಿಷ್ಪ್ರದಂ ಯಜಮಾನಂ ಯಜ್ಞಂ ವಾ ಕ್ಷಿಪ್ರಮಧಿಕಂ ಬ್ರೂಹಿ ।** ನಿರುಕ್ತಕಾರರು **ನು ಇತ್ಯೇಷೋಽನೇಕಕರ್ಮಾ**—ನು ಎಂಬ ನಿಪಾತವು ಅನೇಕಾರ್ಥಗಳನ್ನೂ ಬೋಧಿಸುವುದು (ನಿ. ೧-೪) ಎಂದು ಹೇಳಿರುವರು. ನು, ಮಂಕ್ಷು ಎಂಬ ಇಪ್ಪತ್ತಾರು ಕ್ಷಿಪ್ರನಾಮಗಳಲ್ಲಿ (ನಿ. ೩-೯) ಪಠಿತವಾಗಿರುತ್ತದೆ. ಮತ್ತು-

**ಇದಂ ನು ಕರಿಷ್ಯತೀತಿ ಹೇತ್ವಪದೇಶೇ । ಕಥಂ ನು ಕರಿಷ್ಯತೀತ್ಯನುಪೃಷ್ಟೇ । ನನ್ವೇತದಕಾರ್ಷೀದಿತಿ ಚ ।** **ಇದಂ ನು ಕರಿಷ್ಯತಿ** ಎಂಬ ವಾಕ್ಯದಲ್ಲಿ ನು ಎಂಬುದು ಕ್ರಿಯೆಯು ಉಂಟಾಗಲು ತಕ್ಕ ಕಾರಣವಾದದ್ದನ್ನು ಬೋಧಿಸುತ್ತದೆ. **ಕಥಂ ನು ಕರಿಷ್ಯತಿ** ಎಂಬ ವಾಕ್ಯದಲ್ಲಿಯೂ ಅನು ಪ್ರಶ್ನವಾಚಕವಾಗಿರುವುದು. **ಅಥಾಪಿ ಉಪಮಾರ್ಥೇ ಭವತಿ** ಮತ್ತು **ನು** ಎಂಬುದು ಉಪಮಾರ್ಥದಲ್ಲಿಯೂ ಪ್ರಯುಕ್ತವಾಗಿರುತ್ತದೆ.

**ಅಕ್ಷೋ ನ ಚಕ್ರ್ಯೋಃ ಶೂರ ಬೃಹನ್ಪ್ರ ತೇ ಮಹ್ನಾ ರಿರಿಚೇ ರೋದಸ್ಯೋಃ ।**
**ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂ೩ ತಯೋ ರುರುಹುರಿಂದ್ರ ಪೂರ್ವೀಃ ॥**

(ಋ. ಸಂ. ೬-೨೪-೩)

ಎಂಬ ಈ ಋಕ್ಕಿನಲ್ಲಿ **ವೃಕ್ಷಸ್ಯ ನು** ಎಂಬ ಪದಕ್ಕೆ **ವೃಕ್ಷಸ್ಯೇವ** ಎಂದು ಉಪಮಾರ್ಥವನ್ನು ಹೇಳಿದೆ ಎಂದು ವಿವರಿಸಿದ್ದಾರೆ. ಸಾಯಣರು ಕ್ಷಿಪ್ರ-ಜಾಗ್ರತೆ ಎಂಬ ಅರ್ಥವನ್ನು ವಿವರಿಸಿ ಹವಿಸ್ಸನ್ನು ಅರ್ಪಿಸುವ ಯಜಮಾನನನ್ನಾಗಲಿ ಯಜ್ಞವನ್ನಾಗಲಿ ಇಂದ್ರನು ಮಹತ್ತರವೆಂದು ಹೇಳಬೇಕೆಂದು ಆಶಿಸಿದೆ ಎಂದು ಅರ್ಥವನ್ನು ಮಾಡಿದ್ದಾರೆ.

**ಭರೇ ಕೃತಂ ವಾಜಯಂತಃ ವಿಚಯೇಮ—ಸಂಗ್ರಾಮೇ ಜಯಸ್ಯ ಕರ್ತಾರಂ ತ್ವಾಮುದ್ದಿಶ್ಯ ಹವಿರ್ಲಕ್ಷಣಾನ್ನಂ ಉಪಾಚರಂತಃ ಸ್ತೋತ್ರಾದಿಕಂ ಹವಿರಾದಿಕಂ ವಾ ವಿಚಿನುಯಾಮ ।** ನಿರುಕ್ತಕಾರರು **ಭರ ಇತಿ ಸಂಗ್ರಾಮನಾಮ ಭರತೇರ್ಹರತೇರ್ವಾ** (ನಿ. ೪-೨೪) ಎಂದು ವಿವರಿಸಿದ್ದಾರೆ, ದುರ್ಗಾಚಾರ್ಯರು **ಭ್ರಿಯಂತೇ ತಸ್ಮಿನ್ ಯೋದ್ಧಾರಃ** ಶೂರರಾದವರು ಪೋಷಣೆಯನ್ನು ಹೊಂದುವ ಸನ್ನಿವೇಶವೂ, **ಹ್ರಿಯಂತೇ ಹಿ ತಸ್ಮಿನ್ ಜೀವಿತಾನಿ ವಸೂನಿ ಚ** ಪ್ರಾಣಗಳೂ ಮತ್ತು ಧನವೂ ನಾಶವಾಗುವ ಸನ್ನಿವೇಶವು ಯುದ್ಧವಾದುದರಿಂದ ಭರ ಶಬ್ದಕ್ಕೆ ಸಂಗ್ರಾಮವೆಂದು ಅರ್ಥವನ್ನು ಹೇಳಿದ್ದಾರೆ. ಯುದ್ಧವು ಪ್ರಾಪ್ತವಾದಾಗ ಜಯವನ್ನು ಉಂಟುಮಾಡುವ ಇಂದ್ರನಿಗಾಗಿ ಯಜಮಾನರು ಹವಿಸ್ಸಿನ ರೂಪವಾದ ಅನ್ನವನ್ನು ಅಥವಾ ಸ್ತೋತ್ರವೇ ಮೊದಲಾದವುಗಳನ್ನೂ ಅರ್ಪಿಸುತ್ತಾರೆ ಎಂದು ಅರ್ಥ. **ವಾಜ** ಶಬ್ದಕ್ಕೆ **ಅನ್ನ, ಉದಕ, ಸಂಗ್ರಾಮ** ಎಂದೂ ಅರ್ಥವನ್ನು ನಿರುಕ್ತಕಾರರು ಹೇಳಿದ್ದಾರೆ. ಇಲ್ಲಿ ಸಾಯಣರು ಸ್ತೋತ್ರವೆಂಬ ಅರ್ಥವನ್ನು ವಿವರಿಸಿದ್ದಾರೆ.

ಭರಶಬ್ದವು ಎರಡಾವರ್ತಿ ಪ್ರಯುಕ್ತವಾಗಿರುವುದರಿಂದ ಎರಡನೆಯ ಅರ್ಥದಲ್ಲಿ ದೇವತೆಗಳಿಗೂ, ಅಸುರರಿಗೂ ಯುದ್ಧವು ಪ್ರಾಪ್ತವಾದಾಗ ದೇವತೆಗಳಿಗೆ ಜಯವು ಲಭಿಸುವುದಕ್ಕೂ, ಅಥವಾ ದೇವತೆಗಳನ್ನು ರಕ್ಷಿಸುವುದಕ್ಕೂ ಇಂದ್ರನು ಉದ್ಯುಕ್ತನಾಗಿರುವನು ಎಂದು ಅರ್ಥವನ್ನು ಹೇಳಿರುವರು.

ಕೃತ ಎಂಬ ಪದವು ಡುಕೃಞ್ ಕರಣೇ ಎಂಬ ಧಾತುವಿನಿಂದ ಕ್ತ ಪ್ರತ್ಯಯಾಂತವಾಗಿ ನಿಷ್ಪನ್ನವಾಗಿದೆ. ಇದಕ್ಕೆ ಸಾಯಣರು ಕರ್ತಾ ಎಂದು ಅರ್ಥವನ್ನು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಪೂರ್ವ್ಯೇ**—ಪೂರ್ವೇ ಭವಂ. **ಭವೇ ಛಂದಸಿ** ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಇಂದ್ರತ್ವೋತಾಃ**—ಇಂದ್ರೇಣ ತ್ವಯಾ ಊತಾಃ ಇಂದ್ರತ್ವೋತಾಃ **ಪ್ರತ್ಯಯೋತ್ತರಪದಯೋಶ್ಚ** (ಪಾ. ಸೂ. ೭-೨-೯೮) ಎಂಬುದರಿಂದ ಉತ್ತರಪದ ಪರವಾದಾಗ ಮಪರ್ಯಂತಕ್ಕೆ ತ್ವಾದೇಶ. ಛಾಂದಸವಾಗಿ ಆತ್ವ

ಬರುತ್ತದೆ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸಾಸಹ್ಯಾಮ**—ಷಹ ಮರ್ಷಣೇ. ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಲಿಙ್ ಉತ್ತಮಪುರುಷ ಏಕವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಸಕಾರಕ್ಕೆ ಲೋಪ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಪ್ರತ್ಯಯಕ್ಕೆ ಯಾಸುಟಾಗಮ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಛಾಂದಸವಾಗಿ ಅಭ್ಯಾಸಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಪೃತನ್ಯತಃ**—ಪೃತನಾಂ ಆತ್ಮನಃ ಇಚ್ಛತಿ ಪೃತನ್ಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಸನಾದ್ಯಂತಾ ಧಾತವಃ** (ಪಾ. ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞಾ ಬರುವುದರಿಂದ **ಸುಪೋ ಧಾತುಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂಬುದರಿಂದ ಸುಪಿಗೆ (ಅಮ್) ಲುಕ್. **ಕ್ಯಚಿ ಚ** (ಪಾ. ಸೂ. ೭-೪-೩೩) ಎಂದು ಅನುವೃತ್ತವಾಗುವಾಗ **ಕವ್ಯಧ್ವರಪೃತನ**—(ಪಾ. ಸೂ. ೭-೪-೩೯) ಎಂಬುದರಿಂದ ಆಕಾರಲೋಪ. ಪೃತನ್ಯ ಎಂಬುದು ಧಾತುವಾಗುತ್ತದೆ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ. ಇದರ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಶಪ್ ವಿಕರಣ. ದ್ವಿತೀಯಾ ಬಹುವಚನಾಂತರೂಪ. ನುಮ್ ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ವನುಯಾಮ**—ವನ ಸಂಭಕ್ತೌ. ಧಾತು. ಲಿಙ್ ಉತ್ತಮಪುರುಷ ಬಹುವಚನಾಂತರೂಪ. ಛಾಂದಸವಾಗಿ ನಿಘಾತಸ್ವರ ಬರುವುದಿಲ್ಲ. ಯಾಸುಟ್ ಉದಾತ್ತವೆಂದುದರಿಂದ ಯಕಾರೋತ್ತರಾಕಾರ ಉದಾತ್ತವಾಗುತ್ತದೆ.

**ವನುಷ್ಯತಃ**—ಇದು ಅನೇಕಾರ್ಥಕವಾದ ಧಾತು. **ಲೃಟಃ ಸದ್ವಾ** (ಪಾ. ಸೂ. ೩-೩-೧೪) ಎಂಬುದರಿಂದ ಶತೃಪ್ರತ್ಯಯ. ದ್ವಿತೀಯಾ ಬಹುವಚನಾಂತರೂಪ. **ಶತುರನುಮೋನದ್ಯಜಾದೀ** ಸೂತ್ರದಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ನೇದಿಷ್ಠೇ**—ಅತಿಶಯಾರ್ಥ ತೋರುವಾಗ ಇಷ್ಠನ್ ಪ್ರತ್ಯಯ. **ಅಂತಿಕಬಾಢಯೋರ್ನೇದಸಾಧೌ** (ಪಾ. ಸೂ. ೫-೩-೬೩) ಎಂಬುದರಿಂದ ಅಂತಿಕಶಬ್ದಕ್ಕೆ ನೇದಾದೇಶ. ಟಿಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವೋಚ**—ವಚ ಪರಿಭಾಷಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ವ್ಯತ್ಯಯದಿಂದ ಅಙ್ ಬರುತ್ತದೆ. ಅಙ್ ಪರವಾದಾಗ **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಉಮಾಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಗುಣ. **ಅತೋಹೇಃ** ಎಂಬುದರಿಂದ ಹಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

**ಸುನ್ವತೇ**—ಷುಞ್ ಅಭಿಷವೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶ್ನು ವಿಕರಣ. ಚತುರ್ಥೀ ಏಕವಚನಾಂತರೂಪ. **ಶತುರನುಮೋ**—ಎಂಬುದರಿಂದ ವಿಭಕ್ತಿಗೆ ಉದಾತ್ತರ ಬರುತ್ತದೆ.

**ಚಯೇಮ**— ಚಿಞ್ ಚಯನೇ. ಧಾತು. ಸ್ವಾದಿ. ಲಿಙ್ ಉತ್ತಮಪುರುಷ ಬಹುವಚನ ಪರವಾದಾಗ **ವ್ಯತ್ಯಯೋ ಬಹುಲಂ** ಎಂಬುದರಿಂದ ಶಪ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ, ಅಯಾದೇಶ. ಪ್ರತ್ಯಯಕ್ಕೆ ಯಾಸುಟಾಗಮ. ಅದಕ್ಕೆ ಇಯಾದೇಶ. ಯಲೋಪ. ಗುಣ. ತಿಙಂತನಿಘಾತಸ್ವರ ಬರುತ್ತದೆ.

**ವಾಜಯಂತಃ**—ಆತ್ಮೇಚ್ಛಾದಲ್ಲಿ ವಾಜ ಶಬ್ದದ ಮೇಲೆ ಕ್ಯಚ್ ಬಂದಾಗ ಅದರ ಮೇಲೆ ಲಟಿಗೆ ಶತ್ರಾದೇಶ. ಪ್ರಥಮಾ ಬಹುವಚನಾಂತರೂಪ. ॥ ೧ ॥

॥ ಸಂಹಿತಾಪಾಠಃ ॥

ಸ್ವರ್ಜೇಷೇ ಭರ ಆಪ್ರಸ್ಯ ವಕ್ಮನ್ಯುಷರ್ಬುಧಃ ಸ್ವಸ್ಮಿನ್ನಂಜಸಿ ಕ್ರಾಣಸ್ಯ ಸ್ವಸ್ಮಿನ್ನಂಜಸಿ ।
ಅಹನ್ನಿಂದ್ರೋ ಯಥಾ ವಿದೇ ಶೀರ್ಷ್ಣಾಶೀರ್ಷ್ಣೋಪವಾಚ್ಯಃ ।
ಅಸ್ಮತ್ರಾ ತೇ ಸಧ್ರ್ಯಕ್ ಸಂತು ರಾತಯೋ ಭದ್ರಾ ಭದ್ರಸ್ಯ ರಾತಯಃ ॥

॥ ಪದಪಾಠಃ ॥

ಸ್ವಃಽಜೇಷೇ । ಭರೇ । ಆಪ್ರಸ್ಯ । ವಕ್ಮನಿ । ಉಷಃಽಬುಧಃ । ಸ್ವಸ್ಮಿನ್ । ಅಂಜಸಿ । ಕ್ರಾಣಸ್ಯ । ಸ್ವಸ್ಮಿನ್ । ಅಂಜಸಿ ।
ಅಹನ್ । ಇಂದ್ರಃ । ಯಥಾ । ವಿದೇ । ಶೀರ್ಷ್ಣಾಽಶೀರ್ಷ್ಣಾ । ಉಪಽವಾಚ್ಯಃ ।
ಅಸ್ಮಽತ್ರಾ । ತೇ । ಸಧ್ರ್ಯಕ್ । ಸಂತು । ರಾತಯಃ । ಭದ್ರಾಃ । ಭದ್ರಸ್ಯ । ರಾತಯಃ ॥ ೨ ॥

॥ ಸಾಯಣಭಾಷ್ಯಂ ॥

ಅಯಮಿಂದ್ರಃ ಸ್ವರ್ಜೇಷೇ ಸ್ವರ್ಗಗಮನಸಾಧನೇ ಭರೇ ಸಂಗ್ರಾಮೇ । ಯುದ್ಧ ಅಭಿಮುಖ್ಯೇನ ಹತಸ್ಯ ಸ್ವರ್ಗೋ ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲಭೇದಿನೌ । ಪರಾ. ೩-೨೫ । ಇತ್ಯಾದಿ-ಸ್ಮೃತಿಷು ಪ್ರಸಿದ್ಧಃ । ಆಪ್ರಸ್ಯಾಪನಶೀಲಸ್ಯ ಶತ್ರುವಧಾಯೇತಸ್ತತೋ ವ್ಯಾಪ್ತಸ್ಯ ॥ ಔಣಾದಿಕೋ ರಃ ॥ ಶೂರಸ್ಯ ವರ್ತ್ಮನಿ ಮಾರ್ಗಭೂತೇ ಸ್ವಸ್ಮಿನ್ ಸ್ವಭೂತೇಽಂಜಸ್ಯಭಿವ್ಯಕ್ತಿಮತಿ ಕಪಟಾದಿರಹಿತೇ । ಪುನಃ ಸ ಏವ ವಿಶೇಷ್ಯತೇ । ಸ್ವಸ್ಮಿನ್ನಂಜಸಿ ಸ್ವಕೀಯೇಽಂಜಸಿ ಮುಖ್ಯೇ ಮಹತಿ ಸಂಗ್ರಾಮೇ । ಯುದ್ಧಾ ।

ಸ್ವಸ್ಮಿನ್ನಂಜಸಿ ಶತ್ರೌ ಸ್ವಯಮೇವಾಪ್ರಚ್ಛನ್ನತ್ವೇನಾಗತೇ ಸತಿ । ಅಹನ್ । ಶತ್ರೂನ್ ಹಿನಸ್ತಿ । ಕಸ್ಯ ಸಂಗ್ರಾಮ ಇತಿ ತದುಚ್ಯತೇ। ಆಪ್ರಸ್ಯಾಪನಶೀಲಸ್ಯ ಆ ಸಮಂತಾದಿಂದ್ರಸ್ಯ ಪ್ರೀಣಯಿತುರ್ವಾ ಉಷರ್ಬುಧ ಉಷಃಕಾಲೇಽನುಷ್ಠಾನಾಯ ಪ್ರಬುಧ್ಯಮಾನಸ್ಯ ಕ್ರಾಣಸ್ಯ ಯಾಗಂ ಕುರ್ವಾಣಸ್ಯ ॥ ಕರೋತೇಃ ಶತರಿ ಛಾಂದಸಃ ಶಪೋ ಲುಕ್ ॥ ಅಸ್ಯ ಯಜಮಾನಸ್ಯ ಶತ್ರೂನಹನ್ । ಹಿನಸ್ತಿ । ಅತಃಕಾರಣಾದಯಮಿಂದ್ರಃ ಶೀರ್ಷ್ಣಾಶೀರ್ಷ್ಣೋಪವಾಚ್ಯಃ । ಸರ್ವೇಷಾಂ ಶಿರಸಾ ಪ್ರಣಮ್ಯಃ ಸ್ತುತ್ಯಃ ॥ ಶೀರ್ಷಂಶ್ಛಂದಸಿ । ಪಾ. ೬-೧-೬೦ । ಇತ್ಯುದಾತ್ತನಿವೃತ್ತಿಸ್ವರೇಣಾಂತೋದಾತ್ತತ್ವಂ ।: ನಿತ್ಯವೀಪ್ಸಯೋರಿತಿ ದ್ವಿರ್ಭಾವಃ ॥ ತತ್ರ ದೃಷ್ಟಾಂತಃ । ಯಥಾ ವಿದೇ ಸರ್ವಜ್ಞಾಯ ಶಿರಸಾ ಪ್ರಣತಿಃ ಕ್ರಿಯತೇ ಸ್ತೂಯತೇ ಚ ತದ್ವದೇನಮಿತ್ಯರ್ಥಃ। ಯದ್ವಾ । ಯಥಾ ವಿದೇ ಯೇನ ಪ್ರಕಾರೇಣ ಹಂತವ್ಯಂ ಶತ್ರುಂ ಜಾನಾಸಿ ತಂ ತಂ ಪ್ರಹಂಸಿ ॥ ವೇತ್ತೇ-ರ್ವ್ಯತ್ಯಯೇನಾತ್ಮನೇಪದಂ । ಪುರುಷವ್ಯತ್ಯಯಃ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥ ಅಥವಾ। ಯಥಾ ವಿದೇ ಯಂ ಯಂ ವಿಂದಸೇ ಲಭಸೇ ಶತ್ರುಂ ತಂ ತಂ ಮಾರಯಸಿ । ಅತಃ ಕಾರಣಾತ್ಸ್ತುತ್ಯ ಇತ್ಯರ್ಥಃ ॥ ಅಸ್ಮಿನ್ಪಕ್ಷೇ ಛಾಂದಸೋ ವಿಕರಣಸ್ಯ ಲುಕ್ । ಪೂರ್ವವತ್ತಲೋಪಃ ॥ ಕಿಂಚ ಹೇ ಇಂದ್ರ ತೇ ರಾತಯಸ್ತವ ಸಂಬಂಧೀನಿ ಧನಾನಿ ದಾನಾನ್ಯಸ್ಮತ್ರಾಸ್ಮಾಸ್ವೇವ ಸಧ್ರ್ಯಕ್ ಸಹೈಕೋ-ದ್ಯೋಗೇನ ಸಂತು । ಭವಂತು ॥ ಸಹಪೂರ್ವಾದಂಚತೇಋತ್ವಿಗಿತ್ಯಾದಿನಾ ಕ್ವಿನ್ । ಸಹಸ್ಯ ಸಧ್ರಿರಿತಿ ಸಧ್ರ್ಯಾದೇಶಃ । ಅದ್ರಿಸಧ್ರ್ಯೋರಂತೋದಾತ್ತನಿಪಾತನಂ ಕೃತ್ಸ್ವರನಿವೃತ್ತ್ಯರ್ಥಮಿತಿ ಸ ಚಾಂತೋ-ದಾತ್ತಃ । ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತಃ ॥ ಕಿಂಚ ಭದ್ರಸ್ಯ ಸ್ತುತ್ಯಸ್ಯ ರಾತಯೋಽಸ್ಮಾಸು ದತ್ತಾನಿ ದಾನಾನಿ ಭದ್ರಾ ಅತಿಸ್ಥಿರಾಣಿ ಸಂತು ॥

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ಸ್ವರ್ಜೇಷೇ**—ಸ್ವರ್ಗಗಮನಕ್ಕೆ ಸಾಧನವಾದ । **ಭರೇ**—ಸಂಗ್ರಾಮದಲ್ಲಿ । **ಆಪ್ರಸ್ಯ**—(ಶತ್ರುವಧಕ್ಕಾಗಿ) ಸುತ್ತಲೂ ಓಡಾಡುತ್ತಿರುವ ಶೂರನ । **ಸ್ವಸ್ಮಿನ್**—(ಅವನಿಗೆ) ಅನುರೂಪವಾದುದೂ । **ಅಂಜಸಿ**—ನೇರವಾದುದೂ ಆದ । **ವರ್ತ್ಮನಿ**—ಮಾರ್ಗದಲ್ಲಿ (ಎಂದರೆ) । **ಸ್ವಸ್ಮಿನ್ನಂಜಸಿ**—ಇಂದ್ರನಿಗೆ ಯೋಗ್ಯವಾದುದೂ ಮತ್ತು ಪ್ರತ್ಯಕ್ಷವಾಗಿ ಶತ್ರುವನ್ನು ಎದುರಿಸತಕ್ಕದ್ದೂ ಆದ ಮಹತ್ತಾದ ಸಂಗ್ರಾಮ ಮಾರ್ಗದಲ್ಲಿ । **ಉಷರ್ಬುಧಃ**—ಉಷಃಕಾಲದಲ್ಲಿ ಎಚ್ಚರಗೊಳ್ಳುವವನೂ । **ಕ್ರಾಣಸ್ಯ**—ಯಜ್ಞಮಾಡತಕ್ಕವನೂ ಆದ ಯಜಮಾನನ (ಶತ್ರುಗಳನ್ನು) । **ಅಹನ್**—ಕೊಲ್ಲುತ್ತಾನೆ (ಅದೇ ಇಂದ್ರನು) । **ಯಥಾ ವಿದೇ**—ತತ್ತ್ವಜ್ಞನಾದ ಮಹಾಪುರುಷನಿಗೆ (ತಲೆಬಾಗಿ ನಮಸ್ಕಾರ ಮಾಡುವಂತೆ) । **ಶೀರ್ಷ್ಣಾಶೀರ್ಷ್ಣಾ**—ಪ್ರಣಾಮಪೂರ್ವಕವಾದ ನಮಸ್ಕಾರಗಳಿಂದ । **ಉಪವಾಚ್ಯಃ**—ಸ್ತುತಿಸಲ್ಪಡತಕ್ಕವನಾಗಿದ್ದಾನೆ (ಎಲೈ ಇಂದ್ರನೇ) । **ಅಸ್ಮತ್ರಾ**—ನಮ್ಮ ರಕ್ಷಕಗಳಾದ । **ತೇ**—ನಿನ್ನ । **ರಾತಯಃ**—ಧನಗಳು । **ಸಧ್ರ್ಯಕ್**—ಒಟ್ಟುಗೂಡಿಕೊಂಡು । **ಸಂತು** - ಇರಲಿ । **ಭದ್ರಸ್ಯ**—ಕಲ್ಯಾಣಾತ್ಮಕನಾದ ನಿನ್ನ । **ರಾತಯಃ**—ಧನಗಳು । **ಭದ್ರಾಃ**—ಮಂಗಳಕರಗಳಾಗಿಯೂ ಮತ್ತು ಸ್ಥಿರವಾಗಿ ನಿಲ್ಲತಕ್ಕವಾಗಿಯೂ (ಇರಲಿ).

॥ ಭಾವಾರ್ಥ ॥

ಸ್ವರ್ಗಗಮನಕ್ಕೆ ಸಾಧನವಾದ ಸಂಗ್ರಾಮದಲ್ಲಿ ಇಂದ್ರನು ಪರಾಕ್ರಮಿಗೆ ಯೋಗ್ಯವಾದುದೂ, ಪ್ರತ್ಯಕ್ಷವಾಗಿ ಶತ್ರುವನ್ನು ಎದುರಿಸಬಲ್ಲುದೂ ಆದ ನೇರವಾದ ಮಾರ್ಗದಲ್ಲಿ ಹೋಗಿ, ಉಷಃಕಾಲದಲ್ಲಿಯೇ ಎದ್ದು ಯಾಗಾದಿಗಳನ್ನು

ಮಾಡತಕ್ಕ ಯಜಮಾನರ ಶತ್ರುಗಳನ್ನೆಲ್ಲಾ ನಾಶಮಾಡುತ್ತಾನೆ. ಆದ್ದರಿಂದಲೇ ತತ್ತ್ವಜ್ಞನಾದ ಮಹಾಪುರುಷನಿಗೆ ನಮಸ್ಕಾರಮಾಡಿ ಪ್ರಶಂಸೆಯನ್ನರ್ಪಿಸುವಂತೆ ಇಂದ್ರನಿಗೂ ಸಹ ಪ್ರಣಾಮಪೂರ್ವಕವಾದ ಸ್ತುತಿಯನ್ನರ್ಪಿಸಬೇಕು ಎಲೈ ಇಂದ್ರನೇ, ನಮ್ಮ ರಕ್ಷಕವಾದ ನಿನ್ನ ಧನಗಳೆಲ್ಲವೂ ಒಟ್ಟುಗೂಡಿಕೊಂಡು ನಮ್ಮಲ್ಲಿರಲಿ. ಮತ್ತು ಕಲ್ಯಾಣಾತ್ಮಕನಾದ ನಿನ್ನ ಧನಗಳೆಲ್ಲವೂ ನಮಗೆ ಮಂಗಳವನ್ನುಂಟುಮಾಡುತ್ತಾ ನಮ್ಮಲ್ಲಿಯೇ ಸ್ಥಿರವಾಗಿರಲಿ.

## English Translation·

In the combat which secures haven, Indra, (treading) in the appropriate and straight path of the active (combatant), as well as in his own appropriate and straight (path), destroys (the adversary) of him who wakes at dawn and celebrates (pious rites); he is therefore to be adored with the head (bowed down), as reverence is paid by prostration to a holy sage. May your treasures, (Indra), be accumulated upon us; may the treasures of you who are auspicious be auspicious (to us).

॥ ವಿಶೇಷವಿಷಯಗಳು ॥

**ಸ್ವರ್ಜೇಷೇ ಭರೇ—ಸ್ವರ್ಗಗಮನಸಾಧನೇ ಸಂಗ್ರಾಮೇ** । ಯುದ್ಧವು ಪ್ರಾಪ್ತವಾದಾಗ ಶೂರನಾದವನು ತನ್ನ ಪ್ರಾಣದ ಆಸೆಯನ್ನು ತೊರೆದು ಶತ್ರುಗಳೊಡನೆ ಯುದ್ಧಮಾಡುವುದರಿಂದ ಸ್ವರ್ಗವನ್ನು ಹೊಂದುವನು ಎಂದೂ, ಸ್ಮೃತಿಕಾರರು ಹೇಳುವಪ್ರಕಾರ ಯುದ್ಧವು ಸ್ವರ್ಗವನ್ನು ಪಡೆಯಲು (ಸಾಧನ) ತಕ್ಕ ಸನ್ನಿವೇಶವೆಂದೂ ಅರ್ಥ ಮಾಡಿದೆ. **ಭರೇ** ಎಂಬ ಪದಕ್ಕೆ ಸಂಗ್ರಾಮ ಎಂಬ ಅರ್ಥವನ್ನು ನಿರುಕ್ತಕಾರರು **ಭರತೇರ್ವಾ ಹರತೇರ್ವಾ** ಎಂಬುದಾಗಿ ರೂಪನಿರ್ವಚನಪೂರ್ವಕವಾಗಿ (ನಿ. ೪-೨೪) ವಿವರಿಸಿದ್ದಾರೆ. ಶೂರನು ಯುದ್ಧಮಾಡುವಾಗ ಯುದ್ಧದಲ್ಲಿ ಪ್ರಾಣವನ್ನು ಕಳೆದುಕೊಂಡರೆ ವೀರಸ್ವರ್ಗವು ಪ್ರಾಪ್ತವಾಗುವುದು ಎಂದು ಪರಾಶರಸ್ಮೃತಿಯಲ್ಲಿ ಉಕ್ತವಾಗಿರುತ್ತದೆ.

**ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲಭೇದಿನೌ ।**
**ಪರಿವ್ರಾಡ್ಯೋಗಯುಕ್ತಶ್ಚ ರಣೇ ಚಾಭಿಮುಖೋ ಹತಃ ॥**

(ಪರಾಶರಸ್ಮೃತಿ ೩-೨೫)

ತನ್ನ ಪ್ರಾಣದಲ್ಲಿ ಆಸೆಯಿಲ್ಲದೆ ಯೋಗಾಭ್ಯಾಸದಿಂದ ಪ್ರಾಣವನ್ನು ಕಳೆದುಕೊಳ್ಳುವ ಯತಿಯೂ, ಯುದ್ಧದಲ್ಲಿ ಹಿಮ್ಮೆಟ್ಟದೆ ಶತ್ರುಗಳೊಡನೆ ಯುದ್ಧವನ್ನು ಮಾಡಿ ಮೃತಿಯನ್ನು ಹೊಂದುವ ವೀರನೂ, ಇವರಿಬ್ಬರೂ ಬಹಳ ಉತ್ತಮವಾದ ಗತಿಯನ್ನು ಹೊಂದುವರು. ಅಂದರೆ ಸೂರ್ಯಮಂಡಲವನ್ನೂ ಭೇದಿಸುವರು. ಎಂದು ಯುದ್ಧವು ಸ್ವರ್ಗಪ್ರದವಾಗಿರುವುದನ್ನು ವಿಮರ್ಶೆಮಾಡಿ ಹೇಳಿರುವುದು ಇಂದ್ರನು ಈ ಪ್ರಕಾರವಾಗಿರುವ ವೀರರಿಗೆ ಸ್ವರ್ಗವನ್ನು ಉಂಟುಮಾಡುವನೆಂದು ಅರ್ಥ.

**ಆಪ್ರಸ್ಯ—ಆಪನಶೀಲಸ್ಯ** । ಶತ್ರುವಿನೊಡನೆ ಯುದ್ಧಮಾಡುವಾಗ ವೀರನು ಜಯವನ್ನು ಹೊಂದುವುದಕ್ಕಾಗಿ ಅಲ್ಲಲ್ಲಿ ರಣರಂಗದಲ್ಲಿ ಸಂಚರಿಸುವ ಸ್ವಭಾವದಿಂದ ಇರುವನು ಎಂದೂ, ತನ್ನ ಪರಾಕ್ರಮದಿಂದ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವನು ಎಂದೂ ಅರ್ಥವನ್ನು ಹೇಳಿದೆ. ನಿರುಕ್ತಕಾರರು—

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**
**ಆಪ್ರಾ ದ್ಯಾವಾ ಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**
(ಋ. ಸಂ. ೧-೧೧೫-೧)

ಈ ಋಕ್ಕನ್ನು ಉದಹರಿಸಿ **ಆಪ್ರಾಃ** ಎಂಬ ಶಬ್ದಕ್ಕೆ **ಆಪೂಪುರತ್ ದ್ಯಾವಾಪೃಥಿವ್ಯೌ ಅಂತರಿಕ್ಷಂ ಚ ಮಹತ್ತ್ವೇನ ।** ಸೂರ್ಯನು ತನ್ನ ಮಹತ್ತ್ವದಿಂದ ದ್ಯಾವಾಪೃಥಿವಿಗಳನ್ನೂ ಅಂತರಿಕ್ಷವನ್ನೂ ವ್ಯಾಪಿಸಿರುವನು ಎಂದು ಅರ್ಥವನ್ನು ಮಾಡಿರುತ್ತಾರೆ. ಸಾಯಣರೂ ಸಹ ಇಲ್ಲಿ **ಆಪ್ರಸ್ಯ** ಎಂಬ ಪದಕ್ಕೆ **ಶತ್ರುವಧಾಯ ಇತಸ್ತತಃ ವ್ಯಾಪ್ತಸ್ಯ** ಶತ್ರುವಿನ ವಧೆಗಾಗಿ ಯುದ್ಧದಲ್ಲಿ ವ್ಯಾಪಿಸಿರುವನು (ಓಡಾಡುತ್ತಿರುವನು) ಎಂದು ಅರ್ಥವನ್ನು ಹೇಳಿದ್ದಾರೆ.

**ಸ್ವಸ್ಮಿನ್ ಅಂಜಸಿ**—ಎಂಬ ಪದವು ಎರಡುಸಾರಿ ಪಠಿತವಾಗಿದೆ. ಅಂಜಸಿ ಎಂಬ ಪದವನ್ನು ವರ್ತ್ಮನಿ ಎಂಬುದಕ್ಕೆ ವಿಶೇಷಣವನ್ನಾಗಿ ಹೇಳಿ ಮೊದಲನೆಯ ಅರ್ಥವನ್ನು ವಿವರಿಸಿದೆ. ಈ ಅರ್ಥದಲ್ಲಿ **ಕಪಟಾದಿರಹಿತೇ**—ಶೂರನು ಯುದ್ಧಮಾಡುವ ಕ್ರಮವು ಕಪಟವಿಲ್ಲದ್ದಾಗಿ ಇರುತ್ತದೆ ಎಂದು ವರ್ಣಿಸಿದೆ. ಎರಡನೆಯ ಅರ್ಥದಲ್ಲಿ ಎರಡು ವಿಧವಾಗಿ ಅರ್ಥ ಮಾಡಿದೆ. **ಸ್ವಕೀಯೇ ಅಂಜಸಿ ಮುಖ್ಯೇ ಮಹತಿ ಸಂಗ್ರಾಮೇ । ಯದ್ವಾ ಶತ್ರೌ ಸ್ವಯಮೇವ ಅಪ್ರಚ್ಛನ್ನತ್ವೇನ ಆಗತೇ ಸತಿ ಶತ್ರೂನ್ ಹಿನಸ್ತಿ ॥** ಪ್ರಬಲವಾದ ಯುದ್ಧದಲ್ಲಿ ಅಥವಾ ಶತ್ರುವು ವೇಷಾಂತರದಿಂದ ತನ್ನ ಬರುವಿಕೆಯನ್ನು ಮರೆಮಾಡಿಕೊಳ್ಳದೆ ತಾನಾಗಿ ಎದುರಾದಾಗ ಎಂದೂ, ಈ ಎರಡುವಿಧದಲ್ಲಿಯೂ ಈ ಪದವು **ಭರೇ** ಎಂಬ ಪದಕ್ಕೆ ವಿಶೇಷಣವಾಗಿ ಅರ್ಥಮಾಡಿದೆ. ಈ ಅರ್ಥವೆಲ್ಲವೂ **ಆಪ್ರಸ್ಯ** ಎಂಬ ಪದವನ್ನು **ವರ್ತ್ಮನಿ** ಎಂಬ ಪದಕ್ಕೆ ವಿಶೇಷಣಮಾಡಿ ವ್ಯಾಪಕನಾದ ಶೂರನ ಮಾರ್ಗವೆಂಬ ಅರ್ಥದಲ್ಲಿ ಸರಿಹೋಗುತ್ತದೆ ಎಂದು ನಿರ್ದೇಶಮಾಡಿದೆ.

ಆಪ್ರಸ್ಯ ಎಂಬ ಪದಕ್ಕೆ ಆಪ್ನೋತೀತಿ ಆಪ್ರಃ ವ್ಯಾಪಿಸುವುದರಿಂದ ಆಪ್ರನಾಗಿರುವನೆಂದು ಅರ್ಥಮಾಡಿರುವಂತೆ, **ಆಸಮಂತಾತ್ ಪ್ರೀಣಯತೀತಿ** ಬಹಳವಾಗಿ ಸಂತೋಷಪಡಿಸುವವನೂ ಆಪ್ರನಾಗಿರುವನೆಂದು ಅರ್ಥವನ್ನು ಹೇಳಿದಾಗ ಈ ಪದವು ಇಂದ್ರನನ್ನು ಸಂತೋಷಪಡಿಸುವ ವ್ಯಾಪಕನಾದ ಯಜಮಾನನಿಗೆ ವಿಶೇಷಣವಾಗುವುದು ಎಂದು ವಿವರಿಸಿದಾರೆ. ಇದರಿಂದ—

**ಆಪ್ರಸ್ಯ ಉಷರ್ಬುಧಃ ಕ್ರಾಣಸ್ಯ ಅಹನ್**—ಎಂದು ವಾಕ್ಯವಾಗುತ್ತದೆ. ಇದಕ್ಕೆ ಸಾಯಣರು—**ಆಪನಶೀಲಸ್ಯ ಇಂದ್ರಸ್ಯ ಪ್ರೀಣಯಿತುರ್ವಾ ಉಷಃಕಾಲೇ ಯಾಗಾನುಷ್ಠಾನಾಯ ಪ್ರಬುಧ್ಯಮಾನಸ್ಯ ಯಾಗಂ ಕುರ್ವಾಣಸ್ಯ ಅಸ್ಯ ಯಜಮಾನಸ್ಯ ಶತ್ರೂನ್ ಹಿನಸ್ತಿ ।** ಎಂದು ಅರ್ಥ ಮಾಡಿದ್ದಾರೆ. ಧಾತು ಮತ್ತು ಉಪಸರ್ಗ ಇವುಗಳ ಸಂಬಂಧದಿಂದ ಉಂಟಾದ ಆಪ್ರ ಶಬ್ದ ಶಕ್ತಿಯ ಮಹಿಮೆಯಿಂದ ಇಂದ್ರನೂ, ವ್ಯಾಪನಶೀಲನಾಗಿರುವಂತ ಯಜಮಾನನು ವ್ಯಾಪನಶೀಲನೂ ಮತ್ತು ಇಂದ್ರನನ್ನು ಸಂತೋಷಪಡಿಸುವವನೂ ಆಗಿರುತ್ತಾನೆ. ಇವನು ಉಷಃಕಾಲದಲ್ಲಿ ಪ್ರಬುದ್ಧನಾಗಿ ಕರ್ಮಗಳನ್ನು ಆಚರಿಸುತ್ತಾನೆ. ಇಂದ್ರನನ್ನು ತೃಪ್ತಿಪಡಿಸುವುದಕ್ಕಾಗಿ ಯಾಗವನ್ನು ಆಚರಿಸುವ ಅಥವಾ ಇತರ ಕರ್ಮಗಳನ್ನು ಆಚರಿಸುವ ಈ ಯಜಮಾನನ ಶತ್ರುಗಳನ್ನು ಇಂದ್ರನು ನಾಶಮಾಡುವನು ಎಂದು ಅರ್ಥ. ನಿರುಕ್ತಕಾರರು—

**ತ್ವಾಮಿಂದ್ರ ಮತಿಭಿಃ ಸುತೇ ಸುನೀಥಾಸೋ ವಸೂಯವಃ । ಗೋಭಿಃ ಕ್ರಾಣಾ ಅನೂಷತ ॥**

ಎಂಬ ಈ ಋಕ್ಕನ್ನು ಉದಹರಿಸಿ, **ಗೋಭಿಃ ಕ್ರಾಣಾಃ–ಗೋಭಿಃ ಕುರ್ವಾಣಾಃ** । ಎಂದು ವ್ಯಾಖ್ಯಾನಮಾಡಿರುತ್ತಾರೆ. ದುರ್ಗಾಚಾರ್ಯರೂ ಕ್ರಾಣಾಃ ಎಂಬ ಶಬ್ದಕ್ಕೆ ಕುರ್ವಾಣಾಃ (ನಿ. ೪-೧೯) ಎಂದು ಅರ್ಥವನ್ನು ವಿವರಿಸಿದ್ದಾರೆ.

**ಶೀಷ್ಣರ್ಶೀಷ್ಣೋಽಪವಾಚ್ಯಃ—ಸರ್ವೇಷಾಂ ಶಿರಸಾ ಪ್ರಣಮ್ಯಃ ಸ್ತುತ್ಯಃ ।** ಇಂದ್ರನು ಸರ್ವರಿಂದಲೂ ನಮಸ್ಕಾರವನ್ನು ಹೊಂದಲು ಅರ್ಹನಾಗಿರುವನು. ಮತ್ತು ಎಲ್ಲರೂ ಸ್ತುತಿಸಲು ಅರ್ಹನಾಗಿರುವನು ಎಂದು ಅರ್ಥ.

**ಯಥಾವಿದೇ—ಸರ್ವಜ್ಞಾಯ ಶಿರಸಾ ಪ್ರಣತಿಃ ಕ್ರಿಯತೇ ಸ್ತೂಯತೇ ಚ ತಥೈನಮಿತ್ಯರ್ಥಃ । ಯದ್ವಾ ಯೇನ ಪ್ರಕಾರೇಣ ಹಂತವ್ಯಂ ಶತ್ರುಂ ಜಾನಾಸಿ ತಂ ತಂ ಪ್ರಹಂಸಿ । ಅಥವಾ ಯಂ ಯಂ ವಿಂದಸೇ ಲಭಸೇ ಶತ್ರುಂ ತಂ ತಂ ಮಾರಯಸಿ । ಅತಃ ಕಾರಣಾತ್ ಸ್ತುತ್ಯ ಇತ್ಯರ್ಥಃ ।** ಈ ವಾಕ್ಯವು, ಇಂದ್ರನು ಸರ್ವರಿಗೂ ನಮಸ್ಕಾರಾರ್ಹನಾಗಿರುವನು ಅಥವಾ ಸ್ತುತ್ಯನಾಗಿರುವನು ಎಂಬ ವಿಷಯದಲ್ಲಿ ದೃಷ್ಟಾಂತ ವಾಕ್ಯವಾಗಿ ಪ್ರಯುಕ್ತವಾಗಿದೆ. **ವಿದೇ** ಎಂಬ ಪದವು ವಿದ್ಲೃ ಲಾಭೇ ಮತ್ತು ವಿದಜ್ಞಾನೇ ಎಂಬ ಧಾತುಗಳಿಂದ ನಿಷ್ಪನ್ನ ವಾಗಿದೆ. ಜ್ಞಾನಾರ್ಥಕವಾದ ವಿದೇ ಎಂಬ ಪದಕ್ಕೆ ಸರ್ವಜ್ಞನೆಂದು ಅರ್ಥವನ್ನು ಹೇಳಿ, ಸರ್ವಜ್ಞನಾದ ಮಹಾತ್ಮನಿಗೆ ಸರ್ವರೂ ನಮಸ್ಕರಿಸುವಂತೆ, ಇಂದ್ರನಿಗೂ ಎಲ್ಲರೂ ನಮಸ್ಕರಿಸುವರೆಂದು ಒಂದು ವಿಧವಾದ ಅರ್ಥವನ್ನು ಹೇಳಿದೆ. ಎರಡನೆಯ ಅರ್ಥದಲ್ಲಿ ಇಂದ್ರನು ಶತ್ರುವನ್ನು ಯಾವ ವಿಧದಿಂದ ಹನನವಾಗಡಬೇಕೆಂಬುವುದನ್ನು ತಿಳಿದು ಆ ಉಪಾಯದಿಂದಲೇ ಶತ್ರುವನ್ನು ಕೊಲ್ಲುವನೆಂದು ಇಂದ್ರನ ಮಹಿಮೆಯನ್ನು ವಿಸ್ತರಿಸಿ ಹೇಳಿ, ಅವನು ನಮಸ್ಕಾರಾರ್ಹನಾಗಿರುವುದರ ಕಾರಣವನ್ನು ತಿಳಿಸಿದೆ. ಮೂರನೆಯ ಅರ್ಥದಲ್ಲಿ ವಿದೆ ಎಂಬ ಪದವು ಲಾಭಾರ್ಥವನ್ನು ಬೋಧಿಸುವುದರಿಂದ ಶತ್ರುರೂಪದಿಂದ ಇಂದ್ರನಿಗೆ ಯುದ್ಧದಲ್ಲಿ ಎದುರಾಗಿ ಬಂದವನು ಯಾವನಾದರೂ, ಅವನು ಇಂದ್ರನಿಂದ ಮರಣವನ್ನು ಹೊಂದುವನೆಂದು ಇಂದ್ರನ ಮಹಿಮೆಯನ್ನು ವರ್ಣಿಸಿ, ಇಂದ್ರನು ನಮಸ್ಕಾರಾರ್ಹನಾಗಿ ಅಥವಾ ಸ್ತುತ್ಯನಾಗಿರುವ ಕಾರಣವನ್ನು ಶತ್ರುಲಾಭಪ್ರಯುಕ್ತವೆಂದು ವರ್ಣಿಸಿ ವಿವರಿಸಿದೆ. ಈ ಕಾರಣಗಳಿಂದ ಇಂದ್ರನು ಸ್ತುತಿಗೆ ಅರ್ಹನಾಗಿರುವನೆಂದು ಇಲ್ಲಿ ವಿವರಿಸಿದೆ.

**ತೇ ರಾತಯಃ ಅಸ್ಮತ್ರಾ ಸಧ್ರ್ಯಕ್ ಸಂತು—ತವ ಸಂಬಂಧೀನಿ ಧನಾನಿ ದಾನಾನಿ ಅಸ್ಮಾಸ್ವೇವ ಏಕೋದ್ಯೋಗೇನ ಭವಂತು ।** ಯಜಮಾನರಿಗೆ ಇಂದ್ರನು ಅನುಗ್ರಹಿಸಿ ಕೊಟ್ಟಿರುವ ಧನವೇ ಮೊದಲಾದವುಗಳು ಅಥವಾ ಇಂದ್ರನ ಸಂತೋಷಕ್ಕಾಗಿ ನಾವುಗಳು ಅರ್ಪಿಸಿರುವ ದಾನವೇ ಮೊದಲಾದವುಗಳು, ಯಜಮಾನರ ಉದ್ದೇಶಕ್ಕನುಗುಣವಾಗಿ ವಿನಿಯುಕ್ತವಾಗಲಿ ಎಂದು ಇಂದ್ರನನ್ನು ಪ್ರಾರ್ಥಿಸಿದೆ.

ನಿರುಕ್ತಕಾರರು—ದಾತಿ, ದಾಶತಿ ಎಂಬ ಇವೇ ಮೊದಲಾದ ಹತ್ತುದಾನ ಕರ್ಮವಾಚಕಗಳಲ್ಲಿ ರಾತಿ ಪದವನ್ನು (**ನಿ.** ೩-೧೯) ಪಾಠಮಾಡಿರುತ್ತಾರೆ ಇದರಿಂದ ದಾನಮಾಡುವುದೆಂದು ಅರ್ಥವಾಗುತ್ತದೆ. ಮತ್ತು

**ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ ।**
**ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥**

(ಋ. ಸಂ. ೬-೫೮-೧)

ಎಂಬ ಈ ಋಕ್ಕಿನಲ್ಲಿ **ರಾತಿ** ಪದಕ್ಕೆ **ದತ್ತಿಃ ದಾನಂ** ಎಂದು ಅರ್ಥವನ್ನು ಹೇಳಿದೆ.

**ಭದ್ರಸ್ಯ ರಾತಯೋ ಭದ್ರಾಃ—ಸ್ತುತ್ಯಸ್ಯ ಅಸ್ಮಾಸು ದತ್ತಾನಿ ದಾನಾನಿ ಅತಿಸ್ಥಿರಾಣಿ ಸಂತು** ಸ್ತುತ್ಯನಾಗಿರುವ ಇಂದ್ರನು ಯಜಮಾನರಿಗೆ ಅನುಗ್ರಹಿಸಿರುವ ಧನವೇ ಮೊದಲಾದವುಗಳು ಸುತ್ತ್ಯವಾಗಿಯೂ, ಸ್ಥಿರವಾಗಿಯೂ ಇರಲಿ ಎಂದು ಪ್ರಾರ್ಥಿಸಿದೆ. ನಿರುಕ್ತಕಾರರು ಭದ್ರಶಬ್ದಾರ್ಥವನ್ನು ವಿವರಿಸುವಾಗ—(ನಿ. ೪-೯).

**ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।**
**ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥**
(ಋ. ಸಂ. ೧೦-೭೧-೨)

ಎಂಬ ಈ ಋಕ್ಕನ್ನು ಉದಹರಿಸಿ—**ಭದ್ರಂ ಭಗೇನ ವ್ಯಾಖ್ಯಾತಂ । ಭಜನೀಯಂ, ಭೂತಾನಾಮಭಿದ್ರವಣೀಯಂ, ಭವದ್ರಮಯತೀತಿ ವಾ, ಭಾಜನವದ್ವಾ** ಎಂದು **ಭದ್ರ** ಶಬ್ದಾರ್ಥವನ್ನು ಹೊಂದಬೇಕಾದುದು, ಪ್ರಾಣಿಗಳಿಗೆ ಸುಖಜನಕವಾದುದು, ಸಂತೋಷಕರವಾದುದು, ಪುಣ್ಯವಂತರಿಂದ ಹೊಂದಲರ್ಹವಾದದು ಎಂದು ನಾಲ್ಕು ವಿಧವಾಗಿ ವಿವರಿಸಿರುತ್ತಾರೆ. ಈ ಪ್ರಕಾರವಾದ ಭದ್ರಪದಾರ್ಥವು ಇಂದ್ರನಿಂದ ಯಜಮಾನರಿಗೆ ಅನುಗ್ರಹೀತವಾಗಿರುವುದೆಂದು ಸಾಯಣರು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಸ್ವರ್ಜೇಷೇ**—ಜೇಷೃ ಗತೌ. ಧಾತು. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಿಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಆಪ್ರಸ್ಯ**—ಆಪ್ಲೃ ವ್ಯಾಪ್ತೌ ಧಾತು. ಇದಕ್ಕೆ ಔಣಾದಿಕ ರಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಉಷರ್ಬುಧಃ**—ಬುಧ ಅವಗಮನೇ. ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀ ಏಕವಚನಾಂತ ರೂಪ.

**ಅಂಜಸಿ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಕ್ರಾಣಸ್ಯ**—ಡುಕೃಞ್ ಕರಣೇ ಧಾತು. ಇದಕ್ಕೆ ಬಂದ ಲಟಿಗೆ ಶತ್ರಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಗುಣ ಬರುವುದಿಲ್ಲ. ಯಣಾದೇಶ. **ಅಟ್ ಕುಪ್ವಾಙ್**—ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. **ಚಿತಃ** (ಪಾ ಸೂ. ೬-೧-೧೯೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠ್ಯಂತರೂಪ.

**ಅಹನ್**—ಹನ ಹಿಂಸಾಗತ್ಯೋಃ ಧಾತು. ಅದಾದಿ. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ ಶಪಿಗೆ ಲುಕ್. **ಹಲ್ಙ್ಯಾಭ್ಯೋ**—ಸೂತ್ರದಿಂದ ಪ್ರತ್ಯಯಕ್ಕೆ ಲೋಪ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತ ಸ್ವರ ಬರುತ್ತದೆ.

ವಿದೇ—ವಿದ ಜ್ಞಾನೇ ಧಾತು. ಕ್ವಿಪ್ ಪ್ರತ್ಯಯ. ಚತುರ್ಥೀ ಏಕವಚನಾಂತರೂಪ. **ಸಾವೇಕಾಚ-ಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಥವಾ ವಿಥ ಧಾತುವಿಗೆ ಲಟ್. ವ್ಯತ್ಯಯದಿಂದ ಮಧ್ಯಮಪುರುಷ ಏಕವಚನಕ್ಕೆ ಪ್ರಥಮಪುರುಷ ಏಕವಚನ ತ ಪ್ರತ್ಯಯ ಬರುತ್ತದೆ. ವ್ಯತ್ಯಯದಿಂದಲೇ ಆತ್ಮನೇಪದಿಯಾಗುತ್ತದೆ. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯ ತಕಾರಕ್ಕೆ ಲೋಪ. ಯಥಾ ಎಂಬುದರ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಮೂರನೇ ವ್ಯಾಖ್ಯಾನದಲ್ಲಿ ವಿದ್ಲೃ ಲಾಭೇ ಧಾತು. ಹಿಂದಿನಂತೆ ಪ್ರತ್ಯಯ ಬಂದಾಗ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಆದುದರಿಂದ ನುಮಾಗಮ ಬರುವುದಿಲ್ಲ. ಹಿಂದಿನಂತೇ ಸ್ವರ ಬರುತ್ತದೆ.

ಶೀರ್ಷ್ಣಾ ಶೀರ್ಷ್ಣಾ—ಶಿರಃ ಶಬ್ದಕ್ಕೆ ತೃತೀಯಾ ಏಕವಚನ ಪರವಾದಾಗ **ಶೀರ್ಷಂಶ್ಛಂದಸಿ** (ಪಾ. ಸೂ. ೬-೧-೬೦) ಎಂಬುದರಿಂದ ಶೀರ್ಷನ್ ಆದೇಶ. **ಅಲ್ಲೋಪೋಽನಃ** ಎಂಬುದರಿಂದ ಅನಿನ ಅಕಾರಕ್ಕೆ ಲೋಪ. **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ.** (ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. **ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ಆಮ್ರೇಡಿತಸಂಜ್ಞೆ ಇರುವ ಪರರೂಪಕ್ಕೆ ಸರ್ವಾನುದಾತ್ತಸ್ವರ ಬರುತ್ತದೆ

ಅಸ್ಮತ್ರಾ—**ದೇವಮನುಷ್ಯ**—(ಪಾ. ಸೂ. ೫-೪-೫೬) ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಅಸ್ಮದ್ ಶಬ್ದಕ್ಕೆ ತ್ರಾ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

ಸಧ್ರ್ಯಕ್—ಸಹ ಎಂಬುದು ಉಪಪದವಾಗಿರುವಾಗ ಅಂಚು ಗತಿಪೂಜನಯೋಃ. ಈ ಧಾತುವಿಗೆ **ಋತ್ವಿಕ್ ದಧೃಕ್**—ಸೂತ್ರದಿಂದ ಕ್ವಿನ್ ಪ್ರತ್ಯಯ. **ಸಹಸ್ಯ ಸಧ್ರಿಃ** (ಪಾ. ಸೂ. ೬-೩-೯೫) ಎಂಬುದರಿಂದ ಸಧ್ರ್ಯಾದೇಶ. ಯಣ್. **ಅನಿದಿತಾಂ ಹಲಉ**—ಎಂಬುದರಿಂದ ಧಾತುವಿನ ಉಪಧಾನಕಾರಲೋಪ. ಪ್ರಥಮಾ ಏಕವಚನದಲ್ಲಿ **ಕ್ವಿನ್‌ಪ್ರತ್ಯಯಸ್ಯ ಕುಃ** (ಪಾ. ಸೂ. ೮-೨-೬೨) ಎಂಬುದರಿಂದ ಕುತ್ವ. **ವಾವಸಾನೇ** ಎಂಬುದರಿಂದ ಚರ್ತ್ವ. ಸಧ್ರ್ಯಾದೇಶಕ್ಕೆ ಅಂತೋದಾತ್ತವನ್ನು ಕೃತ್‌ಸ್ವರ ಬಾಧಕ್ಕೋಸ್ಕರ ನಿಪಾತನ ಮಾಡಿರುತ್ತಾರೆ. ಉದಾತ್ತಸ್ಥಾನದಲ್ಲಿ ಯಣ್ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋನುದಾತ್ತಸ್ಯ** ಎಂಬುದರಿಂದ ಸ್ವರಿತಸ್ವರ ಬರುತ್ತದೆ.

ಭದ್ರಾಃ—ಭದಿ ಕಲ್ಯಾಣೇ ಸುಖೇ ಚ. ಧಾತು. ಔಣಾದಿಕ ರಕ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ತತ್ತು ಪ್ರಯಃ ಪ್ರತ್ನಥಾ ತೇ ಶುಶುಕ್ವನಂ ಯಸ್ಮಿನ್ಯಜ್ಞೇ ವಾರಮಕೃಣ್ವತ
ಕ್ಷಯಮೃತಸ್ಯ ವಾರಸಿ ಕ್ಷಯಂ ।
ವಿ ತದ್ವೋಚೇರಧ ದ್ವಿತಾಂತಃ ಪಶ್ಯಂತಿ ರಶ್ಮಿಭಿಃ ।
ಸ ಘಾ ವಿದೇ ಅನ್ವಿಂದ್ರೋ ಗವೇಷಣೋ ಬಂಧುಕ್ಷಿದ್ಭ್ಯೋ ಗವೇಷಣಃ ॥ ೩ ॥

॥ ಪದಪಾಠಃ ॥

ತತ್ । ತು । ಪ್ರಯಃ । ಪ್ರತ್ನಽಥಾ । ತೇ । ಶುಶುಕ್ವನಂ । ಯಸ್ಮಿನ್ । ಯಜ್ಞೇ । ವಾರಂ । ಅಕೃಣ್ವತ ।
ಕ್ಷಯಂ । ಋತಸ್ಯ । ವಾಃ । ಅಸಿ । ಕ್ಷಯಂ ।
ವಿ । ತತ್ । ವೋಚೇಃ । ಅಧ । ದ್ವಿತಾ । ಅಂತರಿತಿ । ಪಶ್ಯಂತಿ । ರಶ್ಮಿಽಭಿಃ ।
ಸಃ । ಘ । ವಿದೇ । ಅನು । ಇಂದ್ರಃ । ಗೋಽಏಷಣಃ । ಬಂಧುಕ್ಷಿತ್ಽಭ್ಯಃ । ಗೋಽಏಷಣಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತತ್ತು ಖಲು ಪ್ರಸಿದ್ಧಂ ಪ್ರಯೋ ಹವಿರ್ಲಕ್ಷಣಮನ್ನಂ ಶುಶುಕ್ವನಮಾಜ್ಯಾದಿಸಂಯೋಗೇನ ಭೃಶಂ ದೀಪ್ತಂ ॥ ಶುಚೇರ್ದೀಪ್ತಿಕರ್ಮಣ ಏತದ್ರೂಪಂ ॥ ತೇ ತವ ಸ್ವಭೂತಂ । ಪ್ರತ್ನಥಾ ಪೂರ್ವಮಿತಃಪೂರ್ವಂ ಯಥಾ ಯಾಗಕಾಲೇ ಹವಿಸ್ತೇ ತವ ಸ್ವಂ ಭವತಿ ತಥಾದ್ಯತನಮಪಿ । ಸರ್ವದಾ ತ್ವಾಮೇವ ಯಜಂತ ಇತಿ ಭಾವಃ ॥ ಪ್ರತ್ನಪೂರ್ವವಿಶ್ವೇತ್ಯಾದಿನೇವಾರ್ಥೇ ಥಾಲ್ । ಲಿತ್ಸ್ವರಃ ॥ ಕೀದೃಶಂ ತದಿತಿ ಉಚ್ಯತೇ । ಯಜ್ಞೇ ಯಾಗೇ ಯಸ್ಮಿನ್ ಹವಿಷಿ ದಾತವ್ಯೇ ಸತಿ ವಾರಂ ವರಣೀಯಂ ಕ್ಷಯಂ ಸ್ಥಾನಂ ವೇದಿಲಕ್ಷಣಮಕೃಣ್ವತ ಕುರ್ವಂತ್ಯೃತ್ವಿಜಃ । ಕಸ್ತವ ವಿಶೇಷ ಇತಿ ಚೇತ್ ಉಚ್ಯತೇ । ಋತಸ್ಯ ಸತ್ಯಫಲಸ್ಯ ಯಜ್ಞಸ್ಯ ವಾರಸಿ ಕ್ಷಯಂ । ನಿವಾಸಸ್ಥಾನಂ ಸಂಭಕ್ತಾಽಸಿ । ಯದ್ವಾ । ಋತಮಿತ್ಯುದಕನಾಮ । ತಸ್ಯ ಕ್ಷಯಂ ಸ್ಥಾನಂ ಪ್ರಾಪ್ತೋಽಸಿ । ವೃಷ್ಟಿಪ್ರದೋಽಸೀತ್ಯರ್ಥಃ । ಅಥವಾ । ಋತಸ್ಯಾದಿತ್ಯಸ್ಯ ಕ್ಷಯಂ ಸ್ಥಾನಂ ದ್ಯುಲೋಕಾಖ್ಯಂ ವಾರಸಿ । ಯಜಮಾನಂ ಗಮಯಿತಾಸಿ । ತತ್ತಾದೃಶಂ ವಕ್ಷ್ಯಮಾಣಂ ಕರ್ಮ ವಿ ವೋಚೇಃ । ವಿಬ್ರೂಹಿ । ಅಧಾತಃ ಕಾರಣಾದ್ದ್ವಿತಾಂತರ್ದ್ವಿತ್ವೋಪೇತಯೋರ್ದ್ಯಾವಾಪೃಥಿವ್ಯೋರ್ಮಧ್ಯೇಽಂತರಿಕ್ಷೇ ರಶ್ಮಿಭಿರಾದಿತ್ಯಕಿರಣೈಃ ಪಶ್ಯಂತಿ । ನೋಘಂ

**ನಿರ್ಭಿದ್ಯ ರಶ್ಮಿದ್ವಾರಾ ಪ್ರವರ್ಷಣರೂಪಂ ಕರ್ಮ ಸರ್ವೇ ಜನಾಃ ಪ್ರತ್ಯಕ್ಷತಃ ಪಶ್ಯಂತಿ । ಅಸ್ಮದ್ದತ್ತಂ ಹವಿರಾದಿತ್ಯಂ ಪ್ರಾಪಯಿತ್ವಾ ತದ್ರಶ್ಮಿದ್ವಾರಾ ವೃಷ್ಟಿಂ ಜನಯಸೀತ್ಯೇತತ್ಸರ್ವೈರ್ದೃಶ್ಯತ ಇತ್ಯರ್ಥಃ । ಇದಾನೀಂ ಪರೋಕ್ಷಯಾ ಸ್ತೌತಿ । ಸ ಘ ಸ ಖಲ್ವಿಂದ್ರೋ ಗವೇಷಣ ಉದಕಸ್ಯಾನ್ವೇಷಣಶೀಲಃ । ತಥಾ ಬಂಧುಕ್ಷಿದ್ಭ್ಯೋ ಹವಿಷ್ಪ್ರದಾನಾದಿನಾ ಬಂಧುಭಾವಂ ಪ್ರಾಪ್ತವದ್ಭ್ಯೋ ಯಜಮಾನೇಭ್ಯೋ ಗವೇಷಣೋ ಗವಾಂ ಪ್ರಸಿದ್ಧಾನಾಮೇಷಣಕರ್ತಾ ॥ ಇಷೇರ್ಬಾಹುಲಕಾತ್ಕರ್ತರಿ ಲ್ಯುಟ್ । ಯದ್ವಾ । ಗವೇಷ ಮಾರ್ಗಣೇ । ಪೂರ್ವವಲ್ಲ್ಯುಟ್ ॥ ಯಜಮಾನಫಲಸ್ಯ ಮೃಗಯಿತೇತ್ಯರ್ಥಃ । ಅನು ಉಕ್ತಕ್ರಮೇಣೈವ ಕರ್ತಾ ಸನ್ ವಿದೇ । ವಿಂದತೇ । ಉದಕಪ್ರಾಪ್ತಿಪ್ರಕಾರಂ ಜಾನಾತಿ ॥**

॥ ಪ್ರತಿಪದಾರ್ಥ ॥

(ಹೇ ಇಂದ್ರ— ಎಲೈ ಇಂದ್ರನೇ) । **ಯಜ್ಞೇ**—ಯಾಗದಲ್ಲಿ । **ಯಸ್ಮಿನ್**—ಯಾವ ಹವಿರ್ದಾನ ಸಂದರ್ಭದಲ್ಲಿ । **ವಾರಂ**—ಅಪೇಕ್ಷಣೀಯವಾದ । **ಕ್ಷಯಂ**—ವೇದಿಲಕ್ಷಣಸ್ಥಾನವನ್ನು । **ಅಕೃಣ್ವತ**— (ಋತ್ವಿಜರು) ನಿರ್ಮಿಸುತ್ತಾರೋ । **ತತ್ ತು**— ಆ ಪ್ರಸಿದ್ಧವಾದ । **ಪ್ರಯಃ**—ಹವಿರ್ಲಕ್ಷಣಾನ್ನವು । **ಶುಶುಕ್ವನಂ**—ಆಜ್ಯಾದಿ ಸಂಯೋಗದಿಂದ ಹೆಚ್ಚು ಪ್ರಕಾಶಿತವಾಗಿ । **ಪ್ರತ್ನಥಾ**—ಇದಕ್ಕೂ ಮೊದಲು (ಹೇಗೆ ನಿನ್ನದೇ ಆಗುತ್ತಿತ್ತೋ) ಹಾಗೆ । **ತೇ**—ನಿನಗೇ (ಸೇರುತ್ತದೆ) । **ಋತಸ್ಯ**— ಸತ್ಯಫಲವಾದ ಯಜ್ಞದ । **ಕ್ಷಯಂ**—ಸ್ಥಾನವನ್ನು । **ವಾಃ ಅಸಿ**— ಪ್ರಾಪ್ತನಾಗಿದ್ದೀಯೆ । ಅಥವಾ [**ಋತಸ್ಯ**—ಉದಕದ । **ಕ್ಷಯಂ**— ಸ್ಥಾನವನ್ನು । **ವಾಃ ಅಸಿ**—ಪ್ರಾಪ್ತನಾಗಿದ್ದೀ (ವೃಷ್ಟಿಪ್ರದನಾಗಿದ್ದೀ) ] ಅಥವಾ [**ಋತಸ್ಯ**—ಆದಿತ್ಯನ । **ಕ್ಷಯಂ**—(ದ್ಯುಲೋಕಾಖ್ಯ) ಸ್ಥಾನವನ್ನು । **ವಾಃ ಅಸಿ**— ಯಾಗಕರ್ತೃವನ್ನು) ಸೇರಿಸುತ್ತೀ ।] **ತತ್** – ಅಂತಹ (ನಿನ್ನ ಪರಾಕ್ರಮಕಾರ್ಯವನ್ನು)। **ವಿ ವೋಚೇಃ**— ಪ್ರಸಿದ್ಧಪಡಿಸು । **ಅಧ**—ಆದುದರಿಂದಲೇ । **ದ್ವಿತಾ ಅಂತಃ**—ದ್ವಿತ್ವವಿಶಿಷ್ಟವಾದ (ದ್ಯಾವಾಪೃಥಿವಿಗಳ) ಮಧ್ಯೆ (ಅಂತರಿಕ್ಷದಲ್ಲಿ) । **ರಶ್ಮಿಭಿಃ**—(ಸೂರ್ಯನ) ಕಿರಣಗಳ ಸಹಾಯದಿಂದ । **ಪಶ್ಯಂತಿ**—(ನಿನ್ನ ವೃಷ್ಟಿಕರ್ಮವನ್ನು) ನೋಡುತ್ತಾರೆ । **ಸಃ ಘ ಇಂದ್ರಃ**—ಅದೇ ಇಂದ್ರನು । **ಗವೇಷಣಃ**— ಜಲಾನ್ವೇಷಣಶೀಲನೂ। **ಬಂಧುಕ್ಷಿದ್ಭ್ಯಃ**— (ಹವಿಷ್ಪ್ರದಾನಾದಿಗಳಿಂದ) ಬಂಧುಭಾವವನ್ನು ಪಡೆದಿರುವ ಯಾಗಕರ್ತೃಗಳಿಗೋಸ್ಕರ । **ಗವೇಷಣಃ**—ಗೋವುಗಳನ್ನು ಹುಡುಕುವವನೂ ಆಗಿ । **ಅನು**—ಕಾಲಕ್ರಮದಲ್ಲಿ । **ವಿದೇ**— ಉದಕ (ಗೋ) ಪ್ರಾಪ್ತಿಪ್ರಕಾರವನ್ನು ತಿಳಿಯುತ್ತಾನೆ.

॥ ಭಾವಾರ್ಥ ॥

ಆಜ್ಯಾದಿ ಸಂಯೋಗದಿಂದ ಹೆಚ್ಚು ತೇಜೋವಿಶಿಷ್ಟವಾದ ಹವೀರೂಪಾನ್ನವು, ಹಿಂದೆ ನಿನಗೇ ಸೇರುತ್ತಿದ್ದಂತೆ, ಈಗಲೂ ನಿನ್ನದೇ ಆಗುತ್ತದೆ; ಯಾಗದಲ್ಲಿ, ಋತ್ವಿಜರಿಂದ ಹವಿಸ್ಸಿಗೋಸ್ಕರ ಏರ್ಪಡಿಸಲ್ಪಟ್ಟ (ವೇದಿಲಕ್ಷಣ) ಸ್ಥಾನವನ್ನು ಸೇರುತ್ತಿ; ಉದಕಸ್ಥಾನವನ್ನು ತಿಳಿದ ನೀನು ವೃಷ್ಟಿಪ್ರದನಾಗುತ್ತೀ ಅಥವಾ ಆದಿತ್ಯನ ಸ್ಥಾನವನ್ನು ತಿಳಿದ ನೀನು ಯಾಗಕರ್ತೃವನ್ನು ಆದಿತ್ಯನ ಲೋಕಕ್ಕೇ ಕಳುಹಿಸುತ್ತೀಯೆ; (ನಮ್ಮಿಂದ ದತ್ತವಾದ ಹವಿಸ್ಸನ್ನು ಆದಿತ್ಯನಿಗೆ ಸೇರಿಸಿ, ಅವನ ರಶ್ಮಿಗಳ ಮೂಲಕ ವೃಷ್ಟಿಯನ್ನುಂಟುಮಾಡುತ್ತಿ); ದ್ಯಾವಾಪೃಥಿವಿಗಳ ಮಧ್ಯೆ (ಅಂತರಿಕ್ಷದಲ್ಲಿ ನಡೆಯುವ) ನಿನ್ನ ವೃಷ್ಟಿರೂಪಕರ್ಮವು ಸರ್ವರಿಗೂ ಸೂರ್ಯಕಿರಣಗಳಿಂದ ಪ್ರಸಿದ್ಧಿಗೆ ಬರುತ್ತದೆ. ಮತ್ತು ಉದಕಾನ್ವೇಷಿಯಾದ ಈ ಇಂದ್ರನೇ ಅಲ್ಲವೇ ಯಜಮಾನನಿಗೋಸ್ಕರ ಗೋವುಗಳನ್ನು ಅನ್ವೇಷಿಸುವುದು ಮತ್ತು ಕಾಲಕ್ರಮೇಣ ಗೋವುಗಳಿರುವ (ಉದಕದ) ಸ್ಥಾನವನ್ನು ತಿಳಿಯುವುದು?

## English Translation.

Indra, in whatsoever rite (the priests) from of old have placed the brilliant (sacrificial) food for you upon the altar, in that place of sacrifice you abide: you declare that (rite), that men may thence behold the intermediate (firmament bright) with the rays (of the sun): for this, Indra, the searcher (of rain, is) the searcher after cattle, for (the benefit of) his kindred (worshippers), and knows in due course (the season of the rain).

॥ ವಿಶೇಷವಿಷಯಗಳು ॥

**ಪ್ರಯಃ ಶುಶುಕ್ವನಂ—ಹವಿರ್ಲಕ್ಷಣಮನ್ನಂ ಆಜ್ಯಾದಿಸಂಯೋಗೇನ ಭೃಶಂ ದೀಪ್ತಂ । ಪ್ರಯಃ** ಎಂಬ ಪದವು ಅನ್ನನಾಮಗಳಲ್ಲಿ (ನಿ. ೩–೯) ಉಕ್ತವಾಗಿದೆ. ಶುಚ್ ಧಾತುವು (ಕಾಂತಿ) ದೀಪ್ತಿಯನ್ನು ಉಂಟು ಮಾಡು ಎಂಬ ಅರ್ಥವನ್ನು ಬೋಧಿಸುವುದು. ಈ ಧಾತುವಿನಿಂದ ನಿಷ್ಪನ್ನವಾದ **ಶುಶುಕ್ವನಂ** ಎಂಬ ಪದವು ಯಙ್ ಲುಗಂತವಾಗಿರುವುದರಿಂದ ಬಹಳ ಕಾಂತಿಯುಳ್ಳದ್ದೆಂಬ ಅರ್ಥವನ್ನು ಬೋಧಿಸುವುದು. ಸಾಯಣರು ಹವಿಸ್ಸಿನ ರೂಪವಾದ ಅನ್ನವು ಆಜ್ಯಾದಿದ್ರವ್ಯಾಂತರಗಳಿಂದ ಸಂಸ್ಕೃತವಾಗಿ ಬಹಳ ಕಾಂತಿಯುಳ್ಳದ್ದಾಗಿ ಇರುವುದು ಎಂದು ಅರ್ಥಮಾಡಿದ್ದಾರೆ.

**ಪ್ರತ್ನಥಾ—ಇತಃ ಪೂರ್ವಂ ಯಥಾ ಯಾಗಶಾಲೇ ಹವಿಃ ತವ ಸ್ವಂ ಭವತಿ ತಥಾ ಅದ್ಯತನಮಪಿ ।** ಯಾಗಕಾಲಗಳಲ್ಲಿ ಯಜಮಾನರು ಹವಿಸ್ಸುಗಳನ್ನು ಇಂದ್ರನ ಸ್ವತ್ತೆಂಬುದಾಗಿ ಹಿಂದಿನಿಂದಲೂ ಅರ್ಪಿಸುತ್ತಿರುವ ಹಾಗೆಯೇ ಈಗಲೂ ಕೂಡ ಹವಿಸ್ಸುಗಳನ್ನು ಅರ್ಪಿಸುವರು. ಪೂರ್ವಕಾಲ, ಮತ್ತು ಈಗ ಎಂಬ ಕಾಲಭೇದಗಳಲ್ಲಿ ವ್ಯತ್ಯಾಸವನ್ನು ಮಾಡದೆ ಇಂದ್ರನಿಗೆ ಸರ್ವಕಾಲದಲ್ಲಿಯೂ ಹವಿಸ್ಸುಗಳನ್ನು ಅರ್ಪಿಸುವರೆಂದು ಅರ್ಥ.

**ವಾರಂ ಕ್ಷಯಂ ಅಕೃಣ್ವತ್—ವರಣೀಯಂ ವೇದಿಲಕ್ಷಣಂ ಸ್ಥಾನಂ ಋತ್ವಿಜಃ ಕುರ್ವಂತಿ ।** ಋತ್ವಿಜರು ಶ್ರೇಷ್ಠವಾದ ಯಜ್ಞವೇದಿಯಲ್ಲಿ ಇಂದ್ರನಿಗಾಗಿ ಹವಿಸ್ಸುಗಳನ್ನು ಅರ್ಪಿಸುವರೆಂದು ಅರ್ಥ. ನಿರುಕ್ತಕಾರರು—

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ।**
**ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾದ್ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥೇ ॥**
(ಋ. ಸಂ. ೩–೮–೧)

ಈ ಋಕ್ಕನ್ನು ಉದಹರಿಸಿ ಕ್ಷಯ ಶಬ್ದಕ್ಕೆ ನಿವಾಸಸ್ಥಾನವೆಂದು ಅರ್ಥಮಾಡಿದ್ದಾರೆ.

**ಋತಸ್ಯ ವಾರಸಿ ಕ್ಷಯಂ—ಸತ್ಯಫಲಸ್ಯ ಯಜ್ಞಸ್ಯ ನಿವಾಸಸ್ಥಾನಂ ಸಂಭಕ್ತೋಸಿ । ಯದ್ವಾ । ಋತಮಿತ್ಯುದಕನಾಮ । ತಸ್ಯ ಕ್ಷಯಂ ಸ್ಥಾನಂ ಪ್ರಾಪ್ತೋಸಿ । ಅಥವಾ । ಋತಸ್ಯಾದಿತ್ಯಸ್ಯ ಕ್ಷಯಂ ಸ್ಥಾನಂ ದ್ಯುಲೋಕಾಖ್ಯಂ ಯಜಮಾನಂ ಗಮಯಿತಾಸಿ ।** ಋತ ಶಬ್ದವು ಉದಕನಾಮಗಳಲ್ಲಿ (ನಿ. ೨–೧೪) ಪಠಿತವಾಗಿದೆ. ಮತ್ತು **ಸತ್ಯಂ ವಾ ಯಜ್ಞಂ ವಾ** ಎಂದು (ನಿ. ೪–೧೯) ವ್ಯಾಖ್ಯಾತವಾಗಿದೆ. ಇಂದ್ರನು ಸತ್ಯ

ಫಲಪ್ರದವಾದ ಯಜ್ಞದಲ್ಲಿ ವಾಸಸ್ಥಾನವನ್ನು ಹೊಂದಿರುವನು ಎಂದೂ, ಅಥವಾ ಋತ ಶಬ್ದಕ್ಕೆ ಉದಕವೆಂದು ಅರ್ಥ ಮಾಡಿರುವುದರಿಂದ ವೃಷ್ಟಿಪ್ರದನಾಗಿರುವನೆಂದೂ ಅಥವಾ ಯಜಮಾನರನ್ನು ಆದಿತ್ಯನು ವಾಸಮಾಡುವ ದ್ಯುಲೋಕಕ್ಕೆ ಸೇರಿಸುವವನೆಂದೂ ಅರ್ಥವನ್ನು ವಿವರಿಸಿ ಇಂದ್ರನ ಮಾಹಾತ್ಮ್ಯವನ್ನು ವರ್ಣಿಸಿದೆ.

**ದ್ವಿತಾಂತಃ ರಶ್ಮಿಭಿಃ ಪಶ್ಯಂತಿ—ದ್ವಿತ್ವೋಪೇತಯೋಃ ದ್ಯಾವಾಪೃಥಿವ್ಯೋಃ ಮಧ್ಯೇ ಅಂತರಿಕ್ಷೇ ಆದಿತ್ಯಕಿರಣೈಃ ಪಶ್ಯಂತಿ । ಮೇಘಂ ನಿರ್ಭಿದ್ಯ ರಶ್ಮಿದ್ವಾರಾ ಪ್ರವರ್ಷಣರೂಪಂ ಕರ್ಮ ಸರ್ವೇ ಜನಾಃ ಪ್ರತ್ಯಕ್ಷತಃ ಪಶ್ಯಂತಿ ।** ಇಂದ್ರನು ಲೋಕದಲ್ಲಿ ಬೆಳೆಯು ಆಗುವುದಕ್ಕಾಗಿ ವೃಷ್ಟಿಯನ್ನು ಉಂಟುಮಾಡುವನು. ದ್ಯಾವಾಪೃಥಿವಿಗಳು ಯಾವಾಗಲೂ ಸಹಭಾವದಿಂದಲೇ ಇರುವುವು. ಇವುಗಳ ಮಧ್ಯಪ್ರದೇಶವಾದ ಅಂತರಿಕ್ಷದಲ್ಲಿ ಇರುವ ಆದಿತ್ಯನ ಕಿರಣಗಳಿಂದ ಮೇಘವು ಭಿನ್ನವಾಗಿ ಸೂರ್ಯನ ಕಿರಣಗಳ ಮೂಲಕವಾಗಿಯೇ ಮೇಘಗಳಿಂದ ವೃಷ್ಟಿಯು ಆಗುವುದನ್ನು ಜನರೆಲ್ಲರೂ ಪ್ರತ್ಯಕ್ಷವಾಗಿ ನೋಡುವರು. ಮನುಸ್ಮೃತಿಯಲ್ಲಿ—

**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥**

ಇಂದ್ರಾದಿದೇವತೆಗಳ ಉದ್ದೇಶದಿಂದ ಅಗ್ನಿಯಲ್ಲಿ ಅರ್ಪಿಸಿದ ಹವಿಸ್ಸುಗಳು ಆದಿತ್ಯನಲ್ಲಿ ಸೇರುತ್ತವೆ. ಇಂದ್ರನಿಗೂ ಆದಿತ್ಯನಿಗೂ ತಾದಾತ್ಮ್ಯವು ಶ್ರುತಿಯಲ್ಲಿಯೇ ಉಕ್ತವಾಗಿರುವುದರಿಂದ ಇಂದ್ರನು ಆದಿತ್ಯನ ರೂಪದಿಂದ ಹವಿಸ್ಸುಗಳನ್ನು ಸ್ವೀಕರಿಸಿ ವೃಷ್ಟಿಯನ್ನು ಉಂಟುಮಾಡಿ ಅನ್ನವೂ, ಪ್ರಜೆಗಳೂ ಅಭಿವೃದ್ಧಿಯಾಗುವಂತೆ ಮಾಡುವನು ಎಂದು ಹೇಳಿದೆ. ಸಾಯಣರು—

**ಅಸ್ಮದ್ದತ್ತಂ ಹವಿಃ ಆದಿತ್ಯಂ ಪ್ರಾಪಯಿತ್ವಾ ತದ್ರಶ್ಮಿದ್ವಾರಾ ವೃಷ್ಟಿಂ ಜನಯಸೀತ್ಯೇತತ್ ಸರ್ವೈಃ ದೃಶ್ಯತೇ** ಎಂದು ವ್ಯಾಖ್ಯಾನಮಾಡಿ ಇದೇ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುತ್ತಾರೆ.

**ಗವೇಷಣಃ ಬಂಧುಕ್ಷಿದ್ಭ್ಯಃ ಗವೇಷಣಃ—ಉದಕಸ್ಯಾನ್ವೇಷಣಶೀಲಃ ಹವಿಷ್ಪ್ರದಾನಾದಿನಾ ಬಂಧುಭಾವಂ ಪ್ರಾಪ್ತವದ್ಭ್ಯಃ ಯಜಮಾನೇಭ್ಯಃ ಗವಾಂ ಏಷಣಕರ್ತಾ । ಯದ್ವಾ ಯಜಮಾನಫಲಸ್ಯ ಮೃಗಯಿತಾ ।** ಯಜ್ಞಮಾಡುವ ಯಜಮಾನರು ಇಂದ್ರನಿಗೆ ಹವಿರಾದಿಗಳನ್ನು ಅರ್ಪಿಸುವುದರಿಂದ ಇಂದ್ರನಿಗೂ ಯಜಮಾನರಿಗೂ ಒಂದು ವಿಧವಾದ ಬಂಧುಭಾವವು ಉಂಟಾಗುವುದು ಸಹಜವಷ್ಟೆ. ಅಂತಹ ಯಜಮಾನರ ವಿಷಯದಲ್ಲಿ ಇಂದ್ರನು ಅನುಗ್ರಹಬುದ್ಧಿಯಿಂದ ವೃಷ್ಟಿಯನ್ನುಂಟುಮಾಡುವನೆಂದರ್ಥವು. ಇಲ್ಲಿ ಗವೇಷಣ ಶಬ್ದವು ಎರಡಾವರ್ತಿ ಪಠಿತವಾಗಿದೆ. ಈ ಶಬ್ದಕ್ಕೆ ಮೊದಲನೆಯಸಲ ಉದಕಗಳನ್ನು (ವೃಷ್ಟ್ಯುದಕ) ಹುಡುಕುವವನು ಎಂದರೆ ಉಂಟುಮಾಡುವವನು ಎಂದೂ, ಎರಡನೆಯ ಗವೇಷಣ ಶಬ್ದಕ್ಕೆ ಯಜ್ಞಮಾಡುವ ಯಜಮಾನರಿಗೆ ಯಜ್ಞಫಲವನ್ನು ಉಂಟುಮಾಡಿಕೊಡುವವನು ಎಂದೂ ಅರ್ಥ ಮಾಡಿ ಇಂದ್ರ ಶಬ್ದಕ್ಕೆ ವಿಶೇಷಣವಾಗಿರುವುದೆಂದು ಅರ್ಥ ವಿವರಣೆ ಮಾಡಿರುವರು.

**ಸ ಘ ವಿದೇ ಅನು—**ಹಿಂದೆ ಹೇಳಿದಂತೆ ಯಜಮಾನರಿಗೆ ಯಜ್ಞಫಲರೂಪವಾದ ವೃಷ್ಟ್ಯಾದಿಗಳನ್ನು ಹೇಗೆ ಉಂಟುಮಾಡಬೇಕೆಂಬ ವಿಷಯವನ್ನು ಇಂದ್ರನೇ ಚೆನ್ನಾಗಿ ತಿಳಿದಿರುವನೆಂದಭಿಪ್ರಾಯವು.

ಇಂದ್ರನು ಯಜ್ಞಮಾಡುವ ಯಜಮಾನರ ವಿಷಯದಲ್ಲಿ ಸ್ನೇಹಿತನಂತೆಯೂ ಬಂಧುವಿನಂತೆಯೂ ವರ್ತಿಸುವ ನೆಂಬ ವಿಷಯವು— ಋ. ಸಂ. ೨-೧೮-೩; ೨-೨೦-೩; ೩-೫೩-೫; ೪-೧೭-೧೮; ೪-೨೩-೬; ೬-೨೧-೫;; ೬-೪೫-೧, ೭; ೭-೨೧-೯; ೮-೪-೭; ೮-೪೫-೧; ೮-೫೦-೧೧; ೪-೧೭-೧೭; ೮-೮೭-೧೧; ೮-೮೧-೩೨ ಇತ್ಯಾದಿ ಅನೇಕ ಋಕ್ಕುಗಳಲ್ಲಿ ವಿವರಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಪ್ರತ್ನಥಾ—ಪ್ರತ್ನಪೂರ್ವವಿಶ್ವ**—(ಪಾ. ಸೂ. ೫-೩-೧೧೧) ಎಂಬುದರಿಂದ ಸಾದೃಶ್ಯಾರ್ಥದಲ್ಲಿ ಥಾಲ್ ಪ್ರತ್ಯಯ. ಇದು ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತ ಸ್ವರ ಬರುತ್ತದೆ.

**ಶುಶುಕ್ವನಮ್**—ಶುಚ ದೀಪ್ತೌ. ಧಾತು. ಯಙ್ಲುಗಂತದಮೇಲೆ ವನಿಪ್ ಪ್ರತ್ಯಯ. ಅಮ್ ಪರವಾದಾಗ ಛಾಂದಸವಾಗಿ ದೀರ್ಘ ಬರುವುದಿಲ್ಲ. ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ವಾರಮ್**—ವೃಞ್ ವರಣೇ. ಧಾತು. ಘಞ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಕೃಣ್ವತ**—ಕೃವಿ ಹಿಂಸಾಕರಣಯೋಶ್ಚ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನದಲ್ಲಿ **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅತಾದೇಶ. **ಧಿನ್ವಿಕೃಣ್ವ್ಯೋರ ಚ** (ಪಾ. ಸೂ ೩-೧-೮೦) ಎಂಬುದರಿಂದ ಉ ವಿಕರಣ ಅಕಾರಾಂತಾದೇಶ. ಧಾತು ಇದಿತ್ತಾದುದರಿಂದ ನುಮಾಗಮ. **ಅತೋ ಲೋಪಃ** ಸೂತ್ರದಿಂದ ಅಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತಸ್ವರ ಬರುತ್ತದೆ.

**ಕ್ಷಯಂ**—ಕ್ಷಿ ನಿವಾಸಗತ್ಯೋಃ ಧಾತು. ಕ್ಷಿಯಂತಿ ನಿವಸಂತಿ ಅಸ್ಮಿನ್ ಇತಿ ಕ್ಷಯಃ ನಿವಾಸಸ್ಥಾನಮ್. **ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ** ಎಂಬ ವಚನದಿಂದ ಘ ಪ್ರತ್ಯಯ. **ಸಾರ್ವಧಾತುಕಾರ್ಧ**—(ಪಾ. ಸೂ. ೭-೩-೮೪) ಎಂಬುದರಿಂದ ಗುಣ. ಅಯಾದೇಶ. **ಕ್ಷಯೋ ನಿವಾಸೇ** (ಪಾ ಸೂ. ೬-೧-೨೦೧) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಸಿ**—ಅಸ ಭುವಿ. ಧಾತು. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವೋಚೇಃ**—ವಚ ಪರಿಭಾಷಣೇ ಧಾತು. ' ಲಙಿನಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. ವ್ಯತ್ಯಯದಿಂದ ಅಙ್. ಇದು ಪರವಾದಾಗ **ವಚ ಉಮ್** (ಪಾ. ಸೂ. ೭-೪-೨೦) ಸೂತ್ರದಿಂದ ಉಮಾಗಮ. ಗುಣ. ಪ್ರತ್ಯಯಕ್ಕೆ ಯಾಸುಟಾಗಮ ಬಂದಾಗ **ಅತೋಯೇಯಃ** (ಪಾ. ಸೂ. ೭-೨-೮೦) ಎಂಬುದರಿಂದ ಅದಕ್ಕೆ ಇಯಾದೇಶ. ಗುಣ. **ಲೋಪೋವ್ಯೋರ್ವಲಿ** ಎಂಬುದರಿಂದ ಯಕಾರಲೋಪ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. ತಿಙಂತನಿಘಾತಸ್ವರ ಬರುತ್ತದೆ.

**ಘಾ—ಋಚಿತುನುಘ—**(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವಿದೇ—**ಪೂರ್ವಮಂತ್ರದಲ್ಲಿ ಎರಡು ರೀತಿಯಿಂದಲೂ ವ್ಯಾಖ್ಯಾತವಾಗಿದೆ.

**ಗವೇಷಣಃ—**ಬಹುಲಗ್ರಹಣದಿಂದ **(ಕೃತ್ಯಲ್ಯುಟೋ ಬಹುಲಂ)** ಇಷ ಧಾತುವಿಗೆ ಕರ್ತರಿಯಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧.೧) ಎಂಬುದರಿಂದ ಅನಾದೇಶ. ಪ್ರತ್ಯಯ ನಿಮಿತ್ತವಾಗಿ ಧಾತುಲಘೂಪಧೆಗೆ ಗುಣ. ಅಚ್ ಪರವಾದುದರಿಂದ ಅವಾದೇಶ. ಅಥವಾ ಗವೇಷ ಮಾರ್ಗಣೇ. ಧಾತು. ಹಿಂದಿನಂತೆ ಲ್ಯುಟ್. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಬಂಧುಕ್ಷಿದ್ಭ್ಯಃ—**ಕ್ಷಿ ನಿವಾಸಗತ್ಯೋಃ ಧಾತು. ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ನೂ ಇತ್ಥಾ ತೇ ಪೂರ್ವಥಾ ಚ ಪ್ರವಾಚ್ಯಂ ಯದಂಗಿರೋಭ್ಯೋಽ-
ವೃಣೋರಪ ವ್ರಜಮಿಂದ್ರ ಶಿಕ್ಷನ್ನಪ ವ್ರಜಂ ।
ಐಭ್ಯಃ ಸಮಾನ್ಯಾ ದಿಶಾಸ್ಮಭ್ಯಂ ಜೇಷಿ ಯೋತ್ಸಿ ಚ ।
ಸುನ್ವದ್ಭ್ಯೋ ರಂಧಯಾ ಕಂ ಚಿದವ್ರತಂ ಹೃಣಾಯಂತಂ ಚಿದವ್ರತಂ ॥ ೪ ॥

॥ ಪದಪಾಠಃ ॥

ನು । ಇತ್ಥಾ । ತೇ । ಪೂರ್ವಽಥಾ । ಚ । ಪ್ರಽವಾಚ್ಯಂ । ಯತ್ । ಅಂಗಿರಃಽಭ್ಯಃ । ಅವೃಣೋಃ । ಅಪ ।
ವ್ರಜಂ । ಇಂದ್ರ । ಶಿಕ್ಷನ್ । ಅಪ । ವ್ರಜಂ ।
ಆ । ಐಭ್ಯಃ । ಸಮಾನ್ಯಾ । ದಿಶಾ । ಅಸ್ಮಭ್ಯಂ । ಜೇಷಿ । ಯೋತ್ಸಿ । ಚ ।
ಸುನ್ವತ್ಽಭ್ಯಃ । ರಂಧಯ । ಕಂ । ಚಿತ್ । ಅವ್ರತಂ । ಹೃಣಾಯಂತಂ । ಚಿತ್ । ಅವ್ರತಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಸಂಬಂಧಿ ಕರ್ಮೇತ್ಥೇತ್ಥಮುಕ್ತಪ್ರಕಾರಂ ವಕ್ಷ್ಯಮಾಣರೂಪಂ ವಾ ಪೂರ್ವಥಾ ಪೂರ್ವಮಿವ ಪೂರ್ವಂ ಯಥಾ ನು ಕ್ಷಿಪ್ರಂ ಪ್ರವಾಚ್ಯಂ ಸರ್ವೈಃ ಸ್ತೋತವ್ಯಂ ತದ್ವದಿದಾನೀಂತನಮಪಿ ಸ್ತುತ್ಯಂ ॥ ನೂ ಇತ್ಥೇತ್ಯತ್ರೇಷಾಅಕ್ಷಾದಿತ್ವಾತ್ಪ್ರಕೃತಿಭಾವಃ ॥ ಕೀದೃಶಂ ತದಿತಿ ತದುಚ್ಯತೇ । ಯತ್ತ್ವಮಂಗಿರೋಭ್ಯ ಏತದ್ಗೋತ್ರೋತ್ಪನ್ನೇಭ್ಯೋ ಮಹರ್ಷಿಭ್ಯಸ್ತೇಷಾಮರ್ಥಾಯ ವ್ರಜಮಂತರಿಕ್ಷೇ ಗಚ್ಛಂತಂ ಮೇಘಮಪಾವೃಣೋಃ ಅಪವೃತವಾನಸಿ ಮೇಘಮುತ್ಪಾಟ್ಯ ವೃಷ್ಟಿಮುತ್ಪಾದಿತವಾನಸಿ । ವ್ರಜ ಇತಿ ಮೇಘನಾಮ ವ್ರಜೋ ವರಾಹ ಇತಿ ತನ್ನಾಮಸು ಪಾಠಾತ್ । ಕಿಂಚ ಹೇ ಇಂದ್ರ ವ್ರಜಂ ಗವಾಂ ಸಮೂಹಮಪಾಯಸ್ಯುಭ್ಯೋಽಪಹೃತ್ಯ ತೇಭ್ಯ ಏವಾಂಗಿರೋಭ್ಯಃ ಶಿಕ್ಷನ್ ವಿತರನ್ ರಕ್ಷಿತವಾನಸಿ । ಯದ್ವಾ । ಪಣಿಭಿರಪಹೃತಂ ಬಿಲೇ ಸ್ಥಿತಂ ಗವಾಂ ವ್ರಜಮುಪಹರ್ತುಮಪಾವೃಣೋಃ । ಅಪವೃತದ್ವಾರಮಕರೋಃ । ಕಿಂಚ ಹೇ ಇಂದ್ರ ಏಭ್ಯ ಉಕ್ತೇಭ್ಯ ಋಷಿಭ್ಯಃ ಸಮಾನ್ಯಾ ದಿಶಾ ಸಮಾನಯಾ ರೀತ್ಯಾ ತೇಭ್ಯೋ ಯಥಾ ದದಾಸಿ ತದ್ವದಸ್ಮಭ್ಯಮಪಿ ಜೇಷಿ । ಧನಂ ಸಂಗ್ರಾಮಂ ವಾ ಜಯ । ತದರ್ಥಂ ಯೋತ್ಸಿ । ಯುಧ್ಯಸ್ವ ಚ ॥ ಛಾಂದಸೋ ವಿಕರಣಸ್ಯ ಲುಕ್ । ವ್ಯತ್ಯಯೇನ ಪರಸ್ಮೈಪದಂ ॥ ಕಿಂಚ ತ್ವಂ ಸುನ್ವದ್ಭ್ಯಸ್ತ್ವದರ್ಥಮಭಿಷವಂ ಕುರ್ವದ್ಭ್ಯೋಽಸ್ಮಭ್ಯಂ ಕಂ ಚಿದವ್ರತಂ ಸರ್ವಮಪ್ಯಯಜ್ವಾನಂ ಯಾಗವಿರೋಧಿನಂ ರಂಧಯ । ಬಾಧಯ । ಮದಧೀನಂ ಕುರ್ವಿತ್ಯರ್ಥಃ । ನ ಕೇವಲಮಯಜ್ವಾನಂ ಕಿಂತು ಹೃಣಾಯಂತಂ ಚಿದವ್ರತಂ ॥ ಚಿದಿತ್ಯವಕುತ್ಸಿತೇ ॥ ಅಸ್ಮಾಸು ರೋಷಂ ಕುರ್ವಂತಂ ತಮೇವಾಯಷ್ಟಾರಂ ಸ್ವಯಂ ರೋಷವಂತಂ ವಾ । ಯದ್ವಾ । ಹೃಣಾಯಂತಂ ಚಿತ್ ರೋಷಂ ಕುರ್ವಂತಮಪ್ಯವ್ರತಮಕರ್ಮಾಣಂ ಪುನರ್ಹನನಾಸಮರ್ಥಂ ಕುರ್ವನ್ ರಂಧಯ ॥ ಹೃಣೀಙ್ ರೋಷೇ ಕಂಡ್ವಾದಿಃ । ವ್ಯತ್ಯಯೇನಾಕಾರಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—(ಎಲೈ) ಇಂದ್ರನೇ । **ಯತ್ (ತ್ವಂ)**—ಯಾವ (ನೀನು) । **ಅಂಗಿರೋಭ್ಯಃ**—ಅಂಗಿರಸರಿಗೋಸ್ಕರ । **ವ್ರಜಂ**—(ಅಂತರಿಕ್ಷದಲ್ಲಿ) ನಿರ್ಗಮಿಸುತ್ತಿರುವ (ಮೇಘವನ್ನು) । **ಅಪ ಅವೃಣೋಃ**—ಅಪಾವೃತವನ್ನಾಗಿ ಮಾಡಿದೆ (ವೃಷ್ಟಿಗರೆಸಿದೆ) ಯೋ । (ಮತ್ತು) **ವ್ರಜಂ**—ಗೋವೃಂದವನ್ನು (ಪಣಿಯಿಂದ ಅಪಹೃತವಾದ ಗೋವುಗಳನ್ನು) । **ಅಪ**—(ಅಯಜ್ವಗಳಾದವರಿಂದ) ಕಸಿದುಕೊಂಡು । (ದ್ವಾರವನ್ನು ಒಡೆದು) । **ಶಿಕ್ಷನ್**—(ಆ ಅಂಗಿರಸರಿಗೇ) ಕೊಟ್ಟಿಯೋ (ರಕ್ಷಿಸಿದೆಯೋ) । **(ತತ್**—ಆ) । **ತೇ**—ನಿನ್ನ ಸಂಬಂಧವಾದ । **ಇತ್ಥಾ**—ಉಕ್ತಪ್ರಕಾರವಾದ ಕರ್ಮವು । **ಪೂರ್ವಥಾ**—ಪೂರ್ವದಲ್ಲಿ (ಹೇಗೆ ಸ್ತುತ್ಯವಾಗಿತ್ತೋ) ಹಾಗೆ । **ನು ಚ**—ಕ್ಷಿಪ್ರವಾಗಿ (ಈಗಲೂ) । **ಪ್ರ ವಾಚ್ಯಂ**—ಸ್ತುತಿಸಲ್ಪಡಬೇಕು । **(ಕಿಂಚ**—ಮತ್ತು) । **(ಹೇ ಇಂದ್ರ**—ಎಲೈ ಇಂದ್ರನೇ । **ಏಭ್ಯಃ**—ಈ (ಮೇಲೆ ಹೇಳಿದ ಋಷಿಗಳಿಗೆ) । **ಸಮಾನ್ಯಾ ದಿಶಾ**—ಒಂದೇ ರೀತಿಯಲ್ಲಿ (ಹೇಗೆ ಕೊಡುತ್ತೀಯೋ) ಹಾಗೆ । **ಅಸ್ಮಭ್ಯಂ**—ನಮಗೋಸ್ಕರಲೂ । **ಆ ಜೇಷಿ**—ಧನವನ್ನು ಗಳಿಸು ಅಥವಾ ಸಂಗ್ರಾಮದಲ್ಲಿ ಜಯಶೀಲನಾಗು । (ಅದಕ್ಕೋಸ್ಕರ) **ಯೋತ್ಸಿ ಚ**—ಯುದ್ಧವನ್ನೂ ಮಾಡು । (ಮತ್ತೂ) **ಸುನ್ವದ್ಭ್ಯಃ**—(ನಿನಗೋಸ್ಕರ) ಸೋಮಾಭಿಷವ ಮಾಡುವ (ನಮಗೋಸ್ಕರ) । **ಅವ್ರತಂ**—ಯಾಗ ಮಾಡದೇ ಇರುವ (ಯಾಗ ವಿರೋಧಿಯಾದ) ।

**ಕಂ ಚಿತ್**—ಯಾವನೊಬ್ಬನನ್ನೂ ಮತ್ತು । **ಹೃಣಾಯಂತಂ**—ನಮ್ಮ ಮೇಲೆ ಕೋಪಮಾಡುವ । **ಅವ್ರತಂ ಚಿತ್**—ಯಾಗ ಮಾಡದೇ ಇರುವವನನ್ನೂ (ಯಾಗ ವಿರೋಧಿಯನ್ನು) [ಅಥವಾ । **ಹೃಣಾಯಂತಂ**—(ನಮ್ಮ ಮೇಲೆ) ಕೋಪಮಾಡುವವನನ್ನು । **ಅವ್ರತಂ ಚಿತ್**—(ಪುನಃ ಹನನಾದಿ) ಕರ್ಮ ಅಯೋಗ್ಯನನ್ನಾಗಿ (ಮಾಡಿ)] **ರಂಧಯ**—ಬಾಧಿಸು (ನಮ್ಮ ಅಧೀನನನ್ನಾಗಿ ಮಾಡು).

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಸಾಹಸ ಕರ್ಮಗಳು ಪ್ರಶಂಸನೀಯವಾದವುಗಳೇ; ಹಿಂದೆ, ನಿರ್ಗಮಿಸುತ್ತಿರುವ ಮೇಘವನ್ನು ಭೇದಿಸಿ ಉದಕವನ್ನು ಮತ್ತು ಗೋವುಗಳನ್ನು ಅಂಗಿರಸರಿಗೆ ಕೊಟ್ಟಾಗ, ನಿನ್ನನ್ನು ಸ್ತುತಿಸಿದಂತೆ ಈಗಲೂ ಸ್ತುತಿಸಬೇಕು; ಎಲೈ ಇಂದ್ರನೇ, ಆ ಋಷಿಗಳಿಗೋಸ್ಕರ ಮಾಡಿದಂತೆ, ನಮಗಾಗಿ ಜಯವನ್ನು (ಧನಾದಿಗಳನ್ನು) ಗಳಿಸು, ಮತ್ತು ಯುದ್ಧಮಾಡು; ನಿನಗೋಸ್ಕರ ಸೋಮಾಭಿಷವ ಮಾಡುವ ನಮಗೋಸ್ಕರ, ಯಾಗ ಮಾಡದೇ ಇರುವವನನ್ನೂ, ನಮ್ಮ ಮೇಲೆ ಕೋಪಿಸಿಕೊಂಡಿರುವವನನ್ನೂ ಮತ್ತು ಯಾಗವಿರೋಧಿಯನ್ನೂ ಬಂಧಿಸು (ನಮಗೆ ಅಧೀನನನ್ನಾಗಿ ಮಾಡು).

## English Translation

Your exploits, Indra, are worthy to be glorified; now, verily, as well as in former times, when you opened the cloud for the Angirasas, restoring to them their cattle—conquer for us, fight for us, as you did for them: humble in behalf of those who present libations, him who offers no worship; him who rages against us and offers no worship.

॥ ವಿಶೇಷವಿಷಯಗಳು ॥

**ನೂ ಇತ್ಥಾ ತೇ ಪೂರ್ವಥಾ ಚ ಪ್ರವಾಚ್ಯಂ**—ಇಂದ್ರನ ಸಾಹಸ ಕರ್ಮಗಳ ಗುಣಗಾನವನ್ನು ಹಿಂದೆ ಅನೇಕ ಋಷಿಗಳು—ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ (ಋ. ಸಂ. ೧-೩೨-೧) ಇತ್ಯಾದ್ಯನೇಕ ಋಕ್ಕುಗಳಲ್ಲಿ ಮಾಡಿರುವಂತೆ ಈಗಲೂ ಮಾಡಲ್ಪಡಬೇಕು ಎಂದು ಋಷಿಯು ಹೇಳಿರುವನು. ಆ ಸಾಹಸ ಕಾರ್ಯಗಳು ಅನೇಕ ವಿದ್ದರೂ ಅವುಗಳಲ್ಲಿ ಮುಖ್ಯವಾದ ಒಂದು ವಿಷಯವನ್ನು ಎಂದರೆ ಅಂಗಿರಾ ಋಷಿಗಳ ಗೋವುಗಳನ್ನು ವಲನೆಂಬ ಅಸುರನು ಅಪಹರಿಸಿ ಬಚ್ಚಿಟ್ಟಿದ್ದನ್ನು ಇಂದ್ರನು ಬಿಡಿಸಿ ತಂದುಕೊಟ್ಟನು ಎಂಬ ಸಾಹಸ ಕಾರ್ಯವನ್ನು ಚೆನ್ನಾಗಿ ಪ್ರಶಂಸೆಮಾಡಬೇಕು ಎಂದಭಿಪ್ರಾಯವು.

**ಯದಂಗಿರೋಭ್ಯೋಽವೃಣೋರಪ ವ್ರಜಮಿಂದ್ರ ಶಿಕ್ಷನ್ನಪ ವ್ರಜಂ**—ಈ ವಾಕ್ಯಕ್ಕೆ ಭಾಷ್ಯಕಾರರು ಎರಡುವಿಧವಾಗಿ ಅರ್ಥ ಮಾಡಿರುವರು. ವ್ರಜವೆಂದರೆ ಅಂತರಿಕ್ಷದಲ್ಲಿ ಸಂಚಾರಮಾಡುವ ಮೇಘವನ್ನು ಭೇದಿಸಿ, ಅಂಗಿರಾ ಋಷಿಗಳ ಪ್ರೀತ್ಯರ್ಥವಾಗಿ ವೃಷ್ಟಿಯನ್ನುಂಟುಮಾಡಿದನು ಎಂದು ಒಂದರ್ಥವನ್ನೂ, ಹಿಂದೆ ವಲನ ಅನುಚರರಾದ ಪಣಿಗಳು ಅಂಗಿರಾ ಋಷಿಯೇ ಮೊದಲಾದವರ ಗೋವುಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟಿದ್ದಾಗ ಇಂದ್ರನು ಅವುಗಳನ್ನು ಹುಡಿಕಿ, ಆ ಗುಹೆಯ ದ್ವಾರಗಳನ್ನು ತೆರೆದು, ಗೋವುಗಳನ್ನು ಬಿಡಿಸಿ ತಂದು ಅಂಗಿರಾ ಋಷಿಗಳಿಗೆ

ಹಿಂದಕ್ಕೆ ಕೊಟ್ಟನು ಎಂಬ ಇನ್ನೊಂದು ವಿಧವಾದ ಅರ್ಥವನ್ನೂ ಹೇಳಿರುವರು. ಇಲ್ಲಿ ವ್ರಜ ಶಬ್ದವು ಎರಡಾವರ್ತಿ ಪಠಿತವಾಗಿದೆ. ಒಂದನೇ ವ್ರಜಕ್ಕೆ ಅಂತರಿಕ್ಷದಲ್ಲಿ ಸಂಚರಿಸುವ ಮೇಘಸಮೂಹವೆಂದೂ, ಎರಡನೇ ವ್ರಜಕ್ಕೆ ಪಣಿಗಳಿಂದ ಅಪಹೃತವಾದ ಗೋಸಮೂಹವೆಂದೂ ಅರ್ಥ ಮಾಡಿರುವರು. ಇಂದ್ರನು ಪಣಿಗಳಿಂದ ಗೋವುಗಳನ್ನು ಬಿಡಿಸಿದ ವಿಷಯದಲ್ಲಿ ಅಂಗಿರಸರು ಇಂದ್ರನಿಗೆ ಮಾಡಿದ ಸಹಾಯ ಮೊದಲಾದ ವಿಷಯಗಳು ಋ. ಸಂ. ೧೦-೧೦೮-೮,೧೦ ಮೊದಲಾದ ಋಕ್ಕುಗಳಲ್ಲಿ ಹೇಳಿದೆ.

**ಅಂಗಿರೋಭ್ಯಃ**--ಅಂಗಿರಾ ಎಂಬ ಋಷಿಯು ಆ ಹೆಸರಿನ ವಂಶಕ್ಕೆ ಮೂಲಪುರುಷನಾದರೂ ಆ ಋಷಿಯ ವಿಷಯವಾಗಿ ಋಗ್ವೇದದಲ್ಲಿ ಹೆಚ್ಚು ಸಂಗತಿಗಳಿಲ್ಲ ಋ. ಸಂ. ೧. ೪೫-೩; ೧-೧೩೯-೯; ೩-೩೧-೭; ಛಾ. ಉ. ೧-೨-೧೦; ಅ. ವೇ ೧೮-೪-೮; ಪಂಚವಿಂಶಬ್ರಾಹ್ಮಣ ೨೦-೧೧-೧; ತೈ. ಸಂ. ೭-೧-೪-೧ ಇತ್ಯಾದಿ ಸ್ಥಳಗಳಲ್ಲಿ ಈ ಋಷಿಯ ಪ್ರಸ್ತಾಪವಿದೆ. ಅಂಗಿರಸಃ. ಅಂಗಿರೋಭ್ಯಃ ಎಂದು ಮೊದಲಾದ ಬಹುವಚನಪ್ರಯೋಗವಿರುವ ಕಡೆಗಳಲ್ಲಿ ಈ ಋಷಿಯ ವಂಶಸ್ಥರೆಂದು ತಿಳಿಯಬೇಕು.

**ಆ ಏಭ್ಯಃ ಸಮಾನ್ಯಾ ದಿಶಾ ಅಸ್ಮಭ್ಯಂ ಜೇಷಿ ಯೋತ್ಸಿ ಚ**—ಇಲ್ಲಿ **ಸಮಾನ್ಯಾ ದಿಶಾ** ಎಂದರೆ—ಸಮಾನಯಾ ರೀತ್ಯಾ—ಸಮವಾದ ರೀತಿಯಿಂದ ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು. ಆದುದರಿಂದ ಮೇಲಿನ ವಾಕ್ಯಕ್ಕೆ—ಆ ಅಂಗಿರಾ ಋಷಿಯ ವಂಶಸ್ಥರಿಗೆ ನೀನು ಯಾವ ಪ್ರಕಾರವಾಗಿ ಸಹಾಯ ಮಾಡಿದೆಯೋ ಅದೇ ಪ್ರಕಾರವಾಗಿ ನಮಗೂ ಸಹಾಯಮಾಡು. ಮತ್ತು ನಮ್ಮ ಶತ್ರುಗಳೊಡನೆ ಯುದ್ಧಮಾಡಿ ಅವರನ್ನು ಜಯಿಸು ಎಂದು ಋಷಿಯು ಪ್ರಾರ್ಥಿಸಿರುವನು.

**ಸುನ್ವದ್ಭ್ಯಃ ರಂಧಯ ಚಿತ್ ಅವ್ರತಂ**—ಇಲ್ಲಿ ಸುನ್ವದ್ಭ್ಯಃ ಎಂದರೆ ಸೋಮಾಭಿಷವವನ್ನು ಅಥವಾ ನಿನ್ನ ಪ್ರೀತ್ಯರ್ಥವಾಗಿ ಸೋಮಯಾಗವನ್ನು ಮಾಡುವ ನಮಗಾಗಿ, ನಮಗೆ ತೊಂದರೆಯ ಪರಿಹಾರವಾಗುವುದಕ್ಕಾಗಿ ಎಂದರ್ಥ. ಅವ್ರತಂ ಎಂದರೆ ವ್ರತರಹಿತರಾದವರನ್ನು, ಕರ್ಮ (ಯಜ್ಞಕರ್ಮ) ವನ್ನು ಮಾಡದಿರುವವರನ್ನು ಎಂದರ್ಥವು. ಆದುದರಿಂದ ನಿನ್ನ ಪ್ರೀತ್ಯರ್ಥವಾಗಿ ಯಜ್ಞಾದಿ ಕರ್ಮಗಳನ್ನು ಮಾಡದೆ, ಯಜ್ಞಮಾಡುವ ನಮಗೆ ತೊಂದರೆಯನ್ನುಂಟುಮಾಡುವ ದುಷ್ಟಜನರನ್ನು ಬಾಧೆಪಡಿಸಿ, ಅವರನ್ನು ನಾಶಗೊಳಿಸಿ, ನಮಗೆ ಅನುಕೂಲವಾಗುವಂತೆ ಸಹಾಯಮಾಡು ಎಂದು ಇಂದ್ರನನ್ನು ಪ್ರಾರ್ಥಿಸಿದೆ.

**ಹೃಣಾಯಂತಂ ಚಿತ್ ಅವ್ರತಂ**—ಇಲ್ಲಿ ಚಿತ್ ಎಂಬ ಶಬ್ದವು ಅವಕುತ್ಸನ, ದೂಷಣೆ ಎಂಬರ್ಥದಲ್ಲಿ ಪ್ರಯುಕ್ತವಾಗಿರುವುದು. ಕೋಪದಿಂದ ಕೂಡಿ ದೂಷಣೆ ಮಾಡುತ್ತಿರುವ ಮತ್ತು ಯಜ್ಞಾದಿ ಕರ್ಮಗಳನ್ನು ಮಾಡದಿರುವ ದುಷ್ಟರನ್ನು ಬಾಧೆಪಡಿಸು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ನೂ—ಋಚಿತುನುಘ**—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ ನೂ+ಇತ್ಥಾ ಎಂದಿರುವಾಗ ಈಷಾ ಅಕ್ಷಾದಿಯಲ್ಲಿ ಸೇರಿರುವುದರಿಂದ ಪ್ರಕೃತಿಭಾವ ಬರುತ್ತದೆ.

**ಪೂರ್ವಥಾ—ಪ್ರತ್ನಪೂರ್ವ ವಿಶ್ವ**—(ಪಾ. ಸೂ. ೫-೩-೧೧೧) ಎಂಬುದರಿಂದ ಸಾದೃಶ್ಯಾರ್ಥದಲ್ಲಿ ಥಾಲ್. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಪ್ರವಾಚ್ಯಮ್**—ವಚ ಪರಿಭಾಷಣೇ. ಧಾತು. **ಋಹಲೋರ್ಣ್ಯತ್** ಎಂಬುದರಿಂದ ಣ್ಯತ್ ಪ್ರತ್ಯಯ. **ಅತ ಉಪಧಾಯಾಃ** (ಪಾ.ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. **ಯಜಯಾಚರುಚಪ್ರವಚರ್ಚಶ್ಚ** (ಪಾ. ಸೂ. ೭-೩-೬೬) ಎಂಬುದರಿಂದ ಕುತ್ವ ನಿಷೇಧ ಬರುತ್ತದೆ. ತಿತ್ ಆದುದರಿಂದ ಸ್ವರಿತವು ಪ್ರಾಪ್ತವಾದರೆ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ಅಥವಾ ಣ್ಯಂತದಮೇಲೆ ಯತ್ ಪ್ರತ್ಯಯ ಬಂದಾಗ **ಯತೋಽನಾವಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅವೃಣೋಃ**—ವೃಞ್ ವರಣೇ. ಧಾತು ಲಙ್ ಮಧ್ಯಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ.

**ಶಿಕ್ಷನ್**—ಶಿಕ್ಷ ದಾನೇ. ದಾನಾರ್ಥಧಾತುಮಧ್ಯೇ ಪಠಿತವಾಗಿದೆ. ಲಡರ್ಥದಲ್ಲಿ ಶತೃ ಪ್ರತ್ಯಯ. ಲಸಾರ್ವಧಾತುಕ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ

**ಸಮಾನ್ಯಾ**—ಸಮಾನೀ+ಆ ಎಂದಿರುವಾಗ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು, ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋ ಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಯು ಉದಾತ್ತವಾಗುತ್ತದೆ. ದಿಶಾ ಎಂಬಲ್ಲಿ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಯು ಉದಾತ್ತವಾಗುತ್ತದೆ.

**ಜೇಷಿ**—ಜಿ ಜಯೇ. ಧಾತು. ಲಟ್ ಮಧ್ಯಮಪುರುಷ ಏಕವಚನ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಸಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. **ಆದೇಶಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯಕ್ಕೆ ಷತ್ವ. ತಿಙಂತ ನಿಘಾತಸ್ವರ ಬರುತ್ತದೆ.

**ಯೋತ್ಸಿ**—ಯುಧ ಸಂಪ್ರಹಾರೇ. ಧಾತು. **ವ್ಯತ್ಯಯೋ ಬಹುಲಮ್** ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಹಿಂದಿನಂತೇ ಸಿಪ್ ಪರವಾದಾಗ ವಿಕರಣಕ್ಕೆ ಲುಕ್. ಲಘೂಪಧಗುಣ. **ಖರಿ ಚ** ಎಂಬುದರಿಂದ ಚರ್ತ್ವ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸುನ್ವದ್ಭ್ಯಃ**— ಷುಞ್ ಅಭಿಷವೇ. ಧಾತು. ಲಟಿಗೆ ಶತ್ರಾದೇಶ. ಶ್ನು ವಿಕರಣ. ವಿಕರಣಸ್ವರ ಉಳಿಯುತ್ತದೆ.

**ರಂಧಯ**—ರಧ ಹಿಂಸಾಸಂರಾದ್ಧ್ಯೋಃ ಧಾತು. ದಿವಾದಿ. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ರಧಿಜಭೋರಚಿ** (ಪಾ.ಸೂ. ೭-೧-೬೧) ಎಂಬುದರಿಂದ ಧಾತುವಿಗೆ ನುಮಾಗಮ. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನವಲ್ಲಿ ರಂಧಯ ಎಂದು ರೂಪವಾಗುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

**ಅವ್ರತಂ**—ನ ವಿದ್ಯತೇ ವ್ರತಂ ಯಸ್ಯ ಸಃ ತಮ್. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಹೃಣಾಯಂತಮ್**—ಹೃಣೀಙ್ ರೋಷೇ. ಧಾತು. ಕಂಡ್ವಾದಿ. **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. ವ್ಯತ್ಯಯದಿಂದ ಧಾತುವಿಗೆ ಆಕಾರಾದೇಶ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. ಯಕ್ ಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನಾಂತರೂಪ. ‖ ೪ ‖



‖ ಸಂಹಿತಾಪಾಠಃ ‖

ಸಂ ಯಜ್ಜನಾನ್ ಕ್ರತುಭಿಃ ಶೂರ ಈಕ್ಷಯದ್ಧನೇ ಹಿತೇ ತರುಷಂತ ।
ಶ್ರವಸ್ಯವಃ ಪ್ರ ಯಕ್ಷಂತ ಶ್ರವಸ್ಯವಃ ।
ತಸ್ಮಾ ಆಯುಃ ಪ್ರಜಾವದಿದ್ಬಾಧೇ ಅರ್ಚಂತ್ಯೋಜಸಾ ।
ಇಂದ್ರ ಓಕ್ಯಂ ದಿಧಿಷಂತ ಧೀತಯೋ ದೇವಾ ಅಚ್ಛಾ ನ ಧೀತಯಃ ‖ ೫ ‖

‖ ಪದಪಾಠಃ ‖

ಸಂ । ಯತ್ । ಜನಾನ್ । ಕ್ರತುಽಭಿಃ । ಶೂರಃ । ಈಕ್ಷಯತ್ । ಧನೇ । ಹಿತೇ । ತರುಷಂತ ।
ಶ್ರವಸ್ಯವಃ । ಪ್ರ । ಯಕ್ಷಂತ । ಶ್ರವಸ್ಯವಃ ।
ತಸ್ಮೈ । ಆಯುಃ । ಪ್ರಜಾಽವತ್ । ಇತ್ । ಬಾಧೇ । ಅರ್ಚಂತಿ । ಓಜಸಾ ।
ಇಂದ್ರೇ । ಓಕ್ಯಂ । ದಿಧಿಷಂತ । ಧೀತಯಃ । ದೇವಾನ್ । ಅಚ್ಛ । ನ । ಧೀತಯಃ ‖ ೫ ‖

‖ ಸಾಯಣಭಾಷ್ಯಂ ‖

ಯದ್ಯ ಇಂದ್ರಃ ಶೂರೋ ವಿಕ್ರಾಂತಃ ಸನ್ ಜನಾನ್ ಸರ್ವಾನ್ಪ್ರಾಣಿನಃ ಕ್ರತುಭಿಃ ಪ್ರಜ್ಞಾಭಿಃ ಸಮೀಕ್ಷಯತ್ ಸಮ್ಯಗೀಕ್ಷಯತಿ ತತ್ತದ್ವಿಷಯಾನ್ । ಅಂತರ್ಯಾಮಿರೂಪೇಣ ಸರ್ವೇಷಾಂ ಬುದ್ಧಿಷು ಸ್ಥಿತ್ವಾ ತೈರ್ವಿಷಯಾನುಲ್ಲೇಖಯತೀತ್ಯರ್ಥಃ । ಯದ್ವಾ । ಕ್ರತುಭಿಃ ಕರ್ಮಭಿಃ ಸುಕೃತದುಷ್ಕೃತರೂಪೈರ್ನಿಮಿತ್ತಭೂತೈಸ್ತತ್ತತ್ಫಲೈರ್ಯೋಜಯತಿ । ಏವಂ ಪ್ರೇರಯತಿ ಸತಿ ಶ್ರವಸ್ಯವೋಽನ್ನಮಿಚ್ಛಂತೋ ಯಜಮಾನಾ ಧನೇ ಗವಾದಿರೂಪೇ ಹಿತೇಽಭಿಮತೇ ಸತಿ । ಯದ್ವಾ । ಹಿತೇ ಧನೇಽಭಿಪ್ರೇತೇ ಸತಿ । ತರುಷಂತ । ಹಿಂಸಂತಿ ಶತ್ರೂನ್ ‖ ತರುಷ್ಯತಿರ್ವಧಕರ್ಮಾ । ಛಾಂದಸೇ ಲುಙಿ ವ್ಯತ್ಯಯೇನ

ಚ್ಲೇರಙ್ । ತರತೇರ್ವಾ ಲುಙ್ಯ ಕಾರಸಿಪ್ಯಪಸ್ತ್ರಯೋ ವಿಕರಣಾಃ ॥ ತರಂತೀತ್ಯರ್ಥಃ । ಅತಃ ಕಾರಣಾತ್ ಶ್ರವಸ್ಯವೋಽನ್ನಂ ಹವಿರ್ಲಕ್ಷಣಮಿಂದ್ರಾಯಾತ್ಮನೇ ವೇಚ್ಛಂತಃ ಸಂತಃ ಪ್ರ ಯುಕ್ಷಂತ । ಪ್ರಕರ್ಷೇಣ ಯಜಂತೇ ॥ ಛಾಂದಸೇ ಲುಙಿ ವ್ಯತ್ಯಯೇನ ಕ್ಸಃ ॥ ಕಿಂಚ ತಸ್ಮಾ ಇತ್ ತಸ್ಮೈ ಪ್ರಸಿದ್ಧಾಯೇಂದ್ರಾಯೈ-ವಾಯುರ್ಹವಿರ್ಲಕ್ಷಣಮನ್ನಂ ಪ್ರಜಾವತ್ ಪುತ್ರಾದಿಸಹಿತಂ ಭವತಿ । ತೈಃ ಸಹಿತೈರ್ದೀಯತ ಇತ್ಯರ್ಥಃ । ಕಿಂಚ ಯಜಮಾನಾ ಓಜಸಾ ಸ್ವಕೀಯೇನ ಬಲೇನ ಯುಕ್ತಾ ಬಾಧೇ ಶತ್ರೂಣಾಂ ಬಾಧನೇ ನಿಮಿತ್ತ-ಭೂತೇ ಸತಿ ಬಾಧಿತುಂ ವಾ ॥ ಕೃತ್ಯಾರ್ಥೇ ತವೈಕೇನ್ಕೇನ್ಯತ್ವನ ಇತಿ ಕೇನ್ಪ್ರತ್ಯಯಃ ॥ ಅರ್ಚಂತಿ । ಪೂಜಯಂತಿ । ಯದ್ವಾ । ತಸ್ಮಾ ಇದ್ಯಜಮಾನಾಯೈವ ಬಾಧೇ ಬಲೇ ನಿಮಿತ್ತಭೂತೇ ಸತಿ । ಬಾಧ ಇತಿ ಬಲನಾಮ ಬಾಧಸ್ತವಿಷೀತಿ ತನ್ನಾಮಸು ಪಾಠಾತ್ । ಪ್ರಜಾವತ್ ಪುತ್ರಾದ್ಯುಪೇತಮಾಯುರನ್ನಂ ಲಬ್ಧ್ವನೋಜಸಾ ಬಲೇನ ಯುಕ್ತಾ ಅರ್ಚಂತಿ । ಇಂದ್ರಂ ಪೂಜಯಂತಿ ಋತ್ವಿಜ ಇತಿ ಶೇಷಃ । ಕಿಂಚ ಧೀತಯಃ ಕರ್ಮವಂತೋ ಯಜಮಾನಾ ಇಂದ್ರಂ ಇಂದ್ರಸಮೀಪೇ ॥ ಗಂಗಾಯಾಂ ಘೋಷ ಇತಿವತ್ ತತ್ಸಾಮೀಪ್ಯಂ ಲಕ್ಷ್ಯತೇ ॥ ಇಂದ್ರಲೋಕ ಇತ್ಯರ್ಥಃ । ತತ್ರಾಕ್ಯನೋಕೋ ನಿವಾಸಸ್ಥಾನಂ ॥ ಸ್ವಾರ್ಥೇ ಯತ್ ॥ ದಿಧಿಷಂತ । ಧಾರಯಂತಿ ॥ ಧಿಷ ಶಬ್ದೇ । ಅತ್ರ ಧಾರಣಾರ್ಥಃ । ಜೌಹೋತ್ಯಾದಿಕಃ । ವ್ಯತ್ಯ-ಯೇನಾಂತಾದೇಶಃ ॥ ತ ಏವ ಪುನರ್ವಿಶೇಷ್ಯಂತೇ । ಧೀತಯಃ ಸ್ವರ್ಗಸಾಧನಕರ್ಮವಂತಃ ಸಂತೋ ದೇವಾಁ ಅಚ್ಛಾ ನ ದೇವಾನಾಭಿಮುಖ್ಯೇನ ಪ್ರಾಪ್ತುಮಿವಾೈಕ್ಯಂ ದಿಧಿಷಂತೇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಯತ್**— ಯಾವ ಕಾರಣ । **ಶೂರಃ**— ಪರಾಕ್ರಮಿಯಾದ । (**ಯಃ**— ಯಾವ ಇಂದ್ರನು) । **ಜನಾನ್**— ಎಲ್ಲಾ ಪ್ರಾಣಿಗಳನ್ನೂ । **ಕ್ರತುಭಿಃ**—(ಅವರವರ) ಬುದ್ಧಿಗಳಿಂದ । **ಸಂ ಈಕ್ಷಯತ್**—ಚೆನ್ನಾಗಿ ತೋರಿಸುತ್ತಾನೋ ಅಥವಾ । **ಕ್ರತುಭಿಃ**—ಕರ್ಮಗಳಿಂದ (ಬುದ್ಧಿಯಿಂದ) । **ಸಂ ಈಕ್ಷಯತ್**—(ಸುಕೃತ ದುಷ್ಕೃತ ನಿಮಿತ್ತವಾದ ಫಲಗಳೊಡನೆ ಯೋಜನೆಮಾಡುತ್ತಾನೋ ಅಥವಾ ಚೆನ್ನಾಗಿ ಪ್ರೇರಿಸುತ್ತಾನೋ ಮತ್ತು । **ಶ್ರವಸ್ಯವಃ**— ಅನ್ನವನ್ನು ಅಪೇಕ್ಷಿಸುವ ಯಜಮಾನರು । **ಧನೇ**—(ಗವಾದಿರೂಪ) ಧನವು । **ಹಿತೇ**—ಅಭಿಮತವಾಗಿರಲು [ಅಥವಾ । **ಹಿತೇ**—ಅಭಿಮತವಾದ ಇಷ್ಟವಾದ । **ಧನೇ**—ಗವಾದಿಧನವು ಅಭಿಪ್ರೇತವಾಗಿರಲು ।] **ತರುಷಂತ**— ಶತ್ರುಗಳನ್ನು (ಹಿಂಸಿಸುತ್ತಾರೋ) । (**ಅತಃ**—ಆ ಕಾರಣದಿಂದ) । **ಶ್ರವಸ್ಯವಃ**—(ತಮಗೋಸ್ಕರ ಅಥವಾ ಇಂದ್ರಾದಿಗಳಿಗೆ ಹವಿಸ್ಸಿಗೋಸ್ಕರ) ಅನ್ನವನ್ನು ಅಪೇಕ್ಷಿಸುವವರಾಗಿ । **ಪ್ರ ಯುಕ್ಷಂತ**—ವಿಶೇಷವಾಗಿ ಯಾಗ ಮಾಡುತ್ತಾರೆ । **ಕಿಂ ಚ**—ಮತ್ತು । **ತಸ್ಮೈ ಇತ್**—ಆ ಇಂದ್ರನಿಗೋಸ್ಕರಲೇ । **ಆಯುಃ**—ಹವಿರ್ಲಕ್ಷಣವಾದ ಅನ್ನವು । **ಪ್ರಜಾವತ್**—ಪುತ್ರಾದಿಸಹಿತವು (ಆಗುತ್ತದೆ) ಅಥವಾ (ಪುತ್ರಾದಿಸಹಿತರಾದ ಯಜಮಾನರಿಂದ ಕೊಡಲ್ಪಡುತ್ತದೆ) (ಮತ್ತು ಯಜಮಾನರು) । **ಓಜಸಾ**—(ಸ್ವಕೀಯ) ಬಲದಿಂದ (ಯುಕ್ತರಾಗಿ) । **ಬಾಧೇ**— (ಶತ್ರುಗಳನ್ನು) ಹಿಂಸಿಸುವುದಕ್ಕೋಸ್ಕರ । **ಅರ್ಚಂತಿ**—(ಇಂದ್ರನನ್ನು) ಪೂಜಿಸುತ್ತಾರೆ ಅಥವಾ । [**ತಸ್ಮೈ ಇತ್**— ಆ ಯಜಮಾನನಿಗೋಸ್ಕರಲೇ । **ಬಾಧೇ**—ಬಲನಿಮಿತ್ತಕವಾದ ಮತ್ತು । **ಪ್ರಜಾವತ್**—ಪುತ್ರಾದ್ಯುಪೇತವಾದ । **ಆಯುಃ**—ಅನ್ನವನ್ನು (ಪಡೆಯುವುದಕ್ಕೋಸ್ಕರ) । **ಓಜಸಾ**—ಬಲದಿಂದ (ಯುಕ್ತರಾಗಿ ಋತ್ವಿಜರು) । **ಅರ್ಚಂತಿ**—(ಇಂದ್ರನನ್ನು) ಪೂಜಿಸುತ್ತಾರೆ] । **ಧೀತಯಃ**—ಕರ್ಮನಿಷ್ಠರಾದ ಯಜಮಾನರು । **ಇಂದ್ರೇ**—

ಇಂದ್ರನ ಸಮೀಪದಲ್ಲಿ | **ಓಕ್ಯಂ**—(ನಿವಾಸ) ಸ್ಥಾನವನ್ನು | **ದಿಧಿಷಂತೆ**—ಧರಿಸುತ್ತಾರೆ .(ಇಚ್ಛಿಸುತ್ತಾರೆ) | **ಧೀತಯಃ**—ಸ್ವರ್ಗಸಾಧನಕರ್ಮಯುಕ್ತರಾಗಿ | **ದೇವಾನ್**—ದೇವತೆಗಳನ್ನು | **ಅಚ್ಛಾ ನ**—ಅಭಿಮುಖೀಕರಿಸಿ ಕೊಳ್ಳುವಂತೆ | **ಓಕ್ಯಂ ದಿಧಿಷಂತೆ**—(ಸ್ಥಾನವನ್ನು ಪಡೆಯುತ್ತಾರೆ)

॥ ಭಾವಾರ್ಥ ॥

ಶೂರನಾದ (ಇಂದ್ರನು) ಜನರನ್ನು ಅವರವರ ಕರ್ಮಾನುಸಾರವಾಗಿ ಶುಭಾಶುಭಫಲಯುಕ್ತರನ್ನಾಗಿ ಮಾಡುತ್ತಾನೆ; ಆದುದರಿಂದ ಗವಾದಿ ಧನಕ್ಕೋಸ್ಕರ ಅವನನ್ನುದ್ದೇಶಿಸಿ ಯಾಗಮಾಡಿ (ಅವನಿಂದ ದತ್ತವಾದ) ಅನ್ನಸಹಿತರಾಗಿ (ಶತ್ರುಗಳನ್ನು) ಪರಾಜಯಗೊಳಿಸಲು, ಸಮರ್ಥರಾಗಿರುತ್ತಾರೆ; ತಮಗೆ ಅಥವಾ ಇಂದ್ರನಿಗೆ ದಾತವ್ಯವಾದ ಹವಿಸ್ಸಿಗೋಸ್ಕರ, ಅನ್ನಾಪೇಕ್ಷಿಗಳಾಗಿ, ಅವನನ್ನು ಪೂಜಿಸುತ್ತಾರೆ; ಅವನಿಗೆ ದತ್ತವಾದ ಹವಿಸ್ಸು ಸಂತಾನಾಭಿವೃದ್ಧಿಗೆ ಕಾರಣವಾಗುತ್ತದೆ; ಸ್ವಕೀಯ ಬಲವಿಶಿಷ್ಟರಾಗಿ ಶತ್ರುಗಳನ್ನು ಜಯಿಸುವುದಕ್ಕೋಸ್ಕರ, ಅವನನ್ನು ಪೂಜಿಸುತ್ತಾರೆ; ಕರ್ಮನಿಷ್ಠರಾದವರು ಇಂದ್ರನ ಸಮೀಪದಲ್ಲಿ ಸ್ಥಾನವನ್ನು ಪಡೆಯುತ್ತಾರೆ; ಸ್ವರ್ಗಸಾಧಕಕರ್ಮ ವಿಶಿಷ್ಟರಾದವರು ದೇವತೆಗಳ ಸಮ್ಮುಖದಲ್ಲಿಯೇ ಇರಲು ಅಪೇಕ್ಷಿಸುತ್ತಾರೆ.

## English Translation.

Inasmuch as the hero, (Indra), rightly judges men by their deeds, therefore do the (pious), sacrificing (to him) for sustenance, become enabled, by the wealth that has been attained, to overcome (their foes): desirous of food, they diligently worship (him): the (sacrificial) food offered to him is the source of progeny (to the worshipper), and (men) worship him, that by their own strength they may overcome (their foes): pious sacrificers enjoy residence in the heaven of Indra; pious sacrificers are, as it were, in the presence of the gods.

॥ ವಿಶೇಷವಿಷಯಗಳು ॥

**ಯತ್ ಶೂರಃ ಜನಾನ್ ಕ್ರತುಭಿಃ ಸಂ ಈಕ್ಷಯತ್**—ಇಲ್ಲಿ ಕ್ರತು ಶಬ್ದಕ್ಕೆ ಸಾಯಣರು ಪ್ರಜ್ಞೆಯೆಂದೂ (ನಿ. ೩-೧೩) ಕರ್ಮವೆಂದೂ (ನಿ. ೩-೧) ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. ಪ್ರಜ್ಞೆಯೆಂಬ ಅರ್ಥದಲ್ಲಿ—ಶೂರನಾದ ಇಂದ್ರನು ಸಮಸ್ತ ಪ್ರಾಣಿಗಳಲ್ಲಿ ಅಂತರ್ಯಾಮಿರೂಪದಿಂದ ಇದ್ದು, ಅವರು ಮಾಡುವ ಕರ್ಮಾದಿಗಳನ್ನೂ, ಅವರ ಅಂತರಂಗದ ಭಾವನೆಗಳನ್ನೂ ಚೆನ್ನಾಗಿ ನೋಡಿ ತಿಳಿದುಕೊಳ್ಳುತ್ತಾನೆ ಎಂದೂ, ಕರ್ಮವೆಂಬ ಅರ್ಥದಲ್ಲಿ ಇಂದ್ರನು ಸಮಸ್ತರಲ್ಲಿಯೂ ಅಂತರ್ಯಾಮಿಯಾಗಿದ್ದು ಅವರು ಮಾಡುವ ಸುಕೃತ ದುಷ್ಕೃತ ಕಾರ್ಯಗಳನ್ನೆಲ್ಲಾ ಪ್ರೇರಿಸುತ್ತಾನೆ ಎಂದೂ ಅರ್ಥವಿವರಣೆ ಮಾಡಿರುವರು.

**ಧನೇ ಹಿತೇ ತರುಷಂತ ಶ್ರವಸ್ಯವಃ ಪ್ರ ಯಕ್ಷಂತ ಶ್ರವಸ್ಯವಃ**—ಇಲ್ಲಿ ಧನೇ ಹಿತೇ ಎಂಬ ಶಬ್ದಗಳಿಗೆ ಭಾಷ್ಯಕಾರರು ಗವಾದಿರೂಪೇ ಧನೇ ಅಭಿಪ್ರೇತೇ ಸತಿ—ಎಂದರೆ ಗೋವುಗಳೇ ಮೊದಲಾದ ಧನಪ್ರಾಪ್ತಿಗಾಗಿ ಅಥವಾ ಧನಪ್ರಾಪ್ತಿಗಾಗಿ ಶತ್ರುಗಳೊಡನೆ ಯುದ್ಧವು ಸನ್ನಿಹಿತವಾದಾಗ ಎಂದು ಅರ್ಥವಿವರಣೆ ಮಾಡಿರುವರು. ಶತ್ರುಗಳೊಡನೆ

ಯುದ್ಧಮಾಡಿ ಅವರನ್ನು ಜಯಿಸಿದರೆ ಅವರಲ್ಲಿರುವ ಧನವು ನಮಗೆ ಸೇರುವುದು. ಆದುದರಿಂದ ಯುದ್ಧವು ಧನಪ್ರಾಪ್ತಿಗೆ ಸಾಧನವು. ಅಂತಹ ಯುದ್ಧವು ಒದಗಿರುವಾಗ ಯಜ್ಞಮಾಡುವ ಯಜಮಾನರು ತಮ್ಮ ಶತ್ರುಗಳನ್ನು ನಾಶಮಾಡಿ, ಇಂದ್ರನ ಪ್ರೀತ್ಯರ್ಥವಾಗಿ ಹವಿರಾದಿ ಅನ್ನವನ್ನು ಸಿದ್ಧಪಡಿಸಿಕೊಂಡು ಇಂದ್ರನನ್ನು ಯಜ್ಞಾದಿಗಳಿಂದ ತೃಪ್ತಿಪಡಿಸುತ್ತಾರೆ ಎಂದಭಿಪ್ರಾಯವು. ಶ್ರವಃ ಎಂಬ ಶಬ್ದವು ಮಘಂ, ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಇಲ್ಲಿ ಭಾಷ್ಯಕಾರರು ಗೋರೂಪವಾದ ಅಥವಾ ಅನ್ನರೂಪವಾದ (ಹವೀರೂಪವಾದ) ಧನವೆಂದು ಅರ್ಥಮಾಡಿದ್ದಾರೆ. ಶ್ರವಸ್ಯವಃ ಎಂದರೆ ಅನ್ನವನ್ನು ಅಪೇಕ್ಷಿಸುವವರು ಎಂದರ್ಥವು. ಈ ಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ ಮೊದಲನೇ ಶ್ರವಸ್ಯವಃ ಎಂಬ ಶಬ್ದಕ್ಕೆ ಇಂದ್ರನ ಅನುಗ್ರಹದಿಂದ ತಮಗಾಗಿ ಅನ್ನವನ್ನು ಅಪೇಕ್ಷಿಸುವ ಯಜಮಾನರು ಎಂದೂ, ಎರಡನೆಯ ಶ್ರವಸ್ಯವಃ ಎಂಬ ಶಬ್ದಕ್ಕೆ ಇಂದ್ರನಿಗೆ ಸಮರ್ಪಿಸುವುದಕ್ಕಾಗಿ ಹವೀರೂಪವಾದ ಅನ್ನವನ್ನು ಸಿದ್ಧಪಡಿಸಿ ಇಟ್ಟುಕೊಂಡಿರುವ ಯಜಮಾನರು ಎಂದೂ ಎರಡುವಿಧವಾಗಿ ಅರ್ಥವಿವರಣೆ ಮಾಡಿರುವರು.

**ತಸ್ಮೈ ಆಯುಃ ಪ್ರಜಾವತ್ ಇತ್ ಬಾಧೇ ಅರ್ಚಂತಿ ಓಜಸಾ—**ಇಲ್ಲಿ ಆಯುಃ ಎಂದರೆ ಅನ್ನವೆಂದರ್ಥವು. ಆಯುಃ ಶಬ್ದವು ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಪಠಿತವಾಗಿರುವುದು. (ನಿ. ೩-೯) ಆದುದರಿಂದ ಆಯುಃ ಪ್ರಜಾವತ್ ಎಂಬ ಶಬ್ದಗಳಿಗೆ ಪುತ್ರಪೌತ್ರಾದಿಗಳಿಂದ ಸಹಿತವಾದ ಅನ್ನ ಎಂದರೆ ಪುತ್ರಪೌತ್ರಾದಿಸಂತತಿ ಮತ್ತು ಅನ್ನವೆಂದರ್ಥವು. ಯಜ್ಞಮಾಡುವ ಯಜಮಾನರು ತಮಗೆ ಶತ್ರುಗಳಿಂದ ಬಾಧೆಯುಂಟಾದಾಗ ಅಥವಾ ಶತ್ರುಗಳನ್ನು ಬಾಧೆಪಡಿಸಿ ಅವರನ್ನು ಪರಾಭವಗೊಳಿಸುವುದಕ್ಕಾಗಿ ಪುತ್ರಪೌತ್ರಾದಿಗಳಿಂದ ಸಹಿತರಾಗಿ ಇಂದ್ರನಿಗೆ ಹವಿಸ್ಸನ್ನರ್ಪಿಸಿ, ತಮ್ಮ ಸ್ವಕೀಯವಾದ ಸಾಮರ್ಥ್ಯದಿಂದ ಎಂದರೆ ಯಜ್ಞಾದಿಕರ್ಮ ಮತ್ತು ಸ್ತೋತ್ರಗಳಿಂದ ಇಂದ್ರನನ್ನು ಪೂಜಿಸುತ್ತಾರೆ ಎಂದು ಒಂದು ವಿಧವಾದ ಅರ್ಥವು. ಬಾಧ ಎಂಬ ಶಬ್ದವು ಓಜಃ ಪಾಜಃ ಎಂದು ಮೊದಲಾದ ಇಪ್ಪತ್ತೆಂಟು ಬಲನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಬಾಧವೆಂದರೆ ಬಲವೆಂದೂ ಅರ್ಥವಾಗುವುದು. ಇಂದ್ರನಿಗೆ ಹವಿಸ್ಸನ್ನರ್ಪಿಸಿ ಪುತ್ರಪೌತ್ರಾದಿ ಸಂತಾನಪ್ರಾಪ್ತಿಗಾಗಿಯೂ, ಅನ್ನಾದ್ಯಾಹಾರಲಾಭಕ್ಕಾಗಿಯೂ, ಯಜ್ಞಾದಿಗಳಿಂದಲೂ, ಸ್ತೋತ್ರಾದಿಗಳಿಂದಲೂ ಇಂದ್ರನನ್ನು ಪೂಜಿಸುತ್ತಾರೆಂದು ಎರಡನೆಯ ಅರ್ಥವು. ಈ ಎರಡು ವಿಧವಾದ ಅರ್ಥವನ್ನೂ ಭಾಷ್ಯಕಾರರು ವಿವರಿಸಿರುವರು.

**ಇಂದ್ರೇ ಓಕ್ಯಂ ದಿಧಿಷಂತ ಧೀತಯಃ—**ಇಂದ್ರೇ ಎಂದರೆ ಇಂದ್ರನ ಸಮೀಪದಲ್ಲಿ ಎಂದರ್ಥವು. ಓಕಃ ಎಂದರೆ ನಿವಾಸಸ್ಥಾನವು. (ನಿ. ೩-೩) ಧೀ ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೧) ಧೀತಯಃ ಎಂದರೆ ಯಜ್ಞಾದಿಕರ್ಮಗಳಿಂದ ಯುಕ್ತರಾದ ಯಜಮಾನರು ಎಂದರ್ಥವು. ಇಂತಹ ಯಜಮಾನರು ಇಂದ್ರನ ಸಮೀಪದಲ್ಲಿ ವಾಸಸ್ಥಾನವನ್ನು ಎಂದರೆ ವಾಸಮಾಡಲು ಅಪೇಕ್ಷಿಸುವರು ಇಲ್ಲಿ ಧೀತಯಃ ಎಂಬ ಶಬ್ದವು ಎರಡಾವರ್ತಿ ಪಠಿತವಾಗಿದೆ. ಎರಡನೆಯ ಧೀತಯಃ ಎಂಬ ಶಬ್ದಕ್ಕೆ ಸ್ವರ್ಗಸಾಧನವಾದ ಯಜ್ಞಾದಿಗಳನ್ನು ಮಾಡಿದ ಯಜಮಾನರು ದೇವತೆಗಳ ಸಂಮುಖದಲ್ಲಿ ಎಂದರೆ ಸ್ವರ್ಗದಲ್ಲಿ ವಾಸಮಾಡಲು ಅಪೇಕ್ಷೆಪಡುತ್ತಾರೆ. ಅದಕ್ಕಾಗಿ ಇಂದ್ರನನ್ನು ಯಜ್ಞಾದಿಗಳಿಂದ ತೃಪ್ತಿಪಡಿಸುತ್ತಾರೆಂದಭಿಪ್ರಾಯವು.

**ದೇವಾನ್ ಅಚ್ಛ ನ ಧೀತಯಃ—**ಸ್ವರ್ಗಾಪೇಕ್ಷಿಗಳಾದ ಜನರು ಸ್ವರ್ಗಸಾಧನವಾದ ಯಜ್ಞಕರ್ಮಾದಿಗಳನ್ನು ಮಾಡಿ ದೇವತೆಗಳ ಅಭಿಮುಖವಾಗಿ ಎಂದರೆ ಇಂದ್ರಲೋಕದಲ್ಲಿ ದೇವತೆಗಳ ಸಮೀಪದಲ್ಲಿ ವಾಸಮಾಡಲು ಇಚ್ಛಿಸುತ್ತಾರೆ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಈಕ್ಷಯೇತ್**—ಈಕ್ಷ ದರ್ಶನಾಂಕನಯೋಃ ಧಾತು. ಣಿಜಂತದಮೇಲೆ ಛಾಂದಸವಾಗಿ ವರ್ತಮಾನಾರ್ಥ ದಲ್ಲಿ ಲಙ್. **ಬಹುಲಂ ಛಂದಸಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುವುದಿಲ್ಲ.

**ಹಿತೇ**—ಡುಧಾಞ್ ಧಾರಣಪೋಷಣಯೋಃ ಧಾತು. ಕ್ತಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮ್ಯಂತ ರೂಪ.

**ತರುಷಂತೆ**—ತರುಷ ಧಾತುವು ಹಿಂಸಾರ್ಥದಲ್ಲಿ ಪ್ರಯುಕ್ತವಾಗಿದೆ. ಛಾಂದಸವಾಗಿ ಲುಙ್. ಪ್ರಥಮ ಪುರುಷ ಬಹುವಚನದಲ್ಲಿ ಅಂತಾದೇಶ. ವ್ಯತ್ಯಯದಿಂದ ಚ್ಲಿಗೆ ಅಙಾದೇಶ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಅಥವಾ ತೄ ಪ್ಲವನ ತರಣಯೋಃ ಧಾತು. ಇದಕ್ಕೆ ಹಿಂದಿನಂತೆ ಛಾಂದಸವಾಗಿ ಲಙ್. ವ್ಯತ್ಯಯದಿಂದ ಉಕಾರ ಸಿಪ್ ಶಪ್ ಹೀಗೆ ಮೂರು ವಿಕರಣಗಳು ಬರುತ್ತವೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶ್ರವಸ್ಯವಃ**—ಶ್ರವಸ್ ಶಬ್ದದ ಮೇಲೆ ಆತ್ಮೇಚ್ಛಾದಲ್ಲಿ ಕ್ಯಚ್. ಕ್ಯಜಂತದಮೇಲೆ ಉ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಯಕ್ಷಂತೆ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬು ದರಿಂದ ವರ್ತಮಾನಾರ್ಥದಲ್ಲಿ ಲುಙ್. ವ್ಯತ್ಯಯದಿಂದ ಚ್ಲಿಗೆ ಕ್ಸಾದೇಶ ಬರುತ್ತದೆ. ಯ ಪ್ರತ್ಯಯಕ್ಕೆ ಅಂತಾದೇಶ. **ವ್ರಶ್ಚಭ್ರಸ್ಜ** (ಪಾ. ಸೂ. ೮-೨-೩೬) ಎಂಬುದರಿಂದ ಜಕಾರಕ್ಕೆ ಷತ್ವ. **ಷಢೋಃ ಕಃ ಸಿ** (ಪಾ. ಸೂ. ೮-೨-೪೧) ಎಂಬುದರಿಂದ ಅದಕ್ಕೆ ಕತ್ವ. ಅದನ್ನು ನಿಮಿತ್ತೀಕರಿಸಿ ಸಕಾರಕ್ಕೆ ಷತ್ವ. **ಅತೋ ಗುಣೇ** ಸೂತ್ರದಿಂದ ಪರರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಬಾಧೇ**—ಬಾಧೃ ವಿಲೋಡನೇ. ಧಾತು. ಇದಕ್ಕೆ **ಕೃತ್ಯಾರ್ಥೇ ತವೈಕೇನ್‌ಕೇನ್ಯತ್ವನಃ** (ಪಾ. ಸೂ. ೩-೪-೧೪) ಎಂಬುದರಿಂದ ಕೇನ್ ಪ್ರತ್ಯಯ. ಏ ಉಳಿಯುತ್ತದೆ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಏಜಂತವಾದುದರಿಂದ **ಕೃನ್ಮೇಜಂತಃ** (ಪಾ. ಸೂ. ೧-೧-೩೯) ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ಅರ್ಚಂತಿ**—ಅರ್ಚ ಪೂಜಾಯಾಂ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಓಕ್ಯಮ್**—ಓಕವೆಂದರೆ ಸ್ಥಾನ. ಇದಕ್ಕೆ ಸ್ವಾರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಕ್ಕೆ ಲೋಪ. **ತಿತ್‌ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ದಿಧಿಷಂತೆ**—ಧಿಷ ಶಬ್ದೇ. ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಧಾರಣಾರ್ಥದಲ್ಲಿ ಪ್ರಯುಕ್ತವಾಗಿದೆ ಜುಹೋತ್ಯಾದಿ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನದಲ್ಲಿ

ಝು ಪ್ರತ್ಯಯ. ವ್ಯತ್ಯಯದಿಂದ ಅಂತಾದೇಶ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಪ್ರತ್ಯಯಕ್ಕೆ ಜಿತ್ವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. **ಬಹುಲಂ ಛಂದಸ್ಯ**—ಎಂಬುದರಿಂದ ಅಡಾಗಮು ಬರುವುದಿಲ್ಲ. ತಿಙಂತನಿಘಾತ ಸ್ವರ ಬರುತ್ತದೆ.

**ಅಚ್ಛ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ದೀರ್ಘ ಬರುತ್ತದೆ. ‖ ೫ ‖



‖ ಸಂಹಿತಾಪಾಠಃ ‖

ಯುವಂ ತಮಿಂದ್ರಾಪರ್ವತಾ ಪುರೋಯುಧಾ ಯೋ ನಃ ಪೃತನ್ಯಾದಪ
ತಂತಮಿದ್ಧತಂ ವಜ್ರೇಣ ತಂತಮಿದ್ಧತಂ ।
ದೂರೇ ಚತ್ತಾಯ ಛಂತ್ಸದ್ಗಹನಂ ಯದಿನಕ್ಷತ್ ।
ಅಸ್ಮಾಕಂ ಶತ್ರೂನ್ಪರಿ ಶೂರ ವಿಶ್ವತೋ ದರ್ಮಾ ದರ್ಷೀಷ್ಟ ವಿಶ್ವತಃ ‖ ೬ ‖

‖ ಪದಪಾಠಃ ‖

ಯುವಂ । ತಂ । ಇಂದ್ರಾಪರ್ವತಾ । ಪುರಃಽಯುಧಾ । ಯಃ । ನಃ । ಪೃತನ್ಯಾತ್ । ಅಪ ।
ತಂಽತಂ । ಇತ್ । ಹತಂ । ವಜ್ರೇಣ । ತಂಽತಂ । ಇತ್ । ಹತಂ ।
ದೂರೇ । ಚತ್ತಾಯ । ಛಂತ್ಸತ್ । ಗಹನಂ । ಯತ್ । ಇನಕ್ಷತ್ ।
ಅಸ್ಮಾಕಂ । ಶತ್ರೂನ್ । ಪರಿ । ಶೂರ । ವಿಶ್ವತಃ । ದರ್ಮಾ । ದರ್ಷೀಷ್ಟ । ವಿಶ್ವತಃ ‖ ೬ ‖

‖ ಸಾಯಣಭಾಷ್ಯಂ ‖

ಅವಿವಾಕ್ಯೇಽಹನಿ ಮಾನಸಗ್ರಹಭಕ್ಷಣಾನಂತರಂ ನಕ್ಷತ್ರೇಷು ದೃಶ್ಯಮಾನೇಷ್ವಧ್ವರ್ಯುಪ್ರಮುಖಾಃ ಸರ್ವೇ ಯುವಂ ತಮಿತ್ಯೇತಾಂ ಜಪೇಯುಃ। ಗಾರ್ಹಪತ್ಯೇ ಜುಹ್ವತೀತಿ ಖಂಡೇ ಸೂತ್ರಿತಂ। ಯುವಂ ತಮಿಂದ್ರಾಪರ್ವತಾ ಪುರೋಯುಧೇತಿ ಜಪಂತಃ । ಋ. ೮-೧೩ । ಇತಿ ‖

ಹೇ ಇಂದ್ರಾಪರ್ವತಾ । ಇಂದ್ರಃ ಪ್ರಸಿದ್ಧಃ । ಪರ್ವತಃ ಪರ್ವವಾನ್ಮೇಘಃ । ತದಭಿಮಾನೀ ದೇವಃ । ತಾ ಯುವಂ ಯುವಾಂ ಪುರೋಯುಧಾ ಸಂಗ್ರಾಮೇ ಪುರತೋ ಯೋದ್ಧಾರೌ ನೋಽಸ್ಮಾಕಂ ಯಃ ಶತ್ರುಃ ಪೃತನ್ಯಾತ್ ಅಸ್ಮಾನ್ ಹಂತುಂ ಪೃತನಾಮಾತ್ಮನ ಇಚ್ಛತಿ ತಂ ತಮಿತ್ ಸರ್ವಮಪಿ ಶತ್ರುಮಪಹತಂ । ನಾಶಯತಂ ॥ ಹಂತೇರ್ಲೋಟ್ಯನುದಾತ್ತೋಪದೇಶೇತ್ಯನುನಾಸಿಕಲೋಪಃ ॥ ಕೇನ ಸಾಧನೇನೇತಿ ತದುಚ್ಯತೇ । ತಂ ತಸ್ಮಿನ್ ಸರ್ವಮಪಿ ಶತ್ರುಂ ಹಂತುಂ ವಜ್ರೇಣ ಸಾಧನೇನ ಪ್ರಾಪ್ನುತಂ । ಈದೃಕ್ ಸಾಮರ್ಥ್ಯಮಸ್ತೀತಿ ದರ್ಶಯತಿ । ಯದ್ಯೋ ವಜ್ರಃ ॥ ಲಿಂಗವ್ಯತ್ಯಯಃ ॥ ದೂರೇ ಚತ್ತಾಯಾತ್ಯಂತದೂರದೇಶೇ ಗತಾಯ ॥ ಚಾತಯತೇರ್ವಾ ನಾಶಕರ್ಮಣಃ ॥ ನಷ್ಟಾಯ । ಅದರ್ಶನಮಾಪನ್ನಾಯೇತ್ಯರ್ಥಃ ॥ ಗ್ರಸಿತಸ್ಕಭಿತೇತ್ಯಾದೌ ನಿಪಾತನಾದಿಡಭಾವಃ ॥ ತಾದೃಶಂ ಶತ್ರುಂ ಛಂತ್ಸತ್ ಛಂದಯತಿ ಕಾಮಯತೇ ಹಂತುಂ ॥ ಛಂದತೇಃ ಕಾಂತಿಕರ್ಮಣ ಇದಂ ರೂಪಂ ॥ ಕಿಂಚ ಗಹನಂ ದುರವಗಾಹಂ ಸ್ಥಾನಮತಿಕಠಿನಂ ಹೃದಯಂ ಶತ್ರುಸಮಿಾಪಂ ಯೇನಕ್ಷತ್ ವ್ಯಾಪ್ನೋತಿ ॥ ನಕ್ಷ ಗತೌ । ಛಾಂದಸ ಇಕಾರೋಪಜನಃ । ಇನಕ್ಷತಿರ್ವಾ ಪ್ರಕೃತ್ಯಂತರಂ ॥ ಇದಾನೀಮಿಂದ್ರ ಏವ ಸ್ತೂಯತೇ । ಹೇ ಶೂರ ಶೌರ್ಯೋಪೇತೇಂದ್ರ ಅಸ್ಮಾಕಂ ವಿರೋಧಿನಃ ಶತ್ರೂನ್ ವಿಶ್ವತೋ ವಿಶ್ವಾನ್ ॥ ಸಾರ್ವವಿಭಕ್ತಿಕಸ್ತಸಿಲ್ ॥ ಪರಿ ಪರಿತೋ ವಿಶ್ವತೋ ವಿಶ್ವೈರುಪಾಯೈರ್ದರ್ಷೀಷ್ಟ । ದಾರಯಸಿ । ಕಿಂಚ ದರ್ಮಾ ಶತ್ರೂಣಾಂ ದಾರಕಃ ॥ ದಾರಯತೇರನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ಣಿಲೋಪ ಉದಾತ್ತನಿವೃತ್ತಿಸ್ವರೇಣ ಮನಿನ ಉದಾತ್ತತ್ವಂ । ಹ್ರಸ್ವಶ್ಛಾಂದಸಃ । ಯದ್ವಾ । ದೃ ಭಯೇ । ಘಟಾದಿತ್ವಾನ್ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ ॥ ತವ ಪೂರ್ವೋಕ್ತೋ ವಜ್ರೋ ವಿಶ್ವತಃ ಸರ್ವಾಞ್ಛತ್ರೂನ್ ಸರ್ವೈರುಪಾಯೈರ್ವಾ ದರ್ಷೀಷ್ಟ । ದಾರಯತಿ । ಯದ್ವಾ । ದರ್ಮಾ ಶತ್ರೂಣಾಂ ದಾರಕ ಇಂದ್ರೋ ದರ್ಷೀಷ್ಟ । ಕಾರ್ತ್ಸ್ನ್ಯೇನ ದಾರಯತಿ ಶತ್ರೂನ್ ॥

॥ ಪ್ರತಿಪದಾರ್ಥ ॥

**ಹೇ ಇಂದ್ರಾ ಪರ್ವತಾ**—ಎಲೈ ಇಂದ್ರ ಮತ್ತು ಮೇಘಗಳೇ । **ಯುವಂ**—ನೀವಿಬ್ಬರೂ । **ಪುರೋ ಯುಧಾ**—(ಸಂಗ್ರಾಮದಲ್ಲಿ) ಮುಂದುಗಡೆ ಯುದ್ಧಮಾಡುವವರಾಗಿ । **ನಃ**—ನಮ್ಮ । **ಯಃ**—ಯಾವ (ಶತ್ರುವು) । **ಪೃತನ್ಯಾತ್**—(ನಮ್ಮನ್ನು ಕೊಲ್ಲಲು) ಯುದ್ಧವನ್ನು ಅಪೇಕ್ಷಿಸುತ್ತಾನೋ । **ತಂ ತಂ ಇತ್**—ಅವರೆಲ್ಲರನ್ನೂ । **ಅಪ ಹತಂ**—ನಾಶಮಾಡಿ । **ಯತ್**—ಯಾವ ವಜ್ರಾಯುಧವು । **ದೂರೇ**—ಬಹಳ ದೂರದೇಶದಲ್ಲಿ । **ಚತ್ತಾಯ**—ಗಮಿಸಿರುವ (ಕಣ್ಣಿಗೆ ಕಾಣಿಸದೇ ಹೋಗಿರುವ) । **ತಂ**—ಅಂತಹ ಶತ್ರುವನ್ನು । **ಛಂತ್ಸತ್**—ವಧಿಸಲು ಅಪೇಕ್ಷಿಸುತ್ತದೆಯೋ (ಮತ್ತು) । **ಗಹನಂ**—ಅತಿ ಗಹನವಾದ ಪ್ರದೇಶವನ್ನೂ (ಅತಿ ಕಠಿನವಾದ ಹೃದಯವುಳ್ಳ ಶತ್ರುವನ್ನೂ) । **ಇನಕ್ಷತ್**—ವ್ಯಾಪಿಸುತ್ತದೆಯೋ (ಅಂತಹ) । **ವಜ್ರೇಣ**—ವಜ್ರಾಯುಧದಿಂದ । **ತಂತಂ ಇತ್**—ಅಂತಹ ಶತ್ರುಗಳೆಲ್ಲರನ್ನೂ । **ಹತಂ**—ವಧಿಸಿ । **ಹೇ ಶೂರ**—ಎಲೈ ಶೂರನಾದ ಇಂದ್ರನೇ । **ಅಸ್ಮಾಕಂ**—ನಮ್ಮ । **ವಿಶ್ವತಃ**—ಎಲ್ಲಾ । **ಶತ್ರೂನ್**—ಶತ್ರುಗಳನ್ನೂ । **ಪರಿ**—ಸಂಪೂರ್ಣವಾಗಿ । **ವಿಶ್ವತಃ**—ಸಮಸ್ತ ಉಪಾಯಗಳಿಂದಲೂ । **ದರ್ಷೀಷ್ಟ**—ಚೂರು ಚೂರು ಮಾಡುತ್ತೀ । **ದರ್ಮಾ**—ಶತ್ರುದಾರಕವಾದ ವಜ್ರಾಯುಧವು (ಇಂದ್ರನು) (ಶತ್ರುಗಳನ್ನು ಸಂಪೂರ್ಣವಾಗಿ ನಾಶಮಾಡುತ್ತದೆ).

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಪರ್ವತ (ಮೇಘ) ರೇ, ಯುದ್ಧಗಳಲ್ಲಿ ಎಲ್ಲರಿಗೂ ಮುಂದಾಳಾಗಿರುವ ನೀವು, ನಮಗೆ ವಿರುದ್ಧವಾಗಿ ಯುದ್ಧಾಪೇಕ್ಷಿಗಳಾಗಿರುವವರನ್ನೆಲ್ಲಾ ವಧಿಸಿ; ಶತ್ರುಗಳನ್ನು ನಾಶಮಾಡುವುದಕ್ಕೋಸ್ಕರ, ಅವರು ಎಷ್ಟೇ ದೂರದಲ್ಲಿ, ಎಂತಹ ಗಹನ ಪ್ರದೇಶದಲ್ಲಿ ಅಡಗಿದ್ದರೂ (ಬಿಡದೇ) ಅಟ್ಟಿಸಿಕೊಂಡು ಹೋಗಿ ನಾಶಮಾಡುವ ವಜ್ರಾಯುಧದಿಂದ (ಶತ್ರುಗಳನ್ನು ನಾಶಮಾಡಿ); ಎಲೈ ಶೂರನಾದ ಇಂದ್ರನೇ, ನಮಗೆ ಶತ್ರುಗಳಾದವರನ್ನು ಸಮಸ್ತ ಉಪಾಯಗಳಿಂದ ಸಂಪೂರ್ಣವಾಗಿ ನಾಶಮಾಡು, ಮತ್ತು ಶತ್ರುನಾಶಕವಾದ ವಜ್ರಾಯುಧವೂ (ಶತ್ರುಗಳನ್ನು ವಧಿಸಲಿ).

## English Translation.

Indra and Parvata, who are foremost in battles, slay every one who is arrayed against us; slay every such (adversary) with the thunderbolt—(the shaft that) bent upon his destruction pursues him, however far, or to whatever hiding-place he may have fled. You, hero, (tear) our enemies entirely to pieces; the tearer (of foes, the thunderbolt), rends them entirely asunder.

॥ ವಿಶೇಷವಿಷಯಗಳು ॥

**ಇಂದ್ರಾಪರ್ವತಾ**—ಈ ಶಬ್ದದಿಂದ ಇಂದ್ರನನ್ನೂ ಮೇಘ ಅಥವಾ ಮೇಘಾಭಿಮಾನಿದೇವತೆಯನ್ನೂ ಸಂಬೋಧಿಸಲಾಗಿದೆ. ಈ ಶಬ್ದವು ಋಗ್ವೇದದಲ್ಲಿ ಋ. ಸಂ. ೧-೧೨೨-೩; ೧-೧೩೨-೬; ೩-೫೩-೧ ಎಂಬ ಋಕ್ಕುಗಳಲ್ಲಿ ಮಾತ್ರವಿರುವುದು ಇನ್ನೆಲ್ಲಿಯೂ ಇರುವುದಿಲ್ಲ. ಋ. ಸಂ. ೧-೧೨೨-೩ ನೇ ಋಕ್ಕನ್ನು ವ್ಯಾಖ್ಯಾನ ಮಾಡುವಾಗ ಭಾಷ್ಯಕಾರರು ಈ ಶಬ್ದಕ್ಕೆ—**ಇಂದ್ರಾಪರ್ವತಾ । ಇಂದ್ರಃ ಪ್ರಸಿದ್ಧಃ । ಪರ್ವತಃ ಪರ್ವವಾನ್ ವೃಷ್ಟ್ಯಾದಿಪೂರಣವಾನ್ ಪರ್ಜನ್ಯಃ ।** ವೃಷ್ಟ್ಯಾದಿಗಳಿಂದ ಭೂಮಿಯನ್ನು ತುಂಬುವ ವೃಷ್ಟ್ಯಭಿಮಾನಿದೇವತೆಯಾದ ಪರ್ಜನ್ಯನೆಂಬ ದೇವತೆ ಎಂದು ಹೇಳಿರುವರು. ಪ್ರಕೃತವಾದ ಋಕ್ಕಿನಲ್ಲಿ—**ಪರ್ವತಃ ಪರ್ವವಾನ್ ಮೇಘಃ ।** ಗುಂಪುಗಟ್ಟಿಕೊಂಡಿರುವ ಮೇಘವೆಂಬ ಅರ್ಥವನ್ನು ಹೇಳಿರುವರು. ಯಾಸ್ಕರು ತಮ್ಮ ನಿರುಕ್ತದಲ್ಲಿ—**ಪರ್ವವಾನ್ ಪರ್ವತಃ । ಪರ್ವಃ ಪುನಃ ಪೃಣಾತೇಃ ಪ್ರೀಣಾತೇರ್ವಾ** (ನಿ. ೧-೨೦) ರಾಶಿರಾಶಿಯಾಗಿ (ಕಲ್ಲುಬಂಡೆಗಳೂ) ಇರುವುದರಿಂದ ಅಥವಾ ಭೂಮಿಯನ್ನು ಆವರಿಸಿ ತುಂಬಿಕೊಂಡಿರುವುದರಿಂದ ಅಥವಾ ಜನರನ್ನು ಸಂತೋಷ ಪಡಿಸುವುದರಿಂದ ಪರ್ವತವೆಂದು ಹೆಸರು; **ಪರ್ವತಂ ಮೇಘಂ**—ಪರ್ವತವೆಂದರೆ ಮೇಘವು (ನಿ. ೩-೨೧ ಮತ್ತು ನಿ. ೧೦-೧೦); **ಪರ್ವತಾನಾಂ ಮೇಘಾನಾಂ** (ನಿ ೧೧-೩೭) ಎಂದು ಪರ್ವತಶಬ್ದಕ್ಕೆ ಮೇಘವೆಂಬ ಅರ್ಥ ವನ್ನೇ ಹೇಳಿ—

**ಬಳಿತ್ಥಾ ಪರ್ವತಾನಾಂ ಖಿದ್ರಂ ಬಿಭರ್ಷಿ ಪೃಥಿವಿ ।**
**ಪ್ರ ಯಾ ಭೂಮಿಂ ಪ್ರವತ್ವತಿ ಮಹ್ನಾ ಜಿನೋಷಿ ಮಹಿನಿ ॥**
(ಋ. ಸಂ. ೫-೮೪-೧. ತೈ. ಸಂ. ೨-೨-೧೨-೨)

ಎಂದು ಮೊದಲಾದ ಋಕ್ಕುಗಳನ್ನು ಉದಾಹರಣೆಯಾಗಿ ಕೊಟ್ಟಿರುವರು.

**ಪುರೋಯುಧಾ—ಸಂಗ್ರಾಮೇ ಪುರತೋ ಯೋದ್ಧಾರೌ**—ಯುದ್ಧಮಾಡುವಾಗ ಎಲ್ಲರಿಗಿಂತಲೂ ಮುಂದೆ ನುಗ್ಗಿ ಯುದ್ಧಮಾಡುವವರು ಎಂದಭಿಪ್ರಾಯವು

**ಪೃತನ್ಯಾತ್—ರಣಃ ವಿವಾಕ್** ಮೊದಲಾದ ನಲವತ್ತಾರು ಸಂಗ್ರಾಮನಾಮಗಳ ಮಧ್ಯದಲ್ಲಿ ಪೃತನಾಃ ಎಂಬ ಶಬ್ದವು ಪಠಿತವಾಗಿರುವುದರಿಂದ ಪೃತನಾ ಎಂದರೆ ಯುದ್ಧವೆಂದರ್ಥವು (ನಿ ೩-೯) **ಪೃತನಾಮಾತ್ಮನಃ ಇಚ್ಛತಿ ಇತಿ ಪೃತನ್ಯಃ**—ಯುದ್ಧಮಾಡಬೇಕೆಂದು ಅಪೇಕ್ಷಿಸುವ ನಮ್ಮ ಶತ್ರುವೆಂದಭಿಪ್ರಾಯವು. ಅಂತಹ ಶತ್ರುವನ್ನು ನಾಶಮಾಡಿರಿ ಎಂದು ಪ್ರಾರ್ಥಿಸಲಾಗಿದೆ.

**ತಂ ತಂ ಇತ್ ವಜ್ರೇಣ ಹತಂ**—ಯಾವ ಯಾವ ಶತ್ರುವು ನಮ್ಮನ್ನು ಯುದ್ಧದಲ್ಲಿ ಕೊಲ್ಲಲಿಚ್ಛಿಸುವನೋ ಆ ಆ ಶತ್ರುವನ್ನು ವಜ್ರಾಯುಧದಿಂದ ಸಂಹಾರಮಾಡಿರಿ ಎಂದಭಿಪ್ರಾಯವು.

**ಚತ್ತಾಯ—ಗತಾಯ । ಚಾತಯತೇರ್ವಾ ನಾಶಕರ್ಮಣಃ । ನಷ್ಟಾಯ । ಅದರ್ಶನಮಾಪನ್ನಾಯೇತ್ಯರ್ಥಃ ।** ಕಣ್ಣಿಗೆ ಕಾಣದಂತೆ ಮರೆಯಲ್ಲಿ ಅಡಗಿಕೊಂಡಿರುವ ಶತ್ರುವನ್ನು ನಾಶಮಾಡಲು ಅಪೇಕ್ಷಿಸುತ್ತೀ ಎಂದು ಇಂದ್ರನನ್ನು ಸ್ತುತಿಸಿದೆ.

**ಅಸ್ಮಾಕಂ ಶತ್ರೂನ್ ಪರಿ ಶೂರ ವಿಶ್ವತಃ ದರ್ಮಾ ದರ್ಷೀಷ್ಟ ವಿಶ್ವತಃ**—ಶತ್ರುದಾರಕನಾದ ಎಲೈ ಶೂರನಾದ ಇಂದ್ರನೇ, ನೀನು ನಮ್ಮ ಶತ್ರುಗಳನ್ನು ಎಲ್ಲಾ ಕಡೆಯಲ್ಲಿಯೂ ನಾನಾ ಉಪಾಯಗಳಿಂದ ನಾಶಮಾಡುವೆ ಎಂದು ಇಂದ್ರನ ಅಗಾಧವಾದ ಸಾಮರ್ಥ್ಯವನ್ನು ವರ್ಣಿಸಲಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಇಂದ್ರಾಪರ್ವತಾ—** ಇಂದ್ರಶ್ಚ ಪರ್ವತಶ್ಚ ಇಂದ್ರಾಪರ್ವತೌ **ದೇವತಾದ್ವಂದ್ವೇ ಚ** (ಪಾ. ಸೂ. ೬-೩-೨೬) ಎಂಬುದರಿಂದ ಪೂರ್ವಪದಕ್ಕೆ ಆನಙ್. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪುರೋಯುಧಾ**—ಯುಧ ಸಂಪ್ರಹಾರೇ. ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ದ್ವಿವಚನ ಪರವಾದಾಗ ಅದಕ್ಕೆ ಆಕಾರಾದೇಶ.

**ಪೃತನ್ಯಾತ್—**ಪೃತನಾಂ ಆತ್ಮನಃ ಇಚ್ಛತಿ ಪೃತನ್ಯತಿ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಕವ್ಯಧ್ವರ ಪೃತನ**—(ಪಾ. ಸೂ. ೭-೪-೩೯) ಎಂಬುದರಿಂದ ಆಕಾರಲೋಪ. ಕ್ಯಜಂತದ ಮೇಲೆ ಲಿಙ್ ಪ್ರಥಮಪುರುಷ ಏಕವಚನ ಬಂದಾಗ ಉಕ್ತರೂಪವಾಗುತ್ತದೆ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಾಸುಟ್ ಉದಾತ್ತವಾದುದರಿಂದ ಆಕಾರ ಉದಾತ್ತವಾಗುತ್ತದೆ. **ಛಂದಸ್ಯುಭಯಥಾ** ಎಂಬುದರಿಂದ ಆರ್ಧಧಾತುಕಸಂಜ್ಞೆ ಪ್ರತ್ಯಯಕ್ಕೆ ಇರುವುದರಿಂದ ಕ್ಯಚಿಗೆ ಲೋಪ.

**ತಂತಮ್—ನಿತ್ಯ ವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ ಬರುತ್ತದೆ. **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಆಮ್ರೇಡಿತವು (ಪರರೂಪ) ಅನುದಾತ್ತವಾಗುತ್ತದೆ.

**ಹತೆಮ್**— ಹನ ಹಿಂಸಾಗತ್ಯೋಃ ಧಾತು. ಲೋಟ್ ಮಧ್ಯಮಪುರುಷ ದ್ವಿವಚನಕ್ಕೆ ತಮಾದೇಶ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಅನುದಾತ್ತೋಪದೇಶವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಅನು ನಾಸಿಕಕ್ಕೆ ಲೋಪ. ತಿಙಂತ ನಿಘಾತಸ್ವರ ಬರುತ್ತದೆ.

**ಚತ್ತಾಯ**—ಚತೇ ಯಾಚನೇ. ಧಾತು ಇಲ್ಲಿ ನಾಶಾರ್ಥದಲ್ಲಿ ಪ್ರಯುಕ್ತವಾಗಿದೆ. **ಗ್ರಸಿತಸ್ಕಭಿತಸ್ತಭಿತ**— (ಪಾ. ಸೂ. ೭-೨-೩೪) ಎಂಬುದರಿಂದ ಕ್ತ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಅದರಿಂದಲೇ ಇಡಭಾವವು ಸಿದ್ಧವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಛಂತ್ಸತ್**—ಛದಿ ಕಾಂತೌ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ ಪ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಛಾಂದಸವಾಗಿ ವಿಕರಣಕ್ಕೆ ಲೋಪ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಇದಿತ್ತಾದುದರಿಂದ ಧಾತುವಿಗೆ ನುಮಾಗಮ. **ಖರಿ ಚ** ಎಂಬುದರಿಂದ ದಕಾರಕ್ಕೆ ಚರ್ತ್ವ. ತಿಙಂತನಿಘಾತಸ್ವರ ಬರುತ್ತದೆ.

**ಇನಕ್ಷತ್**—ನಕ್ಷ ಗತೌ. ಧಾತು. ಹಿಂದಿನಂತೆ ಲೇಟ್ ಪ್ರಥಮಪುರುಷ ಏಕವಚನಾಂತರೂಪ. ಪೂರ್ವಕ್ಕೆ ಇಕಾರವು ಛಾಂದಸವಾಗಿ ಆಗಮ ಬರುತ್ತದೆ. ಅಥವಾ ಇನಕ್ಷ ಧಾತುವೇ ಇದೆ ಎಂದು ಊಹಿಸಬೇಕು. ಭ್ವಾದಿಯು ಆಕೃತಿಗಣವಾದುದರಿಂದ ಸಿದ್ಧವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಶ್ವತಃ**—ದ್ವಿತೀಯಾರ್ಥದಲ್ಲಿ ತಸಿಲ್ ಪ್ರತ್ಯಯ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ತಸಿಲ್ ಪ್ರತ್ಯಯ.

**ದರ್ಮಾ**—ದೃ ವಿದಾರಣೇ ಧಾತು. ಇದಕ್ಕೆ ಣಿಚ್ ಬಂದಾಗ **ಅಚೋಽಞ್ಣಿತಿ** ಎಂಬುದರಿಂದ ವೃದ್ಧಿ ಬಂದಾಗ ದಾರಿ ಎಂದು ರೂಪವಾಗುತ್ತದೆ. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ ಸೂ. ೩-೨-೭೫) ಎಂಬುದರಿಂದ ಣಿಜಂತದಮೇಲೆ ಮನಿನ್ ಪ್ರತ್ಯಯ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಅನು ದಾತ್ತ (ಮನಿನ್) ಪರವಾದಾಗ ಉದಾತ್ತವಾದ ಣಿಚಿಗೆ ಲೋಪ ಬಂದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತ-ಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಮನಿನಿಗೆ ಉದಾತ್ತಸ್ವರ ಬರುತ್ತದೆ. ಛಾಂದಸವಾಗಿ ಧಾತುವಿಗೆ ಹ್ರಸ್ವ ಬರುತ್ತದೆ. ಅಥವಾ ದೃ ಭಯೇ. ಧಾತು. ಇದು ಘಟಾದಿಯಲ್ಲಿ ಪಠಿತವಾಗಿದೆ. ಘಟಾದಿಗಳಿಗೆ ಮಿತ್‌ಸಂಜ್ಞಾ ವಿಧಾನಮಾಡಿರುವುದರಿಂದ ಣಿಚ್ ಪರವಾದಾಗ **ಮಿತಾಂ ಹ್ರಸ್ವಃ** ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ದರ್ಷೀಷ್ಟ**—ದೃ ವಿದಾರಣೇ ಧಾತು. ಣಿಜಂತದಮೇಲೆ ಲಿಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಲಿಙಃ ಸೀಯುಟ್** ಎಂಬುದರಿಂದ ಸೀಯುಟಾಗಮ. **ಸುಟ್ ತಿಥೋಃ** ಎಂಬುದರಿಂದ ಸುಡಾಗಮ. **ಛಂದಸ್ಯುಭಯಥಾ** ಎಂಬುದರಿಂದ ಪ್ರತ್ಯಯಕ್ಕೆ ಉಭಯಸಂಜ್ಞೆ ಇರುವುದರಿಂದ ಣಿಚಿಗೆ ಲೋಪ. ಹಿಂದಿನಂತೆ ಉಪಧಾ ಹ್ರಸ್ವ. ತಿಙಂತ ನಿಘಾತಸ್ವರ ಬರುತ್ತದೆ. || ೬ ||



## ನೂರ ಮೂವತ್ತಮೂರನೆಯ ಸೂಕ್ತವು

**ಉಭೇ ಪುನಾಮೀತಿ ಸಪ್ತರ್ಚಂ ಸಪ್ತಮಂ ಸೂಕ್ತಂ ಪಾರುಚ್ಛೇಪಮೈಂದ್ರಂ । ಆದ್ಯಾ ತ್ರಿಷ್ಟುಪ್। ಅಭಿವ್ಲಗ್ಯೇತ್ಯಾದ್ಯಾಸ್ತಿಸ್ರೋಽನುಷ್ಟುಭಃ । ಪಿಶಂಗಭೃಷ್ಟಿಮಿತ್ಯೇಷಾ ಗಾಯತ್ರೀ । ಅವರ್ಮಹ ಇತ್ಯೇಷಾ ಧೃತಿಃ । ವನೋತಿ ಹೀತ್ಯನಭಿಧಾನಾದತ್ಯಷ್ಟಿಃ । ಅತ್ರಾನುಕ್ರಮಣಿಕಾ । ಉಭೇ ಸಪ್ತಾದೌ ತ್ರಿಷ್ಟುಪ್ ತಿಸ್ರೋಽನುಷ್ಟುಭೋ ಗಾಯತ್ರೀ ಧೃತಿರಿತಿ ॥ ಅಸ್ಯ ಸೂಕ್ತಸ್ಯ ವಿನಿಯೋಗಮಾಹ ಶೌನಕಃ । ಉಭೇ ಪುನಾಮೀತಿ ಪುರಾ ರಿಪುಘ್ನ್ಯಸ್ತು ಪ್ರಕೀರ್ತಿತಾಃ । ತಾ ಜಪನ್ ಪ್ರಯತೋ ನಿತ್ಯಮಿಷ್ಟಾನ್ ಕಾಮಾನ್ಸಮಶ್ನುತೇ । ತಾ ಜಪನ್ ಹಂತಿ ರಕ್ಷಾಂಸಿ ಸಪತ್ನಾಂಶ್ಚ ನಿಯಚ್ಛತಿ । ಋಗ್ವಿ. ೧-೨೫ ॥**

ಅನುವಾದವು—**ಉಭೇ ಪುನಾಮಿ** ಎಂಬ ಈ ಸೂಕ್ತವು ಹತ್ತೊಂಭತ್ತನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪರುಚ್ಛೇಪನು ಋಷಿಯು. ಇಂದ್ರನು ದೇವತೆಯು. ಈ ಸೂಕ್ತದ ಮೊದಲನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. **ಅಭಿವ್ಲಗ್ಯಾ** ಎಂದು ಮೊದಲಾಗುವ ಮೂರು ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು. **ಪಿಶಂಗಭೃಷ್ಟಿಂ** ಎಂಬ ಋಕ್ಕು ಗಾಯತ್ರೀ ಛಂದಸ್ಕವು **ಅವರ್ಮಹ** ಎಂಬ ಋಕ್ಕು ಧೃತಿಃ ಎಂಬ ಛಂದಸ್ಸಿನದು. **ವನೋತಿ** ಹಿ ಎಂಬ ಋಕ್ಕು ಅತ್ಯಷ್ಟಿ ಎಂಬ ಛಂದಸ್ಸಿನದು. ಅನುಕ್ರಮಣಿಕೆಯಲ್ಲಿ **ಉಭೇ ಸಪ್ತಾದೌ ತ್ರಿಷ್ಟುಪ್ ತಿಸ್ರೋಽನುಷ್ಟುಭೋ ಗಾಯತ್ರೀ ಧೃತಿರಿತಿ** ಎಂದು ಹೇಳಿರುವುದು. ಈ ಸೂಕ್ತದ ವಿನಿಯೋಗವನ್ನು ಶೌನಕಮಹರ್ಷಿಗಳು ಈ ರೀತಿ ಹೇಳಿರುವರು—

**ಉಭೇ ಪುನಾಮೀತಿ ಪುರಾ ರಿಪುಘ್ನ್ಯಸ್ತು ಪ್ರಕೀರ್ತಿತಾಃ ।**
**ತಾ ಜಪನ್ ಪ್ರಯತೋ ನಿತ್ಯಮಿಷ್ಟಾನ್ ಕಾಮಾನ್ಸಮಶ್ನುತೇ ॥**

(ಋಗ್ವಿಧಾನ. ೧-೨೫)

ಉಭೇ ಪುನಾಮಿ ಎಂಬ ಸೂಕ್ತವು ಶತ್ರುನಾಶಕವಾದುದು. ಈ ಸೂಕ್ತದ ಮಂತ್ರಗಳನ್ನು ಪ್ರತಿದಿನವೂ ಶ್ರದ್ಧೆಯಿಂದ ನಿಯಮವಾಗಿ ಜಪಮಾಡುತ್ತಿದ್ದರೆ ಶತ್ರುನಾಶವಾಗಿ ಸಕಲ ಇಷ್ಟಗಳೂ ಸಿದ್ಧಿಸುವವು ಎಂದು ಹೇಳಿದಾರೆ.

## ಸೂಕ್ತ—೧೩೩

ಮಂಡಲ—೧ || ಅನುವಾಕ—೧೯ || ಸೂಕ್ತ—೧೩೩ ||
ಅಷ್ಟಕ—೨ || ಅಧ್ಯಾಯ—೧ || ವರ್ಗ—೨೨ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ||
|| ಋಷಿಃ—ಪರುಚ್ಛೇಪೋ ದೈವೋದಾಸಿಃ ||
|| ದೇವತಾ—ಇಂದ್ರಃ ||
|| ಛಂದಃ—೧ ತ್ರಿಷ್ಟುಪ್ | ೨–೪ ಅನುಷ್ಟುಪ್ | ೫ ಗಾಯತ್ರೀ |
೬ ಧೃತಿಃ | ೭ ಅತ್ಯಷ್ಟಿಃ ||

|| ಸಂಹಿತಾಪಾಠಃ ||

ಉಭೇ ಪುನಾಮಿ ರೋದಸೀ ಋತೇನ ದ್ರುಹೋ ದಹಾಮಿ ಸಂ
ಮಹೀರನಿಂದ್ರಾಃ |
ಅಭಿವ್ಲಗ್ಯ ಯತ್ರ ಹತಾ ಅಮಿತ್ರಾ ವೈಲಸ್ಥಾನಂ ಪರಿ ತೃಳ್ಹಾ ಅಶೇರನ್ ||೧||

|| ಪದಪಾಠಃ ||

ಉಭೇ ಇತಿ | ಪುನಾಮಿ | ರೋದಸೀ ಇತಿ | ಋತೇನ | ದ್ರುಹಃ | ದಹಾಮಿ | ಸಂ | ಮಹೀಃ | ಅನಿಂದ್ರಾಃ |
ಅಭಿಽವ್ಲಗ್ಯ | ಯತ್ರ | ಹತಾಃ | ಅಮಿತ್ರಾಃ | ವೈಲಽಸ್ಥಾನಂ | ಪರಿ | ತೃಳ್ಹಾಃ | ಅಶೇರನ್ ||೧||

|| ಸಾಯಣಭಾಷ್ಯಂ ||

ಹೇ ಇಂದ್ರ ಋತೇನ ತ್ವದುದ್ದೇಶ್ಯೇನ ಯಜ್ಞೇನ ಬಲೇನೋಭೇ ರೋದಸೀ ದ್ಯಾವಾಪೃಥಿವ್ಯೌ ಪುನಾಮಿ | ಲೋಕದ್ವಯಂ ಹಿಂಸಕಾನಾಂ ತೇಷಾಂ ರಕ್ಷಸಾಂ ಪಾಪಗಮನೇನ ಪಾವಯಾಮಿ | ಕಿಂಚ ಭೂಲೋಕೇಽನಿಂದ್ರಾ ಇಂದ್ರವಿರಹಿತಾನಾಮಾಶ್ರಯಭೂತಾ ಮಹೀರುರ್ವೀಃ ಅತ ಏವ ದ್ರುಹೋ ದ್ರೋಹಿಣಾಮಾಧಾರಭೂತತ್ವಾತ್ತ್ವಯಮಪಿ ದ್ರೋಗ್ಧ್ರೀಃ ಸಂ ದಹಾಮಿ | ಸಂಭೂಯೈಕಹೇಲಯಾ ದಹಾಮಿ | ಪುನಸ್ತಾ ಏವ ವಿಶೇಷ್ಯಂತೇ | ಯತ್ರ ಯಾಸು ಭೂಮಿಷ್ವಮಿತ್ರಾಃ ಶತ್ರವೋಽಭಿವ್ಲಗ್ಯಾಭಿತೋ ಗತ್ವಾ ಹತಾಃ ಸರ್ವತಃ ಪ್ರಾಪ್ಯ ಅಸ್ಮಾಭಿರ್ಘಾತಿತಾ ವಾ | ವ್ಲಗತಿರ್ಗತಿಕರ್ಮಾ | ಛಾಂದಸೋ ಧಾತುಃ || ತೇ ಸರ್ವೇ ಪರಿ ತೃಳ್ಹಾ ಹಿಂಸಿತಾಃ || ತೃಹೂ ಹಿಂಸಾರ್ಥಃ | ಊದಿತ್ತ್ವಾದ್ವಸ್ಯ ವಿಭಾಷೇತೀಟ್ಪ್ರತಿ-ಷೇಧಃ || ಹಿಂಸಿತಾಃ ಸಂತೋಽಶೇರನ್ | ಶಯನಂ ಪ್ರಾಪ್ತಾಃ || ಶೇತೇರ್ವ್ಯತ್ಯಯೇನ ಪರಸ್ಮೈಪದಂ |

ಶೀಙಸ್ತೋ ರುಟ್ । ಪಾ. ೭-೧-೬ । ಶೀಙಃ ಸಾರ್ವಧಾತುಕೇ ಗುಣಃ ॥ ವೈಲಸ್ಥಾನಂ । ಬಿಲಶಬ್ದೋ ಗರ್ತಸಮಾನಾರ್ಥಃ । ಸ ಚ ಗರ್ತಃ ಶ್ಮಶಾನವಚನಃ । ಅತೋಽಯಮಪಿ ಶ್ಮಶಾನವಾಚೀ । ಅಥವಾ ಬಿಲಸಂಬಂಧಿಸ್ಥಾನಂ ನಾಗಲೋಕಃ । ತತ್ರ ವಾಶೇರನ್॥ ಯದ್ವಾ। ಬಿಲ ಕ್ಷೇಪೆ ಇತಿ ಧಾತುಃ । ಘಞರ್ಥೇ ಕಃ । ಸ್ವಾರ್ಥಿಕೋಽಣ್ । ತತ್ರ ಶವಾಃ ಕ್ಷಿಪ್ಯಂತೆ ಇತಿ ವೈಲಸ್ಥಾನಂ ಶ್ಮಶಾನಂ ॥ ತತ್ರ ತ್ವಯಾ ಹತಾ ಭೂಮಿಂ ಶ್ಮಶಾನವತ್ಕೃತ್ವಾ ಸರ್ವತ್ರ ಶೇರತೇ । ತಾನ್ದಹಾಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—(ಎಲೈ) ಇಂದ್ರನೇ । **ಋತೇನ**—(ನಿನ್ನ ಉದ್ದೇಶ್ಯಕವಾದ) ಯಜ್ಞದಿಂದ (ಬಲದಿಂದ) । **ಉಭೇ ರೋದಸೀ**—ಭೂಮ್ಯಾಕಾಶಗಳೆರಡನ್ನೂ । **ಪುನಾಮಿ**—(ದುಷ್ಟರನ್ನು ಪರಿಹರಿಸಿ) ಶುದ್ಧಿಗೊಳಿಸುತ್ತೇನೆ । **(ಕಿಂಚ ಭೂಲೋಕೇ**—ಮತ್ತೂ ಭೂಲೋಕದಲ್ಲಿ) । **ಅನಿಂದ್ರಾಃ**—ಇಂದ್ರ ವಿರಹಿತರಿಗೆ ಆಶ್ರಯವಾದ । **ಮಹೀಃ**—ವಿಸ್ತಾರವಾದ । **ದ್ರುಹಃ**—(ದ್ರೋಹಿಗಳಿಗಾಧಾರಭೂತವಾದುದರಿಂದ) ದ್ರೋಹಿಗಳಾದ (ಭೂಭಾಗಗಳನ್ನು) । **ಸಂ ದಹಾಮಿ**—ಚೆನ್ನಾಗಿ ಸುಟ್ಟುಬಿಡುತ್ತೇನೆ । **ಯತ್ರ**—ಯಾವ ಭೂಪ್ರದೇಶಗಳಲ್ಲಿ । **ಅಮಿತ್ರಾಃ**—ಶತ್ರುಗಳು । **ಅಭಿವ್ಲಗ್ಯ**—ಸರ್ವತ್ರ ಹೋಗಿ । **ಹತಾಃ**—ವ್ಯಾಪ್ತರಾಗಿದ್ದಾರೋ (ನಮ್ಮಿಂದ ವಧಿಸಲ್ಪಟ್ಟಿದಾರೋ) । **(ತತ್ರ**—ಅಲ್ಲಿ) । **(ತೇ**— ಅವರು) । **ಪರಿ ತೃಳ್ಹಾಃ**—ಸಂಪೂರ್ಣವಾಗಿ ನಾಶಪಡಿಸಲ್ಪಟ್ಟವರಾಗಿ । **ವೈಲಸ್ಥಾನೇ**—ಬಿಲಗಳಲ್ಲಿ (ಶ್ಮಶಾನಸದೃಶವಾದ ಹಳ್ಳಗಳಲ್ಲಿ ಅಥವಾ ನಾಗಲೋಕದಲ್ಲಿ) । **ಅಶೇರನ್**—ಬಿದ್ದಿರುತ್ತಾರೆ.

॥ ಭಾವಾರ್ಥ ॥

ಎಲೈಇಂದ್ರನೇ, ನಿನ್ನ ಉದ್ದಿಶ್ಯಕವಾದ ಯಜ್ಞದಿಂದ (ಬಲದಿಂದ) ದ್ಯಾವಾಪೃಥಿವಿಗಳೆರಡನ್ನೂ ಪವಿತ್ರಗೊಳಿಸುತ್ತೇನೆ; ಮತ್ತು ಇಂದ್ರವಿರಹಿತವಾದ, (ದ್ರೋಹಿಗಳಿಗೆ ಆಶ್ರಯವಾದುದರಿಂದ ಸ್ವತಃ) ದ್ರೋಹಿಗಳಂತಿರುವ ವಿಸ್ತಾರ (ಭೂಭಾಗಗಳನ್ನು) ಭಸ್ಮಮಾಡಿಬಿಡುತ್ತೇನೆ ; ಮತ್ತುಯಾವ ಯಾವ ಭೂಭಾಗಗಳಲ್ಲಿ ಶತ್ರುಗಳು ವ್ಯಾಪ್ತರಾಗಿದ್ದಾರೋ (ನಮ್ಮಿಂದ ಹತರಾಗಿದ್ದಾರೋ ಅವರು ಅಲ್ಲೇ) ಸಂಪೂರ್ಣವಾಗಿ ನಾಶಪಡಿಸಲ್ಪಟ್ಟು ಹಳ್ಳದಲ್ಲಿ (ಶ್ಮಶಾನದಲ್ಲಿ) ಬಿದ್ದಿರುತ್ತಾರೆ ; (ಅಂತಹ ಭೂಭಾಗಗಳನ್ನೂ ದಹಿಸುತ್ತೇನೆ).

## English Translation.

By sacrifice I purify both the heaven and the earth : I burn the wide (realms of earth) that are without Indra, and are (the haunts) of the wicked : wherever the enemies have congregated they have been slain : and, utterly destroyed, they sleep in a deep pit

॥ ವಿಶೇಷವಿಷಯಗಳು ॥

**ಉಭೇ ರೋದಸೀ**—ರೋದಸೀ ಎಂಬ ಶಬ್ದವು ಸ್ವಧೇ, ಪುರಂಧೀ ಮೊದಲಾದ ಇಪ್ಪತ್ತುನಾಲ್ಕು ದ್ಯಾವಾಪೃಥಿವೀನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ರೋದಸೀ ಎಂದರೆ ದ್ಯಾವಾ ಪೃಥಿವಿಗಳು (ನಿ. ೩-೩೦) ಎಂದರ್ಥವು. ಇಲ್ಲಿ ರೋದಸೀ ಎಂಬ ದ್ವಿವಚನಾಂತಪದವೇ ದ್ಯಾವಾಪೃಥಿವಿಗಳೆಂಬ ಎರಡು ಲೋಕಗಳನ್ನೂ ಸೂಚಿಸು

ವುದರಿಂದ **ಉಭೇ**—ಎರಡು ಎಂಬ ಶಬ್ದವು ಅನಾವಶ್ಯಕವು. ಆದಗೂ ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದವನ್ನು ಋಷಿಯು ಉಪಯೋಗಿಸಿರುವಂತೆ ಕಾಣುತ್ತದೆ. ಯಾಸ್ಕರು ತಮ್ಮ ನಿರುಕ್ತದಲ್ಲಿ ರೋದಸೀ ಎಂಬ ಶಬ್ದಕ್ಕೆ ದ್ಯಾವಾ ಪೃಥಿವೀ ಎಂಬ ಅರ್ಥವನ್ನು ಹೇಳಿರುವುದಲ್ಲದೆ, **ರೋದಸೀ ರುದ್ರಸ್ಯ ಪತ್ನೀ**–ರುದ್ರಪತ್ನಿಯೆಂದೂ (ನಿ. ೧೧-೫೦) ಹೇಳಿ ಈ ಅರ್ಥದ ಸಮರ್ಥನೆಗಾಗಿ—

**ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯಗ್ನಾಯ್ಯಶ್ವಿನೀ ರಾಟ್ ।**
**ಆ ರೋದಸೀ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಂ ॥**

(ಋ. ಸಂ. ೫-೪೬-೮)

ಎಂಬ ಋಕ್ಕನ್ನು ಉದಾಹರಣೆಗಾಗಿ ಕೊಟ್ಟಿರುವರು. (ನಿ. ೧೨-೪೬) ಈ ಋಕ್ಕಿನಲ್ಲಿ ಕೆಲವು ದೇವಪತ್ನಿಯರ ಹೆಸರನ್ನು ಹೇಳುವಾಗ—

**ಅಪಿ ಚ ಗ್ನಾ ವ್ಯಂತು ದೇವಪತ್ನ್ಯಃ । ಇಂದ್ರಾಣೀಂದ್ರಸ್ಯ ಪತ್ನ್ಯಗ್ನಾಯ್ಯಗ್ನೇಃ ಪತ್ನ್ಯಶ್ವಿನ್ಯ-ಶ್ವಿನೋಃ ಪತ್ನೀ ರಾಟ್ ರಾಜತೇ । ರೋದಸೀ ರುದ್ರಸ್ಯ ಪತ್ನೀ । ವರುಣಾನೀ ಚ ವರುಣಸ್ಯ ಪತ್ನೀ ।**

(ನಿ. ೧೨-೪೬)

ಎಂದರೆ ಇಂದ್ರನ ಪತ್ನಿಗೆ ಇಂದ್ರಾಣೀ ಎಂದೂ, ಅಗ್ನಿಯ ಪತ್ನಿಗೆ ಅಗ್ನಾಯೀ ಎಂದೂ, ಅಶ್ವಿನೀದೇವತೆಗಳ ಪತ್ನಿಗೆ ಅಶ್ವಿನೀ ಎಂದೂ, ರುದ್ರನ ಪತ್ನಿಗೆ ರೋದಸೀ ಎಂದೂ, ವರುಣನ ಪತ್ನಿಗೆ ವರುಣಾನೀ ಎಂದೂ ನಿರ್ವಚನವನ್ನು ಹೇಳಿರುವರು. ಪ್ರಸಕ್ತ ಋಕ್ಕಿನಲ್ಲಿ ರೋದಸೀ ಎಂದರೆ ದ್ಯಾವಾಪೃಥಿವಿಗಳೇ ನಿರ್ದಿಷ್ಟವಾಗಿರುವರು.

**ಋತೇನ**—ಋತ ಶಬ್ದಕ್ಕೆ ಸತ್ಯ, ಉದಕ ಮೊದಲಾದ ಅನೇಕಾರ್ಥಗಳಿದ್ದರೂ ಪ್ರಕೃತ ಋಕ್ಕಿನಲ್ಲಿ **ಯಜ್ಞೇನ ಬಲೇನ**—ಯಜ್ಞಕ್ರಿಯೆಗಳಿಂದ ಅಥವಾ ಯಜ್ಞಮಾಡಿ ಅದರಿಂದ ಲಭಿಸುವ ದೈವಿಕವಾದ ಸಾಮರ್ಥ್ಯದಿಂದ ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು.

**ದ್ರುಹಃ—ದ್ರೋಹಿಣಾಮಾಧಾರಭೂತತ್ವಾತ್ತ್ವಯುಮಪಿ ದ್ರೋಗ್ಧ್ರೀಃ** । ದ್ರುಹವೆಂದರೆ ದ್ರೋಹವನ್ನು ಮಾಡುವ ಕೆಟ್ಟಜನರು. ಇಂತಹ ದುಷ್ಟರಿಗೆ ಆಶ್ರಯಭೂತವಾದ ಪ್ರದೇಶ, ಕೆಟ್ಟಜನರು ವಾಸಿಸುವ ಸ್ಥಳ ಎಂದರ್ಥವು. ಇಲ್ಲಿ ಈ ಪದಕ್ಕೆ ವಿಶೇಷಣವಾದ **ಅನಿಂದ್ರಾಃ** ಎಂಬ ಪದವು ಪ್ರಯುಕ್ತವಾಗಿರುವುದರಿಂದ ಇಂದ್ರನಿಲ್ಲದ ಪ್ರದೇಶವು ಕೆಟ್ಟಜನರಿಗೆ ಆವಾಸಸ್ಥಾನವಾಗಿರುವುದೆಂದೂ, ಅಂತಹ ಪ್ರದೇಶವನ್ನು ದಹಿಸಿ ನಾಶಮಾಡುವೆನೆಂದು ಋಷಿಯು ಹೇಳಿದಾನೆ.

**ಅಭಿವ್ಲಗ್ಯ ಯತ್ರ ಹತಾ ಅಮಿತ್ರಾಃ**—ನಮಗೆ ಮಿತ್ರರಲ್ಲದವರು ಎಂದರೆ ಶತ್ರುಗಳಾದ, ಕೆಟ್ಟಜನರು ಯಾವ ಪ್ರದೇಶದಲ್ಲಿ ಒಟ್ಟುಗೂಡುವರೋ ಅಂತಹ ಪ್ರದೇಶದಲ್ಲಿರುವ ದುಷ್ಟರೆಲ್ಲಾ ನಾಶಮಾಡಲ್ಪಡುವರು.

**ಉಭೇ ಪುನಾಮಿ ರೋದಸೀ**—ಮೇಲೆ ಹೇಳಿದಂತೆ ಇಂದ್ರನನ್ನ ಆರಾಧಿಸದೆ ಇರುವ ಕೆಟ್ಟಜನರು ವಾಸಿಸುವ ಪ್ರದೇಶವನ್ನು ದಹಿಸಿ, ಆ ದುಷ್ಟರನ್ನು ನಾಶಗೊಳಿಸಿ ದ್ಯಾವಾಪೃಥಿವಿಗಳನ್ನು ಕೆಟ್ಟಜನರ ಬಾಧೆಯಿಂದ ತಪ್ಪಿಸಿ,

ಪವಿತ್ರನನ್ನಾಗಿ ಮಾಡುವೆನೆಂದು ಋಷಿಯು ಹೇಳಿರುವನು. ದುಷ್ಟಜನರ ಬಾಧೆಯನ್ನು ಪರಿಹರಿಸುವುದೇ ಪವಿತ್ರವನ್ನಾಗಿ ಅಥವಾ ಶುದ್ಧವನ್ನಾಗಿ ಮಾಡುವುದು ಎಂದಭಿಪ್ರಾಯವು.

**ವೈಲಸ್ಥಾನಂ ಪರಿ ತೃಳ್ಹಾ ಅಶೇರನ್**— ಇಂದ್ರನನ್ನ ಆರಾಧಿಸದಿರುವ ನಮ್ಮ ಶತ್ರುಗಳಾದ ದುಷ್ಟರು ನಮ್ಮಿಂದ ಹಿಂಸಿತರಾಗಿ ವಿಲಸ್ಥಾನದಲ್ಲಿ ಎಂದರೆ ಶ್ಮಶಾನ ಪ್ರದೇಶದಲ್ಲಿ ಸತ್ತು ಮಲಗಿರುವರು ಎಂದರ್ಥವು. ವೈಲಸ್ಥಾನವೆಂಬ ಶಬ್ದಕ್ಕೆ ಸಾಯಣರು ಎರಡುವಿಧವಾದ ಅರ್ಥವನ್ನು ಹೇಳಿರುವರು.

> **ವೈಲಸ್ಥಾನಂ ವಿಲಶಬ್ದೋ ಗರ್ತಸಮಾನಾರ್ಥಃ । ಸ ಚ ಗರ್ತಃ ಶ್ಮಶಾನವಚನಃ ! ಅತೋಽಯಮಪಿ ಶ್ಮಶಾನವಾಚೀ । ಅಥವಾ ಬಿಲಸಂಬಂಧಿಸ್ಥಾನಂ ನಾಗಲೋಕಃ ತತ್ರ ವಾಶೇರನ್ । ತತ್ರ ಶವಾಃ ಕ್ಷಿಪ್ಯಂತ ಇತಿ ವೈಲಸ್ಥಾನಂ ಶ್ಮಶಾನಂ । ತತ್ರ ತ್ವಯಾ ಹತಾ ಭೂಮಿಂ ಶ್ಮಶಾನವತ್ಕೃತ್ವಾ ಸರ್ವತ್ರ ಶೇರತೇ । ತಾನ್ದಹಾಮಿತ್ಯರ್ಥಃ ॥**

ವಿಲಶಬ್ದಕ್ಕೆ ಗರ್ತಶಬ್ದಕ್ಕಿರುವ ಅರ್ಥವೇ ಇರುವುದು. ಗರ್ತಶಬ್ದಕ್ಕೆ ಗೃಹವೆಂಬ ಅರ್ಥವಿದ್ದರೂ (ನಿ. ೩-೧೩) ಇಲ್ಲಿ ಶ್ಮಶಾನವೆಂಬ ಅರ್ಥವನ್ನು ಹೇಳಿರುವರು. ಯಾಸ್ಕರು–**ಶ್ಮಶಾನಸಂಚಯೋಽಪಿ ಗರ್ತ ಉಚ್ಯತೇ । ಗುರತೇರಪಗೂರ್ಣೋ ಭವತಿ । ಶ್ಮಶಾನಂ ಶ್ಮಶಯನಂ** (ನಿ. ೩-೫) ಎಂದು ನಿರ್ವಚನವನ್ನು ಹೇಳಿರುವುದರಿಂದ ಗರ್ತವೆಂದರೆ ಶ್ಮಶಾನವೆಂಬ ಅರ್ಥವನ್ನು ಇಲ್ಲಿ ಹೇಳಿರುವರು. ಆದುದರಿಂದ ವೈಲಸ್ಥಾನವೆಂದರೆ ಶ್ಮಶಾನಪ್ರದೇಶವು ಅಥವಾ ಬಿಲ ಶಬ್ದಕ್ಕೆ ನಾಗಲೋಕವೆಂದೂ ಅರ್ಥವಾಗುವುದರಿಂದ ವೈಲಸ್ಥಾನವೆಂದರೆ ನಾಗಲೋಕವೆಂದೂ ಹೇಳಬಹುದು. ಆದರೆ ಈ ಅರ್ಥವು ವೈದಿಕಸಾಹಿತ್ಯದಲ್ಲಿ ಬಳಕೆಯಲಿಲ್ಲ. ಈ ವಿಷಯದಲ್ಲಿ Wilson ಎಂಬ ಆಂಗ್ಲಪಂಡಿತನು ಈರೀತಿ ಹೇಳಿರುವನು—

"ವೈಲಸ್ಥಾನಂ ಅಶೇರನ್" They have slept or irregularly 'they sleep' in a place which is of the nature of a ವಿಲ, a hole, a cavern, a pit; the Scholiast considers the expression in this and in the third stanza to be equavalent to ಶ್ಮಶಾನ, a place where dead bodies are burned, or, as it wonld have seem to imply, a place where they were buried; as if it was the practice to bury the dead when this hymn was composed. Sayana also suggests, as an alternative, the translation of ವೈಲಸ್ಥಾನಂ by ನಾಗಲೋಕ, the serpent-world; ಪಾತಾಳ, the region below the earth; but this is ratter Pauranik, perhaps, than Vaidic.

ಬಿಲವೆಂದರೆ ನಾಗಲೋಕ, ಪಾತಾಳವೆಂಬ ಅರ್ಥವು ಆಧುನಿಕ ಸಂಸ್ಕೃತದಲ್ಲಿ ಮಾತ್ರ ರೂಢಿಯಲ್ಲಿರುವುದರಿಂದ ಆ ಅರ್ಥವನ್ನು ಇಲ್ಲಿ ಗಮನಿಸಬೇಕಾಗಿಲ್ಲ. ಯಾಸ್ಕರು ಗರ್ತ ಶಬ್ದಕ್ಕೆ ನಿರ್ವಚನವನ್ನು ಹೇಳಿರುವಂತೆ ಸ್ಮಶಾನವೆಂಬ ಅರ್ಥವೇ ಸಮಂಜಸವಾಗಿರುವುದು. ಸ್ಮಶಾನದಲ್ಲಿಯೂ ಶವಗಳನ್ನು ಸುಡುವ ಸ್ಥಳ ಮತ್ತು ಹೂಳುವ ಸ್ಥಳ ಎಂದು ಎರಡು ವಿಧವು. ಅವುಗಳಲ್ಲಿ ಯಾವ ಸ್ಥಳವು ಇಲ್ಲಿ ನಿರ್ದೇಶಿಸಲ್ಪಟ್ಟಿರುವುದೆಂದು ಹೇಳುವುದಕ್ಕಾಗುವುದಿಲ್ಲ. Wilson ಪಂಡಿತನು ಆ ಕಾಲದಲ್ಲಿ ಶವವನ್ನು ಹೂಳುವುದು ರೂಢಿಯಲ್ಲಿ ಇತ್ತೆಂದು ಅಭಿಪ್ರಾಯಪಡುವನು. ಆದರೆ

ಈ ಋಕ್ಕಿನಲ್ಲಿಯೇ **ದಹಾಮಿ**—ಸುಟ್ಟು ಭಸ್ಮಮಾಡುವೆನು ಎಂಬ ಶಬ್ದಪ್ರಯೋಗವಿರುವುದರಿಂದ ಶವವನ್ನು ಸುಡುವುದೂ ರೂಢಿಯಲ್ಲಿತ್ತೆಂದು ಧಾರಾಳವಾಗಿ ಹೇಳಬಹುದು. ಋಗ್ವೇದದಲ್ಲಿ ಈ ಎರಡುವಿಧವಾದ ಶವಸಂಸ್ಕಾರಗಳಿದ್ದ ವೆಂಬುದಕ್ಕೆ ಆಧಾರಗಳಿವೆ.

**ಮೈನಮಗ್ನೇ ವಿ ದಹೋ ಮಾಭಿ ಶೋಚೋ ಮಾಸ್ಯ ತ್ವಚಂ ಚಿಕ್ಷಿಪೋ ಮಾ ಶರೀರಂ |**
**ಯದಾ ಶೃತಂ ಕೃಣವೋ ಜಾತವೇದೋಽಥೇಮೇನಂ ಪ್ರ ಹಿಣುತಾತ್ಪಿತೃಭ್ಯಃ ||**

(ಋ. ಸಂ. ೧೦-೧೬-೧)

**ಯಂ ತ್ವಮಗ್ನೇ ಸಮದಹಸ್ತಮು ನಿರ್ವಾಪಯಾ ಪುನಃ |**
**ಕ್ಯಾಮ್ಬೂತ್ರ ರೋಹತು ಪಾಕದೂರ್ವಾ ವ್ಯಲ್ಕಶಾ ||**

(ಋ. ಸಂ. ೧೦-೧೬-೧೩)

ಇತ್ಯಾದಿ ಋಕ್ಕುಗಳು ಶವವನ್ನು ಸುಡುವುದು ರೂಢಿಯಲ್ಲಿತ್ತೆಂಬ ವಿಷಯವನ್ನು ಸಮರ್ಥಿಸುವುವು. ಋ. ಸಂ. ೧೦-೧೬ ನೇ ಸೂಕ್ತದಲ್ಲಿ ಮೃತನಾದವನ ಶರೀರವನ್ನು ದಹಿಸಬೇಡವೆಂದೂ (ಹಿಂಸಿಸಬೇಡವೆಂದೂ) ಅವನನ್ನು (ಅವನ ಆತ್ಮವನ್ನು) ಪಿತೃಗಳ ಮತ್ತು ದೇವತೆಗಳ ಸಮಿಪಕ್ಕೆ ತೆಗೆದುಕೊಂಡು ಹೋಗಬೇಕೆಂದೂ ಅಗ್ನಿಯನ್ನು ನಾನಾ ಪ್ರಕಾರವಾಗಿ ಪ್ರಾರ್ಥಿಸಲಾಗಿದೆ.

**ಉಪ ಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಂ |**
**ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿರ್ಋತೇರುಪಸ್ಥಾತ್ ||**
**ಉಚ್ಛ್ವಂಚಸ್ವ ಪೃಥಿವಿ ಮಾ ನಿ ಬಾಧಥಾಃ ಸೂಪಾಯನಾಸ್ಮೈ ಭವ ಸೂಪವಂಚನಾ |**
**ಮಾತಾ ಪುತ್ರಂ ಯಥಾ ಸಿಚಾಭ್ಯೇನಂ ಭೂಮ ಊರ್ಣುಹಿ ||**
**ಉಚ್ಛ್ವಂಚಮಾನಾ ಪೃಥಿವೀ ಸು ತಿಷ್ಠತು ಸಹಸ್ರಂ ಮಿತ ಉಪ ಹಿ ಶ್ರಯಂತಾಂ |**
**ತೇ ಗೃಹಾಸೋ ಘೃತಶ್ಚುತೋ ಭವಂತು ವಿಶ್ವಾಹಾಸ್ಮೈ ಶರಣಾಃ ಸಂತ್ವತ್ರ ||**
**ಉತ್ತೇ ಸ್ತಭ್ನಾಮಿ ಪೃಥಿವೀಂ ತ್ವತ್ಪರೀಮಂ ಲೋಗಂ ನಿದಧನ್ಮೋ ಅಹಂ ರಿಷಂ |**
**ಏತಾಂ ಸ್ಥೂಣಾಂ ಪಿತರೋ ಧಾರಯಂತು ತೇಽತ್ರಾ ಯಮಃ ಸಾದನಾ ತೇ ಮಿನೋತು ||**

(ಋ ಸಂ. ೧೦-೧೮-೧೦ ರಿಂದ ೧೩)

ಇತ್ಯಾದಿ ಋಕ್ಕುಗಳಲ್ಲಿ ಶವವನ್ನು ಭೂಮಿಯಲ್ಲಿ ಹೂಳುವ ವಿಷಯವನ್ನು ಪ್ರಸ್ತಾಪಿಸಿ ಮೃತನ ಶರೀರವನ್ನು ತಾಯಿಯು ಪುತ್ರನನ್ನು ಕಾಪಾಡುವಂತೆ ಕಾಪಾಡಬೇಕೆಂದು ಮೊದಲಾಗಿ ಭೂಮಿಯನ್ನು ಪ್ರಾರ್ಥಿಸಲಾಗಿದೆ. ಮೇಲೆ ಹೇಳಿರುವ ಋ. ಸಂ. ೧೦-೧೬ ಮತ್ತು ೧೮ನೆಯ ಸೂಕ್ತದ ಮಂತ್ರಗಳು ಅಂತ್ಯಕ್ರಿಯೆಯಲ್ಲಿ ಈಗಲೂ ಉಪಯೋಗಿಸುವ ರೂಢಿಯಿರುವುದು.

|| ವ್ಯಾಕರಣಪ್ರಕ್ರಿಯಾ ||

**ಪುನಾಮಿ**—ಪೂಞ್ ಪವನೇ ಧಾತು. ಲಟ್ ಉತ್ತಮ ಪುರುಷ ಏಕವಚನದಲ್ಲಿ ಮಿಪ್. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩ ೧-೮೧) ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದ್ರುಹಃ**—ದ್ರುಹ ಜಿಘಾಂಸಾಯಾಂ ಧಾತು. ಕ್ವಿಪ್ ಪ್ರತ್ಯಯ. ದ್ವಿತೀಯಾ ಬಹುವಚನಾಂತರೂಪ.

**ದಹಾಮಿ**—ದಹ ಭಸ್ಮೀಕರಣೇ. ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅನಿಂದ್ರಾಃ**—ನ ವಿದ್ಯತೇ ಇಂದ್ರಃ ಯಾಸಾಂ ತಾಃ **ನಞ್‌ಸುಭ್ಯಾಮ್** (ಪಾ.ಸೂ. ೬-೨-೧೭೨) ಎಂಬುದ ರಿಂದ ಉತ್ತರಪದಾಂತೋದಾತ್ತ ಸ್ವರಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಅಭಿವ್ಲಗ್ಯ**—ಅಭಿ ಎಂಬುದು ಉಪಸರ್ಗ. ವ್ಲಗ ಗತೌ. ಇದು ಛಾಂದಸ ಧಾತು. **ಸಮಾಸೇನಞ್ ಪೂರ್ವೇಕ್ತ್ವೋಲ್ಯಪ್** (ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾ ಪ್ರತ್ಯಯಕ್ಕೆ ಲ್ಯಬಾದೇಶ. ಇದು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಹತಾಃ**—ಹನ ಹಿಂಸಾಗತ್ಯೋಃ ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ಅನುದಾತ್ತೋಪದೇಶ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಸಕಾರಕ್ಕೆ ಲೋಪ. ಪ್ರತ್ಯಯಸ್ವರ ಬರುತ್ತದೆ.

**ಅಮಿತ್ರಾಃ—ನಞೋ ಜರಮರ ಮಿತ್ರಮೃತಾಃ** (ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ವೈಲಸ್ಥಾನಂ**—ವಿಲ ಕ್ಷೇಪೇ. ಧಾತು. **ಘಞರ್ಥೇಕವಿಧಾನಮ್** ಎಂಬ ವಚನದಿಂದ ಕ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣಬರುವುದಿಲ್ಲ. ವಿಲ ಏವ ವೈಲಮ್. **ಪ್ರಜ್ಞಾದಿಭ್ಯಶ್ಚ** ಎಂಬುದರಿಂದ ಸ್ವಾರ್ಥದಲ್ಲಿ ಅಣ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. **ತದ್ಧಿತೇಷ್ವಚಾಮಾದೇಃ** ಎಂಬುದ ರಿಂದ ಆದಿಗೆ ವೃದ್ಧಿ. ವೈಲಸ್ಯ ಸ್ಥಾನಮ್. ವೈಲಸ್ಥಾನಮ್. ಶ್ಮಶಾನವೆಂದರ್ಥ.

**ತೃಳ್ಹಾಃ**—ತೃಹೂ ಹಿಂಸಾಯಾಂ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಊದಿತ್ತಾದುದರಿಂದ ವಿಕಲ್ಪಿತವಾಗಿ ಇಟ್ಟನ್ನು ಹೊಂದುವುದರಿಂದ **ಯಸ್ಯ ವಿಭಾಷಾ** (ಪಾ. ಸೂ. ೭-೨-೧೫.) ಎಂಬುದರಿಂದ ಕ್ತಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. **ಹೋಢಃ** ಸೂತ್ರದಿಂದ ಧಾತುಹಕಾರಕ್ಕೆ ಢತ್ವ. **ಝಷಸ್ತಥೋರ್ಧೋಧಃ** ಎಂಬುದರಿಂದ ಪ್ರತ್ಯಯಕ್ಕೆ ಧತ್ವ ಬಂದಾಗ ಷ್ಟುತ್ವದಿಂದ ಅದಕ್ಕೆ ಢಕಾರಾದೇಶ. **ಢೋಢೇ ಲೋಪಃ** ಎಂಬುದರಿಂದ ಪೂರ್ವ ಢಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಶೇರನ್**—ಶೀಙ್ ಸ್ವಪ್ನೇ. ಧಾತು **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಛಾಂದಸವಾಗಿ ಲಙ್. ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. ಅಂತಾದೇಶ ಬಂದಾಗ **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. ಸಂಯೋಗಾಂತ ಲೋಪದಿಂದ ತಕಾರಲೋಪ. **ಶೀಙೋ ರುಟ್** (ಪಾ. ಸೂ. ೭-೧-೬) ಎಂಬುದರಿಂದ ಪ್ರತ್ಯಯಕ್ಕೆ ರುಟಾಗಮ. ಟಿತ್ತಾದುದರಿಂದ ಆದ್ಯವಯವ

ವಾಗಿ ಬರುತ್ತದೆ. ವಿಕರಣಕ್ಕೆ (ಶಪ್) ಲುಕ್. **ಶೀಙಃ ಸಾರ್ವಧಾತುಕೇ ಗುಣಃ** (ಪಾ. ಸೂ ೭-೪-೨೧) ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ. ಅಂಗಕ್ಕೆ ಅಡಾಗಮ. ಯತ್ರ ಎಂಬುದರ ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೧ ॥



॥ ಸಂಹಿತಾಪಾಠಃ ॥

**ಅಭಿವ್ಲಗ್ಯಾ ಚಿದದ್ರಿವಃ ಶೀರ್ಷಾ ಯಾತುಮತೀನಾಂ ।**
**ಛಿಂಧಿ ವಟೂರಿಣಾ ಪದಾ ಮಹಾವಟೂರಿಣಾ ಪದಾ ॥ ೨ ॥**

॥ ಪದಪಾಠಃ ॥

**ಅಭಿಽವ್ಲಗ್ಯ । ಚಿತ್ । ಅದ್ರಿಽವಃ । ಶೀರ್ಷಾ । ಯಾತುಽಮತೀನಾಂ ।**
**ಛಿಂಧಿ । ವಟೂರಿಣಾ । ಪದಾ । ಮಹಾಽವಟೂರಿಣಾ । ಪದಾ ॥ ೨ ॥**

॥ ಸಾಯಣಭಾಷ್ಯಂ॥

**ಅದ್ರಿವೋ ವೈರಿಣಾಂ ಭಕ್ಷಕ ಯದ್ವಾದ್ರೇರ್ಮೇಘಸ್ಯಾದರ್ತರಿಂದ್ರ ತ್ವಂ ಯಾತುಮತೀನಾಂ ಹಿಂಸಾವತೀನಾಂ ಸೇನಾನಾಂ । ಯದ್ವಾ । ಯಾತನಸಾಧನಾನ್ಯಾಯುಧಾನಿ ಯಾತೂನಿ ತದ್ವತೀನಾಂ । ಅಥವಾ । ಯಾತವೋ ರಕ್ಷಾಂಸಿ ತದ್ವತೀನಾಂ ಸೇನಾನಾಂ ॥ ಕರ್ಮಣಿ ಷಷ್ಠೀ ॥ ಶತ್ರೂಣಾಂ ಸೇನಾಃ । ಶೀರ್ಷಾ ಶೀರ್ಷಾಣ್ಯಭಿವ್ಲಗ್ಯಾ ಚಿದಭಿತಃ ಪ್ರಾಪ್ಯೈವ ಛಿಂಧಿ । ಚೂರ್ಣಯ । ಯದ್ವಾ । ತಾಸಾಂ ಸಂಬಂಧೀನಿ ರಥಾದೀನಿ ಛಿಂಧಿ । ಕೇನ ಸಾಧನೇನೇತಿ ತದುಚ್ಯತೇ । ವಟೂರಿಣಾ ಪದಾ ವೇಷ್ಟನಶೀಲೇನ ಸರ್ವವ್ಯಾಪ್ತೇನ ತ್ವದೀಯಪಾದೇನ । ಅತಿವಿಸ್ತೃತೇನೇತ್ಯರ್ಥಃ । ಯದ್ವಾ । ವಟೂರಿಣಾ ಪದಾ ವೇಷ್ಟನಶೀಲೇನ ಹಸ್ತಿನಃ ಸಂಬಂಧಿನಾ ಪಾದೇನ । ಐರಾವತಪಾದೇನೇತ್ಯರ್ಥಃ । ನ ಕೇವಲೇನ ಯೇನ ಕೇನ ಪಾದೇನೇತ್ಯಾಹ । ಮಹಾವಟೂರಿಣಾ ಪದಾ ಮಹಾವೇಷ್ಟನವತಾ ಸ್ವೀಯೇನೈರಾವತಸಂಬಂಧಿನಾ ವಾ ಪಾದೇನ ಛಿಂಧಿ । ಚೂರ್ಣಯ ॥ ವಟ ವೇಷ್ಟನೇ । ಖರ್ಜಿಪಿಂಜ್ಯಾದಿಭ್ಯ ಊರೋಲಚೌ । ಉ. ೪-೯೦। ಇತ್ಯೂರಪ್ರತ್ಯಯಃ । ಅತ ಇನಿಠನಾವಿತೀನಿಃ ॥**

॥ ಪ್ರತಿಪದಾರ್ಥ ॥

**ಹೇ ಅದ್ರಿವಃ**—ವೈರಿಭಕ್ಷಕನಾದ ಅಥವಾ ಮೇಘಗಳನ್ನು ಭೇದಿಸುವ ಎಲೈ ಇಂದ್ರನೇ । **ಯಾತುಮತೀನಾಂ**—ಹಿಂಸಾಯುಕ್ತವಾದ (ಹಿಂಸೆಮಾಡುವ) ಅಥವಾ ಹಿಂಸಕವಾದ ಆಯುಧವಿಶಿಷ್ಟವಾದ ಅಥವಾ ರಾಕ್ಷಸ

ಸಹಿತವಾದ ಸೇನೆಗಳ । **ಶೀರ್ಷಾ**—ತಲೆಗಳನ್ನು (ರಥಗಳನ್ನೂ) । **ಅಭಿವ್ಲಗ್ಯ ಚಿತ್**—(ಚೆನ್ನಾಗಿ) ಸುತ್ತಲೂ ಆವರಿಸಿಕೊಂಡು । **ವಟೂರಿಣಾ**—ವ್ಯಾಪನಶೀಲವಾದ (ವಿಸ್ತೃತವಾದ) । **ಪದಾ**—(ನಿನ್ನ) ಪಾದದಿಂದ ಅಥವಾ (ಐರಾವತದ) ಪಾದದಿಂದ । **ಭಿಂಧಿ**—ಚೂರ್ಣಮಾಡು ಅಥವಾ ಚೂರ್ಣಮಾಡಿಸು । **ಮಹಾವಟೂರಿಣಾ**—ಅತ್ಯಂತ ವಿಸ್ತೃತವಾದ । **ಪದಾ**—(ನಿನ್ನ ಅಥವಾ ಐರಾವತದ) ಪಾದದಿಂದ (ಪುಡಿಪುಡಿ ಮಾಡು).

॥ ಭಾವಾರ್ಥ ॥

ಶತ್ರುನಾಶಕನಾದ ಎಲೈ ಇಂದ್ರನೇ, ಹಿಂಸಕನಾದ(ಹಿಂಸಕವಾದ ಆಯುಧಗಳುಳ್ಳ) ಸೇನೆಗಳ ಶಿರಸ್ಸುಗಳನ್ನು (ರಥಗಳನ್ನು), ಚೆನ್ನಾಗಿ ಆವರಿಸಿಕೊಂಡು, ವ್ಯಾಪಕವಾದ (ನಿನ್ನ ಅಥವಾ ಐರಾವತದ) ಪಾದದಿಂದ ಪುಡಿಮಾಡು ; ಚೆನ್ನಾಗಿ ಆವರಿಸಿಕೊಳ್ಳುವ ಸ್ವಭಾವವುಳ್ಳ (ನಿನ್ನ ಅಥವಾ ಐರಾವತದ) ಪಾದದಿಂದ ಪುಡಿಮಾಡು.

## English Translation.

Devourer (of foes), having trampled on the heads of the malignant (hosts), crush them with your wide-spreading foot; your vast wide-spreading foot.

॥ ವಿಶೇಷವಿಷಯಗಳು ॥

**ಅದ್ರಿವಃ—ವೈರಿಣಾಂ ಭಕ್ಷಕ । ಯದ್ವಾದ್ರೇರ್ಮೇಘಸ್ಯಾದರ್ತರಿಂದ್ರ** । ಈ ಶಬ್ದಕ್ಕೆ ಸಾಯಣರು ಎರಡು ವಿಧವಾದ ಅರ್ಥಮಾಡಿರುವರು. ಅದ ಭಕ್ಷಣೇ ಎಂದರೆ ತಿನ್ನು, ಧ್ವಂಸಮಾಡು ಎಂಬರ್ಥವುಳ್ಳ ಅದ ಧಾತು ವಿನಿಂದ ನಿಷ್ಪನ್ನವಾಗಿ ಶತ್ರುಗಳ ಧ್ವಂಸಕನೆಂದಾಗಲಿ, ಅದ್ರಿಶಬ್ದವು ಮೇಘನಾಮಗಳಲ್ಲಿ (ನಿ. ೨-೨೧) ಪಠಿತವಾಗಿರು ವುದರಿಂದ ಮೇಘಗಳನ್ನು ಪ್ರಹಾರಮಾಡಿ ವೃಷ್ಟಿಯನ್ನುಂಟುಮಾಡುವವನೆಂದಾಗಲಿ ಅರ್ಥಮಾಡಬಹುದೆಂದು ಅರ್ಥವಿವರಣೆ ಮಾಡಿರುವರು.

**ಯಾತುಮತೀನಾಂ—ಹಿಂಸಾವತೀನಾಂ ಸೇನಾನಾಂ** । ಹಿಂಸೆಯನ್ನುಂಟುಮಾಡುವ ಸೇನೆಗಳ ಎಂದರ್ಥವು. ಅಥವಾ **ಯಾತನಸಾಧನಾನ್ಯಾಯುಧಾನಿ ಯಾತೂನಿ ತದ್ವತೀನಾಂ**—ಯಾತನೆ ಅಥವಾ ಹಿಂಸೆ ಯನ್ನುಂಟುಮಾಡುವ ಆಯುಧಗಳಿಗೆ ಯಾತೂನಿ ಎಂದ ಹೆಸರು. ಅವುಗಳನ್ನು ಹೊಂದಿರುವ ಶತ್ರುಗಳಿಗೆ **ಯಾತುಮತೀನಾಂ** ಎಂದು ಹಿಂಸಾಸಾಧನವಾದ ಆಯುಧಾದಿಗಳನ್ನು ಹೊಂದಿರುವ ಯುದ್ಧಭಟರೆಂದರ್ಥವು. ಅಥವಾ **ಯಾತವೋ ರಕ್ಷಾಂಸಿ ತದ್ವತೀನಾಂ ಸೇನಾನಾಂ**—ಯಾತವಃ ಎಂದರೆ ರಾಕ್ಷಸರು, ಅವರಿಂದ ಕೂಡಿದ ಸೇನೆ ಅಥವಾ ರಾಕ್ಷಸಸೇನೆಗಳ ಎಂದಾದರೂ ಅರ್ಥವಾಗಬಹುದು.

**ಪ್ರ ಯೇ ಗೃಹಾದಮಮದುಸ್ತ್ವಾಯಾ ಪರಾಶರಃ ಶತಯಾತುರ್ವಸಿಷ್ಠಃ ।**
**ನ ತೇ ಭೋಜಸ್ಯ ಸಖ್ಯಂ ಮೃಷಂತಾಧಾ ಸೂರಿಭ್ಯಃ ಸುದಿನಾ ವ್ಯುಚ್ಛಾನ್ ॥**

(ಋ ಸಂ. ೭-೧೮-೨೧)

ಎಂಬ ಋಕ್ಕಿನ ನಿರ್ವಚನವನ್ನು ವಿವರಿಸುವಾಗ ವ್ಯಾಖ್ಯಾಕರ್ತೃವಾದ ದುರ್ಗಾಚಾರ್ಯರು **ಶತಯಾತುಃ ಬಹೂನಾಂ ರಾಕ್ಷಸಾನಾಂ ಶಾತಯಿತಾ** ಎಂದು ಯಾತುಶಬ್ದಕ್ಕೆ ರಾಕ್ಷಸರೆಂದು ಅರ್ಥಮಾಡಿರುವರು (ನಿ. ೬-೩೧.)

**ವಟೂರಿಣಾ, ಮಹಾವಟೂರಿಣಾ – ವೇಷ್ಟನಶೀಲೇನ ಸರ್ವವ್ಯಾಪ್ತೇನ ತ್ವದೀಯೇಪಾದೇನ ಅತಿವಿಸ್ತೃತೇನೇತ್ಯರ್ಥಃ** । ಈ ಶಬ್ದಗಳಿಗೆ ಸಾಯಣರು ಎರಡು ವಿಧವಾದ ಅರ್ಥವನ್ನು ಹೇಳಿರುವರು. ಸರ್ವತ್ರ ವ್ಯಾಪ್ತವಾಗಿರುವ, ಅತ್ಯಂತವಿಸ್ತಾರವಾದ ನಿನ್ನ ಪಾದಗಳಿಂದ ಶತ್ರುಗಳ ಶಿರಸ್ಸುಗಳನ್ನು ತುಳಿದು ಕತ್ತರಿಸು ಎಂದು ಒಂದು ವಿಧವಾದ ಅರ್ಥವು. **ಯದ್ವಾ ವಟೂರಿಣಾ ಪದಾ ಮಹಾವೇಷ್ಟನವತಾ ಸ್ವೀಯೇನೈರಾವತಸಂಬಂಧಿನಾ ವಾ ಪಾದೇನ ಛಿಂಧಿ ಚೂರ್ಣಯ** ನಿನ್ನ ಸಂಬಂಧವಾದ ಐರಾವತವೆಂಬ ಆನೆಯ ಅತ್ಯಂತ ದೊಡ್ಡದಾದ ಪಾದಗಳಿಂದ ಶತ್ರುಗಳ ಶಿರಸ್ಸುಗಳನ್ನು ಚೂರ್ಣಮಾಡಿಸು ಎಂದು ಮತ್ತೊಂದು ವಿಧವಾದ ಅರ್ಥವು. ಐರಾವತವೆಂಬ ಆನೆಯ ಹೆಸರು ವೇದಗಳಲ್ಲಿ ಉಕ್ತವಾಗಿಲ್ಲವಾದ್ದರಿಂದ, ಪುರಾಣಾದಿಗಳಲ್ಲಿರುವ ಈ ವಿಧವಾದ ವಿವರಣೆಯು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ.

ಈ ಋಕ್ಕಿನಲ್ಲಿ ಋಷಿಯು ತನಗೆ ಹಿಂಸೆಯನ್ನುಂಟುಮಾಡುವ ಶತ್ರುಗಳ ಶಿರಸ್ಸುಗಳನ್ನು ಇಂದ್ರನು ತನ್ನ ವಿಸ್ತಾರವಾದ (ದೊಡ್ಡದಾದ) ಪಾದಗಳಿಂದ ತುಳಿದು ಧ್ವಂಸಮಾಡಿ, ಶಿರಸ್ಸುಗಳನ್ನು ಕತ್ತರಿಸಿ ಶತ್ರುಗಳನ್ನು ನಾಶಮಾಡಬೇಕೆಂದು ಇಂದ್ರನನ್ನು ಪ್ರಾರ್ಥಿಸಿರುವನು.

॥ ವ್ಯಾಕರಣಪ್ರಕ್ರಿಯಾ ॥

**ಅಭಿವ್ಲಗ್ಯ**—ಇದರ ಪ್ರಕ್ರಿಯೆಯು ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ಛಾಂದಸವಾಗಿ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅದ್ರಿವಃ—ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. **ಮತುವಸೋರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ರುತ್ವ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತ ಸ್ವರ ಬರುತ್ತದೆ.

**ಶೀರ್ಷಾ—ಶೀರ್ಷನ್ ಛಂದಸಿ** (ಪಾ. ಸೂ. ೬-೧-೬೦) ಎಂಬುದರಿಂದ ಶಿರಃ ಶಬ್ದಕ್ಕೆ ಶೀರ್ಷನ್ ಆದೇಶ. ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಮ್** ಎಂಬುದರಿಂದ ಶಿಗೆ ಲೋಪ.

**ಯಾತುಮತೀನಾಂ**—ಯಾತೂನಿ ಆಸಾಂ ಸಂತೀತಿ ಯಾತುಮತ್ಯಃ ತಾಸಾಮ್. **ಹ್ರಸ್ವನುಡ್ಭ್ಯಾಂ** (ಪಾ. ಸೂ ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಛಿಂಧಿ**—ಛಿದಿರ್ ದ್ವೈಧೀಕರಣೇ ಧಾತು ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ಅಂತೋದಾತ್ತವಾಗುತ್ತದೆ.

**ವಟೂರಿಣಾ**—ವಟ ವೇಷ್ಟನೇ. ಧಾತು. **ಖರ್ಜಪಿಞ್ಜಾದಿಭ್ಯ ಊರೋಲಚೌ** (ಉ. ಸೂ. ೪-೫೩೦) ಎಂಬುದರಿಂದ ಊರ ಪ್ರತ್ಯಯ. ವಟೂರಃ ಅಸ್ಯ ಅಸ್ತಿ ಇತಿ ವಟೂರೀ. **ಅತ ಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ. ತೃತೀಯಾಂತರೂಪ.

**ಪದಾ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಮಹಾವಟೂರಿಣಾ**—ಮಹಾಂಶ್ಚಾಸೌ. ವಟೂರೀ ಚ. ಮಹಾವಟೂರೀ. **ಆನ್ಮಹತಃ ಸಮಾನಾಧಿ**—ಎಂಬುದರಿಂದ ಪೂರ್ವಪದಕ್ಕೆ ಆತ್ವ. ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ. || ೨ ||



|| ಸಂಹಿತಾಪಾಠಃ ||

ಅವಾಸಾಂ ಮಘವಞ್ಜಹಿ ಶರ್ಧೋ ಯಾತುಮತೀನಾಂ |
ವೈಲಸ್ಥಾನಕೇ ಅರ್ಮಕೇ ಮಹಾವೈಲಸ್ಥೇ ಅರ್ಮಕೇ || ೩ ||

|| ಪದಪಾಠಃ ||

ಅವ | ಆಸಾಂ | ಮಘ್ವವನ್ | ಜಹಿ | ಶರ್ಧಃ | ಯಾತುऽಮತೀನಾಂ |
ವೈಲऽಸ್ಥಾನಕೇ | ಅರ್ಮಕೇ | ಮಹಾऽವೈಲಸ್ಥೇ | ಅರ್ಮಕೇ || ೩ ||

|| ಸಾಯಣಭಾಷ್ಯಂ ||

ಹೇ ಇಂದ್ರ ಮಘವನ್ ಧನವನ್ ಆಸಾಂ ಯಾತುಮತೀನಾಂ | ಯಾತನಸಾಧನಾನ್ಯಾಯುಧಾನಿ ಯಾತೂನಿ | ತದ್ವತೀನಾಂ ಯಾತುಧಾನವತಾಂ ವಾ ಸೇನಾನಾಂ ಶರ್ಧೋ ಬಲಮವ ಜಹಿ | ಚೂರ್ಣಯ | ತಥಾ ಕೃತ್ವಾ ಚಾರ್ಮಕೇ ಕುತ್ಸಿತೇ ಶವೈರರಣೀಯೇ ವೈಲಸ್ಥಾನಕೇ ಕುತ್ಸಿತೇ ಪೂರ್ವೋಕ್ತಲಕ್ಷಣೇ ಶ್ಮಶಾನೇ ಕ್ಷಪಯೇತಿ ಶೇಷಃ | ಯದ್ವಾ | ವೈಲಸ್ಥಾನಕೇ ಬಿಲಸಂಬಂಧಿನಿ ಕುತ್ಸಿತೇ ಸ್ಥಾನೇऽಂಧಕಾರಾವೃತೇऽಧೋಲೋಕೇ ಸ್ಥಾಪಯೇತಿ ಶೇಷಃ | ನನು ಯತ್ರ ಕ್ವಚಿತ್ಕ್ವಾಪ್ರೇ ನೇತ್ಯಾಹ | ಮಹಾವೈಲಸ್ಥೇ ಸರ್ವೈರ್ಗಂತವ್ಯೇ ಮಹಾಶ್ಮಶಾನೇ ನಾಗಲೋಕೇ ವಾ | ಪುನಃ ಕೀದೃಶೇ | ಅರ್ಮಕೇ ಕುತ್ಸಿತೇ ಗತಾಸುಭಿರರಣೀಯೇ ||

|| ಪ್ರತಿಪದಾರ್ಥ ||

**ಮಘವನ್**—ಧನವಂತನಾದ ಎಲೈ ಇಂದ್ರನೇ | **ಆಸಾಂ**—ಈ | **ಯಾತುಮತೀನಾಂ**—ಯಾತನ ಸಾಧನವಾದ ಆಯುಧಯುಕ್ತರಾದವರ (ಸೈನಿಕರ) | **ಶರ್ಧಃ**—ಬಲವನ್ನು | **ಅವ ಜಹಿ**—ನಾಶಮಾಡು | (**ತಥಾ ಕೃತ್ವಾ**—ಹೀಗೆ ಮಾಡಿ) | **ಅರ್ಮಕೇ**—ಕುತ್ಸಿತವಾದ (ಶವಗಳಿಗೆ ಯೋಗ್ಯವಾದ) | **ವೈಲಸ್ಥಾನಕೇ**—ಬಿಲದಲ್ಲಿ (ಶ್ಮಶಾನದಲ್ಲಿ) | (**ಕ್ಷಪಯ**—ಬೀಳಿಸು) | **ಅರ್ಮಕೇ**—ಕುತ್ಸಿತವಾದ (ಮೃತರಿಂದ ಪ್ರಾಪ್ಯವಾದ) | **ಮಹಾವೈಲಸ್ಥೇ**—ಮಹಾಬಿಲದಲ್ಲಿ (ನಾಗಲೋಕದಲ್ಲಿ) | (**ಕ್ಷಪಯ**—ಬೀಳಿಸು).

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ಹಿಂಸಕಾರಕವಾದ ಮತ್ತು ಆಯುಧಯುಕ್ತವಾದ ಈ (ಸೇನೆಗಳ) ಬಲವನ್ನು ಚೂರ್ಣಮಾಡು ; (ಚೂರ್ಣಮಾಡಿ) ಅವರನ್ನು ಕುತ್ಸಿತವಾದ ಬಿಲದಲ್ಲಿ (ಶ್ಮಶಾನದಲ್ಲಿ ಬೀಳುವಂತೆ ಮಾಡು); ಕುತ್ಸಿತವಾದ ಮಹಾಬಿಲದಲ್ಲಿ (ನಾಗಲೋಕದಲ್ಲಿ ಹಾಕು).

## English Translation.

Annihilate, Maghavan, the might of malignant (hosts), hurl them into the vile pit ; the vast and vile pit.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಋಷಿಯು—ತನ್ನ ಶತ್ರುಗಳ ಬಲವನ್ನು ಧ್ವಂಸಮಾಡಿ ಅವರನ್ನು ಜಯಿಸಿ ಅವರ ಮೃತದೇಹಗಳನ್ನು ಶ್ಮಶಾನ ಅಥವಾ ಅಂಧಕಾರಾವೃತವಾದ ಅಧೋಲೋಕದಲ್ಲಿ ಎಸೆಯಬೇಕೆಂದು ಇಂದ್ರನನ್ನು ಪ್ರಾರ್ಥಿಸಿದಾನೆ.

**ಆಸಾಂ ಯಾತುಮತೀನಾಂ**—ಯಾತನಸಾಧನಗಳಿಂದ ಕೂಡಿರುವ ಸೇನೆಗಳೆಂದು ಅರ್ಥ. ಈ ಶಬ್ದದ ಅರ್ಥವಿವರಣೆಯನ್ನು ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗಿದೆ.

**ಶರ್ಧಃ**—ಶರ್ಧ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಸಾಧಾರಣವಾಗಿ ಈ ಶಬ್ದವು ಮರುತ್ತುಗಳ ಸಮೂಹವೆಂಬ ಅರ್ಥದಲ್ಲಿಯೇ ವಿಶೇಷವಾಗಿ ಪ್ರಯೋಗಿಸಲ್ಪಟ್ಟಿರುವುದು. ಇಲ್ಲಿ ಶತ್ರುಸೇನೆಗಳ ಬಲವೆಂದರ್ಥವು.

**ವೈಲಸ್ಥಾನಕೇ, ಮಹಾವೈಲಸ್ಥೇ—ಬಿಲಸಂಬಂಧಿನಿ ಕುತ್ಸಿತೇ ಸ್ಥಾನೇಽನ್ಧಕಾರಾವೃತೇಽಧೋಲೋಕೇ** । ಹಳ್ಳದಂತೆ ಅತ್ಯಂತ ಆಳವಾಗಿಯೂ ಕತ್ತಲೆಯಿಂದ ಕೂಡಿ ಭಯಂಕರವಾಗಿಯೂ ಇರುವ ಅಧೋಲೋಕವೆಂದರ್ಥವು. ಹಿಂದಿನ ಋಕ್ಕಿನಲ್ಲಿ ಹೇಳಿರುವಂತೆ ನಾಗಲೋಕ ಅಥವಾ ಶ್ಮಶಾನ ಪ್ರದೇಶವೆಂದಾದರೂ ಅರ್ಥವಾಗಬಹುದು. ಇಂತಹ ಸ್ಥಳದಲ್ಲಿ ಶತ್ರುಗಳನ್ನು ಎಸೆಯಬೇಕೆಂದು ಇಂದ್ರನನ್ನು ಪ್ರಾರ್ಥಿಸಿದೆ.

**ಅರ್ಮಕೇ—ಕುತ್ಸಿತೇ ಶವೈರರಣೀಯೇ । ಗತಾಸುಭಿರರಣೀಯೇ** । ಮೃತರಾದವರ ಶರೀರಾದಿಗಳನ್ನು ಹಾಕುವ ಅತಿನಿಂದ್ಯವಾದ ಪ್ರದೇಶ (ಶ್ಮಶಾನ) ವೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಜಹಿ**—ಹನ ಹಿಂಸಾಗತ್ಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಹಂತೇರ್ಜಃ** (ಪಾ. ಸೂ. ೬-೪-೩೬) ಎಂಬುದರಿಂದ ಧಾತುವಿಗೆ ಜಾದೇಶ. ಇದಕ್ಕೆ ಅಸಿದ್ಧಭಾವ ಇರುವುದರಿಂದ **ಅತೋ ಹೇಃ** ಎಂಬುದರಿಂದ ಹಿಗೆ ಲುಕ್ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಶರ್ಧಃ**—ಶೃಧು ಉಂದನೇ. ಧಾತು. ಅಸುನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

**ಯಾಸಾಂ ತಿಸ್ರಃ ಪಂಚಾಶತೋಽಭಿವ್ಲಂಗೈರಪಾವಪಃ ।**
**ತತ್ಸು ತೇ ಮನಾಯತಿ ತಕತ್ಸು ತೇ ಮನಾಯತಿ ॥ ೪ ॥**

॥ ಪದಪಾಠಃ ॥

ಯಾಸಾಂ । ತಿಸ್ರಃ । ಪಂಚಾಶತಃ । ಅಭಿऽವ್ಲಂಗೈಃ । ಅಪऽಅವಪಃ ।
ತತ್ । ಸು । ತೇ । ಮನಾಯತಿ । ತಕತ್ । ಸು । ತೇ । ಮನಾಯತಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯಾಸಾಂ ಪೂರ್ವಮಂತ್ರೋಕ್ತಲಕ್ಷಣಾನಾಂ ಸೇನಾನಾಂ ತಿಸ್ರಃ ಪಂಚಾಶತಃ ತ್ರಿಗುಣಿತಪಂಚಾಶತ್ಸಂಖ್ಯಾಂ ಸಾರ್ಧಶತಮಭಿವ್ಲಂಗೈರಭಿಗಮನೈಃ ॥ ವ್ಲಂಗತಿರ್ಗತಿಕರ್ಮೇತ್ಯುಕ್ತಂ ॥ ಅಭಿಗಮ್ಯಾಪಾವಪಃ ನಾಶಿತವಾನಸಿ । ಹೇ ಇಂದ್ರ ತತ್ತಾದೃಶಂ ಸೇನಾವಧಾದಿರೂಪಂ ಕರ್ಮ ಸು ಮನಾಯತಿ । ಸುಷ್ಠು ಸಂಭಾವಯತೀತ್ಯರ್ಥಃ । ಕಿಂಚ ಹೇ ಇಂದ್ರ ತೇ ತವಾಧ್ಯರ್ಧಶತಶತ್ರುಸೇನಾಜಯರೂಪಂ ಮಹದಪಿ ತಕದಿತಿ ಸು ಮನಾಯತಿ । ಅತ್ಯಲ್ಪಮಿದಮಿತಿ ಸುಷ್ಠು ಮನ್ಯತೇ ॥

॥ ಪ್ರತಿಪದಾರ್ಥ ॥

(**ಹೇ ಇಂದ್ರ**—ಎಲೈ ಇಂದ್ರನೇ) । **ಯಾಸಾಂ**—ಯಾವ (ಹಿಂದೆ ಹೇಳಿದ ಸೇನೆಗಳ) । **ತಿಸ್ರಃ ಪಂಚಾಶತಃ**—ಐವತ್ತರ ಮೂರರಷ್ಟನ್ನು (ನೂರೈವತ್ತನ್ನು) । **ಅಭಿವ್ಲಂಗೈಃ**—ಎದುರಿಸುವುದರಿಂದ (ಎದುರಿಸಿ) । **ಅಪ ಅವಪಃ**—ನಾಶಮಾಡಿದೆಯೋ । **ತೇ ತತ್**—ಆ ನಿನ್ನ (ಕರ್ಮವು) । **ಸು ಮನಾಯತಿ**—ಚೆನ್ನಾಗಿ ಶೋಭಿಸುತ್ತದೆ (ಆ ಕಾರ್ಯವು ಮಹತ್ತಾದರೂ) । **ತೇ**—ನಿನಗೆ । **ತಕತ್** (ಇತಿ)—ಅಲ್ಪವೆಂದು । **ಸು ಮನಾಯತಿ**—ಚೆನ್ನಾಗಿ ತಿಳಿದಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, (ನೀನು ಆ ಹಿಂಸಾಕಾರಕ ಆಯುಧಯುಕ್ತರಾದ) ಒಂದುನೂರೈವತ್ತು ಸೇನೆಯನ್ನು ಎದುರಿಸಿ ನಾಶಮಾಡಿದೆಯೆಂಬುದು ನಿನಗೆ ಚೆನ್ನಾಗಿ ಶೋಭಿಸುತ್ತದೆ; ಆದರೆ, (ಆ ಮಹತ್ಕಾರ್ಯವೂ) ನಿನ್ನಂತಹ ಬಲಶಾಲಿಗೆ ಅತ್ಯಲ್ಪವೆಂದು ಜ್ಞಾತವಾಗಿದೆ.

## English Translation

That you have destroyed, by your assaults, thrice fifty of such (hosts), is a deed that well becomes you, although thought by you of little moment.

॥ ವಿಶೇಷವಿಷಯಗಳು ॥

**ತಿಸ್ರಃ ಪಂಚಾಶತಃ**—ಮೂರು ಸಲ ಐವತ್ತು ಎಂದರೆ ನೂರೈವತ್ತು ಎಂದರ್ಥವು. ಎಂದರೆ ಹಿಂದೆ ಹೇಳಿದ ಶತ್ರುಗಳಲ್ಲಿ ನೂರೈವತ್ತು ಮಂದಿ ಶತ್ರುಗಳನ್ನು ಅಥವಾ ನೂರೈವತ್ತು ಶತ್ರುಸೇನೆಗಳನ್ನು ನಾಶವಮಾಡಿರುತ್ತೀ ಎಂದು ಇಂದ್ರನನ್ನು ಪ್ರಾರ್ಥಿಸಿದೆ

**ತತ್ಸು ತೇ ಮನಾಯತಿ ತಕತ್ ಸು ತೇ ಮನಾಯತಿ** – ಇಲ್ಲಿ ಮನಾಯತಿ ಎಂಬ ಶಬ್ದಕ್ಕೆ ಸಾಯಣರು—**ಸುಷ್ಠು ಮನ್ಯತೇ, ಸುಷ್ಠು ಸಂಭಾವಯತೀತ್ಯರ್ಥಃ** । ಬಹಳ ಪ್ರಶಸ್ತವಾದ ಕಾರ್ಯವೆಂದು ತಿಳಿಯುತ್ತಾರೆ ಎಂದು ಹೇಳಿರುವರು. ಎಂದರೆ ಈ ವಾಕ್ಯಕ್ಕೆ—ಎಲೈ ಇಂದ್ರನೇ ನೀನು ಮಾಡುವ (ಹಿಂದೆ ಇದುವರಿಗೆ ಹೇಳಿರುವ) ಶತ್ರುವಧಕಾರ್ಯವು ನಿನಗೆ ಅತ್ಯಲ್ಪವಾದುದೆಂದು ಕಂಡುಬಂದರೂ ನಮಗೆ ಅದು ಅತಿ ಮಹತ್ತಾದ ಕಾರ್ಯವೆಂದು ಕಂಡುಬರುವುದು ಅಂತಹ ಕಾರ್ಯವನ್ನು ನಾವು ಬಹಳವಾಗಿ ಪ್ರಶಂಸಿಸುತ್ತೇವೆ ಎಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ತಿಸ್ರಃ**—**ತ್ರಿಚತುರೋಃ ಸ್ತ್ರಿಯಾಂ ತಿಸೃ ಚತಸೃ** ಎಂಬುದರಿಂದ ತ್ರಿ ಶಬ್ದಕ್ಕೆ ತಿಸ್ರಾದೇಶ. ಗುಣ ಪ್ರಾಪ್ತವಾದರೆ **ಅಚಿರ ಋತಃ** ಎಂಬುದರಿಂದ ಋಕಾರಕ್ಕೆ ರೇಫಾದೇಶ. **ಉದಾತ್ತಯಣೋ ಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಭಿವ್ಲಂಗೈಃ**—ವ್ಲಂಗ ಗತೌ. ಧಾತು. ಸೂತ್ರಮಾತ್ರಪ್ರಯುಕ್ತವಾದ ಧಾತು. ಅಚ್ ಪ್ರತ್ಯಯ. ಅಂತೋದಾತ್ತವಾಗುತ್ತದೆ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದಪ್ರಕೃತಿಸ್ವರ ಬರುತ್ತದೆ.

**ಅಪಾವಪಃ**—ಅಪ ಉಪಸರ್ಗ. ಡು ವಪ್ ಬೀಜಸಂತಾನೇ. ಧಾತು ಉಪಸರ್ಗದಿಂದ ನಾಶಾರ್ಥ ತೋರುತ್ತದೆ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಅವಪಃ ಎಂದು ರೂಪವಾಗುತ್ತದೆ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅಪ) ಅನುದಾತ್ತಸ್ವರ ಬರುತ್ತದೆ.

**ಮನಾಯತಿ**—ಲಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ಪಿಶಂಗಭೃಷ್ಟಿಮಂಭೃಣಂ ಪಿಶಾಚಿಮಿಂದ್ರ ಸಂ ಮೃಣ ।
ಸರ್ವಂ ರಕ್ಷೋ ನಿ ಬರ್ಹಯ ॥ ೫ ॥

॥ ಪದಪಾಠಃ ॥

ಪಿಶಂಗಽಭೃಷ್ಟಿಂ । ಅಂಭೃಣಂ । ಪಿಶಾಚಿಂ । ಇಂದ್ರ । ಸಂ । ಮೃಣ ।
ಸರ್ವಂ । ರಕ್ಷಃ । ನಿ । ಬರ್ಹಯ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಪಿಶಂಗಭೃಷ್ಟಿಮೀಷದ್ರಕ್ತವರ್ಣಂ ಅಂಭೃಣಮತಿಭಯಂಕರಂ ಶಬ್ದಾಯಮಾನಂ ॥ ಭೃಣ ಶಬ್ದೇ । ಯಙ್ಲುಗಂತಾತ್ಪಚಾದ್ಯಚಿ ಛಾಂದಸೋ ಭಲೋಪಶ್ಚ ॥ ಯದ್ವಾ । ಮಹಾಂತಂ । ಅತಿಪ್ರವೃದ್ಧಮಿತ್ಯರ್ಥಃ । ಅಂಭೃಣ ಇತಿ ಮಹನ್ನಾಮ ಅಂಭೃಣೋ ಮಾಹಿನ ಇತಿ ತತ್ರ ಪಾಠಾತ್ । ಉಕ್ತವಿಧಿಂ ಪಿಶಾಚಿಂ ಪಿಶಾಚವಿಶೇಷಂ । ಜರಾಮಿತ್ಯೇಕೇ । ಸಂ ಮೃಣ । ಸಮ್ಯಗ್ಹಿಂಸಯ। ನ ಕೇವಲಂ ತಮೇಕಂ ಕಿಂತು ಸರ್ವಂ ರಕ್ಷೋ ರಕ್ಷಣನಿಮಿತ್ತಭೂತಂ ರಾಕ್ಷಸಾದಿಕಂ ನಿ ಬರ್ಹಯ । ನಿಷೂದಯ ॥ ಬೃಹ ಹಿಂಸಾಯಾಂ ಚೌರಾದಿಕಃ ॥ ನಾಮಯ । ವಧಕರ್ಮ್ಯೇತತ್ ನಿತೋಶಯತಿ ನಿಬರ್ಹಯತೀತಿ ತತ್ರೋಕ್ತತ್ವಾತ್ ॥**

॥ ಪ್ರತಿಪದಾರ್ಥ ॥

**ಹೇ ಇಂದ್ರ**—ಎಲೈ ಇಂದ್ರನೇ । **ಪಿಶಂಗಭೃಷ್ಟಿಂ**—ಮಾಸಲುಕೆಂಪಾಗಿರುವ ಮತ್ತು । **ಅಂಭೃಣಂ**—ಅತಿಭಯಂಕರವಾದ ಶಬ್ದಮಾಡುವ (ಬಹಳ ದೊಡ್ಡದಾದ) । **ಪಿಶಾಚಿಂ**—ಪಿಶಾಚಿಯನ್ನು (ಜರಾ ಎಂಬ ಪಿಶಾಚಿಯನ್ನು) । **ಸಂ ಮೃಣ**—ಚೆನ್ನಾಗಿ ಹಿಂಸಿಸು । **ಸರ್ವಂ ರಕ್ಷಃ**—ಎಲ್ಲಾ ರಾಕ್ಷಸರನ್ನೂ । **ನಿ ಬರ್ಹಯ**—ವಧೆಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಮಾಸಲು ಕೆಂಪಾಗಿರುವ ಮತ್ತು ಅತಿಭಯಂಕರವಾದ (ಬಹಳ ದೊಡ್ಡದಾದ ಅಥವಾ ಘಟ್ಟಿಯಾದ ಕಿರುಚುತ್ತಿರುವ) ಪಿಶಾಚಿಯನ್ನು (ಜರೆಯನ್ನು) ಚೆನ್ನಾಗಿ ಹಿಂಸಿಸು; (ಮತ್ತು) ಎಲ್ಲಾ ರಾಕ್ಷಸರನ್ನೂ ವಧಿಸು.

## English Translation.

Destroy, Indra, the tawny-coloured, fearfully-roaring, Pishachi; annihilate all the Rakshasas.

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕುಗಳಲ್ಲಿ ಮನುಷ್ಯರೂಪದಿಂದಿರುವ ಶತ್ರುಗಳನ್ನು ಸಂಹರಿಸಬೇಕೆಂದು ಪ್ರಾರ್ಥಿಸಿ ಈ ಋಕ್ಕಿನಲ್ಲಿ ಪಿಶಾಚಿ, ರಕ್ಷೋಗಣ, ಮುಂತಾದವರನ್ನು ನಾಶಮಾಡೆಂದು ಋಷಿಯು ಇಂದ್ರನನ್ನು ಪ್ರಾರ್ಥಿಸಿದಾನೆ.

**ಪಿಶಂಗಭೃಷ್ಟಿಂ**—ಸ್ವಲ್ಪ ಮಾಸಲು ಕೆಂಪುವರ್ಣದ ಶರೀರವುಳ್ಳ; ಪಿಶಾಚಾದಿಗಳ ಶರೀರವರ್ಣವು ಮನುಷ್ಯ ರಂತಿರದೆ ಬೇರೆ ಬಣ್ಣದ್ದಾಗಿ ನೋಡುವವರಿಗೆ ಅತಿಭಯಂಕರವಾಗಿರುವುದೆಂದಭಿಪ್ರಾಯವು. ಈ ದೇಶದ ಪೂರ್ವ ನಿವಾಸಗಳನ್ನು ದಾಸ, ದಸ್ಯು ಮೊದಲಾದ ಶಬ್ದಗಳಿಂದ ಅನೇಕ ಸಂದರ್ಭಗಳಲ್ಲಿ ಕರೆಯುವುದು ರೂಢಿಯಲ್ಲಿದ್ದಂತೆ ಕಂಡುಬರುತ್ತದೆ. ಅವರ ವೇಷಭೂಷಾದಿಗಳೂ ದೇಹದ ವರ್ಣವೂ ಆರ್ಯರಂತಿರದೆ, ಕಪ್ಪು, ಮಾಸಲುಗೆಂಪು ಮೊದಲಾದ ವರ್ಣಗಳಿಂದ ಕೂಡಿ ಭಯಂಕರವಾಗಿರುವುದರಿಂದ ಅವರನ್ನು ಪಿಶಾಚಿ ರಕ್ಷಃ ಮೊದಲಾದ ಶಬ್ದಗಳಿಂದ ನಿರ್ದೇಶಿಸುವುದು ಸಾಮಾನ್ಯವಾಗಿರುವುದು.

**ಅಂಭೃಣಂ— ಅತಿಭಯಂಕರಂ ಶಬ್ದಾಯಮಾನಂ । ಯದ್ವಾ । ಮಹಾಂತಂ ಅತಿಪ್ರವೃದ್ಧ- ಮಿತ್ಯರ್ಥಃ ।** ಅತಿಭಯಂಕರಾಕಾರವುಳ್ಳದ್ದೂ ಘಟ್ಟಿಯಾಗಿ ಅಥವಾ ವಿಕಾರಸ್ವರದಿಂದ ಶಬ್ದಮಾಡುವುದೂ ಆದ ಎಂದರ್ಥವು. ಅಂಭೃಣ ಎಂಬ ಶಬ್ದವು ಮಹತ್ ಬುಧ್ನಃ ಮೊದಲಾದ ಇಪ್ಪತ್ತೈದು ಮಹನ್ನಾಮಗಳಲ್ಲಿ ಪಠಿತ ವಾಗಿರುವುದರಿಂದ (ನಿ. ೩-೧೩) **ಮಹಾಂತಂ**—ಎಂದರೆ ಅತಿದೊಡ್ಡದಾದ ಆಕಾರವುಳ್ಳ ಎಂಬರ್ಥವನ್ನಾದರೂ ಹೇಳಬಹುದು. ಪಿಶಾಚಿ, ರಾಕ್ಷಸರು ಇವರುಗಳ ಆಕಾರವು ಮನುಷ್ಯರ ಆಕಾರಕ್ಕಿಂತ ಅತ್ಯಂತ ದೊಡ್ಡದಾಗಿರುವು ದೆಂದು ಪ್ರಸಿದ್ಧವು.

**ಪಿಶಾಚಿಂ, ರಕ್ಷಃ**— ಯಾಸ್ಕರು ನಿರುಕ್ತದಲ್ಲಿ **ರಕ್ಷಃ** ಶಬ್ದದ ನಿರ್ವಚನವನ್ನು-**ರಕ್ಷೋ ರಕ್ಷಿತವ್ಯಮಸ್ಮಾತ್ । ರಹಸಿ ಕ್ಷಣೋತೀತಿ ವಾ । ರಾತ್ರೌ ನಕ್ಷತ ಇತಿ ವಾ ।** ಎಂದು ಹೇಳಿರುವರು. ಎಂದರೆ ಇವರು ಮನುಷ್ಯರನ್ನು ಪೀಡಿಸುವವರಾದ್ದರಿಂದ ಇವರಿಂದ ಮನುಷ್ಯರು ಕಾಪಾಡಲ್ಪಡಬೇಕು. ಆದ್ದರಿಂದ ಇವರಿಗೆ ರಕ್ಷಃ ಎಂದು ಹೆಸರು. ಅಥವಾ ನಿರ್ಜನ ಪ್ರದೇಶದಲ್ಲಿ ಇರುವವರಾದ್ದರಿಂದ ಅಥವಾ ರಾತ್ರಿಕಾಲದಲ್ಲಿ ಸಂಚಾರಮಾಡುವವರಾದ್ದರಿಂದ ಇವರಿಗೆ ರಕ್ಷಃ ಎಂದು ಹೆಸರು ಎಂದು ವಿವರಿಸಿರುವರು. (ನಿ. ೪-೧೮) ಆಧುನಿಕ ಸಂಸ್ಕೃತದಲ್ಲಿ ಪಿಶಾಚಿ, ರಕ್ಷಃ ಎಂಬ ಶಬ್ದಗಳು ಭೌತಿಕಶರೀರರಹಿತರಾದವರೂ, ದುಷ್ಟಸ್ವಭಾವವುಳ್ಳವರೂ ಮನುಷ್ಯಾದಿಗಳಿಗೆ ಕೆಡುಕನ್ನುಂಟುಮಾಡುವವರೂ ಆದ ಕೆಲವು ಅಶರೀರವ್ಯಕ್ತಿಗಳೆಂಬ ಅರ್ಥವನ್ನು ಸೂಚಿಸುವವು. ಆದರೆ ಋಗ್ವೇದದಲ್ಲಿ ಈ ವಿಧವಾದ ವರ್ಣನೆಗೆ ಅವಕಾಶ ವಿಲ್ಲದಿದ್ದರೂ ಅವರು ದುಷ್ಟರೆಂದೂ ಮನುಷ್ಯರಿಗೆ ಅದರಲ್ಲಿಯೂ ಯಜ್ಞಯಾಗಾದಿಗಳನ್ನು ಮಾಡುವವರಿಗೂ ಯಜ್ಞ ಕರ್ಮಗಳಿಗೂ, ತೊಂದರೆಯನ್ನುಂಟುಮಾಡುವವರೆಂದೂ ವರ್ಣನೆ ಇರುವುದು. ಪ್ರಾಯಶಃ ಇವರು ಈ ದೇಶದ ಪೂರ್ವನಿವಾಸಿಗಳಾದ ಕಪ್ಪುಜನರಿರಬಹುದು. ಇವರನ್ನು ಆರ್ಯರು ದಸ್ಯುಗಳೆಂದೂ ಕರೆಯುತ್ತಿದ್ದರು. ಇವರು ಯಜ್ಞಾದಿಗಳಿಗೆ ವಿಘ್ನವನ್ನುಂಟುಮಾಡಿ ಜನರಿಗೆ ನಾನಾ ವಿಧವಾದ ಹಿಂಸೆಯನ್ನುಂಟುಮಾಡುತ್ತಿದ್ದುದರಿಂದ ಇವರನ್ನು ಸಂಹಾರವಮಾಡಿ ರಕ್ಷಿಸಬೇಕೆಂದು ಇಂದ್ರನನ್ನು ಪ್ರಾರ್ಥಿಸಿರುವ ಅನೇಕ ಋಕ್ಕುಗಳಿವೆ. ಇವರಲ್ಲಿ ಮುಖ್ಯರಾದವರ ವಿಷಯವನ್ನು ಸೂಕ್ಷ್ಮವಾಗಿ ವಿವರಿಸುವೆವು—

ದಾಸ ಮತ್ತು ದಸ್ಯುಗಳಿಗೆ ಒಟ್ಟಾಗಿ ಪಿಶಾಚಗಳು ಎಂದು ಹೇಳುವುದು ಸಾಧಾರಣವಾಗಿ ಪ್ರಯೋಗದಲ್ಲಿದೆ. ಇವರಲ್ಲಿ ಶುಷ್ಣ, ಶಂಬರ, ಪಿಪ್ರು, ನಮುಚಿ, ಧುನಿ, ಚುಮುರಿ ಮುಂತಾದ ಅನೇಕರಿರುವರು. ಇವರ ವಿಷಯವನ್ನು ಋಗ್ವೇದದಲ್ಲಿರುವಂತೆ ಸೂಕ್ಷ್ಮವಾಗಿ ಇಲ್ಲಿ ವಿವರಿಸುವೆವು.

**ಶುಷ್ಣ**—ಇವನ ಹೆಸರು ಸುಮಾರು ೪೦ ಸಲ ಬರುತ್ತದೆ. ಕುತ್ಸನ ಮುಖ್ಯ ಶತ್ರು. ಈ ಕುತ್ಸನಿಗೋಸ್ಕರ ಅಥವಾ ಕುತ್ಸನ ಜೊತೆಯಲ್ಲಿ, ಇಂದ್ರನು ಶುಷ್ಣನನ್ನು ನಿರ್ಮೂಲ ಮಾಡುತ್ತಾನೆ (೪-೧೬-೧೨, ೫-೨೯-೯, ಇತ್ಯಾದಿ). ಅವನಿಗೆ ಕೊಂಬುಗಳಿವೆ (೧-೩೩-೧೨). ಮೊಟ್ಟೆಗಳಿವೆ (೬-೪೦-೧೦, ೧೧). ಎಂದರೆ ಮೊಟ್ಟೆಗಳಿಂದಾದ ಮರಿಗಳು (೧೦-೧೨-೧೧ನ್ನು ಹೋಲಿಸಿ), ಇದರಿಂದ ಶುಷ್ಣನೂ ಒಂದು ಸರ್ಪವೆನ್ನಬಹುದು. ಬುಸುಗುಟ್ಟುತ್ತಾನೆ (ಶ್ವಸನಃ ೧-೫೪-೫). ಆರುಸಲ ಇವನಿಗೆ ಅಶುಷ (ನುಂಗುವ) ಎಂಬ (ಅಗ್ನಿಯ) ವಿಶೇಷಣವು ಉಪಯೋಗಿಸಲ್ಪಟ್ಟಿದೆ. ಅವನಿಗೆ ಬಲವಾದ ಕೋಟೆಗಳು (೧-೫೧-೧೧) ಅಥವಾ ಕೋಟೆ (೪-೩೦-೧೩) ಇದೆ, ಇವು ಚಲಿಸುವ ಕೋಟೆಗಳು (೮-೧-೨೮). ಇಂದ್ರನು ಶುಷ್ಣನ ಕೋಟೆಗಳನ್ನು ನಾಶಮಾಡಿ ನೀರುಗಳನ್ನು ಬಿಡುಗಡೆ ಮಾಡುತ್ತಾನೆ (೧-೫೧-೧೧), ಶುಷ್ಣನನ್ನು ಬಡಿದು ಜಲಧಿಯನ್ನು ಸಂಪಾದಿಸುತ್ತಾನೆ (ವಾಲ. ೩-೮) ಅಥವಾ ಶುಷ್ಣನ ವಂಶವನ್ನು ನಿರ್ಮೂಲಮಾಡಿ, ಸ್ವರ್ಗೀಯೋದಕವನ್ನು (ಸ್ವರ್ವತೀಃ) ಗಳಿಸುತ್ತಾನೆ (೮-೪೦-೧೦). ನಾಲ್ಕುಸಲ ಶುಷ್ಣನಿಗೆ 'ಕುಯವ' (ಕೆಟ್ಟ ಧಾನ್ಯವನ್ನುಂಟುಮಾಡುವವನು) ಎಂಬ ವಿಶೇಷಣವಿದೆ. ಕುಯವ ಎಂಬುದೇ ಎರಡುಸಲ ಪ್ರಾಯಶಃ ಶುಷ್ಣನಿಗೆ ಬದಲಾಗಿ ಉಪಯೋಗಿಸಿರುವಂತೆ ಇದೆ (೧-೧೦೩ ೮, ೧-೧೦೪-೩). ಇಂದ್ರ ಶುಷ್ಣರ ಯುದ್ಧದ ಪರಿಣಾಮವು ಜಲವಿಮೋಚನೆ ಮಾತ್ರವಲ್ಲ, ಗೋವುಗಳ ಅಥವಾ ಸೂರ್ಯನ ಪ್ರಾಪ್ತಿಯೂ ಆಗಬಹುದು (೮-೮೫-೧೭). ಇಂದ್ರನೊಡನೆ ಯುದ್ಧ ಮಾಡುವಾಗ, ಶುಷ್ಣನು ಅಂಧಕಾರದಲ್ಲಿ ಓಡಾಡುತ್ತಾನೆ. ಹಿಮದ ಮಗ ಮತ್ತು ದಾನವನೆನ್ನಿಸಿಕೊಳ್ಳುತ್ತಾನೆ (೫-೩೨-೪). ಶುಷ್ಣನು ಅಮೃತವನ್ನು ತನ್ನಲ್ಲಿ ಇಟ್ಟುಕೊಂಡಿರುವ ದಾನವನು (ಕಾಠಕ).

ಮೇಲೆ ಹೇಳಿದ ವಾಕ್ಯಗಳಿಂದ ಶುಷ್ಣನು ಅನಾವೃಷ್ಟಿಕಾರಕನೆನ್ನಬಹುದು. ಶುಷ್ಣಪದದ ಮೂಲವಾದ ಶುಷ್ ಧಾತುವಿಗೆ ಬುಸುಗುಟ್ಟು ಅಥವಾ ಒಣಗಿಸು ಎಂದರ್ಥ. ಇದು ಅನಾವೃಷ್ಟಿಕಾರಕನೆಂಬುದನ್ನು ಸಮರ್ಥಿಸುತ್ತದೆ.

**ಶಂಬರಃ**—ಈ ಹೆಸರು ಸುಮಾರು ಇಪ್ಪತ್ತುಸಲ ಬರುತ್ತದೆ. ಇತರ ಪಿಶಾಚಿಗಳೊಡನೆಯೇ ಶಂಬರನು ಪ್ರಸಕ್ತನಾಗಿರುವುದು. ಅದರಲ್ಲಿಯೂ ಹೆಚ್ಚಾಗಿ ಶುಷ್ಣ, ಪಿಪ್ರು (೧-೧೦೧-೨, ೧-೧೦೩-೮, ೨-೧೯-೬, ೬-೧೮-೮) ಮತ್ತು ವರ್ಚಿಗಳೊಡನೆ; ಅಹಿ ಮತ್ತು ಶಂಬರನ ಮೇಲೆ ಯುದ್ಧ ಮಾಡುವಾಗ ಮರುತರು ಇಂದ್ರನಿಗೆ ಸಹಾಯ ಮಾಡಿದರು (೩-೪೭-೪), ಶಂಬರನನ್ನು ಭೇದಿಸಿದಾಗ, ಇಂದ್ರನು ಆಕಾಶವನ್ನೇ ನಡುಗಿಸಿದನು (೧-೫೪-೪). ಪರ್ವತದ ಮೇಲೆ ವಾಸಿಸುತ್ತಿದ್ದ ಶಂಬರನನ್ನು ಹುಡುಕಿ (೨-೧೨-೧೧), ಪರ್ವತದಿಂದ ಕೆಳಕ್ಕುರುಳಿಸಿದನು (೧-೧೩೦-೭, ೬-೨೬-೫). ಕುಲಿತರನ ಪುತ್ರನಾದ ಶಂಬರನೆಂಬ ದಾಸನನ್ನು ಇಂದ್ರನು ದೊಡ್ಡ ಪರ್ವತದಿಂದ ಉರುಳಿಸಿದನು (೪-೩೦-೧೪). ತಾನೊಬ್ಬ ಸಣ್ಣ ದೇವತೆಯೆಂದು ತಿಳಿದುಕೊಂಡಿದ್ದು, ಶಂಬರನನ್ನು ಹೊಡೆದು, ಉನ್ನತ ಪ್ರದೇಶದಿಂದ ಬೀಳಿಸಿದನು (೭-೧೮-೨೦). ತೊಂಭತ್ತು (೧-೧೩೦-೭), ಸಾಧಾರಣವಾಗಿ ತೊಂಭತ್ತೊಂಭತ್ತು (೨-೧೯-೬, ಇತ್ಯಾದಿ) ಅಥವಾ ನೂರು (೨-೧೪-೬, ಇತ್ಯಾದಿ) ದುರ್ಗಗಳು ಅವನ ಅಧೀನದಲ್ಲಿವೆ. ಒಂದು ಸಲ, ನಪುಂಸಕಾಂತವಾದ ಈ ಪದಕ್ಕೆ ಶಂಬರನ ಕೋಟೆಗಳು ಎಂದರ್ಥವಿದೆ. ಇವುಗಳನ್ನು ಬೃಹಸ್ಪತಿಯು ಭೇದಿಸಿ, ನಿಧಿಗಳಿಂದ ಯುಕ್ತವಾಗಿದ್ದ ಪರ್ವತ ಪ್ರದೇಶವನ್ನು ಪ್ರವೇಶಿಸಿದನು (೨-೨೪-೨). ಅತಿಥಿಗ್ವ (೧-೫೧-೬), ಸಾಧಾರಣವಾಗಿ ದಿವೋದಾಸ (೨-೧೯-೬, ಇತ್ಯಾದಿ), ಒಂದೊಂದುಸಲ ಇಬ್ಬರೂ (೧-೧೩೦-೭, ೪-೨೬-೩), ಇವರುಗಳಿಗೋಸ್ಕರ, ಇಂದ್ರನು ಶಂಬರನನ್ನು ಧ್ವಂಸಮಾಡುತ್ತಾನೆ. ಶಂಬರ ಮತ್ತು ದಿವೋದಾಸ ಎಂಬ ಎರಡೂ ಒಬ್ಬನ ಹೆಸರಿರಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ.

**ಪಿಪ್ರು**—ಇಂದ್ರನ ಆಶ್ರಿತನಾದ (ವಾಲ. ೧-೧೦) ಋಜಿಶ್ವನ ಶತ್ರು; ಈ ಋಜಿಶ್ವನು ಇಂದ್ರನಿಗೆ ಸೋಮ ರಸವನ್ನರ್ಪಿಸಿ, ಪಿಪ್ರುವಿನ ಮೇಲೆ ಯುದ್ಧದಲ್ಲಿ, ಸಹಾಯ ಪಡೆಯುತ್ತಾನೆ (೫–೨೯–೧೧; ೧೦–೯೯–೧೧) ಇಂದ್ರನು ಋಜಿಶ್ವನಿಂದ ಯುಕ್ತನಾಗಿ (೧-೧೦೧-೧, ೨; ೧೦-೧೩೮-೩) ಅಥವಾ ಅವನಿಗೋಸ್ಕರ (೪-೧೬-೧೩; ೬-೨೦-೭) ಪಿಪ್ರುವನ್ನು ಸೋಲಿಸಿದನು. ಅಹಿಯ ಮಾಯೆಗಳಿಂದ ಯುಕ್ತನಾದ ಪಿಪ್ರುವಿನ ಅಧೀನದಲ್ಲಿ ಅನೇಕ ಕೋಟೆಗಳಿವೆ; ಇಂದ್ರನು ಇವುಗಳನ್ನು ಭೇದಿಸುತ್ತಾನೆ (೧-೫೧-೫, ೬-೨೦-೭) ಪಿಪ್ರುವೆಂಬ ದಾಸ ಮತ್ತು ಕೆಲವರನ್ನು ಇಂದ್ರನು ವಧಿಸಿ, ನೀರುಗಳನ್ನು ಹೊರಡಿಸಿದನು (೮-೩೨-೨) ಸೂರ್ಯನು ಆಕಾಶ ಮಧ್ಯದಲ್ಲಿ, ತನ್ನ ರಥವನ್ನು ಬಿಚ್ಚಿದಾಗ, ಪಿಪ್ರುವಿಗೆ ಅನುರೂಪನಾದ ಯೋಧನನ್ನು ಆರ್ಯನು ಕಂಡನು; ಋಜಿಶ್ವಯುಕ್ತನಾದ ಇಂದ್ರನು, ಮಾಯಿಯಾದ ಪಿಪ್ರು ಎಂಬ ಅಸುರನ ಬಲವಾದ ಕೋಟೆಗಳನ್ನು ಧ್ವಂಸಮಾಡಿದನು. (೧೦-೧೩೮-೩) ಕಾಡುಮೃಗರೂಪನಾದ ಪಿಪ್ರುವನ್ನು ಇಂದ್ರನು ಋಜಿಶ್ವನಿಗೆ ಒಪ್ಪಿಸಿದನು; ಐವತ್ತುಸಾವಿರ ಕಪ್ಪುಜನರನ್ನು ಸೋಲಿಸಿ, ದುರ್ಗಗಳನ್ನು ಭೇದಿಸಿದನು (೪-೧೬-೧೩) ಋಜಿಶ್ವನೊಡನೆ ಸೇರಿಕೊಂಡು, ಇಂದ್ರನು ಕೃಷ್ಣವರ್ಣದವರ ಸಂತತಿಯನ್ನೇ ನಾಶ ಮಾಡಿದನು (೧-೧೧೧-೧) ಇವನಿಗೆ ಅಸುರ, ದಾಸ ಎಂಬ ಎರಡು ವಿಶೇಷಣಗಳಿರುವುದರಿಂದ, ಮನುಷ್ಯರ ಶತ್ರುವೂ ಆಗಿರಬಹುದೆಂದು ಕೆಲವರ ಅಭಿಪ್ರಾಯ.

**ನಮುಚಿಃ**—ಋಗ್ವೇದದಲ್ಲಿ ಒಂಭತ್ತು ಸಲವಲ್ಲದೆ, ವಾಜಸನೇಯಿಸಂಹಿತೆ, ತೈತ್ತಿರೀಯಬ್ರಾಹ್ಮಣ ಮತ್ತು ಶತಪಥಬ್ರಾಹ್ಮಣಗಳಲ್ಲಿಯೂ, ಈ ಹೆಸರು ಕಂಡುಬರುತ್ತದೆ. ಆಸುರ (ಅಸುರಸ್ವಭಾವವುಳ್ಳವನು) ಎಂಬ ವಿಶೇಷಣ ವಿದೆ (೧೦-೧೩೧-೪; ಶ. ಬ್ರಾ. ೧೨-೭-೧-೧೦) ಮತ್ತು ಇತರ ವೇದಗಳಲ್ಲಿ ಅಸುರ ಎಂತಲೇ ಕರೆಸಿಕೊಳ್ಳುತ್ತಾನೆ. ದಾಸನೆಂತಲೂ ಮೂರು ನಾಲ್ಕು ವಾಕ್ಯಗಳಲ್ಲಿ ಇದೆ (೫-೩೦-೭, ೮, ಇತ್ಯಾದಿ) ಮತ್ತು ಮಾಯಿ ಎಂದು ಒಂದುಕಡೆ. (೧-೫೩-೭) ನಮುಚಿಯನ್ನು ಸೋಲಿಸುವಾಗ, ಇಂದ್ರನ ಸಹಚರನು ನಮೀಸಾಪ್ಯನೆಂಬ ಆಶ್ರಿತ (೧-೫೩-೭, ೬-೨೦-೬) ಇತರ ಅನೇಕ ಪಿಶಾಚಿಗಳಂತೆ ನಮುಚಿಯೂ ಇಂದ್ರನಿಂದ ಹತನಾಗಿದಾನೆ (೨-೧೪-೫, ೭-೧೯-೫) ಅಥವಾ ಹೊಡೆದು ಕೆಡವಲ್ಪಟ್ಟಿದಾನೆ (೧-೫೩-೭) ವೃತ್ರನಮುಚಿಗಳನ್ನು ವಧಿಸಿ, ಇಂದ್ರನು ನೂರು ಕೋಟೆಗಳನ್ನು ನಾಶ ಮಾಡಿದನು (೭-೧೯-೫) ವೃತ್ರಾಸುರನ ತಲೆಯನ್ನು ಭೇದಿಸುತ್ತಾನೆ. ಆದರೆ ನಮುಚಿಯ ತಲೆಯನ್ನು ಗಿರಕಿ ಹೊಡೆಸು ತ್ತಾನೆ (೫-೩೦-೮; ೬-೨೦-೬) ಇಂದ್ರನು ನಮುಚಿಯ ಶಿರಸ್ಸನ್ನು ತಿರಿಚುತ್ತಾನೆ (೫-೩೦-೭) ಅಥವಾ ನೀರಿನ ನೊರೆಯಿಂದ ನುಲಚಿದ್ದಾನೆ (೮-೧೪.೧೩) ಬ್ರಾಹ್ಮಣಗಳಲ್ಲಿ ಶಿರಸ್ಸನ್ನು ಕತ್ತರಿಸಿದನು ಎಂತಲೂ ಇದೆ. ಇಂದ್ರನು ನಮುಚಿಯ ಪಾರ್ಶ್ವದಲ್ಲಿ ಕುಳಿತು ಮದ್ಯವನ್ನು ಕುಡಿದನು; ಆಗ ಅಶ್ವಿನೀದೇವತೆಗಳ ಸಹಾಯದಿಂದ ಸರಸ್ವತಿಯು ಗುಣಪಡಿಸಿದಳು (೧೦-೧೩೧-೪, ೫).

ಪಾಣಿನಿಯ ಪ್ರಕಾರ (೬-೩-೭೫), ನಮುಚಿ ಎಂದರೆ (ನ-ಮುಚಿ) ಬಿಟ್ಟುಕೊಡುವವನಲ್ಲ, ಎಂದರೆ ನೀರನ್ನು ತಡೆದಿರುವ ಪಿಶಾಚಿ ಎನ್ನಬಹುದು.

**ಧುನಿ ಮತ್ತು ಚುಮುರಿಃ**—ಸಾಧಾರಣವಾಗಿ ಎರಡು ಹೆಸರುಗಳೂ ಒಟ್ಟಿಗೆ ಬರುತ್ತವೆ. ಒಂದು ಸಲ ಚುಮುರಿಯೊಂದೇ ಬಂದಿದೆ. ಒಂದು ಸಲ ದ್ವಂದ್ವವಾಗಿಯೂ (೬-೨೦-೧೩) ಉಪಯೋಗಿಸಿದೆ, ಇದರಿಂದ ಇವರಿಬ್ಬರದೂ ಸಂಬಂಧ ಎಷ್ಟು ನಿಕಟವಾದುದೆಂದು ತಿಳಿದು ಬರುತ್ತದೆ. ಇಂದ್ರನು ಇವರಿಬ್ಬರನ್ನು ನಿದ್ರಾಮಗ್ನ ರನ್ನಾಗಿ ಮಾಡಿದನು (೨-೧೫-೯, ೬-೨೦-೧೩; ೭-೧೯-೪) ಚುಮುರಿ ಒಬ್ಬನಿಗೂ ಇದೇ ರೀತಿ ಆಗಿದೆ (೬-೨೬-೬)

ಶಂಬರ, ಪಿಪ್ರು, ಶುಷ್ಣ ಮೊದಲಾದವರೊಡನೆ, ಇವರನ್ನೂ ಇಂದ್ರನು ಧ್ವಂಸಮಾಡಿ, ಅವರ ಕೋಟೆಗಳನ್ನು ನಾಶ ಮಾಡಿದನು (೬-೧೮-೮) ತನಗೋಸ್ಕರ ಸೋಮರಸವನ್ನು ಸಿದ್ಧಪಡಿಸಿದ (೬-೨೦-೧೩) ದಭೀತಿಗೋಸ್ಕರ ಇವರಿಬ್ಬರು ಇಂದ್ರನಿಂದ ನಾಶಮಾಡಲ್ಪಟ್ಟರು ಅಥವಾ ನಿದ್ರಿತರಾಗಿ ಮಾಡಲ್ಪಟ್ಟರು (೧೦-೧೧೩-೯) ಮತ್ತು ದಭೀತಿಯು ಅವನ ಭಕ್ತಿಗೆ ತಕ್ಕ ಪ್ರತಿಫಲವನ್ನು ದೇವತೆಗಳಿಂದ ಪಡೆದನು (೬-೨೬-೬) ಇಂದ್ರನು ದಭೀತಿಗೋಸ್ಕರ ಮೂವತ್ತುಸಾವಿರ ದಸ್ಯುಗಳಿಗೆ ನಿದ್ರೆಬರುವಂತೆ ಮಾಡಿ (೪-೩೦-೨೧) ಅವನಿಗೋಸ್ಕರ ದಸ್ಯುಗಳನ್ನು ಹಗ್ಗವಿಲ್ಲದೆ ಬಂಧಿಸಿದನು (೨-೧೩-೯).

ಧುನಿ ಎಂದರೆ ಗರ್ಜಿಸುವವನು ಎಂದರ್ಥ.

**ವರ್ಚೀ ಮತ್ತು ಇತರರು**— ಶಂಬರನ ಜೊತೆಯಲ್ಲಿ ನಾಲ್ಕುಸಲ ಇವನ ಪ್ರಸ್ತಾಪವಿದೆ. ಇವನೂ ಒಬ್ಬ ಅಸುರ (೭-೯೯-೫), ಆದರೆ ಶಂಬರ ಮತ್ತು ಇವನಿಗೆ 'ದಾಸ' ರೆಂದು ಹೆಸರು (೬-೪೭-೨೧). ಇಂದ್ರನು ಶಂಬರನ ಕೋಟೆಗಳನ್ನು ಒಡೆದು, ವರ್ಚಿಯ ಒಂದು ಲಕ್ಷ ಯೋಧರನ್ನು ನಾಶಮಾಡಿದನು (೨-೧೪-೬, ೪-೩೦-೧೫). ವರ್ಚೀ ಎಂದರೆ ಹೊಳೆಯುತ್ತಿರುವವನು ಎಂದಾಗುತ್ತದೆ.

ವಲ, ಶುಷ್ಣ, ನಮುಚಿ ಮೊದಲಾದವರೊಡನೆ ಇನ್ನೂ ಕೆಲವು ಪಿಶಾಚಿಗಳ ಹೆಸರು ಬಂದಿವೆ, ಅವರೂ ಇಂದ್ರನಿಂದ ನಾಶಮಾಡಲ್ಪಟ್ಟಿದಾರೆ. ದೃಭೀಕ, ರುಧಿಕ್ರ (೨-೧೪-೩, ೫), ಅನರ್ಶನಿ, ಸೃಬಿಂದ (೮-೩೨-೨) ಮತ್ತು ಇಲೀಬಿಶ (೧-೩೩-೧೨), ಇವರುಗಳು ಆ ಗುಂಪಿಗೆ ಸೇರಿದವರು.

**ಭೂಮಿಯಲ್ಲಿರುವ ಪಿಶಾಚಿಗಳು ಅಥವಾ ಭೂತಗಳು**— ಮನುಷ್ಯರ ದ್ವೇಷಿಗಳು. ಇವರನ್ನು ಹೇಳುವ ಜಾತಿವಾಚಕವು ರಕ್ಷಃ ಎಂಬುದು. ಐವತ್ತಕ್ಕಿಂತ ಹೆಚ್ಚುಸಲ ಏಕವಚನ ಮತ್ತು ಬಹುವಚನಗಳಲ್ಲಿ ಬಂದಿದೆ; ಸಾಧಾರಣವಾಗಿ ಯಾವುದಾದರೊಂದು ದೇವತೆಯೊಡನೆ, ರಾಕ್ಷಸನನ್ನು ಧ್ವಂಸ ಮಾಡೆಂದು ಪ್ರಾರ್ಥನಾರೂಪವಾಗಿ ಅಥವಾ ರಾಕ್ಷಸನನ್ನು ವಿಧಿಸಿದೆ ಎಂದು ಸ್ತುತಿರೂಪವಾಗಿಯೇ ಬರುತ್ತದೆ. ೭-೧೦೪ ಮತ್ತು ೧೦-೮೭ನೆಯ ಸೂಕ್ತಗಳಲ್ಲಿ ಇವರ ಪ್ರಸ್ತಾಪವೇ ಇದೆ, ಇಲ್ಲಿ ರಕ್ಷಸಃ, ಯಾತು, ಯಾತುಧಾನ ಮೊದಲಾದ ಪದಗಳು ಇವರನ್ನು ಸೂಚಿಸುತ್ತವೆ. ರಕ್ಷಸಃ ಎಂಬುದು ದುರ್ದೇವತೆಗಳು, ಪಿಶಾಚಿಗಳು ಎಲ್ಲಕ್ಕೂ ಹೆಸರಾದುದರಿಂದ, ಅದನ್ನು ಜಾತಿವಾಚಕವೆಂತಲೂ, ಯಾತು ಎಂಬುದನ್ನು ಉಪಜಾತಿವಾಚಕವೆಂತಲೂ ತಿಳಿಯಬಹುದು.

ಈ ಪಿಶಾಚಿಗಳಿಗೆ ಅಥವಾ ಭೂತಗಳಿಗೆ, ನಾಯಿ, ರಣಹದ್ದು, ಗೂಬೆ ಮತ್ತು ಇತರ ಪಕ್ಷಿಗಳ ರೂಪಗಳಿರುವವು.(೭-೧೦೪-೨೦ ರಿಂದ ೨೨). ಪಕ್ಷಿರೂಪರಾಗಿ,: ರಾತ್ರಿಯವೇಳೆ ಹಾರಾಡುತ್ತಾರೆ (೭-೧೦೪-೧೮). ಭ್ರಾತೃ, ಭರ್ತೃ ಅಥವಾ ಪ್ರಿಯನ ರೂಪವನ್ನು ಧರಸಿ, ಸ್ತ್ರೀಯರನ್ನು ಸಮೀಪಿಸಿ, ಅವರ ಮಕ್ಕಳನ್ನು ನಾಶಪಡಿಸಲು ಇಚ್ಛಿಸುತ್ತಾರೆ (೧೦-೧೬೨-೫). ನಾಯಿ ಅಥವಾ ಕಪಿರೂಪವಾಗಿ, ಹೆಂಗಸರ ಮೇಲೆ ಬೀಳಲು ಕಾದಿರುತ್ತಾರೆ (ಅ. ವೇ. ೪-೩೭-೧೧) ಆದುದರಿಂದ ಗರ್ಭಿಣಿಯರಿಗೆ ಮತ್ತು ಮಕ್ಕಳಿಗೆ ಇವರಿಂದ ತೊಂದರೆಯುಂಟು (ಅ. ವೇ. ೮-೬). ವಿವಾಹಕಾಲದಲ್ಲಿ, ವಧುವಿನ ಸುತ್ತಲೂ ಓಡಾಡುತ್ತಿರುತ್ತಾರೆ, ಇವರ ಕಣ್ಣುಗಳನ್ನು ಚುಚ್ಚಲೆಂದು, ಸಣ್ಣ ಬಾಣಗಳನ್ನು ಅಂತರಿಕ್ಷದಲ್ಲಿ ಬಿಡುತ್ತಾರೆ (ಮಾ ಗೃ. ಸೂ. ೧-೧೦) ಅಥರ್ವವೇದದಲ್ಲಿಯೇ ಇವರ ರೂಪ ಮೊದಲಾದವುಗಳ ವರ್ಣನೆಯಿರುವುದು. ಅವರು ವಿಶೇಷವಾಗಿ ಮನುಷ್ಯರಂತೆ ರೂಪವನ್ನು ಧರಿಸಿರುತ್ತಾರೆ. ಅವರ ಶಿರಸ್ಸು, ಕಣ್ಣು, ಹೃದಯ ಮೊದಲಾದ ಅಂಗಾಂಗಗಳ ಪ್ರಸಕ್ತಿಯಿದೆ; ಆದರೆ ಏನಾದರೊಂದು ವೈರೂಪ್ಯವಿದ್ದೇ ಇರುತ್ತದೆ. ಮೂರು ತಲೆ, ಎರಡು ಬಾಯಿ,

ನಾಲ್ಕು ಕಣ್ಣು, ಐದು ಪಾದಗಳು, ಬೆರಳುಗಳಿಲ್ಲ, ಪಾದಗಳು ಹಿಂದು ಮುಂದಾಗಿರುವುದು ಅಥವಾ ಕೈಮೇಲೆ ಕೊಂಬುಗಳು, ಇತ್ಯಾದಿ (ಅ. ವೇ. ೮-೬; ಹಿ. ಗೃ. ಸೂ. ೨-೩-೭) ನೀಲಿ ಹಳದಿ ಅಥವಾ ಹಸುರು ಪಿಶಾಚಿಗಳೂ ಉಕ್ತರಾಗಿದ್ದಾರೆ. (ಅ. ವೇ. ೧೯-೨೨-೪, ೫) ಅವರಲ್ಲಿಯೂ ಗಂಡು ಹೆಣ್ಣುಗಳೂ, ಸಂಸಾರಗಳೂ, ರಾಜರೂ (ಅ. ವೇ. ೫-೨೨-೧೨; ಹಿ. ಗೃ. ಸೂ. ೨-೩-೭) ಉಂಟು; ಅವರೂ ಮರಣಶೀಲರು. (ಅ ವೇ. ೬-೩೨-೨; ಇತ್ಯಾದಿ).

ಯಾತುಧಾನರು ಮನುಷ್ಯರ ಮತ್ತು ಅಶ್ವಗಳ ಮಾಂಸವನ್ನು ತಿನ್ನುತ್ತಾರೆ. ಮತ್ತು ಗೋಕ್ಷೀರವನ್ನು ಪಾನಮಾಡುತ್ತಾರೆ (೧೦-೮೬-೧೬, ೧೭) ತಮ್ಮ ರಕ್ತ ಮತ್ತು ಮಾಂಸದ ಆಶೆಯನ್ನು ತೀರಿಸಿಕೊಳ್ಳಲು ರಾಕ್ಷಸರು ಮನುಷ್ಯರನ್ನು ಆಕ್ರಮಿಸುತ್ತಾರೆ; ಈ ಆಕ್ರಮಣವು ಸಾಧಾರಣವಾಗಿ ಅವರನ್ನು ಪ್ರವೇಶಮಾಡುವ ಮೂಲಕವೇ. ಆರಾಧಕರನ್ನು ಪ್ರವೇಶಿಸದಂತೆ ರಾಕ್ಷಸರನ್ನು ತಡೆಗಟ್ಟಬೇಕೆಂದು ಅಗ್ನಿಗೆ ಪ್ರಾರ್ಥನೆ. (೮-೪೮-೨೦) ಅಲ್ಲಿಂದಿಲ್ಲಿ ಹಾರಾಡುತ್ತಿರುವ ರೋಗಾಭಿಮಾನಿಯಾದ ಪಿಶಾಚಿಯೊಂದು ಮನುಷ್ಯರನ್ನು ಪ್ರವೇಶಿಸುತ್ತದೆ. (ಅ. ವೇ. ೭-೭೬-೪) ಈ ಭೂತಪ್ರೇತಗಳು ಸಾಧಾರಣವಾಗಿ ನಾವು ತಿನ್ನುವಾಗ ಅಥವಾ ಕುಡಿಯುವಾಗ ನಮ್ಮ ಬಾಯಿ ಮೂಲಕವೇ. ನಮ್ಮನ್ನು ಪ್ರವೇಶಿಸುತ್ತವೆ (ಅ. ವೇ. ೫-೨೯-೬ರಿಂದ ೮); ಇತರ ದ್ವಾರಗಳಿಂದಲೂ ಪ್ರವೇಶಿಸುವುದುಂಟು (ಅ. ವೇ. ೮-೬-೩) ಒಳಗೆ ಪ್ರವೇಶಮಾಡುವುದೇ ತಡ, ಮನುಷ್ಯನ ಮಾಂಸವನ್ನು ಕಿತ್ತು, ತಿಂದು, ರೋಗವನ್ನುಂಟು ಮಾಡುತ್ತಾರೆ (ಅ. ವೇ. ೫-೨೯-೫, ೧೦) ಹುಚ್ಚುತನವನ್ನುಂಟು ಮಾಡುತ್ತಾರೆ ಮತ್ತು ವಾಕ್ಪಟುತ್ವವನ್ನು ನಾಶಗೊಳಿಸುತ್ತಾರೆ (ಅ. ವೇ. ೬-೧೧೧-೩ ; ಹಿ. ಗೃ. ಸೂ. ೧-೧೫-೫) ಮನುಷ್ಯರ ವಾಸಗೃಹಗಳನ್ನು ಆಕ್ರಮಿಸುತ್ತಾರೆ (ಕೌ. ಸೂ. ೧೩೫-೯) ಕೆಲವು ಭೂತಗಳು ಸಾಯಂಕಾಲದ ವೇಳೆಯಲ್ಲಿ ಮನೆಗಳ ಸುತ್ತಲೂ ಕುಣಿಯುತ್ತಾ ಕತ್ತೆಗಳಂತೆ ಅರಚುತ್ತಾ, ತಿರುಗುತ್ತಿರುತ್ತವೆ ಅಥವಾ ಕಾಡುಗಳಲ್ಲಿ ತಿರುಗುತ್ತಿರುತ್ತವೆ ಅಥವಾ ಗಟ್ಟಿಯಾಗಿ ನಗುತ್ತಾ ಇಲ್ಲವೇ ಕಪಾಲಗಳಿಂದ ಪಾನಮಾಡುತ್ತಾ ಇರುತ್ತವೆ (ಅ. ವೇ. ೮-೬-೧೦, ೧೧, ೧೪ ; ಹಿ. ಗೃ. ಸೂ. ೨-೩-೩).

ಅವರ ಸಂಚಾರಕಾಲವು ರಾತ್ರಿ ಅಥವಾ ಸಾಯಂಕಾಲ (೭-೧೦೪-೮). ಪೂರ್ವದಿಕ್ಕಿನಲ್ಲಿ ಅವರ ಆಟವೇನೂ ನಡೆಯುವುದಿಲ್ಲ ; ಅಲ್ಲಿ ಉದಿಸುವ ಸೂರ್ಯನು ಅವರನ್ನು ಓಡಿಸಿಬಿಡುತ್ತಾನೆ. (ತೈ. ಸಂ. ೨-೬-೬-೩) ಬೀಳುತ್ತಿರುವ ಉಲ್ಕೆಯು ಭೂತದ ರೂಪವೆಂದು ಭಾವನೆ. (ಕೌ. ಸೂ. ೧೨೬-೯) ಅಮಾವಾಸ್ಯೆಯ ಕಗ್ಗತ್ತಲೆಯು ಪ್ರೇತಗಳ ಸಂಚಾರಕ್ಕೆ ಯೋಗ್ಯವಾಗಿರುವಂತೆ ಭೂತಗಳಿಗೂ ಅದೇ ಅನುಕೂಲಕಾಲ. (ಅ. ವೇ. ೧ ೧೬-೧ ; ೪-೩೬-೩).

ಯಜ್ಞಗಳಿಗೆ ಇವರಿಂದ ಇರುವಷ್ಟು ಆಪತ್ತು ಯಾವುದಕ್ಕೂ ಇಲ್ಲ. ದೇವಯೋಗ್ಯವಾದ ಯಜ್ಞಗಳಲ್ಲಿ ಪಿಶಾಚಿಗಳು, ಲೋಪದೋಷಗಳನ್ನುಂಟುಮಾಡುತ್ತವೆ. ಮತ್ತು ಯಾತುಗಳು ಅರ್ಪಿತವಾದ ಆಹುತಿಗಳನ್ನು ಚೆಲ್ಲಾಪಿಲ್ಲಿಯಾಗಿ ಎರಚುತ್ತವೆ. (೭-೧೦೪-೧೮, ೨೧) ಸ್ತೋತ್ರವನ್ನು ಕಂಡರೆ ಅವರಿಗಾಗದು. (೧೦-೧೮೨-೩) ಯಜ್ಞಕ್ಕೆ ಶಾಪ ತಗಲದಂತೆ, ಭೂತಾದಿಗಳನ್ನು ದಹಿಸಿಬಿಡೆಂದು ಅಗ್ನಿಗೆ ಪ್ರಾರ್ಥನೆ. (೧-೭೬-೩) ಯಾತುಧಾನರು ಮತ್ತು ರಕ್ಷೋಗಣಗಳ ಮಾಯೆಯಿಂದ ಶತ್ರುವಿನ ಯಾಗವನ್ನು ಊರ್ಜಿತವಾಗದಂತೆ ಮಾಡುವ ಮಂತ್ರವೊಂದಿದೆ. (ಅ. ವೇ. ೭-೭೦-೨) ಮೃತರಿಗೆ ಆಹುತಿಕೊಡುವ ಅನ್ನೋದಕಗಳಿಗೆ ಪ್ರೇತರೂಪದಲ್ಲಿ ಅಡ್ಡಿಯಾಗಿ ಬರುತ್ತಾರೆ. (ಅ. ವೇ. ೧೮.೨-೨೮ ; ವಾ. ಸಂ. ೨-೨೯ನ್ನು ಹೋಲಿಸಿ). ಪುರಾಣಗಳಲ್ಲಿ ಈ ರಕ್ಷೋಗಣಗಳು (ರಾಕ್ಷಸರೆಂತಲೇ ವ್ಯವಹಾರ) ಯೋಗಿಗಳಿಗೆ ತೊಂದರೆಮಾಡುತ್ತಾರೆ ಎಂಬುದು ಸಾಮಾನ್ಯವಾಗಿದೆ.

ಕತ್ತಲನ್ನು ಹೋಗಲಾಡಿಸುವವನೂ, ಯಾಗಕ್ಕೆ ಯಜಮಾನನೂ ಆದ ಅಗ್ನಿಗೂ ಇವರಿಗೂ ಬದ್ಧದ್ವೇಷ ಇವರನ್ನು ದಹಿಸು, ಓಡಿಸು ಅಥವಾ ನಾಶಮಾಡು ಎಂದು ಅಗ್ನಿಯನ್ನೇ ಪ್ರಾರ್ಥಿಸುವುದು. (೧೦-೮೭-೩, ೬ ಇತ್ಯಾದಿ) ಈ ಕಾರ್ಯದಿಂದಲೇ ಅಗ್ನಿ ಮತ್ತು ಇತರ ಕೆಲವು ದೇವತೆಗಳಿಗೆ ' ರಕ್ಷೋಹಾ ' ಎಂಬ ಹೆಸರು ಬಂದಿರುವುದು.

ಈ ಭೂತಗಳು ಸ್ವಭಾವತಃ ಹಾನಿಕರಗಳು ಮಾತ್ರವಲ್ಲ; ಇತರರಿಂದ ಪ್ರೇರಿತರಾಗಿಯೂ ಹಾನಿಯುಂಟು ಮಾಡುವುದುಂಟು. ರಕ್ಷೋಯುಜಃ (ರಾಕ್ಷಸರನ್ನು ಪ್ರೇರಿಸುವವರು) ಎಂಬುದು ಕಂಡುಬರುತ್ತದೆ. (೬–೬೨–೯) ಮತ್ತು ಮಂತ್ರಗಾರರ ಭೂತಗಳು ಮತ್ತು ಯಾತುಗಳು ಅಲ್ಲಲ್ಲಿ ಇವೆ. (೭-೧೦೪-೨೩; ೮-೬೦-೨೦) ಶತ್ರುವಿನಿಂದ ಪ್ರೇರಿತವಾದ ಭೂತದ ಕಾಟಕ್ಕೆ ಒಳಗಾದವನು, ಯವಿಷ್ಠಾಗ್ನಿಗೆ ಹೋಮಮಾಡಿ ಅವುಗಳನ್ನು ಓಡಿಸಬಹುದು (ತೈ. ಸಂ. ೨–೨–೩–೨) ಮತ್ತು ಪ್ರೇರಿಸುವವನನ್ನೇ ನುಂಗಿಬಿಡು ಎಂದು ಆ ಭೂತಗಳಿಗೇ ಅಪ್ಪಣೆ ಇದೆ (ಅ. ವೇ. ೨–೨–೪).

ಭೂತಗಳು ಎಂಬರ್ಥದಲ್ಲಿ ರಕ್ಷಃ ಎಂಬ ಪದವು ಪುಲ್ಲಿಂಗ ಸ್ತ್ರೀಲಿಂಗಗಳೆರಡರಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ನಪುಂಸಕದಲ್ಲಿ ಅಪಾಯ ಎಂತಲೂ ಅರ್ಥವುಂಟು. ರಕ್ಷ್ (ತೊಂದರೆ ಮಾಡು) ಎಂಬ ಧಾತುವಿನಿಂದ ರಕ್ಷ. ಎಂದಾಗಿರಬಹುದು (ಋಕ್ವಾ, ಅಪಾಯಕರವಾದ); ಆದರೆ ಈ ಪ್ರಯೋಗವು ಬಹಳ ಅಪರೂಪ. ಸಾಧಾರಣವಾದ ರಕ್ಷ್—ಕಾಪಾಡು ಎಂಬುದರಿಂದಲೂ ಆಗಿರಬಹುದು. ಈ ಸಂದರ್ಭದಲ್ಲಿ, ರಕ್ಷಃ ಎಂದರೆ ತಪ್ಪಿಸಿಕೊಳ್ಳಬೇಕಾದುದು ಎಂದರ್ಥವಾಗುತ್ತದೆ.

**ಪಿಶಾಚಾಃ**—ಭೂತಗಳಲ್ಲಿ ಮೂರನೆಯ ಜಾತಿ ಪಿಶಾಚಿಗಳು. ಋಗ್ವೇದದಲ್ಲಿ ಒಂದೇ ಒಂದು ಕಡೆ (೧.೧೩೩-೫), ಪಿಶಾಚಿ ಎಂಬುದಾಗಿ ಏಕವಚನಾಂತವಾಗಿ ಬಂದಿದೆ. ಹರಿದ್ರವರ್ಣದ ಕಿರೀಟವುಳ್ಳ ಮತ್ತು ಜಲಮಯ ವಾದ ಪಿಶಾಚಿಯನ್ನು ಧ್ವಂಸಮಾಡಿ, ಪ್ರತಿಯೊಂದು ಭೂತವನ್ನೂ ಹೊಡೆದು ಕೆಡವಬೇಕೆಂದು ಇಂದ್ರನಿಗೆ ಪ್ರಾರ್ಥನೆ. ಅಸುರರು, ರಾಕ್ಷಸರು ಮತ್ತು ಪಿಶಾಚಿಗಳು ಕ್ರಮವಾಗಿ ದೇವತೆಗಳು, ಮನುಷ್ಯರು ಮತ್ತು ಪಿತೃಗಳಿಗೆ ಶತ್ರುಗಳು. ಪಿಶಾಚಿಗಳಿಗೆ ವಿಶೇಷವಾಗಿ ಪ್ರೇತಗಳೊಡನೆಯೇ ವ್ಯವಹಾರವಿರಬೇಕು. ಪ್ರೇತಗಳಿಗೆ ಕ್ರವ್ಯಾದರೆಂತಲೂ (ಹಸಿಯ ಮಾಂಸ ಅಥವಾ ಮೃತದೇಹವನ್ನು ತಿನ್ನುವವರು) ಹೆಸರು (ಅ. ವೇ. ೫-೨೯-೯, ಇತ್ಯಾದಿ); ಇದು ಪಿಶಾಚ ಎಂಬುದಕ್ಕೆ ಸಮಾನವಾದ ಪದ. ಪಿಶಾಚಿಗಳಿಂದ ಭಕ್ಷಿತವಾದ ರೋಗಿಯ ಮಾಂಸವನ್ನು ಹಿಂದಕ್ಕೆ ಕೊಡಿಸಬೇಕೆಂದು ಅಗ್ನಿಗೆ ಪ್ರಾರ್ಥನೆ (ಅ. ವೇ. ೫–೨೯–೫) ಆದುದರಿಂದ ಅವೂ ಒಂದು ಜಾತಿಯ ಹೆಣ ತಿನ್ನುವ ಪಿಶಾಚಿಗಳು ಪಿಶಾಚಿಗಳು ನೀರಿನಲ್ಲಿ ಹೊಳೆಯುತ್ತಿರುತ್ತವೆ (ಅ. ವೇ. ೪-೨೦-೯, ೪-೩೭-೧೦) ಅಥವಾ ಮನುಷ್ಯರ ಮನೆಗಳನ್ನು, ಗ್ರಾಮಗಳನ್ನು ಕಾಡುತ್ತಿರುತ್ತವೆ (ಅ. ವೇ. ೪–೩೬–೮).

ಅರಾತಿ (ಕಾರ್ಪಣ್ಯ) ಎಂಬ ಸ್ತ್ರೀಲಿಂಗಪದವೂ, ದ್ರುಹ (ಅಪಾಯ, ತೊಂದರೆ ಉಂಟುಮಾಡುವ) ಎಂಬ ಪುಲ್ಲಿಂಗ ಮತ್ತು ಸ್ತ್ರೀಲಿಂಗಗಳ ಪದವೂ, ಒಂದೊಂದು ಜಾತಿಯ ಪಿಶಾಚಗಳೆಂದು ಪರಿಗಣಿತವಾಗಿವೆ.

ಕಿಮಿದೀ ಎಂಬುದೊಂದು ಭೂತಗಣ (೭–೧೦೪–೨೩; ೧೦-೮೭-೨೪).

ನಮ್ಮ ನಿತ್ಯಗಟ್ಟಲೆ ಜೀವನಕ್ಕೆ ಸಂಬಂಧಿಸಿದಂತೆ ಅನೇಕ ಪಿಶಾಚಿಗಳಿವೆ. ಅವುಗಳ ಹೆಸರಿನಿಂದಲೇ, ಅವುಗಳಿಂದಾಗುವ ತೊಂದರೆಯನ್ನು ತಿಳಿಯಬಹುದು. ಇವುಗಳಿಗೂ ಪ್ರಕೃತಿಗೂ ಏನೂ ಸಂಬಂಧವಿಲ್ಲ. ಸಾಧಾರಣ ವಾಗಿ, ನಮಗೆ ದ್ವೇಷಿಗಳಾಗಿದ್ದು, ಮೃತರಾದವರೇ ಈ ರೂಪವಾಗಿ ಬಂದು ನಮಗೆ ಹಿಂಸೆ ಕೊಡುತ್ತಾರೆಂದು ನಂಬಿಕೆ.

ಇವುಗಳಿಗೂ ಕಡಿಮೆಯಾಗಿ ವ್ಯಕ್ತಿಸಂಬಂಧ ಹೊಂದಿದ್ದು, ಮನುಷ್ಯರಿಗೆ ರೋಗ, ಮಕ್ಕಳಿಲ್ಲದಿರುವಿಕೆ, ಪಾಪ, ಮೊದಲಾದ ಫಲಗಳನ್ನುಂಟುಮಾಡುವ ಕೆಲವು ಶಕ್ತಿಗಳು ಗಾಳಿಯಲ್ಲಿ ಓಡಾಡಿಕೊಂಡಿದ್ದು, ತೊಂದರೆಯುಂಟು ಮಾಡುತ್ತವೆ. ಇವುಗಳನ್ನು ನಮಗಾಗದವರ ಕಡೆ ತಿರುಗಿಸುವುದೇ ಮಂತ್ರವಿದ್ಯೆಯ ಮುಖ್ಯ ಉಪಯೋಗ.

ಭೂಮಿಯ ಮೇಲೆ ಸಂಚರಿಸುವ ಕೆಲವು ಪಿಶಾಚಿಗಳು ಅಪಾಯಕರವೇ ಅಲ್ಲ; ಅವುಗಳಿಂದ ನಮಗೆ ಸಹಾಯವೇ ಆಗುತ್ತದೆ. ಪೈರು ಕೀಳುವುದರಲ್ಲಿ ಸಹಾಯ, ವಧುವಿಗೆ ದೀರ್ಘಾಯಸ್ಸು ಇವುಗಳನ್ನು ಕೊಡುತ್ತವೆ. ಅರ್ಬುದ ಎಂಬುದೇ ಮುಖ್ಯವಾದ ಒಂದು ಪಿಶಾಚಿಗಳ ಗುಂಪು, ಶತ್ರುಗಳಿಗೆ ಭಯವನ್ನುಂಟುಮಾಡಿ, ನಮಗೆ ಯುದ್ಧಗಳಲ್ಲಿ ಸಹಾಯ ಮಾಡುತ್ತವೆ (ಅ. ವೇ. ೩-೨೪ ; ೩-೨೫-೧ ; ೧೪-೧-೪೫ ; ೧೧-೯-೧೨).

॥ ವ್ಯಾಕರಣಪ್ರಕ್ರಿಯಾ ॥

**ಪಿಶಂಗಭೃಷ್ಟಿಂ**—ಪಿಶಂಗಃ ಭೃಷ್ಟಿಃ ಯಸ್ಯ ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ ೬-೧-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಂಭೃಣಂ**—ಭೃಣ ಶಬ್ದೇ ಧಾತು. ಅತಿಶಯಾರ್ಥದಲ್ಲಿ ಯಙ್ ಬಂದಾಗ ಅದಕ್ಕೆ ಅನೈಮಿತ್ತಿಕವಾಗಿ ಲುಕ್. ಯಙ್ಲುಗಂತದ ಮೇಲೆ **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಛಾಂದಸವಾಗಿ ವರ್ಣವಿಕಾರ ಬಂದಿದೆ. ಅಥವಾ ಅಂಭೃಣವೆಂಬುದು ಮಹತ್ತಿನ ಹೆಸರು. ಅವ್ಯುತ್ಪನ್ನ ಪ್ರಾತಿಪದಿಕ. **ಫಿಷೋಂತ ಉದಾತ್ತಃ** ಎಂದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಮೃಣ**—ಮೃಣ ಹಿಂಸಾಯಾಂ ಧಾತು. ತುದಾದಿ. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಬರ್ಹಯ**—ಬೃಹ ಹಿಂಸಾಯಾಂ ಧಾತು. ಚುರಾದಿ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. **ಪುಗಂತಲಘೂಪಧಸ್ಯ ಚ** (ಪಾ. ಸೂ ೭-೩-೮೬) ಎಂಬುದರಿಂದ ಲಘೂಪಧ ಗುಣ ಬರುತ್ತದೆ. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನ ಬಂದಾಗ ಬರ್ಹಯ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ. ॥ ೫ ॥

॥ ಸಂಹಿತಾಪಾಠಃ ॥

ಅವರ್ಮಹ ಇಂದ್ರ ದಾದೃಹಿ ಶ್ರುಧೀ ನಃ ಶುಶೋಚ ಹಿ ದ್ಯೌಃ ಕ್ಷಾ ನ

ಭೀಷಾँ ಅದ್ರಿವೋ ಘೃಣಾನ್ನ ಭೀಷಾँ ಅದ್ರಿವಃ ।

ಶುಷ್ಮಿಂತಮೋ ಹಿ ಶುಷ್ಮಿಭಿರ್ವಧೈರುಗ್ರೇಭಿರೀಯಸೇ ।

ಅಪೂರುಷಘ್ನೋ ಅಪ್ರತೀತ ಶೂರ ಸತ್ವಭಿಸ್ತ್ರಿಸಪ್ತೈಃ ಶೂರ ಸತ್ವಭಿಃ ॥ ೬ ॥

॥ ಪದಪಾಠಃ ॥

ಅವಃ । ಮಹಃ । ಇಂದ್ರ । ದದೃಹಿ । ಶ್ರುಧಿ । ನಃ । ಶುಶೋಚ । ಹಿ । ದ್ಯೌಃ । ಕ್ಷಾಃ । ನ । ಭೀಷಾ । ಅದ್ರಿಽವಃ । ಘೃಣಾತ್ । ನ । ಭೀಷಾ । ಅದ್ರಿಽವಃ ।

ಶುಷ್ಮಿನ್ಽತಮಃ । ಹಿ । ಶುಷ್ಮಿಽಭಿಃ । ವಧೈಃ । ಉಗ್ರೇಭಿಃ । ಈಯಸೇ ।

ಅಪುರುಷಽಘ್ನಃ । ಅಪ್ರತಿಽಇತ । ಶೂರ । ಸತ್ವಽಭಿಃ । ತ್ರಿಽಸಪ್ತೈಃ । ಶೂರ । ಸತ್ವಽಭಿಃ ॥ ೬ ॥

॥ ಸಾಯಣಭಾಷ್ಯಂ ॥

ದಶರಾತ್ರಸ್ಯ ಷಷ್ಠೇಽಹನಿ ಪ್ರಉಗಶಸ್ತ್ರ ಐಂದ್ರತೃಚಸ್ಯಾವರ್ಮಹ ಇಂದ್ರೇತ್ಯಾದಿಕೇ ಪ್ರಥಮಾ ದ್ವಿತೀಯೇ । ಷಷ್ಠಸ್ಯೇತಿ ಖಂಡೇ ಸೂತ್ರಿತಂ । ಅವರ್ಮಹ ಇಂದ್ರವೃಷನ್ನಿಂದ್ರ । ಆ. ೮-೧ । ಇತಿ ॥

ಹೇ ಇಂದ್ರ ಮಹೋ ಮಹತೋ ಮೇಘಸ್ಯ ॥ ಕರ್ಮಣಿ ಷಷ್ಠೀ ॥ ಮಹಾಂತಂ ಜಲಧಾರಿಣಂ ಮೇಘಂ ಮಹಾಂತಂ ವೃತ್ರಂ ವಾವರವಸ್ತಾದವಾಙ್ಮುಖಂ ॥ ಪೂರ್ವಾಧರೇತ್ಯಾದಿನಾಸಿಪ್ರತ್ಯಯೋಽವಾದೇಶಶ್ಚ । ಅಮ್ನರೂಧರವರಿತ್ಯುಭಯಥಾ ಛಂದಸಿ । ಪಾ. ೮-೨-೭೦ । ಇತಿ ರೇಫಃ ॥ ದದೃಹಿ । ವಿದಾರಯ । ಕಿಂಚ ನೋಽಸ್ಮದ್ವಾಕ್ಯಂ ಶ್ರುಧಿ । ಶೃಣು । ಹೇ ಅದ್ರಿವಃ । ಅದ್ರಿರ್ಮೇಘಃ । ತದ್ವನ್ನಿಂದ್ರ ಹಿ ಯಸ್ಮಾತ್ಕಾರಣಾದ್ದ್ಯೌರ್ದ್ಯುಲೋಕೋ ದೇವಾನಾಮಾಶ್ರಯಭೂತಃ ಶುಶೋಚ ಶೋಚತಿ । ವೃಷ್ಟ್ಯಭಾವೇನ ಹವಿರಾದ್ಯಭಾವಾದಿತಿ ಭಾವಃ । ತತ್ರ ದೃಷ್ಟಾಂತಃ । ಕ್ಷಾ ನ ॥ ಕ್ಷೇತಿ ಭೂನಾಮ । ಕ್ಷಾಯಂತಿ ನಿವಸಂತ್ಯಸ್ಯಾಮಿತಿ ಕ್ಷಾಃ । ಕ್ಷೈ ಜೈ ಷೈ ಕ್ಷಯೇ । ಅಧಿಕರಣೇ ಕ್ವಿಪ್ ॥ ಕ್ಷಾ ನ ಸರ್ವನಿವಾಸಾಶ್ರಯಭೂಮಿರಿವ । ಸಾ ಯಥಾ ಭೀಷಾ ವೃಷ್ಟ್ಯಭಾವಾತ್ಸಸ್ಯಾದಿಶೋಷಭೀತ್ಯಾ ಶೋಚತಿ ತದ್ವತ್ । ಲೋಕದ್ವಯಮಪಿ ವೃಷ್ಟ್ಯಭಾವೇನ ಶೋಚತೀತ್ಯರ್ಥಃ । ಅಸುರಪಕ್ಷಂ ಲೋಕದ್ವಯಮಾವೃತ್ಯ ಪ್ರವರ್ಧಮಾನಂ ಧರ್ತುಮಸಹಮಾನೇ ದ್ಯಾವಾಪೃಥಿವ್ಯೌ ಶೋಚತ ಇತ್ಯರ್ಥಃ । ತಸ್ಮಾಚ್ಛೃಧೀತಿ ಪೂರ್ವತ್ರಾನ್ವಯಃ । ಭೀತೌ ದೃಷ್ಟಾಂತಃ । ಹೇ ಅದ್ರಿವಃ ಶತ್ರೂಣಾಂ ಭಕ್ಷಕ । ಯದ್ವಾ । ಅದ್ರಿರ್ವಜ್ರಃ । ತೇನ ತದ್ವನ್ । ಹೇ ಇಂದ್ರ ಘೃಣಾದ್ಭೀಷಾ ನ ದೀಪ್ತಾದಗ್ನೇರ್ಮೂರ್ತ್ಯಂತರಾತ್ತ್ವಷ್ಟುರ್ಭೀತ್ಯೇವ । ತ್ವಷ್ಟುರ್ಭೀತ್ಯಾ ಪೂರ್ವಂ ಯಥಾ ದ್ಯಾವಾಪೃಥಿವ್ಯೌ ಶೋಚತಸ್ತದ್ವತ್ । ಅತ್ರೇತಿಹಾಸಮಾಹುಃ । ಪೂರ್ವಂ ಜಗತಿ ಮಹಾಂಧಕಾರೇಣಾವೃತೇ ಸತಿ ದೇವಾ ವಿಚಿಂತ್ಯಾಗ್ನಿಂ ಪ್ರಾರ್ಥಿತವಂತಃ । ಸ ಚ ತ್ವಷ್ಟೃರೂಪೇಣ ದ್ಯಾವಾಪೃಥಿವೀಭ್ಯಾಂ ಸಕಾಶಾತ್ತಮೋ ವ್ಯುದಸ್ಯನ್ನುದಪದ್ಯತ । ತಂ ದೃಷ್ಟ್ವಾ ದ್ಯಾವಾಪೃಥಿವ್ಯೌ ಬಿಭ್ಯತುರಿತಿ । ಸ ಚೋಭೇ ತ್ವಷ್ಟುರ್ಬಿಭ್ಯತುಃ । ಋ. ೧-೯೫-೫ । ಇತ್ಯಾದಿಶ್ರುತಿತೋಽವಗಂತವ್ಯಃ । ಯದ್ವಾ । ಘೃಣಃ ಕೇವಲೋಽಗ್ನಿಃ । ತಸ್ಮಾದ್ಯಥಾ ಬಿಭೀತಸ್ತದ್ವತ್ । ಸಾ ಚ ಭೀತಿರರೇಜೇತಾಂ ರೋದಸೀ । ಋ. ೧-೩೧-೩ । ಇತ್ಯಾದಿಶ್ರುತಿತೋಽವಗಂತವ್ಯಾ । ತಾದೃಶಭೀತಿಂ ವೃಷ್ಟಿಪ್ರದಾನೇನ ಪರಿಹರೇತ್ಯರ್ಥಃ । ಹೇ ಇಂದ್ರ ತ್ವಂ ಶುಷ್ಮಿಭಿರ್ಬಲೈಃ ಶುಷ್ಮಿಂತಮೋ ಹಿ ।

**ಅತಿಶಯೇನ ಬಲವಾನ್ ಖಲು । ಅತಃ ಕಾರಣಾದುಗ್ರೇಭಿರುದ್ಗೂರ್ಣೈರತಿಕ್ರೂರೈರ್ವಧೈಸ್ತದುಪಾಯೈಃ ಸಹಿತಸ್ತ್ವಮೀಯಸೇ । ಶತ್ರೂನ್ ಮೇಘಾನ್ವಾ ಗಚ್ಛಸಿ ॥ ಈಙ್ ಗತೌ । ದೈವಾದಿಕತ್ವಾತ್ ಶ್ಯನ್ ॥ ಯದ್ವಾ । ಶುಷ್ಮಿಭಿರ್ವಧೈರಿತಿ ಸಂಬಂಧಃ । ಹೇ ಶೂರ ವಿಕ್ರಾಂತೆ ಸತ್ವಭಿರಪ್ರತೀತಾವಸನ್ನೈ ರಕ್ಷಃಪ್ರಭೃತಿಭಿರಪ್ರತಿಗತೆ ಯುದ್ಧೇ ಶತ್ರುಭಿರನಾಕ್ರಾಂತೆ । ಯದ್ವಾ । ಸತ್ವಭಿಃ ಪ್ರಾಣಿಭಿರಸಂಸ್ಕೃತಮನಸ್ಕೈರನಧಿಗತೆ । ಅಪುರುಷಘ್ನಃ ಪೌರುಷೋಪೇತಾನಾಂ ಯಜನಸಮರ್ಥಾನಾಮಹನನಸ್ತ್ವಂ । ತ್ರಿಸಪ್ತೈಃ ಸತ್ವಭಿಸ್ತ್ರಿಭಿಃ ಸಪ್ತಭಿರ್ವಾ ಸತ್ವಭಿರನುಚರೈರುಪೇತಃ ಸನ್ । ಈಯಸ ಇತ್ಯನ್ವಯಃ ॥**

॥ ಪ್ರತಿಪದಾರ್ಥ ॥

**(ಹೇ) ಅದ್ರಿವಃ**—(ಎಲೈ) ಮೇಘಯುಕ್ತನಾದ (ಇಂದ್ರನೇ) । **ಘೃಣಾತ್**— ಉದ್ದೀಪ್ತನಾದ ತ್ವಷ್ಟೃವಿನ ಅಥವಾ ಅಗ್ನಿಯ । **ಭೀಷಾ ನ**—ಭಯದಿಂದ (ಪೂರ್ವದಲ್ಲಿ ದ್ಯಾವಾಪೃಥ್ವಿಗಳು ಭಯಗೊಂಡಿದ್ದಂತೆ) । **(ಹೇ) ಅದ್ರಿವಃ**—ವಜ್ರಧಾರಿಯಾದ ಎಲೈ ಇಂದ್ರನೇ । **ಹಿ** --ಯಾವ ಕಾರಣದಿಂದ । **ಕ್ಷಾಃ**—ಭೂಮಿಯು । **ಭೀಷಾ ನ**—(ವೃಷ್ಟ್ಯಭಾವದಿಂದ ಸಸ್ಯಾದಿಗಳು ಒಣಗುತ್ತವೆಯೆಂಬ) ಭಯದಿಂದ ಶೋಕಿಸುವಂತೆ । **ದ್ಯೌಃ**—(ದೇವಾದಿಗಳಿಗಾಶ್ರಯವಾದ) ದ್ಯುಲೋಕವೂ । **ಶುಶೋಚ** - (ಹವಿರಾದ್ಯಭಾವವುಂಟಾದೀತೆಂಬ ಭಯದಿಂದ) ಶೋಕಿಸುತ್ತದೆಯೋ [ಅಥವಾ । **ಕ್ಷಾಃ**—ಭೂಮಿ (ಮತ್ತು) । **ದ್ಯೌಃ ನ**—ದೇವಲೋಕವೂ ಕೂಡ । **ಭೀಷಾ**—(ಲೋಕದ್ವಯವನ್ನೂ ಆವರಿಸುತ್ತಿರುವ ಅಸುರರ) ಭೀತಿಯಿಂದ । **ಶುಶೋಚ**—ಶೋಕಿಸುತ್ತವೆಯೋ । ] (**ತತ್**—ಆದಕಾರಣ) । **ನಃ**—ನಮ್ಮ (ಪ್ರಾರ್ಥನೆಯನ್ನು). । **ಶ್ರುಧಿ**—ಆಲಿಸು (ಪ್ರಾರ್ಥನೆಯನ್ನು ಆಲಿಸಿ) । **(ಹೇ) ಇಂದ್ರ**—(ಎಲೈ) ಇಂದ್ರನೇ । **ಮಹಃ**— ದೊಡ್ಡದಾದ (ಜಲಧಾರಿಯಾದ ಮೇಘವನ್ನು ಅಥವಾ ವೃತ್ರಾಸುರನನ್ನು) । **ಅವಃ**—ಅಧೋಮುಖವಾಗಿ । **ದದೃಹಿ**—ಭೇದಿಸು (ಬೀಳಿಸು) । (**ಹೇ ಇಂದ್ರ ತ್ವಂ**—ಎಲೈ ಇಂದ್ರನೇ, ನೀನು) । **ಶುಷ್ಮಿಭಿಃ**—ಬಲದಿಂದ । **ಶುಷ್ಮಿಂತಮಃ ಹಿ**—ಅತ್ಯಂತ ಬಲಿಷ್ಠನಷ್ಟೇ (ಆದುದರಿಂದ) । **(ಹೇ) ಶೂರ**—(ಎಲೈ) ಪರಾಕ್ರಮಿಯೇ । **ಸತ್ವಭಿಃ**—ಪರಾಭೂತರಾದ (ರಾಕ್ಷಸಾದಿಗಳಿಂದ) ಅಥವಾ ಅಸಂಸ್ಕೃತರಾದವರಿಂದ । **ಅಪ್ರತೀತ**—ಅಪ್ರತಿಹತನಾದವನೇ ಅಥವಾ ಅನಧಿಗಮ್ಯನೇ । **ಅಪುರುಷಘ್ನಃ**—(ಯಜನಸಮರ್ಥರಾದ) ವರನ್ನು ವಧೆಮಾಡದವನೂ । **ತ್ರಿಸಪ್ತೈಃ**—(ಮೂರಾವರ್ತಿ ಏಳು ಸಂಖ್ಯೆಯುಳ್ಳ ಎಂದರೆ ಇಪ್ಪತ್ತೊಂದು ಸಂಖ್ಯೆಯುಳ್ಳ । **ಸತ್ವಭಿಃ**—ಅನುಚರರಿಂದ (ಸಹಿತನೂ ಆಗಿ) । **ಉಗ್ರೇಭಿಃ**—ಅತಿಕ್ರೂರವಾದ । **ವಧೈಃ**—ವಧೋಪಾಯಗಳಿಂದ (ಕೂಡಿ) । **ಈಯಸೇ**—(ಶತ್ರುಗಳನ್ನು ಅಥವಾ ಮೇಘಗಳನ್ನು ಎದುರಿಸಲು) ಹೋಗುತ್ತೀ.

॥ ಭಾವಾರ್ಥ ॥

ಮೇಘಗಳಿಂದ ಸಹಿತನೂ, ವಜ್ರಾಯುಧಧಾರಿಯೂ ಆದ ಎಲೈ ಇಂದ್ರನೇ, (ಹಿಂದೆ) ಭಯಂಕರನಾದ (ತ್ವಷ್ಟೃವಿನ ಅಥವಾ ಅಗ್ನಿಯ) ಭಯದಿಂದ ದ್ಯಾವಾಭೂಮಿಗಳೆರಡೂ ಭಯಪಟ್ಟಂತೆ, (ಈಗಲೂ) ವೃಷ್ಟ್ಯಭಾವದಿಂದ ಸಸ್ಯಾದಿಗಳು ಒಣಗಿಹೋಗುತ್ತವೆಯೆಂದು) ಭೂಮಿಯೂ, (ಸಸ್ಯಾದಿಗಳಿಲ್ಲದಿದ್ದರೆ ಹವಿರಾದ್ಯಭಾವವುಂಟಾಗುತ್ತದೆಯೆಂಬ) ಭಯದಿಂದ (ದೇವಾದ್ಯಾಶ್ರಯವಾದ) ದ್ಯುಲೋಕವೂ, ಶೋಕಯುಕ್ತವಾಗಿವೆ ; ಅಥವಾ ಎರಡೂ ಲೋಕಗಳನ್ನು ಆವರಿಸುತ್ತಿರುವ ಅಸುರಪಕ್ಷವನ್ನು ಧರಿಸಲಿಸಮರ್ಥವಾಗಿ, ದ್ಯಾವಾಪೃಥಿವಿಗಳು ಶೋಕಿಸುತ್ತವೆ ; (ಆದುದರಿಂದ ಎಲೈ ಇಂದ್ರನೇ) ನಮ್ಮ ಪ್ರಾರ್ಥನೆಯನ್ನು ಲಾಲಿಸಿ, ಮೇಘಗಳನ್ನು ಅಧೋಮುಖವಾಗಿ ಭೇದಿಸಿ (ಮಳೆಯನ್ನುಂಟುಮಾಡು). ಎಲೈ ಶೂರನಾದ ಇಂದ್ರನೇ ನೀನು ಮಹಾಪರಾಕ್ರಮಿ ; ರಾಕ್ಷಸಾದಿಗಳಿಂದ

ಅಪ್ರತಿಹತನೂ (ಅಸಂಸ್ಕೃತರಿಂದ ಅಗಮ್ಯನೂ), (ಯಜನಸಮರ್ಥರಾದವರನ್ನು) ವಧಿಸದವನೂ (ಆದ ನೀನು) ಇಪ್ಪತ್ತೊಂದು ಅನುಚರರಿಂದ ಮತ್ತು ಅತಿಕ್ರೂರವಾದ ವಧೋಪಾಯಗಳಿಂದ ಸಹಿತನಾಗಿ, ಶತ್ರುಗಳನ್ನು (ಮೇಘಗಳನ್ನು) ಎದುರಿಸು.

## English Translation.

Hurl headlong, Indra, the vast (cloud): hear our supplications: verily the heaven is in sorrow like the earth, through fear, wielder of the thunderbolt, (of famine), as (formerly through fear of) Twashtri: most powerful with mighty energies, you assail, Indra, (the clouds) with terrible blows; and, doing no injury to man, (you mareh) invincible, hero, by (your) enemies; attended, hero, by three or by seven followers.

॥ ವಿಶೇಷವಿಷಯಗಳು ॥

ದಶರಾತ್ರವೆಂಬ ಯಾಗದ ಆರನೆಯ ದಿವಸ ಪ್ರಉಗಶಸ್ತ್ರಮಂತ್ರಪಠನಮಾಡುವಾಗ ಇಂದ್ರಸಂಬಂಧವಾದ ತೃಚದ (ಮೂರು ಋಕ್ಕುಗಳ) ಪಠನಕ್ಕಾಗಿ ಈ ಸೂಕ್ತದ ಮೊದಲಿನ ಎರಡು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಷಷ್ಠಸ್ಯ** ಎಂಬ ಖಂಡದ **ಅವರ್ಮಹ ಇಂದ್ರ ವೃಷನ್ನಿಂದ್ರ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೮-೧).

**ಅವರ್ಮಹ ಇಂದ್ರ ದಾದೃಹಿ—ಮಹೋ ಮಹತೋ ಮೇಘಸ್ಯ । ಕರ್ಮಣಿ ಷಷ್ಠೀ । ಮಹಾಂತಂ ಜಲಧಾರಿಣಂ ಮೇಘಂ ಮಹಾಂತಂ ವೃತ್ರಂ ವಾ ಅವರವಸ್ತಾತ್ ಅವಾಙ್ಮುಖಂ ದದೃಹಿ ವಿದಾರಯ ।** ಇಲ್ಲಿ ಮಹಃ ಎಂಬ ಶಬ್ದವು ಮಹತಃ ಎಂಬ ಶಬ್ದಕ್ಕೆ ಬದಲಾಗಿ ಉಪಯೋಗಿಸಲ್ಪಟ್ಟಿರುವುದು. ಛಂದಸ್ಸಿನ ಅನುಕೂಲಕ್ಕಾಗಿ ತಕಾರಲೋಪವಾಗಿದೆ. ಮತ್ತು ಷಷ್ಠೀವಿಭಕ್ತಿಗೆ ತೃತೀಯಾವಿಭಕ್ತಿಯ ಅರ್ಥವನ್ನು ಹೇಳಬೇಕು. ಆದುದರಿಂದ **ಮಹಃ** ಎಂಬ ಶಬ್ದಕ್ಕೆ **ಮಹಾಂತಂ** ಎಂದು ಇಟ್ಟುಕೊಂಡರೆ ಇದಕ್ಕೆ ದೊಡ್ಡದಾದ ಮತ್ತು ನೀರಿನಿಂದ ಕೂಡಿದ ಮೇಘವನ್ನು ಅಥವಾ ವೃತ್ರಾಸುರನನ್ನು ಎಂದರ್ಥಮಾಡಬೇಕು. ಇಂತಹ ಮೇಘವನ್ನು ಅಥವಾ ವೃತ್ರಾಸುರನನ್ನು (ವಜ್ರಾಯುಧದಿಂದ ಹೊಡೆದು) ತಲೆಕೆಳಗಾಗಿ ಕೆಡವಿ ನಾಶಪಡಿಸು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ. ದದೃಹಿ ಶಬ್ದದ ಆದ್ಯಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಶ್ರುಧೀ ನಃ—ನೋಽಸ್ಮದ್ವಾಕ್ಯಂ ಶ್ರುಧಿ ಶೃಣು** । ಎಲೈ ಇಂದ್ರನೇ ನಾವು ಮುಂದೆ ಹೇಳುವ ಪ್ರಾರ್ಥನಾರೂಪವಾದ ವಾಕ್ಯವನ್ನು ಮನಸ್ಸಿಟ್ಟು ಕೇಳು ಎಂದು ಋಷಿಯು ಇಂದ್ರನನ್ನು ಪ್ರಾರ್ಥಿಸಿರುವನು. ಛಂದಸ್ಸಿನ ಅನುಕೂಲಕ್ಕಾಗಿ ಶ್ರುಧಿ ಶಬ್ದದ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಶುಶೋಚ ಹಿ ದ್ಯೌಃ ಕ್ಷಾ ನ ಭೀಷಾ ಅದ್ರಿವಃ**—ಅದ್ರಿಶಬ್ದವು ಮೇಘನಾಮಗಳಲ್ಲಿಯೂ (ನಿ. ೨-೨೧) ವಜ್ರನಾಮಗಳಲ್ಲಿಯೂ ಪಠಿತವಾಗಿರುವುದು. ಆದುದರಿಂದ ಅದ್ರಿವಃ ಎಂಬ ಶಬ್ದಕ್ಕೆ ಮೇಘವನ್ನು ಅಥವಾ ಶತ್ರುವನ್ನು (ವಜ್ರಾಯುಧದಿಂದ) ಭೇದಿಸುವ ಇಂದ್ರನೆಂದರ್ಥವು. ಎಲೈ ಇಂದ್ರನೇ, ಭೂಮಿಯು ವೃಷ್ಟ್ಯಭಾವದಿಂದ (ಮಳೆ ಇಲ್ಲದಿರುವುದರಿಂದ) ಸಸ್ಯಾದಿಗಳ ಉತ್ಪತ್ತಿಗೂ ಪೋಷಣೆಗೂ ತೊಂದರೆಯುಂಟಾಗಿ ಯಾವರೀತಿ ದುಃಖಕ್ಕೀಡಾಗುವುದೋ ಅದೇ ರೀತಿ ದೇವತೆಗಳಿಗೆ ಆಶ್ರಯಭೂತವಾದ ಸ್ವರ್ಗಲೋಕವೂ ಕೂಡ ಮನುಷ್ಯರು ಮಾಡುವ ಯಜ್ಞಾದಿಗಳಿಲ್ಲದೆ ದುಃಖಕ್ಕೀಡಾಗುವುದು. ಯಜ್ಞಾದಿಗಳಲ್ಲಿ ಅರ್ಪಿಸುವ ಹವಿರಾದಿಗಳು ದೇವತೆಗಳಿಗೆ

ಅಗ್ನಿಯ ಮೂಲಕ ಸೇರಿ ಅದರಿಂದ ಅವರು ತೃಪ್ತಿಯನ್ನು ಹೊಂದುವದು  ಮಳೆ ಇಲ್ಲದಿದ್ದರೆ ಸಸ್ಯಾದಿಗಳ ಅಭಿವೃದ್ಧಿ ಇರುವುದಿಲ್ಲ. ಅಂತಹ ವ್ರೀಹ್ಯಾದಿಸಸ್ಯಗಳ ಅಭಾವದಿಂದ ಯಜ್ಞಾದಿಕರ್ಮಗಳೂ ನೆರವೇರದೆ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವುದೂ ಸಹ ನಿಂತುಹೋಗುವುದು ಆದುದರಿಂದ ಮಳೆ ಇಲ್ಲದೆ ಭೂಮಿಯು ಹೇಗೆ ದುಃಖಕ್ಕೊಳಗಾಗುವುದೋ ಅದರಂತೆ ವೃಷ್ಟ್ಯಭಾವದಿಂದ ಹೆದರಿ ಸ್ವರ್ಗಲೋಕವೂ ದುಃಖಿಸುವುದು ಎಂದು ಮುಖ್ಯಾಭಿಪ್ರಾಯವು. ಇಲ್ಲಿ ಭಾಷ್ಯಕಾರರು **ದ್ಯೌಃ** ಎಂಬ ಶಬ್ದಕ್ಕೆ—**ದ್ಯೌರ್ದ್ಯುಲೋಕೋ ದೇವಾನಾಮಾಶ್ರಯಭೂತಃ ।** ದೇವತೆಗಳಿಗೆ ಆಶ್ರಯಸ್ಥಾನವಾದ ಸ್ವರ್ಗಲೋಕವೆಂದೂ ಕ್ಷಾ ಎಂಬ ಶಬ್ದಕ್ಕೆ—**ಕ್ಷೇತಿ ಭೂನಾಮ । ಕ್ಷಾಯಂತಿ ನಿವಸಂತ್ಯ-ಸ್ಯಾಮಿತಿ ಕ್ಷಾಃ ಸರ್ವನಿವಾಸಾಶ್ರಯಭೂಮಿಃ ।** ಎಂದರೆ **ಕ್ಷಾ** ಎಂಬ ಶಬ್ದವು ಇಪ್ಪತ್ತೊಂದು ಪೃಥಿವೀನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೧) ಭೂಮಿಯೆಂದರ್ಥವು. **ಕ್ಷಾ** ವಾಸಮಾಡು ಎಂಬ ಧಾತುವಿನಿಂದ ನಿಷ್ಪನ್ನವಾಗಿ ರುವುದರಿಂದ ಸರ್ವರೂ ವಾಸಮಾಡುವ ಭೂಮಿಗೆ **ಕ್ಷಾ** ಎಂದು ಹೆಸರು ಬಂದಿದೆ. ಎಂದೂ ಭಾಷ್ಯಕಾರರು **ದ್ಯೌಃ ಕ್ಷಾಃ** ಎಂಬ ಶಬ್ದಗಳಿಗೆ ಅರ್ಥವಿವರಣೆಮಾಡಿರುವರು. ಅಸುರರು, ದ್ಯಾವಾಪೃಥಿವಿಗಳೆಂಬ ಲೋಕದ್ವಯದಲ್ಲಿ ಅಭಿವೃದ್ಧಿ ಯನ್ನು ಹೊಂದಿ ಲೋಕಕಂಟಕರಾಗಿ ಯಜ್ಞಾದಿಗಳಿಗೆ ವಿಘ್ನವನ್ನುಂಟುಮಾಡುವುದನ್ನು ದ್ಯಾವಾಪೃಥಿವಿಗಳು ಸಹಿಸಲಾರದೆ ದುಃಖಿಸುವವು ಎಂಬ ಈ ನನ್ನ ಪ್ರಾರ್ಥನೆಯನ್ನು ಆಲಿಸು ಎಂದು ಋಷಿಯು ವಿವರಿಸಿರುವನು.

**ಘೃಣಾತ್ ನ ಭೀಷಾ ಅದ್ರಿವಃ**—ದ್ಯಾವಾಪೃಥಿವಿಗಳು ಹೆದರಿದ ವಿಷಯದಲ್ಲಿ ಇಲ್ಲಿ ಒಂದು ದೃಷ್ಟಾಂತವು ಉಕ್ತವಾಗಿದೆ. ಅದನ್ನು ಭಾಷ್ಯಕಾರರು ಋ. ಸಂ. ೧-೯೫-೧ ರಲ್ಲಿ ಹೇಳಿರುವ ಪೂರ್ವೇತಿಹಾಸವನ್ನು ಉದಾಹರಣೆ ಯಾಗಿ ಕೊಟ್ಟಿರುವರು —

**ಹೇ ಅದ್ರಿವಃ ಶತ್ರೂಣಾಂ ಭಕ್ಷಕ । ಯದ್ವಾ । ಅದ್ರಿರ್ವಜ್ರಃ । ತೇನ ತದ್ವನ್ । ಹೇ ಇಂದ್ರ ಘೃಣಾದ್ಭೀಷಾ ನ ದೀಪ್ತಾದಗ್ನೇರ್ಮೂರ್ತ್ಯಂತರಾತ್ತ್ವಷ್ಟುರ್ಭೀತ್ಯೇವ । ತ್ವಷ್ಟುರ್ಭೀತ್ಯಾ ಪೂರ್ವಂ ಯಥಾ ದ್ಯಾವಾಪೃಥಿವ್ಯೌ ಶೋಚತಸ್ತದ್ವತ್ । ಅತ್ರೇತಿಹಾಸಮಾಹುಃ । ಪೂರ್ವಂ ಜಗತಿ ಮಹಾಂಧಕಾರೇಣಾವೃತೇ ಸತಿ ದೇವಾ ವಿಚಿಂತ್ಯಾಗ್ನಿಂ ಪ್ರಾರ್ಥಿತವಂತಃ । ಸ ಚ ತ್ವಷ್ಟೃರೂಪೇಣ ದ್ಯಾವಾಪೃಥಿವೀಭ್ಯಾಂ ಸಕಾಶಾತ್ತಮೋ ವ್ಯುದಸ್ಯನ್ನುದಪದ್ಯತ । ತಂ ದೃಷ್ಟ್ವಾ ದ್ಯಾವಾಪೃಥಿವ್ಯೌ ಬಿಭ್ಯತುರಿತಿ । ಸ ಚೋಭೇ ತ್ವಷ್ಟುರ್ಬಿಭ್ಯತುಃ—**

**ಉಭೇ ತ್ವಷ್ಟುರ್ಬಿಭ್ಯತುರ್ಜಾಯಮಾನಾತ್ಪ್ರತೀಚೀ ಸಿಂಹಂ ಪ್ರತಿ ಜೋಷಯೇತೇ ।**

(ಋ. ಸಂ. ೧-೯೫-೫)

ಪೂರ್ವದಲ್ಲಿ ಜಗತ್ತೆಲ್ಲಾ ಅಂಧಕಾರದಿಂದ (ಕತ್ತಲೆಯಿಂದ) ಆವೃತವಾಗಿದ್ದಾಗ ದೇವತೆಗಳೆಲ್ಲರೂ ಸೇರಿ ಮಂತ್ರಾ ಲೋಚನೆಯನ್ನು ಮಾಡಿ ಈ ಅಂಧಕಾರ ಪರಿಹಾರಕ್ಕಾಗಿ ಅಗ್ನಿಯನ್ನು ಪ್ರಾರ್ಥಿಸಿದರು. ಆಗ ಅಗ್ನಿಯು ತ್ವಷ್ಟೃ ರೂಪದಿಂದ ಉತ್ಪನ್ನನಾಗಿ ಭೂಮ್ಯಂತರಿಕ್ಷದಲ್ಲಿರುವ ಕತ್ತಲೆಯನ್ನು ತನ್ನ ಜಾಜ್ವಲ್ಯಮಾನವಾದ ಜ್ವಾಲೆಗಳಿಂದ ಹೋಗಲಾಡಿಸಿ ಎಲ್ಲಾ ಕಡೆಯಲ್ಲಿಯೂ ಬೆಳಕಾಗುವಂತೆ ಮಾಡಿದನು, ಆ ಕಾಲದಲ್ಲಿ ಜಾಜ್ವಲ್ಯಮಾನವಾಗಿ ಉರಿಯು ತ್ತಿದ್ದ ಅಗ್ನಿಯ ಭಯಂಕರಾಕಾರವನ್ನು ನೋಡಿ ದ್ಯಾವಾಪೃಥಿವಿಗಳು ಹೆದರಿ ನಡುಗಿದವು ಎಂದು **ಉಭೇ ತ್ವಷ್ಟುರ್ಬಿಭ್ಯತುಃ** ಎಂಬ ಋಕ್ಕಿನಲ್ಲಿ ಹಿಂದೆಯೇ ಹೇಳಿರುವುದನ್ನು ಉದಾಹರಿಸಿ ಈಗ ಪ್ರಾಪ್ತವಾಗಿರುವ (ಅಥವಾ ಪ್ರಾಪ್ತವಾಗಬಹುದಾದ (ವೃಷ್ಟ್ಯಭಾವದಿಂದ ದ್ಯಾವಾಪೃಥಿವಿಗಳು ತ್ವಷ್ಟೃರೂಪದಿಂದಿದ್ದ ಅಗ್ನಿಯನ್ನು ಕಂಡು

ಹೆದರಿದಂತೆ ಈಗಲೂ ಹೆದರಿ ದುಃಖಿಸುವವು ಎಂದು ದೃಷ್ಟಾಂತ ವಾಕ್ಯವನ್ನು ಭಾಷ್ಯಕಾರರು ವಿವರಿಸಿರುವರು. ಅಥವಾ ಘೃಣ ಶಬ್ದಕ್ಕೆ ಕೇವಲ ಅಗ್ನಿಯೆಂದೇ ಅರ್ಥಮಾಡಬಹುದು. ಅಂತಹ ಅಗ್ನಿಯಿಂದ ದ್ಯಾವಾಪೃಥಿವಿಗಳು ಹೆದರಿ ನಡುಗಿದವೆಂದು,

**ಅರೇಜೇತಾಂ ರೋದಸೀ ಹೋತೃವೂರ್ಯೇಽಸಘ್ನೋರ್ಭಾರಮಯಜೋ ಮಹೋ ವಸೋ ।**

(ಋ ಸಂ ೧-೩೧-೩)

ಎಂಬ ಋಕ್ಕಿನಲ್ಲಿ ಹೇಳಿರುವ ವಿಷಯವನ್ನು ಉದಾಹರಣೆಯಾಗಿ ಕೊಟ್ಟಿರುವರು. ಆದುದರಿಂದ ಎಲೈ ವಜ್ರಧಾರಿಯಾದ ಇಂದ್ರನೇ, ನೀನು ಮೇಘಗಳನ್ನು ಪ್ರಹರಿಸಿ ವೃಷ್ಟಿಯನ್ನುಂಟುಮಾಡಿ ದ್ಯಾವಾಪೃಥಿವಿಗಳ ದುಃಖವನ್ನು ಪರಿಹರಿಸೆಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

**ಶುಷ್ಮಿಂತಮೋ ಹಿ ಶುಷ್ಮಿಭಿಃ ವಧೈರುಗ್ರೇಭಿರೀಯಸೇ**—ಶುಷ್ಮ ಶಬ್ದವು ಓಜಃ ಪ ಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಶುಷ್ಮಂ ಎಂದರೆ ಬಲವೆಂದರ್ಥವು. **ಶುಷ್ಮಮಸ್ಯಾಸ್ತೀತಿ ಶುಷ್ಮೀ ತೈಃ ಶುಷ್ಮಿಭಿಃ । ಅತಿಶಯೇನ ಶುಷ್ಮೀ ಶುಷ್ಮಿಂತಮಃ ।** ಬಲವುಳ್ಳವನಿಗೆ ಶುಷ್ಮೀ ಎಂದೂ ಅಂತಹ ಬಲಶಾಲಿಗಳಲ್ಲಿ ಅತಿಶಯವಾದ ಬಲವುಳ್ಳವನಿಗೆ ಶುಷ್ಮಿಂತಮಃ ಎಂದೂ ಹೆಸರು. ಇಂದ್ರನು ಬಲವುಳ್ಳವರಲ್ಲೆಲ್ಲಾ ಅತ್ಯಂತ ಹೆಚ್ಚಾದ ಬಲವುಳ್ಳವನು. ಇಂತಹ ಬಲಶಾಲಿಯಾದ ಎಲೈ ಇಂದ್ರನೇ, ನೀನು ಶತ್ರುವಧ ರೂಪವಾದ ಸಮಸ್ತ ಉಪಾಯಗಳಿಂದಲೂ ಯುಕ್ತನಾಗಿ ಶತ್ರುಗಳ ಸಮೀಪಕ್ಕೆ (ಅವರ ನಾಶಾರ್ಥವಾಗಿ) ಹೋಗುವೆ ಎಂದಭಿಪ್ರಾಯವು.

**ಅಪೂರುಷಘ್ನಃ—ಪೌರುಷೋಪೇತಾನಾಂ ಯಜನಸಮರ್ಥಾನಾಮಹನನಃ ।** ಪುರುಷಘ್ನ ಎಂದರೆ ಪುರುಷರನ್ನು ಸಂಹಾರಮಾಡುವವನು. ಅಪೂರುಷಘ್ನಃ ಎಂದರೆ ಪುರುಷರನ್ನು ಸಂಹಾರಮಾಡದಿರುವವನು. ಎಂದರೆ ಶೌರ್ಯಪರಾಕ್ರಮಗಳಿಂದ ಯುಕ್ತರಾದವರೂ ಯಜ್ಞಾದಿಗಳನ್ನು ಮಾಡುವವರೂ ಆದ ಸತ್ಪುರುಷರನ್ನು ಕೊಲ್ಲದಿರುವ (ಇಂದ್ರನು) ಎಂದಭಿಪ್ರಾಯವು.

**ಅಪ್ರತೀತ—ಅವಸನ್ನೈ ರಕ್ಷಃಪ್ರಭೃತಿಭಿರಪ್ರತಿಗತ ಯುದ್ಧೇ ಶತ್ರುಭಿರನಾಕ್ರಾಂತ । ಯದ್ವಾ । ಸತ್ತ್ವಭಿಃ ಪ್ರಾಣಭಿರಸಂಸ್ಕೃತಮನಸ್ಕೈರನಧಿಗತ ।** ಯುದ್ಧದಲ್ಲಿ ತನಗೆ ಎದುರಾಗುವ ರಾಕ್ಷಸಾದಿಶತ್ರುಗಳಿಂದ ಜಯಿಸಲಶಕ್ಯನಾದ ಅಥವಾ ಹೆಚ್ಚು ತಿಳುವಳಿಕೆ (ಬುದ್ಧಿ) ಇಲ್ಲದ ಮಂದಮತಿಗಳಾದ ಜನರಿಂದ ತಿಳಿಯಲ್ಪಡದಿರುವ ಎಂದರ್ಥವು. ಯುದ್ಧದಲ್ಲಿ ಶತ್ರುಗಳು ಇವನನ್ನು ಸಮೀಪಿಸುವುದು ಸಹ ಕಷ್ಟವು ಇನ್ನು ಜಯಿಸುವುದೆಂತು? ಆದುದರಿಂದ ಶತ್ರುಗಳಿಂದ ಇವನು ಅಜೇಯನು ಮತ್ತು ಇಂದ್ರನ ಸಾಮರ್ಥ್ಯವನ್ನೂ ಮಹಿಮೆಯನ್ನೂ ಸಾಧಾರಣ ಜನರು ಅರಿಯಲಾರರು. ಜ್ಞಾನಿಗಳೂ, ಯಜ್ಞವನ್ನು ಮಾಡುವ ಸತ್ಕರ್ಮನಿಷ್ಠರೂ ಮಾತ್ರವೇ ಇಂದ್ರನ ಮಹಿಮೆಯನ್ನು ತಿಳಿಯಬಲ್ಲರು ಎಂದಭಿಪ್ರಾಯವು.

**ತ್ರಿಸಪ್ತೈಃ ಶೂರ ಸತ್ವಭಿಃ**—ಇಲ್ಲಿ ಭಾಷ್ಯಕಾರರು **ತ್ರಿಸಪ್ತೈಃ** ಎಂಬ ಶಬ್ದಕ್ಕೆ **ತ್ರಿಭಿಃ ಸಪ್ತಭಿರ್ವಾ** ಮೂರು ಅಥವಾ ಏಳು ಎಂದರ್ಥಮಾಡಿರುವರು. ಆದರೆ ಈ ಅರ್ಥಕ್ಕಿಂತಲೂ ಮೂರು ಸಲ ಏಳು ಎಂದರೆ ಇಪ್ಪತ್ತೊಂದು ಎಂಬ ಅರ್ಥವೇ ಚೆನ್ನಾಗಿ ಹೊಂದಿಕೊಳ್ಳುವುದು. ಈ ವಿಷಯದಲ್ಲಿ Wilson ಪಂಡಿತನು—

ತ್ರಿಸಪ್ತಭಿಃ ಶೂರ ಸತ್ವಭಿಃ | The Scholiast explains it ತ್ರಿಭಿಃ ಸಪ್ತಭಿರ್ವಾ ಅನುಚರೈಃ but gives no further interpretation ; Indra's followers, the Maruts are forty-nine, so that they cannot be intended ; and ಸತ್ವಭಿಃ must mean something else perhaps an allusion is intended to the seven platters to Maruts repeated at the three daily rites or attended by the beings i.e. the Maruts, to whom the thrice seven offerings are presented. ಎಂದು ಅರ್ಥವಿವರಣೆ ಮಾಡಿರುವನು.

॥ ವ್ಯಾಕರಣಪ್ರಕ್ರಿಯಾ ॥

**ಅವಃ**— **ಪೂರ್ವಾಧರಾವರಾಣಾಮಸಿ ಪುರಧವಶ್ಚೈಷಾಂ** (ಪಾ. ಸೂ. ೫-೩-೩೯) ಎಂಬುದರಿಂದ ಅವರ ಶಬ್ದಕ್ಕೆ ಅಸ್ತಾತ್ಯರ್ಥದಲ್ಲಿ ಅಸಿಪ್ರತ್ಯಯ. ಅದು ಪರವಾದಾಗ ಪ್ರಕೃತಿಗೆ ಅವ್ ಎಂಬ ಆದೇಶ ಬರುತ್ತದೆ. ಅವಸ್ ಎಂದು ರೂಪವಾದಾಗ **ಅಮ್ನರೂಧರವರಿತ್ಯುಭಯಥಾ ಛಂದಸಿ** (ಪಾ. ಸೂ. ೮-೨-೭೦) ಎಂಬುದರಿಂದ ರೇಫಾದೇಶ.

**ಮಹಃ**—ಮಹ ಪೂಜಾಯಾಂ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಷಷ್ಠೀ ಏಕ ವಚನಾಂತರೂಪ **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಕರ್ಮಾರ್ಥ ದಲ್ಲಿ ಷಷ್ಠೀ ಬಂದಿದೆ.

**ದರ್ದೃಹಿ**—ದೃ ವಿದಾರಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಚಾದಿಲೋಪೇ ವಿಭಾಷಾ** ಸೂತ್ರದಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಹಿಗೆ ಅಪಿತ್ವವಿಧಾನಮಾಡಿರುವುದರಿಂದ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಸಂಹಿತಾದಲ್ಲಿ ಛಾಂದಸವಾಗಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ.

**ಶ್ರುಧಿ**—ಶ್ರು ಶ್ರವಣೇ. ಧಾತು. ಹಿಂದಿನಂತೆ ಹಿ ಪ್ರತ್ಯಯ ಬಂದಾಗ **ಶ್ರುಶೃಣು ಪೃಕೃ**— (ಪಾ. ಸೂ. ೬-೪-೧೦೨) ಎಂಬುದರಿಂದ ಅದಕ್ಕೆ ಧಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಗುಣ ಬರುವುದಿಲ್ಲ. ತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ಹಿಂದಿನಂತೆ ಅಂತೋದಾತ್ತವಾಗುತ್ತದೆ. **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಶುಶೋಚ**—ಶುಚ ಶೋಕೇ. ಧಾತು. ಛಾಂದಸವಾಗಿ ಲಿಟ್. ಪ್ರಥಮಪುರುಷ ಏಕವಚನದಲ್ಲಿ ತಿಪಿಗೆ ಣಲಾದೇಶ. ಧಾತುವಿಗೆ ದ್ವಿತ್ವಾದಿ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯ **ಲಿ**ತ್ತಾದುದರಿಂದ **ಲಿತಿ** (ಪಾ ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಕ್ಷಾಃ**—ಕ್ಷೈ ಜೈ, ಷೈ ಕ್ಷಯೇ ಧಾತು. ಕ್ಷಾಯಂತಿ ನಿವಸಂತಿ ಅಸ್ಯಾಮಿತಿ ಕ್ಷಾಃ. ಅಧಿಕರಣಾರ್ಥದಲ್ಲಿ ಕ್ವಿಪ್ ಪ್ರತ್ಯಯ. **ಆದೇಚ ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ.

**ಶುಷ್ಮಿಂತಮಃ**— ಶುಷ ಶೋಷಣೇ. ಧಾತು. **ಅವಿಸಿವಿ**—(ಉ. ಸೂ. ೧-೧೪೧) ಎಂಬುದರಿಂದ ಮನ್ ಪ್ರತ್ಯಯ ಬರುತ್ತದೆ. ಶುಷ್ಮ ಅಸ್ಯ ಅಸ್ತಿ ಇತಿ ಶುಷ್ಮೀ. ಮತ್ವರ್ಥದಲ್ಲಿ ಇನಿ ಪ್ರತ್ಯಯ. ಅತಿಶಯಾರ್ಥದಲ್ಲಿ ಇದರ ಮೇಲೆ ತಮಪ್ ಪ್ರತ್ಯಯ. ಇದು ಅನುದಾತ್ತವಾಗುವುದರಿಂದ ಇಕಾರಸ್ವರ ಉಳಿಯುತ್ತದೆ.

**ವಧೈಃ**—ಹನ ಹಿಂಸಾಗತ್ಯೋಃ ಧಾತು. **ಹನಶ್ಚ ವಧಃ** (ಪಾ. ಸೂ. ೩-೩-೭೬) ಎಂಬುದರಿಂದ ಅಪ್ ಪ್ರತ್ಯಯ. ಪ್ರಕೃತಿಗೆ ವಧಾದೇಶ. ಉದಾತ್ತನಿವೃತ್ತಿಸ್ವರದಿಂದ ಪ್ರತ್ಯಯ ಉದಾತ್ತವಾಗುತ್ತದೆ.

**ಈಯಸೇ**— ಈಙ್ ಗತೌ. ಧಾತು. ದಿವಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಃ ಸೇ** ಎಂಬುದರಿಂದ ಅದಕ್ಕೆ ಸೇ ಆದೇಶ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ವಿಕರಣ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಪ್ರತೀತೇ**—ಇಕ್ ಸ್ಮರಣೇ. ಧಾತು. ಕ್ತಪ್ರತ್ಯಯ. ಸಂಬುದ್ಧಿಯಲ್ಲಿ ಆಮಂತ್ರಿತನಿಘಾತಸ್ವರ ಬರುತ್ತದೆ ॥ ೬ ॥



॥ ಸಂಹಿತಾಪಾಠಃ ॥

ವನೋತಿ ಹಿ ಸುನ್ವನ್ಕ್ಷಯಂ ಪರೀಣಸಃ ಸುನ್ವಾನೋ ಹಿ ಷ್ಮಾ ಯಜತ್ಯವ
ದ್ವಿಷೋ ದೇವಾನಾಮವ ದ್ವಿಷಃ ।
ಸುನ್ವಾನ ಇತ್ಸಿಷಾಸತಿ ಸಹಸ್ರಾ ವಾಜ್ಯವೃತಃ ।
ಸುನ್ವಾನಾಯೇಂದ್ರೋ ದದಾತ್ಯಾಭುವಂ ರಯಿಂ ದದಾತ್ಯಾಭುವಂ ॥ ೭ ॥

॥ ಪದಪಾಠಃ ॥

ವನೋತಿ । ಹಿ । ಸುನ್ವನ್ । ಕ್ಷಯಂ । ಪರೀಣಸಃ । ಸುನ್ವಾನಃ । ಹಿ । ಸ್ಮ । ಯಜತಿ । ಅವ । ದ್ವಿಷಃ ।
ದೇವಾನಾಂ । ಅವ । ದ್ವಿಷಃ ।
ಸುನ್ವಾನಃ । ಇತ್ । ಸಿಸಾಸತಿ । ಸಹಸ್ರಾ । ವಾಜೀ । ಅವೃತಃ ।
ಸುನ್ವಾನಾಯ । ಇಂದ್ರಃ । ದದಾತಿ । ಆऽಭುವಂ । ರಯಿಂ । ದದಾತಿ । ಆऽಭುವಂ ॥ ೭ ॥

|| ಸಾಯಣಭಾಷ್ಯಂ ||

ಪ್ರಾತಃಸವನೇ ಬ್ರಾಹ್ಮಣಾಚ್ಛಂಸಿನಃ ಪ್ರಸ್ಥಿತಯಾಜ್ಯಾಯಾಃ ಪುರಸ್ತಾದ್ವನೋತಿ ಹೀತ್ಯೇಷಾ ಪ್ರಕ್ಷೇಪಣೀಯಾ । ತತ್ರೈವ ಖಂಡೇ ಸೂತ್ರಿತಂ । ವನೋತಿ ಹಿ ಸುನ್ವನ್ಕ್ಷಯಂ ಪರೀಣಸೋ ಮೋ ಷು ವೋ ಅಸ್ಮದಭಿ ತಾನಿ ಪೌಂಸ್ಯಾ । ಆ. ೮-೧ । ಇತಿ ॥

ಹೇ ಇಂದ್ರ ಸುನ್ವನ್ ತ್ವಾಮುದ್ದಿಶ್ಯಾಭಿಷವಂ ಕುರ್ವನ್ಯಜಮಾನಃ ಕ್ಷಯಂ ಸರ್ವೈರ್ವರ್ಜಸ್ತವ್ಯಂ ಗಂತವ್ಯಂ ವಾ ಗೃಹಂ ವನೋತಿ ಹಿ । ತ್ವತ್ಪ್ರಸಾದಾತ್ಸಂಭಜತೇ । ಹಿಃ ಪ್ರಸಿದ್ಧ್ಯರ್ಥಃ । ಕಿಂಚ ಸುನ್ವಾನೋ ಹಿ ಸೋಮಯಾಗಂ ಕುರ್ವಾಣ ಏವ ಪರೀಣಸಃ ಪರಿತೋ ನದ್ಧಾನ್ ಸಂಬದ್ಧಾನ್ ದ್ವಿಷೋ ದ್ವೇಷ್ಟ್ರೂನವ ಯಜತಿ । ನಾಶಯತಿ । ನ ಕೇವಲಂ ಯಾಗದ್ವೇಷಿಣಃ ದೇವಾನಾಂ ದ್ವಿಷೋಽಪ್ಯವ ಯಜತಿ । ಕಿಂಚ ಸುನ್ವಾನ ಇದಭಿಷವೋಪಲಕ್ಷಿತಂ ಯಾಗಂ ಕುರ್ವಾಣೋ ಹೇ ಇಂದ್ರ ತ್ವತ್ಪ್ರಸಾದಾದ್ವಾಜೀ ವಾಜವಾನನ್ನವಾನ್ ಅವೃತಃ ಪರೈರನಾಕ್ರಾಂತಃ ಸನ್ ಸಹಸ್ರಾ ಸಹಸ್ರಾಣ್ಯಪರಿಮಿತಾನಿ ಗವಾದಿಧನಾನಿ ಸಿಷಾಸತಿ । ಸಾಧಯಿತುಂ ಸಂಭಕ್ತುಂ ವೇಚ್ಛತಿ ॥ ಸನೇಃ ಸನಿ ಸನೀವಂತರ್ಧೇತಿ ವಿಕಲ್ಪನಾದಿಡಭಾವೇ ಜನಸನಖನೇತ್ಯಾತ್ವಂ ॥ ಕೇನೇದಂ ಲಭ್ಯತ ಇತಿ ತತ್ರಾಹ । ಸುನ್ವಾನಾಯೇಂದ್ರಮುದ್ದಿಶ್ಯ ಸೋಮಯಾಗಂ ಕುರ್ವಾಣಾಯ ಯಜಮಾನಾಯ ವಾಯಮಿಂದ್ರ ಆಭುವಂ ಸಮಂತಾದ್ಭವನಶೀಲಂ ತಥಾಭುವಂ ಪುನರ್ಭವನಶೀಲಮತಿಸಮೃದ್ಧಂ ರಯಿಂ ಗವಾದಿರೂಪಂ ಧನಂ ದದಾತಿ । ಪ್ರಯಚ್ಛತಿ । ತಸ್ಮಾತ್ಸುನ್ವಾನಃ ಸಿಷಾಸತೀತ್ಯರ್ಥಃ ॥

|| ಪ್ರತಿಪದಾರ್ಥ ||

(**ಹೇ ಇಂದ್ರ**— ಎಲೈ ಇಂದ್ರನೇ) । **ಸುನ್ವನ್**— (ನಿನಗೋಸ್ಕರ) ಸೋಮರಸವನ್ನು ಸಿದ್ಧಪಡಿಸುವ ಯಜಮಾನನು । **ಕ್ಷಯಂ**— ವಸತಿಯನ್ನು (ಮನೆಯನ್ನು) । **ವನೋತಿ ಹಿ**— (ನಿನ್ನ ಪ್ರಸಾದದಿಂದ) ಪಡೆಯುತ್ತಾನಷ್ಟೆ। **ಸುನ್ವಾನಃ ಹಿ**— ಸೋಮರಸವನ್ನು ಸಿದ್ಧಪಡಿಸುವವನು । **ಪರೀಣಸಃ**— ಸುತ್ತಲೂ ಇರುವ । **ದ್ವಿಷಃ**— ಶತ್ರುಗಳನ್ನು । **ಅವ ಯಜತಿ ಸ್ಮ**— ನಾಶಪಡಿಸುತ್ತಾನೆ । (ಅದೂ ಅಲ್ಲದೇ) **ದೇವಾನಾಂ**— ದೇವತೆಗಳ । **ದ್ವಿಷಃ**— ಶತ್ರುಗಳನ್ನು । **ಅವ (ಯಜತಿ)**— ನಾಶಪಡಿಸುತ್ತಾನೆ । **ಸುನ್ವಾನಾಯ**— (ಇಂದ್ರನನ್ನುದ್ದೇಶಿಸಿ) ಯಾಗ ಮಾಡುವವನಿಗೆ । **ಇಂದ್ರಃ**— ಇಂದ್ರನು । **ಆ ಭುವಂ**— ಸಮೃದ್ಧವಾದ । **ರಯಿಂ**— ಗವಾದಿ ಧನವನ್ನು । **ದದಾತಿ**— ಕೊಡುತ್ತಾನೆ । **ಆ ಭುವಂ**— ಪ್ರಭೂತವಾದ (ಧನವನ್ನು) **ದದಾತಿ**— ಅನುಗ್ರಹಿಸುತ್ತಾನೆ । (ಆದುದರಿಂದ) **ಸುನ್ವಾನಃ ಇತ್**— ಸೋಮಯಾಗ ಮಾಡುವವನೇ । **ವಾಜೀ**— (ನಿನ್ನ ಪ್ರಸಾದದಿಂದ) ಅನ್ನವುಳ್ಳವನೂ । **ಅವೃತಃ**— (ಇತರರಿಂದ) ಅಜೇಯನೂ (ಆಗಿ) । **ಸಹಸ್ರಾ**— ಅಪರಿಮಿತವಾದ (ಗವಾದಿ ಧನವನ್ನು) । **ಸಿಷಾಸತಿ**— ಪಡೆಯಲು ಇಚ್ಛಿಸುತ್ತಾನೆ.

|| ಭಾವಾರ್ಥ ||

ಎಲೈ ಇಂದ್ರನೇ, (ನಿನ್ನನ್ನುದ್ದೇಶಿಸಿ) ಸೋಮರಸವನ್ನು ಸಿದ್ಧಪಡಿಸುವವನು ವಾಸಸ್ಥಳವನ್ನು ಪಡೆಯುತ್ತಾನೆ: ಸೋಮಯಾಗ ಮಾಡುವವನು ತನ್ನ ಸುತ್ತಲೂ ಇರುವ ಶತ್ರುಗಳನ್ನು ನಾಶಮಾಡುತ್ತಾನೆ; (ಮತ್ತು) ದೇವತೆಗಳ ಶತ್ರುಗಳನ್ನೂ ನಾಶಮಾಡುತ್ತಾನೆ. ಸೋಮಯಾಗ ಮಾಡುವವನಿಗೇ ಇಂದ್ರನು ಅಪಾರವಾದ ಗವಾದಿಧನವನ್ನು ಕೊಡುವುದು. ಆದುದರಿಂದಲೇ, ಸೋಮಯಾಗಕರ್ತೃವು, ಎಲೈ ಇಂದ್ರನೇ, (ನಿನ್ನನುಗ್ರಹದಿಂದ) ಅನ್ನವುಳ್ಳವನೂ, (ಇತರರಿಂದ) ಅಜೇಯನೂ ಆಗಿ, ಅಮಿತವಾದ ಧನವನ್ನು ಪಡೆಯಲಿಚ್ಛಿಸುತ್ತಾನೆ.

## English Translation.

Offering libations (the worshipper) obtains a (safe) asylum : offering libations, he destroys his prostrate foes; (he destroys) the enemies of the gods: abounding with food, and unsubdued (by adversaries), he hopes to attain, when offering libations, infinite (riches), for Indra grants to him who offers libations whatever there is (that he desires); he grants (him) accumulated wealth.

॥ ವಿಶೇಷವಿಷಯಗಳು ॥

ಪ್ರಾತಸ್ಸವನ ಕಾಲದಲ್ಲಿ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಪ್ರಸ್ಥಿತಯಾಜ್ಯಾ ಮಂತ್ರವನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ **ವನೋತಿ ಹಿ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಷಷ್ಠಸ್ಯ** ಎಂಬ ಖಂಡದ **ವನೋತಿ ಹಿ ಸುನ್ವನ್ ಕ್ಷಯಂ ಪರೀಣಸೋ ವೋ ಷು ವೋ ಅಸ್ಮದಭಿ ತಾನಿ ಪೌಂಸ್ಯಾ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೮-೧).

ಈ ಋಕ್ಕಿನ ಅರ್ಥವು ವಿಶದವಾಗಿರುವುದು. ಇಂದ್ರನಿಗಾಗಿ ಸೋಮರಸವನ್ನು ಅರ್ಪಿಸುವವನಿಗೆ ಇಂದ್ರನು ಕೊಡುವ ಗವಾದಿಧನಗಳ ಮತ್ತು ಶತ್ರುಜಯಾದಿಗಳ ವಿವರಣೆಯನ್ನು ಋಷಿಯು ಉಪಸಂಹಾರರೂಪವಾಗಿ ಈ ಋಕ್ಕಿನಲ್ಲಿ ಹೇಳಿರುವನು.

**ವನೋತಿ ಹಿ ಸುನ್ವನ್ ಕ್ಷಯಂ**— ಕ್ಷಯಂ ಎಂದರೆ ಸರ್ವೈರ್ವಸ್ತವ್ಯಂ ಗಂತವ್ಯಂ ವಾ ಗೃಹಂ—ಸಮಸ್ತರೂ ವಾಸಮಾಡುವ ಅಥವಾ (ವಿಶ್ರಾಂತಿ ಪಡೆಯುವುದಕ್ಕಾಗಿ) ಹೋಗಬೇಕೆಂದಪೇಕ್ಷಿಸುವ ಗೃಹವೆಂದರ್ಥವು. **ಕ್ಷಿ ನಿವಾಸಗತ್ಯೋಃ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ವಾಸಸ್ಥಾನವನ್ನು ನಿರ್ದೇಶಿಸುವುದು. ಇಂದ್ರನನ್ನುದ್ದೇಶಿಸಿ ಸೋಮಾಭಿಷವನ್ನು ಮಾಡಿ, ಆ ಸೋಮರಸವನ್ನು ಇಂದ್ರನಿಗೆ ಅರ್ಪಿಸುವ ಯಜಮಾನನು (ಅಥವಾ ಪುರುಷನು) ತಾನು ವಾಸಮಾಡಲು ಯೋಗ್ಯವಾದ ಗೃಹವನ್ನು ಪಡೆಯುವನೆಂದಭಿಪ್ರಾಯವು.

**ಪರೀಣಸಃ ಸುನ್ವಾನೋ ಹಿ ಸ್ಮ ಯಜತಿ ಅವ ದ್ವಿಷಃ ದೇವಾನಾಂ ಅವ ದ್ವಿಷಃ— ಕಿಂಚ ಸುನ್ವಾನೋ ಸೋಮಯಾಗಂ ಕುರ್ವಾಣ ಏವ ಪರೀಣಸಃ ಪರಿತೋ ನದ್ಧಾನ್ ಸಂಬದ್ಧಾನ್ ದ್ವಿಷೋ ದ್ವೇಷ್ಟ್ರೀನವ ಯಜತಿ ನಾಶಯತಿ । ನ ಕೇವಲಂ ಯಾಗದ್ವೇಷಿಣಃ ದೇವಾನಾಂ ದ್ವಿಷೋಽಪ್ಯವ ಯಜತಿ ।** ಇದಲ್ಲದೆ ಇಂದ್ರನ ಪ್ರೀತ್ಯರ್ಥವಾಗಿ ಸೋಮಯಾಗವನ್ನು ಮಾಡುವ ಪುರುಷನು ತನ್ನ ಸುತ್ತಲೂ ಇರುವ ತನಗೆ ಶತ್ರುಗಳಾದವರನ್ನೂ, ದೇವತೆಗಳ ಶತ್ರುಗಳನ್ನೂ ಸಹ ನಾಶಮಾಡಲು ಸಮರ್ಥನಾಗುವನು.

**ಸುನ್ವಾನ ಇತ್ಸಿಷಾಸತಿ ಸಹಸ್ರಾ ವಾಜ್ಯವೃತಃ**—ಮತ್ತು ಸೋಮಯಾಗ ಮಾಡುವ ಪುರುಷನು ಇಂದ್ರನ ಅನುಗ್ರಹದಿಂದ ಅನ್ನವುಳ್ಳವನಾಗಿಯೂ, ಶತ್ರುಬಾಧಾರಹಿತನಾಗಿಯೂ ಆಗುವನು. ವಾಜವೆಂದರೆ ಅನ್ನವು ಅಥವಾ ಆಹಾರವು (ನಿ. ೩-೯) ವೃಞ್ ವರಣೇ—ಆವರಿಸು ಎಂಬ ಧಾತುವಿನಿಂದ ನಿಷ್ಪನ್ನವಾದ ವೃತಶಬ್ದಕ್ಕೆ ಆವರಿಸಲ್ಪಟ್ಟ ಎಂದೂ, ಅವೃತಃ ಎಂಬ ಶಬ್ದಕ್ಕೆ ತದ್ವಿರುದ್ಧವಾಗಿ ಶತ್ರುಗಳಿಂದ ಆವರಿಸಲ್ಪಡದಿರುವ, ಮುತ್ತಲ್ಪಡದಿರುವ ಎಂದರೆ, ಶತ್ರುಗಳ ಬಾಧೆಗೊಳಗಾಗದಿರುವ ಎಂದೂ ಅಭಿಪ್ರಾಯವು. ಸಹಸ್ರ ಶಬ್ದಕ್ಕೆ **ಸಹಸ್ರಾಣ್ಯಪರಿಮಿತಾನಿ**— ಬಹಳವಾದ, ಅಸಂಖ್ಯಾತವಾದ ಎಂದರ್ಥವು.

**ಸುನ್ವಾನಾಯ ಇಂದ್ರಃ ದದಾತಿ ಆಭುವಂ ರಯಿಂ ದದಾತಿ**—ಇಂದ್ರನನ್ನುದ್ದೇಶಿಸಿ ಸೋಮಾಭಿಷವವನ್ನು ಮಾಡುವ ಪುರುಷನಿಗೆ ಇಂದ್ರನು ಗೋವುಗಳು, ಗೃಹಗಳು, ಅನ್ನವು ಇವುಗಳ ರೂಪದಲ್ಲಿರುವ ಧನವನ್ನು ಸಮೃದ್ಧಿಯಾಗಿ ಕೊಡುವನು ಎಂದು ಋಷಿಯು ಇಂದ್ರನ ಉದಾರಬುದ್ಧಿಯನ್ನು ಪ್ರಶಂಸೆಮಾಡಿರುವನು.

॥ ವ್ಯಾಕರಣಪ್ರಕ್ರಿಯಾ ॥

**ವನೋತಿ**—ವನ ಸಂಭಕ್ತೌ. ಧಾತು. ಶ್ನುವಿಕರಣ ಲಟ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಸುನ್ವನ್**—ಷುಞ್ ಅಭಿಷವೇ. ಧಾತು. ಲಟಿಗೆ ಶತ್ರಾದೇಶ. ಪ್ರಥಮಾ ಏಕವಚನಾಂತರೂಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. **ಸುನ್ವಾನಃ** ಎಂಬಲ್ಲಿ ಲಟಿಗೆ ಶಾನಚಾದೇಶ. **ಚಿತಃ** (ಪಾ. ಸೂ ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಪರೀಣಸಃ**—ಣಸ ಕೌಟಿಲ್ಯೇ ಧಾತು. ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ನಿಪಾತಸ್ಯ ಚ** (ಪಾ. ಸೂ ೬-೩-೧೩೬) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. **ಉಪಸರ್ಗಾದಸಮಾಸೇऽಪಿ**—(ಪಾ. ಸೂ. ೮-೪-೧೪) ಎಂಬುದರಿಂದ ಣತ್ವ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಜತಿ—ಹಿ ಚ** (ಪಾ. ಸೂ ೮-೧-೩೪) ಎಂಬುದರಿಂದ ನಿಘಾತಸ್ವರ ಬರುತ್ತದೆ. ಶಪ್ ತಿಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ದ್ವಿಷಃ**—ದ್ವಿಷ ಅಪ್ರೀತೌ. ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿತೀಯಾ ಬಹುವಚನಾಂತರೂಪ.

**ಸಿಷಾಸತಿ—ಷಣ ಸಂಭಕ್ತೌ । ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. **ಧಾತೋಃ ಕರ್ಮಣಃ**—(ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನೀವಂತರ್ಧ**—(ಪಾ. ಸೂ. ೭-೨-೪೯) ಎಂಬುದರಿಂದ ಇಡಾಗಮ ವಿಕಲ್ಪಿತವಾದುದರಿಂದ ಇಲ್ಲಿ ಬರುವುದಿಲ್ಲ. **ಜನಸನಖನಾಂ ಸನ್‌ಝಲೋಃ** (ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. **ಸನ್ಯಙೋಃ** ಎಂಬುದರಿಂದ ದ್ವಿತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಹಸ್ರಾ**—ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲುಕ್.

**ಅವೃತಃ**—ವೃಞ್ ವರಣೇ. ಧಾತು. ಕ್ತಪ್ರತ್ಯಯ ನಞ್ ತತ್ಪುರುಷ ಸಮಾಸ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೧-೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದದಾತಿ**—ಡುದಾಞ್ ದಾನೇ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೭ ॥

ಇಲ್ಲಿಗೆ ನೂರ ಮೂವತ್ತಮೂರನೇ ಸೂಕ್ತ ಮುಗಿದುದು



# ನೂರ ಮೂವತ್ತನಾಲ್ಕನೆಯ ಸೂಕ್ತವು

**ವಿಂಶೇಽನುವಾಕೇ ಷಟ್ ಸೂಕ್ತಾನಿ । ತತ್ರಾ ತ್ವಾ ಜುವ ಇತಿ ಷಡೃಚಂ ಪ್ರಥಮಂ ಸೂಕ್ತಂ ಪಾರುಚ್ಛೇಪಮಾತ್ಯಷ್ಟಂ । ತ್ವಂ ನೋ ವಾಯವಿತ್ಯಂತ್ಯಾಷ್ಟಿಶ್ಚತುಃಷಷ್ಟ್ಯಕ್ಷರಾ । ವಾಯವ್ಯಂ ತ್ವಿತ್ಯುಚ್ಯಮಾನತ್ವಾದಿದಮುತ್ತರಂ ಚ ವಾಯುದೇವತ್ಯಂ । ಅತ್ರಾನುಕ್ರಮಣಿಕಾ । ಆ ತ್ವಾ ಷಡ್ವಾಯವ್ಯಂ ತ್ವಂತ್ಯಾಷ್ಟಿರಿತಿ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು— ಈ ಸೂಕ್ತದಿಂದ ಪ್ರಥಮ ಮಂಡಲದಲ್ಲಿ ಇಪ್ಪತ್ತನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಆರು ಸೂಕ್ತಗಳಿರುವವು. ಅವುಗಳಲ್ಲಿ **ಆ ತ್ವಾ ಜುವಃ** ಎಂಬ ಈ ಸೂಕ್ತವು ಮೊದಲನೆಯದು ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಪರುಚ್ಛೇಪನು ಋಷಿಯು. ವಾಯುವು ದೇವತೆಯು. ಅತ್ಯಷ್ಟಿ ಛಂದಸ್ಸು. **ತ್ವಂ ನೋ ವಾಯೋ** ಎಂಬ ಅರವತ್ತನಾಲ್ಕು ಅಕ್ಷರಗಳುಳ್ಳ ಕೊನೆಯ ಋಕ್ಕು ಅಷ್ಟಿ ಎಂಬ ಛಂದಸ್ಸಿನದು. ಅನುಕ್ರಮಣಿಕೆಯಲ್ಲಿ—**ವಾಯವ್ಯಂ ತು** ಎಂದು ಹೇಳಿ ತುಶಬ್ದಪ್ರಯೋಗವಿರುವುದರಿಂದ ಈ ಸೂಕ್ತವೂ ಮುಂದಿನ ಸೂಕ್ತವೂ ವಾಯುದೇವತಾಕವು. ಮತ್ತು **ಆ ತ್ವಾ ಷಡ್ವಾಯವಂ ತ್ವಂತ್ಯಾಷ್ಟಿಃ** ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದು. ವಿನಿಯೋಗವು ಲೈಂಗಿಕವು.

### ಸೂಕ್ತ—೧೩೪

ಮಂಡಲ—೧ ॥ ಅನುವಾಕ—೨೦ ॥ ಸೂಕ್ತ—೧೩೪ ॥
ಅಷ್ಟಕ— ೨ ॥ ಅಧ್ಯಾಯ—೧ ॥ ವರ್ಗ—೨೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ— ಪರುಚ್ಛೇಪೋ ದೈವೋದಾಸಿಃ ॥
॥ ದೇವತಾ—ವಾಯುಃ ॥
॥ ಛಂದಃ—೧–೫ ಅತ್ಯಷ್ಟಿಃ । ೬ ಅಷ್ಟಿಃ ॥

॥ ಸಂಹಿತಾಪಾಠಃ ॥

**ಆ ತ್ವಾ ಜುವೋ ರಾರಹಾಣಾ ಅಭಿ ಪ್ರಯೋ ವಾಯೋ ವಹಂತ್ವಿಹ**
**ಪೂರ್ವಪೀತಯೇ ಸೋಮಸ್ಯ ಪೂರ್ವಪೀತಯೇ ।**
**ಊರ್ಧ್ವಾ ತೇ ಅನು ಸೂನೃತಾ ಮನಸ್ತಿಷ್ಠತು ಜಾನತೀ ।**
**ನಿಯುತ್ವತಾ ರಥೇನಾ ಯಾಹಿ ದಾವನೇ ವಾಯೋ ಮಖಸ್ಯ ದಾವನೇ ॥**

॥ ಪದಪಾಠಃ ॥

ಆ । ತ್ವಾ । ಜುವಃ । ರರಹಾಣಾಃ । ಅಭಿ । ಪ್ರಯಃ । ವಾಯೋ ಇತಿ । ವಹಂತು । ಇಹ ।

ಪೂರ್ವಽಪೀತಯೇ । ಸೋಮಸ್ಯ । ಪೂರ್ವಽಪೀತಯೇ ।

ಊರ್ಧ್ವಾ । ತೇ । ಅನು । ಸೂನೃತಾ । ಮನಃ । ತಿಷ್ಠತು । ಜಾನತೀ ।

ನಿಯುತ್ವತಾ । ರಥೇನ । ಆ । ಯಾಹಿ । ದಾವನೇ । ವಾಯೋ ಇತಿ । ಮಖಸ್ಯ । ದಾವನೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತ್ವಾ ತ್ವಾಂ ಜುವೋ ಗಮನಶೀಲಾ ರರಹಾಣಾಃ ಶೀಘ್ರಗಾಮಿನೋ ಬಲವಂತೋ ವಾ ಸಾಮರ್ಥ್ಯಾನ್ನಿಯುತ್ಸಂಜ್ಞಕಾ ಅಶ್ವಾಃ ॥ ರಹಿ ಗತೌ । ಲಿಟಃ ಕಾನಚ್ । ಛಾಂದಸೋಽನುನಾಸಿಕಲೋಪಃ ॥ ಇಹಾಸ್ಮಿನ್ಯಜ್ಞೇ ಪ್ರಯಶ್ಚರುಪುರೋಡಾಶಾದಿ ಹವಿರ್ಲಕ್ಷಣಮನ್ನಂ ವಹಂತು । ಪ್ರಾಪಯಂತು । ಕಿಮರ್ಥಂ । ಪೂರ್ವಪೀತಯೇ ಪೂರ್ವವತ್ಪಾನಾಯ । ಪುನಃ ಕಿಮರ್ಥಂ । ಪೂರ್ವಪೀತಯ ಇತರದೇವೇಭ್ಯಃ ಪುರಾ ಪಾನಾಯ ॥ ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ ॥ ಕಿಂಚ ಹೇ ವಾಯೋ ತೇ ತವ ಸಂಬಂಧಿ ಮನೋಽನು ಸೂನೃತಾ ಪ್ರಿಯಸತ್ಯಾತ್ಮಿಕಾ ಸ್ತುತಿರೂಪಾಸ್ಮದೀಯಾ ವಾಕ್ ತಿಷ್ಠತು । ಆಶ್ರಿತ್ಯ ಸರ್ವದಾ ವರ್ತತಾಂ । ಹರ್ಷಯತ್ವಿತ್ಯರ್ಥಃ । ಸೂನೃತೇತಿ ವಾಙ್ನಾಮ ಸೂನೃತಾ ಬ್ರಹ್ಮೇತಿ ತನ್ನಾಮಸೂಕ್ತತ್ವಾತ್। ಊರ್ಧ್ವೋನ್ನತಾ ತಥಾ ಜಾನತೀ ತವ ಗುಣಾನ್ವಿಶೇಷೇಣಾವಗಚ್ಛಂತೀ। ಸೋಮಪಾನಾರ್ಥಂ ಸ್ತುತ್ಯರ್ಥಂ ಚ ಹೇ ವಾಯೋ ಮಖಸ್ಯ ಯಜ್ಞಸ್ಯ ದಾವನೇ ದಾತವ್ಯಾಯ ಹವಿಷೇ ತತ್ಸ್ವೀಕಾರಾಯ । ಪುನಃ ಕಿಮರ್ಥಂ । ದಾವನೇಽಸ್ಮಭ್ಯಮಭಿಮತದಾನಾಯ ॥ ಉಭಯತ್ರ ದದಾತೇಃ ಕರ್ಮಣಿ ಭಾವೇ ಚ ಕ್ರಮೇಣೌಣಾದಿಕೋ ವನಿಃ । ಛಾಂದಸ ಉಪಧಾಲೋಪಃ ॥ ನಿಯುತ್ವತಾ ರಥೇನ ನಿಯುದ್ಭಿರ್ಯುಕ್ತೇನ ರಥೇನಾ ಯಾಹಿ । ಆಗಚ್ಛ ॥

॥ ಪ್ರತಿಪದಾರ್ಥ ॥

**ವಾಯೋ**–ಎಲೈ ವಾಯುವೇ । **ತ್ವಾ**—ನಿನ್ನನ್ನು । **ಜುವಃ**—ಗಮನಶೀಲಗಳಾದ ಮತ್ತು । **ರರಹಾಣಾಃ**—ಶೀಘ್ರಗಾಮಿಗಳಾದ (ಬಲಿಷ್ಠವಾದ) ಅಶ್ವಗಳು । **ಇಹ** ಈ ಯಜ್ಞದಲ್ಲಿ । **ಪ್ರಯಃ ಅಭಿ**—ಹವಿರ್ಲಕ್ಷಣಾನ್ನವನ್ನು ಉದ್ದೇಶಿಸಿ । **ಪೂರ್ವಪೀತಯೇ**—ಪೂರ್ವದಂತೆ (ಸೋಮರಸವನ್ನು) ಪಾನಮಾಡಲು । **ಆ ವಹಂತು**—ಕರೆದುಕೊಂಡು ಬರಲಿ । **ಸೋಮಸ್ಯ**—ಸೋಮರಸವನ್ನು । **ಪೂರ್ವಪೀತಯೇ**– (ಇತರ ದೇವತೆಗಳಿಗಿಂತ) ಮುಂಚೆ ಪಾನ ಮಾಡಲು । (**ವಹಂತು**—ನಿನ್ನನ್ನು ಕರತರಲಿ) । (**ಕಿಂಚ**—ಮತ್ತು) । ( **ಹೇ ವಾಯೋ**—ಎಲೈ ವಾಯುವೇ) **ಊರ್ಧ್ವಾ**—ಉತ್ತಮವೂ । **ಜಾನತೀ**--(ನಿನ್ನ ಗುಣಗಳನ್ನು) ತಿಳಿದಿರುವುದೂ । **ಸೂನೃತಾ**—ಪ್ರಿಯವೂ, ಸತ್ಯವೂ, (ಆದ ಸುತ್ತಿ ರೂಪವಾದ ನಮ್ಮ ವಾಕ್ಯವು) । **ತೇ**—ನಿನ್ನ । **ಮನಃ ಅನು**—ಅನಸ್ಸಿಗೆ ಅನುಸಾರವಾಗಿ

**ತಿಷ್ಠತು**— ಇರಲಿ | **ವಾಯೋ**—ಎಲೈ ವಾಯುವೇ | **ಮುಖಸ್ಯ** — ಯಜ್ಞದ (ಲ್ಲಿ) | **ದಾವನೇ**— ದಾತವ್ಯವಾದ (ಹವಿರಾದಿಸ್ವೀಕಾರಕ್ಕೋಸ್ಕರ) ಮತ್ತು | **ದಾವನೇ**—(ನಮಗೆ ಅಭಿಮತವಾದುದನ್ನು) ದಾನಮಾಡುವುದಕ್ಕೋಸ್ಕರ | **ನಿಯುತ್ವತಾ**-ನಿಯುತ್ತುಗಳೆಂಬ (ವಾಯುವಿನ ಅಶ್ವಗಳಿಂದ ಸಹಿತವಾದ | **ರಥೇನ**-ರಥದಿಂದ | **ಆ ಯಾಹಿ**— ಬಾ.

॥ ಭಾವಾರ್ಥ ॥

ಎಲೈ ವಾಯುವೇ, ಗಮನಸ್ವಭಾವವುಳ್ಳವೂ, ಶೀಘ್ರಗಾಮಿಗಳೂ (ಬಲಿಷ್ಠವೂ) ಆದ ಅಶ್ವಗಳು ಈ (ನಮ್ಮ) ಯಜ್ಞದಲ್ಲಿ ಚರುಪುರೋಡಾಶಾದಿಗಳನ್ನು (ಸ್ವೀಕರಿಸಲು) ಮತ್ತು (ಸೋಮರಸವನ್ನು) ಪೂರ್ವದಂತೆ ಪಾನಮಾಡಲು, ಕರತರಲಿ; (ವಾಯುವೇ) ಶ್ರೇಷ್ಠವೂ, (ನಿನ್ನ ಗುಣಗಳನ್ನು) ಚನ್ನಾಗಿ ತಿಳಿದೂ ಇರುವ ನಮ್ಮ ಪ್ರಿಯ ಮತ್ತು ಸತ್ಯವಾದ (ಸ್ತುತಿ) ವಾಕ್ಯಗಳು ನಿನ್ನ ಮನಸ್ಸಿಗೆ ಹರ್ಷದಾಯಕವಾಗಲಿ; ಯಜ್ಞದಲ್ಲಿ ದಾತವ್ಯವಾದ (ಹವಿರಾದಿ ಸ್ವೀಕಾರಕ್ಕೋಸ್ಕರಲ), (ನಮಗೆ ಅಭಿಮತವಾದುದನ್ನು) ದಾನಮಾಡುವುದಕ್ಕೋಸ್ಕರಲೂ, ನಿಯುತ್ತುಗಳೆಂಬ ಅಶ್ವಗಳಿಂದ ಯುಕ್ತವಾದ ರಥದಲ್ಲಿ ಬಾ.

## English Translation

Let your swift coursers, Vayu, bring you quickly hither, that you may be the first to drink; the first (of the gods) to drink of the Soma libation. May our upraised, discriminating, and sincere (praise) be acceptable to your mind : come with your steed-yoked car for (the libation) to be presented to you; come, Vayu, for grantiug (the objects of our worship).

॥ ವಿಶೇಷವಿಷಯಗಳು ॥

**ವಾಯೋ**—

> **ಅಥಾತೋ ಮಧ್ಯಸ್ಥಾನಾ ದೇವತಾಃ | ತಾಸಾಂ ವಾಯುಃ ಪ್ರಥಮಾಗಾಮೀ ಭವತಿ | ವಾಯುಃ | ವಾಯುರ್ವಾತೇರ್ವೇತೇರ್ವಾ ಸ್ಯಾದ್ಗತಿಕರ್ಮಣಃ ಏತೇರಿತಿ ಸ್ಥೌಲಾಷ್ಠೀವಿಃ ; ಅನರ್ಥಕೋ ವಕಾರಃ |**
>
> (ನಿ. ೧೦-೧)

ಪೃಥಿವೀಸ್ಥವಾದ **ಅಗ್ನಿಯ** ಮತ್ತು **ಅಗ್ನ್ಯವಾಂತರ** ಸ್ವರೂಪಗಳನ್ನು ವಿವರಿಸಿ ನಿರುಕ್ತಕಾರರು ಮಧ್ಯಮಲೋಕಸ್ಥವಾದ (ಅಂತರಿಕ್ಷಸ್ಥವಾದ) **ವಾಯುವಿನ** ಮತ್ತು ಇತರ ದೇವತೆಗಳ ಸ್ವರೂಪವನ್ನು ನಿರುಕ್ತದ ೧೦ ಮತ್ತು ೧೧ ನೇ ಅಧ್ಯಾಯಗಳಲ್ಲಿ ಚರ್ಚಿಸಿ ವಿವರಿಸಿದ್ದಾರೆ. ಅಂತರಿಕ್ಷಸ್ಥವಾದ ದೇವತೆಗಳಲ್ಲಿ ವಾಯುವಿಗೆ ಮೊದಲು ಸ್ಥಾನವು (ವಾಯುಃ ಪ್ರಥಮಾಗಾಮೀ ಭವತಿ). ಬೀಸು ಎಂಬರ್ಥವನ್ನು ಕೊಡುವ **ವಾ** ಧಾತುವಿನಿಂದಾಗಲಿ ಅಥವಾ ಸಂಚರಿಸು ಎಂಬರ್ಥವನ್ನು ಕೊಡುವ **ವೀ** ಧಾತುವಿನಿಂದಾಗಲಿ ಈ ಪದದ ನಿಷ್ಪತ್ತಿಯಾಗಿದೆ. ಗತ್ಯರ್ಥಕವಾದ **ಇ** (ಣ್) ಧಾತುವಿನಿಂದ ನಿಷ್ಪನ್ನವಾಗಿದೆಯೆಂದೂ, ಮತ್ತು ವಕಾರಕ್ಕೆ ಅರ್ಥವಿಲ್ಲವೆಂದೂ, **ಸ್ಥೌಲಾಷ್ಠೀವಿ**ಯೆಂಬ ಋಷಿಯ ಮತ

ವೆಂದು ನಿರುಕ್ತಕಾರರು ಆ ಮತವನ್ನೂ ಉದಹರಿಸಿದ್ದಾರೆ. ಮತ್ತು **ವಾಯುವು ಅಂತರಿಕ್ಷಸ್ಥ**ವಾದ ದೇವತೆ ಎಂದು ಸಮರ್ಥಿಸಲು—

**ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ । ತೇಷಾಂ ಪಾಹಿ ಶ್ರುಧೀ ಹವಂ ।**

(ಋ. ಸಂ. ೧-೨-೧)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಸುಸಂಸ್ಕೃತವಾದ ಸೋಮರಸವನ್ನು ಕುಡಿಯುವುದಕ್ಕಾಗಿ ವಾಯುವನ್ನುದ್ದೇಶಿಸಿದ ಪ್ರಾರ್ಥನೆಯನ್ನು ತಿಳಿಸಿ

**ಕಮನ್ಯಂ ಮಧ್ಯಮಾದೇವಮವಕ್ಷ್ಯತ್ ।** (ನಿ. ೧೦–೨)

ಮಧ್ಯಮಲೋಕಸ್ಥವಾದ ಎಂದರೆ ಅಂತರಿಕ್ಷಸ್ಥವಾದ ದೇವತೆಯನ್ನಲ್ಲದೆ ಉಳಿದ ಯಾವ ದೇವತೆಯನ್ನು ತಾನೇ ಋಷಿಯು ಈ ರೀತಿ ಉದ್ದೇಶಿಸಿ ಪ್ರಾರ್ಥಿಸುವನು ಎಂದು ಹೇಳಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ **ವಾಯೋ** ಎಂಬ ಪದದಿಂದ **ಅಂತರಿಕ್ಷಸ್ಥ**ವಾದ ದೇವತೆಗಳಲ್ಲಿ ಪ್ರಥಮಾಗಾಮಿಯಾದ **ವಾಯು**ವನ್ನು ಸಂಬೋಧಿಸಿದೆಯೆಂದು ತಿಳಿಯಬೇಕು.

**ತ್ವಾ ಜುವಃ ಆ ವಹಂತು—ಗಮನಶೀಲಾಃ ಅಶ್ವಾಃ ಆ ವಹಂತು ।** ವೇಗವಾಗಿ ಸಂಚರಿಸತಕ್ಕ ಅಶ್ವಗಳು ಕರೆತರಲಿ ಎಂದು ಪ್ರಾರ್ಥಿಸಿದೆ. **ಜುವಃ** ಎಂಬ ಪದವು ಅಶ್ವದ ಸ್ವರೂಪವನ್ನು ತಿಳಿಸುತ್ತದೆ. **ಗತ್ಯರ್ಥಕ**ವಾದ **ಜು** ಧಾತುವಿನಿಂದ ನಿಷ್ಪನ್ನವಾಗಿ ಗಮನದ ವೇಗವನ್ನು ಸೂಚಿಸುತ್ತದೆ.

**ಮುಮುಕ್ಷ್ವೋ೩ ಮನವೇ ಮಾನವಸ್ಯತೇ ರಘುದ್ರುವಃ ಕೃಷ್ಣಸೀತಾಸ ಊ ಜುವಃ ।**
**ಅಸಮನಾ ಅಜಿರಾಸೋ ರಘುಷ್ಯದೋ ವಾತಜೂತಾ ಉಪ ಯುಜ್ಯಂತ ಆಶವಃ ॥**

(ಋ ಸಂ. ೧-೧೪೦-೪)

ಎಂಬ ಋಕ್ಕಿನಲ್ಲಿ **ಜುವಃ** ಎನ್ನುವ ಪದವು **ಅಗ್ನಿಯ ಜ್ವಾಲೆ**ಗಳಿಗೆ ವಿಶೇಷಣವಾಗಿ ವಹನಕರ್ಮಗಳಲ್ಲಿ ಜ್ವಾಲೆಗಳ ಶೀಘ್ರಕಾರಿತ್ವವನ್ನು ತೋರಿಸುತ್ತದೆ. **ಮನಸ್** ಎಂಬ ಪದದೊಡನೆ ಸೇರಿ **ಮನೋವೇಗ**ವೆಂದರ್ಥವಾಗುತ್ತದೆ.

**ವಾಚಸ್ಪತಿಂ ವಿಶ್ವಕರ್ಮಾಣಮೂತಯೇ ಮನೋಜುವಂ ವಾಜೇ ಅದ್ಯಾ ಹುವೇಮ ।**
**ಸ ನೋ ವಿಶ್ವಾನಿ ಹವನಾನಿ ಜೋಷದ್ವಿಶ್ವಶಂಭೂರವಸೇ ಸಾಧುಕರ್ಮಾ ॥**

(ಋ. ಸಂ. ೧೦-೮೧-೭)

ಎಂಬ ಋಕ್ಕಿನಲ್ಲಿ **ಮನಸ್** ಎಂಬ ಪದದೊಡನೆ ಸೇರಿ ಸಮಸ್ತಪದವಾಗಿ **ಮನೋಜುವಂ ಮನೋವೇಗಗಮನಂ ದೇವಂ** ಮನಸ್ಸಿನ ವೇಗಕ್ಕೆ ಸಮನಾದ ವೇಗವುಳ್ಳ ದೇವನನ್ನು ಎಂದು ಅಲ್ಲೂ ಗಮನದ ವೇಗವನ್ನು ತಿಳಿಸಿದೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲೂ ಸಹ ಅಶ್ವಗಳ ಗಮನದ ವೇಗವನ್ನು ತಿಳಿಸುತ್ತದೆ.

**ರರಹಾಣಾಃ**—ಗತ್ಯರ್ಥಕವಾದ **ರಹಿ** ಧಾತುವಿನಿಂದ ನಿಷ್ಪನ್ನವಾಗಿ **ರಂಹತಾ ಗಚ್ಛಂತಃ** ವೇಗವಾಗಿ ಓಡತಕ್ಕವು ಎಂದು ಅಶ್ವಗಳಿಗೆ ವಿಶೇಷಣವಾಗಿದೆ. ಅದರೆ **ಜುವಃ** ಎಂಬ ವಿಶೇಷಣದಿಂದಲೇ ವೇಗವಾಗಿ ಓಡತಕ್ಕ ಅಶ್ವಗಳ ಸ್ವರೂಪವು ತಿಳಿಸಿರುವುದರಿಂದ ಈ ವಿಶೇಷಣವು ಅನಾವಶ್ಯಕವಾಗಬಹುದೆಂಬ ಶಂಕೆಯಿಂದ ಸಾಯಣರು

ಈ ಪದಕ್ಕೆ ಎರಡು ವಿಧವಾದ ಅರ್ಥಗಳನ್ನು ಮಾಡಿದ್ದಾರೆ. **ಶೀಘ್ರಗಾಮಿನೋ ಬಲವಂತೋ ವಾ ಅಶ್ವಾಃ ।** ಶೀಘ್ರಗಾಮಿಗಳಾದ ಅಥವಾ ಬಲಿಷ್ಠಗಳಾದ ಎಂಬ ಎರಡು ಅರ್ಥಗಳೂ ಸಾಧ್ಯವೆಂದು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಎರಡನೆಯ ಅರ್ಥವು ಉಚಿತವಾಗಿದೆ.

**ಪ್ರಯಃ— ಅಂಧಃ, ವಾಜಃ** ಇತ್ಯಾದ್ಯನ್ನನಾಮಗಳಲ್ಲಿ ಪಠಿಸಿದೆ (೩-೯)

**ಪೂರ್ವಪೀತಯೇ—** ಈ ಪದವು ದ್ವಿರುಕ್ತವಾಗಿದೆ. ಮೊದಲನೆಯ ಸಲ **ಪೂರ್ವವತ್ಪಾನಾಯ** ಹಿಂದಿನ ಯಾಗಕಾಲದಲ್ಲಿ ಪಾನಮಾಡಿದಂತೆ ಎಂದೂ, ಎರಡನೆಯಸಲ **ಇತರದೇವೇಭ್ಯಃ ಪುರಾ ಪಾನಾಯ** ಇತರ ದೇವತೆಗಳಿಗಿಂತಲೂ ಮೊದಲು ಪಾನಮಾಡುವುದಕ್ಕಾಗಿ ಎಂದೂ ಅರ್ಥಮಾಡಿದೆ

**ಊರ್ಧ್ವಾ— ಊರ್ಧ್ವ ಉಚ್ಛ್ರಿತೋ ಭವತಿ ।** (ನಿ. ೭-೧೫) ಉನ್ನತವಾಗಿರುವುದೆಂದರ್ಥ. ಸಾಧಾರಣವಾಗಿ ಭೌತಿಕವಾದ ಔನ್ನತ್ಯವನ್ನು ತೋರಿಸಲು ಈ ಪದವನ್ನು ಪಯೋಗಿಸುತ್ತೇವೆ ಆದರೆ ಪ್ರಕೃತವಾದ ಋಕ್ಕಿನಲ್ಲಿ ಸ್ತುತಿಗೆ ವಿಶೇಷಣವಾಗಿರುವುದರಿಂದ ಉತ್ತಮವಾದ ಎಂದರ್ಥ.

**ಸೂನೃತಾ— ಪ್ರಿಯಸತ್ಯಾತ್ಮಿಕಾ ಸ್ತುತಿರೂಪಾಸ್ಮದೀಯಾ ವಾಕ್ ।** ಪ್ರಿಯವಾದುದೂ ಸತ್ಯಾತ್ಮಕವಾದುದೂ ಆದ ನಮ್ಮ ಸ್ತುತಿಯು ಎಂದು ಸಾಯಣರು ವಿವರಿಸಿದ್ದಾರೆ. ಇದೇ ಋಕ್ಕನ್ನು ವಿವರಿಸುವಾಗ ಈ ಪದಕ್ಕೆ Max Muller ಪಂಡಿತನು ಹೇಳುವ ಅರ್ಥವು ಗಮನಾರ್ಹವಾದುದು.

> Whatever the etymology of **ಸೂನೃತ** may be, in our passage, which describes the morning sacrifice and the arrival of Vayu as the first of the Gods, it can hardly mean anything but ḍown. **ಊರ್ಧ್ವಸ್ಥ** is an expression applied frequentty to the rise of the Dawn or the morning, see iii. 55-14; lii. 61.-3; viii. 45-12. In the last passage is Simply the Dawn.
>
> [Vedic Hymns. ii. p. 446].

**ಸೂನೃತೆ** ಶಬ್ದಕ್ಕೆ ನಿರ್ವಚನವನ್ನು ಯಾವ ರೀತಿಯಲ್ಲಿ ಹೇಳಿದರೂ ಸಹ ಪ್ರಕೃತವಾದ ಋಕ್ಕಿನಲ್ಲಿ ಪ್ರಾತಃಸವನವನ್ನು ವರ್ಣಿಸುವುದೂ ಮತ್ತು ದೇವತೆಗಳಲ್ಲೆಲ್ಲಾ ಪ್ರಥಮವಾಗಿ ಆಗಮಿಸುವ ವಾಯುವನ್ನು ಉದ್ದೇಶಿಸಿರುವುದೂ ಸಹ **ಸೂನೃತೆ** ಶಬ್ದಕ್ಕೆ ಉಷಸ್ಸೆಂದೇ ಅರ್ಥವೆಂದು ಸೂಚಿಸುತ್ತದೆ. ಅಲ್ಲದೆ, **ಊರ್ಧ್ವ** ಪದದೊಂದಿಗೆ **ಸ್ಥಾ** ಧಾತುವಿನಿಂದ ನಿಷ್ಪನ್ನವಾದ **ತಿಷ್ಠಸಿ, ತಸ್ಥೌ** ಇತ್ಯಾದಿ ಕ್ರಿಯಾಪದಗಳ ಸಂಬಂಧವು ಪ್ರಾತಃಕಾಲದಲ್ಲಿ ಉದಯಿಸುವ ಉಷಸ್ಸನ್ನೇ ನಿರ್ದೇಶಿಸುವುದಾಗಿದೆ.

**ಉಷಃ ಪ್ರತೀಚೀ ಭುವನಾನಿ ವಿಶ್ವೋರ್ಧ್ವಾ ತಿಷ್ಠಸ್ಯಮೃತಸ್ಯ ಕೇತುಃ ।**
**ಸಮಾನಮರ್ಥಂ ಚರಣೀಯಮಾನಾ ಚಕ್ರಮಿವ ನವ್ಯಸ್ಯಾ ವವೃತ್ಸ್ವ ॥**

(ಋ. ಸಂ. ೩-೬೧-೩)

ಇತ್ಯಾದಿ ಋಕ್ಕುಗಳಲ್ಲಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಊರ್ಧ್ವಾ ತಿಷ್ಠತು** ಎಂಬುದು **ಉಷಸ್ಸನ್ನು** ನಿರ್ದೇಶಿಸುವುದಾಗಿದೆ. ಆದುದರಿಂದ **ಸೂನೃತಾ** ಎಂಬುದು **ಉಷಸ್ಸಿನ** ಪರ್ಯಾಯಪದವಾಗಿದೆ ಎಂಬುದೇ ಮೇಲಿನ

ಅಭಿಪ್ರಾಯದ ಸಾರಾಂಶವಾಗಿದೆ. ಈ ಅಭಿಪ್ರಾಯವು ಒಂದು ದೃಷ್ಟಿಯಿಂದ ಸಾಧುವಾಗಿದೆ. ಆದರೆ viii. 45-12ನೇ ಋಕ್ಕಿನ ಉದಾಹರಣೆಯು ಪ್ರಕೃತ ಸನ್ನಿವೇಶದಲ್ಲಿ ಅಷ್ಟು ಉಚಿತವಾಗಿ ಕಾಣುವುದಿಲ್ಲ. ಸಾಯಣರ ವಿವರಣೆಯಂತೆ ಉತ್ತಮವಾದುದೂ ನಿನ್ನ ಗುಣಗಳನ್ನು ತಿಳಿದಿರುವುದೂ ಸತ್ಯಾತ್ಮಕವೂ ಪ್ರಿಯರೂಪವಾದುದೂ ಆದ ನಮ್ಮ ಸ್ತುತಿಯು ನಿನ್ನ ಮನಸ್ಸಿಗೆ ಅನುಸಾರವಾಗಿ ಎಂದರೆ ತೃಪ್ತಿದಾಯಕವಾಗಿರಲಿ ಎಂದೂ, Max Muller ನ ವಿವರಣೆಯಂತೆ **ತೇ ಮನಃ ಜಾನತೀ ಸೂನೃತಾ ಊರ್ಧ್ವಾ ಅನುತಿಷ್ಠತು** ನಿನ್ನ ಸ್ವರೂಪವನ್ನು ತಿಳಿದ **ಉಷಸ್ಸು** ನಿನ್ನನ್ನು ಹಿಂಬಾಲಿಸಿ ಉದಯಿಸಲಿ ಎಂದೂ ಅರ್ಥವಾಗುತ್ತದೆ. ಈ ಎರಡರಲ್ಲಿ ಸಂದರ್ಭಕ್ಕೆ ಉಚಿತವಾದ ಅರ್ಥವನ್ನು ವಾಚಕರು ಪರಿಗ್ರಹಿಸಬಹುದು.

**ನಿಯುತ್ವತಾ—ನಿಯುತೋ ವಾಯೋಃ** (ನಿ. ೨-೨೮) ಎಂದು ವಾಯುವಿನ ವಾಹನವನ್ನು ತಿಳಿಸಿದೆ. ವಾಯುವಿನ ವಾಹನದ ಹೆಸರು. ನಿರುಕ್ತಕಾರರು,

> **ಪ್ರ ವಾವೃಜೇ ಸುಪ್ರಯಾ ಬರ್ಹಿರೇಷಾಮಾ ವಿಶ್ಪತೀವ ಬೀರಿಟ ಇಯಾತೇ ।**
> **ವಿಶಾಮಕ್ತೋರುಷಸಃ ಪೂರ್ವಹೂತೌ ವಾಯುಃ ಪೂಷಾ ಸ್ವಸ್ತಯೇ ನಿಯುತ್ವಾನ್ ॥**
>
> (ಋ. ಸಂ. ೭-೩೯-೨)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ನಿಯುತ್ವಾನ್** ಶಬ್ದಕ್ಕೆ ಈ ರೀತಿ ನಿರ್ವಚನವನ್ನು ತೋರಿಸಿದ್ದಾರೆ. **ನಿಯುತೋಽಸ್ಯಾಶ್ವಾಃ । ನಿಯುತೋ ನಿಯಮನಾದ್ವಾ, ನಿಯೋಜನಾದ್ವಾ ।** ನಿಯಮಿಸಲ್ಪಡುವುದು ಅಥವಾ ನೊಗಕ್ಕೆ ಕಟ್ಟಲ್ಪಡುವುದು ಎಂಬರ್ಥವನ್ನು ಕೊಡುವುದರಿಂದ **ನಿಯುತ**ವೆಂದು ಹೆಸರು ಪ್ರಸಿದ್ಧವಾಗಿದೆ (ನಿ. ೫-೨೮). ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅರ್ಥಮಾಡಬೇಕು. **ನಿಯುತ**ವೆಂಬ ಅಶ್ವದೊಡನೆ ಕೂಡಿದ ಎಂದು **ವಾಯುವಿನ ರಥಕ್ಕೆ** ವಿಶೇಷಣವಾಗಿದೆ.

**ನಿಯುತ್ವಾನ್** ಎಂಬ ವಿಶೇಷಣವು ಸಾಧಾರಣವಾಗಿ ವಾಯುವಿನ ಪರವಾಗಿಯೇ ಅಧಿಕವಾಗಿದ್ದರೂ ಸಹ **ಇಂದ್ರ** ಮತ್ತು **ವರುಣ** ದೇವತೆಗಳ ಪರವಾಗಿಯೂ ಕೆಲವೆಡೆಗಳಲ್ಲಿ ಉಪಯೋಗಿಸಲ್ಪಟ್ಟಿದೆ.

> **ವೇತ್ಯಧ್ವರ್ಯುಃ ಪಥಿಭೀ ರಜಿಷ್ಠೈಃ ಪ್ರತಿ ಹವ್ಯಾನಿ ವೀತಯೇ ।**
> **ಅಧಾ ನಿಯುತ್ವ ಉಭಯಸ್ಯ ನಃ ಪಿಬ ಶುಚಿಂ ಸೋಮಂ ಗವಾಶಿರಂ ॥**
>
> (ಋ. ಸಂ. ೮–೧೦೧–೧೦).

ಎಂಬಲ್ಲಿ **ವಾಯುವಿಗೆ** ವಿಶೇಷಣವಾಗಿಯೂ,

> **ಆ ವಾಂ ರಥೋ ನಿಯುತ್ವಾನ್ವಕ್ಷದವಸೇಽಭಿ ಪ್ರಯಾಂಸಿ ಸುಧಿತಾನಿ ವೀತಯೇ ವಾಯೋ ಹವ್ಯಾನಿ ವೀತಯೇ ।**
>
> (ಋ. ಸಂ. ೧–೧೩೫–೪)

ಇತ್ಯಾದಿ ಋಕ್ಕುಗಳಲ್ಲಿ **ಇಂದ್ರ** ಮತ್ತು **ವಾಯು** ಇವರಿಬ್ಬರಿಗೂ ಸೇರಿದ ರಥಗಳನ್ನು ವಹಿಸುವ ಕುದುರೆಗಳೆಂದೂ ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜುವಃ**— ಜು ಎಂಬುದು ಸೌತ್ರಧಾತು. ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಕ್ವಿಪ್ ಪ್ರತ್ಯಯ. ಪ್ರಥಮಾ ಬಹುವಚನಾಂತರೂಪ.

**ರರಹಾಣಾಃ**— ರಹಿ ಗತೌ. ಧಾತು. ಇದಕ್ಕೆ ಲಿಟ್ ಬಂದಾಗ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಅದಕ್ಕೆ ಕಾನಚಾದೇಶ. ಆಗಮ ಶಾಸ್ತ್ರ ಅನಿತ್ಯವಾದುದರಿಂದ ನುಮಾಗಮ ಬರುವುದಿಲ್ಲ. ಅಥವಾ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಹಂತು**— ವಹ ಪ್ರಾಪಣೇ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪೂರ್ವಪೀತಯೇ**— ಪೂರ್ವಾ ಚಾಸೌ ಪೀತಿಶ್ಚ ಪೂರ್ವಪೀತಿಃ. **ಪುಂವತ್ ಕರ್ಮಧಾರಯ**— (ಪಾ. ಸೂ. ೬-೩-೪೨) ಎಂಬುದರಿಂದ ಪೂರ್ವಕ್ಕೆ ಪುಂವದ್ಭಾವ ಬರುತ್ತದೆ. **ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಂ** (ಪಾ. ಸೂ. ೬-೨-೧೦೩-೨) ಎಂಬುದರಿಂದ ಪೂರ್ವಪದ ಅಂತೋದಾತ್ತ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಜಾನತೀ**— ಜ್ಞಾ ಅವಬೋಧನೇ ಧಾತು. ಲಟಿಗೆ ಶತ್ರಾದೇಶ. ಶ್ನಾ ವಿಕರಣ. **ಜ್ಞಾಜನೋರ್ಜಾ** ಎಂಬುದರಿಂದ ಧಾತುವಿಗೆ ಜಾದೇಶ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪ ೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ನುಮ್ ರಹಿತವಾದ ಶತೃವಿನ ಪರದಲ್ಲಿ ಙೀಪ್ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ದಾವನೇ**— ಡುದಾಞ್ ದಾನೇ. ಧಾತು. ಕ್ರಮವಾಗಿ ಇದಕ್ಕೆ ಕರ್ಮಣಿಯಲ್ಲಿಯೂ ಭಾವಾರ್ಥದಲ್ಲಿಯೂ ಔಣಾದಿಕ ವನಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನದಲ್ಲಿ ಛಾಂದಸವಾಗಿ ಉಪಧಾಲೋಪ ಬರುವುದಿಲ್ಲ. ॥ ೧ ॥

॥ ಸಂಹಿತಾಪಾಠಃ ॥

ಮಂದಂತು ತ್ವಾ ಮಂದಿನೋ ವಾಯವಿಂದವೋಽಸ್ಮತ್ಕ್ರಾಣಾಸಃ ಸುಕೃತಾ

ಅಭಿದ್ಯವೋ ಗೋಭಿಃ ಕ್ರಾಣಾ ಅಭಿದ್ಯವಃ ।

ಯದ್ಧ ಕ್ರಾಣಾ ಇರಧ್ಯೈ ದಕ್ಷಂ ಸಚಂತ ಊತಯಃ ।

ಸಧ್ರೀಚೀನಾ ನಿಯುತೋ ದಾವನೇ ಧಿಯ ಉಪ ಬ್ರುವತ ಈಂ ಧಿಯಃ ॥

॥ ಪದಪಾಠಃ ॥

ಮಂದಂತು । ತ್ವಾ । ಮಂದಿನಃ । ವಾಯೋ ಇತಿ । ಇಂದವಃ । ಅಸ್ಮತ್ । ಕ್ರಾಣಾಸಃ । ಸುಽಕೃತಾಃ ।

ಅಭಿಽದ್ಯವಃ । ಗೋಭಿಃ । ಕ್ರಾಣಾಃ । ಅಭಿಽದ್ಯವಃ ।

ಯತ್ । ಹ । ಕ್ರಾಣಾಃ । ಇರಧ್ಯೈ । ದಕ್ಷಂ । ಸಚಂತೇ । ಊತಯಃ ।

ಸಧ್ರೀಚೀನಾಃ । ನಿಽಯುತಃ । ದಾವನೇ । ಧಿಯಃ । ಉಪ । ಬ್ರುವತೇ । ಈಂ । ಧಿಯಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತ್ವಾ ತ್ವಾಮಸ್ಮದಸ್ಮಾಕಂ ಸಂಬಂಧಿನ ಇಂದವಃ ಕ್ಲೇದಯಿತಾರಃ ಸೋಮಾ ಮಂದಂತು । ಮಾದಯಂತು ॥ ವ್ಯತ್ಯಯೇನ ಪರಸ್ಮೈಪದಂ ॥ ಕೀದೃಶಾಃ ಸೋಮಾಃ । ಮಂದಿನೋ ಮಾದಯಿತಾರಃ ಕ್ರಾಣಾಸಃ ಕುರ್ವಾಣಾಃ ಸ್ವಕಾರ್ಯಂ ಹರ್ಷಾದಿಕಂ ಸುಕೃತಾ ಅಭಿಷವದಶಾಪವಿತ್ರ-ಶೋಧನಗ್ರಹಣಾದಿಭಿಃ ಸುಷ್ಠು ಕೃತಾಃ ಅಭಿದ್ಯವೋಽಭಿತೋ ದ್ಯೋತಯಂತಃ ಗೋಭಿರ್ವಾಗ್ಭಿರ್ಮಂತ್ರ-ರೂಪಾಭಿಃ ಕ್ರಾಣಾಃ ಕ್ರಿಯಮಾಣಾ ಹೂಯಮಾನಾಃ । ಯದ್ವಾ । ಗೋಭಿರ್ಗಂತೃಭಿರಾಹವನೀಯಂ ಪ್ರತ್ಯಾನೇತೃಭಿಃ ಕ್ರಾಣಾ ಹೂಯಮಾನಾಃ ॥ ಕರೋತೇಃ ಶಾನಚ್ । ಛಾಂದಸಃ ಶಪೋ ಲುಕ್ ॥ ತಥಾ-ಭಿದ್ಯವೋಽಭಿಗಂತಾರಃ । ಹೇ ವಾಯೋ ಯದ್ಯಸ್ಮಾತ್ಕಾರಣಾತ್ । ಹಶಬ್ದಃ ಪ್ರಸಿದ್ಧೌ । ದಕ್ಷಮಸ್ಮದ್ಯಾಗ-ದೇಶಂ ಪ್ರತಿ ಗಂತುಮುತ್ಸಾಹವಂತಂ ಸಮರ್ಥಯಿತಾರಮಿಾಂ ತ್ವಾಂ ನಿಯುತ ಏತತ್ಸಂಜ್ಞಕಾಸ್ತವಾಶ್ವಾ ದಾವನೇ ದಾನಾಯ ಹವಿಃಸ್ವೀಕಾರನಿಮಿತ್ತಂ ಧಿಯಃ ಕರ್ಮಾಣ್ಯುದ್ದಿಶ್ಯ ಸಚಂತೇ ತ್ವಾಂ ಸಂಗಚ್ಛಂತೇ ಯಾಗದೇಶಂ ವಾ । ಕಿಮರ್ಥಂ । ಇರಧ್ಯೈ ಪ್ರಾಪಯಿತುಂ ಪರಿಚರಿತುಂ ವಾ ॥ ಈರ ಗತೌ । ತುಮರ್ಥೇ ಕಧ್ಯೈಪ್ರತ್ಯಯಃ । ಹ್ರಸ್ವಶ್ಛಾಂದಸಃ ॥ ಇರಧ್ಯತಿಃ ಪರಿಚರಣಕರ್ಮಾ ಇರಧ್ಯತಿ ವಿಧೇಮೇತಿ ತನ್ನಾಮಸೂಕ್ತತ್ವಾತ್ ॥ ಕೀದೃಶಾಸ್ತಾಃ ಕ್ರಾಣಾಃ ಸ್ವವ್ಯಾಪಾರಂ ರಥವಾಹನಾದಿಕಂ ಕುರ್ವಾಣಾಃ । ಕ್ರಾಣಾಃ ಕುರ್ವಾಣಾ ಇತಿ ಯಾಸ್ಕಃ । ನಿ. ೪-೧೯ । ಊತಯೋ ರಕ್ಷಣವತ್ಯಃ ಪ್ರೀತಿಯುಕ್ತಾ ವಾ ತಥಾ ಸಧ್ರೀಚೀನಾಸ್ತ್ವಯಾ ಸಹಾಂಚಂತ್ಯೋ ಗಚ್ಛಂತ್ಯಃ ॥ ಸಹಸ್ಯ ಸಧ್ರಿರ್ವಿಭಾಷಾಂಚೇರಿತಿ ಸ್ವಾರ್ಥೇ ಖಃ । ವ್ಯತ್ಯಯೇನಾಂತೋದಾತ್ತಃ ॥ ಕಿಂಚ ಧಿಯಃ ಕರ್ಮವಂತೋ ಬುದ್ಧಿಮಂತೋ ವಾ ಋತ್ವಿಜೋ ಯಜಮಾನಾ ವೋಪ ಬ್ರುವತೇ । ಉಪೇತ್ಯ ಬ್ರುವಂತಿ ಸ್ವಾಭಿಮತಂ ವಿಜ್ಞಾಪಯಂತಿ ವಾ ॥

॥ ಪ್ರತಿಪದಾರ್ಥ ॥

**ವಾಯೋ**—ಎಲೈ ವಾಯುವೇ । **ಯತ್**—ಯಾವ ಕಾರಣದಿಂದ । **ದಕ್ಷಂ**—(ನಮ್ಮ ಯಾಗಕ್ಕೆ ಬರಲು ಉತ್ಸಾಹಯುಕ್ತನಾದ । **ಈಂ**—ನಿನ್ನನ್ನು । **ಕ್ರಾಣಾಃ**—(ರಥ ವಾಹನಾದಿ ಕಾರ್ಯಗಳನ್ನು) ಮಾಡುವವುಗಳೂ । **ಊತಯಃ**—ರಕ್ಷಣಾಯುಕ್ತವಾದ (ಪ್ರೀತಿಯುಕ್ತವಾದ) ವುಗಳೂ । **ಸಧ್ರೀಚೀನಾಃ**—ನಿನ್ನೊಡನೆ ಹೋಗುವವುಗಳೂ (ಆದ) । **ನಿಯುತಃ**—ನಿಯುತ್ತುಗಳೆಂಬ (ನಿನ್ನ ಅಶ್ವಗಳು) । **ದಾವನೇ**—(ಹವಿರಾದಿ) ದಾನವನ್ನು

(ಸ್ವೀಕರಿಸಲು) | **ಧಿಯಃ**—(ಯಾಗದ ನಾನಾ) ಕರ್ಮಗಳ (ನ್ನುದ್ದೇಶಿಸಿ) | **ಇರಧ್ಯೈ**—(ನಿನ್ನನ್ನು) ಒಯ್ಯಲು (ಪರಿಚರಿಸಲು) | **ಸಚಂತೇ**—(ನಿನ್ನೊಡನೆ) (ಯಾಗಸ್ಥಳವನ್ನು) ಸೇರುತ್ತವೆಯೋ | (**ಕಿಂ ಚ**—ಮತ್ತು) | **ಧಿಯಃ**—ಕರ್ಮರತರಾದ (ಬುದ್ಧಿವಂತರಾದ ಋತ್ವಿಜರು) | **ಉಪ ಬ್ರುವತೇ**—(ನಿನ್ನನ್ನು) ಸಮೀಪಿಸಿ (ಸ್ವಾಭಿಮತವನ್ನು) ಹೇಳಿಕೊಳ್ಳುತ್ತಾರೋ | **ತತ್**— ಆದುದರಿಂದ | (**ವಾಯೋ**—ಎಲೈ ವಾಯುವೇ) | **ತ್ವಾ**—ನಿನ್ನನ್ನು | **ಅಸ್ಮತ್**—ನಮ್ಮ ಸಂಬಂಧವಾದ | **ಮಂದಿನಃ**—ಮದಕಾರಕಗಳೂ | **ಕ್ರಾಣಾಸಃ**—(ತಮ್ಮ ಕಾರ್ಯವಾದ ಹರ್ಷಾದಿಗಳನ್ನು) ಉಂಟುಮಾಡುವವುಗಳೂ | **ಸುಕೃತಾಃ** ಉತ್ತಮ ರೀತಿಯಲ್ಲಿ ಸಿದ್ಧಪಡಿಸಲ್ಪಟ್ಟಿರುವವುಗಳೂ | **ಅಭಿದ್ಯವಃ**— ಪ್ರಕಾಶಿಸುತ್ತಿರುವವುಗಳೂ | **ಗೋಭಿಃ**—(ಮಂತ್ರರೂಪ)ವಾಕ್ಕುಗಳಿಂದ | **ಕ್ರಾಣಾಃ**—(ಶುದ್ಧಿ) ಮಾಡಲ್ಪಟ್ಟಿರುವ (ಪೂತವಾದ) | **ಗೋಭಿಃ**—(ಆಹವನೀಯಾಗ್ನಿ ಸಮೀಪಕ್ಕೆ) ಒಯ್ಯುವವರಿಂದ **ಕ್ರಾಣಾಃ**— ಕರೆಯಲ್ಪಡುತ್ತಿರುವವುಗಳೂ | **ಅಭಿದ್ಯವಃ**—(ಸಕಾಲದಲ್ಲಿ) ಪ್ರವಿಸತಕ್ಕವುಗಳೂ (ಆದ) | **ಇಂದವಃ**—ಕ್ಲೇದನ ಶಕ್ತಿಯುಳ್ಳ ಸೋಮರಸಗಳೂ | **ಮಂದಂತು**—ಸಂತೋಷಪಡಿಸಲಿ |

॥ ಭಾವಾರ್ಥ ॥

ಎಲೈ ವಾಯುವೇ, (ರಥ ವಾಹನಾದಿಕಾರ್ಯಗಳನ್ನು) ಮಾಡತಕ್ಕವೂ, ನಿನ್ನ ಜೊತೆಯಲ್ಲಿಯೇ ಹೋಗತಕ್ಕವೂ, ಆದ ನಿಯುತ್ತುಗಳೆಂಬ ನಿನ್ನ ಪ್ರೀತಿಯ ಅಶ್ವಗಳು, (ನಾವು) ದಾನಮಾಡುವ (ಹವಿರಾದಿಗಳನ್ನು ಸ್ವೀಕರಿಸಲು ಮತ್ತು (ಯಜ್ಞದ) ನಾನಾ ಕರ್ಮಗಳನ್ನು (ಉದ್ದೇಶಿಸಿ) ಯಾಗಭೂಮಿಗೆ (ನಿನ್ನನ್ನು) ಒಯ್ಯಲು, (ನಮ್ಮ ಯಾಗಭೂಮಿಗೆ ಬರಲು) ಉತ್ಸಾಹ ಯುಕ್ತನಾದ ನಿನ್ನನ್ನು ಸೇರುತ್ತವೆ; ಮತ್ತು, ಕರ್ಮರತರಾದ (ಬುದ್ಧಿವಂತರಾದಿ) ಋತ್ವಿಜರು (ನನ್ನನ್ನು) ಸಮೀಪಿಸಿ (ತಮ್ಮ ಅಭಿಮತಗಳನ್ನು) ಹೇಳಿಕೊಳ್ಳುತ್ತಾರೆ. (ಇಂತಹ) ನಿನ್ನನ್ನು (ಎಲೈ ವಾಯುವೇ), ಮದಕಾರಕಗಳೂ, (ತಮ್ಮ ಕಾರ್ಯವಾದ ಹರ್ಷಾದಿಕಾಗಳನ್ನು) ಮಾಡತಕ್ಕವೂ, ಉತ್ತಮ ರೀತಿಯಲ್ಲಿ ಸಿದ್ಧಪಡಿಸಲ್ಪಟ್ಟಿರುವವೂ, ಕಾಂತಿಯುಕ್ತವೂ (ಹೊಳೆಯುತ್ತಿರುವುವೂ) (ಮಂತ್ರರೂಪ) ವಾಕ್ಕುಗಳಿಂದ ಕರೆಯಲ್ಪಡುವವೂ (ಪೂತವಾದವೂ), ಮತ್ತು (ಸಕಾಲದಲ್ಲಿ) ಪ್ರವಿಸುವುವೂ ಆದ ಸೋಮರಸವು (ನಾನಾ ಪಾತ್ರೆಗಳಲ್ಲಿರುವ) ಸೋಮರಸಗಳು ನಿನ್ನನ್ನು ಸಂತೋಷಪಡಿಸಲಿ.

English Translation.

May the exhilarating drops (of the libation) exhilarate you, Vayu, being fitly prepared, doing their office, administered opportunely, rendered efficacious by (our) praises, and flowing (in due season): for which purpose, your docile and active steeds, the Niyuts, attending (your presence, and bring you to the sacrificial hall to accept the offering; to the sacrifice in which the pious (priests) represent their desires.

॥ ವಿಶೇಷವಿಷಯಗಳು ॥

**ವಾಯೋ ತ್ವಾ ಇಂದವಃ ಮಂದಂತು**—ಎಲೈ ವಾಯುವೇ, ನಮ್ಮಿಂದ ಹಿಂಡಲ್ಪಟ್ಟ ಸೋಮರಸಗಳು ನಿನ್ನನ್ನು ತೃಪ್ತಿಪಡಿಸಲಿ ಎಂದು ಪ್ರಾರ್ಥಿಸಿದೆ. **ಮಂದಿನಃ**, **ಕ್ರಾಣಾಸಃ** ಇತ್ಯಾದಿಗಳು **ಇಂದವಃ** ಎಂಬುದಕ್ಕೆ ವಿಶೇಷಣ ಳು

**ಇಂದವಃ – ಉಂದನಶೀಲಾಃ ಸರ್ವಂ ಜಗದಮೃತಮಯೇನ ಕ್ಲೇದಯಿತಾರಃ** | ಸಮಸ್ತ ಜಗತ್ತನ್ನೂ ಎಂದರೆ ದೇವಮಾನವಾದಿ ಸಕಲರನ್ನೂ ಅಮೃತರೂಪವಾದ ರಸದಿಂದ ತೃಪ್ತಿಗೊಳಿಸತಕ್ಕ ಸೋಮ ರಸಗಳೆಂದರ್ಥ.

**ಮಂದಿನಃ—ಮಾದಯಿತಾರಃ** | ಹರ್ಷವನ್ನುಂಟುಮಾಡುವ ಎಂದು ಸೋಮರಸಗಳ ಸ್ವರೂಪವನ್ನು ತಿಳಿಸುತ್ತದೆ. ಈ ವಿಶೇಷಣಕ್ಕೆ ಸಂದರ್ಭಾನುಸಾರವಾದ ಅರ್ಥವನ್ನು ಹೇಳಬೇಕಾಗುತ್ತದೆ.

**ಮಂದೀ ಮಂದತೇಃ ಸ್ತುತಿಕರ್ಮಣಃ** (ನಿ. ೪-೨೪) ಸ್ತುತಿಸು ಎಂಬರ್ಥವನ್ನು ಕೊಡುವ **ಮಂದ್** ಧಾತುವಿನಿಂದ ನಿಷ್ಪನ್ನವಾಗಿ ಸ್ತುತ್ಯಾರ್ಹನಾದ ಎಂಬರ್ಥವನ್ನೂ ಪೂಜ್ಯತೆಯನ್ನೂ ತೋರಿಸುತ್ತದೆ. ನಿರುಕ್ತಕಾರರು,

**ಪ್ರ ಮಂದಿನೇ ಪಿತುಮದರ್ಚತಾ ವಚೋ ಯಃ ಕೃಷ್ಣಗರ್ಭಾ ನಿರಹನ್ನೃಜಿಶ್ವನಾ |**
**ಅವಸ್ಯವೋ ವೃಷಣಂ ವಜ್ರದಕ್ಷಿಣಂ ಮರುತ್ವಂತಂ ಸಖ್ಯಾಯ ಹವಾಮಹೇ ||**
(ಋ. ಸಂ. ೧-೧೦೧-೧)

ಎಂಬ ಋಕ್ಕನ್ನುದಹರಿಸಿ **ಮಂದಿನೇ** ಎಂಬ ಪದಕ್ಕೆ ಮೇಲಿನ ಅರ್ಥವನ್ನು ಹೇಳಿದ್ದಾರೆ. ದುರ್ಗಾಚಾರ್ಯರು **ಮಂದನೀಯಾಯ, ಸ್ತುತ್ಯಾಯ, ಸ್ತುತಿಮತೇ,** ವಾ **ಇಂದ್ರಾಯ** ಎಂದು ವಿವರಿಸಿದ್ದಾರೆ.

**ಮತ್ಸರಃ ಸೋಮೋ ಮಂದತೇಸ್ತೃಪ್ತಿಕರ್ಮಣಃ** (ನಿ ೨-೫) ತೃಪ್ತಿಯನ್ನುಂಟುಮಾಡು ಎಂಬರ್ಥವನ್ನು ಕೊಡುವ **ಮಂದ್** ಧಾತುವಿನಿಂದ ನಿಷ್ಪನ್ನವಾದ **ಮತ್ಸರ** ಶಬ್ದದ ಪ್ರಯೋಗವನ್ನು ಸಹ ವಿವರಿಸಿದ್ದಾರೆ. ಹೀಗೆ **ಮಂದ್** ಧಾತುವಿಗೆ ಮೇಲಿನ ಎರಡರ್ಥಗಳೂ ಇರುವುದರಿಂದಲೇ ನಿರುಕ್ತಕಾರರು—

**ಪ್ರ ವೋ ಮಹೇ ಮಂದಮಾನಾಯಾಂಧಸೋಽರ್ಚಾ ವಿಶ್ವಾನರಾಯ ವಿಶ್ವಾಭುವೇ |**
**ಇಂದ್ರಸ್ಯ ಯಸ್ಯ ಸುಮಖಂ ಸಹೋ ಮಹಿ ಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ ||**
(ಋ. ಸಂ. ೧೦-೫೦-೧)

ಎಂಬ ಋಕ್ಕಿನಲ್ಲಿವ **ಮಂದಮಾನಾಯ** ಎಂಬ ಪದಕ್ಕೆ **ಮೋದಮಾನಾಯ, ಸ್ತೂಯಮಾನಾಯ, ಶಬ್ದಾಯಮಾನಯೇತಿ ವಾ** ಸಂತೋಷಪಡುತ್ತಿರುವ, ಅಥವಾ ಸ್ತುತಿಸಲ್ಪಡುತ್ತಿರುವ, ಅಥವಾ ಪ್ರಾರ್ಥಿಸಲ್ಪಡುತ್ತಿರುವ ಎಂಬ ಪರ್ಯಾಯರೂಪವಾದ ಅರ್ಥಗಳನ್ನು ಹೇಳಿದ್ದಾರೆ. (ನಿ. ೧೧-೯) ಈ ಅರ್ಥಗಳಲ್ಲಿ ಉಪಯೋಗಿಸಿರುವುದನ್ನು ವಿವರಿಸಿರುವುದಲ್ಲದೆ **ಜ್ವಲತಿಕರ್ಮ ನಾಮ**ಗಳಲ್ಲಿಯೂ (ನಿ. ೨-೨೮) **ಅರ್ಚತಿ ಕರ್ಮ** ನಾಮಗಳಲ್ಲಿಯೂ (ನಿ. ೩-೧೯) ಸಹ **ಮಂದ್** ಧಾತುವಿನಿಂದ ನಿಷ್ಪನ್ನವಾದ **ಮಂದತೇ** ಎಂಬ ಪದವನ್ನು ಸೇರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ತೃಪ್ತಿಯನ್ನು ಕೊಡತಕ್ಕ ಸೋಮರಸಗಳು ಎಂದರ್ಥವು.

**ಕ್ರಾಣಾಸಃ, ಕ್ರಾಣಾ** ಎಂದು ಈ ಪದವು ಈ ಋಕ್ಕಿನಲ್ಲಿ ಮೂರು ಸಲ ಉಪಯೋಗಿಸಲ್ಪಟ್ಟಿದೆ. **ಕ್ರಾಣಾಃ ಕುರ್ವಾಣಾಃ** ಎಂದು ನಿರುಕ್ತಕಾರರು ವಿವರಿಸಿದ್ದಾರೆ (ನಿ. ೪-೧೯).

**ಕ್ರಾಣಾಸಃ ಸ್ವಕಾರ್ಯಂ ಹರ್ಷಾದಿಕಂ ಕುರ್ವಾಣಾಃ** ತೃಪ್ತಿಯನ್ನುಂಟುಮಾಡುವುದೆಂದು **ಇಂದವಃ** ಎಂಬುದಕ್ಕೆ ವಿಶೇಷಣವಾಗಿದೆ.

**ಕ್ರಾಣಾಃ** ಎಂಬ ಎರಡನೆಯ ಪದಕ್ಕೆ **ಗೋಭಿಃ ಮಂತ್ರರೂಪಾಭಿಃ ವಾಗ್ಭಿಃ ಕ್ರಿಯಮಾಣಾಃ ಹೂಯಮಾನಾಃ** । ಮಂತ್ರರೂಪಗಳಾದ ಋಕ್ಕುಗಳಿಂದ ಪ್ರಾರ್ಥಿಸಲ್ಪಡತಕ್ಕ ಎಂದು ಇಲ್ಲಿಯೂ **ಇಂದವಃ** ಎಂಬುದಕ್ಕೆ ವಿಶೇಷಣವಾಗಿದೆಯೆಂದು ತೋರಿಸಿದೆ.

**ಕ್ರಾಣಾಃ** ಎಂಬ ಮೂರನೆಯ ಪದಕ್ಕೆ **ಸ್ವವ್ಯಾಪಾರಂ ರಥವಾಹನಾದಿಕಂ ಕುರ್ವಾಣಾಃ** ರಥವನ್ನು ವಹಿಸುವುದೇ ಮುಂತಾದ ತಮ್ಮ ಕರ್ತವ್ಯಗಳನ್ನು ಮಾಡತಕ್ಕ ಎಂದು ಅಶ್ವಗಳಿಗೆ ವಿಶೇಷಣವಾಗಿದೆ.

**ಸಧ್ರೀಚೀನಾಃ—ತ್ವಯಾ ಸಹಾಂಚಂತಃ ಯುಗಪದ್ಗಚ್ಛಂತಃ** । ಒಟ್ಟಿಗೆ ಸೇರಿಕೊಂಡು ಹೋಗತಕ್ಕ ಎಂಬ ಅವಿನಾಭಾವಸಂಬಂಧವನ್ನು ತಿಳಿಸಿದೆ. ವಾಯುವಿಗೂ **ನಿಯುತ್** ರೂಪವಾದ ಅಶ್ವಗಳಿಗೂ ಇರತಕ್ಕ ಅವಿಚ್ಛಿನ್ನವಾದ ಸಾಹಚರ್ಯವನ್ನು ತಿಳಿಸಲು ಸರಿಯಾದ ಪದವಾಗಿದೆ. ಇದೇ ರೀತಿಯಲ್ಲಿ ಇಂದ್ರ ಮತ್ತು ಮರುತ್ತುಗಳಿಗೂ, ಅಶ್ವಿನೀ ದೇವತೆಗಳಿಗೂ ಹೀಗೆಯೇ ಅಹೋರಾತ್ರಗಳಿಗೂ ನಿಯತವಾದ ಸಾಹಚರ್ಯವಿರುವುದರಿಂದ ಈ ಪದದಿಂದಲೇ ಅವರವರ ಸಂಬಂಧವನ್ನು ತಿಳಿಸಿದೆ.

**ಪದೇ ಇವ ನಿಹಿತೇ ದಸ್ಮೇ ಅಂತಸ್ತಯೋರನ್ಯದ್ಗುಹ್ಯಮಾವಿರನ್ಯತ್ ।**
**ಸಧ್ರೀಚೀನಾ ಪಥ್ಯಾ೩ ಸಾ ವಿಷೂಚೀ ಮಹದ್ದೇವಾನಾಮಸುರತ್ವಮೇಕಂ ॥**

(ಋ. ಸಂ ೩–೫೫–೧೫)

ಎಂಬಲ್ಲಿ **ಸಧ್ರೀಚೀನಾ ಪಥ್ಯಾ** ಎಂಬ ಪದಗಳಿಂದ **ಅಹೋರಾತ್ರಗಳು** ಪರಸ್ಪರ ಮಿಳಿತವಾಗಿ ಒಂದುಗೂಡುವ ಕಾಲರೂಪವಾದ ಮಾರ್ಗವೆಂದು ಹೇಳಿದೆ. ಇದು ಒಂದು ವಿಧವಾದ ಸಾಹಚರ್ಯ.

**ಉಭಾ ಉ ನೂನಂ ತದಿದರ್ಥಯೇಥೇ ವಿ ತನ್ವಾಥೇ ಧಿಯೋ ವಸ್ತ್ರಾಪಸೇವ ।**
**ಸಧ್ರೀಚೀನಾ ಯಾತವೇ ಪ್ರೇಮಜೀಗಃ ಸುದಿನೇವ ಪೃಕ್ಷ ಆ ತಂಸಯೇಥೇ ॥**

(೧೦-೧೦೬-೧)

ಎಂಬಲ್ಲಿ ಎಡಬಿಡದೆ ಪರಸ್ಪರವಾಗಿ ಒಟ್ಟಿಗೇ ಇರತಕ್ಕ ಅಶ್ವಿನೀದೇವತೆಗಳ ಅನ್ಯೋನ್ಯ ಸಂಬಂಧವನ್ನೂ ಯಾವಾಗಲೂ ಜೊತೆಯಲ್ಲಿಯೇ ಹೋಗುವುದನ್ನೂ ತಿಳಿಸಿದೆ.

**ಕೃಣೋತ್ಯಸ್ಮೈ ವರಿವೋ ಯ ಇತ್ಥೇಂದ್ರಾಯ ಸೋಮಮುಶತೇ ಸುನೋತಿ ।**
**ಸಧ್ರೀಚೀನೇನ ಮನಸಾವಿವೇನನ್ತಮಿತ್ಸಖಾಯಂ ಕೃಣುತೇ ಸಮತ್ಸು ॥**

(ಋ. ಸಂ. ೪-೨೪-೬)

ಎಂಬಲ್ಲಿ **ಸಧ್ರೀಚೀನೇನ ಮನಸಾ** ಎಂದು ಯಜಮಾನನ ಭಕ್ತಿಯನ್ನು ಸೂಚಿಸಿದೆ. ಅವಿಚ್ಛಿನ್ನವಾಗಿ **ಇಂದ್ರನನ್ನೇ** ಧ್ಯಾನಿಸುತ್ತಾ ಅವನಲ್ಲಿಯೇ ತಲ್ಲೀನವಾಗಿರತಕ್ಕದ್ದೂ, ಅನ್ಯಾಸಕ್ತವಾಗಿಲ್ಲದಿರುವುದೂ ಆದ ಒಂದುಗೂಡಿದ ಮನಸ್ಸಿನಿಂದ ಎಂದು ಯಜಮಾನನಿಗೂ ಪೂಜ್ಯವಾದ ದೇವತೆಗೂ ಇರತಕ್ಕ ಅವಿನಾಭಾವಸಂಬಂಧವನ್ನು ತಿಳಿಸಿದೆ.

**ಇರಧ್ಯೈ—ಪ್ರಾಪಯಿತುಂ ಪರಿಚರಿತುಂ ವಾ** । **ಗತ್ಯರ್ಥಕ**ವಾದ **ಈರ್** ಧಾತುವಿನಿಂದ ನಿಷ್ಪನ್ನವಾಗಿ ಉದ್ದಿಶ್ಯವನ್ನು ತೋರಿಸುತ್ತದೆ. ನಿನ್ನನ್ನು (ವಾಯುವನ್ನು) ಒಯ್ಯುವುದಕ್ಕೆ ಅಥವಾ ಉಪಚರಿಸುವುದಕ್ಕೆ ಎಂದರ್ಥ

ವಾಗುತ್ತದೆ. **ಇರಧ್ಯತಿ, ವಿಧೇಮ** ಇತಿ ತನ್ನಾಮಸು ಉಕ್ತತ್ವಾತ್ **ಇರಧ್ಯತಿಃ ಪರಿಚರಣಕರ್ಮಾ** ಎಂದು ನಿರುಕ್ತದ ಆಧಾರವನ್ನು ತೋರಿಸಿ ಸಾಯಣರು ಈ ಪದಕ್ಕೆ ಪರಿಚರಣ ಎಂದರೆ ಸೇವೆಯೇ ತಾತ್ಪರ್ಯವೆಂದು ವಿವರಿಸಿದ್ದಾರೆ. [ ನಿರುಕ್ತದಲ್ಲಿ **ಇರಜ್ಯತಿ, ವಿಧೇಮ** ಎಂಬ ಪಾಠಾಂತರವೂ ಇದೆ. ] ಈ ಪದದ ಮೂಲಧಾತುವಿನ ವಿಷಯದಲ್ಲಿ ಚರ್ಚಿಸುತ್ತಾ Monier Williams ಎಂಬ ಪಂಡಿತನು, ತನ್ನ Dictionary ಯಲ್ಲಿ The inf **ಇರಧ್ಯೈ** (R. V. I. 134-2) is by B. R. D. (Bohtlingk & Roths, Dictionary) referred to this form, and regarded as a shortened form for **ಇರಧಧ್ಯೈ**; but Sayana refer to **ಈರ್**, ಎಂದಿದ್ದಾನೆ. ಎಂದರೆ, **ರಾಧ-ಸಂಸಿದ್ಧೌ** ಎಂಬ ಧಾತುವಿನಿಂದ ನಿಷ್ಪನ್ನವಾಗಿ **ಇರಧ್ಯೈ=ಅರ್ಚಿಸುವುದಕ್ಕೆ** (ಆರಾಧ್ನೋತಿ-ಅರ್ಚತಿ) ಎಂದಾಗಿದೆಯೆಂದು ಪಂಡಿತನ ಮತ. ಅದಕ್ಕೆ ಅವನು ಕೋಶಾಂತರದ ಆಧಾರವನ್ನು ತೋರಿಸಿದ್ದಾನೆ. ಸಾಯಣರು **ಈರ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ವಿವರಿಸಿದ್ದಾರೆ.

**ಅಭಿದ್ಯವಃ**— ಈ ಪದವು ದ್ವಿರುಕ್ತವಾಗಿದೆ. ಮೊದಲು **ಸುಕೃತಾ ಅಭಿದ್ಯವಃ** ಎಂದರೆ ಪರಿಷ್ಕೃತಗಳಾಗಿರುವುದರಿಂದ ಸುತ್ತಲೂ ಪ್ರವಹಿಸತಕ್ಕವು ಎಂದು **ಇಂದವಃ** ಎಂಬ ಪದಕ್ಕೆ ವಿಶೇಷಣವಾಗಿದೆ. ಎರಡನೆಯದಾಗಿ **ಗೋಭಿಃ ಕ್ರಾಣಾಃ ಅಭಿದ್ಯವಃ** ಮಂತ್ರಗಳಿಂದ ಪೂತವಾದುದರಿಂದ ಸುತ್ತಲೂ ಪ್ರಕಾಶಿಸುವುವೂ ಮತ್ತು ಶಕ್ತಿಯುತವಾದವೂ ಆದ ರಸವಿಶೇಷವೆಂದರ್ಥಮಾಡಿದೆ.

ಅಭಿದ್ಯವಃ ಎಂಬುದು ಒಂದು ಪಾರಿಭಾಷಿಕವಾದ ಪದವಾಗಿದೆ. ಯಾಗಕಾಲವನ್ನಾಗಲಿ, ರಸವನ್ನು ಹಿಂಡತಕ್ಕ ಕಾಲವನ್ನಾಗಲಿ ಸೂಚಿಸುತ್ತದೆ.

**ಪ್ರ ವೋ ವಾಜಾ ಅಭಿದ್ಯವೋ ಹವಿಷ್ಮಂತೋ ಘೃತಾಚ್ಯಾ । ದೇವಾಞ್ಜಿಗಾತಿ ಸುಮ್ನಯುಃ ॥**
(ಋ. ಸಂ. ೩-೨೭-೧)

ಎಂಬಲ್ಲಿ **ಅಭಿತೋ ದ್ಯವೋ ದಿವಸಾ ಯೇಷ್ವಿತ್ಯಭಿದ್ಯವೋಽರ್ಧಮಾಸಾಶ್ಚ ।** ಎಂದು ವಿವರಿಸಿ **ಅಭಿದ್ಯವಃ** ಎಂದರೆ **ಅರ್ಧಮಾಸ**ಗಳೆಂದರ್ಥಮಾಡಿದ್ದಾರೆ

**ಪ್ರ ವೋ ವಾಜಾ ಇತ್ಯನ್ವಾಹ ಮಾಸಾ ವೈ ವಾಜಾ ಅರ್ಧಮಾಸಾ ಅಭಿದ್ಯವಃ ।**
(ತೈ. ಸಂ. ೨-೫-೭-೪)

ಎಂದು ತೈತ್ತಿರೀಯ ಸಂಹಿತೆಯಲ್ಲಿ **ವಾಜ**ವೆಂದರೆ ಮಾಸವೆಂದೂ **ಅಭಿದ್ಯವಃ** ಎಂದರೆ ಅರ್ಧಮಾಸಗಳೆಂದೂ ಸಹ ಮೇಲಿನ ಎಂದರೆ ಋ. ಸಂ. ೩-೨೭-೧ ನೇ ಋಕ್ಕನ್ನುದಹರಿಸಿ ವಿವರಿಸಿದೆ. ಆದರೆ,

**ವಿದ್ಯುದ್ಧಸ್ತಾ ಅಭಿದ್ಯವಃ ಶಿಪ್ರಾಃ ಶೀರ್ಷನ್ ಹಿರಣ್ಯಯೀಃ । ಶುಭ್ರಾ ವ್ಯಂಜತ ಶ್ರಿಯೇ ।**
(ಋ. ಸಂ. ೮-೭-೨೫)

ಇತ್ಯಾದ್ಯನೇಕ ಋಕ್ಕುಗಳಲ್ಲೆಲ್ಲಾ **ಅಭಿಗತದೀಪ್ತಯಃ** ಸುತ್ತಲೂ ಪ್ರಕಾಶಿಸುತ್ತಿರುವ ಎಂಬರ್ಥವಾಗುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಪ್ರಕಾಶಮಾನವಾದ ಸೋಮರಸಗಳು ಎಂದೇ ಅರ್ಥವಾಗುತ್ತದೆ.

**ಗೋಭಿಃ—ಮಂತ್ರರೂಪಾಭಿಃ ವಾಗ್ಭಿಃ ।** ಮಂತ್ರರೂಪವಾದ ವಾಕ್ಕುಗಳಿಂದ ಎಂದರ್ಥ. ಇಳಾ, ಗೌಃ (ನಿ. ೨-೨೩) ಇತ್ಯಾದಿ **ವಾಜ್** ನಾಮಗಳಲ್ಲಿ ಪಠಿತವಾಗಿದೆ **ಗೋ** ಶಬ್ದಕ್ಕೆ ಇರತಕ್ಕ **ಪೃಥಿವ್ಯಾದ್ಯ**ನೇಕವಾದ ಅರ್ಥಗಳನ್ನು ಆಯಾ ಸಂದರ್ಭಗಳಲ್ಲಿ ವಿವರಿಸಲಾಗಿದೆ ಅಥವಾ ವಿವರಿಸಲಾಗುತ್ತದೆ. **ಗೋಭಿಃ ಕ್ರಾಣಾಃ; ಗೋಭಿರ್ಗಂತೃಭಿರಾಹವನೀಯಂ ಪ್ರತ್ಯಾನೇತೃಭಿಃ ಹೂಯಮಾನಾಃ ।** ಆಹವನೀಯಾಗ್ನಿಯ ಸಮೀಪಕ್ಕೆ ಒಯ್ಯತಕ್ಕವರಿಂದ ಕರೆಯಲ್ಪಡುವುವೂ ಆದ **ಇಂದವಃ** ಎಂದು ಇನ್ನೊಂದರ್ಥವನ್ನೂ ಸಹ ಪ್ರಕೃತವಾದ ಋಕ್ಕಿನಲ್ಲಿ ಹೇಳಿದೆ.

**ಧಿಯಃ—ಕರ್ಮವಂತೋ ಬುದ್ಧಿಮಂತೋ ವಾ ಋತ್ವಿಜಃ ಯಜಮಾನಾ ವಾ ।** ಕರ್ಮವಂತರಾದ ಅಥವಾ ಬುದ್ಧಿವಂತರಾದ ಋತ್ವಿಕ್ಕುಗಳು ಅಥವಾ ಯಜಮಾನರು ಎಂದರ್ಥ. **ಧೀ** ಶಬ್ದಕ್ಕೂ ಸಹ ಇರತಕ್ಕ ಅನೇಕಾರ್ಥಗಳನ್ನು ಹಿಂದೆ ತಿಳಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮಂದಂತು**—ಮದಿ ಸ್ತುತಿಮೋದಸ್ವಪ್ನಕಾಂತಿಗತಿಷು ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. **ಇದಿತೋನುಮ್ ಧಾತೋಃ** ಎಂಬುದರಿಂದ ನುಮಾಗಮ. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮಂದಿನಃ**—ಪೂರ್ವೋಕ್ತವಾದ ಧಾತುವಿಗೆ ತಾಚ್ಛೀಲ್ಯಾರ್ಥದಲ್ಲಿ ಣಿನಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಇಂದವಃ—** ಉಂದೀ ಕ್ಲೇದನೇ. ಧಾತು. **ಉಂದೇರಿಚ್ಚಾದೇಃ** (ಉ ಸೂ. ೧-೧೨) ಎಂಬುದರಿಂದ ಉನ್ ಪ್ರತ್ಯಯ. ಆದಿಗೆ ಇತ್ವ ಪ್ರಥಮಾ ಬಹುವಚನಾಂತರೂಪ.

**ಕ್ರಾಣಾಸಃ—** ಡುಕೃಞ್ ಕರಣೇ. ಧಾತು. ಲಟಿಗೆ ಶಾನಚಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಯಣಾದೇಶ. **ಅಟ್ ಕುಪ್ವಾ—**ಎಂಬುದರಿಂದ ನಕಾರಕ್ಕೆ ಣತ್ವ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಇದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಅದಕ್ಕೆ ಅಸುಕಾಗಮ.

**ಸುಕೃತಾಃ—ಗತಿರನಂತರಃ** (ಪಾ. ಸೂ ೬-೨-೪೯) ಎಂಬುದರಿಂದ ಗತಿಗೆ (ಸು) ನಿಘಾತಸ್ವರ ಬರುತ್ತದೆ.

**ಇರಧ್ಯೈ—** ಈರ ಗತೌ. ಧಾತು. ತುಮನರ್ಥ ತೋರುವಾಗ **ತುಮರ್ಥೇ ಸೇಸೇನಸೇ—**(ಪಾ. ಸೂ. ೩-೪-೯) ಎಂಬುದರಿಂದ ಕಧ್ಯೈ ಪ್ರತ್ಯಯ. ಛಾಂದಸವಾಗಿ ಧಾತುವಿಗೆ ಹ್ರಸ್ವ ಬರುತ್ತದೆ. ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸಚಂತೇ**— ಷಚ ಸಮವಾಯೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸಧ್ರೀಚೀನಾಃ**— ಅಂಚು ಗತಿಪೂಜನಯೋಃ ಧಾತು. ಸಹ ಅಂಚತಿ ಎಂದು ವಿವಕ್ಷಾಮಾಡಿದಾಗ **ಋತ್ವಿಕ್ ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. **ಸಹಸ್ಯ ಸಧ್ರಿಃ** (ಪಾ. ಸೂ. ೬-೩-೯೫) ಎಂಬುದರಿಂದ ಉಪಪದಕ್ಕೆ ಸಧ್ರ್ಯಾದೇಶ. **ವಿಭಾಷಾಂ ಚೇರ**—(ಪಾ. ಸೂ. ೫-೪-೮) ಎಂಬುದರಿಂದ ಸ್ವಾರ್ಥದಲ್ಲಿ ಖ ಪ್ರತ್ಯಯ. **ಆಯನೇಯೀನೀ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಈನಾದೇಶ. ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ಬ್ರುವತೇ**— ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಅದಾದಿ ಲಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. ಟಿಗೆ ಏತ್ವ. ಶಪಿಗೆ ಲುಕ್. **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಪ್ರತ್ಯಯಕ್ಕೆ ಅತಾದೇಶ. **ಅಚಿಶ್ನುಧಾತುಭ್ರುವಾಂ**— ಎಂಬುದರಿಂದ ಉವಙಾದೇಶ. ಅತಿಙಂತದ ಪರದಲ್ಲಿರುವುದ ರಿಂದ ನಿಘಾತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ವಾಯುರ್ಯುಂಕ್ತೇ ರೋಹಿತಾ ವಾಯುರರುಣಾ ವಾಯೂ ರಥೇ ಅಜಿರಾ
ಧುರಿ ವೋಳ್ಹವೇ ವಹಿಷ್ಠಾ ಧುರಿ ವೋಳ್ಹವೇ ।
ಪ್ರ ಬೋಧಯಾ ಪುರಂಧಿಂ ಜಾರ ಆ ಸಸತೀಮಿವ ।
ಪ್ರ ಚಕ್ಷಯ ರೋದಸೀ ವಾಸಯೋಷಸಃ ಶ್ರವಸೇ ವಾಸಯೋಷಸಃ ॥ ೩ ॥

॥ ಪದಪಾಠಃ ॥

ವಾಯುಃ । ಯುಂಕ್ತೇ । ರೋಹಿತಾ । ವಾಯುಃ । ಅರುಣಾ । ವಾಯುಃ । ರಥೇ । ಅಜಿರಾ । ಧುರಿ ।
ವೋಳ್ಹವೇ । ವಹಿಷ್ಠಾ । ಧುರಿ । ವೋಳ್ಹವೇ ।
ಪ್ರ । ಬೋಧಯ । ಪುರಂऽಧಿಂ । ಜಾರಃ । ಆ । ಸಸತೀಂऽಇವ ।
ಪ್ರ । ಚಕ್ಷಯ । ರೋದಸೀ ಇತಿ । ವಾಸಯ । ಉಷಸಃ । ಶ್ರವಸೇ । ವಾಸಯ । ಉಷಸಃ ॥ ೩ ॥

॥ ಸಾಯಣಭಾಷ್ಯಂ ॥

ಅಯಂ ವಾಯೂ ರೋಹಿತಾ ರೋಹಿತವರ್ಣಾವಶ್ವೌ ಧುರಿ ಧಾರಣಪ್ರದೇಶೇ ರಥಸ್ಯಾಗ್ರಭಾಗೇ ಯದ್ವಾ ಭಾರವಹನೇ ಯುಂಕ್ತೇ । ಕ್ವಚಿದ್ಯೋಜಯತಿ । ತಥಾ ಕ್ವಚಿದರುಣಾರುಣವರ್ಣೌ ಧುರಿ ಯುಂಕ್ತೇ । ತಥಾಜಿರಾಜಿರೌ ಗಮನಶೀಲೌ ವರ್ಣವಿಶೇಷಯುಕ್ತೌ ಕದಾಚಿದ್ಯುಂಕ್ತೇ । ಯದ್ವಾ । ಏತದುಭಯತ್ರ ಸಂಬಧ್ಯತೇ । ಕಿಮರ್ಥಂ । ಯುಂಕ್ತ ಇತಿ ತದಾಹ । ವೋಳ್ಹವೇ ಧುರಂ ವೋಢುಂ ಭಾರವಹನಾಯ । ಕಿಂಚ ವಹಿಷ್ಠಾ ವಹಿಷ್ಠಾವತಿಶಯೇನ ವೋಢಾರಾವಶ್ವೌ ॥ ವೋಢೃಶಬ್ದಾದಿಷ್ಠನಿ ತುರಿಷ್ಠೇಮೇಯಃಸ್ವಿತಿ ತೃಲೋಪಃ । ಟಿತ್ವಾದಿಕಮಸಿದ್ಧತ್ವಾನ್ನಿವರ್ತತೇ । ದ್ವಿವಚನಸ್ಯಾಕಾರಃ ॥ ಧುರಿ ವೋಳ್ಹವೇ ಮಹದ್ಭಾರಂ ವೋಢುಂ ಮಹತಿ ಭಾರೇ ವೋಢವ್ಯೇ ಸತಿ । ಪುನಃಪುನರ್ವಾಯುಗ್ರಹಣಮಶ್ವಯೋಜನವಚನಂ ಚಾತಿಶೀಘ್ರಮಾಗಚ್ಛತೀತಿ ಜ್ಞಾಪನಾರ್ಥಂ । ಇದಾನೀಂ ಪ್ರತ್ಯಕ್ಷೇಣಾಹ । ಹೇ ವಾಯೋ ಪುರಂಧಿಂ ಬಹುಪ್ರಜ್ಞಂ ಸಾಮರ್ಥ್ಯಾದ್ಯಜಮಾನಮಿತಿ ಗಮ್ಯತೇ । ಪುರಂಧಿರ್ಬಹುಧೀರಿತಿ ಯಾಸ್ಕಃ। ನಿ. ೬-೧೩। ತಂ ಪ್ರ ಬೋಧಯ। ರಥೇನ ಶೀಘ್ರಮಾಗತ್ಯ ಪ್ರಜ್ಞಾಪಯ ಹವಿಃಸ್ವೀಕಾರಾಯೇತಿ ಭಾವಃ । ತತ್ರ ದೃಷ್ಟಾಂತಃ । ಜಾರಃ ಪಾರದಾರಿಕ ಆ ಸಸತೀಮುಪಪತ್ಯಾಗಮನಧ್ಯಾನೇನೇಷತ್ಸ್ವಪಂತೀಂ ಪುರಂಧಿಮಿವ ಪ್ರಕೃಷ್ಟಶರೀರಧಾರಿಣೀಂ ಯೋಷಿತಮಿವ । ತಾಂ ಯಥಾ ಸ್ವಸಂಕೇತೇನ ಸ ಪ್ರಬೋಧಯತಿ ತದ್ವತ್ತ್ವಮಪಿ ಕರ್ಮಣ್ಯಗ್ರೇಣೇಷತ್ಸ್ವಪಂತಂ ಯಜಮಾನಂ ಪ್ರ ಬೋಧಯ । ಕಿಂಚ ತದರ್ಥಂ ರೋದಸೀ ದ್ಯಾವಾಪೃಥಿವ್ಯೌ ಪ್ರ ಚಕ್ಷಯ । ಪ್ರಕರ್ಷೇಣ ಪ್ರಖ್ಯಾಪಯ । ಪ್ರಕಾಶಯೇತ್ಯರ್ಥಃ । ತತ್ಪ್ರಕಾಶಾರ್ಥಮುಷಸೋ ವಾಸಯ । ಉಷಃಕಾಲಾನಪಿ ಯಥಾವತ್ಸ್ಥಾಪಯ । ಪ್ರಭಾತಂ ಕುರ್ವಿತ್ಯರ್ಥಃ । ಪುನಸ್ತದೇವ ಪ್ರಾರ್ಥ್ಯತೇ । ಶ್ರವಸೇ । ಶ್ರವ ಇತ್ಯನ್ನನಾಮ । ತವ ಹವೀರೂಪಾನ್ನಸ್ವೀಕಾರಾಯೋಷಸೋ ವಾಸಯ ॥

॥ ಪ್ರತಿಪದಾರ್ಥ ॥

**ವಾಯುಃ**—ವಾಯುವು । **ರೋಹಿತಾ**—ಲೋಹಿತವರ್ಣವಾದ ಎರಡು (ಅಶ್ವಗಳನ್ನು) । **ರಥೇ**—ರಥದ ಅಗ್ರಭಾಗದಲ್ಲಿ । **ಧುರಿ**—ನೊಗಕ್ಕೆ (ಭಾರವನ್ನು ಹೊರುವುದಕ್ಕೋಸ್ಕರ) । **ಯುಂಕ್ತೇ**—ಹೂಡುತ್ತಾನೆ । (**ಕದಾಚಿತ್**—ಒಂದೊಂದುಸಲ) । **ವಾಯುಃ**—ವಾಯುವು । **ಅರುಣಾ** - ಅರುಣವರ್ಣವಾದ (ಅಶ್ವಗಳನ್ನು) । (**ಯುಂಕ್ತೇ**—ಹೂಡುತ್ತಾನೆ) । (**ತಥಾ**—ಹಾಗೆಯೇ) । **ಅಜಿರಾ**—ಗಮನಶೀಲಗಳಾದ ಅಶ್ವಗಳನ್ನು । **ವೋಳ್ಹವೇ**-(ಭಾರವನ್ನು) ವಹಿಸುವುದಕ್ಕೋಸ್ಕರ । (**ಯುಂಕ್ತೇ**-ನಿಯೋಜಿಸುತ್ತಾನೆ) । **ವಾಯುಃ**-ವಾಯುವು । **ವಹಿಷ್ಠಾ**—ಭಾರ ಹೊರುವುದರಲ್ಲಿ ಸಮರ್ಥವಾದ ಅಶ್ವಗಳನ್ನು । **ಧುರಿ ವೋಳ್ಹವೇ** (ಹೆಚ್ಚು) ಭಾರವನ್ನು ಹೊರುವುದಕ್ಕೆ । (**ಯುಂಕ್ತೇ**—ಹೂಡುತ್ತಾನೆ । (**ಹೇ**) **ವಾಯೋ**—ಎಲೈ ವಾಯುವೇ । **ಜಾರಃ**—ಜಾರಪುರುಷನು । **ಆ ಸಸತೀಂ** - (ವಿಟಪುರುಷನ ಆಗಮನ ನಿರೀಕ್ಷೆಯಿಂದ) ಸ್ವಲ್ಪ ನಿದ್ರೆಮಾಡುತ್ತಿರುವ । **ಪುರಂಧಿಂ ಇವ**—ಪ್ರಕೃಷ್ಟ ಶರೀರಳಾದ ಸ್ತ್ರೀಯನ್ನು (ಎಳಿಸುವಂತೆ) । [**ಆ ಸಸತೀಂ**—(ಅಜಾಗರೂಕತೆಯಿಂದ) ಈಷನ್ನಿದ್ರಿತನಾದ । **ಪುರಂಧಿಂ**—ಬಹು ಪ್ರಜ್ಞನಾದ ಯಜಮಾನನನ್ನು] । **ಪ್ರ ಬೋಧಯ**—ಎಚ್ಚರಗೊಳಿಸು । (ಮತ್ತೂ ಅದಕ್ಕೋಸ್ಕರಲೇ)

**ರೋದಸೀ**—ದ್ಯಾವಾಪೃಥಿವಿಗಳನ್ನೂ | **ಪ್ರ ಚಕ್ಷಯ**—ಚೆನ್ನಾಗಿ ಪ್ರಕಾಶಗೊಳಿಸು | **ಉಷಸಃ**—ಉಷಃಕಾಲಗಳನ್ನೂ | **ವಾಸಯ**—ವ್ಯಕ್ತಗೊಳಿಸು | **ಶ್ರವಸೇ**—ಹವೀರೂಪಾನ್ನದ ಸ್ವೀಕಾರಕ್ಕೋಸ್ಕರ | **ಉಷಸಃ**—ಉಷಸ್ಸುಗಳನ್ನು | **ವಾಸಯ**—ಪ್ರಕಟಗೊಳಿಸು.

॥ ಭಾವಾರ್ಥ ॥

ವಾಯುವು (ತನ್ನ) ಎರಡು ಲೋಹಿತಾಶ್ವಗಳನ್ನು ರಥಕ್ಕೆ ಹೂಡುತ್ತಾನೆ; (ಒಂದೊಂದುಸಲ) ಅರುಣಾಶ್ವಗಳನ್ನು ಹೂಡುತ್ತಾನೆ; ಗಮನಶೀಲಗಳೂ, ಭಾರವಾಹಿಗಳೂ ಆದ ಅಶ್ವಗಳನ್ನೂ ಹೂಡುತ್ತಾನೆ. ಎಲೈ ವಾಯುವೇ, ಜಾರಪುರುಷನು ಈಷನ್ನಿದ್ರಿತಳಾದ ಜಾರಸ್ತ್ರೀಯನ್ನು ಎಚ್ಚರಗೊಳಿಸುವಂತೆ, ಜ್ಞಾನಿಯಾದ ಯಜಮಾನನನ್ನು (ಅವನ) ಅಜಾಗರೂಕತೆಯಿಂದ ಜಾಗೃತನನ್ನಾಗಿ ಮಾಡು; ಭೂಮ್ಯಾಕಾಶಗಳನ್ನು ಪ್ರಕಾಶಗೊಳಿಸು; ಹವಿರಾದಿ ಸ್ವೀಕಾರಕ್ಕೋಸ್ಕರ ಉಷಸ್ಸು ಪ್ರಕಾಶಿಸುವಂತೆ ಮಾಡು.

English Translation.

Vayu yokes to his car his two red horses; Vayu (yokes) his purple steeds: Vayu (yokes) his two unwearied (coursers) to his car to bear their burthen; for most able are they to bear the burthen. Arouse, Vayu, the intelligent (sacrificer), as a gallant (awakens) his sleeping mistress: summon heaven and earth; light up the dawn; light up the dawn, (to receive) your sacrificial food.

॥ ವಿಶೇಷವಿಷಯಗಳು ॥

**ವಾಯುಃ ರೋಹಿತಾ ಧುರಿ ಯುಂಕ್ತೇ; ಅರುಣಾ ಯುಂಕ್ತೇ; ಅಜಿರಾ ಯುಂಕ್ತೇ** | ಇತ್ಯಾದಿ ವಾಕ್ಯಗಳಿಂದ ವಾಯುವಿನ ರಥಕ್ಕೆ ಕಟ್ಟತಕ್ಕ ಅಶ್ವಗಳನ್ನು ವರ್ಣಿಸಿದೆ. **ರೋಹಿತೋಽಗ್ನೇಃ; ಅರುಣ್ಯೋ ಗಾವ ಉಷಸಾಂ** ಎಂದು **ಅಗ್ನಿಯ** ವಾಹನವನ್ನು **ರೋಹಿತ**ವೆಂದೂ, ಉಷಸ್ಸಿನ ವಾಹನಗಳನ್ನು **ಅರುಣ್ಯಃ** ಎಂದೂ ನಿರ್ದೇಶಿಸಿರುವುದರಿಂದ (ನಿ. ೨-೨೮) ಅವು ವಾಯುವಿನ ರಥಕ್ಕೆ ಹೇಗೆ ಕಟ್ಟಲ್ಪಡುತ್ತವೆ ಎಂಬ ಸಂಶಯಕ್ಕೂ ಇಲ್ಲಿ ಆಸ್ಪದವಿದೆ. ಆದರೆ **ವಾಯು**ವಿಗೂ ಅಗ್ನಿಗೂ ಮತ್ತು **ವಾಯು**ವಿಗೂ **ಉಷಸ್ಸಿಗೂ** ಇರತಕ್ಕ ಸಂಬಂಧವನು ತಿಳಿದರೆ ಈ ಸಂಶಯಕ್ಕೆ ಅವಕಾಶವಿಲ್ಲ.

ಇದೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ **ಸೂನೃತಾ** ಎಂಬ ಶಬ್ದದ ಅರ್ಥವನ್ನು ವಿವರಿಸುವಾಗ ಅದು **ಉಷಸ್ಸಿಗೆ** ಪರ್ಯಾಯವೆಂದು ಹೇಳುವ ಒಂದು ಮತವಿದೆಯೆಂದು ತಿಳಿಸಿದೆ. ಮತ್ತು **ಪೂರ್ವಪೀತಯೇ** ಎಂಬ ಪದಕ್ಕೂ ಸಹ ಇತರ ದೇವತೆಗಳಿಗಿಂತಲೂ ಪೂರ್ವಭಾವಿಯಾಗಿಯೇ ಪಾನಮಾಡುವುದಕ್ಕಾಗಿ ಎಂದಿರುವುದರಿಂದಲೂ, ಪ್ರಕೃತವಾದ ಋಕ್ಕಿನಲ್ಲಿಯೇ ಉಷಸ್ಸನ್ನು ಪ್ರಕಾಶಪಡಿಸು ಎಂದು ಪ್ರಾರ್ಥಿತನಾಗಿರುವುದರಿಂದಲೂ ಸಹ ವಾಯುವು ಉಷೋದೇವತೆಯೊಡನೆ ನಿಕಟವಾದ ಸಂಬಂಧವನ್ನಿಟ್ಟುಕೊಂಡು ತತ್ಪೂರ್ವಭಾವಿಯಾಗಿ ಅವಿರ್ಭವಿಸುವುದರಿಂದಲೂ ಸಹ ಉಷಸ್ಸಿನ ವಾಹನದ ವರ್ಣಕ್ಕೂ, ವಾಯುವಿನ ವಾಹನದ ವರ್ಣಕ್ಕೂ ಸಮಾನತೆಯನ್ನು ತೋರಿಸಿದೆ.

ಇದರಂತೆಯೇ ಜಗತ್ತಿನ ಯಾಗಾದಿ ಕರ್ಮಗಳೆಲ್ಲವೂ ವಾಯುವಿನ ಉದಯಾನಂತರವೇ ನೆರವೇರಿಸಲ್ಪಟ್ಟು ಅಗ್ನಿಯ ಆಹುತಿಯು ನೆರವೇರಲ್ಪಡುವುದರಿಂದ ಪ್ರಭಾತ ಸೂರ್ಯನ ರೂಪದಲ್ಲಿರುವ **ಅಗ್ನಿಯ** ವಾಹನದ ವರ್ಣವೂ ಸಹ ವಾಯುವಿನ ಅಶ್ವದ ವರ್ಣಕ್ಕೆ ಸಮಾನವಾಗಿದೆಯೆಂದು ಹೇಳಬಹುದು. **ವಾಯುವಿನ** ಆಗಮನದ ಕಾಲದಲ್ಲಿ ಅವನ ಅಶ್ವಗಳಿಗೆ ಈ ಎಲ್ಲಾ ವರ್ಣವೂ ಇದ್ದಿತೆಂದೂ ಹೇಳಬಹುದು.

**ಅಜಿರಾ**— **ಅಜಿರ**ಶಬ್ದವು ಕ್ಷಿಪ್ರನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಶೀಘ್ರವಾಗಿ ಸಂಚರಿಸುವುದು ಎಂಬರ್ಥವನ್ನು ತೋರಿಸುತ್ತದೆ. ಸಾಧಾರಣವಾಗಿ ಈ ಪದವನ್ನು ವೇಗಗಾಮಿಯಾದ ಶತ್ರುವಿಗೂ, ವೇಗಗಾಮಿಯಾದ ಅಶ್ವಕ್ಕೂ, ಯಜ್ಞಾಭಿಮುಖವಾಗಿ ವೇಗವಾಗಿ ಹೋಗತಕ್ಕ ದೇವತೆಗಳಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿವೆ. ಈ ವಿಶೇಷಣದಿಂದ ವಾಯುವಿನ ಅಶ್ವಗಳ ಗಮನಶಕ್ತಿಯು ಸೂಚಿತವಾಗುತ್ತದೆ. ಇದರೊಂದಿಗೆ,

**ವೋಳ್ಹವೇ**—ಎಂಬ ಪದದಿಂದ **ಅಶ್ವಗಳ** ಭಾರವನ್ನು ಹೊರುವ ಶಕ್ತಿಯನ್ನೂ ತಿಳಿಸಿದೆ. ಹೀಗೆ ನಾನಾ ವರ್ಣಗಳಿಂದ ರಂಜಿತವಾದವೂ, ವೇಗವಾಗಿ ಓಡುವ ಶಕ್ತಿಯುಳ್ಳವೂ, ಭಾರವನ್ನು ವಹಿಸುವ ಸಾಮರ್ಥ್ಯವುಳ್ಳವೂ ಎಂಬ ವರ್ಣನೆಗಳಿಂದ ಅಶ್ವಗಳ ಸೌಂದರ್ಯವೂ ಶಕ್ತಿಯೂ ವಿಶದವಾಗಿ ತಿಳಿಯುತ್ತವೆ. **ವಹಿಷ್ಠಾ** ಎಂಬ ವಿಶೇಷಣದಿಂದ ಶಕ್ತ್ಯತಿಶಯವೂ ತೋರುತ್ತದೆ.

**ಧುರಿ**—ಎಂಬ ಪದವು ದ್ವಿರುಕ್ತವಾಗಿದೆ. ಮೊದಲನೆಯಸಲ ರಥದ ಅಗ್ರಭಾಗ ಎಂದರೆ ನೊಗವನ್ನು ಕಟ್ಟುವ ಸ್ಥಳವೆಂದೂ, ಎರಡನೆಯ ಪದಕ್ಕೆ **ಮಹದ್ಭಾರಂ** ಅಧಿಕವಾದ ಭಾರವೆಂದೂ ಅರ್ಥ.

**ಪುರಂಧಿಂ ಪ್ರಬೋಧಯ**— ಪುರಂಧಿಯನ್ನು ಎಚ್ಚರಗೊಳಿಸು ಎಂದರ್ಥಮಾಡಿ **ಪುರಂಧಿ** ಯೆಂದರೆ ಯಾರು, ಆ ಹೆಸರು ಏತಕ್ಕೆ ಬಂದಿತು ಎಂದು ಆ ಪದದ ನಿರ್ವಚನದ ಪೂರ್ವಕವಾಗಿ ವಿವರಿಸಿದ್ದಾರೆ. **ಪುರಂಧಿಂ ಬಹುಪ್ರಜ್ಞಂ ಸಾಮರ್ಥ್ಯಾದ್ಯಜಮಾನಮಿತಿ ಗಮ್ಯತೇ । ಪುರಂಧಿರ್ಬಹುಧೀರಿತಿ ಯಾಸ್ಕಃ ।** ಬಹಳವಾದ ಪ್ರಜ್ಞೆಯುಳ್ಳವನೆಂದು ಯಾಸ್ಕರು ವಿವರಣೆಯನ್ನುದಹರಿಸಿ ಅಂತಹ ಪ್ರಜ್ಞೆಯಿರುವ ಯಜಮಾನನನ್ನು ಎಂದು ಮೊದಲನೆಯ ಅನ್ವಯಕ್ಕೆ ಅರ್ಥಮಾಡಿ ಅನಂತರ ಈ ಪದವನ್ನು ಉಪಮಾವಾಚಕವಾಗಿಯೂ ಅರ್ಥಮಾಡಿರುವರು. ಈ ಎರಡನೆಯ ಅನ್ವಯದ ಪ್ರಕಾರ **ಪುರಂಧಿಂ (ಇವ) ಪ್ರಕೃಷ್ಟಶರೀರಧಾರಿಣೀಂ ಯೋಷಿತಮಿವ ತಾಂ ಯಥಾ ಸ್ವಸಂಕೇತೇನ ಜಾರಃ ಪ್ರಬೋಧಯತಿ ತದ್ವತ್ತ್ವಮಪಿ ಯಜಮಾನಂ ಪ್ರಬೋಧಯ ।** ಪುಷ್ಟವಾಗಿ ಬೆಳೆದ ಶರೀರವುಳ್ಳ ಹೆಂಗಸನ್ನು ಜಾರನು ಎಚ್ಚರಗೊಳಿಸುವಂತೆ, ವಾಯುವು ಯಜಮಾನನನ್ನು ಎಚ್ಚರಗೊಳಿಸುವ ರೀತಿಯನ್ನು ತಿಳಿಸಿದೆ.

ಈ ಪದವು **ಪ್ರಭೂತ, ಪೌಷ್ಕಳ್ಯ, ಸಮೃದ್ಧ**— ಎಂಬರ್ಥವನ್ನೇ ಎಲ್ಲಾ ಕಡೆಯೂ ಸೂಚಿಸಿದರೂ ಸಹ ಇದರ ಪ್ರಯೋಗವು ಅನೇಕ ಕಡೆಗಳಲ್ಲಿರುವುದರಿಂದ ಆಯಾ ಸಂದರ್ಭಾನುಸಾರವಾಗಿ ಅರ್ಥವನ್ನು ವಿವರಿಸಬೇಕಾಗುತ್ತದೆಂದು ನಿರುಕ್ತಕಾರರ ವಾಕ್ಯದಿಂದ ತಿಳಿಯುತ್ತದೆ.

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।**
**ತಾಁ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ॥**

(ಋ. ಸಂ. ೭-೩೯-೪)

ಎಂಬ ಋಕ್ಕಿನಲ್ಲಿರುವ **ಪುರಂಧಿಂ** ಎಂಬ ಪದದ ಅರ್ಥವನ್ನು ವಿವರಿಸುವಾಗ,

**ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ । ಇಂದ್ರ ಇತ್ಯ-ಪರಂ ಸ ಬಹುಕರ್ಮತಮಃ ಪುರಾಂ ಚ ದಾರಯಿತೃತಮಃ । ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ ॥** (ನಿ. ೬–೧೩.)

ಸಮೃದ್ಧವಾದ ಬುದ್ಧಿಯುಳ್ಳವನು ಎಂದು **ಪುರಂಧಿ** ಶಬ್ದದ ಅರ್ಥ. ಆದರೆ ಅಂತಹವನು ಯಾರು ಎಂಬ ಪ್ರಶ್ನೆ. ಉದಾಹೃತವಾದ ಋಕ್ಕಿನಲ್ಲಿ **ಭಗ** ಶಬ್ದವು ಇದರ ಪೂರ್ವಭಾವಿಯಾಗಿರುವುದರಿಂದ ಅದರ ವಿಶೇಷಣವೆಂದು ಕೆಲವರ ಮತ. **ಧೀ** ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ **ಪುರಂಧಿ** ಯೆಂದರೆ ನಾನಾವಿಧವಾದ ಕರ್ಮವುಳ್ಳವನು ಎಂದಾಗಲಿ ಅಥವಾ ಶತ್ರುಪಟ್ಟಣಗಳನ್ನು ಸೀಳುವವನು ಎಂದಾಗಲಿ ಅರ್ಥವಾಗುವುದರಿಂದ **ಇಂದ್ರನಿಗೆ** ವಿಶೇಷಣವೆಂದು ಕೆಲವರ ಮತ. ಅಥವಾ **'ಇಮಾ ಮೂ ನು ಕವಿತಮಸ್ಯ ಮಾಯಾಂ'** (ಋ. ಸಂ. ೫-೮೫-೬) ಇತ್ಯಾದಿ ಋಕ್ಕುಗಳಲ್ಲಿ **ವರುಣನ** ಶ್ರೇಷ್ಠವಾದ ಪ್ರಜ್ಞೆಯನ್ನು ಸ್ತುತಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ (ನಿರುಕ್ತಕಾರರು ಉದಹರಿಸಿರುವ ೭–೩೯–೪) ಅವನ ಪ್ರಜ್ಞೆಯನ್ನು ವರ್ಣಿಸುತ್ತಾ **ವರುಣನಿಗೆ** ಪರ್ಯಾಯಪದವಾಗಿರಬಹುದೆಂದು ಇನ್ನು ಕೆಲವರ ಮತ ಎಂದು ಅಭಿಪ್ರಾಯಭೇದಗಳನ್ನು ನಿರುಕ್ತಕಾರರು ತಿಳಿಸಿದ್ದಾರೆ. ಯಜ್ಞಕರ್ತರ ವಿಷಯದಲ್ಲಿ ದೇವತೆಗಳು ತೋರಿಸುವ ಔದಾರ್ಯದ ಆಧಿಕ್ಯವನ್ನು ತೋರಿಸುವಾಗಲೂ, ಯಜಮಾನರು ದೇವತೆಗಳಿಗೆ ಅರ್ಪಿಸತಕ್ಕ ಹವಿರಾದಿಗಳ ಸಮೃದ್ಧಿಯನ್ನು ಸೂಚಿಸುವಾಗಲೂ ಈ ಪದದ ಪ್ರಯೋಗವಿರುವುದೆಂದು ನಿರುಕ್ತಕಾರರು ಇನ್ನೂ ಕೆಲವು ಉದಾಹರಣೆಗಳಿಂದ ತಿಳಿಸುತ್ತಾರೆ.

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾँ ಅಯುತಂ ಚ ಸಾಕಂ ।**
**ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥**

(ಋ. ಸಂ. ೪-೨೬-೭.)

ಎಂಬ ಋಕ್ಕಿನಲ್ಲಿರುವ ಪದಕ್ಕೆ ದುರ್ಗಾಚಾರ್ಯರು (ನಿ. ೧೧-೨.) **ಪುರಂಧಿಃ ಬಹು ನಃ ಧನಸ್ಯ ದಾತಾ** ಅಧಿಕವಾಗಿ ಧನದಾತನೆಂದೂ, ಸಾಯಣರು **ಬಹುಕರ್ಮಾ** ಎಂದು ಅರ್ಥಮಾಡಿದ್ದಾರೆ. ಈ ಪದವು ಇಲ್ಲಿ ಇಂದ್ರನಿಗೆ ವಿಶೇಷಣವಾಗಿದೆ. ಉದಾರಿಯೆಂಬುದರಲ್ಲಿ ತಾತ್ಪರ್ಯ.

**ನೃಧೂತೋ ಅದ್ರಿಷುತೋ ಬರ್ಹಿಷಿ ಪ್ರಿಯಃ ಪತಿರ್ಗವಾಂ ಪ್ರದಿವ ಇಂದುರ್ಋತ್ವಿಯಃ ।**
**ಪುರಂಧಿವಾನ್ಮನುಷೋ ಯಜ್ಞಸಾಧನಃ ಶುಚಿರ್ಧಿಯಾ ಪವತೇ ಸೋಮ ಇಂದ್ರ ತೇ ॥**

(ಋ. ಸಂ. ೯-೭೨-೪)

ಎಂಬ ಋಕ್ಕಿನಲ್ಲಿ **ಬಹುಕರ್ಮವಾನ್ ಮನುಷಃ** ದೇವತೆಗಳ ತೃಪ್ತ್ಯರ್ಥವಾಗಿ ನಾನಾವಿಧವಾದ ಕರ್ಮಗಳುಳ್ಳ ಮಾನವನ ಎಂದರ್ಥಮಾಡಿದೆ.

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ ।**
**ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥**

(ಋ. ಸಂ. ೧೦-೬೫-೧೩)

ಎಂಬಲ್ಲಿ ಈ ಪದಕ್ಕೆ ನಿರುಕ್ತಕಾರರು (ನಿ. ೧೨-೩೦) **ಪುರಂಧ್ಯಾ ಸ್ತುತ್ಯಾ ಪ್ರಯುಕ್ತಾನಿ** ಬಹುವಿಧವಾದ ಸ್ತುತಿಗಳಿಂದ ಕೂಡಿಕೊಂಡಿರತಕ್ಕ **ವಚಾಂಸಿ** ವಚನಗಳನ್ನು ಎಂದರ್ಥ ಮಾಡಿದ್ದಾರೆ. **ಬಹುವಿಧಯಾ ಪ್ರಜ್ಞಯಾ**

**ಸಹಿತಾ ಸರಸ್ವತೀ** । ಬಹುವಿಧವಾದ ಪ್ರಜ್ಞೆಯಿಂದ ಕೂಡಿದ ಎಂದು **ಸರಸ್ವತಿಗೆ** ವಿಶೇಷಣವೆಂದು ತಿಳಿಸಿದ್ದಾರೆ. ಆದರೆ ದುರ್ಗಾಚಾರ್ಯರು ಮಾಡಿರುವ **ಬಹುಧಾತ್ರ್ಯೈ ಮಾಧ್ಯಮಿಕಯಾ ವಾಚಾ** ಎಂಬ ವಿವರಣೆಯಿಂದ (ನಿ. ೧೨-೩೦) **ಸರಸ್ವತೀ** ಸದೃಶವಾದ ಒಂದು ದೇವತಾವಿಶೇಷವೆಂದೂ ತಿಳಿಯುತ್ತದೆ. ಇದರಂತೆಯೇ,

**ಶಂ ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ ।**
**ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂ ನೋ ಅರ್ಯಮಾ ಪುರುಜಾತೋ ಅಸ್ತು ॥**

(ಋ. ಸಂ. ೭-೩೫-೨)

ಇತ್ಯಾದಿ ಋಕ್ಕುಗಳಲ್ಲಿ ಪುರಂಧಿಯೇ ಪ್ರತ್ಯೇಕವಾದ ದೇವತೆಯೆಂದು ತಿಳಿಯುತ್ತದೆ. ಸಾಯಣರೂ ಸಹ ಈ ಋಕ್ಕಿನಲ್ಲಿರುವ ಭಗಾದಿಪದಗಳಿಗೆ ವಿಶೇಷಣವನ್ನಾಗಿ ಮಾಡಿಲ್ಲ. ಮತ್ತು,

**ದೇವೋ ಭಗಃ ಸವಿತಾ ರಾಯೋ ಅಂಶ ಇಂದ್ರೋ ವೃತ್ರಸ್ಯ ಸಂಜಿತೋ ಧನಾನಾಂ ।**
**ಋಭುಕ್ಷಾ ವಾಜ ಉತ ವಾ ಪುರಂಧಿರವಂತು ನೋ ಅಮೃತಾಸಸ್ತುರಾಸಃ ॥**

(ಋ. ಸಂ. ೫-೪೨-೫)

ಎಂಬಲ್ಲಿ ವಿಭ್ವನಿಗೆ ಪರ್ಯಾಯ ಪದವಾಗಿದೆ.

**ಪುರಾಣೀ ದೇವಿ ಯುವತಿಃ ಪುರಂಧಿರನು ವ್ರತಂ ಚರಸಿ ವಿಶ್ವವಾರೇ ।**

(ಋ. ಸಂ. ೩-೬೧-೧)

ಇತ್ಯಾದಿ ಕಡೆಗಳಲ್ಲಿ ಉಷಸ್ಸಿಗೆ ವಿಶೇಷಣವಾಗಿದೆ. ಬಹುಸ್ತೋತ್ರವತಿಯೆಂದರ್ಥ.

ಅನೇಕ ಕಡೆಗಳಲ್ಲಿ ಈ ಪದವು ಪತ್ನಿಯ ಪರವಾಗಿಯೂ ಅಥವಾ ಸ್ತ್ರೀಸಾಮಾನ್ಯದ ಪರವಾಗಿಯೂ ಉಪಯೋಗಿಸಲ್ಪಟ್ಟು ಬಂಜೆಯರಲ್ಲದೇ ಸಂತಾನಸಂಪತ್ತನ್ನು ಪಡೆಯಲು ಅರ್ಹರೂ ಪುಷ್ಟರೂ ಆದ ಸ್ತ್ರೀಯರೆಂದರ್ಥವನ್ನು ಕೊಡುತ್ತದೆ.

**ಅಗ್ನಿಃ ಸಪ್ತಿಂ ವಾಜಂಭರಂ ದದಾತ್ಯಗ್ನಿರ್ವೀರಂ ಶ್ರುತ್ಯಂ ಕರ್ಮನಿಃಷ್ಠಾಂ ।**
**ಅಗ್ನೀ ರೋದಸೀ ವಿ ಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥**

(ಋ. ಸಂ. ೧೦.೮೦-೧)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಪ್ರಸವಸಮರ್ಥಳಾದ ಪತ್ನಿಯೆಂದರ್ಥವಾಗುತ್ತದೆ. ಅಥವಾ ರೂಪವತಿಯೆಂದಾದರೂ ಆಗಬಹುದು. ಪ್ರಕೃತವಾದ ಋಕ್ಕಿನಲ್ಲಿ (I. 134-3) ವಿವರಿಸಿರುವಂತೆ ಸರ್ವಾಂಗಸೌಷ್ಠವವುಳ್ಳ ರೂಪವತಿಯಾದ ಸ್ತ್ರೀಯೆಂದೂ ಸಹ ಅನೇಕ ಕಡೆಗಳಲ್ಲಿ ಅರ್ಥಮಾಡಿದೆ. ಈ ಎರಡರ್ಥಗಳನ್ನೂ ವಿವರಿಸಿರುವುದನ್ನು ಸಾಯಣಭಾಷ್ಯದಲ್ಲಿಯೇ ಗಮನಿಸಬಹುದು.

**ಪುರಂಧಿರ್ಯೋಷೇತ್ಯಾಹ । ಯೋಷಿತ್ಯೇವ ರೂಪಂ ದಧಾತಿ । ತಸ್ಮಾತ್ ಸ್ತ್ರೀ ಯುವತಿಃ ಪ್ರಿಯಾ ಭಾವುಕಾ ॥**

(ತೈ ಬ್ರಾ. ೩-೮-೧೩-೨)

ಎಂಬ ಬ್ರಾಹ್ಮಣವಾಕ್ಯದಲ್ಲಿ **ಪುರಂಧಿ** ಶಬ್ದಕ್ಕೆ **ಪುರಂ ಸರ್ವಗುಣಸಂಪೂರ್ಣಂ ಶರೀರಂ ಧಾರಯತೀತಿ ಪುರಂಧಿಃ** ಎಂದು ಶರೀರದ ಲಾವಣ್ಯವುಳ್ಳ ಸ್ತ್ರೀಯೆಂದು ಅರ್ಥವಾಗುವುದಾಗಿ ತಿಳಿಸಿದ್ದಾರೆ. ಇದೇ ಪದಕ್ಕೆ **ತೈತ್ತಿರೀಯ**

**ಸಂಹಿತೆಯಲ್ಲಿ** (೭-೫-೧೮) **ಪುರವಾಸಿಭಿರ್ಧ್ಯಾಯತ ಇತಿ ಪುರಂಧಿಃ ।** ಪಟ್ಟಣಿಗರಿಂದ ಧ್ಯಾನಿಸಲ್ಪಡುತ್ತಾಳೆ ಆದ್ದರಿಂದ ಈ ಹೆಸರು ಎಂದು ವಿವರಿಸಿ ಆಕರ್ಷಕವಾದ ಶರೀರವನ್ನುಳ್ಳವಳು ಎಂದು ತಿಳಿಸಿದ್ದಾರೆ.

Max Miller ಎಂಬ ಪಂಡಿತನು ಉಷಸ್ಸಿನ ಪರವಾಗಿಯೇ ಅರ್ಥಮಾಡಿದ್ದಾನೆ. ಪುರಂಧಿ may have meant originally door-keeper from **ಪುಃ** and **ಧಿ** like **ಇಷುಧಿ** and **ಶೇವಧಿ** whatever it meant etymologically, in our passing where she is to be woke by the wind in the morning, (cf. I. 137.2) it is again a Characteristic epithet of the dawn ಎಂದಿದ್ದಾನೆ. [Vadic Hymus. II. P. 447]

ಈ ಆಧಾರಗಳಿಂದ ಪ್ರಕೃತವಾದಋಕ್ಕಿನಲ್ಲಿ **ಪುರಧಿಂ ಇವ** ಎಂದು ಉಪಮಾವಾಚಕವಾಗಿ ತೆಗೆದುಕೊಂಡರೆ ಆಗ ರೂಪವತಿಯಾದ ಸ್ತ್ರೀಯೆಂದೂ, ಮುಖ್ಯವಾಕ್ಯದಲ್ಲಿ **ಪುರಂಧಿಂ ಪ್ರಬೋಧಯ** ಎಂದು ಕರ್ಮವಾಚಕವಾಗಿ ಅನ್ವಯವನ್ನು ಮಾಡಿದರೆ ಆಗ ಬಹಳವಾದ **ಪ್ರಜ್ಞೆ**ಯುಳ್ಳ ಅಥವಾ **ಕರ್ಮ**ಗಳುಳ್ಳ ಯಜಮಾನನೆಂದೂ ಅರ್ಥವಾಗುತ್ತದೆ.

ಇಲ್ಲಿ ವಾಯುವನ್ನು ಜಾರನಿಗೂ ಯಜಮಾನ ರೂಪಿಯಾದ ಪುರಂಧಿಯನ್ನು ಸುಂದರಸ್ತ್ರೀರೂಪಿಣಿಯಾದ ವೇಶ್ಯಾಸ್ತ್ರೀಗೂ ಹೋಲಿಸಿದೆ. ಸುಂದರಸ್ತ್ರೀಯ ಪ್ರೀತಿಯು ಜಾರನ ಸಂತೋಷಕ್ಕೆ ಹೇಗೆ ಹೇತುವಾಗಿದೆಯೋ ಹಾಗೆಯೇ ಯಜಮಾನನ ಪ್ರಬೋಧವೂ ಸಹ ಹವಿರಾದಿದಾನಗಳಿಗೆ ಸಿದ್ಧಪಡಿಸುವುದರಿಂದ **ವಾಯ್ವಾದಿ** ದೇವತೆಗಳ ಸಂತೋಷಕ್ಕೆ ಹೇತುವಾಗಿದೆ. ಆದುದರಿಂದ ಅವನನ್ನು ಎಬ್ಬಿಸು ಎಂದು ಪ್ರಾರ್ಥಿಸಿದೆ.

**ಸಸತೀಂ ಇವ**—ಈ ಪದವನ್ನೂ ಸಹ **ಪುರಂಧಿ** ಶಬ್ದಕ್ಕೆ ವಿಶೇಷಣವನ್ನಾಗಿ ಮಾಡಿ ಇದಕ್ಕೆ ಎರಡು ವಿಧವಾದ ಅನ್ವಯವನ್ನು ಮಾಡಬೇಕು. ಮೊದಲನೆಯದಾಗಿ **ಉಪಪತ್ಯಾಗಮನಧ್ಯಾನೇನ ಈಷತ್ಸ್ವಪಂತೀಂ** । ಉಪಪತಿಯ ಆಗಮನವನ್ನು ನಿರೀಕ್ಷಿಸಿಕೊಂಡು ಕೊಂಚ ನಿದ್ರಾವಸ್ಥೆಯನ್ನು ಹೊಂದಿರುವ ವೇಶ್ಯೆಯನ್ನು ಜಾರನು ಎಬ್ಬಿಸುವಂತೆ **ಕರ್ಮವ್ಯಗ್ರೇಣೇಷತ್ಸ್ವಪಂತಂ ಯಜಮಾನಂ ಪ್ರಬೋಧಯ** ಕರ್ಮನಿಷ್ಠೆಯಿಂದ ಕೊಂಚ ಮಟ್ಟಿಗೆ ನಿದ್ರಿಸುತ್ತಿರುವ ಯಜಮಾನನನ್ನು ಎಬ್ಬಿಸು ಎಂದು ತಾತ್ಪರ್ಯ.

**ರೋದಸೀ ಪ್ರಚಕ್ಷಯ—ದ್ಯಾವಾಪೃಥಿವ್ಯೌ ಪ್ರಕರ್ಷೇಣ ಪ್ರಖ್ಯಾಪಯ ಪ್ರಕಾಶಯೇತ್ಯರ್ಥ ।** ಃ ದ್ಯಾವಾಪೃಥಿವಿಗಳನ್ನು ಪ್ರಕಾಶಿಸುವಂತೆ ಮಾಡು ಅದಕ್ಕಾಗಿ ಉಷಸ್ಸನ್ನೂ ತತ್ಸ್ಥಾನದಲ್ಲಿ ಸ್ಥಾಪಿಸು ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಯುಂಕ್ತೇ**—ಯುಜಿರ್ ಯೋಗೇ. ಧಾತು. ಅಂತರ್ಭಾವಿತಣ್ಯರ್ಥಕವಾಗಿರುವಾಗ ಲಟ್. ಪ್ರಥಮ ಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ರೋಹಿತಾ**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ ಧಾತು. **ರುಹೇರಶ್ಚ ಲೋ ವಾ** (ಉ. ಸೂ. ೩-೩೭೪) ಎಂಬುದರಿಂದ ಇತನ್ ಪ್ರತ್ಯಯ. ರೇಫಕ್ಕೆ ಲತ್ವ ವಿಕಲ್ಪ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನಪರವಾದಾಗ **ಸುಪಾಂ**

**ಸುಲುಕ್**– (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. ಅರುಣಾ ಎಂಬಲ್ಲಿಯೂ ಹೀಗೆಯೇ ಆಕಾರಾದೇಶ.

**ಅಜಿರಾ**—ಅಜ ಗತಿಕ್ಷೇಪಣಯೋಃ ಧಾತುಃ. **ಅಜಿರ ಶಿಶಿರಶಿ**—(ಉ. ಸೂ. ೧-೫೩) ಎಂಬುದರಿಂದ **ಕಿರಚ್** ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಹಿಂದಿನಂತೆ ವಿಭಕ್ತಿಗೆ ಆಕಾರಾದೇಶ.

**ಧುರಿ—ಸಾವೇಕಾಚಸ್ತೃತೀಯಾದಿಃ**—ಎಂಬುದರಿಂದ ಸಪ್ತಮೀ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವೋಢವೇ**—ವಹ ಪ್ರಾಪಣೇ. ಧಾತು. ತುಮನರ್ಥ ತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಝಷಸ್ತಥೋ**—ಎಂಬುದರಿಂದ ತಕಾರಕ್ಕೆ ಧತ್ವ ಬಂದಾಗ ಷ್ಟುತ್ವದಿಂದ ಅದಕ್ಕೆ ಢತ್ವ. **ಸಹಿವಹೋರೋದ-ವರ್ಣಸ್ಯ** (ಪಾ. ಸೂ. ೬-೩-೧೧೨) ಎಂಬುದರಿಂದ ಧಾತುವಿನ ಅಕಾರಕ್ಕೆ ಓತ್ವ. **ಢೋಢೇ ಲೋಪಃ** ಎಂಬುದರಿಂದ ಪೂರ್ವಢಕಾರಕ್ಕೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಹಿಷ್ಠಾ**—ವಹ ಧಾತುವಿಗೆ ತೃಚ್ ಬಂದಾಗ ವೋಢೃ ಎಂದು ರೂಪವಾಗುತ್ತದೆ. ತೃಜಂತದ ಮೇಲೆ **ತುಶ್ಛಂದಸಿ** ಎಂಬುದರಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ತುರಿಷ್ಠೇ ಮೇಯಃಸು** ಎಂಬುದರಿಂದ ತೃಚಿಗೆ ಲೋಪ. ಆಗ ಹಿಂದೆ ಬಂದಿರುವ ಢತ್ವಾದಿಗಳು ಅಸಿದ್ಧವಾಗುವುದರಿಂದ ಅವುಗಳೂ ಹೋಗುತ್ತವೆ. ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನ ಪರವಾದಾಗ ಅದಕ್ಕೆ ಹಿಂದಿನಂತೆ ಆಕಾರಾದೇಶ.

**ಬೋಧಯ**—ಬುಧ ಅವಗಮನೇ ಧಾತು. ಣಿಜಂತದ ಮೇಲೆ ಲೋಟ್. ಮಧ್ಯಪುರುಷ ಏಕವಚನಾಂತರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪುರಂಧಿಂ—ಪೃಷೋದರಾದೀನಿ ಯಥೋಪದಿಷ್ಟಂ** ಎಂಬುದರಿಂದ ಅಭಿಮತರೂಪವೂ ಸ್ವರವೂ ಸಿದ್ಧವಾಗುತ್ತದೆ.

**ಜಾರಃ**—ಜ್ಯಾಷ್ ವಯೋಹಾನೌ ಧಾತು. **ದಾರಜಾರೌ ಕರ್ತರಿ ಣಿಲುಕ್ ಚ** (ಪಾ. ಸೂ. ೩-೩-೨೦-೧) ಎಂಬುದರಿಂದ ನಿಪಾತಿತವಾಗಿದೆ.

**ಸಸತೀಂ**—ಷಸ ಸ್ವಪ್ನೇ ಧಾತು. ಅದಾದಿ. ಲಡರ್ಥದಲ್ಲಿ ಶತೃ ಪ್ರತ್ಯಯ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಜೀಪ್. **ಶತುರನುಮೋನ**—(ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಚಕ್ಷಯ**—ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. ಇಲ್ಲಿ ಪ್ರಕಾಶಾರ್ಥದಲ್ಲಿ ಅಭಿಹಿತವಾಗಿದೆ. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಜಂತದ ಮೇಲೆ ಲೋಟ್. ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ತುಭ್ಯಮುಷಾಸಃ ಶುಚಯಃ ಪರಾವತಿ ಭದ್ರಾ ವಸ್ತ್ರಾ ತನ್ವತೇ ದಂಸು
ರಶ್ಮಿಷು ಚಿತ್ರಾ ನವ್ಯೇಷು ರಶ್ಮಿಷು ।
ತುಭ್ಯಂ ಧೇನುಃ ಸಬರ್ದುಘಾ ವಿಶ್ವಾ ವಸೂನಿ ದೋಹತೇ ।
ಅಜನಯೋ ಮರುತೋ ವಕ್ಷಣಾಭ್ಯೋ ದಿವ ಆ ವಕ್ಷಣಾಭ್ಯಃ ॥ ೪ ॥

॥ ಪದಪಾಠಃ ॥

ತುಭ್ಯಂ । ಉಷಸಃ । ಶುಚಯಃ । ಪರಾಽವತಿ । ಭದ್ರಾ । ವಸ್ತ್ರಾ । ತನ್ವತೇ । ದಂಽಸು । ರಶ್ಮಿಷು । ಚಿತ್ರಾ ।
ನವ್ಯೇಷು । ರಶ್ಮಿಷು ।
ತುಭ್ಯಂ । ಧೇನುಃ । ಸಬಃಽದುಘಾ । ವಿಶ್ವಾ । ವಸೂನಿ । ದೋಹತೇ ।
ಅಜನಯಃ । ಮರುತಃ । ವಕ್ಷಣಾಭ್ಯಃ । ದಿವಃ । ಆ । ವಕ್ಷಣಾಭ್ಯಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತುಭ್ಯಂ ತ್ವದರ್ಥಮುಷಾಸ ಉಷಸಃ ಪೂರ್ವೋಕ್ತರೀತ್ಯಾ ತ್ವಯಾ ಪ್ರಕಾಶಿತಾಃ ಶುಚಯಃ ಶುದ್ಧಾ ದೀಪ್ತಾ ವಾ ಪರಾವತ್ಯತ್ಯಂತದೂರದೇಶೇಽಂತರಿಕ್ಷೇ ದಂಸು ದಂಸೇಷು ಕರ್ಮವತ್ಸು। ಯದ್ವಾ । ಗೃಹನಾಮೈತತ್ ॥ ಅಂತ್ಯಲೋಪಶ್ಛಾಂದಸಃ ॥ ಗೃಹವದಾಚ್ಛಾದಕೇಷು । ರಶ್ಮಿಷು ಸ್ವಕೀಯೇಷು ತೈರ್ಭದ್ರಾ ಭಂದನೀಯಾನಿ ಕಲ್ಯಾಣಾನಿ ವಸ್ತ್ರಾಚ್ಛಾದನಯೋಗ್ಯಾನಿ ವಸ್ತ್ರಾಣಿ ತನ್ವತೇ । ವಿಸ್ತಾರಯಂತಿ । ಯದ್ವಾ । ಉಷಸೋ ದಂಸು ಯಾಗಗೃಹೇಷು ದೇವಯಜನೇಷು ರಶ್ಮಿಷು ಹೋಮಾಯ ಪ್ರದೀಪ್ತಾಗ್ನಿಜ್ವಾಲಾವತ್ಸ್ವಾಗತಾಯ ತುಭ್ಯಂ ಭದ್ರಾ ವಸ್ತ್ರಾ ತನ್ವತೇ । ಅಗ್ನಿಜ್ವಾಲಾ ಏವ ವಸ್ತ್ರಾಣಿ ವಿಸ್ತಾರಯಂತೀತ್ಯರ್ಥಃ । ಉಷಃಕಾಲೇಽಗ್ನೀನಾಂ ಪ್ರಜ್ವಾಲ್ಯಮಾನತ್ವಾತ್ತಾ ಏವ ವಸ್ತ್ರಾಣೀತ್ಯುಪಚರ್ಯತೇ । ನನು ಕೇವಲಂ ಸಾಧಾರಣಾನಿ ವಸ್ತ್ರಾಣಿ ನೇತ್ಯಾಹ । ನವ್ಯೇಷು ನೂತನೇಷು ಸ್ತೂಯಮಾನೇಷು ॥ ಣು ಸ್ತುತೌ । ಅಚೋ ಯತ್ । ವಾಂತೋ ಯಿ ಪ್ರತ್ಯಯ ಇತ್ಯವಾದೇಶಃ । ಯತೋಽನಾವ ಇತ್ಯಾದ್ಯುದಾತ್ತತ್ವಂ ॥ ರಶ್ಮಿಷು ಚಿತ್ರಾಣಿ ನಾನಾವರ್ಣಯುಕ್ತಾನ್ಯಾಶ್ಚರ್ಯಭೂತಾನಿ ತನ್ವತೇ । ಉಷಃಕಾಲೇ ರಶ್ಮೀನಾಂ ನಾನಾವರ್ಣತ್ವಾದಿತಿ ಭಾವಃ । ಅಗ್ನಿದ್ವಾರೇತಿ ಪಕ್ಷೇ ಜ್ವಾಲಾನಾಂ ಕಾಲೀಕರಾಲೀ-

ತ್ಯಾದಿರೂಪೇಣ ನಾನಾವರ್ಣತ್ವಾಚ್ಚಿತ್ರತ್ವಂ । ಕಿಂಚ ಹೇ ವಾಯೋ ತುಭ್ಯಂ ತ್ವದರ್ಥಂ ತ್ವದ್ಯಾಗಾರ್ಥಮೇವ ಧೇನುರ್ಘೃತಾದಿನಾ ಪ್ರೀಣಯಿತ್ರೀ ಗೌಃ । ಜಾತಾವೇಕವಚನಂ । ಸಬರ್ದುಘಾ । ಸಬರಿತ್ಯಮೃತನಾಮ । ತಸ್ಯ ದೋಗ್ಧ್ರೀ ॥ ದುಹಃ ಕಬ್ಘಶ್ಚೇತಿ ಕಪ್ ॥ ಸತೀ ವಿಶ್ವಾ ವಸೂನಿ ಸರ್ವಾಣಿ ಧನಾನ್ಯಾಜ್ಯಾದಿರೂಪಾಣಿ ದೋಹತೇ । ಸ್ವಯಮೇವ ದುಗ್ಧೇ । ಪ್ರೀಣಯತೀತ್ಯರ್ಥಃ ॥ ಕರ್ಮಕರ್ತರಿ ನ ದುಹಸ್ನುನಮಾಂ । ಪಾ. ೩-೧-೮೯ । ಇತಿ ಯಗಭಾವಃ । ಛಾಂದಸಃ ಶಪೋ ಲುಗಭಾವಃ ॥ ಕಸ್ತತ್ರ ವಿಶೇಷ ಇತಿ ಚೇತ್ ಉಚ್ಯತೇ । ಹೇ ವಾಯೋ ದಿವೋ ದೀಪ್ತಾದಂತರಿಕ್ಷಾನ್ಮರುತ ಏತನ್ನಾಮಕಾನ್ ಮೇಘಂ ವಿಶೀರ್ಯ ವೃಷ್ಟ್ಯುತ್ಪಾದಕಾನ್ ತ್ವದಂಶಭೂತಾನ್ದೇವಾನಜನಯಃ । ಜನಯಸಿ । ಉತ್ಪಾದಯಸಿ । ಕಿಮರ್ಥಮಿತಿ ತದುಚ್ಯತೇ । ವಕ್ಷಣಾಭ್ಯಃ ಪ್ರವಹಣಶೀಲಾಭ್ಯೋಽದ್ಭ್ಯಃ ವೃಷ್ಟಿಲಕ್ಷಣಾಭ್ಯಃ । ತಥಾ ವಕ್ಷಣಾಭ್ಯಃ । ನದೀನಾಮೈತತ್ ವಕ್ಷಣಾ ರುಜಾನಾ ಇತಿ ತನ್ನಾಮಸು ಪಾಠಾತ್ । ತಾಸಾಮರ್ಥಾಯ ॥

॥ ಪ್ರತಿಪದಾರ್ಥ ॥

**ಹೇ ವಾಯೋ** – ಎಲೈ ವಾಯುವೇ । **ತುಭ್ಯಂ**—ನಿನಗೋಸ್ಕರವಾಗಿ । **ಶುಚಯಃ**—ಶುಭ್ರವಾದ । **ಉಷಸಃ**—ಉಷಸ್ಸುಗಳು । **ಪರಾವತಿ**—ಅತ್ಯಂತ ದೂರ ಪ್ರದೇಶದಲ್ಲಿ । **ದಂಸು**—ಕರ್ಮಯುಕ್ತವಾದ ಅಥವಾ ಆಚ್ಛಾದಕವಾದ (ಮತ್ತು) । **ನವ್ಯೇಷು**—ನೂತನವಾದ ಅಥವಾ ಸ್ತುತ್ಯವಾದ । **ರಶ್ಮಿಷು**—ರಶ್ಮಿಗಳಿಂದ । **ಭದ್ರಾ**—ಮಂಗಳಕರವಾದ । **ವಸ್ತ್ರಾ**—(ಆಚ್ಛಾದನಯೋಗ್ಯವಾದ) ವಸ್ತ್ರಗಳನ್ನು । **ತನ್ವತೇ**—ವಿಸ್ತರಿಸುತ್ತವೆ [ಅಥವಾ **ಪರಾವತಿ**—ಅತ್ಯಂತದೂರ ಪ್ರದೇಶದಲ್ಲಿ । **ಶುಚಯಃ**—ಪ್ರಕಾಶಿಸುವ । **ಉಷಸಃ**—ಉಷಸ್ಸುಗಳು । **ದಂಸು**—ಯಾಗಗೃಹಗಳು । **ನವ್ಯೇಷು**—ಸ್ತುತ್ಯವಾದ । **ರಶ್ಮಿಷು** (ಹೋಮಕ್ಕೋಸ್ಕರ ಉದ್ದೀಪಿತವಾದ) ಅಗ್ನಿ ಜ್ವಾಲೆಗಳಿಂದ ವಿಶಿಷ್ಟವಾಗಿರಲು । **ತುಭ್ಯಂ**—(ಆಗತನಾದ) ನಿನಗೋಸ್ಕರ । **ಭದ್ರಾ**—ಮಂಗಳಕರವಾದ । **ವಸ್ತ್ರಾ**—(ಜ್ವಾಲಾರೂಪ) ವಸ್ತ್ರಗಳನ್ನು **ತನ್ವತೇ**—ವಿಸ್ತಾರಪಡಿಸುತ್ತವೆ ।] **ರಶ್ಮಿಷು**—ರಶ್ಮಿಗಳನ್ನು ಅಥವಾ ಜ್ವಾಲೆಗಳನ್ನು । **ಚಿತ್ರಾ**—ನಾನಾವರ್ಣಯುಕ್ತಗಳನ್ನಾಗಿ (ಕಾಲೀಕರಾಲೀ ಮೊದಲಾದ ರೂಪವಿಶಿಷ್ಟಗಳನ್ನಾಗಿ) । **ತನ್ವತೇ**—ವಿಸ್ತರಿಸುತ್ತವೆ) (ಮತ್ತು) । **ತುಭ್ಯಂ**—ನಿನಗೋಸ್ಕರ । **ಸಬರ್ದುಘಾ**—ಅಮೃತವನ್ನು ದೋಹನಮಾಡುವ । **ಧೇನುಃ**—ಗೋವು । **ವಿಶ್ವಾ ವಸೂನಿ**—ಸಮಸ್ತ (ಆಜ್ಯಾದಿರೂಪ) ಧನವನ್ನು । **ದೋಹತೇ**—ಕರೆಯುತ್ತದೆ (ನೀನೂ ಕೂಡ) । **ದಿವಃ**—ದ್ಯೋತಮಾನವಾದ ಅಂತರಿಕ್ಷದಿಂದ । **ವಕ್ಷಣಾಭ್ಯಃ**—ಪ್ರವಹಣಶೀಲವಾದ ವೃಷ್ಟಿರೂಪ ಉದಕಕ್ಕೋಸ್ಕರ । **ವಕ್ಷಣಾಭ್ಯಃ**—(ಮತ್ತು) ನದಿಗಳಿಗೋಸ್ಕರ । **ಮರುತಃ**—(ಮೇಘವನ್ನು ಸೀಳಿ ಮಳೆಗರೆಯುವ) ಮರುತರೆಂಬ ದೇವತೆಗಳನ್ನು । **ಆ ಅಜನಯಃ**—ಉತ್ಪತ್ತಿಮಾಡಿದೆ. (ಉತ್ಪತ್ತಿಮಾಡುತ್ತಿ.)

॥ ಭಾವಾರ್ಥ ॥

ಎಲೈ ವಾಯುವೇ, ಉಷಃಕಾಲದಲ್ಲಿ, ನನಗೋಸ್ಕರ, ಯಾಗಗೃಹಗಳಲ್ಲಿ ಉದ್ದೀಪಿತವಾದ ಅಗ್ನಿಗಳು ಕಾಲೀ, ಕರಾಲ್ಯಾದಿ ಜ್ವಾಲಾರೂಪವಾಗಿ ವಿಸ್ತೃತವಾಗುತ್ತದೆ (ಉಷಸ್ಸುಗಳೂ ನಾನಾವರ್ಣಗಳಾದ ಕಿರಣಗಳನ್ನು ವಿಸ್ತರಿಸುತ್ತವೆ) ; ಅಮೃತವನ್ನು ಕೊಡುವ ಗೋವುಗಳೂ (ನಿನಗೋಸ್ಕರವೇ) ಆಜ್ಯಾದಿಗಳನ್ನು (ತಾವಾಗಿಯೇ) ದೋಹನಮಾಡುತ್ತವೆ. ನೀನೂ ಕೂಡ, ಮಳೆಯನ್ನು ಕರೆದು ನದಿಗಳಿಗೆ ನೀರುಕೊಡುವುದಕ್ಕೋಸ್ಕರ, (ಮೇಘಗಳಿಂದ ಮಳೆಯನ್ನುಂಟುಮಾಡುವ) ಮರುತ್ತುಗಳನ್ನೂ ಸೃಷ್ಟಿ ಮಾಡಿರುವೆ.

English Translation

For you, the brilliant dawns, (raising) from afar, spread abroad their auspicious raiment in inviting rays; in variegated and glorious rays: for you, the cow that yields ambrosia milks all kinds of treasure: you beget the Maruts, of the firmament, (for the purpose of) showering rain; (for the purpose of replenishing) the rivers.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಪೂರ್ವಾರ್ಧಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದೆ. ಮೊದಲನೆಯ ಅನ್ವಯದ ಪ್ರಕಾರ ಉಷಸ್ಸು ಅಂತರಿಕ್ಷಸ್ಥವಾದ ವಾಯುವಿಗೆ ನಾನಾವರ್ಣಾತ್ಮಕವಾದ ರಶ್ಮಿಗಳಿಂದ ಹೊದಿಸಿ ಅಲಂಕರಿಸುವುದೂ, ಎರಡನೆಯ ಅನ್ವಯದ ಪ್ರಕಾರ ಯಾಗಗೃಹಸ್ಥನಾದ ವಾಯುವಿಗೆ ಅಗ್ನಿಜ್ವಾಲಾರೂಪದಲ್ಲಿರುವ ವಸ್ತ್ರಗಳಿಂದ ಅಲಂಕಾರವನ್ನು ಮಾಡುವುದೂ ವರ್ಣಿತವಾಗಿದೆ.

ಮೊದಲನೆಯದಾಗಿ, **ಶುಚಯಃ ಉಷಸಃ ನವ್ಯೇಷು ರಶ್ಮಿಷು ಚಿತ್ರಾ ಭದ್ರಾ ವಸ್ತ್ರಾ ತನ್ವತೇ** ಶುಭ್ರವಾದ ಉಷಸ್ಸುಗಳು ತಮ್ಮ ನೂತನವಾದವೂ ನಾನಾವರ್ಣಾತ್ಮಕವಾದವೂ ಆದ ರಶ್ಮಿಗಳಿಂದ ಮಂಗಳಕರವಾದುದೂ, ಆಚ್ಛಾದನರೂಪವಾದುದೂ ಆದ ವಸ್ತ್ರಗಳನ್ನು ವಿಸ್ತರಿಸುತ್ತವೆಯೆಂದೂ, ಎರಡನೆಯದಾಗಿ, **ಪರಾವತಿ ಶುಚಯಃ ಉಷಸಃ ದಂಸು ನವ್ಯೇಷು ರಶ್ಮಿಷು ಚಿತ್ರಾ ಭದ್ರಾ ವಸ್ತ್ರಾ ತನ್ವತೇ** ಅತ್ಯಂತ ದೂರದಲ್ಲಿರುವವೂ ಪ್ರಕಾಶಮಾನವಾದವೂ ಆದ ಉಷಸ್ಸುಗಳು ಯಜ್ಞಗೃಹದಲ್ಲಿರುವ ವಾಯುವಿಗೆ ನಾನಾವರ್ಣಾತ್ಮಕವಾದವೂ, ಮಂಗಳಕರವಾದವೂ ಆದ ಅಗ್ನಿಯ ಜ್ವಾಲೆಗಳಿಂದ ಆಚ್ಛಾದನ ರೂಪವಾದ ವಸ್ತ್ರಗಳನ್ನು ವಿಸ್ತರಿಸಿ ಕಲ್ಪಿಸುತ್ತವೆಯೆಂದೂ ಸಹ ಸಾಯಣರು ವಿವರಿಸಿದ್ದಾರೆ.

**ಪರಾವತಿ**— ಎರಡು ಅನ್ವಯಗಳಲ್ಲಿಯೂ ಈ ಪದಕ್ಕೆ ಅರ್ಥವ್ಯತ್ಯಾಸವಿಲ್ಲ. **ಆಕೇ ಪರಾಕೇ** ಇತ್ಯಾದಿ ದೂರನಾಮಗಳಲ್ಲಿ ಪಠಿಸಿದೆ. (ನಿ. ೩-೧೯). ನಿರುಕ್ತಕಾರರು,

**ಏತದಸ್ಯಾ ಅನಃ ಶಯೇ ಸುಸಂಪಿಷ್ಟಂ ವಿಪಾಶ್ಯಾ । ಸಸಾರ ಸೀಂ ಪರಾವತಃ ॥**

(ಋ. ಸಂ. ೪-೩೦-೧೧)

ಎಂಬ ಋಕ್ಕನ್ನುದಹರಿಸಿ (ನಿ. ೧೧-೪೮) ಅಲ್ಲಿ **ಪರಾವತಃ** ಎಂಬ ಪದದ ಸ್ವಾರಸ್ಯವನ್ನು ವಿವರಿಸಿದ್ದಾರೆ. ದ್ಯುಲೋಕಸ್ಥವಾದ ದೇವತೆಗಳಲ್ಲಿ **ಉಷಸ್ಸು** ಪರಿಗಣಿತಳಾಗಿದ್ದಾಳೆ.

**ವ್ಯೂರ್ಣ್ವತೀ ದಿವೋ ಅಂತಾँ ಅಬೋಧ್ಯಪ ಸ್ವಸಾರಂ ಸನುತರ್ಯುಯೋತಿ ।**
**ಪ್ರಮಿನತೀ ಮನುಷ್ಯಾ ಯುಗಾನಿ ಯೋಷಾ ಜಾರಸ್ಯ ಚಕ್ಷಸಾ ವಿ ಭಾತಿ ॥**

(ಋ. ಸಂ. ೧-೯೨-೧೧)

ಇತ್ಯಾದಿ ಋಕ್ಕುಗಳಲ್ಲಿ ಅಂತರಿಕ್ಷದ ಕೊನೆಯ ಭಾಗಗಳನ್ನೆಲ್ಲಾ ಕತ್ತಲೆಯಿಂದ ಬಿಡಿಸಿ ಪ್ರಕಾಶಗೊಳಿಸುವಳೆಂಬ ವರ್ಣನೆಯು ಉಷಸ್ಸಿನ ದೂರಸ್ಥವಾದ ಸಂಚಾರಮಾರ್ಗವನ್ನು ತಿಳಿಸುತ್ತದೆ.

**ಸದ್ಯಶ್ಚೀರದ್ಯ ಸದೃಶೀರಿದು ಶ್ವೋ ದೀರ್ಘಂ ಸಚಂತೇ ವರುಣಸ್ಯ ಧಾಮ ।**
**ಅನವದ್ಯಾಸ್ತ್ರಿಂಶತಂ ಯೋಜನಾನ್ಯೇಕೈಕಾ ಕ್ರತುಂ ಪರಿ ಯಂತಿ ಸದ್ಯಃ ॥**

(ಋ. ಸಂ. ೧-೧೨೩-೮)

ಇತ್ಯಾದಿ ಋಕ್ಕುಗಳಲ್ಲಿ ಮೂವತ್ತು ಯೋಜನಗಳ ದೂರವನ್ನು ಸುತ್ತುತ್ತಾ ಪರಿಭ್ರಮಣವನ್ನು ಮಾಡುತ್ತಿರುವಳೆಂದು ಅವಳ ಸಂಚಾರದ ದೂರಗಮನವನ್ನು ವರ್ಣಿಸಿದೆ. ಆ ಅಂಶವನ್ನು ಇಲ್ಲಿ **ಪರಾವತಿ** ಎಂಬ ಪದದಿಂದ ಸೂಚಿಸಿದೆ.

ಉಷಸ್ಸು ಅಷ್ಟು ದೂರದಲ್ಲಿದ್ದರೂ ಸಹ **ತುಭ್ಯಂ ಚಿತ್ರಾ, ಭದ್ರಾ, ವಸ್ತ್ರಾ ತನ್ವತೇ** ಎಂದು ವರ್ಣಿಸಿದೆ, ಅಂತರಿಕ್ಷಸ್ಥವಾದ **ವಾಯು**ವನ್ನು ಅಲಂಕರಿಸತಕ್ಕ ಉಷಸ್ಸಿನ ಚಿತ್ರರೂಪಗಳಾದ ವಸ್ತ್ರಗಳೆಂದರೆ ಉಷಸ್ಸಿನ ನಾನಾ ವರ್ಣಾತ್ಮಕಗಳಾದ ರಶ್ಮಿಗಳೆಂದರ್ಥವಾಗುತ್ತದೆ. ಉಷಸ್ಸಿಗೆ ಈ ಪ್ರಭಾವಿಶೇಷವೇ ಒಂದು ಐಶ್ವರ್ಯವೆಂದೂ ಪರಿಗಣಿತ ವಾಗಿದೆ. ಆದುದರಿಂದಲೇ,

**ವಾಜಿನೀವತೀ ಸೂರ್ಯಸ್ಯ ಯೋಷಾ ಚಿತ್ರಾಮಘಾ ರಾಯ ಈಶೇ ವಸೂನಾಂ ।**
**ಋಷಿಷ್ಟುತಾ ಜರಯಂತೀ ಮಘೋನ್ಯುಷಾ ಉಚ್ಛತಿ ವಹ್ನಿಭಿರ್ಗೃಣಾನಾ ॥**

(ಋ. ಸಂ. ೭-೭೫-೫)

ಎಂಬ ಋಕ್ಕಿನಲ್ಲಿ **ಚಿತ್ರಾಮಘಾ** ಎಂಬ ವಿಶೇಷಣವಿದೆ. **ವಿಚಿತ್ರಧನಾ । ವಿಚಿತ್ರರಶ್ಮ್ಯಾಖ್ಯಧನಾ ।** ನಾನಾ ವಿಧವಾದುದೂ ರಶ್ಮಿರೂಪವಾದುದೂ ಆದ ಐಶ್ವರ್ಯವುಳ್ಳವಳೆಂದರ್ಥ. ಹೀಗೆ ಅನೇಕ ವಿಧವಾದ ವರ್ಣಗಳುಳ್ಳ ರಶ್ಮಿಗಳನ್ನು ಹೊಂದಿರುವುದರಿಂದ ಉಷಸ್ಸಿಗೆ **ವಿಭಾವರಿ** (೧-೯೨-೧೪); **ಅಹನಾ** (೧-೧೨೩-೪); **ಅರುಷೀ** (೩-೫೫-೧); **ಅರುಣಪ್ಸು** (೮-೫-೧) ಇತ್ಯಾದಿ ವಿಶೇಷಣಗಳಿವೆ. **ವಿಭಾವರೀ, ಭಾಸ್ವತೀ** ಎಂಬುದು **ಉಷಸ್ಸಿನ** ಪರ್ಯಾಯನಾಮಗಳೆಂದು ನಿರುಕ್ತದಲ್ಲಿಯೇ ಹೇಳಿದೆ. ವಿಭಾವರಿಯೆನ್ನುವುದಕ್ಕೆ **ವಿಭಾಯುಕ್ತಾ ವಿಭಾವರೀ ।** ವಿಧವಿಧವಾದ ತೇಜಸ್ಸುಗಳ ಪುಂಜವು **ವಿಭಾಃ ;** ಅಂತಹ ಪ್ರಭಾಪುಂಜದೊಡನೆ ಕೂಡಿದವಳು ಎಂದರ್ಥ. **ಅರುಷೀ** ಎಂಬುದಕ್ಕೆ ಮಿರುಗೆಂಪು ಎಂತಲೂ ; **ಅರುಣಪ್ಸು**ವೆಂದರೆ ಹೊಂಬಣ್ಣವೆಂದೂ ಅರ್ಥಮಾಡಿದೆ. ಮತ್ತು

**ಏಷಾ ವ್ಯೇನೀ ಭವತಿ ದ್ವಿಬರ್ಹಾ ಆವಿಷ್ಕೃಣ್ವಾನಾ ತನ್ವಂ ಪುರಸ್ತಾತ್ ।**
**ಋತಸ್ಯ ಪಂಥಾಮನ್ವೇತಿ ಸಾಧು ಪ್ರಜಾನತೀವ ನ ದಿಶೋ ಮಿನಾತಿ ॥**

(ಋ. ಸಂ. ೫-೮೦-೪)

ಎಂಬ ಋಕ್ಕಿನಲ್ಲಿ **ಉಷಸ್ಸು** ತನ್ನ ವರ್ಣವನ್ನು ಬದಲಾಯಿಸುತ್ತಲೂ ಹೊಸ ಹೊಸ ಪ್ರಭೆಯನ್ನು ಬೀರುತ್ತಲೂ ಋತದ ಮಾರ್ಗವನ್ನನುಸರಿಸುತ್ತಾಳೆಂದು ವರ್ಣಿಸಿದೆ. ಇಂತಹ ನಾನಾವರ್ಣಾತ್ಮಕವಾದ ತನ್ನ ಪ್ರಭೆಯನ್ನು **ವಾಯುವಿನ** ಮೇಲೆ ಬೀರಿ ವಾಯುವಿಗೆ ಆಚ್ಛಾದನರೂಪವಾದ ವಸ್ತ್ರವನ್ನು ಹೊದ್ದಿಸಿ ಅದನ್ನೂ ಸಹ ವಿಸ್ತೃತವನ್ನಾಗಿ ಮಾಡುತ್ತಾಳೆಂದು ವರ್ಣಿಸಿದೆ.

**ಅಗ್ನಿ**ರೂಪದಿಂದ ಎರಡನೆಯದಾಗಿ, ಯಜ್ಞಗೃಹದಲ್ಲಿರುವ **ವಾಯು**ದೇವನಿಗೂ ಸಹ **ಚಿತ್ರಾ ಭದ್ರಾ ವಸ್ತ್ರಾ ತನ್ವತೇ ।** ಚಿತ್ರರೂಪವಾದುದೂ, ಭದ್ರಾತ್ಮಕವಾದುದೂ, ಆದ ವಸ್ತ್ರವನ್ನು ವಿಸ್ತೃತವನ್ನಾಗಿ ಮಾಡಿ ಹೊದ್ದಿಸುತ್ತಾಳೆಂದರ್ಥ. **ಅಗ್ನಿದ್ವಾರೇತಿ ಪಕ್ಷೇ ಜ್ವಾಲಾನಾಂ ಕಾಲೀ ಕರಾಲೀತ್ಯಾದಿರೂಪೇಣ ನಾನಾ ವರ್ಣತ್ವಾಚ್ಚಿತ್ರತ್ವಂ ।** ಅಗ್ನಿಯ ಜ್ವಾಲೆಗಳು ನಾನಾ ರೂಪಗಳಾಗಿರುವುದರಿಂದ ಈ ವರ್ಣನೆಯಿದೆ.

**ಕಾಲೀ ಕರಾಲೀ ಚ ಮನೋಜವಾ ಚ ಸುಲೋಹಿತಾ ಯಾ ಚ ಸುಧೂಮ್ರವರ್ಣಾ ।**
**ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತಜಿಹ್ವಾಃ ॥**
(ಮುಂಡಕೋಪನಿಷತ್. ೧-೨-೪)

ಕೃಷ್ಣವರ್ಣವುಳ್ಳದ್ದೂ, ಭೀಮರೂಪವುಳ್ಳದ್ದೂ, ಅತ್ಯಂತ ಕೆಂಪುವರ್ಣವುಳ್ಳದ್ದೂ, ಕಂದುಬಣ್ಣದ್ದೂ, ಮಿರುಗುವ ಕಾಂತಿಯುಳ್ಳದ್ದೂ, ಸರ್ವತ್ರ ಕಂಗೊಳಿಸತಕ್ಕದ್ದೂ. ದಿವ್ಯಾತ್ಮಕವಾದದ್ದೂ ಆದ ಅಗ್ನಿಜ್ವಾಲೆಗಳ ವರ್ಣನೆಯಿರುವುದರಿಂದ ಇಂತಹ ಎಲ್ಲಾ ವರ್ಣಗಳ ಜ್ವಾಲೆಗಳೂ ವಾಯುವಿಗೆ ವಸ್ತ್ರಪ್ರಾಯವಾಗಿ ವಾಯುವನ್ನು ಅಲಂಕರಿಸುತ್ತವೆಯೆಂದು ತಾತ್ಪರ್ಯ.

**ಭದ್ರಾ— ಕಲ್ಯಾಣಾತ್ಮಕಾನಿ ।** ಮಂಗಳವನ್ನುಂಟುಮಾಡುವವು ಎಂದರ್ಥ. **ಭದ್ರಂ ಭಗೇನ ವ್ಯಾಖ್ಯಾತಂ । ಭಜನೀಯಂ, ಭೂತಾನಾಮಭಿದ್ರವಣೀಯಂ ಭವದಮಯತೀತಿ ವಾ ಭಾಜನವದ್ವಾ ।** (ನಿ. ೪-೯). ಶ್ರೇಯಸ್ಕರ ಅಥವಾ ಮಂಗಳಕರ ಎಂಬರ್ಥದಲ್ಲಿ **ಭದ್ರ** ಶಬ್ದವು ಉಪಯೋಗಿಸಲ್ಪಡುತ್ತದೆ. ಇನ್ನೂ ವಿವರಿಸಿದರೆ, ಭೋಗಕ್ಕೆ ಅರ್ಹವಾದುದು ಪ್ರಾಣಿಗಳಿಗೆ ಅತ್ಯಂತ ಅಪೇಕ್ಷಿತವಾದುದು, ಅಥವಾ ಸುಖಭೋಗವನ್ನು ಉಂಟುಮಾಡತಕ್ಕದ್ದು ಅಥವಾ ಅರ್ಹತೆಯುಳ್ಳವನಿಗೆ ಮಾತ್ರ ಸೇರತಕ್ಕದ್ದು ಎಂಬ ಅರ್ಥಗಳಲ್ಲಿ ಭದ್ರ ಶಬ್ದದ ಪ್ರಯೋಗವಿದೆ. ನಿರುಕ್ತಕಾರರು ಈ ಪದವನ್ನು ವಿವರಿಸುವಾಗ ಶ್ರುತಿವಾಕ್ಯದ ಉದಾಹರಣೆಯಿಂದ ಸನ್ನಿವೇಶಕ್ಕೆ ಅನುಗುಣವಾಗಿ ಇದರ ಅರ್ಥವನ್ನು ಹೇಳಿರುತ್ತಾರೆ.

**ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।**
**ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥**
(ಋ. ಸಂ. ೧೦-೭೧-೨)

ಇಲ್ಲಿ ಭದ್ರಶಬ್ದವು ಸಂಪತ್ತನ್ನೂ, ಮಂಗಳವನ್ನೂ, ಸೌಖ್ಯವನ್ನೂ ತೋರಿಸತಕ್ಕ ವ್ಯಾಪಕವಾದ ಅರ್ಥವನ್ನು ಹೊಂದಿದೆಯೆಂದು ವಿವರಿಸಿದೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಂತರಿಕ್ಷಸ್ಥವಾದ ಉಷಸ್ಸಿನ ಪ್ರಭೆಯಪರವಾಗಿ ಅರ್ಥಮಾಡಿದರೆ ವಿಶ್ವಾಕರ್ಷಕವಾದುದೂ, ಸೌಂದರ್ಯಪೂರಿತವಾದುದೂ, ಸೌಖ್ಯದಾಯಕವಾದುದೂ ಆದ ಪ್ರಭಾಪುಂಜವೆಂದೂ; ಅಗ್ನಿಜ್ವಾಲೆಗಳಪರವಾಗಿ ಅರ್ಥಮಾಡಿದರೆ ಮಂಗಳಕರವಾದುದೂ, ಸೌಖ್ಯದಾಯಕವಾದುದೂ ಆದ ಪ್ರಭಾಪುಂಜವೆಂದೂ ತಾತ್ಪರ್ಯ.

**ನವ್ಯೇಷು— ನೂತನೇಷು ; ಸ್ತೂಯಮಾನೇಷು ।** ನೂತನವಾದ ಅಥವಾ ಸ್ತುತ್ಯವಾದ **ರಶ್ಮಿಷು,** ರಶ್ಮಿಗಳಲ್ಲಿ, ಉಷಸ್ಸಿನ ಪ್ರಭೆಗಳು ಆಗತಾನೇ ಉದಯವಾದುದರಿಂದ ನೂತನವಾಗಿದೆಯೆಂದರ್ಥ. ಅಥವಾ **ನೌತಿ** ಎಂಬ ಪದವು **ಅರ್ಚತಿಕರ್ಮ** ನಾಮಗಳಲ್ಲಿ ಪಠಿತವಾಗಿ **ನವ್ಯಃ** ಎಂದು ನಿಷ್ಪನ್ನವಾಗಿರುವುದರಿಂದ **ಸ್ತುತ್ಯಃ** ಸ್ತೋತ್ರಾರ್ಹ ಎಂದರ್ಥ.

**ವ್ಯೂರ್ಣೋತಿ ಹೃದಾ ಮತಿಂ ನವ್ಯೋ ಜಾಯತಾಮೃತಂ ವಿತ್ತಂ ಮೇ ಅಸ್ಯ ರೋದಸೀ ॥**
(ಋ. ಸಂ. ೧-೧೦೫-೧೫)

ಎಂಬಲ್ಲಿ ಕೀರ್ತನಕಾರನು ಆ ವರುಣನಿಗೆ ಹೃತ್ಪೂರ್ವಕವಾದ ಸ್ತೋತ್ರವನ್ನು ಪಠಿಸುತ್ತಾನೆ. ಸ್ತೋತ್ರಾರ್ಹನಾದ ಆ ವರುಣನು ನಮಗೆ ಸಹಾಯಕನಾಗಿರಲಿ ಎಂದು **ನವ್ಯ** ಶಬ್ದಕ್ಕೆ ಸ್ತುತ್ಯರ್ಹನೆಂದರ್ಥಮಾಡಿದೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸ್ತುತ್ಯರ್ಹವಾದ ರಶ್ಮಿಗಳೆಂದರ್ಥ.

**ಸಬರ್ದುಘಾ-ಸಬರಿತ್ಯಮೃತನಾಮ । ತಸ್ಯ ದೋಗ್ಧ್ರೀ ।** ಅಮೃತವನ್ನು ಕರೆಯತಕ್ಕ ಧೇನುವೆಂದರ್ಥ.

**ಧೇನುಂ ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ ।**

(ಬೃಹದ್ದೇವತಾ. ೩-೮೫)

**ಸಬರ್** ಎಂದರೆ ಅಮೃತ. ಇಂತಹ ಅಮೃತರೂಪವಾದ ಕ್ಷೀರವನ್ನು ಕೊಡುವಂತೆ ಮಾಡಿದುದರಿಂದ ಧೇನುವಿಗೆ **ಸಬರ್ದುಘಾ** ಎಂದರೆ ಅಮೃತರೂಪವಾದ ಸಂಪತ್ಪ್ರದೆಯಾದ **"ಮಾಧ್ಯಮಿಕಾ ವಾಕ್"** ಎಂದೇ ಪ್ರಸಿದ್ಧವಾಗಿದೆ. ಉದಾಹರಣೆಗೆ—

**ತ್ವೇ ಧೇನುಃ ಸುದುಘಾ ಜಾತವೇದೋऽಸಶ್ಚತೇವ ಸಮನಾ ಸಬರ್ಧುಕ್ ।**

**ತ್ವಂ ನೃಭಿರ್ದಕ್ಷಿಣಾವದ್ಭಿರಗ್ನೇ ಸುಮಿತ್ರೇಭಿರಿಧ್ಯಸೇ ದೇವಯದ್ಭಿಃ ॥**

(ಋ. ಸಂ. ೧೦-೬೯-೮)

ಎಂಬಲ್ಲಿ **ವಿದ್ಯುದ್ರೂಪನಾದ** ಅಗ್ನಿಯಲ್ಲಿರುವ ಅಮೃತವನ್ನು ಕರೆಯತಕ್ಕದ್ದೂ, ಗೋರೂಪವಾದದ್ದೂ ಆದ **ಮಾಧ್ಯಮಿಕಾ ವಾಕ್** ಎಂಬರ್ಥಮಾಡಿದೆ. ಇದಲ್ಲದೇ,

**ಆ ಸಖಾಯಃ ಸಬರ್ದುಘಾಂ ಧೇನುಮಜಧ್ವಮುಪ ನವ್ಯಸಾ ವಚಃ । ಸೃಜಧ್ವಮನಪಸ್ಫುರಾಂ ।**

(ಋ. ಸಂ. ೬-೪೮-೧೧)

ಎಂಬಲ್ಲಿ **ಮರುತಾಂ ಮಾತಾ ಪೃಶ್ನ್ಯಾಖ್ಯಾ ಮಾಧ್ಯಮಿಕಾ ವಾಕ್ ಧೇನುಃ । ಮರುಜ್ಜನಹೇತುಭೂತಸ್ಯ ಪಯಸೋ ದೋಗ್ಧ್ರೀಂ ಧೇನುಂ ಪೃಶ್ನಿಂ ।** ಮರುತ್ತುಗಳಿಗೆ ಮಾತೃವಾದ **ಪೃಶ್ನಿಯೇ ಮಾಧ್ಯಮಿಕ** ವಾಕ್ಕೆಂದೂ; **ಪೃಶ್ನಿಯೇ** ಸಬರ್ದುಘಾತ್ಮಕವಾದ ಧೇನುವೆಂದೂ ಹೇಳಿದೆ. ಅದೂ ಅಲ್ಲದೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಮರುತಃ ಅಜನಯಃ ಮರುತ್ತು**ಗಳನ್ನು ಸೃಷ್ಟಿಸಿದೆಯೆಂದು ವಾಯುವಿಗೆ ನಿರ್ದೇಶಿಸಿದೆ. ಆದುದರಿಂದ ಇಲ್ಲಿಯೂ ಸಹ **ಸಬುರ್ದುಘಾ ಧೇನುಃ** ಎಂದರೆ ಮೇಲೆ ಉದಹರಿಸಿರುವ ಋಕ್ಕುಗಳಲ್ಲಿ ನಿರ್ದೇಶಿಸಿರುವ ವಿದ್ಯುದ್ರೂಪವಾದ ಅಗ್ನಿಸ್ಥವಾದ ಧೇನುವೂ, ಪೃಶ್ನ್ಯಾಖ್ಯವಾದ ಧೇನುವೂ, ಇಲ್ಲಿವರ್ಣಿತವಾದ **ಸಬರ್ದುಘಾ**ತ್ಮಕವಾದ ಧೇನುವೂ ಒಂದೇ ಎಂದು ಹೇಳಿದರೆ ತಪ್ಪಾಗಲಾರದು.

**ವಕ್ಷಣಾಭ್ಯಃ ಮರುತಃ ಅಜನಯಃ** ಎಂಬ ವಾಕ್ಯದಿಂದಲೂ ಸಹ ಮೇಲಿನ ಅಭಿಪ್ರಾಯವು ಸಮರ್ಥಿತವಾಗಬಹುದು. Max muller ಪಂಡಿತನು **ವಕ್ಷಣಾಭ್ಯಃ** ಎಂಬುದಕ್ಕೂ **ಧೇನುಃ** ಎಂಬುದಕ್ಕೂ ಸಂಬಧವಿದೆಯೆಂದು ವಿವರಿಸಿದ್ದಾನೆ.

It would be better if we could refer **ವಕ್ಷಣಾಭ್ಯಃ** to **ಧೇನು,** the cow, the mother of the Maruts, whole Dyaus is their father. Here, however, Vayu is conceived as their father, and Dyaus as their mother.

[Vedic Hymns II. p. 448].

**ಪ್ರ ಯೇ ಮೇ ಬಂಧ್ವೇಷೇ ಗಾಂ ವೋಚಂತ ಸೂರಯಃ ಪೃಶ್ನಿಂ ವೋಚಂತ ಮಾತರಂ |**
(ಋ. ಸಂ. ೫-೫೨-೧೬)

ಇತ್ಯಾದಿ ಋಕ್ಕುಗಳಲ್ಲಿ **ಪೃಶ್ನಿ**ರೂಪವಾದ **ಧೇನುವೇ** ಮರುತ್ತುಗಳ ಮಾತೃವೆಂದು ಹೇಳಲ್ಪಟ್ಟಿರುವುದರಿಂದಲೂ ಋಕ್ಕಿನಲ್ಲಿಯೂ ಸಹ ಮರುತ್ತುಗಳ ಉತ್ಪತ್ತಿಯ ವಿಷಯವು ಉಕ್ತವಾಗಿರುವುದರಿಂದಲೂ ಸಹ **ವಕ್ಷಣಾಭ್ಯಃ** ಎಂಬ ಪದಕ್ಕೆ **ಧೇನುಃ** ಎಂಬ ಪದಕ್ಕೂ ಸಂಬಂಧವನ್ನು ತೋರಿಸುವುದು ಉಚಿತವೆಂದು ಈ ಪಂಡಿತನ ಅಭಿಪ್ರಾಯವಾಗಿದೆ.

**ವಕ್ಷಣಾಭ್ಯಃ** ಎಂಬ ಪದವು ದ್ವಿರುಕ್ತವಾಗಿದೆ. ಮೊದಲನೆಯ ಪದಕ್ಕೆ **ಪ್ರವಹಣಶೀಲಾಭ್ಯೋsದ್ಭ್ಯೋ ವೃಷ್ಟಿಲಕ್ಷಣಾಭ್ಯಃ |** ವೃಷ್ಟಿರೂಪವಾದುದೂ, ಪ್ರವಹಿಸತಕ್ಕದ್ದೂ ಆದ ಉದಕಗಳಿಂದೂ; ಎರಡನೆಯ ಪದಕ್ಕೆ **ನದೀನಾಮೈತತ್ ತಾಸಾಂ ಅರ್ಥಾಯ ;** ಈ ಪದವು ನದೀನಾಮಗಳಲ್ಲಿ ಪಠಿತವಾಗಿದೆಯಾದ್ದರಿಂದ (ನಿ. ೨-೨೪) ಇಲ್ಲಿ ನದೀಬೋಧಕವೆಂದೂ, ನದಿಗಳಿಗಾಗಿ ಎಂದರ್ಥವಾಗುತ್ತದೆಯೆಂದೂ ತಿಳಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಉಷಾಸಃ**— ಛಾಂದಸವಾಗಿ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಭದ್ರಾ**— ಭದಿ ಕಲ್ಯಾಣೇ ಸುಖೇ ಚ ಧಾತು. ಔಣಾದಿಕ ರಕ್ ಪ್ರತ್ಯಯ. ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲುಕ್. ವಸ್ತ್ರಾ ಎಂಬಲ್ಲಿಯೂ ಔಣಾದಿಕ ಷ್ಟ್ರನ್ ಪ್ರತ್ಯಯ ಬಂದು ರೂಪವಾದಾಗ ಶಿಗೆ ಲೋಪ.

**ತೆನ್ವತೇ**— ತನು ವಿಸ್ತಾರೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ ತಿಙಂತನಿಘಾತ ಸ್ವರ ಬರುತ್ತದೆ.

**ದಂಸು**— ದಂಸ ಶಬ್ದ. ಸಪ್ತಮೀ ಬಹುವಚನ ಪರವಾದಾಗ ಛಾಂದಸವಾಗಿ ಅಂತ್ಯಲೋಪ ಬರುತ್ತದೆ.

**ನವ್ಯೇಷು**— ಣು ಸ್ತುತೌ. ಧಾತು. **ಅಚೋ ಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕ**-ಎಂಬುದರಿಂದ ಧಾತುವಿನ ಇಕಿಗೆ ಗುಣ. **ವಾಂತೋ ಯಿ ಪ್ರತ್ಯಯೇ** (ಪಾ. ಸೂ. ೬-೧-೭೯) ಎಂಬುದರಿಂದ ಅವಾದೇಶ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ಸಬರ್ದುಘಾ**— ದುಹ ಪ್ರಪೂರಣೇ. ಧಾತು. ಸಬರ್ ಎಂಬುದು ಉಪಪದವಾಗಿರುವಾಗ **ದುಹಃ ಕಬ್ ಘಶ್ಚ** (ಪಾ. ಸೂ. ೩-೨-೭೦) ಎಂಬುದರಿಂದ ಕಪ್ ಪ್ರತ್ಯಯ. ಧಾತುವಿಗೆ ಘತ್ವ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಅದಂತನಿಬಂಧನವಾಗಿ ಟಾಪ್.

**ವಿಶ್ವಾ**— **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ದೋಹತೇ**— ದುಹ ಪ್ರಪೂರಣೇ. ಧಾತು. ಕರ್ಮಕರ್ತರಿ ಪ್ರಯೋಗ. **ಕರ್ಮವತ್ ಕರ್ಮಣಾ ತುಲ್ಯಕ್ರಿಯಃ** (ಪಾ. ಸೂ. ೩-೧-೮೭) ಎಂಬುದರಿಂದ ಆತ್ಮನೇಪದಾದಿಗಳು ಬರುತ್ತವೆ. **ನ ದುಹಸ್ನುನಮಾಂ**

(ಪಾ. ಸೂ ೩-೧-೮೯) ಎಂಬುದರಿಂದ ಯಕ್ ಬರುವುದಿಲ್ಲ. ಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ. ಛಾಂದಸವಾಗಿ ಶಪಿಗೆ ಲುಕ್ ಬರುವುದಿಲ್ಲ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ತಿಙಂತ ನಿಘಾತಸ್ವರ ಬರುತ್ತದೆ.

**ಅಜನಯಃ**—ಜನೀ ಪ್ರಾದುರ್ಭಾವೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಣಿಚ್. **ಜನೀಜ್ರೃಷ್ಕ್ನಸುರಂಜೋಽಮಂತಾಶ್ಚ** ಎಂಬುದರಿಂದ ಮಿತ್ ಸಂಜ್ಞಾ ಬರುವುದರಿಂದ **ಮಿತಾಂ ಹ್ರಸ್ವಃ** (ಪಾ. ಸೂ. ೬-೪-೯೨) ಎಂಬುದರಿಂದ ಉಪಧೆಗೆ ಹ್ರಸ್ವ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಮಧ್ಯಮ ಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಆದ್ಯುದಾತ್ತವಾಗುತ್ತದೆ.

**ದಿವಃ**—**ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ತುಭ್ಯಂ ಶುಕ್ರಾಸಃ ಶುಚಯಸ್ತುರಣ್ಯವೋ ಮದೇಷೂಗ್ರಾ ಇಷಣಂತ ಭುರ್ವಣ್ಯಪಾಮಿಷಂತ ಭುರ್ವಣಿ ।
ತ್ವಾಂ ತ್ಸಾರೀ ದಸಮಾನೋ ಭಗಮೀಟ್ಟೇ ತಕ್ವವೀಯೇ ।
ತ್ವಂ ವಿಶ್ವಸ್ಮಾದ್ಭುವನಾತ್ಪಾಸಿ ಧರ್ಮಣಾಸುರ್ಯಾತ್ಪಾಸಿ ಧರ್ಮಣಾ ॥ ೫ ॥

॥ ಪದಪಾಠಃ ॥

ತುಭ್ಯಂ । ಶುಕ್ರಾಸಃ । ಶುಚಯಃ । ತುರಣ್ಯವಃ । ಮದೇಷು । ಉಗ್ರಾಃ । ಇಷಣಂತ । ಭುರ್ವಣಿ । ಅಪಾಂ । ಇಷಂತ । ಭುರ್ವಣಿ ।
ತ್ವಾಂ । ತ್ಸಾರೀ । ದಸಮಾನಃ । ಭಗಂ । ಈಟ್ಟೇ । ತಕ್ವವೀಯೇ ।
ತ್ವಂ । ವಿಶ್ವಸ್ಮಾತ್ । ಭುವನಾತ್ । ಪಾಸಿ । ಧರ್ಮಣಾ । ಅಸುರ್ಯಾತ್ । ಪಾಸಿ । ಧರ್ಮಣಾ ॥ ೫ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತುಭ್ಯಂ ತ್ವದರ್ಥಂ ಶುಕ್ರಾಸೋ ದೀಪ್ತಾಃ ಶುಚಯಃ ಶುದ್ಧಾಃ । ಸೋಮಸ್ಯ ಪಾತಾರೋऽತ್ಯಂತಂ ಶುದ್ಧಾ ಭವಂತಿ । ಕಿಮು ವಕ್ತವ್ಯಂ ತೇಷಾಂ ಶುದ್ಧತ್ವೇ । ತುರಣ್ಯವಸ್ತ್ವರಣಯುಕ್ತಾಸ್ತ್ವಾಂ ಪ್ರಾಪ್ತುಂ ಉಗ್ರಾ ಉದ್ಗೂರ್ಣತೇಜಸಃ ಸೋಮಾ ಮದೇಷು ತವ ಮದೇಷು ನಿಮಿತ್ತಭೂತೇಷು ಭುರ್ವಣಿ ಭರಣವತಿ ಯಾಗ ಇಷಣಂತ । ಆಹವನೀಯಂ ಪ್ರತಿ ಗಚ್ಛಂತಿ ಇಚ್ಛಂತಿ ವಾ ॥ ವ್ಯತ್ಯಯೇನಾತ್ಮನೇಪದಂ। ಶಶ್ನಮೌ ದ್ವಾ ವಿಕರಣೌ ॥ ಕಿಂಚಾಪಾಂ ಭುರ್ವಣಿ ಮೇಘೇ ಇಷಂತೇ। ಉದಕಮಿಚ್ಛಂತ್ಯುತ್ಪಾದಯಿತುಂ । ಅಗ್ನೌ ಹೂಯಮಾನಸ್ಯಾಹುತೇರಾದಿತ್ಯದ್ವಾರಾ ವೃಷ್ಟ್ಯುತ್ಪಾದಕತ್ವಾತ್ । ಯದ್ವಾ । ಯಜಮಾನಾಸ್ತ್ವಾಮುದ್ದಿಶ್ಯಾಜುಹ್ವಾನಾ ಅಪಾಂ ವರ್ಷಣಮಿಷಂತ । ಇಚ್ಛಂತಿ । ಕಿಂಚ ಹೇ ವಾಯೋ ಭಗಂ ಭಜನೀಯಂ ತ್ವಾಂ ತ್ಸಾರೀ ತ್ಸರಣವಾನತ್ಯಂತಭೀತೋ ದಸಮಾನ ಉಪಕ್ಷೀಣೋ ಯಜ್ಞವಿಘಾತಕೈಃ ಪಯೋವ್ರತಾದಿನಿಯಮೈರ್ವಾ ಯಜಮಾನಸ್ತಕ್ವವೀಯೇ ತಸ್ಕರಾಣಾಂ ಯಜ್ಞವಿಘಾತಿನಾಮನ್ಯತ್ರ ಗಮನಾಯೇಟ್ಟೇ । ಸ್ತೌತಿ ॥ ಈಡ ಸ್ತುತೌ । ಅದಾದಿತ್ವಾಚ್ಛಪೋ ಲುಕ್ ॥ ಯತಸ್ತ್ವಂ ವಿಶ್ವಸ್ಮಾದ್ಭುವನಾತ್ ಸರ್ವಸ್ಮಾಲ್ಲೋಕಾತ್ ಭೂತಜಾತಾದ್ವಾ ಲೋಕತ್ರಯಸಂಬಂಧಿನೋ ಭಯಾದ್ಧರ್ಮಣಾಸ್ಮದೀಯಹವಿಷಾಂ ಧಾರಣೇನ ಪಾಸಿ ಪಾಲಯಸಿ । ಕಿಂಚಾಸುರ್ಯಾದಸುರಸಂಬಂಧಿನೋ ಭಯಾದ್ವಿಶೇಷೇಣ ಪಾಸಿ ಧರ್ಮಣಾಸ್ಮದ್ಧಾರಣೇನ ಪೋಷಣೇನ ವಾ ಯುಕ್ತಃ ಸನ್ । ಯತ ಏವಂ ಕರೋಷಿ ಅತಃ ಸ್ತೌಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಹೇ ವಾಯೋ**—ಎಲೈ ವಾಯುವೇ । **ತುಭ್ಯಂ**—ನಿನಗೋಸ್ಕರ । **ಶುಕ್ರಾಸಃ**—ಹೊಳೆಯುತ್ತಿರುವುವಾಗಿಯೂ । **ಶುಚಯಃ**—ಶುದ್ಧವಾಗಿಯೂ । **ತುರಣ್ಯವಃ**—(ನಿನ್ನನ್ನು ಸೇರುವ) ಆತುರವುಳ್ಳವುಗಳಾಗಿಯೂ । **ಉಗ್ರಾಃ**—ತೀಕ್ಷ್ಣವಾಗಿಯೂ (ಇರುವ ಸೋಮರಸಗಳು) । **ಮದೇಷು**—(ನಿನ್ನ) ಸಂತೋಷ (ವಿಷಯ) ದಲ್ಲಿ । **ಭುರ್ವಣಿ**—ಯಜ್ಞದಲ್ಲಿ (ಹೋಮಾರ್ಥವಾಗಿ) । **ಇಷಣಂತ**—(ಆಹವನೀಯವನ್ನುದ್ದೇಶಿಸಿ) ಹೋಗುತ್ತವೆ (ಹೋಗಲು ಇಚ್ಛಿಸುತ್ತವೆ) । (**ಕಿಂಚ** ಮತ್ತೂ) । **ಅಪಾಂ ಭುರ್ವಣಿ**—ಮೇಘದಲ್ಲಿ । **ಇಷಂತ**—(ನೀರನ್ನು ಉತ್ಪತ್ತಿಮಾಡಲು) ಇಚ್ಛಿಸುತ್ತವೆ ಅಥವಾ (ನಿನ್ನನ್ನು ಉದ್ದೇಶಿಸಿ ಹೋಮಮಾಡಿ ಯಾಗಕರ್ತೃಗಳು) । **ಅಪಾಂ ಭುರ್ವಣಿ**—ಜಲವೃಷ್ಟಿಯನ್ನು । **ಇಷಂತ**—ಅಪೇಕ್ಷಿಸುತ್ತಾರೆ । **ಹೇ ವಾಯೋ**—ಎಲೈ ವಾಯುವೇ । **ತ್ವಂ**—ನೀನು । **ವಿಶ್ವಸ್ಮಾತ್ ಭುವನಾತ್**—ಸಮಸ್ತ ಪ್ರಪಂಚದಿಂದ (ಪ್ರಾಣಿಸಮೂಹದಿಂದ ಆಗುವ ಭಯದಿಂದ) । **ಧರ್ಮಣಾ**-(ನಮ್ಮ ಹವಿರಾದಿಗಳನ್ನು) ಧರಿಸುವುದರ (ಸ್ವೀಕರಿಸುವುದರ) ಮೂಲಕ। **ಪಾಸಿ**—ರಕ್ಷಿಸುತ್ತೀಯೆ। ಮತ್ತು **ಧರ್ಮಣಾ**—ನಮ್ಮ ಪೋಷಣದಿಂದ (ಯುಕ್ತನಾಗಿ) । **ಅಸುರ್ಯಾತ್**—ಅಸುರಸಂಬಂಧವಾದ (ಭಯದಿಂದ) । **ಪಾಸಿ**—ರಕ್ಷಿಸುತ್ತೀಯೆ । (**ಅತಃ**—ಆದುದರಿಂದ) **ಭಗಂ**—ಭಜನೀಯನಾದ । **ತ್ವಾಂ**—ನಿನ್ನನ್ನು । **ತ್ಸಾರೀ**—(ಅತ್ಯಂತ) ಭಯಶಾಲಿಯೂ । **ದಸಮಾನಃ**—(ಯಜ್ಞವಿಘಾತಕರಿಂದ ಅಥವಾ ಪಯೋವ್ರತಾದ್ಯಾಚರಣೆಗಳಿಂದ) ಕ್ಷೀಣನಾಗಿಯೂ (ಇರುವ ಯಜಮಾನನು) । **ತಕ್ವವೀಯೇ**—ತಸ್ಕರರನ್ನು ನಾಶಮಾಡುವ ವಿಷಯದಲ್ಲಿ । **ಈಟ್ಟೇ**—ಸ್ತುತಿಸುತ್ತಾನೆ.

॥ ಭಾವಾರ್ಥ ॥

ಎಲೈ ವಾಯುವೇ, ಶುಭ್ರವೂ, ಶುದ್ಧವೂ, (ನಿನ್ನನ್ನು ಸೇರಲು) ತ್ವರಾಯುಕ್ತವೂ, ಮದವುಂಟುಮಾಡುವುದರಲ್ಲಿ ಶಕ್ತವೂ (ಆದ) ಸೋಮರಸವು ಯಾಗದಲ್ಲಿ ಹುತವಾಗಲು ಇಚ್ಛಿಸುತ್ತದೆ; ಮತ್ತು ಮೇಘಗಳಲ್ಲಿ ಜಲವುತ್ಪತ್ತಿಯಾಗಬೇಕೆಂದು ಇಚ್ಛಿಸುತ್ತವೆ; (ಯಾಗಕರ್ತೃಗಳು ನಿನ್ನನ್ನುದ್ದೇಶಿಸಿ ಹೋಮಮಾಡಿ, ವೃಷ್ಟಿಯನ್ನು ಅಪೇಕ್ಷಿಸುತ್ತಾರೆ); ನೀನು ಸಮಸ್ತ ಪ್ರಪಂಚದಿಂದಲೂ (ಆಗಬಹುದಾದ) ಭಯವನ್ನು, (ನಮ್ಮಿಂದ ದತ್ತವಾದ) ಹವಿರ್ಧಾರಣಮಾಡಿ, ಪರಿಹರಿಸುತ್ತೀಯೆ ಮತ್ತು (ನಮ್ಮ) ಪೋಷಣಯುಕ್ತನಾಗಿ, ಅಸುರಸಂಬಂಧವಾದ (ಭಯವನ್ನು) ಪರಿಹರಿಸುತ್ತೀಯೆ; ಆದುದರಿಂದ, ಬಹಳ ಭೀತನೂ, ಯಜ್ಞಘಾತಕರಿಂದ (ಪಯೋವ್ರತಾದಿ ನಿಯಮಗಳಿಂದ) ಕ್ಷೀಣನೂ ಆದ (ಯಜಮಾನನು) ತಸ್ಕರನಾಶಕ್ಕಾಗಿ ನಿನ್ನನ್ನು ಸ್ತುತಿಸುತ್ತಾನೆ.

## English Translation.

For you, the bright, pure, quick-flowing (Soma juices), potent for exhilaration, are eager for the (fire of) oblation; are eager for the cloud (showering) waters. The timid and anxious (worshipper) praises you, who are auspicious, for (driving away) thieves; for you defend (us) from all beings, (as the reward) of our righteousness: you protect us from the fear of evil spirits, (as the reward) of our righteousness.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ಸೋಮ**ರಸದ ಪವಿತ್ರವಾದ ಸ್ವರೂಪವನ್ನೂ, **ವಾಯು**ವಿಗೆ ತೃಪ್ತಿಯನ್ನುಂಟುಮಾಡುವುದಕ್ಕಾಗಿ ಸೋಮರಸವು ಆತುರವಾಗಿರುವುದನ್ನೂ, ಸೋಮರಸವನ್ನು ಪಾನಮಾಡಿದನಂತರ **ವಾಯು**ವಿನ ಲೋಕಧಾರಣ ಮತ್ತು ಲೋಕಪೋಷಣದ ಶಕ್ತಿಯು ಅಭಿವೃದ್ಧಿಯನ್ನು ಹೊಂದುವುದನ್ನೂ ಮತ್ತು ಯಜ್ಞಕರ್ತನು ತನ್ನ ಆಪತ್ತುಗಳನ್ನು ತಪ್ಪಿಸಿಕೊಳ್ಳಲು ವಾಯುವಿನ ರಕ್ಷಣೆಯನ್ನೇ ನಂಬಿರುವುದನ್ನೂ ವರ್ಣಿಸಿದೆ.

ಪ್ರಥಮದಲ್ಲಿ **ಶುಕ್ರಾಸಃ, ಶುಚಯಃ** ಎಂಬ ಎರಡು ವಿಶೇಷಣಗಳಿಂದ ಸೋಮರಸದ ಸ್ವರೂಪವನ್ನು ತಿಳಿಸಿದೆ. ಸ್ಥೂಲವಾಗಿ ನೋಡಿದರೆ ಈ ಎರಡು ಪದಗಳಿಗೂ ಒಂದೇ ಅರ್ಥವಿರುತ್ತದೆ. ಆದರೆ ಎರಡು ಪದಗಳನ್ನೂ ಇಲ್ಲಿ ಪ್ರಯೋಗಿಸಿರುವುದರಿಂದ ಎರಡಕ್ಕೂ ಸೂಕ್ಷ್ಮವಾದ ವ್ಯತ್ಯಾಸವಿದ್ದೇ ಇರಬೇಕು.

ನಿರುಕ್ತದಲ್ಲಿ ಎರಡು ಪದಕ್ಕೂ ಒಂದೇ ಧಾತುವೇ ಮೂಲವೆಂದು ತಿಳಿಸಿದೆ. ನಿರುಕ್ತಕಾರರು—

**ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ ।**
**ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ ॥**

( ಋ. ಸಂ. ೨-೧-೧ )

ಎಂಬ ಋಕ್ಕನ್ನು ವಿವರಿಸುವಾಗ ಅಲ್ಲಿ **ಶುಚಿಃ** ಎಂಬ ಶಬ್ದವನ್ನು ವಿವರಿಸುತ್ತಾ, **ಶುಚಿಃ ಶೋಚತೇರ್ಜ್ವಲತಿಕರ್ಮಣಃ** । ಪ್ರಕಾಶಿಸು ಎಂಬರ್ಥವನ್ನು ಕೊಡುವ **ಶುಚ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಮೊದಲು ಭೌತಿಕವಾದ ಅರ್ಥವನ್ನು ತಿಳಿಸಿ ಅನಂತರ **ಅಯಮಪೀತರಃ ಶುಚಿರೇತಸ್ಮಾದೇವ । ನಿಷ್ಷಿಕ್ತಮಸ್ಮಾತ್ಪಾಪ-**

**ಕಮಿತಿ ನೈರುಕ್ತಾಃ ।** ನೈತಿಕವಾದ ಪವಿತ್ರತೆಯನ್ನು ತೋರಿಸತಕ್ಕ **ಶುಚಿ** ಶಬ್ದಕ್ಕೂ ಸಹ ಇದೇ ಧಾತುವೇ ಮೂಲವು. ಅವನಿಂದ ಪಾಪವು ನಿರ್ಮೂಲವಾಗಿ ತೊಳೆಯಲ್ಪಡುತ್ತದೆಯೆಂದು ಹೇಳುವ ಸನ್ನಿವೇಶದಲ್ಲಿ ಈ ಪದದ ಪ್ರಯೋಗವು ಉಚಿತವಾಗಿದೆಯೆಂದು ನಿರುಕ್ತಕಾರರ ಮತ. (ನಿ. ೬–೧) ಪುನಃ,

**ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।**
**ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ॥**
(ಋ. ಸಂ. ೧೦-೧೧೦-೬)

ಎಂಬ ಋಕ್ಕನ್ನು ವಿವರಿಸುವಾಗ ಅಲ್ಲಿ **ಶುಕ್ರ** ಶಬ್ದದ ನಿರ್ವಚನದಲ್ಲಿಯೂ ಸಹ, **ಶುಕ್ರಂ ಶೋಚತೇರ್ಜ್ವಲತಿಕರ್ಮಣಃ** ಎಂದು **ಶುಚಿ** ಶಬ್ದಕ್ಕೆ ಹೇಳಿರುವಂತೆಯೇ ವಿವರಿಸಿದೆ. (ನಿ. ೮–೧೧)

ಸಾಯಣರು ಪ್ರಕೃತವಾದ ಋಕ್ಕಿನಲ್ಲಿ **ಶುಕ್ರಾಸಃ ದೀಪ್ತಾಃ; ಶುಚಯಃ ಶುದ್ಧಾಃ** ಎಂದು **ಶುಕ್ರ** ಶಬ್ದಕ್ಕೆ ಭೌತಿಕವಾದ ಪ್ರಕಾಶವೆಂದೂ, **ಶುಚಿ** ಶಬ್ದಕ್ಕೆ ನೈತಿಕವಾದ ಪಾವಿತ್ರ್ಯವೆಂದೂ ಅರ್ಥಮಾಡಿದ್ದಾರೆ. ಈ ಅರ್ಥವ್ಯತ್ಯಾಸವು ಇಲ್ಲಿ ಸಮಂಜಸವಾಗಿರಬಹುದು. ಇದರ **ಶುಕ್ರ** ಶಬ್ದಕ್ಕೆ ಕೇವಲ ಭೌತಿಕವಾದ ಪ್ರಕಾಶವೇ ಮಾತ್ರವಲ್ಲ. ಆಧ್ಯಾತ್ಮಿಕವಾದ ಜ್ಯೋತಿಯೂ ಈ ಪದದಿಂದ ಸೂಚಿತವಾಗುತ್ತದೆ.

**ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।**
(ಕಠ. ೫-೮)

ಇತ್ಯಾದಿ ವಾಕ್ಯಗಳಲ್ಲಿ **ಶುಕ್ರ** ಶಬ್ದಕ್ಕೆ **ಶುಭ್ರಂ ಶುದ್ಧಂ ತದ್ಬ್ರಹ್ಮ** ಎಂದು ಶಂಕರಾಚಾರ್ಯರ ವಿವರಣೆಯಿರುವುದರಿಂದ ಆಧ್ಯಾತ್ಮಿಕವಾದ ಶುದ್ಧಿಯೂ ಸೂಚಿತವಾಗಿದೆ. ಆದರೆ,

**ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಗ್ಂ ಶುದ್ಧಮಪಾಪವಿದ್ಧಂ ।**
(ಈಶ. ೮)

ಎಂಬಲ್ಲಿ **ಶುಕ್ರ, ಶುದ್ಧ** ಎಂಬ ಎರಡು ಪದಗಳೂ ಇರುವುದರಿಂದ ಕೇವಲ **ದೀಪ್ತಿ** ಯೆಂದರ್ಥ. ಹೀಗೆ ಒಂದೇ ಮೂಲಧಾತುವಿನಿಂದ ನಿಷ್ಪನ್ನವಾದರೂ ಸಹ ಸೂಕ್ಷ್ಮವಾದ ಅರ್ಥವ್ಯತ್ಯಾಸವಿರುವುದರಿಂದ ಆಯಾ ಸನ್ನಿವೇಶಗಳಿಗನು ಗುಣವಾದ ಅರ್ಥವನ್ನು ಗ್ರಹಿಸಬೇಕು. ಪ್ರಕೃತವಾದ ಋಕ್ಕಿನಲ್ಲಿ ಸೋಮರಸವು ಪ್ರಕಾಶವನ್ನು ಬೀರುತ್ತಲೂ, ಶುದ್ಧಿಯಿಂದ ಬೆಳಗುತ್ತಲೂ ಇರುವುದೆಂದು ತಾತ್ಪರ್ಯ. **ಶುಕ್ರಂ ಜ್ಯೋತಿರಜೀಜನತ್** (ಋ. ಸಂ. ೯-೬೬-೨೪); **ಅಜನಯ ತ್ಸೂರ್ಯೇ ಜ್ಯೋತಿರಿಂದುಃ** (ಋ. ಸಂ. ೯–೯೭–೪೧) ಇತ್ಯಾದಿ ವಾಕ್ಯಗಳಲ್ಲಿ ಸೋಮನ ಪ್ರಭಾ ಪೂರಿತವಾದ ಗುಣಗಳನ್ನು ವರ್ಣಿಸಿದೆ.

**ತುರಣ್ಯವಃ— ತ್ವರಣಯುಕ್ತಾಃ ।** ನಿನ್ನನ್ನು ಸಮೀಪಿಸಬೇಕೆಂಬ ಆತುರವುಳ್ಳವು ಎಂದರ್ಥ ಸಾಧಾರಣವಾಗಿ ಅಶ್ವದ ಗಮನವೇಗವನ್ನು ಸೂಚಿಸುವಾಗ ಈ ಪದವನ್ನು ಉಪಯೋಗಿಸುತ್ತಾರೆ. ನಿರುಕ್ತಕಾರರು—

**ಉತ ಸ್ಯ ವಾಜೀ ಕ್ಷಿಪಣಿಂ ತುರಣ್ಯತಿ ಗ್ರೀವಾಯಾಂ ಬದ್ಧೋ ಅಪಿಕಕ್ಷ ಆಸನಿ ।**
(ಋ. ಸಂ. ೪–೪೦–೪)

ಎಂಬ ಋಕ್ಕನ್ನು ವಿವರಿಸುವಾಗ '**ತುರಣ್ಯತಿ**' ಎಂಬುದಕ್ಕೆ **ತೂರ್ಣಮಶ್ನುತೇಽಧ್ವಾನಂ** ವೇಗವಾಗಿ ದಾರಿಯನ್ನು ದಾಟುತ್ತದೆ ಎಂದರ್ಥಮಾಡಿರುವಂತೆ, ಇಲ್ಲಿಯೂ ಸಹ ವಾಯುವನ್ನು ಸಮೀಪಿಸಲು ಸೋಮರಸದ ವೇಗವು ಸೂಚಿತವಾಗಿದೆ.

**ಉಗ್ರಾಃ—ಉಗ್ರ:** ಶಬ್ದಕ್ಕೆ ಎರಡು ವಿಧವಾಗಿ ಅರ್ಥವನ್ನು ಹೇಳಬಹುದು. **ಉದ್ಗೂರ್ಣತೇಜಸಃ** ಅಭಿವ್ಯಕ್ತವಾದ ತೇಜಸ್ಸು ಅಥವಾ ತೀಕ್ಷ್ಣವಾದ ತೇಜಸ್ಸು ಹೊಂದಿರುವುವು ಎಂದು ವಿವರಿಸಿದೆ. ಸೋಮರಸವು ತಾನು ಸ್ವಯಂ ತೇಜೋಯುತವಾಗಿರುವುದಲ್ಲದೆ, ಸೋಮರಸವನ್ನು ಪಾನಮಾಡತಕ್ಕ ಇಂದ್ರಾದಿ ದೇವತೆಗಳನ್ನೂ ಸಹ ತೀಕ್ಷ್ಣವಾದ ಮತಿಯುಳ್ಳವರನ್ನಾಗಿ ಮಾಡುವುದೆಂದು **ಇಂದ್ರಸ್ಯ ಶುಷ್ಮಮೀರಯನ್** (ಋ. ಸಂ. ೯-೭೬-೨) ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿದೆ. ಅಥವಾ **ಯಾ ತೇ ಭೀಮಾನ್ಯಾಯುಧಾ ತಿಗ್ಮಾನಿ ಸಂತಿ ಧೂರ್ವಣೇ** (ಋ. ಸಂ. ೯-೬೧-೩೦) ಇತ್ಯಾದಿ ವಾಕ್ಯಗಳಲ್ಲಿ ಅತಿ ಭಯಂಕರವಾದ ಆಯುಧಗಳನ್ನು ಸೋಮದೇವನು ಧರಿಸಿರುವ ನೆಂದೂ, **ಅವಾಜುಷ್ಟಾನ್ವಿಧ್ಯತಿ ಕರ್ತೇ ಅವ್ರತಾನ್** (ಋ. ಸಂ. ೯-೭೩-೮) ಕರ್ಮಾಚರಣೆಯನ್ನು ಮಾಡದ ಭ್ರಷ್ಟ ರನ್ನು ಹಿಂಸಿಸುವನೆಂದೂ ವರ್ಣಿತವಾಗಿರುವುದರಿಂದ ಈ ವಿಶೇಷಣವಿರಬಹುದು. ಆದರೆ ಪ್ರಕೃತದಲ್ಲಿ ಸೋಮರಸಗಳ ವರ್ಣನೆಯಿರುವುದರಿಂದ ಇಂದ್ರಾದಿ ದೇವತೆಗಳ ತೈಕ್ಷ್ಣ್ಯವನ್ನು ವೃದ್ಧಿಮಾಡುವುದು ಎಂಬರ್ಥವೇ ಸರಿಯಾಗಿದೆ.

**ಭುರ್ವಣಿ—**ಈ ಪದವು ದ್ವಿರುಕ್ತವಾಗಿದೆ ಮೊದಲನೆಯ ಪದಕ್ಕೆ **ಭರಣವತಿ ಯಾಗೇ** ಎಂತಲೂ, ಎರಡನೆಯ ಪದಕ್ಕೆ **ಅಪಾಂ ಭುರ್ವಣಿ ಮೇಘೇ** ಮೇಘದಲ್ಲಿ ಎಂತಲೂ ಅರ್ಥಮಾಡಿದೆ.

ಈ ಪದವು ಧಾರಣಾರ್ಥಕವೂ, ಪೋಷಣಾರ್ಥಕವೂ ಆದ **ಭುರಣ** (ಧಾರಣ ಪೋಷಣಯೋಃ) ಎಂಬ ಧಾತುವಿನಿಂದ ನಿಷ್ಪನ್ನವಾಗಿ **ಭರಣವತಿ ಯಾಗೇ** ಲೋಕಕ್ಕೆ ವೃಷ್ಟಿಯನ್ನು ಸುರಿಸಿ ಅನ್ನಾದಿಗಳಿಗೆ ಹೇತುವಾದುದೂ ಲೋಕವನ್ನು ಭರಿಸತಕ್ಕದ್ದೂ ಆದ ಯಾಗವೆಂದರ್ಥವನ್ನು ಕೊಡುತ್ತದೆ.

**ಯೆನ್ನಾ ಸತ್ಯಾ ಭುರಣ್ಯಥೋ ಯದ್ವಾ ದೇವ ಭಿಷಜ್ಯಥಃ ।**
**ಅಯಂ ವಾಂ ವತ್ಸೋ ಮತಿಭಿರ್ನ ವಿಂಧತೇ ಹವಿಷ್ಮಂತಂ ಹಿ ಗಚ್ಛಥಃ ॥**

(ಋ ಸಂ. ೮-೯-೬)

ಎಂಬಲ್ಲಿ **ಭುರಣ್ಯಥಃ ಸರ್ವಂ ಜಗತ್ಪೋಷಯಥಃ** ನೀವು ಸಕಲ ಜಗತ್ತನ್ನೂ ಪೋಷಿಸುತ್ತೀರಿ ಎಂದು ಅಶ್ವಿನೀ ದೇವತೆಗಳನ್ನು ವರ್ಣಿಸಿರುವಂತೆ ಇಲ್ಲಿಯೂ **ಭುರ್ವಣಿ** ಎಂಬ ಪದದಿಂದ ಲೋಕಪೋಷಕವಾದ ಯಜ್ಞದ ಸ್ವರೂಪ ವನ್ನು ವರ್ಣಿಸಿದೆ.

**ಅಪಾಂ ಭುರ್ವಣಿ** ಎಂದು ಅನ್ವಯವನ್ನು ಮಾಡಿದಾಗ, ಗತ್ಯರ್ಥಕವಾಗಿದೆ. **ಭುರಣ್ಯುಃ, ಭುರಣ್ಯತಿ** ಎಂಬ ಪದಗಳನ್ನು ನಿರುಕ್ತಕಾರರು **ಗತಿಕರ್ಮ**ಗಳಲ್ಲಿ ಸೇರಿಸಿದ್ದಾರೆ. ( ನಿ. ೩-೯ ) ಆ ಗತಿಯಲ್ಲಿಯೂ ಕ್ಷಿಪ್ರವಾದ ಚಲನವನ್ನು ತೋರಿಸಲು ಪಕ್ಷ್ಯಾದಿಗಳಿಗೂ ಭುರಣ್ಯುವೆಂಬ ಹೆಸರು ಪ್ರಸಿದ್ಧವಾಗಿದೆಯೆಂದೂ ತಿಳಿಸಿದೆ. (ನಿ. ೧೨ ೨೨).

**ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾँ ಅನು । ತ್ವಂ ವರುಣ ಪಶ್ಯಸಿ ।**

( ಋ. ಸಂ. ೧-೫೦-೬ )

ಎಂಬ ನಿರುಕ್ತಕಾರರಿಂದ ಉದಾಹೃತವಾದ ಋಕ್ಕಿನಲ್ಲಿರುವ ಪದಕ್ಕೆ ದುರ್ಗಾಚಾರ್ಯರು ತಮ್ಮ ವ್ಯಾಖ್ಯೆಯಲ್ಲಿ **ಪುಣ್ಯಕೃತೋ ಜನಾನನುಭುರಣ್ಯಂತಂ ಪೂರ್ವೇಷಾಂ ಪುಣ್ಯಕೃತಾಂ ಮಾರ್ಗೇಣ ದೇವಯಾನೇನ ಕ್ಷಿಪ್ರಂ ಗಚ್ಛಂತಮನುಪಶ್ಯಸಿ ।** ಎಂದು ಗತ್ಯರ್ಥವನ್ನೇ ಹೇಳಿದ್ದಾರೆ. ಆ ಅರ್ಥವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಹೇಳಿದರೆ ಆಗ **ಅಗ್ನೌ ಹೂಯಮಾನಸ್ಯಾಹುತೇರಾದಿತ್ಯದ್ವಾರಾ ವೃಷ್ಟ್ಯುತ್ಪಾದಕತ್ವಾತ್** ಎಂದು ಸಾಯಣರು

ವಿವರಿಸಿರುವಂತೆ ಅಗ್ನಿಯಲ್ಲಿ ಆಹುತಿ ಮಾಡಲ್ಪಟ್ಟ ಸೋಮರಸಗಳು ಸೂರ್ಯನನ್ನು ಸೇರಿ ಅಲ್ಲಿ ವೃಷ್ಟಿಪತನಕ್ಕೆ ಹೇತುಗಳಾಗುತ್ತವೆಯಾದುದರಿಂದ **ಸೋಮರಸ**ಗಳ ಗಮನವು ಮೇಘಗಳ ಉತ್ಪನ್ನಕ್ಕೆ ಕಾರಣವಾಗುತ್ತದೆ. ಆದುದರಿಂದ **ಅಪಾಂ ಭುರ್ವಣಿ** ಎನ್ನುವುದಕ್ಕೆ **ಮೇಘ**ಗಳಲ್ಲಿ ಎಂದಾಗಲಿ ಅಥವಾ ಮೇಘದ ದ್ವಾರಾ ಜಲವೃಷ್ಟಿಯೆಂದಾಗಲಿ ಅರ್ಥವಾಗುತ್ತದೆ. ಸೋಮರಸವು ಮೇಘದಲ್ಲಿ ಸೇರಿ ವೃಷ್ಟಿಯನ್ನು ಸುರಿಸಲು ಇಚ್ಛಿಸುತ್ತವೆಯೆಂದಾಗಲಿ ಅಥವಾ **ವಾಯು**ವನ್ನುದ್ದೇಶಿಸಿ ಯಾಗಮಾಡಿದ ಯಜ್ಞಕರ್ತರು ಜಲವೃಷ್ಟಿಯನ್ನಪೇಕ್ಷಿಸುತ್ತಾರೆಂದೂ ತಾತ್ಪರ್ಯವಾಗುತ್ತದೆಯೆಂದು ಸಾಯಣರು ವಿವರಿಸಿದ್ದಾರೆ. ಈ ಪದಕ್ಕೆ ಯಾಗವೆಂಬರ್ಥವು ಸಾಕ್ಷಾತ್ತಾಗಿಯೂ ಸಹಜವಾಗಿಯೂ ಇರುವುದರಿಂದ ಅದರಲ್ಲಿ ಸಂಶಯವೇನೂ ಇರುವುದಿಲ್ಲ. ಆದರೆ ಎರಡನೆಯ ಅನ್ವಯದಲ್ಲಿ ಪರಂಪರೆಯಾದ ಅರ್ಥವನ್ನು ಹೇಳಬೇಕಾಗಿರುವುದರಿಂದ ಸಾಯಣರಿಗೂ ಅದು ಕೊಂಚ ಕ್ಲಿಷ್ಟವಾಗಿ ತೋರಿ ಅವರೂ ಸಹ ಪರ್ಯಾಯರೂಪವಾದ ಅರ್ಥವನ್ನು ಹೇಳಿದ್ದಾರೆ.

**ಧರ್ಮಣಾ**— ಈ ಪದವೂ ದ್ವಿರುಕ್ತವಾಗಿದೆ. ಮೊದಲನೆಯ ಪದಕ್ಕೆ **ಅಸ್ಮದೀಯಹವಿಷಾಂ ಧಾರಣೇನ ಪಾಸಿ** ನಮ್ಮ ಹವಿಸ್ಸುಗಳನ್ನು ಸ್ವೀಕರಿಸುವುದರಿಂದ ನಮ್ಮನ್ನು ರಕ್ಷಿಸುತ್ತೀಯೆ ಎಂದು ಸ್ವೀಕಾರಾರ್ಥವೂ, ಎರಡನೆಯ ಪದಕ್ಕೆ **ಅಸ್ಮದ್ಧಾರಣೇನ ಪೋಷಣೇನ ವಾ** ನಮ್ಮನ್ನು ಹಿಡಿದಿರುವುದು ( ರಕ್ಷಿಸುವುದು ) ಮತ್ತು ಪೋಷಿಸುವುದು ಇವುಗಳಿಂದ ಪಾಲಿಸುತ್ತೀಯೆ ಎಂದು ಪೋಷಣಾರ್ಥಕವೂ ಆದ ಅರ್ಥವನ್ನು ಕೊಡುತ್ತದೆ.

**ಭಗಂ— ಭಗೋ ಭಜತೇಃ** । ಪೂಜ್ಯಾರ್ಥಕವಾದ **ಭಜ್** ಧಾತುವಿನಿಂದ ನಿಷ್ಪನ್ನವಾಗಿ **ಭಜನೀಯನಾದ** ಎಂಬರ್ಥವನ್ನು ಕೊಡುತ್ತದೆ. **ವಾಯು**ವಿಗೆ ವಿಶೇಷಣವಾಗಿದೆ. **ಭಗ** ಶಬ್ದಕ್ಕೆ **ಧನ, ಭಗ**ನೆಂಬ ದೇವತೆ, ಇತ್ಯಾದ್ಯರ್ಥಗಳನ್ನು ಆಯಾ ಸಂದರ್ಭಗಳಲ್ಲಿ ತಿಳಿಸಲಾಗುತ್ತದೆ ಎಲ್ಲವೂ ಸಹ ಪೂಜ್ಯಾರ್ಥಕವಾದ ಭಜ್ ಧಾತುವಿನಿಂದಲೇ ನಿಷ್ಪನ್ನವಾಗಿದೆ.

**ತ್ಸಾರೀಃ—ತ್ಸರಣವಾನ್ ; ಅತ್ಯಂತಭೀತಃ** ಬಹಳವಾಗಿ ಭಯಪಟ್ಟವನೆಂದರ್ಥಮಾಡಿದೆ. ಆದರೆ ಈ ಪದವು ಗತ್ಯರ್ಥಕವಾದುದರಿಂದ ಭೀತಿಯಿಂದ ಓಡುವವನು ಎಂದರ್ಥವನ್ನು ಕೊಡುತ್ತದೆ. ನಿರುಕ್ತಕಾರರು ಈ ಪದವನ್ನು **ಗತಿಕರ್ಮ** ನಾಮಗಳಲ್ಲಿ ಸೇರಿಸಿದ್ದಾರೆ. ( ನಿ. ೩-೬). **ತ್ಸರುಃ, ತ್ಸರೀ, ತ್ಸರಿತ್** ಎಂಬ ಪ್ರಯೋಗಗಳು ಇರುವಾಗಲೂ ಸಹ **ಛದ್ಮಗತಿ,** ವಂಚನೆಯಿಂದ ಓಡಿಹೋಗುವುದು ಎಂಬ ಗತ್ಯರ್ಥವೇ ಇರುತ್ತದೆ.

**ಅಜಕಾವಂ ದುರ್ದೃಶೀಕಂ ತಿರೋ ದಧೇ ಮಾ ಮಾಂ ಪದ್ಯೇನ ರಪಸಾ ವಿದತ್ಸರುಃ** ।

(ಋ. ಸಂ. ೭-೫೦-೧)

ಎಂಬಲ್ಲಿ **ತ್ಸರುಃ ಛದ್ಮಗಾಮೀ ಸರ್ಪಃ** ಎಂದು **ಸರ್ಪ**ವೆಂದರ್ಥವಾದರೂ ಗಮನದಲ್ಲಿಯೇ ತಾತ್ಪರ್ಯ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಭೀತಿಯೆಂಬರ್ಥವಾದರೂ ಭೀತಿಯಿಂದ ಓಡಿಹೋಗತಕ್ಕವನು ಎಂಬುದರಲ್ಲಿ ತಾತ್ಪರ್ಯ.

**ದಸಮಾನಃ— ಕ್ಷಯಿಸು** ಎಂಬರ್ಥವನ್ನು ಕೊಡುವ **ದಸ್** ಧಾತುವಿನಿಂದ ನಿಷ್ಪನ್ನವಾಗಿದೆ. **ಯಜ್ಞವಿಘಾತಕೈಃ ಉಪಕ್ಷೀಣಃ** । ಯಜ್ಞಕ್ಕೆ ವಿಘ್ನವನ್ನುಂಟುಮಾಡುವವರ ತೊಂದರೆಯಿಂದ ಕ್ಷಯಿಸಿರುವವನು ಎಂದಾಗಲೀ ಅಥವಾ **ಪಯೋವ್ರತಾದಿನಿಯಮೈರ್ವಾ** ವ್ರತಾಚರಣೆಗಳಿಂದ ಕ್ಷಯಿಸಿದ ದೇಹವುಳ್ಳ ಯಜಮಾನನು ಎಂದಾಗಲೀ ಅರ್ಥವಾಗುತ್ತದೆಂದು ಸಾಯಣರು ವಿವರಿಸಿದ್ದಾರೆ.

**ತಕ್ವವೀಯ್ಯೋ—** ತೃಪುಃ, ತಕ್ವಾ ಇತ್ಯಾದಿ **ಸ್ತೇನ** ನಾಮಗಳಲ್ಲಿ ಪಠಿಸಿದೆ. (ನಿ. ೩-೧೯). **ತಕ್ವನ್** ಶಬ್ದಕ್ಕೆ ಸಾಯಣರು **ತಸ್ಕರಾಣಾಂ ಯಜ್ಞವಿಘಾತಿನಾಂ ಅನ್ಯತ್ರ ಗಮನಾಯ ।** ಯಜ್ಞಕ್ಕೆ ತೊಂದರೆಯನ್ನು ಕೊಡತಕ್ಕ ತಸ್ಕರಾದಿಗಳು ಇಲ್ಲಿಂದ ಓಡಿ ದೂರಪ್ರದೇಶಕ್ಕೆ ಹೋಗುವುದಕಾಗಿ ಎಂದರ್ಥಮಾಡಿದ್ದಾರೆ. ಅದರೆ, ತಸ್ಕರನನ್ನು ಅಟ್ಟಿಸಿಕೊಂಡುಹೋಗುವಕಾರ್ಯವೆಂದು ಹೇಳಿದರೆ ತಪ್ಪಾಗಲಾರದೆಂದು ಕಾಣುತ್ತದೆ.

**ಮಹೀ ಅತ್ರ ಮಹಿನಾ ವಾರಮೃಣ್ವಥೋಽರೇಣವಸ್ತುಜ ಆ ಸದ್ಮನ್ಧೇನವಃ ।**
**ಸ್ವರಂತಿ ತಾ ಉಪರತಾತಿ ಸೂರ್ಯಮಾ ನಿಮ್ರುಚ ಉಷಸಸ್ತಕ್ವವೀರಿವ ॥**

(ಋ. ಸಂ. ೧-೧೫೧ ೫)

ಎಂಬಲ್ಲಿ **ತಕ್ವವೀಃ** ಎಂಬಶಬ್ದಕ್ಕೆ ಕಳ್ಳನನ್ನು ಹುಡುಕತಕ್ಕವನು ಎಂದು ಸಾಯಣರೇ ಅರ್ಥಮಾಡಿರುವಂತೆ **ತಕ್ವಾ ಸ್ತೇನಃ । ತಸ್ಯ ವೇತಾ ಗಂತಾ ಮನುಷ್ಯಃ** (ಋ. ಸಂ. ೧-೧೫೧-೫) ಇಲ್ಲಿಯೂ ಸಹ ಅದೇ ಅರ್ಥವನ್ನು ಹೇಳಬಹುದು ಎಂದರೆ ತಸ್ಕರಾದಿಗಳನ್ನು ಓಡಿಸುವುದಕ್ಕಾಗಿ ನಿನ್ನನ್ನು ಪ್ರಾರ್ಥಿಸುತ್ತೇನೆ ಎಂದು ತಾತ್ಪರ್ಯ. Max muller ಪಂಡಿತನು ಈ ಪದಕ್ಕೆ ಅರ್ಥವನ್ನು ಹೇಳುವಾಗ The tired hunter asks luck of thee in the chase. ತ್ಸಾರೀ ಪದಕ್ಕೆ ಬೇಟೆಗಾರನೆಂದರ್ಥಮಾಡಿ **ತಕ್ವವೀಯೇ** ಎಂಬುದಕ್ಕೆ ಬೇಟೆಗಾರನ ಬೇಟೆಯಲ್ಲಿ ಎಂದರ್ಥ ಮಾಡಿದ್ದಾನೆ. ತನ್ನ ಅರ್ಥವನ್ನು ಸಮರ್ಥಿಸಲು,

I have followed Ludwig in his Explanation ತ್ಸಾರೀ--hunter and ತಕ್ವವೀಯ, chase of the ತಕ್ವ, whatever animal it may be ಎಂದಿದ್ದಾನೆ ತಾನು Ludwig ಎಂಬ ಪಂಡಿತನ ಅರ್ಥವನ್ನನುಸರಿಸಿದ್ದೇನೆಂದು ಹೇಳಿದ್ದಾನೆ.ಆದರೆ ಭಾಷ್ಯಕಾರರ ಅರ್ಥವೇ ಸಮಂಜಸವಾಗಿದೆ ದುಷ್ಟರನ್ನು ಓಡಿಸು ಎಂದು ಯಜಮಾನನ್ನೂ ವಾಯುವನ್ನೂ ಪ್ರಾರ್ಥಿಸಿದ್ದಾನೆ.

॥ ವ್ಯಾಕರಣಪ್ರಕ್ರಿಯಾ ॥

**ಶುಕ್ರಾಸಃ—** ಶುಚ ಶೋಕೇ ಧಾತು. **ಋಜ್ರೇಂದ್ರಾಗ್ರ—**(ಉ. ಸೂ. ೨-೧೮೬) ಎಂಬುದರಿಂದ ರನ್ನಂತವಾಗಿ ನಿಪಾತಿತವಾಗಿದೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ತುರಣ್ಯವಃ—** ತುರಣ ತ್ವರಾಯಾಂ ಧಾತು. **ಕಂಡ್ವಾದಿಭ್ಯೋಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. ಇದರ ಮೇಲೆ ಔಣಾದಿಕ ಉ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಇಷಣಂತೆ—** ಇಣ್ ಗತೌ ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಝ ಪ್ರತ್ಯಯಕ್ಕೆ ಅಂತಾದೇಶ. ಛಾಂದಸ್ತವಾಗಿ ಶ್ರಶ್ನಂ ಎರಡು ವಿಕರಣಗಳು ಬರುತ್ತವೆ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಅಥವಾ ಇಷ ಗತೌ ಧಾತು. ಶ್ನಾ ವಿಕರಣ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣಾಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಭುರ್ವಣಿ** - ಭರ್ವ ಹಿಂಸಾಯಾಂ ಧಾತು. ಇದಕ್ಕೆ ಔಣಾದಿಕ ಅನಿ ಪ್ರತ್ಯಯ. ಛಾಂದಸವಾಗಿ ಧಾತುವಿನ ಅಕಾರಕ್ಕೆ ಉಕಾರದೇಶ. ಪ್ರತ್ಯಯಸ್ವರದಿಂದ ಮಧ್ಯೋದಾತ್ತನಾಗುತ್ತದೆ. **ಸುಪಾಂ ಸುಲುಕ್** - (ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್.

**ಅಪಾಂ**—ಷಷ್ಠೀ ಬಹುವಚನಾಂತರೂಪ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಇಷಂತ**—ಇಷು ಇಚ್ಛಾಯಾಂ ಧಾತು. ಛಾಂದಸವಾಗಿ ಪ್ರಥಮಪುರುಷ ಬಹುವಚನಾಂತರೂಪ. ಛಾಂದಸವಾಗಿ ಛಾದೇಶ ಮತ್ತು ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ತ್ಸಾರೀ**—ತ್ಸರ ಛದ್ಮಗತೌ. ಧಾತು. ತಾಚ್ಛೀಲ್ಯದಲ್ಲಿ ಣಿನಿ ಪ್ರತ್ಯಯ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಪ್ರತ್ಯಯಸ್ವರ ಬರುತ್ತದೆ.

**ದಸಮಾನಃ**—ದಸು ಉಪಕ್ಷಯೇ. ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ವ್ಯತ್ಯಯದಿಂದ ಶ್ಯನ್ ಬರುವುದಿಲ್ಲ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಈಟ್ಟೆ**—ಈಡ ಸ್ತುತೌ. ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತ ಆತ್ಮನೇಪದಾ**—ಎಬುದರಿಂದ ಟಿಗೆ ಏತ್ವ. **ಅದಿ ಪ್ರಭೃತಿಭ್ಯಃ ಶಪಃ** (ಪಾ. ಸೂ. ೩-೪-೭೨) ಎಂಬುದರಿಂದ ಶಪಿಗೆ ಲುಕ್. **ಖರಿ ಚ** ಎಂಬುದರಿಂದ ಡಕಾರಕ್ಕೆ ಟಕಾರಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಪಾಸಿ**—ಪಾ ರಕ್ಷಣೇ. ಧಾತು. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಘಂತನಿಘಾತಸ್ವರ ಬರುತ್ತದೆ.

**ಧರ್ಮಣಾ**—ಧೃ‌ಞ್ ಧಾರಣೇ. ಧಾತು. ಇದಕ್ಕೆ ಮನಿನ್ ಪ್ರತ್ಯಯ ಬಂದಾಗ ಧಾತುವಿನ ಇಕಿಗೆ ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಅಸುರ್ಯಾತ್**—ಅಸುರ ಶಬ್ದ. ಸಂಬಂಧಾರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ತಿತ್ ಸ್ವರಿತಂ** ಎಂಬುದರಿಂದ ಸ್ವರಿತಸ್ವರ ಬರುತ್ತದೆ. ‖ ೫ ‖



‖ ಸಂಹಿತಾಪಾಠಃ ‖

ತ್ವಂ ನೋ ವಾಯವೇಷಾಮಪೂರ್ವ್ಯಃ ಸೋಮಾನಾಂ ಪ್ರಥಮಃ ಪೀತಿ-
ಮರ್ಹಸಿ ಸುತಾನಾಂ ಪೀತಿಮರ್ಹಸಿ ।
ಉತೋ ವಿಹುತ್ಮತೀನಾಂ ವಿಶಾಂ ವವರ್ಜುಷೀಣಾಂ ।
ವಿಶ್ವಾ ಇತ್ತೇ ಧೇನವೋ ದುಹ್ರ ಆಶಿರಂ ಘೃತಂ ದುಹ್ರತ ಆಶಿರಂ ‖ ೬ ‖

॥ ಪದಪಾಠಃ ॥

ತ್ವಂ । ನಃ । ವಾಯೋ ಇತಿ । ಏಷಾಂ । ಅಪೂರ್ವ್ಯಃ । ಸೋಮಾನಾಂ । ಪ್ರಥಮಃ । ಪೀತಿಂ । ಅರ್ಹಸಿ ।
ಸುತಾನಾಂ । ಪೀತಿಂ । ಅರ್ಹಸಿ ।
ಉತೋ ಇತಿ । ವಿಹುತ್ಮತೀನಾಂ । ವಿಶಾಂ । ವವರ್ಜುಷೀಣಾಂ ।
ವಿಶ್ವಾಃ । ಇತ್ । ತೇ । ಧೇನವಃ । ದುಹ್ರೇ । ಆಽಶಿರಂ । ಘೃತಂ । ದುಹ್ರತೇ । ಆಽಶಿರಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತ್ವಮಪೂರ್ವ್ಯಃ । ನ ವಿದ್ಯತೇ ಪೂರ್ವಂ ಯಸ್ಮಾತ್ ತತ್ಸ್ಥಾನಮಪೂರ್ವಂ । ತದರ್ಹತೀತ್ಯಪೂರ್ವಃ । ತಾದೃಶಃ ಅತ ಏವ ಪ್ರಥಮ ಇತರದೇವೇಭ್ಯಃ ಪೂರ್ವಭೂತಃ ಸನ್ ಸೋಮಾನಾಂ ಪೀತಿಂ ಪಾನಮರ್ಹಸಿ । ಪ್ರಾಪ್ನೋಷಿ । ಸುತಾನಾಮಭಿಷವಕೃತಾನಾಂ ಸೋಮಾನಾಂ ಪೀತಿಂ ಪಾನಮರ್ಹಸಿ । ಯತ್ರ ಯತ್ರಾಭಿಷವೋಽಸ್ತಿ ತತ್ರ ಸರ್ವತ್ರ ನಿಯಮೇನ ಪಿಬಸೀತ್ಯರ್ಥಃ । ಪೂರ್ವಂ ಪ್ರಾಥಮ್ಯಾಭಿಪ್ರಾಯೇಣ ಇದಾನೀಂ ತು ಸರ್ವತ್ರ ಸೋಮವತಿ ಯಾಗೇಽಸ್ಯ ಪಾನಮಸ್ತೀತಿ ಜ್ಞಾಪಯಿತುಂ ಪೃಥಗಭಿಧಾನಂ । ನ ಕೇವಲಂ ಸೋಮಪಾನಮಾತ್ರಂ ಉತೋ ಅಪಿ ತು ವಿಹುತ್ಮತೀನಾಂ ವಿಶೇಷೇಣ ಹೋಮವತೀನಾಮಾಹ್ವಾನವತೀನಾಂ ವಾ ॥ ಜುಹೋತೇಃ ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ತತೋ ಮತುಬ್ಙೀಪೌ ॥ ವವರ್ಜುಷೀಣಾಮನಭಿಮತಪಾಪಂ ವರ್ಜಯಂತೀನಾಂ ॥ ವರ್ಜಯತೇರ್ಲಿಟಃ ಕ್ವಸುಃ ಜಃ ಇಸ್ಸಂಪ್ರಸಾರಣತ್ವಾನಿ ॥ ವಿಶಾಮೃತ್ವಿಗ್ಯಜಮಾನರೂಪಾಣಾಂ ಪ್ರಜಾನಾಂ ಸಂಬಂಧಿ ಹವಿಃ ಸ್ವೀಕರೋಷೀತಿ ಶೇಷಃ । ಯದ್ವಾ । ತೇಷಾಂ ಯಷ್ಟೄಣಾಂ ವಿಶ್ವಾ ಇದ್ಧೇನವಃ ಸರ್ವಾ ಅಪಿ ಗಾವಸ್ತೇ ತ್ವದರ್ಥಮಾಶಿರಮಾಶ್ರಯಣದ್ರವ್ಯಂ ಕ್ಷೀರಂ ದುಹ್ರೇ । ದುಹಂತಿ ಸ್ವಯಮೇವ ॥ ಕರ್ತರಿ ನ ದುಹಸ್ನುನಮಾಮಿತಿ ಯಗಭಾವಃ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಬಹುಲಂ ಛಂದಸೀತಿ ರುಟ್ ॥ ತಥಾಶಿರಂ ಘೃತಮುಪಸ್ತರಣಾಭಿಘಾರಣಾದ್ಯಾಶ್ರಯಣಾಯ ಯೋಗ್ಯಂ ಕರಣಂ ದ್ರವ್ಯಂ ದುಹ್ರತೇ ॥

॥ ಪ್ರತಿಪದಾರ್ಥ ॥

**(ಹೇ) ವಾಯೋ**—ಎಲೈ ವಾಯುವೇ । **ತ್ವಂ**—ನೀನು । **ಅಪೂರ್ವ್ಯಃ**—(ಸೋಮಪಾನವಿಷಯದಲ್ಲಿ ನಿನಗಿಂತಲೂ) ಪೂರ್ವದಲ್ಲಿ ಯಾರೂ ಇಲ್ಲದವನು । **(ಅತ ಏವ**—ಆದುದರಿಂದಲೇ) । **ಪ್ರಥಮಃ**—(ಇತರ ದೇವತೆಗಳಿಗಿಂತ) ಮೊದಲನೆಯವನಾಗಿ । **ನಃ**—ನಮ್ಮ ಸಂಬಂಧವಾದ । **ಏಷಾಂ**—ಈ (ಪುರೋವರ್ತಿಗಳಾದ) । **ಸೋಮಾನಾಂ**—ನಾನಾಪಾತ್ರಸ್ಥಸೋಮರಸಗಳ । **ಪೀತಿಂ**—ಪಾನವನ್ನು । **ಅರ್ಹಸಿ**—ಹೊಂದುತ್ತೀ । **ಸುತಾನಾಂ**—ಹಿಂಡಲ್ಪಟ್ಟ (ಎಲ್ಲಾ ಸೋಮರಸಗಳ) । **ಪೀತಿಂ** - ಪಾನವನ್ನು । **ಅರ್ಹಸಿ**—(ಹೊಂದಲು) ಅರ್ಹನಾಗಿದ್ದೀ । **ಉತೋ**—ಮತ್ತು । **ವಿಹುತ್ಮತೀನಾಂ**— ವಿಶೇಷಹೋಮಯುಕ್ತರೂ (ಸ್ತುತಿರೂಪ ಆಹ್ವಾನಯುಕ್ತರೂ)

**ವವರ್ಜುಷೀಣಾಂ**—(ಅನಿಷ್ಟವಾದ ಪಾಪವನ್ನು) ವಿಸರ್ಜಿಸಲು ಇಚ್ಛೆಯುಳ್ಳವರೂ ಆದ । **ವಿಶಾಂ**—ಋತ್ವಿಜರ ಮತ್ತು ಯಜಮಾನರುಗಳ (ಸಂಬಂಧವಾದ ಹವಿಸ್ಸನ್ನು ಸ್ವೀಕರಿಸುತ್ತೀ) [ಅಥವಾ । **ವಿಹುತ್ಮತೀನಾಂ**—ವಿಶೇಷ ಹೋಮಯುಕ್ತರೂ । **ವವರ್ಜುಷೀಣಾಂ**—ಅನಿಷ್ಟಪಾಪವಿಸರ್ಜನೇಚ್ಛುಗಳೂ ಆದ । **ವಿಶಾಂ**—ಋತ್ವಿಜರು ಮೊದಲಾದವರ ।] **ವಿಶ್ವಾಃ ಇತ್ ಧೇನವಃ**—ಸಮಸ್ತಗೋವುಗಳೂ । **ತೇ**— ನಿನಗೋಸ್ಕರ । **ಆಶಿರಃ**—ಕ್ಷೀರವನ್ನು **ದುಹ್ರೇ**—(ತಾವಾಗಿಯೇ) ದೋಹನಮಾಡುತ್ತವೆ । **(ತಥಾ**—ಹಾಗೆಯೇ) । **ಆಶಿರಂ**—ಆಭಿಘಾರಾದ್ಯುಪಯುಕ್ತವಾದ । **ಘೃತಂ**—ಘೃತವನ್ನು । **ದುಹ್ರತೇ**—ದೋಹನಮಾಡುತ್ತವೆ.

‖ ಭಾವಾರ್ಥ ‖

ಎಲೈ ವಾಯುವೇ, (ಸೋಮಪಾನ ವಿಷಯದಲ್ಲಿ) ನೀನೇ ಪ್ರಥಮಪಾನಾರ್ಹನು । (ಆದುದರಿಂದಲೇ) ಈ ನಮ್ಮ ಸಂಬಂಧವಾದ ಸೋಮವನ್ನು (ಇತರ ದೇವತೆಗಳಿಗಿಂತ) ಮೊದಲು ಪಾನಮಾಡಲು ನಿನಗೇ ಅರ್ಹತೆ; (ಇಷ್ಟೇ ಅಲ್ಲ) ಸೋಮಾಭಿಷವವಾದೆಡೆಯಲ್ಲೆಲ್ಲಾ ನಿನಗೇ (ಪ್ರಥಮ) ಪಾನಾರ್ಹತೆ. ವಿಶೇಷ ಹೋಮಗಳನ್ನು ಮಾಡಿ, ಅನಿಷ್ಟವಾದ ಪಾಪಗಳನ್ನು ಪರಿಹರಿಸಿಕೊಳ್ಳಲು ಇಚ್ಛಿಸುವ ಋತ್ವಿಜರೇ ಮೊದಲಾದವರ ಹೋಮಗಳನ್ನೂ ಸ್ವೀಕರಿಸುತ್ತೀಯೆ; ಅವರ ಎಲ್ಲಾ ಗೋವುಗಳೂ ನಿನಗೋಸ್ಕರಲೇ, ಕ್ಷೀರ, ಘೃತ ಮೊದಲಾದವುಗಳನ್ನು ದೋಹನ ಮಾಡುತ್ತವೆ.

## English Translation.

You, Vayu, who are preceded by none, are entitled to drink first of these our libations: you are entitled to drink of the effused (juices), moreover, (of all) oblations and sin-offerings of men: for you, their cattle yield milk; (for you) they yield butter.

‖ ವಿಶೇಷವಿಷಯಗಳು ‖

**ತ್ವಂ ಅಪೂರ್ವ್ಯಃ ಪ್ರಥಮಃ ಸೋಮಾನಾಂ ಪೀತಿಮರ್ಹಸಿ**—ಸೋಮಪಾನವನ್ನು ಮಾಡುವುದರಲ್ಲಿ ನಿನಗಿಂತಲೂ ಮೊದಲು ಯಾರೂ ಇಲ್ಲ. ಎಲ್ಲರಿಗಿಂತಲೂ ನೀನೇ ಪ್ರಥಮಪಾನಮಾಡುವವನಾಗಿದ್ದೀಯೆ ಎಂದು ಪೂರ್ವಕಥೆಯನ್ನು ಸೂಚಿಸಿದೆ. ವಾಯುವು ಎಲ್ಲರಿಗಿಂತಲೂ ಮೊದಲು ಸೋಮಪಾನಮಾಡಿದುದನ್ನು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ಹೇಳಿದೆ.

**ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್ನಹಂ ಪ್ರಥಮಃ ಪಿಬೇಯ-ಮಹಂ ಪ್ರಥಮಃ ಪಿಬೇಯಮಿತ್ಯೇವಾಕಾಮಯಂತ ತೇ ಸಂಪಾದಯಂತೋಽಬ್ರುವನ್ಹಂ-ತಾಜಿಮಯಾಮ ಸ ಯೋ ನ ಉಜ್ಜೇಷ್ಯತಿ ಸ ಪ್ರಥಮಃ ಸೋಮಸ್ಯ ಪಾಸ್ಯತೀತಿ ತಥೇತಿ ಸ ಆಜಿಮಯುಸ್ತೇಷಾಮಾಜಿಂ ಯತಾಮಭಿಸೃಷ್ಟಾನಾಂ ವಾಯುರ್ಮುಖಂ ಪ್ರಥಮಃ ಪ್ರತ್ಯಪದ್ಯತಾಥೇಂದ್ರೋಽಥ ಮಿತ್ರಾವರುಣಾವಥಾಶ್ವಿನೌ ।**

**ಸೋಽವೇದಿಂದ್ರೋ ವಾಯುಮುದ್ವೈ ಜಯತೀತಿ ತಮನು ಪರಾಪತತ್ಸಹ ನಾವಥೋಜ್ಜಯಾವೇತಿ ಸ ನೇತ್ಯಬ್ರವೀದಹಮೇವೋಜ್ಜೇಷ್ಯಾಮೀತಿ ತೃತೀಯಂ ಮೇಽಥೋಜ್ಜಯಾವೇತಿ ನೇತಿ ಹೈವಾಬ್ರವೀದಹಮೇವೋಜ್ಜೇಷ್ಯಾಮೀತಿ ತುರೀಯಂ ಮೇಽಥೋಜ್ಜಯಾವೇತಿ ತಥೇತಿ ತಂ ತುರೀಯೇಽತ್ಯಾರ್ಜತ ತತ್ತುರೀಯಭಾಗಿಂದ್ರೋಽಭವತ್ತ್ರಿಭಾಗ್ವಾಯುಃ ॥**

(ಐ. ಬ್ರಾ. ೨-೨೫).

ದೇವತೆಗಳಲ್ಲೆಲ್ಲಾ ಮೊದಲು ಯಾರು ಸೋಮಪಾನವನ್ನು ಮಾಡಬೇಕೆಂಬ ವಿಷಯದಲ್ಲಿ ಮೊದಲು ಚರ್ಚೆಯಾಗಿ ಪ್ರತಿಯೊಬ್ಬರೂ ತಾನೇ ಮೊದಲು ಕುಡಿಯಬೇಕೆಂಬ ಆತುರದಿಂದ ವಾಗ್ವಾದಕ್ಕೆ ಪ್ರಾರಂಭವಾಯಿತು. ಅನಂತರ ಎಲ್ಲರೂ ಸೇರಿ ಒಂದು ಒಪ್ಪಿಗೆಗೆ ಬಂದರು. ಒಂದು ಓಟದ ಸ್ಪರ್ಧೆಯನ್ನೇರ್ಪಡಿಸಿ, ಅದರಲ್ಲಿ ಯಾರು ಗೆಲ್ಲುವರೋ ಅವರಿಗೆ ಸೋಮಪಾನದಲ್ಲಿ ಪ್ರಥಮಸ್ಥಾನವಿರತಕ್ಕದ್ದೆಂದು ಎಲ್ಲರೂ ಒಪ್ಪಿದರು. ಸ್ಪರ್ಧೆಯಲ್ಲಿ ಎಲ್ಲರಿಗಿಂತಲೂ ಮೊದಲೇ **ವಾಯುವು** ಗಮ್ಯಸ್ಥಾನವನ್ನು ತಲಪಿದನು. ಅನಂತರ **ಇಂದ್ರ, ಮಿತ್ರ, ವರುಣ** ಮತ್ತು **ಅಶ್ವಿನೀ** ದೇವತೆಗಳು ಒಬ್ಬರಹಿಂದೊಬ್ಬರು ಕ್ರಮವಾಗಿ ಸೇರಿದರು. ವಾಯುವನ್ನೂ ಸಹ ಜಯಿಸಬೇಕೆಂಬ ಆತುರದಿಂದ ಇಂದ್ರನು ಓಡಿ ಕೊನೆಗೆ ಕೈಲಾಗದೆ ವಾಯುವಿನ ಪಕ್ಕದಲ್ಲಿಯೇ ಬಿದ್ದುಬಿಟ್ಟನು. ಆಗ ವಾಯುವನ್ನು ಕುರಿತು— 'ನಾವಿಬ್ಬರೂ ಒಟ್ಟಿಗೆ ಬಂದು ಸೇರಿದ್ದೇವೆ. ಆದ್ದರಿಂದ ಜಯದಲ್ಲಿ ಇಬ್ಬರೂ ಭಾಗವನ್ನು ವಹಿಸೋಣ' ಎಂದನು. ವಾಯುವು ಅದಕ್ಕೊಪ್ಪದೆ ಜಯದಲ್ಲಿ ತನಗೇ ಪ್ರಥಮಸ್ಥಾನವು ದೊರೆಯಬೇಕೆಂದನು. ಆಗ ಇಂದ್ರನು ತನಗೆ ಮೂರನೆಯ ಸ್ಥಾನವನ್ನಾದರೂ ಕೊಡಬೇಕೆಂದು ಕೇಳಿದಾಗ ವಾಯುವು ಅದಕ್ಕೂ ಒಪ್ಪಲಿಲ್ಲ. ಕೊನೆಗೆ ಇಂದ್ರನು ತನಗೆ ನಾಲ್ಕನೆಯ ಸ್ಥಾನವನ್ನಾದರೂ ಬಿಟ್ಟುಕೊಡಬೇಕೆಂದಾಗ ವಾಯುವು ಒಪ್ಪಿಕೊಂಡನು. ಆಗ ವಾಯುವಿಗೆ ಮೊದಲನೆಯ ಮೂರು ಸ್ಥಾನವೂ, ಇಂದ್ರನಿಗೆ ನಾಲ್ಕನೆಯ ಸ್ಥಾನವೂ ದೊರಕಿತು. ಪ್ರಕೃತವಾದ ಋಕ್ಕಿನಲ್ಲಿ ಸೋಮಪಾನ ಸಂದರ್ಭದಲ್ಲಿ ವಾಯುವು ಸಂಪಾದಿಸಿದ ಪ್ರಥಮಸ್ಥಾನದ ವಿಷಯವನ್ನು ಸೂಚಿಸಿ **ತ್ವಂ ಪ್ರಥಮಃ ಸೋಮಾನಾಂ ಪೀತಿಮರ್ಹಸಿ** ಎಂದಿದೆ.

**ಅಪೂರ್ವ್ಯಃ – ನ ವಿದ್ಯತೇ ಪೂರ್ವಂ ಯಸ್ಮಾತ್ ತತ್ಪಾನಮಪೂರ್ವಂ ತದರ್ಹತೀತ್ಯಪೂರ್ವ್ಯಃ ।** ಅವನಿಗಿಂತ (ವಾಯುವಿಗಿಂತ) ಮೊದಲು ಸೋಮಪಾನವನ್ನು ಮಾಡಲು ಯಾರಿಗೂ ಅಧಿಕಾರವಿಲ್ಲವೆಂದರ್ಥ.

**ಪೂರ್ವಂ ಪ್ರಾಥಮ್ಯಾಭಿಪ್ರಾಯೇಣ ಇದಾನೀಂ ತು ಸರ್ವತ್ರ ಸೋಮವತಿ ಯಾಗೇಽಸ್ಯ ಪಾನಮಸ್ತೀತಿ ಜ್ಞಾಪಯಿತುಂ ಪೃಥಗಭಿಧಾನಂ ।** ಹಿಂದೆ ಸೋಮಯಾಗದಲ್ಲಿ ಸೋಮಪಾನವನ್ನು ಮಾಡಲು ಪ್ರಥಮಸ್ಥಾನವಿದ್ದಂತೆಯೇ ಈಗಲೂ ಸಕಲ ಸೋಮಯಾಗಗಳಲ್ಲಿಯೂ ಅಗ್ರಸ್ಥಾನವೆಂದು ತೋರಿಸಲು **ಪ್ರೀತಿಮರ್ಹಸಿ** ಎಂಬುದು ದ್ವಿರುಕ್ತವಾಗಿದೆಯೆಂದು ಸಮರ್ಥಿಸಿದೆ. ಸೋಮರಸದ ಪಾನವೇ ಅಲ್ಲದೇ **ವಿಹುತ್ಮತಿಗಳ** ಮತ್ತು **ನವರ್ಜುಷಿಗಳ** ಆಹುತಿಗಳನ್ನೂ ಸ್ವೀಕರಿಸಲು ಅರ್ಹನಾಗಿದ್ದೀಯೆಂದೂ ತಿಳಿಸಿದೆ.

**ವಿಹುತ್ಮತೀನಾಂ—ವಿಶೇಷೇಣ ಹೋಮವತೀನಾಂ ; ಆಹ್ವಾನವತೀನಾಂ ವಾ ।** ವಿಶೇಷವಾಗಿ ಆಹುತಿಯನ್ನರ್ಪಿಸತಕ್ಕ ಹೋಮವುಳ್ಳವರ ಅಥವಾ ನಿಮಗೆಲ್ಲಾ ಆಹ್ವಾನವನ್ನು ಕೊಡತಕ್ಕವರ ಎಂದು **ವಿಶಾಂ ಪ್ರಜಾನಾಂ** ಎಂಬ ಪದಕ್ಕೆ ವಿಶೇಷಣವಾಗಿದೆ.

**ವವರ್ಜುಷೀಣಾಂ—ಅನಭಿಮತಪಾಪಂ ವರ್ಜಯಂತೀನಾಂ ।** ಅನಿಷ್ಟಗಳಾದ ಪಾಪಗಳನ್ನು ನಾಶ ಮಾಡಲಿಷ್ಟವುಳ್ಳ ಎಂದು ಅದೂ **ವಿಶಾಂ** ಎಂಬ ಪದಕ್ಕೆ ವಿಶೇಷಣವಾಗಿದೆ. ಈ ವಿಶೇಷಣಗಳಿಂದ ದೇವತಾಪ್ರೀತಿಯನ್ನು ಸಂಪಾದಿಸಬೇಕೆಂಬ ಆತುರವೂ, ಅದಕ್ಕೆ ಸಾಧನವಾದ ಶುದ್ಧಿಯನ್ನು ಪಡೆಯಲು ಪಾಪರಾಹಿತ್ಯವನ್ನು ಹೊಂದಬೇಕೆಂಬ ಪ್ರಯತ್ನವೂ ತೋರುತ್ತದೆ.

**ಆಶಿರಂ—ಆಶೀರಾಶ್ರಯಣಾದ್ವಾಽಶ್ರಪಣಾದ್ವಾ ।** (ನಿ. ೬-೮) ಶ್ರೀಞ್ ಧಾತುವಿಗೆ **ಆ** ಎಂಬ ಉಪಸರ್ಗವು ಸೇರಿ ಸೇರಿಸು ಎಂಬರ್ಥವನ್ನು ಕೊಡುವುದರಿಂದಾಗಲಿ, ಅಥವಾ **ಶ್ರಾ** ಧಾತುವಿಗೆ **ಆ** ಎಂಬ ಉಪಸರ್ಗವನ್ನು ಸೇರಿಸಿ ಸೂಕ್ಷ್ಮವಾಗಿ ಪಾಕಮಾಡು ಎಂಬರ್ಥವನ್ನು ಕೊಡುವುದರಿಂದಾಗಲಿ **ಆಶಿರ** ಶಬ್ದದ ನಿಷ್ಪತ್ತಿಯಾಗುತ್ತದೆ **ಆಶಿರ**ಗಳಲ್ಲಿ **ದಧ್ಯಾಶಿರ, ಗವಾಶಿರ, ಯವಾಶಿರ** ಎಂಬ ಮೂರು ವಿಧಗಳನ್ನು ಹಿಂದೆ ತಿಳಿಸಿದೆ. ಪ್ರಕೃತದಲ್ಲಿ ಸೋಮರಸದೊಂದಿಗೆ ಕ್ಷೀರವನ್ನು ಮಿಶ್ರಮಾಡುವ ವಿಧಾನವನ್ನು ಈ ಪದವು ತಿಳಿಸುತ್ತದೆ. ಅದಕ್ಕಾಗಿ ಗೋವುಗಳು ಕ್ಷೀರಗಳನ್ನು ಸಿದ್ಧಪಡಿಸುತ್ತವೆ ಎಂದು ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಪೂರ್ವ್ಯಃ**—ಪೂರ್ವಂ ಅರ್ಹತಿ ಪೂರ್ವ್ಯಃ. ಅರ್ಹಾರ್ಥದಲ್ಲಿ ಯತ್ ಪ್ರತ್ಯಯ. ನಞ್ ತತ್ಪುರುಷ ಸಮಾಸ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೧) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಪೀತಿಂ**—ಪಾ ಪಾನೇ. ಧಾತು. ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಘುಮಾಸ್ಥಾ ಗಾಪಾಜ**—(ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿನ ಆಕಾರಕ್ಕೆ ಈತ್ವ.

**ಅರ್ಹಸಿ**—ಅರ್ಹ ಪೂಜಾಯಾಂ ಧಾತು. ಭ್ವಾದಿ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸುತಾನಾಂ**—ಷುಞ್ ಅಭಿಷವೇ. ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯಸ್ವರ ಬರುತ್ತದೆ. ಷಷ್ಠೀ ಬಹುವಚನಾಂತರೂಪ.

**ವಿಹುತ್ಮತೀನಾಂ**—ವಿ ಉಪಸರ್ಗ. ಹು ದಾನಾದನಯೋಃ ಧಾತು. **ಸಂಪದಾದಿಭ್ಯಃ ಕ್ವಿಪ್** (ಪಾ. ಸೂ. ೩-೩-೧೦೮-೯) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್. **ಹ್ರಸ್ವಸ್ಯ ಪಿತಿಕೃತಿತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ವಿಹುತ್ ಅಸ್ಯ ಅಸ್ತಿ ಎಂದು ಅರ್ಥವಿವಕ್ಷಾ ಮಾಡಿದಾಗ ಮತುಪ್ ಪ್ರತ್ಯಯ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ಪ್ರತ್ಯಯಗಳೆರಡೂ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಾದಿ ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವಿಶಾಂ**—ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವವರ್ಜುಷೀಣಾಂ**—ವೃಜೀ ವರ್ಜನೇ. ಧಾತು. ಛಾಂದಸವಾಗಿ ಲಿಟ್ ಬಂದಾಗ ಅದಕ್ಕೆ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ. ಧಾತುವಿಗೆ ದ್ವಿತ್ವಾದಿ. ಸ್ತ್ರೀತ್ವ ವಿವಕ್ಷಾಮಾಡಿದಾಗ ಉಗಿತ್ತಾದುದರಿಂದ ಜೀಪ್. ಭಸಂಜ್ಞಾ ಇರುವುದರಿಂದ ಸಂಪ್ರಸಾರಣ ಪೂರ್ವರೂಪ. ವ್ಯತ್ಯಯದಿಂದ ಗುಣ. ಕ್ವಸುವಿನ ಸ್ವರ ಉಳಿಯುತ್ತದೆ. ಷಷ್ಠೀ ಬಹುವಚನಾಂತರೂಪ.

**ದುಹ್ರೇ**—ದುಹ ಪ್ರಪೂರಣೇ. ಧಾತು. ಕರ್ಮಕರ್ತರಿಯಲ್ಲಿ ಲಟ್. ಕರ್ಮವದ್ಭಾವವಿರುವುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. **ನ ದುಹಸ್ನು**—(ಪಾ. ಸೂ. ೩-೧-೮೯) ಎಂಬುದರಿಂದ ಯಕ್ ಬರುವುದಿಲ್ಲ. ಏಕವಚನದಲ್ಲಿ ತ ಪ್ರತ್ಯಯ. **ಲೋಪಸ್ತ ಆತ್ಮನೇ ಪದೇಷು** ಎಂಬುದರಿಂದ ತಕಾರಕ್ಕೆ ಲೋಪ ಟಿಗೆ ಏತ್ವ. **ಬಹುಲಂ ಛಂದಸಿ** ಎಂಬುದರಿಂದ ರುಟಾಗಮ. ದುಹ್ರೇ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ. ದುಹ್ರತೇ ಎಂಬಲ್ಲಿ ಬಹುವಚನ ಪ್ರತ್ಯಯ ॥ ೬ ॥

ಇಲ್ಲಿಗೆ ನೂರ ಮೂವತ್ತನಾಲ್ಕನೇ ಸೂಕ್ತ ಮುಗಿದುದು.



## ನೂರ ಮೂವತ್ತೈದನೆಯ ಸೂಕ್ತವು

**ಸ್ತೀರ್ಣಂ ಬರ್ಹಿರಿತಿ ನವರ್ಚಂ ಸೂಕ್ತಂ ಪಾರುಚ್ಛೇಪಮಾತ್ಯಷ್ಟಂ । ಪೂರ್ವತ್ರೆ ತುಶಬ್ದಾದ್ವಾಯುದೇವತ್ಯಂ । ಆ ವಾಂ ರಥ ಇತ್ಯಾದ್ಯೃಕ್ಪಂಚಕಮೈಂದ್ರಂ । ಸಪ್ತಮ್ಯಷ್ಟಮಾವಷ್ಟೀ । ಅತ್ರಾನುಕ್ರಮಣಿಕಾ । ಸ್ತೀರ್ಣಂ ನವ ಚತುರ್ಥ್ಯಾದ್ಯಾಃ ಪಂಚೈಂದ್ರ್ಯಶ್ಚೋಪಾಂತ್ಯೇ ಅಷ್ಟೀ ಇತಿ ॥ ಸೂಕ್ತಸ್ಯವಿಶೇಷವಿನಿಯೋಗೋ ಲೈಂಗಿಕಃ । ದಶರಾತ್ರಸ್ಯ ಷಷ್ಠೇಽಹನಿ ಪ್ರಉಗಶಸ್ತ್ರ ಆದ್ಯೌ ತೃಚೌ ಪಾಕೃತಯೋರ್ವಾಯವ್ಯೈಂದ್ರವಾಯವ್ಯಯೋಃ ಸ್ಥಾನೇ ವಿನಿಯುಕ್ತೌ । ಷಷ್ಠಸ್ಯ ಪ್ರಾತಃಸವನ ಇತಿ ಖಂಡೇ ಸೂತ್ರಿತಂ । ಸ್ತೀರ್ಣಂ ಬರ್ಹಿರಿತಿ ತೃಚೌ । ಆ. ೮-೧ । ಇತಿ ॥**

ಅನುವಾದವು—**ಸ್ತೀರ್ಣಂ ಬರ್ಹಿಃ** ಎಂಬ ಈ ಸೂಕ್ತವು ಇಪ್ಪತ್ತನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪರುಚ್ಛೇಪನು ಋಷಿಯು. ಹಿಂದೆಯೇ ಹೇಳಿದಂತೆ ಇದಕ್ಕೆ ವಾಯುವು ದೇವತೆಯು. **ಆ ವಾಂ ರಥ** ಎಂದು ಮೊದಲಾಗುವ (೫-೯) ಐದು ಋಕ್ಕುಗಳಿಗೆ ಇಂದ್ರನು ದೇವತೆಯು. ಉಳಿದ ಋಕ್ಕುಗಳು ವಾಯುದೇವತಾಕವು. ಅತ್ಯಷ್ಟಿ ಛಂದಸ್ಸು. ಏಳು ಮತ್ತು ಎಂಟನೇ ಋಕ್ಕುಗಳು ಅಷ್ಟಿಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಸ್ತೀರ್ಣಂ ನವ ಚತುರ್ಥ್ಯಾದ್ಯಾಃ ಪಂಚೈಂದ್ರ್ಯಶ್ಚೋಪಾಂತ್ಯೇ ಅಷ್ಟೀ** ಎಂದು ಹೇಳಿರುವುದು. ಸೂಕ್ತದ ವಿಶೇಷವಿನಿಯೋಗವು ಲೈಂಗಿಕವು. ದಶರಾತ್ರವೆಂಬ ಯಾಗದ ಆರನೆಯ ದಿವಸ ಪ್ರಉಗಶಸ್ತ್ರಮಂತ್ರಪಠನಮಾಡುವಾಗ ಮೊದಲಿನ ಎರಡು ತೃಚಗಳನ್ನು (ತೃಚವೆಂದರೆ ಮೂರು ಋಕ್ಕುಗಳು) ಇಂದ್ರವಾಯುಸಂಬಂಧವಾದ ಮಂತ್ರಪಠನಕ್ಕಾಗಿ ವಿನಿಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಷಷ್ಠಸ್ಯ ಪ್ರಾತಸ್ಸವನೇ** ಎಂಬ ಖಂಡದ **ಸ್ತೀರ್ಣಂ ಬರ್ಹಿರಿತಿ ತೃಚೌ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೮-೧).

## ಸೂಕ್ತ—೧೩೫

ಮಂಡಲ—೧ || ಅನುವಾಕ—೨೦ || ಸೂಕ್ತ—೧೩೫ ||

ಅಷ್ಟಕ—೨ || ಅಧ್ಯಾಯ—೧ || ವರ್ಗ—೨೪, ೨೫ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ||

|| ಋಷಿಃ—ಪರುಚ್ಛೇಪೋ ದೈವೋದಾಸಿಃ ||

|| ದೇವತಾ—೧–೩, ೯ ವಾಯುಃ | ೪–೮ ಇಂದ್ರಃ ||

|| ಛಂದಃ—೧–೭ ಅತ್ಯಷ್ಟಿಃ | ೮, ೯ ಅಷ್ಟಿಃ ||

|| ಸಂಹಿತಾಪಾಠಃ ||

ಸ್ತೀರ್ಣಂ ಬರ್ಹಿರುಪ ನೋ ಯಾಹಿ ವೀತಯೇ ಸಹಸ್ರೇಣ ನಿಯುತಾ

ನಿಯುತ್ವತೇ ಶತಿನೀಭಿರ್ನಿಯುತ್ವತೇ ।

ತುಭ್ಯಂ ಹಿ ಪೂರ್ವಪೀತಯೇ ದೇವಾ ದೇವಾಯ ಯೇಮಿರೇ ।

ಪ್ರ ತೇ ಸುತಾಸೋ ಮಧುಮಂತೋ ಅಸ್ಥಿರನ್ಮದಾಯ ಕ್ರತ್ವೇ ಅಸ್ಥಿರನ್ ॥

|| ಪದಪಾಠಃ ||

ಸ್ತೀರ್ಣಂ । ಬರ್ಹಿಃ । ಉಪ । ನಃ । ಯಾಹಿ । ವೀತಯೇ । ಸಹಸ್ರೇಣ । ನಿಽಯುತಾ । ನಿಯುತ್ವತೇ ।

ಶತಿನೀಭಿಃ । ನಿಯುತ್ವತೇ ।

ತುಭ್ಯಂ । ಹಿ । ಪೂರ್ವಽಪೀತಯೇ । ದೇವಾಃ । ದೇವಾಯ । ಯೇಮಿರೇ ।

ಪ್ರ । ತೇ । ಸುತಾಸಃ । ಮಧುಽಮಂತಃ । ಅಸ್ಥಿರನ್ । ಮದಾಯ । ಕ್ರತ್ವೇ । ಅಸ್ಥಿರನ್ ॥ ೧ ॥

|| ಸಾಯಣಭಾಷ್ಯಂ ||

ಹೇ ವಾಯೋ ನೋಽಸ್ಮದ್ಯಜ್ಞಾರ್ಥಂ ಸ್ತೀರ್ಣಮಾಸ್ತೃತಂ ಬರ್ಹಿರಭಿಲಕ್ಷ್ಯೋಪ ಯಾಹಿ । ಆಗಚ್ಛ । ಕಿಮರ್ಥಂ । ವೀತಯೇ ಹವಿಷಾಂ ಭಕ್ಷಣಾಯ । ಕೇನ ಸಾಧನೇನೇತಿ ತದುಚ್ಯತೇ । ಸಹಸ್ರೇಣ ಸಹಸ್ರಸಂಖ್ಯಾಕೇನ ನಿಯುತಾ । ಜಾತಾವೇಕವಚನಂ । ನಿಯುತ ಇತಿ ವಾಯೋರಶ್ವಾನಾಂ ನಾಮಧೇಯಂ ನಿಯುತೋ ವಾಯೋರಿತಿ ನಿರುಕ್ತತ್ವಾತ್ । ನೈ. ೧–೧೫ । ತಥಾ ಶತಿನೀಭಿಃ ಶತಸಂಖ್ಯೋಪೇತಾಭಿರ್ನಿಯುದ್ಭಿರಾಗಚ್ಛೇತಿ ಶೇಷಃ । ಯದ್ವಾ । ಸಹಸ್ರೇಣ ನಿಯುತಾ ಶತಿನೀಭಿಶ್ಚ ನಿಯುದ್ಭಿರ್ನಿಯುತ್ವತೇ ತದ್ವತೇ

**ದೇವಾಯ ಹವಿರ್ದೀಯತ ಇತಿ ಶೇಷಃ । ಯದ್ವಾ । ತುಭ್ಯಮಿತ್ಯನೇನ ಸಂಬಂಧಃ । ಉಕ್ತಸಂಖ್ಯಾಕಾಭಿರ್ನಿಯುದ್ಭಿಸ್ತ್ವಸ್ತೇ ದೇವಾಯ ದ್ಯೋತಮಾನಾಯ ತುಭ್ಯಂ ॥ ಜಯಿ ಚ । ಪಾ ೬-೧-೨೧೨ । ಇತ್ಯಾದ್ಯುದಾತ್ತತ್ವಂ ॥ ಪೂರ್ವಪೀತಯ ಇತರದೇವೇಭ್ಯಃ ಪೂರ್ವಂ ಪಾನಾಯ ದೇವಾ ಯೇಮಿರೇ । ಯಮಿತವಂತಃ । ಯದ್ವಾ । ಸ್ತೋತಾರ ಋತ್ವಿಜೋ ದೇವಾಯ ತುಭ್ಯಂ ಯೇಮಿರೇ । ಆಹವನೀಯಂ ಪ್ರತಿ ಸೋಮಂ ನಿಯಮಿತವಂತಃ । ಅಗ್ರಂ ಪಿಬಾ ಮಧೂನಾಂ ಸುತಂ ವಾಯೋ । ಋ. ೪-೪೬-೧ । ಇತ್ಯಾದಿಮಂತ್ರಾಂತರಪ್ರಸಿದ್ಧಿದ್ಯೋತನಾರ್ಥೋ ಹಿಶಬ್ದಃ । ಕಿಂಚೈತೇ ತ್ವದರ್ಥಂ ಸುತಾಸೋಽಭಿಷುತಾ ಮಧುಮಂತೋ ಮಾಧುರ್ಯೋಪೇತಾಃ ಸೋಮಾ ಮದಾಯ ತವ ಮೋದಾಯಾಸ್ಥಿರನ್ । ತಿಷ್ಠಂತಿ । ಕಿಂಚ ಕ್ರತ್ವೇ ಕರ್ಮಣೇ ತತ್ಸಿದ್ಧ್ಯರ್ಥಮಸ್ಥಿರನ್ । ಋತ್ವಿಗ್ಭಿರ್ಧೃತಾಸ್ತಿಷ್ಠಂತಿ । ಅತಸ್ತ್ವಂ ಪಿಬೇತಿ ಶೇಷಃ ॥ ತಿಷ್ಠತೇಶ್ಛಾಂದಸೇ ಲುಙಿ ವ್ಯತ್ಯಯೇನ ಝಸ್ಯ ರನ್ । ಸ್ಥಾಘ್ವೋರಿಚ್ಚೇತಿ ಸಿಚಃ ಕಿತ್ತ್ವಂ ಧಾತೋರಿತ್ವಂ ಚ । ಹ್ರಸ್ವಾದಂಗಾದಿತಿ ಸಿಲೋಪಃ ॥**

॥ ಪ್ರತಿಪದಾರ್ಥ ॥

**(ಹೇ ವಾಯೋ**—ಎಲೈ ವಾಯುವೇ) । **ನಿಯುತ್ವತೇ**—ನಿಯುನ್ನಾಮಕ ಅಶ್ವಯುಕ್ತನಾದ (ನಿನಗೋಸ್ಕರ ಸಿದ್ಧವಾದ) । **ವೀತಯೇ**—ಹವಿಸ್ಸನ್ನು ಸ್ವೀಕರಿಸುವುದಕ್ಕೋಸ್ಕರ । **ಸಹಸ್ರೇಣ**—ಸಹಸ್ರಸಂಖ್ಯಾಕವಾದ । **ನಿಯುತಾ**—ಅಶ್ವಗಳಿಂದ (ಸಹಿತನಾಗಿ) । **ನಃ**—ನಮ್ಮ ಸಂಬಂಧವಾದ । **ಸ್ತೀರ್ಣಂ**—ಹರಡಲ್ಪಟ್ಟಿರುವ । **ಬರ್ಹಿಃ**—ದರ್ಭಾಸನವನ್ನು । **ಉಪ ಯಾಹಿ** ಸಮೀಪಿಸು । **ನಿಯುತ್ವತೇ**—ನಿಯುನ್ನಾಮಕ ಅಶ್ವಯುಕ್ತನಾದ ನಿನಗೋಸ್ಕರ (ಸಿದ್ಧವಾದ ಹವಿಸ್ಸನ್ನು ಸ್ವೀಕರಿಸಲು) । **ಶತಿನೀಭಿಃ**—ಶತಸಂಖ್ಯಾಕವಾದ (ಅಶ್ವಗಳಿಂದ ಸಹಿತನಾಗಿ) । **(ಬರ್ಹಿಃ ಉಪ ಯಾಹಿ**—ದರ್ಭಾಸನವನ್ನು ಸಮೀಪಿಸು) । **ದೇವಾಃ**—ದೇವತೆಗಳು । **ದೇವಾಯ**—ಪ್ರಕಾಶಮಾನನಾದ । **ತುಭ್ಯಂ**—ನಿನಗೆ । **ಪೂರ್ವಪೀತಯೇ**—ಪ್ರಥಮ ಪಾನಕ್ಕೋಸ್ಕರ । **ಯೇಮಿರೇ ಹಿ**—ನಿಯಮ ಮಾಡಿದ್ದಾರೆಯಷ್ಟೆ । [ಅಥವಾ **ದೇವಾಃ**—ಸ್ತುತಿಕರ್ತೃಗಳಾದ ಋತ್ವಿಜರು । **ದೇವಾಯ ತುಭ್ಯಂ** ದ್ಯೋತಮಾನನಾದ ನಿನಗೋಸ್ಕರ । **ಪೂರ್ವಪೀತಯೇ**—ಪ್ರಥಮಪಾನಕ್ಕೋಸ್ಕರ । **ಯೇ ಮಿರೇ ಹಿ**—(ಆಹವನೀಯಾಗ್ನಿಯನ್ನುದ್ದೇಶಿಸಿ ಸೋಮವನ್ನು) ನಿಯಮನ್ನ ಮಾಡಿದ್ದಾರೆ ।] **(ಕಿಂಚ**—ಮತ್ತೂ) । **ಸುತಾಸಃ**—(ನಿನಗೋಸ್ಕರ) ಅಭಿಷುತವಾದ (ಮತ್ತು) । **ಮಧುಮಂತಃ**—ಮಾಧುರ್ಯೋಪೇತವಾದ (ಈ ಸೋಮರಸಗಳು) । **ತೇ**—ನಿನ್ನ । **ಮದಾಯ**—ಸಂತೋಷಕ್ಕೋಸ್ಕರ । **ಪ್ರ ಅಸ್ಥಿರನ್**—(ಸಿದ್ಧವಾಗಿ) ನಿಂತಿವೆ । (ಮತ್ತು) **ಕ್ರತ್ವೇ**—ಯಜ್ಞಕರ್ಮ (ಸಿದ್ಧಿಗೋಸ್ಕರ) । **ಅಸ್ಥಿರನ್**—(ಸಿದ್ಧವಾಗಿ) ನಿಂತಿವೆ.

॥ ಭಾವಾರ್ಥ ॥

ಎಲೈ ವಾಯುವೇ, ನಿಯುನ್ನಾಮಕ ಅಶ್ವಯುಕ್ತನಾದ (ನಿನಗೋಸ್ಕರ ಸಿದ್ಧವಾದ) ಹವಿಸ್ಸನ್ನು ಸ್ವೀಕರಿಸುವುದಕ್ಕೋಸ್ಕರ, ಸಹಸ್ರಸಂಖ್ಯಾಕ ಅಶ್ವಗಳಿಂದ ಸಹಿತನಾಗಿ, ನಾವು ಸಿದ್ಧಪಡಿಸಿರುವ ದರ್ಭಾಸನವನ್ನು ಸಮೀಪಿಸು; ಶತಸಂಖ್ಯಾಕಾಶ್ವಗಳಿಂದ ಸಹಿತನಾಗಿ ಆಸನವನ್ನು ಸಮೀಪಿಸು; ದೇವತೆಗಳೆಲ್ಲರೂ, ನಿನಗೇ ಪ್ರಥಮಪಾನವೆಂದು ನಿಯಮ ಮಾಡಿದ್ದಾರಷ್ಟೇ; ನಮ್ಮಿಂದ ಅಭಿಷುತವಾದ ಈ ಮಾಧುರ್ಯೋಪೇತವಾದ ಸೋಮರಸವು ನಿನ್ನನ್ನು ತೃಪ್ತಿಪಡಿಸುವುದಕ್ಕೋಸ್ಕರ ಮತ್ತು ಯಜ್ಞಕರ್ಮಸಿದ್ಧಿಗೋಸ್ಕರ ಸಿದ್ಧವಾಗಿದೆ.

## English Translation.

Approach our strewn grass. Vayu, with (your) thousand steeds, to partake of the (offered) food, (prepared) for the lord of the steeds; (approach) with hundreds (to the sacrifice prepared) for the lord of the steeds: the gods hold back for you as the deity (entitled) first to drink (the libation): sweet effused juices are ready for your exhilaration; are ready for their function.

॥ ವಿಶೇಷ ವಿಷಯಗಳು ॥

ಈ ಸೂಕ್ತದಲ್ಲಿ ಮೊದಲನೆಯ ಮೂರು ಋಕ್ಕುಗಳೂ **ಪ್ರಉಗಶಸ್ತ್ರಾತ್ಮಕವಾದವು.** **ಪ್ರಉಗಶಸ್ತ್ರದ** ಮಹಿಮೆಯು ಅತಿಶಯವಾದುದು. ಅದೇ ಅನ್ನದ ಸಾಧನವು. ಪ್ರಕೃತದಲ್ಲಿ **ವಾಯುದೇವತಾಕವಾದ ಪ್ರಉಗ ಶಸ್ತ್ರದ** ಸ್ವರೂಪವನ್ನು ತಿಳಿದು, ಅನಂತರ ಪ್ರಕೃತವಾದ ಋಕ್ಕುಗಳಲ್ಲಿ **ವಾಯುವಿಗೆ** ಪ್ರಥಮ ಪಾನವು ಹೇಗೆ? ಏತಕ್ಕೆ ಎಂಬುದನ್ನು ತಿಳಿಯಬೇಕು.

> **ಅನ್ನಾದ್ಯಂ ವಾ ಏತೇನಾವರುಂಧೇ ಯತ್ಪ್ರಉಗಮನ್ಯಾನ್ಯಾ ದೇವತಾ ಪ್ರಉಗೇ ಶಸ್ಯತೇಽನ್ಯದ-ನ್ಯದುಕ್ಥಂ ಪ್ರಉಗೇ ಕ್ರಿಯತೇ । ಏತದ್ಧ ವೈ ಯಜಮಾನಸ್ಯಾಧ್ಯಾತ್ಮಕಮಮಿವೋಕ್ಥಂ ಯತ್ಪ್ರಉಗಂ ತಸ್ಮಾದೇನೇನ್ನೈತದುಪೇಕ್ಷ್ಯತಮಮಿವೇತ್ಯಾಹುರೇತೇನ ಹ್ಯೇನಂ ಹೋತಾ ಸಂಸ್ಕರೋತೀತಿ ॥**

(ಐ. ಬ್ರಾ. ೩–೨)

**ಪ್ರಉಗ**ಶಸ್ತ್ರದ ಪಠನದಿಂದ ಯಜಮಾನನು ಅನ್ನವನ್ನು ಹೊಂದುತ್ತಾನೆ. ಯಜ್ಞಕರ್ತನಿಗೆ ಈ ಶಸ್ತ್ರವು ಅತ್ಯಂತ ನಿಕಟವಾಗಿ ಸಂಬಂಧವನ್ನು ಹೊಂದಿರುತ್ತದೆ. ಆದುದರಿಂದಲೇ ಯಜ್ಞಕರ್ತನು ಇದರ ಉಚ್ಚಾರಣೆಗೂ ಪಠನಕ್ಕೂ ಅತ್ಯಂತ ಜಾಗರೂಕವಾದ ಗಮನವನ್ನು ಕೊಡಬೇಕು. ಇದರ ಪಠನದಿಂದ ಯಜಮಾನನ ದೇಹವು ಪೂತವಾಗುತ್ತದೆ, ಎಂದು ಸಾಮಾನ್ಯವಾಗಿ ಈ ಮಂತ್ರದ ಪ್ರಭಾವವನ್ನು ತಿಳಿಸಿ, ಅನಂತರ ವಾಯವೀಯವಾದ ಶಸ್ತ್ರದ ಪ್ರಭಾವವನ್ನು ತಿಳಿಸಿದೆ.

> **ವಾಯವ್ಯಂ ಶಂಸತಿ ತಸ್ಮಾದಾಹುರ್ವಾಯುಃ ಪ್ರಾಣಃ ಪ್ರಾಣೋ ರೇತೋ ರೇತಃ ಪುರುಷಸ್ಯ ಪ್ರಥಮಂ ಸಂಭವತಃ ಸಂಭವತೀತಿ ಯದ್ವಾಯವ್ಯಂ ಶಂಸತಿ ಪ್ರಾಣಮೇವಾಸ್ಯ ತತ್ಸಂಸ್ಕ-ರೋತಿ ।**

(ಐ. ಬ್ರಾ. ೩–೨)

ವಾಯುವೇ ಪ್ರಾಣವು ಮತ್ತು ಪ್ರಾಣವೇ ರೇತಸ್ಸು. ಪುರುಷನು ಹುಟ್ಟುವುದಕ್ಕೆ ಮೊದಲೇನೇ ರೇತಸ್ಸು ಜನಿಸುತ್ತದೆ. ಆದುದರಿಂದ ಪ್ರಾಣರೂಪವಾದುದೂ, ಮತ್ತು ರೇತೋರೂಪವಾದುದೂ ಆದ ಈ ವಾಯ್ವಾತ್ಮಕವಾದ ತೃಚವನ್ನು ಪಠಿಸುವುದರಿಂದ ಯಜ್ಞಕರ್ತನ ಪ್ರಾಣವು ಸ್ಥಿರವಾಗುತ್ತದೆ.

ಆದರೆ **ವಾಯುವಿಗೆ ಪೂರ್ವಪೀತಿಯ** ಅಧಿಕಾರವೇನು ಎಂದರೆ ಅದಕ್ಕೆ ಎರಡು ಕಾರಣಗಳಿವೆ. ಮೊದಲನೆಯದಾಗಿ; ದೇವದೂತನಾದ ಅಗ್ನಿಯು ದೇವತೆಗಳಿಗೆಲ್ಲಾ ಹಂಚಲು ಮೊದಲು ಆಹುತಿಗಳನ್ನು ಸ್ವೀಕರಿಸುತ್ತಾನೆ. ಆದರೆ ಅದಕ್ಕೆ ವಾಯುವಿನ ಸಹಾಯವಿದ್ದೇ ಇರಬೇಕು. ಅಗ್ನಿಗಿಂತಲೂ ವಾಯುವು ಪೂರ್ವಭಾವಿಯಾಗಿದ್ದು ವಾಯುವಿನ ಸಹಾಯದಿಂದಲೇ ಅಗ್ನಿಯು ಜನನವು ಯಜ್ಞಗೃಹದಲ್ಲಾಗುತ್ತದೆ.

**ವಾಯೋರಗ್ನಿರ್ಜಾಯತೇ ಪ್ರಾಣಾದ್ಧಿ ಬಲಾನ್ಮಥ್ಯಮಾನೋಽಧಿಜಾಯತೇ ।**

(ಐ. ಬ್ರಾ. ೮-೨೮)

ಎಂದಿದೆ. ಇದಲ್ಲದೆ,

**ಸ ಯದಗ್ನಿಃ ಪ್ರವಾನಿವ ದಹತಿ ತದಸ್ಯ ವಾಯವ್ಯಂ ರೂಪಂ ತದಸ್ಯ ತೇನಾನುಶಂಸತಿ ।**

(ಐ. ಬ್ರಾ. ೩-೪)

ಜ್ವಾಲಾರೂಪದಿಂದ ಬೀಸಿಕೊಂಡು ದಹಿಸುವಾಗ ಅಗ್ನಿಯೂ ವಾಯುರೂಪದಲ್ಲಿಯೇ ಇರುವುದರಿಂದ ಅಗ್ನಿವಾಯುಗಳಿಗೆ ತಾದಾತ್ಮ್ಯವೇ ಇದೆ. ಆದುದರಿಂದ **ಅಗ್ನಿಗೆ** ಯಾವರೀತಿ ಪ್ರಥಮಾಹುತಿಯೋ ಅದರಂತೆ ವಾಯುವಿಗೂ ಸೇರತಕ್ಕದ್ದು. ಎರಡನೆಯದಾಗಿ,

**ಅಗ್ನಿಃ ಸುಷಮಿದಿತಿ ಶಂಸತಿ ವಾಯುರ್ವಾ ಅಗ್ನಿಃ ಸುಷಮಿದ್ವಾಯುರ್ಹಿ ಸ್ವಯಮಾತ್ಮಾನಂ ಸಮಿಂಧೇ ಸ್ವಯಮಿದಂ ಸರ್ವಂ ಯದಿದಂ ಕಿಂಚ ವಾಯುಮೇವ ತದಂತರಿಕ್ಷಲೋಕ ಆಯಾತಯತಿ ॥**

ಪ್ರಜ್ವಲಿತನಾದ ಅಗ್ನಿಯೇ ವಾಯುವು. ವಾಯುವು ತನ್ನನ್ನೇ ಪ್ರಜ್ವಲಿತನನ್ನಾಗಿ ಮಾಡಿಕೊಂಡು ಸಮಸ್ತಲೋಕವನ್ನೂ ಪ್ರಜ್ವಲಿತವನ್ನಾಗಿ ಮಾಡಬಲ್ಲನು.

**ತೋರ್ಣಿರ್ಹವ್ಯವಾಳಿತಿ ಶಂಸತಿ ವಾಯುರ್ವೈ ತೋರ್ಣಿರ್ಹವ್ಯವಾಡ್ವಾಯುರ್ಹೀದಂ ಸರ್ವಂ ಸದ್ಯಸ್ತರತಿ ಯದಿದಂ ಕಿಂಚ ವಾಯುರ್ದೇವೇಭ್ಯೋ ಹವ್ಯಂ ವಹತಿ ವಾಯುಮೇವ ತದಂತರಿಕ್ಷಲೋಕ ಆಯಾತಯತಿ ।**

ವೇಗದಿಂದ ಹವಿಸ್ಸನ್ನು ವಹಿಸುತ್ತಾನೆ. ಸಮಸ್ತ ವಿಶ್ವದಲ್ಲಿಯೂ ಸಹ ಒಂದು ಕ್ಷಣದೊಳಗೆ ಸಂಚರಿಸಿ ಸಕಲ ದೇವತೆಗಳಿಗೂ ಹವಿಸ್ಸನ್ನು ಹಂಚುತ್ತಾನೆ.

**ಪ್ರಣೀರ್ಯಜ್ಞಾನಾಮಿತಿ ಶಂಸತಿ ವಾಯುರ್ವೈ ಪ್ರಣೀರ್ಯಜ್ಞಾನಾಂ ಯದಾ ಹಿ ಪ್ರಾಣಿತ್ಯಥ ಯಜ್ಞೋಽಥಾಗ್ನಿಹೋತ್ರಂ ವಾಯುಮೇವ ತದಂತರಿಕ್ಷಲೋಕ ಆಯಾತಯತಿ ॥**

ವಾಯುವು ಯಜ್ಞಕ್ಕೆ ಚೈತನ್ಯದಾಯಕನು. ವಾಯುವಿನ ಚೈತನ್ಯದಿಂದಲೇ ಯಜ್ಞದ ಸತ್ತ್ವವು ಉಳಿಯುತ್ತದೆ. ಅದರಿಂದಲೇ ಅಗ್ನಿಹೋತ್ರವೂ ಸಾಧ್ಯವಾಗುತ್ತದೆ. ಆದುದರಿಂದಲೇ,

**ಸೋ ಅಧ್ವರಾ ಕರತಿ ಜಾತವೇದಾ ಇತಿ ಶಂಸತಿ ವಾಯುರ್ವೈ ಜಾತವೇದಾ ವಾಯುರ್ಹೀದಂ ಸರ್ವಂ ಕರೋತಿ ಯದಿದಂ ಕಿಂಚ ವಾಯುಮೇವ ತದಂತರಿಕ್ಷಲೋಕ ಆಯಾತಯತಿ ॥**

(ಐ. ಬ್ರಾ. ೨-೩೪)

ವಾಯುವೇ ಜಾತವೇದಸ್ಸು (ಸರ್ವಜ್ಞನು). ಸಕಲವಾದ ವಿಶ್ವವನ್ನೂ ಉತ್ಪನ್ನಮಾಡುವವನು. ಇತ್ಯಾದಿಯಾಗಿ ವಾಯುವಿನ ಸ್ವರೂಪವನ್ನು ಸ್ತುತಿಸಿದೆ. ವಾಯುವೇ ಅಗ್ನಿಗೆ ಮೂಲಕಾರಣನಾದುದರಿಂದಲೂ, ಅಗ್ನಿಯು ದೇವತೆಗಳಿಗೆ

ಹವಿಸ್ಸನ್ನು ಹಂಚುವುದಕ್ಕೆ ವಾಯುವೇ ಮುಖ್ಯ ಸಹಾಯಕನಾಗಿರುವುದರಿಂದಲೂ, ಮತ್ತು ಅಗ್ನಿ ಮತ್ತು ವಾಯುಗಳಿಗೆ ತಾದಾತ್ಮ್ಯವೇ ಹೇಳಿರುವುದರಿಂದಲೂ ಅಗ್ನಿಗೆ ಯಾವ ಪ್ರಥಮಪೀತಿತ್ವವಿದೆಯೋ, ವಾಯುವಿಗೆ ಅದಕ್ಕಿಂತಲೂ ಮೊದಲನೆಯ ಸ್ಥಾನವು ಲಭಿಸಬೇಕಾಗುತ್ತದೆಂಬ ಅಂಶವು ಇಲ್ಲಿ ಸೂಚಿಸಿದೆ.

**ದೇವಾಃ ಯೇಮಿರೇ**—ಎನ್ನುವಾಗ ಎರಡು ವಿಧವಾದ ಅನ್ವಯವಿದೆ. ಮೊದಲನೆಯದಾಗಿ, ದೇವತೆಗಳು ನಿಯಮಿಸಿದ್ದಾರೆ ಎಂದರ್ಥವಾಗುತ್ತದೆ. ಹಿಂದೆ ಹೇಳಿರುವಂತೆ ದೇವತೆಗಳ ಸ್ಪರ್ಧೆಯಲ್ಲಿ ವಾಯುವೇ ಮೊದಲು ಜಯಿಸಿ ಸಕಲದೇವತೆಗಳಿಗಿಂತಲೂ ಪ್ರಥಮತಃ ಪಾನಕ್ಕೆ ಅಧಿಕಾರವನ್ನು ಹೊಂದಿದುದರಿಂದ ದೇವತೆಗಳೇ **ವಾಯುವಿಗೆ** ಈ ಸ್ಥಾನವನ್ನು ನಿಯಮಿಸಿದ್ದಾರೆ. ಎರಡನೆಯದಾಗಿ, **ದೇವಾಃ** ಎಂಬ ಶಬ್ದಕ್ಕೆ ಪ್ರಕಾಶಮಾನರಾದ ಋತ್ವಿಕ್ಕುಗಳೆಂದರ್ಥಮಾಡಿ ಸ್ತುತಿಕರ್ತೃಗಳಾದ ಋತ್ವಿಕ್ಕುಗಳು ದೇವತಾತ್ಮನಾದ ನಿನ್ನ ಪ್ರಥಮಪಾನಕ್ಕಾಗಿ ಆಹವನೀಯಾಗ್ನಿಯನ್ನುದ್ದೇಶಿಸಿ ಸೋಮರಸವನ್ನು ಸಿದ್ಧಪಡಿಸಿದ್ದಾರೆ ಎಂದೂ ಸಹ ವಿವರಿಸಿದೆ.

**ಕ್ರತ್ವೇ**-ಕ್ರತುಶಬ್ದವನ್ನು **ಕರ್ಮ**ನಾಮಗಳಲ್ಲಿಯೂ (ನಿ. ೩-೧), **ಪ್ರಜ್ಞಾ**ನಾಮಗಳಲ್ಲಿಯೂ (ನಿ. ೩-೧೩) ಪಠಿಸಿದೆ. ಈ ಪದವನ್ನು ಕರ್ಮ, ಪ್ರಜ್ಞೆ, ಸಂಕಲ್ಪ, ಶಕ್ತಿ ಎಂಬ ಅನೇಕವಾದ ಅರ್ಥಗಳಲ್ಲಿ ಉಪಯೋಗಿಸಿದ್ದರೂ ಸಹ **ಕರ್ಮ, ಪ್ರಜ್ಞೆ** ಈ ಎರಡರ್ಥಗಳೇ ವಿಶೇಷವಾಗಿ ರೂಢಿಯಲ್ಲಿರುವುವು, ಪ್ರಕೃತವಾದ ಸೂಕ್ತಿನಲ್ಲಿ **ಕ್ರತ್ವೇ** ಎಂಬುದಕ್ಕೆ **ಕರ್ಮಣೇ ತತ್ಸಿದ್ಧ್ಯರ್ಥಂ** ಕರ್ಮದ ಸಿದ್ಧಿಗಾಗಿ ಎಂದು ವಿವರಿಸಿದೆ.

**ಅಸ್ಥಿರನ್—ಋತ್ವಿಗ್ಭಿರ್ಧೃತಾಸ್ತಿಷ್ಠಂತಿ |** ಕರ್ಮಸಿದ್ಧಿಗಾಗಿ ಋತ್ವಿಕ್ಕುಗಳು ಸೋಮರಸವನ್ನು ಹಿಡಿದುಕೊಂಡು ನಿನ್ನ ಪಾನಕ್ಕಾಗಿ ಅರ್ಪಿಸಲು ಸಿದ್ಧರಾಗಿ ನಿಂತಿದ್ದಾರೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಸ್ತೀರ್ಣಂ**—ಸ್ತೃಞ್ ಆಚ್ಛಾದನೇ. ಧಾತು. ಕ್ತಪ್ರತ್ಯಯ. **ಋೂತ ಇದ್ಧಾತೋಃ** ಎಂಬುದರಿಂದ ಇತ್ವ. **ಹಲಿ ಚ** ಎಂಬುದರಿಂದ ದೀರ್ಘ. **ರದಾಭ್ಯಾಂ ನಿಷ್ಠಾತಃ**—(ಪಾ. ಸೂ ೮-೨-೪೨) ಎಂಬುದರಿಂದ ನಿಷ್ಠಾ. ತಕಾರಕ್ಕೆ ನತ್ವ. **ರಷಾಭ್ಯಾಂ ಣೋ ನಃ**—ಎಂಬುದರಿಂದ ಣತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯಾಹಿ**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವೀತಯೇ**—ವೀ ಗತಿಪ್ರಜನಕಾಂತ್ಯಶನಖಾದನೇಷು. ಧಾತು. ಇದಕ್ಕೆ **ಮಂತ್ರೇ ವೃಷೇಷಪಚ—** (ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗಿ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ನಿಯುತಾ**—ನಿಯುತ್ ಎಂಬುದು ವಾಯುವಿನ ಅಶ್ವದ ಹೆಸರು. ಜಾತಿಸೂಚಕವಾದುದರಿಂದ ಏಕವಚನ ಬಂದಿದೆ. ತೃತೀಯಾಂತರೂಪ.

**ಶತಿನೀಭಿಃ—ಅತ ಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ನಾಂತವಾದುದರಿಂದ ಸ್ತ್ರೀತ್ವದಲ್ಲಿ ಙೀಪ್

**ತುಭ್ಯಂ**— ಚತುರ್ಥ್ಯಂತರೂಪ. **ಙಯಿ ಚ** (ಪಾ. ಸೂ. ೬-೧-೨೧೨) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯೇಮಿರೇ**—ಯಮು ಉಪರಮೇ. ಧಾತು. ಲಿಟ್ ಪ್ರಥಮಪುರುಷ ಬಹುವಚನಾಂತರೂಪ. **ತಿಙ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸುತಾಸಃ**— ಷುಞ್ ಅಭಿಷವೇ. ಧಾತು. ಆದಿಗೆ ಸತ್ವ. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ. ಜಸ್ ಪರವಾದಾಗ ಅದಕ್ಕೆ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಅಸ್ಥಿರನ್**— ಷ್ಠಾ ಗತಿನಿವೃತ್ತೌ. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್. **ವ್ಯತ್ಯಯೋ ಬಹುಲಂ** ಎಂಬುದರಿಂದ ಝ ಪ್ರತ್ಯಯಕ್ಕೆ ರನ್ನಾದೇಶ ಚ್ಲಿಗೆ ಸಿಚಾದೇಶ. **ಸ್ಥಾಘ್ವೋರಿಚ್ಚ** (ಪಾ. ಸೂ. ೧-೨-೧೭) ಎಂಬುದರಿಂದ ಸಿಚ್ಚಿಗೆ ಕಿತ್ವವೂ ಧಾತುವಿಗೆ ಇತ್ವವೂ ಬರುತ್ತವೆ. ಹ್ರಸ್ವದ ಪರದಲ್ಲಿ ಸಿಚ್ ಬಂದುದರಿಂದ **ಹ್ರಸ್ವಾದಂಗಾತ್** (ಪಾ. ಸೂ ೮-೨-೨೭) ಎಂಬುದರಿಂದ ಅದಕ್ಕೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಕ್ರತ್ವೇ**—ಕ್ರತು ಶಬ್ದ ಕರ್ಮವನ್ನು ಹೇಳುತ್ತದೆ. ಇದಕ್ಕೆ ಚತುರ್ಥೀ ಏಕವಚನ ಪರವಾದಾಗ **ಜಸಾದಿಷು ಛಂದಸಿ ವಾವಚನಂ** ಎಂಬ ವಚನದಿಂದ ಗುಣಾದಿಗಳು ಬಾರದಿರುವಾಗ ಯಣಾದೇಶ. ॥ ೧ ॥



॥ ಸಂಹಿತಾಪಾಠಃ ॥

ತುಭ್ಯಾಯಂ ಸೋಮಃ ಪರಿಪೂತೋ ಅದ್ರಿಭಿಃ ಸ್ಪಾರ್ಹಾ ವಸಾನಃ ಪರಿ
ಕೋಶಮರ್ಷತಿ ಶುಕ್ರಾ ವಸಾನೋ ಅರ್ಷತಿ ।
ತವಾಯಂ ಭಾಗ ಆಯುಷು ಸೋಮೋ ದೇವೇಷು ಹೂಯತೇ ।
ವಹ ವಾಯೋ ನಿಯುತೋ ಯಾಹ್ಯಸ್ಮಯುರ್ಜುಷಾಣೋ ಯಾಹ್ಯ-
ಸ್ಮಯುಃ ॥ ೨ ॥

॥ ಪದಪಾಠಃ ॥

ತುಭ್ಯ । ಅಯಂ । ಸೋಮಃ । ಪರಿಽಪೂತಃ । ಅದ್ರಿಽಭಿಃ । ಸ್ಪಾರ್ಹಾ । ವಸಾನಃ । ಪರಿ । ಕೋಶಂ । ಅರ್ಷತಿ । ಶುಕ್ರಾ । ವಸಾನಃ । ಅರ್ಷತಿ ।

ತವ । ಅಯಂ । ಭಾಗಃ । ಆಯುಷು । ಸೋಮಃ । ದೇವೇಷು । ಹೂಯತೇ ।

ವಹ । ವಾಯೋ ಇತಿ । ನಿಽಯುತಃ । ಯಾಹಿ । ಅಸ್ಮಽಯುಃ । ಜುಷಾಣಃ । ಯಾಹಿ । ಅಸ್ಮಽಯುಃ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತುಭ್ಯ ತುಭ್ಯಂ ತ್ವದರ್ಥಂ ॥ ಸುಪಾಂ ಸುಲುಗಿತಿ ಚತುರ್ಥ್ಯಾ ಲುಕ್ ॥ ಅಯಂ ಸೋಮೋ ಹೂಯಮಾನಃ ಕೋಶಂ ಕೋಶಸ್ಥಾನೀಯಂ ಗ್ರಹಮರ್ಷತಿ । ಗಚ್ಛತಿ । ಪ್ರಾಪ್ನೋತಿ । ಕೀದೃಶಃ ಸೋಮಃ । ಅದ್ರಿಭಿಃ ಪರಿಪೂತಃ । ಅಭಿಷವಸಾಧನೈರಪಗತರ್ಜೀಷತ್ವೇನ ಶೋಧಿತಃ । ಯದ್ವಾ । ಅದ್ರಿಭಿರಭಿಷುತೋ ದಶಾಪವಿತ್ರಶೋಧನೇನ ಗ್ರಹಣೇನ ವಾ ಶೋಧಿತಃ । ತಥಾ ಸ್ಪಾರ್ಹಾ ಸ್ಪೃಹಣೀಯಾನಿ ತೇಜಾಂಸಿ ವಸಾನಃ । ಪಿಧಾನಃ । ಕಿಂಚ ಶುಕ್ರಾ ನಿರ್ಮಲಾನಿ ದೀಪ್ತಾನಿ ವಾ ತೇಜಾಂಸಿ ವಸಾನಃ ಸೋಮೋಽರ್ಷತಿ । ತ್ವಾಂ ಪ್ರಾಪ್ನೋತಿ ॥ ಋಷೀ ಗತೌ । ವ್ಯತ್ಯಯೇನ ಶಪ್ ॥ ಹೇ ವಾಯೋ ಆಯುಷು ಮನುಷ್ಯೇಷು ಯಷ್ಟೃವ್ಯಕ್ತ್ವೇನ ಸ್ಥಿತೋ ಭಾಗೋ ಭಜನೀಯಃ ಸೋಮಸ್ತವ ತ್ವದರ್ಥಂ ದೇವೇಷು ಮಧ್ಯೇ ಹೂಯತೇ । ಸತ್ಸ್ವಪೀತರೇಷು ದೇವೇಷು ಯತಃ ಸೋಮಸ್ತವ ಭಾಗಃ ಅತಃ ಪ್ರಥಮಂ ತುಭ್ಯಂ ಹೂಯತ ಇತ್ಯರ್ಥಃ । ಕಿಂಚ ಹೇ ವಾಯೋ ಏವಂ ತಂ ಸೋಮಮಸ್ಮಯುರಸ್ಮಾಭಿಸ್ತದ್ವಾನ್ ॥ ಮತ್ವರ್ಥೀಯೋ ಯುಃ ॥ ತ್ವಂ ನಿಯುತೋ ವಹ । ನಿಯುತ್ಸಂಜ್ಞಕಾನಶ್ವಾನ್ವಹನಾಯ ಪ್ರಾಪಯ । ತತಃ ಪರಂ ಯಾಹಿ । ದಿವಂ ಪ್ರತಿ ಗಚ್ಛ । ತಥಾ ಕುರ್ವನ್ ಅಸ್ಮಯುರಸ್ಮಾಭಿರ್ಯುಕ್ತಃ ಸನ್ನಸ್ಮಾನನುಗೃಹ್ಣನ್ ಅಸ್ಮಾನ್ಕಾಮಯಮಾನೋ ವಾ ॥ ಕ್ಯಚಿ ಛಾಂದಸೇಽಂತ್ಯಲೋಪೇ ಕ್ಯಾಚ್ಛಂದಸೀತ್ಯುಃ ॥ ಜುಷಾಣಃ ಪ್ರೀಯಮಾಣೋ ಯಾಹಿ । ಗಚ್ಛ ॥

॥ ಪ್ರತಿಪದಾರ್ಥ ॥

(ಹೇ ವಾಯೋ—ಎಲೈ ವಾಯುವೇ) । **ತುಭ್ಯ**—ನಿನಗೋಸ್ಕರ । **ಅದ್ರಿಭಿಃ**—(ಅಭಿಷವಸಾಧನವಾದ) ಶಿಲೆಗಳಿಂದ । **ಪರಿಪೂತಃ**—ಶೋಧಿತವಾಗಿಯೂ । **ಸ್ಪಾರ್ಹಾ**—ಬಯಸತಕ್ಕ (ತೇಜಸ್ಸನ್ನು) । **ವಸಾನಃ**—ಧರಿಸಿರುವುದೂ (ಆಗಿರುವ) । **ಅಯಂ ಸೋಮಃ**—ಈ (ಹೋಮಮಾಡಲ್ಪಡುವ) ಸೋಮರಸವು । **ಕೋಶಂ**—ಸೋಮರಸವನ್ನು ಶೇಖರಿಸುವ ದೊಡ್ಡ ಪಾತ್ರೆಯನ್ನು । **ಪರಿ ಅರ್ಷತಿ**—ಸೇರುತ್ತದೆ । (**ಕಿಂಚ**—ಮತ್ತು) । **ಶುಕ್ರಾ**—ನಿರ್ಮಲ (ಕಾಂತಿಯನ್ನು) । **ವಸಾನಃ**—ಹೊಂದಿರುವ (ಸೋಮರಸವು) । **ಅರ್ಷತಿ**—(ನಿನ್ನನ್ನು) ಸೇರುತ್ತದೆ । **ಆಯುಷು**—ಮನುಷ್ಯರಲ್ಲಿ (ಹೋಮಾರ್ಥವಾಗಿ ಸಿದ್ಧವಾಗಿರುವ) । **ಭಾಗಃ**—(ನಿನ್ನ) ಭಾಗವಾದ । **ಅಯಂ ಸೋಮಃ**—ಈ ಸೋಮರಸವು । **ದೇವೇಷು**—ದೇವತೆಗಳ (ಮಧ್ಯದಲ್ಲಿ) । **ತವ**—ನಿನಗೋಸ್ಕರ । **ಹೂಯತೇ**—

ಹೋಮ ಮಾಡಲ್ಪಡುತ್ತದೆ । **ಹೇ ವಾಯೋ**—ಎಲೈ ವಾಯುವೇ । **ಅಸ್ಮಯುಃ**—ನಮ್ಮಿಂದ ಯುಕ್ತನಾಗಿ (ನಮಗೆ ಅನುಕೂಲನಾಗಿ) । (**ತ್ವಂ**—ನೀನು) । **ನಿಯುತಃ**—ಅಶ್ವಗಳನ್ನು । **ವಹ**—(ಸೋಮರಸವನ್ನು ತೆಗೆದು ಕೊಂಡುಹೋಗಲು ಇಲ್ಲಿಗೆ) ಕರೆದುಕೊಂಡು ಬಾ । **ಯಾಹಿ**--(ಅನಂತರ ಸ್ವರ್ಗಾಭಿಮುಖನಾಗಿ) ಹೊರಡು । **ತಥಾ ಕುರ್ವನ್**—ಹಾಗೆ ಮಾಡಿ । **ಅಸ್ಮಯುಃ**—ನಮ್ಮಿಂದ ಯುಕ್ತನಾಗಿ (ನಮ್ಮಲ್ಲಿ ಅನುಗ್ರಹ ಬುದ್ಧಿ ಯುಳ್ಳವನಾಗಿ) । **ಜುಷಾಣಃ**—ಪ್ರೀತನಾಗಿ । **ಯಾಹಿ**—ಹೋಗು.

॥ ಭಾವಾರ್ಥ ॥

ಎಲೈ ವಾಯುವೇ ನಿನಗೋಸ್ಕರ (ಎಲ್ಲರೂ) ಬಯಸಬೇಕಾದ ನಿರ್ಮಲವಾದ ಈ ಸೋಮರಸವು (ಅಭಿಷವ ಸಾಧನವಾದ) ಶಿಲೆಗಳಿಂದ ಶೋಧಿಸಲ್ಪಟ್ಟು ನಿಯತವಾದ ಪಾತ್ರೆಯನ್ನು (ಗ್ರಹವನ್ನು) ಸೇರುತ್ತದೆ; ಮತ್ತು ಶುಭ್ರ (ವರ್ಣವುಳ್ಳದ್ದಾಗಿ ಈ ಸೋಮವು ನಿನ್ನನ್ನು) ಸೇರುತ್ತದೆ; ನಿನ್ನ ಭಾಗವೆಂದು ಮನುಷ್ಯರಲ್ಲಿ (ಮನುಷ್ಯರಿಂದ) ಸಿದ್ಧಪಡಿಸಲ್ಪಟ್ಟ ಸೋಮರಸವು ದೇವತೆಗಳ (ಮಧ್ಯದಲ್ಲಿ) ನಿನಗೇ (ಮೊದಲು) ಹೋಮಮಾಡಲ್ಪಡುತ್ತದೆ; (ಅದನ್ನು ವಹಿಸಲು) ಅಶ್ವಗಳನ್ನು ಕಳುಹಿಸು; ನಮ್ಮಲ್ಲಿ ವಿಶ್ವಾಸವುಳ್ಳವನಾಗಿ (ಸ್ವೀಕರಿಸಿ ಸ್ವರ್ಗಾಭಿಮುಖನಾಗಿ) ಹೋಗು; ತುಷ್ಟನಾಗಿ, ನಮ್ಮಲ್ಲಿ ಅನುಗ್ರಹ ಬುದ್ಧಿಯುಳ್ಳವನಾಗಿ ಹೊರಡು.

## English Translation·

For you this Soma juice, purified by the stones (that bruise the plant), and clothed with enviable (splendour), flows to its (appropriate) receptacle; clothed with brilliant (splendour), tbis Soma is offered as they portion amongst men and amongst gods; (having received it), harness your horses, and depart well affected towards us; gratified, and well disposed towards us, depart.

॥ ವಿಶೇಷವಿಷಯಗಳು ॥

**ಪ್ರಉಗ** ಶಸ್ತ್ರದ ಎರಡನೇ ಮಂತ್ರವಾದ ಈ ಋಕ್ಕಿನಲ್ಲಿ ಸೋಮರಸದ ಸಿದ್ಧತೆಯನ್ನೂ, ಅದರ ಶುದ್ಧಿಯನ್ನೂ ಅದನ್ನು ಹೋಮದಲ್ಲಿ ಅರ್ಪಿಸುವ ಕ್ರಮವನ್ನೂ, ಅದನ್ನು ಸ್ವೀಕರಿಸಲು **ವಾಯು** ವನ್ನು ಉದ್ದೇಶಿಸಿ ಪ್ರಾರ್ಥಿಸು ವುದನ್ನೂ, ತಿಳಿಸಿದೆ.

**ಅದ್ರಿಭಿಃ— ಅಭಿಷವಸಾಧನೈಃ** । ಸೋಮರಸವನ್ನು ಜಜ್ಜಿ ಹಿಂಡುವ ಕಲ್ಲುಗಳಿಂದ ಎಂದರ್ಥ. ಈ ಸಾಧನಕ್ಕೆ **ಅದ್ರಿ, ಗ್ರಾವ** ಎಂಬ ಎರಡು ಪ್ರಯೋಗಗಳೂ ಇವೆ. ಈ ಎರಡು ಪದಗಳಿಗೂ ಸಹ ಕಲ್ಲು ಎಂಬ ಸಾಮಾನ್ಯವಾದ ಅರ್ಥವಿದ್ದರೂ ಸಹ ಸೋಮರಸವನ್ನು ಹಿಂಡಲು ಸಾಧನವಾದ **ಅದ್ರಿಗೂ ಗ್ರಾವಕ್ಕೂ** ಸ್ವರೂಪದಲ್ಲೇ ವ್ಯತ್ಯಾಸ ವಿದ್ದಿರಬೇಕೆಂದು ಅವುಗಳ ವರ್ಣನೆಗಳಿಂದಲೂ ವಿಶೇಷಣಗಳಿಂದಲೂ ಹೇಳಬಹುದು. ಸಾಧಾರಣವಾಗಿ **ಅದ್ರಿ**ಯೆಂಬ ಪದವು ಬಂದಾಗಲೆಲ್ಲಾ ಸಾಯಣರು ಆ ಪದಕ್ಕೆ **ಗ್ರಾವ** ಎಂದೂ, **ಗ್ರಾವ** ಶಬ್ದವು ಬಂದಾಗಲೆಲ್ಲಾ ಪಾಷಾಣವೆಂದೂ ಅರ್ಥಮಾಡಿದ್ದಾರೆ. ಆದರೆ ಅವುಗಳ ವ್ಯತ್ಯಾಸವನ್ನು ತೋರಿಸುವುದಕ್ಕೆ ಈ ಅರ್ಥವ್ಯತ್ಯಾಸವೇ ಆಧಾರವಲ್ಲ, ಅವುಗಳ

ಸ್ವರೂಪವನ್ನು ಹೇಳುವ ವಿಶೇಷಣಗಳಿಂದಲೂ, ಉಪಮಾನಗಳಿಂದಲೂ, ಅವುಗಳು ಸೋಮರಸವನ್ನು ಹಿಂಡುವಾಗ ಮಾಡುವ ಶಬ್ದಸೂಚಕವಾದ ಪದಗಳಿಂದಲೂ ಈ ಎರಡು ಸಾಧನಗಳೂ ಬೇರೆ ಬೇರೆಯೆಂದು ತಿಳಿಯುತ್ತದೆ. ಬಭ್ರುಹಾಣ, (ಋ. ಸಂ. ೫-೪೧-೧೨); ಪರ್ವತ (೧೦-೯೪-೧); ಅಶ್ರಮಣ, ಅಶ್ರಥಿತ, ಅಮೃತ್ಯು, ಅನಾತುರ, ಅಜರ, ಅಮವಿಷ್ಣು | (೧೦-೯೪-೧೧); ಧ್ರುವ, ಕ್ಷೇಮಕಾಮ ೧೦-೯೪-೧೨) ಇವೆಲ್ಲವೂ ಅದ್ರಿಯ ವೈಶಿಷ್ಟ್ಯವನ್ನು ತೋರಿಸುವ ವಿಶೇಷಣಗಳು. ಹೀಗೆಯೇ ಪೃಥು, ಪೃಥುಬುಧ್ನ ಇತ್ಯಾದಿ ವಿಶೇಷಣಗಳು **ಗ್ರಾವದ** ವೈಶಿಷ್ಟ್ಯವನ್ನು ಮಾತ್ರ ತೋರಿಸತಕ್ಕವು. **ಗ್ರಾವ** ವನ್ನು ಸಾಧಾರಣವಾಗಿ ವೃಷಭಕ್ಕೂ **ಅದ್ರಿ** ಯನ್ನು ಅಶ್ವಕ್ಕೂ ಹೋಲಿಸಿದೆ.

**ಅದ್ರಿರಾದೃಣಾತ್ಯೇತೇನ । ಅಪಿ ವಾ ಅತ್ತೇಃ ಸ್ಯಾತ್ ॥**

(ನಿ. ೪-೪)

**ಸೀಳು** ಎಂಬರ್ಥವನ್ನು ಕೊಡತಕ್ಕ **ದೃ** ಧಾತುವಿನಿಂದಾಗಲಿ, **ತಿನ್ನು** ಎಂಬರ್ಥವನ್ನು ಕೊಡುವ **ಅದ್** ಧಾತುವಿನಿಂದಾಗಲಿ **ಅದ್ರಿ** ಶಬ್ದವು ನಿಷ್ಪನ್ನವಾಗಿದೆ.

ಈ ಪದಕ್ಕೆ ರಸವನ್ನು ಹಿಂಡುವುದು ಅಥವಾ ಅದರ ಸಾಧನ ಎಂಬರ್ಥವು ಮಾತ್ರವಲ್ಲದೇ ಇನ್ನೂ ಇತರ ಅರ್ಥಗಳಲ್ಲೂ ಈ ಪದದ ಪ್ರಯೋಗವಿದೆ. ಉದಾಹರಣೆಗೆ

**ಉತ ಸ್ಮ ತೇ ಪರುಷ್ಣ್ಯಾಮೂರ್ಣಾ ವಸತ ಶುಂಧ್ಯವಃ ।**
**ಉತ ಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ ॥**

(ಋ. ಸಂ. ೫-೫೨-೯)

ಎಂಬಲ್ಲಿ ಮರುತ್ತುಗಳ ರಥದ ಬಲವನ್ನು ವರ್ಣಿಸಿದೆ. ಆ ರಥದ ಚಕ್ರಗಳ ಬಲದಿಂದ **ಅದ್ರಿ**ಗಳೂ ಸೀಳಲ್ಪಡುತ್ತವೆ. ಎಂದಿರುವಾಗ **ಅದ್ರಿ** ಶಬ್ದಕ್ಕೆ **ಮೇಘಂ, ಗಿರಿಂ ವಾ,** ಮೇಘ ಅಥವಾ ಪರ್ವತ ಎಂದರ್ಥಮಾಡಿದೆ.

**ಬ್ರಹ್ಮಾಣಿ ಮೇ ಮತಯಃ ಶಂ ಸುತಾಸಃ ಶುಷ್ಮ ಇಯರ್ತಿ ಪ್ರಭೃತೋ ಮೇ ಅದ್ರಿಃ ।**
**ಆ ಶಾಸತೇ ಪ್ರತಿ ಹರ್ಯಂತ್ಯುಕ್ಥೇಮಾ ಹರೀ ವಹತಸ್ತಾ ನೋ ಅಚ್ಛ ॥**

(ಋ. ಸಂ. ೧-೧೬೫-೪.)

ಎಂಬಲ್ಲಿ ಇಂದ್ರನಿಗೂ ಮರುತ್ತುಗಳಿಗೂ ನಡೆಯತಕ್ಕ ಸಂಭಾಷಣೆಯಲ್ಲಿ ಇಂದ್ರನು ತನ್ನ ವಜ್ರಾಯುಧದ ಶಕ್ತಿಯನ್ನು ಸ್ತುತಿಸಿದ್ದಾನೆ. ಇಲ್ಲಿ **ಅದ್ರಿ** ಶಬ್ದಕ್ಕೆ **ಶತ್ರೂಣಾಂ ಭಕ್ಷಕೋ ವಜ್ರಃ** । ಶತ್ರುನಾಶಕವಾದ ವಜ್ರಾಯುಧವೆಂದರ್ಥ.

**ಬೃಹಸ್ಪತಿರ್ಭಿನದದ್ರಿಂ ವಿದದ್ಗಾಃ ಸಮುಸ್ರಿಯಾಭಿರ್ವಾವಶಂತ ನರಃ ॥**

(ಋ. ಸಂ. ೧-೬೨-೩)

ಇತ್ಯಾದಿ ಋಕ್ಕುಗಳಲ್ಲಿ **ಅಸುರ**ನೆಂದೂ,

**ಮಹಃ ಸ ರಾಯ ಏಷತೇ ಪತಿರ್ದನ್ನಿನ ಇನಸ್ಯ ವಸುನಃ ಪದ ಆ ।**
**ಉಪ ಧ್ರಜಂತಮದ್ರಯೋ ವಿಧನ್ನಿತ್ ॥**

(ಋ. ಸಂ. ೧-೧೪೯-೧)

ಇತ್ಯಾದಿ ಕಡೆಗಳಲ್ಲಿ **ಅದ್ರಿಗಳುಳ್ಳ** ಎಂದರೆ ಹಿಂಡುವ ಕಲ್ಲುಗಳುಳ್ಳ ಯಜಮಾನರೆಂದೂ ಹೀಗೆ **ಅದ್ರಿ** ಶಬ್ದಕ್ಕೆ ಅನೇಕಾರ್ಥಗಳಿವೆ. ಇದಲ್ಲವೇ, **ಅತ್ತಾರಂ, ಅಸುರಂ, ಭಕ್ಷಕಂ, ಪಣಿಂ** ಎಂದೂ ಸಹ ಅರ್ಥಮಾಡಿದೆ. ಬೇರೊಂದು ಸಂದರ್ಭದಲ್ಲಿ ಈ ಪದಕ್ಕೆ ವಿವರಣೆಯನ್ನು ಕೊಡುವಾಗ ನಿರುಕ್ತಕಾರರು,

**ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಮದ್ರಿವಃ ।**
**ರಾಧಸ್ತನ್ನೋ ವಿದದ್ವಸ ಉಭಯಾಹಸ್ತ್ಯಾ ಭರ ॥**

(ಋ. ಸಂ. ೫-೩೯-೧)

ಎಂಬ ಋಕ್ಕನ್ನುದಹರಿಸಿ **ಅದ್ರಿವಃ** ಎಂಬುದಕ್ಕೆ **ವಜ್ರವನ್ ಇಂದ್ರ** ಎಂಬ ಅರ್ಥವು ಹೇಗೆ ಸಾಧ್ಯವೆಂದು ತೋರಿಸಿದ್ದಾರೆ. ಹೀಗೆ **ಅದ್ರಿ** ಶಬ್ದದ ಮೂಲಧಾತುವು ಅಥವಾ ಧಾತುಗಳು ಸಂದರ್ಭಾನುಸಾರವಾದ ನಿಷ್ಪತ್ತಿಗಳಿಂದ ಬೇರೆ ಬೇರೆ ಅರ್ಥಗಳನ್ನು ಕೊಡುವುದರಿಂದ ಆಯಾ ಸನ್ನಿವೇಶಕ್ಕನುಗುಣವಾಗಿ ಅರ್ಥಮಾಡಬೇಕು. ಪ್ರಕೃತವಾದ ಋಕ್ಕಿನಲ್ಲಿ **ಅಭಿಷವಸಾಧನೈಃ ।** ಸೋಮರಸವನ್ನು ಹಿಂಡುವ ಕಲ್ಲುಗಳಿಂದ (ಪರಿಪೂತವಾದುದು) ಎಂದರ್ಥ.

**ಸ್ಪಾರ್ಹಾ—ಸ್ಪೃಹಣೀಯಾನಿ ತೇಜಾಂಸಿ ।** ಆಕರ್ಷಕವಾದುದೂ, ಆದುದರಿಂದಲೇ ಅಪೇಕ್ಷಣೀಯವಾದುದೂ ಆದ ತೇಜಸ್ಸುಗಳೆಂದರ್ಥ.

**ಕೋಶಂ—ಕೋಶಃ ಕುಷ್ಣಾತೇರ್ವಿಕುಷಿತೋ ಭವತಿ ।** (ನಿ. ೫-೨೬) ಒಳಗಿದ್ದುದನ್ನು ಹೊರಕ್ಕೆ ಸುರಿ (ಅಂತರ್ಗತಸ್ಯ ಬಹಿರ್ನಿಸ್ಸಾರಣಂ) ಎಂಬರ್ಥವನ್ನು ಕೊಡುವ **ಕುಷ್** ಧಾತುವಿನಿಂದ ನಿಷ್ಪಾಶವಾಗಿ ಸೋಮರಸವನ್ನು ತುಂಬುವ ದೊಡ್ಡ ಚೀಲ ಅಥವಾ ಪಾತ್ರೆಯೆಂದರ್ಥವಾಗುತ್ತದೆ.

**ಆಯುಷು—ಮನುಷ್ಯೇಷು** ಎಂದು ಸಾಮಾನ್ಯವಾಗಿ ಹೇಳಿದ್ದರೂ ಸಹ ಯಜ್ಞಕರ್ತರಾದ ಮಾನವರಲ್ಲಿ ಎಂದೇ ಅನೇಕಕಡೆ ಇದರ ಪ್ರಯೋಗವಿದೆ. **ವಿಶಾಮತಿಥಿಶ್ಚಾರುರಾಯವೇ** (ಋ ಸಂ. ೨-೨-೮); **ಭೃಗವೋ ವಿಕ್ಷ್ವಾಯೋಃ** (೨-೪-೨); **ಉಪರಸ್ಯಾಯೋಃ** (೪-೨-೧೮) **ಚಿದಾಯವೇ** (೫-೭-೬) ಇತ್ಯಾದಿ ಕಡೆಗಳಲ್ಲೆಲ್ಲಾ **ಆಯುಸ್** ಶಬ್ದಕ್ಕೆ ಯಜಮಾನನೆಂದರ್ಥವೆಂದು ಭಾಷ್ಯಾಕಾರರು ಹೇಳಿರುವಂತೆ ಇಲ್ಲಿಯೂ ಸಹ ಯಜ್ಞಕರ್ತರಾದ ಮಾನವರೆಂದರ್ಥ. [**ಆಯುಃ** ಶಬ್ದವು ಅಂಕಿತನಾಮವಾಗಿ ಯಾರಯಾರ ಹೆಸರುಗಳನ್ನು ಸೂಚಿಸುತ್ತದೆಂಬುದನ್ನು ಆಯಾ ಸಂದರ್ಭಗಳಲ್ಲಿ ತಿಳಿಸಲಾಗುತ್ತದೆ.]

॥ ವ್ಯಾಕರಣಪ್ರಕ್ರಿಯಾ ॥

**ತುಭ್ಯ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಚತುರ್ಥಿಗೆ ಲುಕ್.

**ಪರಿಪೂತಃ**—ಪೂಞ್ ಪವನೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ.

**ಸ್ಪಾರ್ಹಾ**—ಸ್ಪೃಹಾಯಾಃ ಇಮಾನಿ ಸ್ಪಾರ್ಹಾಣಿ. **ತಸ್ಯೇದಂ** (ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿಗೆ ವೃದ್ಧಿ. ರಪರವಾಗಿ ಬರುತ್ತದೆ. ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲುಕ್.

**ವಸಾನಃ**—ವಸ ಆಚ್ಛಾದನೇ. ಧಾತು. ಅದಾದಿ. ಲಟಿಗೆ ಶಾನಚಾದೇಶ. ಶಪಿಗೆ ಲುಕ್. ಅನುದಾತ್ತವಾದ ಧಾತುವಾದುದರಿಂದ **ತಾಸ್ಯನುದಾತ್ತೇತ್**—(ಪಾ ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಬರುತ್ತದೆ.

**ಅರ್ಷತಿ**—ಋಷೀ ಗತೌ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ವ್ಯತ್ಯಯದಿಂದ ಶಪ್ ವಿಕರಣ ಬರುತ್ತದೆ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ರಪರವಾಗಿ ಬರುತ್ತದೆ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಶುಕ್ರಾ**—ಶುಚ ಶೋಕೇ. ಧಾತು ಔಣಾದಿಕ ರಕ್ ಪ್ರತ್ಯಯ. ನಪುಂಸಕ ಬಹುವಚನದಲ್ಲಿ ಶಿಗೆ ಲುಕ್.

**ಆಯುಷು**—ಇಣ್ ಗತೌ. ಧಾತು. **ಛಂದಸೀಣಃ** (ಉ ಸೂ. ೧-೨) ಎಂಬುದರಿಂದ ಉಣ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ಧಾತುವಿಗೆ ವೃದ್ಧಿ. ಆಯಾದೇಶ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹೂಯತೇ**—ಹು ದಾನಾದನಯೋಃ ಧಾತು. ಕರ್ಮಣಿ ಲಟ್ ಪ್ರಥಮಪುರುಷದಲ್ಲಿ ತಪ್ರತ್ಯಯ. ಟಿಗೆ ಏತ್ವ. **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. **ಅಕೃತ್ ಸಾರ್ವಧಾತುಕಯೋರ್ದೀರ್ಘಃ** (ಪಾ. ಸೂ. ೭-೪-೨೫) ಎಂಬುದರಿಂದ ಧಾತುವಿಗೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಹ**—ವಹ ಪ್ರಾಪಣೇ ಧಾತು. ಅಂತರ್ಭಾವಿತ ಣ್ಯರ್ಥಕವಾಗಿದೆ. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಅಸ್ಮಯುಃ**—ಅಸ್ಮಾನ್ ಆತ್ಮನಃ ಇಚ್ಛತಿ ಅಸ್ಮಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮ ಎಂಬುದರಿಂದ ಕ್ಯಚ್ ಪ್ರತ್ಯಯ. ಛಾಂದಸವಾಗಿ ಅಂತ್ಯಲೋಪ. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂ ರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಜುಷಾಣಃ**—ಜುಷೀ ಪ್ರೀತಿಸೇವನಯೋಃ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಛಾಂದಸಃ ವಿಕರಣಕ್ಕೆ ಲುಕ್. **ಅಟ್ ಕುಪ್ವಾಙ್**—ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. **ಚಿತಃ** (ಪಾ. ಸೂ. ೬-೧-೧ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ‖ ೨ ‖



॥ ಸಂಹಿತಾಪಾಠಃ ॥

ಆ ನೋ ನಿಯುದ್ಭಿಃ ಶತಿನೀಭಿರಧ್ವರಂ ಸಹಸ್ರಿಣೀಭಿರುಪ ಯಾಹಿ ವೀತಯೇ
ವಾಯೋ ಹವ್ಯಾನಿ ವೀತಯೇ ।
ತವಾಯಂ ಭಾಗ ಋತ್ವಿಯಃ ಸರಶ್ಮಿಃ ಸೂರ್ಯೇ ಸಚಾ ।
ಅಧ್ವರ್ಯುಭಿರ್ಭರಮಾಣಾ ಅಯಂಸತ ವಾಯೋ ಶುಕ್ರಾ ಅಯಂಸತ ॥

॥ ಪದಪಾಠಃ ॥

ಆ । ನಃ । ನಿಯುತ್ಽಭಿಃ । ಶತಿನೀಭಿಃ । ಅಧ್ವರಂ । ಸಹಸ್ರಿಣೀಭಿಃ । ಉಪ । ಯಾಹಿ । ವೀತಯೇ ।
ವಾಯೋ ಇತಿ । ಹವ್ಯಾನಿ । ವೀತಯೇ ।
ತವ । ಅಯಂ । ಭಾಗಃ । ಋತ್ವಿಯಃ । ಸಽರಶ್ಮಿಃ । ಸೂರ್ಯೇ । ಸಚಾ ।
ಅಧ್ವರ್ಯುಽಭಿಃ । ಭರಮಾಣಾಃ । ಅಯುಸಂತ । ವಾಯೋ ಇತಿ । ಶುಕ್ರಾಃ । ಅಯಂಸತ ॥ ೩ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತ್ವಂ ನೋಽಧ್ವರಮಸ್ಮತ್ಸಂಬಂಧಿನಂ ಯಜ್ಞಂ ಶತಿನೀಭಿರ್ನಿಯುದ್ಭಿಃ ಸಹಸ್ರಿಣೀಭಿಶ್ಚ ತಾಭಿಸ್ತ್ವದೀಯೈರಶ್ವೈರ್ನೋಽಸ್ಮದ್ಯಜ್ಞಮುಪ ಯಾಹಿ । ಉಪಾಗಚ್ಛ । ಕಿಮರ್ಥಂ । ವೀತಯೇ ತ್ವದಭಿಮತಕಾಮಾಯ ತತ್ಪೂರ್ತಯೇ । ಆಗತ್ಯ ಚ ಹವ್ಯಾನಿ ವೀತಯೇ ಸೋಮಾದಿಹವಿರ್ಭಕ್ಷಣಾಯಾಧ್ವರಂ ಹವ್ಯಾನಿ ಚೋಪಲಕ್ಷ್ಯ ತೇಷಾಮೇವ ಭಕ್ಷಣಾಯ ಶತಸಹಸ್ರೈರಶ್ವೈರತಿಶೀಘ್ರಮಾಗಚ್ಛೇತ್ಯರ್ಥಃ ॥ ಕಿಂಚಾಯಂ ತವ ಭಾಗೋ ಭಜನೀಯಃ ಸೋಮ ಋತ್ವಿಯಃ ಪ್ರಾಪ್ತಕಾಲಃ ಪ್ರದಾನಾವಸರಂ ಪ್ರಾಪ್ತಃ । ಋತುಶಬ್ದೇನ ಪ್ರದಾನಕಾಲೋ ಲಕ್ಷ್ಯತೇ ॥ ಛಂದಸಿ ಘಸ್ । ಪಾ. ೫-೧-೧೦೬ । ಸಿತಿ ಚ । ಪಾ. ೧-೪-೧೬ । ಇತಿ ಪದಸಂಜ್ಞಾಯಾ ಭಸಂಜ್ಞಾಯಾ ಬಾಧಾದೋರ್ಗುಣಾಭಾವೇ ಯಣ್ ॥ ಕಿಂಚ ಸೋಮಃ ಸೂರ್ಯೇ ಉದಿತೇ ಸತಿ ತಸ್ಯ ರಶ್ಮಿಭಿಃ ಸಚಾ ಸಹ ಸರಶ್ಮಿರ್ಭವತಿ । ಸಮಾನದೀಪ್ತಿರ್ಭವತಿ । ಯದ್ವಾ । ತೈಃ ಸಹಿತೋ ಭವತಿ । ಯತಃ ಸೂರ್ಯೇ ಉದಿತೇ ಸತಿ ರಶ್ಮಿರ್ಭವತಿ ಅತಃ ಪ್ರಾಪ್ತಕಾಲ ಇತ್ಯರ್ಥಃ । ಕಿಂಚ ಸೋಮಾ ಅಧ್ವರ್ಯುಭಿಶ್ಚಮಸಾಧ್ವರ್ಯುಭಿಃ । ತೇಷಾಂ ದಶತ್ವಾದ್ಬಹುವಚನಂ । ತೈರ್ಭರಮಾಣಾ ಧ್ರಿಯಮಾಣಾ ಅಯಂಸತ । ನಿಯತಾ ಅಭವನ್ । ಕಿಂಚ ಹೇ ವಾಯೋ ತೇ ಸೋಮಾಃ ಶುಕ್ರಾ ಅಯಂಸತ । ಅತ್ಯಂತದೀಪ್ತಾ ಉದ್ಯತಾಃ । ಅತಸ್ತೇಷಾಂ ಭಕ್ಷಣಾಯಾಯಾಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಹೇ ವಾಯೋ**—ಎಲೈ ವಾಯುವೇ । **ನಃ**—ನಮ್ಮ । **ಅಧ್ವರಂ**—ಯಜ್ಞಕ್ಕೆ । **ಶತಿನೀಭಿಃ**—ಶತಸಂಖ್ಯಾಕವಾದ (ಮತ್ತು) । **ಸಹಸ್ರಿಣೀಭಿಃ**—ಸಹಸ್ರಸಂಖ್ಯಾಕವಾದ । **ನಿಯುದ್ಭಿಃ**—(ನಿನ್ನ) ಅಶ್ವಗಳಿಂದ (ಯುಕ್ತನಾಗಿ) । **ವೀತಯೇ**—(ನಿನ್ನ) ಇಷ್ಟಾರ್ಥಪೂರ್ತಿಗೋಸ್ಕರ । **ಉಪ ಆ ಯಾಹಿ**—ಆಗಮಿಸು । **(ಆಗತ್ಯ**—ಬಂದು) । **ಹವ್ಯಾನಿ**—(ಸೋಮಾದಿ) ಹವಿಸ್ಸುಗಳನ್ನು । **ವೀತಯೇ**—ಭಕ್ಷಿಸುವುದಕ್ಕೋಸ್ಕರ (ಶೀಘ್ರವಾಗಿ ಆಗಮಿಸು) । **ಅಯಂ**—ಈ । **ತವ**—ನಿನ್ನ । **ಭಾಗಃ**—ಭಾಗವಾದ ಸೋಮರಸವು । **ಋತ್ವಿಯಃ**—(ದಾನಕ್ಕೆ) ಪ್ರಾಪ್ತಕಾಲವಾಗಿದೆ । (**ಕಿಂಚ**—ಮತ್ತು ಸೋಮರಸವು) । **ಸೂರ್ಯೇ ಸಚಾ**—ಸೂರ್ಯನು ಉದಿತನಾದರೆ (ಅವನ ರಶ್ಮಿಗಳಿಗೆ) । **ಸರಶ್ಮಿಃ**—ಸಮಾನ ಕಾಂತಿಯುಳ್ಳದ್ದು । (ಮತ್ತು) । **ಸೋಮಾಃ**—(ನಾನಾ ಪಾತ್ರೆಗಳಲ್ಲಿರುವ) ಸೋಮರಸಗಳು । **ಅಧ್ವರ್ಯುಭಿಃ** - ಚಮಸಾಧ್ವರ್ಯುಗಳಿಂದ । **ಭರಮಾಣಾಃ**—ಧೃತವಾಗಿ । **ಅಯಂಸತ**—ಸಿದ್ಧವಾಗಿವೆ । **(ಕಿಂಚ) ಹೇ ವಾಯೋ**—(ಮತ್ತು) ಎಲೈ ವಾಯುವೇ । (**ತೇ ಸೋಮಾಃ**—ಆ ಸೋಮಗಳು) । **ಶುಕ್ರಾಃ**—ಅತ್ಯಂತ ಶುಭ್ರವಾಗಿ । **ಅಯಂಸತ**—(ನಿನಗಾಗಿ) ಸಿದ್ಧವಾಗಿವೆ.

॥ ಭಾವಾರ್ಥ ॥

ಎಲೈ ವಾಯುವೇ, (ನಿನ್ನ) ನೂರಾರು, ಸಾವಿರಾರು ಅಶ್ವಗಳಿಂದ ಸಹಿತನಾಗಿ, (ನಿನ್ನ) ಇಷ್ಟಾರ್ಥಪೂರ್ತಿಗಾಗಿ ನಮ್ಮ ಯಜ್ಞಕ್ಕೆ ಆಗಮಿಸು; ಸೋಮಾದಿ ಹವಿಸ್ಸನ್ನು ಸ್ವೀಕರಿಸುವುದಕ್ಕೋಸ್ಕರ ಬಾ; ನಿನ್ನ ಭಾಗವನ್ನು ಕೊಡುವುದಕ್ಕೆ ಕಾಲವು ಪ್ರಾಪ್ತವಾಗಿದೆ; ಸೂರ್ಯೋದಯವಾದನಂತರ ಸೋಮವು ಸೂರ್ಯ ರಶ್ಮಿ ಸಹಿತವಾಗಿದೆ; ಚಮಸಾಧ್ವರ್ಯುಗಳಿಂದ ಧೃತವಾಗಿ (ನಾನಾ ಪಾತ್ರಸ್ಥವಾದ) ಸೋಮವು (ನಿನಗಾಗಿ) ಸಿದ್ಧವಾಗಿದೆ; ಶುಭ್ರವಾಗಿ (ಹೊಳೆಯುತ್ತಿರುವ ಸೋಮವು) ಸಿದ್ಧವಾಗಿದೆ.

English Translation.

Come with hundreds and thousands of your steeds to our sacrifice to partake of (the sacrificial) food ; (come), Vayu, to partake of the oblations : this is your reasonable portion, and it is radiant along with the sun ; the juices borne by the priests are prepared ; the pure juices, Vayu, are prepared.

॥ ವಿಶೇಷವಿಷಯಗಳು ॥

ಪ್ರಕಾಶಮಾನವಾದ ಸೋಮರಸವು ಸಿದ್ಧವಾಗಿದೆಯೆಂದೂ, ಸಹಸ್ರಸಂಖ್ಯಾಕಗಳಾದ ಅಶ್ವಗಳೊಂದಿಗೆ ಅಧ್ವರಕ್ಕೆ ದಯಮಾಡಬೇಕೆಂದೂ ವಾಯುವನ್ನು ಪ್ರಾರ್ಥಿಸಿದೆ.

**ಅಧ್ವರಂ—ಅಧ್ವರ ಇತಿ ಯಜ್ಞನಾಮ । ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧಃ ।** ಹಿಂಸಾರಹಿತವಾದುದರಿಂದ ಯಜ್ಞಕ್ಕೆ ಅಧ್ವರವೆಂದು ಹೆಸರೆಂದು ನಿರುಕ್ತಕಾರರು ವಿವರಿಸಿದ್ದಾರೆ (ನಿ. ೧-೮). ಇದೇ ನಿರ್ವಚನವನ್ನು ಶತಪಥ ಬ್ರಾಹ್ಮಣದಲ್ಲಿಯೂ ಹೇಳಿದೆ.—

**ತಂ ವಾ ಏತಂ । ಅಧ್ವರವಂತಂ ತೃಚಮನ್ವಾಹ ದೇವಾನ್ ಹ ವೈ ಯಜ್ಞೇನ ಯಜಮಾನಾಂತ್ಸಪತ್ನಾ ಅಸುರಾ ದುದೂರ್ಷಾಂ ಚಕ್ರುಸ್ತೇ ದುಧೂರ್ಷಂತ ಏವ ನ ಶೇಕುರ್ಧೂರ್ವಿತಂ ತೇ ಪರಾಬಭೂವುಸ್ತಸ್ಮಾದ್ಯಜ್ಞೋಽಧ್ವರೋ ನಾಮ ದುಧೂರ್ಷನ್ಹ ವಾ ಏನಗ್ಂ ಸಪತ್ನಃ ಪರಾಭವತಿ ಯಸ್ಯೈವಂ ವಿದುಷೋಽಧ್ವರವಂತಂ ತೃಚಮನ್ವಾಹುರ್ಯಾವದ್ವೇವ ಸೌಮ್ಯೇನಾಧ್ವರೇಣೇಷ್ಟ್ವಾ ಜಯತಿ ತಾವಜ್ಜಯತಿ ॥**

(ಶ ಬ್ರಾ. ೧-೪-೧-೪೦)

ದೇವತೆಗಳು ಒಂದುಸಲ ಯಜ್ಞವನ್ನು ಮಾಡಲುಪಕ್ರಮಿಸಿದಾಗ, ಅವರ ವಿರೋಧಿಗಳಾದ ಅಸುರರು ಅವರಿಗೆ ಹಿಂಸೆಯನ್ನು ಕೊಡಲು ಇಚ್ಛಿಸಿದರು. ಆದರೆ ಅವರ ಇಷ್ಟವು ನೆರವೇರದೇ ಅವರು ವಿಫಲರಾದರು. ಆದುದರಿಂದಲೇ ಹಿಂಸಾನಿರೋಧಕವಾದ ಯಜ್ಞಕ್ಕೆ **ಅಧ್ವರ** ವೆಂಬ ಹೆಸರು ಪ್ರಸಿದ್ಧವಾಯಿತು. ಈ ರಹಸ್ಯವನ್ನು ತಿಳಿದು **ಅಧ್ವರ** ದಿಂದ ಕೂಡಿದ **ತೃಚ**ವನ್ನು ಪಠಿಸಿದರೆ ಆಗ ಇವನನ್ನು ಹಿಂಸಿಸಲಿಚ್ಛಿಸುವ ವಿರೋಧಿಯ ಪ್ರಯತ್ನವು ವಿಫಲವಾಗುವುದಲ್ಲದೆ, ಸೋಮಯಾಗವನ್ನು ಮಾಡಿದರೆ ಯಾವ ಲಾಭವುಂಟೋ ಅದೇ ಲಾಭವನ್ನು ಪಡೆಯುವನು. ಈರೀತಿಯಾದ ಮಹತ್ತ್ವವಿರುವುದರಿಂದ ಯಜ್ಞಕ್ಕೆ ಅಧ್ವರವೆಂದು ಹೆಸರು. ಸಾಧಾರಣವಾಗಿ ಈ ಪದವನ್ನು ಸ್ವತಂತ್ರವಾಗಿಯೇ ಯಜ್ಞಪರ್ಯಾಯವಾಗಿ ಉಪಯೋಗಿಸಲ್ಪಡುತ್ತದೆ. ಆದರೆ,

**ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಸ ಇದ್ದೇವೇಷು ಗಚ್ಛತಿ ॥**

(ಋ. ಸಂ. ೧-೧-೪)

ಎಂಬಲ್ಲಿ **ಅಧ್ವರ** ಶಬ್ದವು **ಯಜ್ಞ** ಪದಕ್ಕೆ ವಿಶೇಷಣವಾಗಿದೆ. ಹಿಂಸಾನಿರೋಧಕವಾದುದೂ, ಹಿಂಸಾರಹಿತವಾದುದೂ ಆದ ಯಜ್ಞವೆಂದು ಸ್ಪಷ್ಟವಾಗಿದೆ. [ನಿರುಕ್ತದಲ್ಲಿ ಅಧ್ವರ ಶಬ್ದವು **ಅಂತರಿಕ್ಷ** ನಾಮಗಳಲ್ಲಿಯೂ ಪಠಿತವಾಗಿದೆ. (ನಿ. ೨-೧೦)].

**ಯಸ್ಯ ತ್ವಮಗ್ನೇ ಅಧ್ವರಂ ಜುಜೋಷೋ ದೇವೋ ಮರ್ತಸ್ಯ ಸುಧಿತಂ ರರಾಣಃ ।**

(ಋ. ಸಂ. ೪-೨-೧೦)

ಇತ್ಯಾದಿ ಕೆಲವು ಋಕ್ಕುಗಳಲ್ಲಿ **ಅಧ್ವರ** ಶಬ್ದಕ್ಕೆ **ಅನುಪಹತಂ ಅನ್ನಂ** ಎಂದರೆ ಅಹಿಂಸಿತವಾದ ಅನ್ನವೆಂದೂ ಅರ್ಥ ಮಾಡಿದೆ ಪ್ರಕೃತವಾದ ಋಕ್ಕಿನಲ್ಲಿ ಈ ಪದಕ್ಕೆ ಯಾಗವೆಂದರ್ಥವಾಗಿ, ಆ ಯಾಗಕ್ಕೆ ಸೋಮರಸದ ಪಾನಕ್ಕಾಗಿ ಬರಬೇಕೆಂದು ವಾಯುವನ್ನು ಪ್ರಾರ್ಥಿಸಿದೆ.

**ಶತಿನೀಭಿಃ ಸಹಸ್ರಿಣೀಭಿಃ ನಿಯುದ್ಭಿಃ**— ಶತಸಂಖ್ಯಾಕಗಳೂ, ಸಹಸ್ರಸಂಖ್ಯಾಕಗಳೂ ಆದ ನಿನ್ನ ಅಶ್ವಗಳೊಡನೆ, ಎಂದು ವಾಯುವಿನ ಅಶ್ವಗಳ ಅಸಂಖ್ಯಾಕವಾದ ಆಧಿಕ್ಯವನ್ನು ತಿಳಿಸಿದೆ. **ಸಹಸ್ರಿಣೋ ರಥಾಸಃ** (ಋ. ಸಂ. ೨-೪೧-೧) **ವಹಂತು ತ್ವಾ ಮನೋಯುಜೋ ಯುಕ್ತಾಸೋ ನವತಿರ್ನವ** (೪-೪೮-೪; ೫) ಇತ್ಯಾದ್ಯನೇಕ ಕಡೆಗಳಲ್ಲಿ ವಾಯುವಿನ ರಥಗಳ ಮತ್ತು ಅಶ್ವಗಳ ಬಾಹುಳ್ಯವನ್ನು ಹೇಳಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ತಿಳಿಸಿದೆ.

**ಅಧ್ವರ್ಯುಭಿಃ— ಅಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ ವಾ ।** (ನಿ. ೧-೮) ಯಜ್ಞವನ್ನು ನಿರ್ವಹಿಸುವುದರಿಂದಲೂ, ಯಜ್ಞಕ್ಕೆ ನೇತೃವಾಗಿರುವುದರಿಂದಲೂ, ಅಥವಾ

ಯಜ್ಞದಲ್ಲಿ ಶ್ರದ್ಧೆಯನ್ನಿಟ್ಟಿರುವುದರಿಂದಲೂ ಈ ಋತ್ವಿಕ್ಕಿಗೆ ಅಧ್ವರ್ಯುವೆಂದು ಹೆಸರು. ಇಲ್ಲಿ ಅಧ್ವರ್ಯುಪದಕ್ಕೆ **ಚಮಸಾಧ್ವರ್ಯುಗಳೆಂದು** ಅರ್ಥ ಮಾಡಬೇಕು. **ತೇಷಾಂ ದಶತ್ವಾದ್ಬಹುವಚನಂ ।** ಚಮಸಾಧ್ವರ್ಯುಗಳ ಸಂಖ್ಯೆಯು ಹತ್ತಿರುವುದರಿಂದ ಇಲ್ಲಿ ಬಹುವಚನವಿದೆಯೆಂದು ಭಾಷ್ಯಕಾರರ ಸಮಾಧಾನ.

> **ತದ್ಯೋಽವಿಷ್ಯತೀತಿ ಸ ಯದಗ್ನೌ ಜುಹ್ವತಿ ತದೇನಾನವತ್ಯಥ ಯದ್ವಃ ಸೋಮಂ ಬಿಭ್ರತ ಉಪರ್ಯುಪರಿ ಚರಿಷ್ಯಂತಿ ತದ್ಯೋಽವಿಷ್ಯತೀತಿ ಸ ಯದೇನಾನ್ತ್ಸೋಮಂ ಬಿಭ್ರತ ಉಪರ್ಯುಪರಿ ಚರಂತಿ ತದೇನಾನವತಿ ತಸ್ಮಾದಧ್ವರ್ಯುಃ ಸಮಯಾ ಧಿಷ್ಣ್ಯಾನ್ನಾತೀಯಾದಧ್ವರ್ಯುರ್ಹಿ ಸೋಮಂ ಬಿಭರ್ತಿ ।**
>
> (ಶ. ಬ್ರಾ. ೩-೬-೨-೨೦)

ಅಧ್ವರ್ಯುವು ಸೋಮವನ್ನು ಹಿಡಿದುಕೊಂಡು ವೇದಿಕೆಯ ಹತ್ತಿರ ಸಂಚರಿಸುತ್ತಿರುವಾಗ ದೇವತೆಗಳು ಅದಕ್ಕೆ ಆತುರರಾಗಿ ಕುಳಿತಿರುವರು. ಅವರ ತೃಪ್ತಿಗಾಗಿ ಸೋಮರಸವನ್ನು ಅಧ್ವರ್ಯುವು ಹಿಡಿದಿರಬೇಕು ಇತ್ಯಾದಿಯಾಗಿ **ಚಮಸಾಧ್ವರ್ಯುವಿನ** ಕರ್ತವ್ಯವನ್ನೂ ಸ್ವರೂಪವನ್ನೂ ನಿರ್ದೇಶಿಸಿದೆ. ಅದೇ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಅಧ್ವರ್ಯುಭಿಃ ಭರಮಾಣಾಃ ಸೋಮಾಃ** ಅಧ್ವರ್ಯುಗಳಿಂದ ವಹಿಸಲ್ಪಟ್ಟ ಸೋಮರಸಗಳು (ಸಿದ್ಧವಾಗಿವೆ) ಎಂದು ವರ್ಣಿತವಾಗಿದೆ.

**ಶುಕ್ರಾಃ**— **ಶುಕ್ರಂ ಶೋಚತೇರ್ಜ್ವಲತಿಕರ್ಮಣಃ.** (ನಿ. ೮-೧೧) ಪ್ರಕಾಶಿಸು ಎಂಬರ್ಥವನ್ನು ಕೊಡುವ ಶುಚ್ ಧಾತುವಿನಿಂದ ನಿಷ್ಪನ್ನವಾಗಿದೆ. ಪ್ರಕೃತದಲ್ಲಿ ಸೋಮರಸವನ್ನು ವರ್ಣಿಸುವ ವಿಶೇಷಣವಾಗಿದೆ. ಶುದ್ಧಿಮಾಡಲ್ಪಟ್ಟ ಸೋಮರಸವು ಅತ್ಯಂತ ಪ್ರಕಾಶಮಾನವಾಗಿ ಬೆಳಗುತ್ತದೆಂದು ತಾತ್ಪರ್ಯ.

**ಋತ್ವಿಯಃ—ಪ್ರಾಪ್ತಕಾಲಃ ಪ್ರದಾನಾವಸರಂ ಪ್ರಾಪ್ತಃ । ಋತುಶಬ್ದೇನ ಪ್ರದಾನಕಾಲೋ ಲಕ್ಷ್ಯತೇ । ಋತು** ಶಬ್ದಕ್ಕೆ ಕಾಲವೆಂದರ್ಥವಿರುವುದರಿಂದ ಇಲ್ಲಿ **ಋತ್ವಿಯಃ** ಎಂದರೆ ಸೋಮರಸವನ್ನು ಅರ್ಪಿಸುವ ಕಾಲವೆಂದರ್ಥ. ನಿರುಕ್ತಕಾರರು,

> **ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯ೧ಗ್ನಾಯ್ಯಶ್ವಿನೀ ರಾಟ್ ।**
> **ಆ ರೋದಸೀ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಂ ॥**
>
> (ಋ. ಸಂ. ೫–೪೬–೮)

ಎಂಬ ಋಕ್ಕನ್ನುದಹರಿಸಿ **ಋತು** ಶಬ್ದಕ್ಕೆ ಸಕಾಲವೆಂಬರ್ಥವನ್ನು ಉಚಿತವಾದ ಸಂದರ್ಭವನ್ನು ಸೂಚಿಸಿ ಆಯಾ ಪ್ರಾಪ್ತಕಾಲಗಳಲ್ಲಿ ದೇವಪತ್ನಿಯರು ತಮ್ಮ ಸೌಖ್ಯಗಳನ್ನನುಭವಿಸಲಿ ಎಂದು ವಿವರಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಋತ್ವಿಯಃ** ಎನ್ನುವುದಕ್ಕೆ **ವಾಯು** ದೇವತೆಯು ಸೋಮರಸವನ್ನು ಪಾನಮಾಡತಕ್ಕ ಕಾಲವೆಂದು ಪ್ರಾಪ್ತವಾದ ಕಾಲವನ್ನು ಸೂಚಿಸುವುದಾಗಿದೆ. ಪ್ರಾತಃಸವನಕಾಲದಲ್ಲಿ ಉಳಿದ ಎಲ್ಲಾ ದೇವತೆಗಳಿಗಿಂತಲೂ ಪೂರ್ವಭಾವಿಯಾಗಿಯೇ ವಾಯುವಿಗೆ ಸೋಮರಸವನ್ನು ಅರ್ಪಿಸಬೇಕಾಗಿರುವುದರಿಂದ **ಸೂರ್ಯೇ ಸಚಾ ಸರಶ್ಮಿಃ—** ಆಗತಾನೇ ಉದಿತನಾದ ಸೂರ್ಯನ ರಶ್ಮಿಗೆ ಸಮಾನವಾದ ಕಾಂತಿಯುಳ್ಳದ್ದು ಅಥವಾ ಪ್ರಭಾತಕಾಲದ ರಶ್ಮಿಯೊಂದಿಗೆ ಮಿಶ್ರಿತವಾಗಿ ಪ್ರಕಾಶಮಾನವಾದದ್ದು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಅಧ್ವರಂ**—ನ ವಿದ್ಯತೇ ಧ್ವರಃ ಹಿಂಸಾ ಯತ್ರ. ತನ್. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವೀತಯೇ**—ವೀ ಗತ್ಯಾದಿಷು. **ಮಂತ್ರೇ ವೃಷೇಷ**—(ಪಾ. ಸೂ. ೩-೩-೯೬) ಎಂಬುದರಿಂದ ಉದಾತ್ತವಾದ ಕ್ತಿನ್ ಬರುತ್ತದೆ.

**ಋತ್ವಿಯಃ**—ಋತು ಶಬ್ದದಿಂದ ಲಕ್ಷಣಾವೃತ್ತಿಯಿಂದ ಸಂನಿಹಿತಕಾಲವು ತಿಳಿಯುತ್ತದೆ. **ಛಂದಸಿ ಘಸ್** (ಪಾ. ಸೂ. ೫-೧-೧೦೬) ಎಂಬುದರಿಂದ ಘಸ್ ಪ್ರತ್ಯಯ. **ಆಯನೇಯೀನೀ**—(ಪಾ ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಸಿತಿ ಚ** (ಪಾ. ಸೂ. ೧-೪-೧೬) ಎಂಬುದರಿಂದ ಸಿತ್ತಾದ ಪ್ರತ್ಯಯ ಪರವಾದಾಗ ಭಸಂಜ್ಞೆಗೆ ಬಾಧವಾಗಿ ಪದಸಂಜ್ಞೆಯು ಬರುವುದರಿಂದ **ಓರ್ಗುಣಃ** ಎಂಬುದರಿಂದ ಗುಣ ಬಾರದಿರುವುದರಿಂದ ಯಣಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸಚಾ**—ಷಚ ಸಮವಾಯೇ. ಧಾತು. ಆದಿಗೆ ಸತ್ವ. **ಸಂಪದಾದಿಭ್ಯಃ ಕ್ವಿಪ್** ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್. ತೃತೀಯಾ ಏಕವಚನಾಂತರೂಪ. **ಸರ್ವೇ ವಿಧಯಃ ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುವುದಿಲ್ಲ. ಇದು ನಿಪಾತವೆಂದು ಸ್ವೀಕರಿಸಿದಾಗ ಆದ್ಯುದಾತ್ತಸ್ವರವೇ ಬರುತ್ತದೆ.

**ಭರಮಾಣಾಃ**—ಭೃಞ್ ಭರಣೇ. ಧಾತು. ಕರ್ಮಣಿಯಲ್ಲಿ ಲಟಿಗೆ ಶಾನಚಾದೇಶ. ವ್ಯತ್ಯಯದಿಂದ ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಯಂಸತ**—ಯಮು ಉಪರಮೇ. ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. ಚ್ಲಿಗೆ ಸಿಚಾದೇಶ. **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಪ್ರತ್ಯಯಕ್ಕೆ ಅತಾದೇಶ ಧಾತು ಮಕಾರಕ್ಕೆ **ನಶ್ಚಾಪದಾಂತಸ್ಯ ಝಲಿ** ಎಂಬುದರಿಂದ ಅನುಸ್ವಾರ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಆ ವಾಂ ರಥೋ ನಿಯುತ್ವಾನ್ವಕ್ಷದವಸೇಽಭಿ ಪ್ರಯಾಂಸಿ ಸುಧಿತಾನಿ
ವೀತಯೇ ವಾಯೋ ಹವ್ಯಾನಿ ವೀತಯೇ ।
ಪಿಬತಂ ಮಧ್ವೋ ಅಂಧಸಃ ಪೂರ್ವಪೇಯಂ ಹಿ ವಾಂ ಹಿತಂ ।
ವಾಯವಾ ಚಂದ್ರೇಣ ರಾಧಸಾ ಗತಮಿಂದ್ರಶ್ಚ ರಾಧಸಾ ಗತಂ ॥ ೪ ॥

॥ ಪದಪಾಠಃ ॥

ಆ । ವಾಂ । ರಥಃ । ನಿಯುತ್ವಾನ್ । ವಕ್ಷತ್ । ಅವಸೇ । ಅಭಿ । ಪ್ರಯಾಂಸಿ । ಸುಽಧಿತಾನಿ । ವೀತಯೇ ।
ವಾಯೋ ಇತಿ । ಹವ್ಯಾನಿ । ವೀತಯೇ ।
ಪಿಬತಂ । ಮಧ್ವಃ । ಅಂಧಸಃ । ಪೂರ್ವಽಪೇಯಂ । ಹಿ । ವಾಂ । ಹಿತಂ ।
ವಾಯೋ ಇತಿ । ಆ । ಚಂದ್ರೇಣ । ರಾಧಸಾ । ಆ । ಗತಂ । ಇಂದ್ರಃ । ಚ । ರಾಧಸಾ । ಆ । ಗತಂ ॥ ೪ ॥

॥ ಸಾಯಣಭಾಷ್ಯಂ ॥

ಕೇವಲಂ ವಾಯುಂ ಸ್ತುತ್ವಾ ವ್ಯಾಸಕ್ತತಯೇಂದ್ರವಾಯೂ ಸ್ತೌತಿ । ಹೇ ವಾಯೋ ತ್ವಾಮಿಂದ್ರಂ ಚ ವಾಂ ಯುಷ್ಮಾನ್ ರಥೋ ಯುವಯೋಃ ಸಂಬಂಧೀ ರಥೋ ನಿಯುತ್ವಾನ್ ನಿಯುದ್ಭಿರಶ್ವೈಸ್ತದ್ವಾನ್ ಸನ್ನಾ ವಕ್ಷತ್ । ದೇವಯಜನಂ ಪ್ರತಿ ಯುಷ್ಮಾನಾವಹತು ॥ ವಹೇರ್ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ಯದ್ಯಪಿ ನಿಯುತೋ ವಾಯೋರೇವ ರಥಸ್ಯೋಚಿತಾಃ ತಥಾಪಿ ವ್ಯಾಸಕ್ತದೇವತಾತ್ವಾತ್ ಸಹೈವಾಗಮನಾದಿಂದ್ರಾರ್ಥಮಪಿ ವಹಂತಿ । ಕಿಮರ್ಥಂ । ಅವಸೇ ಗಮನಾಯ ರಕ್ಷಣಾಯ ವಾ । ಪುನಶ್ಚ ಕಿಮರ್ಥಂ । ಪ್ರಯಾಂಸ್ಯನ್ನಾನಿ ಸೋಮಲಕ್ಷಣಾನಿ ಸುಧಿತಾನಿ ಸುಷ್ಠು ಗೃಹೀತಾನಿ ವೀತಯೇ । ತೇಷಾಂ ಭಕ್ಷಣಾಯ । ತಥಾ ಹವ್ಯಾನಿ ವೀತಯ ಇತರೇಷಾಂ ಸವನೀಯಪುರೋಡಾಶಾದೀನಾಂ ಖಾದನಾಯ ॥ ವೇತೇಃ ಕ್ತಿನ್ । ಮಂತ್ರೇ ವೃಷೇತ್ಯಾದಿನಾ ತಸ್ಯೋದಾತ್ತತ್ವಂ ॥ ಕಿಂಚ ಮಧ್ವೋ ಮಧುರರಸಸ್ಯಾಂಧಸೋಽನ್ನಸ್ಯ ಸೋಮರೂಪಸ್ಯ ॥ ಕರ್ಮಣಿ ಷಷ್ಠೀ ॥ ಮಧುರಂ ಸೋಮಂ ಪಿಬತಂ । ಯತಃ ಪೂರ್ವಪೇಯಮಿತರದೇವೇಭ್ಯಃ ಪೂರ್ವಪಾನಂ ವಾಂ ಯುವಯೋರ್ಹಿತಂ ॥ ಪಾತೇರಚೋ ಯದಿತಿ ಯತ್ । ಈದ್ಯತೀತೀಕಾರಃ ॥ ಅಭಿಮತಂ । ಅತಃ ಪ್ರಥಮಂ ಪಿಬತಮಿತ್ಯರ್ಥಃ । ಯದ್ಯಪೀಂದ್ರಾದಪಿ ವಾಯೋಃ ಪೂರ್ವಪಾನಂ ತ್ವಂ ಹಿ ಪೂರ್ವಪಾ ಅಸಿ । ಋ. ೪-೪೬-೧ । ದೇವ ದಧಿಷೇ ಪೂರ್ವಪೇಯಂ । ಋ. ೭-೯೨-೧ । ಇತ್ಯಾದಿಷು ಸರ್ವತ್ರ ಪ್ರಸಿದ್ಧಂ ತಥಾಪೀಂದ್ರಸ್ಯೇತರದೇವಭ್ಯಃ ಪೂರ್ವಂ ವಾಯುನಾ ಸಹ ಪಾನಂ ಚೇಂದ್ರತುರೀಯಾರ್ಥವಾದನಬ್ರಾಹ್ಮಣೇ ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್ನಿತ್ಯತ್ರ ಪ್ರತಿಪಾದಿತಂ । ಐ. ಬ್ರಾ. ೨-೨೫ । ಕಿಂಚಾಗಮನಸಮಯೇ ಹೇ ವಾಯೋ ತ್ವಮಿಂದ್ರಶ್ಚ ಚಂದ್ರೇಣಾಸ್ಮದಾಹ್ಲಾದಕೇನ ಹಿರಣ್ಯೇನ ರಾಧಸಾ ಗವಾದಿರೂಪೇಣ ಧನೇನ ಚ ಸಹಾ ಗತಂ । ಆಗಚ್ಛತಂ । ರಾಧಸಾ ರತ್ನೇನ ಧನೇನ ಸಹಾ ಗತಂ ॥ ಗಮೇರ್ಲೋಟಿ ಚ್ಛಾಂದಸಃ ಶಪೋ ಲುಕ್ । ಅನುದಾತ್ತೋಪದೇಶೇತ್ಯನುನಾಸಿಕಲೋಪಃ । ಲುಙಿ ಚ ಮಂತ್ರೇ ಘಸೇತಿ ಚ್ಲೇರ್ಲುಕ್ ॥

॥ ಪ್ರತಿಪದಾರ್ಥ ॥

**ಹೇ ವಾಯೋ**—ಎಲೈ ವಾಯುವೇ । **ವಾಂ**—ನಿಮ್ಮಿಬ್ಬರನ್ನು (ನಿನ್ನನ್ನು ಮತ್ತು ಇಂದ್ರನನ್ನು) । **ನಿಯುತ್ವಾನ್**—ನಿಯುನ್ನಾಮಕ ಅಶ್ವಸಹಿತವಾದ । **ರಥಃ**—(ನಿನ್ನ) ರಥವು । **ಅವಸೇ**—(ನಮ್ಮ) ರಕ್ಷಣೆ

ಗೋಸ್ಕರ (ಗಮನಾರ್ಥವಾಗಿ) । (**ಕಿಂಚ**—ಮತ್ತು) । **ಸುಧಿತಾನಿ**—ಚೆನ್ನಾಗಿ ಸಿದ್ಧಪಡಿಸಲ್ಪಟ್ಟಿರುವ । **ಪ್ರಯಾಂಸಿ**—ಸೋಮರೂಪ ಅನ್ನಗಳನ್ನು । **ವೀತಯೇ**—ಭಕ್ಷಿಸುವುದಕ್ಕೋಸ್ಕರ । **ಅಭಿ**—(ನಮ್ಮ ಯಾಗಶಾಲೆಗೆ) ಅಭಿಮುಖವಾಗಿ । **ಆ ವಕ್ಷತ್**—ವಹಿಸಿ ತರಲಿ । (**ತಥಾ**—ಹಾಗೆಯೇ) । **ಹವ್ಯಾನಿ**—(ಪುರೋಡಾಶಾದಿ ಇತರ) ಹವಿಸ್ಸುಗಳನ್ನು । **ವೀತಯೇ**—ಸ್ವೀಕರಿಸುವುದಕ್ಕೋಸ್ಕರ (ರಥವು ನಿಮ್ಮನ್ನು ಕರೆತರಲಿ) । **ಪೂರ್ವಪೇಯಾ**—(ಇತರ ದೇವತೆಗಳಿಗಿಂತ) ಮೊದಲು ಪಾನವು । **ವಾಂ**—ನಿಮ್ಮಿಬ್ಬರಿಗೆ । **ಹಿತಂ**—ಅಭಿಮತವಾದುದು । (**ಅತಃ**—ಆದುದರಿಂದ) । **ಮಧ್ವಃ**—ಮಧುರರಸಯುಕ್ತವಾದ । **ಅಂಧಸಃ**—(ಸೋಮರೂಪ) ಅನ್ನವನ್ನು । **ಪಿಬತಂ**—(ಸ್ವೀಕರಿಸಿ) ಪಾನಮಾಡಿ । (**ಕಿಂ ಚ**—ಮತ್ತು) । (**ಆಗಮನಸಮಯೇ**—ಬರುವಾಗ) । **ಹೇ ವಾಯೋ**—ಎಲೈ ವಾಯುವೇ (ನೀನೂ) । **ಇಂದ್ರಃ ಚ**—ಇಂದ್ರನೂ ಕೂಡ । **ಚಂದ್ರೇಣ**—ಆಹ್ಲಾದಕರವಾದ ಸುವರ್ಣದಿಂದ (ಮತ್ತು) । **ರಾಧಸಾ**—(ಗವಾದಿರೂಪ) ಧನದಿಂದಲೂ (ಸಹ ಯುಕ್ತರಾಗಿ) । **ಆ ಗತಂ**—ಬನ್ನಿ । **ರಾಧಸಾ**—(ರತ್ನಾದಿ) ಧನದಿಂದಲೂ (ಯುಕ್ತರಾಗಿ) । **ಆ ಗತಂ**—ಬನ್ನಿ.

॥ ಭಾವಾರ್ಥ ॥

ಎಲೈ ವಾಯುವೇ, ನಿಯುನ್ನಾಮಕ ಅಶ್ವಯುಕ್ತವಾದ (ನಿನ್ನ) ರಥವು ನಿನ್ನನ್ನೂ ಮತ್ತು ಇಂದ್ರನನ್ನೂ, (ನಮ್ಮನ್ನು) ರಕ್ಷಿಸುವುದಕ್ಕೋಸ್ಕರಲೂ ಮತ್ತು ಸಿದ್ಧಪಡಿಸಲ್ಪಟ್ಟಿರುವ ಸೋಮರೂಪ ಹವಿಸ್ಸನ್ನು ಸ್ವೀಕರಿಸುವುದಕ್ಕೋಸ್ಕರಲೂ (ನಮ್ಮ) ಯಾಗಶಾಲೆಗೆ ಕರೆತರಲಿ ; (ಹಾಗೆಯೇ) (ಪುರೋಡಾಶಾದಿ ಇತರ) ಹವಿಃಸ್ವೀಕಾರಕ್ಕೋಸ್ಕರಲೂ (ಕರೆತರಲಿ) ; (ಇತರ ದೇವತೆಗಳಿಗಿಂತ) ಮೊದಲು ಪಾನಮಾಡುವುದು ನಿಮ್ಮಿಬ್ಬರಿಗೆ ಅಭಿಮತವಾದುದು ; (ಆದುದರಿಂದ) ಮಾಧುರ್ಯೋಪೇತವಾದ (ಈ) ಸೋಮರಸವನ್ನು ಪಾನಮಾಡಿ ; (ಮತ್ತು) ಬರುವಾಗ, ಎಲೈ ವಾಯುವೇ, ನೀನೂ ಮತ್ತು ಇಂದ್ರನೂ ಆಹ್ಲಾದಕರವಾದ (ಸುವರ್ಣ, ಗೋವುಗಳು ಮೊದಲಾದ) ಧನಯುಕ್ತರಾಗಿ ಬನ್ನಿ ; (ರತ್ನಾದಿ) ಧನಯುಕ್ತರಾಗಿಯೂ ಬನ್ನಿ.

## English Translation

Let the chariot drawn by the Niyuts convey you both, (Indra and Vayu, to the sacrifice), for our preservation, and to partake of the consecrated viands; to partake, Vayu, of the oblations: drink of the sweet, beverage ; for the first draught is your (joint) due. Vayu (and Indra), come with joy-bestowing wealth ; Indra (and Vayu), come with wealth,

॥ ವಿಶೇಷವಿಷಯಗಳು ॥

ಸೋಮಪಾನದಲ್ಲಿ ಪ್ರಥಮಸ್ಥಾನವು ಯಾರಿಗೆ ಲಭಿಸಬೇಕೆಂದು ದೇವತೆಗಳಲ್ಲಿ ಪರಸ್ಪರವಾಗಿ ಚರ್ಚೆಯಾಗಿ ಕೊನೆಗೆ ಓಟದ ಸ್ಪರ್ಧೆಯನ್ನಿಟ್ಟು ಅದರಲ್ಲಿ ವಾಯುವು ಜಯಿಸಿ ಪ್ರಥಮಸ್ಥಾನವನ್ನು ಗಳಿಸಿದ ವಿಷಯವನ್ನು "**ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್**" (ಐ. ಬ್ರಾ. ೨-೨೪) ಎಂದು ಐತರೇಯಬ್ರಾಹ್ಮಣದಲ್ಲಿ ಉಕ್ತವಾಗಿರುವ ಕಥೆಯನ್ನುದಹರಿಸಿ ಹಿಂದೆ ತಿಳಿಸಿದೆ. ಆದುದರಿಂದ ಎಲ್ಲಾ ದೇವತೆಗಳಿಗಿಂತಲೂ ವಾಯುವಿಗೇ ಪ್ರಥಮಸ್ಥಾನವು ಸಿದ್ಧವಾಗಿದೆ.

**ಅಗ್ರಂ ಪಿಬಾ ಮಧೂನಾಂ ಸುತಂ ವಾಯೋ ದಿವಿಷ್ಟಿಷು । ತ್ವಂ ಹಿ ಪೂರ್ವಪಾ ಅಸಿ ।**

(ಋ. ಸಂ. ४-४६-೧)

**ಆ ವಾಯೋ ಭೂಷ ಶುಚಿಪಾ ಉಪ ನಃ ಸಹಸ್ರಂ ತೇ ನಿಯುತೋ ವಿಶ್ವವಾರ ।**
**ಉಪೋ ತೇ ಅಂಧೋ ಮದ್ಯಮಯಾಮಿ ಯಸ್ಯ ದೇವ ದಧಿಷೇ ಪೂರ್ವಪೇಯಂ ॥**

(ಋ. ಸಂ. ೭-೯೨-೧)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಇದೇ ವಿಷಯವು ಎಂದರೆ ವಾಯುವಿಗೇ ಪ್ರಥಮಸ್ಥಾನವು ಲಭಿಸಬೇಕು ಎಂಬ ಅಂಶವು ಸ್ಪಷ್ಟವಾಗಿದೆಯೆಂದು ಸಾಯಣರು ವಿವರಿಸಿದ್ದಾರೆ. **ಯದ್ಯಪಿ ಇಂದ್ರಾದಪಿ ವಾಯೋಃ ಪೂರ್ವಪಾನಂ, ತಥಾಪಿ ಇಂದ್ರಸ್ಯ ಇತರದೇವೇಭ್ಯಃ ಪೂರ್ವಂ ವಾಯುನಾ ಸಹ ಪಾನಂ ಇಂದ್ರತುರೀಯಾರ್ಥವಾದನ ಬ್ರಾಹ್ಮಣೇ ಪ್ರತಿಪಾದಿತಂ ।** ಇಂದ್ರನಿಗಿಂತಲೂ ವಾಯುವಿಗೆ ಪ್ರಥಮಸ್ಥಾನವು ಲಭಿಸಬೇಕಾದರೂ ಸಹ ಇತರ ದೇವತೆಗಳಿಗಿಂತಲೂ ಮೊದಲು ಇಂದ್ರನಿಗೆ ಸಲ್ಲಬೇಕೆಂದು ಇಂದ್ರನು ವಾಯುವಿನೊಡನೆ ಸಂಧಾನಮಾಡಿದ ಕಥೆಯನ್ನು **ದೇವಾ ವೈ** ಎಂಬ ಐತರೇಯ ಬ್ರಾಹ್ಮಣ ವಾಕ್ಯಗಳನ್ನು ಹೇಳಿದೆಯೆಂದು ಸಾಯಣರು ಸೂಚಿಸಿದ್ದಾರೆ. ಈ ಕಥೆಯನ್ನು ಹಿಂದಿನ ಸೂತ್ರದ ಮೊದಲು ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿರುವುದರಿಂದ ಪ್ರಕೃತದಲ್ಲಿ **ಇಂದ್ರನು** ತನಗೂ ಸಹ ಅಗ್ರಸ್ಥಾನವನ್ನು ಕೊಡಬೇಕೆಂದು ವಾಯುವನ್ನು ಪ್ರಾರ್ಥಿಸಿದ ವಿಷಯವನ್ನು ಮಾತ್ರ ಇಲ್ಲಿ ಉದಹರಿಸಲಾಗುತ್ತದೆ.

**ಸೋಽವೇದಿಂದ್ರೋ ವಾಯುಮುದ್ವೈ ಜಯತೀತಿ ತಮನು ಪರಾಪತತ್ಸಹ ನಾವಥೋಜ್ಜಯಾವೇತಿ ಸ ನೇತ್ಯಬ್ರವೀದಹಮೇವೋಜ್ಜೇಷ್ಯಾಮೀತಿ ತೃತೀಯಂ ಮೇಽಥೋಜ್ಜಯಾವೇತಿ ನೇತಿ ಹೈವಾಬ್ರವೀದಹಮೇವೋಜ್ಜೇಷ್ಯಾಮೀತಿ ತುರೀಯಂ ಮೇಽಥೋಜ್ಜಯಾವೇತಿ ತಥೇತಿ ತಂ ತುರೀಯೇಽತ್ಯಾರ್ಜತ ತತ್ತುರೀಯಭಾಗಿಂದ್ರೋಽಭವತ್ತ್ರಿಭಾಗ್ವಾಯುಃ ॥**

(ಐ. ಬ್ರಾ. ೨-೨೫)

ಈ ಸ್ಪರ್ಧೆಯಲ್ಲಿ ವಾಯುವಿಗಿಂತಲೂ ತಾನು ಹಿಂದೆ ಬೀಳುವೆನೆಂದು ತಿಳಿದು, ಇಂದ್ರನು ವಾಯುವಿನ ವೇಗದಲ್ಲಿಯೇ ಓಡಿ ಗುರಿಯನ್ನು ಮುಟ್ಟುವಾಗ ವಾಯುವಿನ ಪಕ್ಕದಲ್ಲಿಯೇ ಬಿದ್ದನು. ಆದ್ದರಿಂದ "ನಾವಿಬ್ಬರೂ ಒಟ್ಟಿಗೇ ಬಂದಿದ್ದೇವೆ. ನಾವಿಬ್ಬರೂ ಒಟ್ಟಿಗೆ ಜಯದಲ್ಲಿ ಭಾಗಿಗಳಾಗೋಣ" ಎಂದು ವಾಯುವನ್ನು ಕೇಳಿಕೊಳ್ಳಲು, ಸ್ಪರ್ಧೆಯಲ್ಲಿ ತಾನೊಬ್ಬನೇ ಜಯಿಸಿದುದರಿಂದ ಅದಾಗದೆಂದು ವಾಯುವು ಉತ್ತರವನ್ನು ಕೊಟ್ಟನು. ಇಂದ್ರನಿಗೆ ಮೂರನೆಯ ಭಾಗವೂ ಸಿಕ್ಕದೇ ಕೊನೆಗೆ ನಾಲ್ಕನೇ ಭಾಗವು ಸಿಕ್ಕಿತು.

**ಸ ಏಷ ಇಂದ್ರತುರೀಯೋ ಗ್ರಹೋ ಗೃಹ್ಯತೇ ಯದೈಂದ್ರವಾಯವಃ । ತದೇತದೃಷಿಃ ಪಶ್ಯನ್ನಭ್ಯನೂವಾಚ ನಿಯುತ್ವಾँ ಇಂದ್ರಸಾರಥಿರಿತಿ । ತಸ್ಮಾದ್ಧಾಪ್ಯೇತರ್ಹಿ ಭರತಾಃ ಸತ್ವನಾಂ ವಿತ್ತಿಂ ಪ್ರಯಂತಿ ತುರೀಯೇ ಹೈವ ಸಂಗ್ರಹೀತಾರೋ ವದಂತೇಽಮುನೈವಾನೂಕಾಶೇನ ಯದದ ಇಂದ್ರಃ ಸಾರಥಿರಿವ ಭೂತ್ವೋದಜಯತ್ ।**

(ಐ. ಬ್ರಾ. ೨-೨೫)

ಆದುದರಿಂದ ಐಂದ್ರವಾಯವಗ್ರಹದಲ್ಲಿ ಇಂದ್ರನಿಗೆ ನಾಲ್ಕನೇ ಒಂದು ಭಾಗವೆಂದು ನಿಯತವಾಗಿದೆಯೆಂದು ಋಷಿದೃಷ್ಟವಾಗಿದೆ. ಅದಕ್ಕೆ ಅನುರೂಪವಾಗಿ **ನಿಯುತ್ವಾನಿಂದ್ರಸಾರಥಿಃ** ಎಂಬ ಮಂತ್ರವನ್ನು ಪಠಿಸಿದ್ದಾನೆ. ಈಗಲೂ ಸಹ

ಭರತವಂಶದ ರಾಜರು ಕೊಳ್ಳಿಯನ್ನು ಹೊಡೆದರೆ ವಾಯುವು ತನ್ನ ಸಾರಥಿಯಾದ ಇಂದ್ರನಿಗೆ ನಾಲ್ಕನೇ ಒಂದು ಭಾಗವನ್ನು ಕೊಟ್ಟದ್ದನ್ನು ಅನುಕರಿಸಲು ತಾವೂಸಹ ತಮ್ಮ ಸಾರಥಿಗೆ ನಾಲ್ಕನೇ ಒಂದು ಭಾಗವನ್ನು ಕೊಡುತ್ತಾರೆ ಎಂಬುದಾಗಿ ಇಂದ್ರನಿಗೆ ವಾಯುವಿನೊಡನೆ ಪಾನವಿದ್ದರೂ ಸಹ ಒಂದು ಗೌಣವಾದ ಸ್ಥಾನವನ್ನು ಹೇಳಿದೆ.

**ಅಂಧಸಃ**—ಈ ಪದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯). **ಅಂಧ ಇತ್ಯನ್ನನಾಮಾಧ್ಯಾನೀಯಂ ಭವತಿ । ಅಧ್ಯಾನೀಯಂ ಪ್ರಾರ್ಥನೀಯಂ** । ಅತ್ಯಂತವಾದ ಆವಶ್ಯಕತೆಯಿರುವುದರಿಂದಲೂ, ಉತ್ಕಟವಾದ ಇಚ್ಛೆಯಿಂದ ಪ್ರಾರ್ಥಿತವಾಗುವುದರಿಂದಲೂ ಸಹ **ಅನ್ನಕ್ಕೆ ಅಂಧಃ** ಎಂಬ ಹೆಸರು ಎಂದು ವಿವರಿಸಿದೆ. ಈ ನಿರ್ವಚನದ ಸಮರ್ಥನೆಗೆ ನಿರುಕ್ತಕಾರರು (ನಿ. ೫-೧).

**ಅಧ್ವರ್ಯವೋ ಭರತೇಂದ್ರಾಯ ಸೋಮಮಾಮತ್ರೇಭಿಃ ಸಿಂಚತಾ ಮದ್ಯಮಂಧಃ ।**
**ಕಾಮೀ ಹಿ ವೀರಃ ಸದಮಸ್ಯ ಪೀತಿಂ ಜುಹೋತ ವೃಷ್ಣೇ ತದಿದೇಷ ವಷ್ಟಿ ॥**

(ಋ. ಸಂ. ೨-೧೪-೧)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಅಂಧಃ** ಶಬ್ದದ ಅರ್ಥವನ್ನು ಮೇಲ್ಕಂಡಂತೆ ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ **ಪ್ರಯಾಂಸಿ ವೀತಯೇ ; ಅಂಧಸಃ ಪಿಬತಂ** ಎಂಬ ಕ್ರಿಯಾಪದಗಳಿಂದ **ಪ್ರಯಾಂಸಿ** ಎಂಬುದಕ್ಕೆ ಪ್ರೀತಿಕಾರಕವಾದ ಯಾವ ವಿಧವಾದ ಅನ್ನವಾದರೂ ಆಗಬಹುದು. **ಅಂಧಸಃ** ಎಂಬುದಕ್ಕೆ ಸೋಮರಸರೂಪವಾದ ಅನ್ನವೆಂದೇ ಅರ್ಥವಾಗಬೇಕು. ಅದರಲ್ಲೂ **ಅಂಧಸ್** ಶಬ್ದವು ಇಂದ್ರೋದ್ದಿಷ್ಟವಾದ ಮಂತ್ರಗಳಲ್ಲಿ ಬಂದಾಗೆಲ್ಲಾ ಸೋಮರೂಪವಾದ ಅನ್ನವೆಂದೇ ಹೇಳಬಹುದು.

**ಇದಂ ವಸೋ ಸುತಮಂಧಃ ಪಿಬಾ ಸುಪೂರ್ಣಮುದರಂ । ಅನಾಭಯಿನ್ರರಿಮಾ ತೇ ॥**

(ಋ. ಸಂ. ೮-೨-೧)

ಇತ್ಯಾದಿಯಾಗಿ **ಅಂಧಃ ಪಿಬ** ಎಂಬ ಪ್ರಯೋಗಗಳೂ ವಿಶೇಷವಾಗಿಯೇ ರೂಢವಾಗಿದೆ. ಐತರೇಯಬ್ರಾಹ್ಮಣದಲ್ಲಿ **ಅಂಧಸ್** ಪದವನ್ನು ಪಯೋಗಿಸಿರುವ ಕಡೆಗಳಲ್ಲೆಲ್ಲಾ ಈ ಋಕ್ಕನ್ನೇ (೮-೨-೧) ಉದಹರಿಸಿ ಇಂದ್ರನಿಗೆ ಅರ್ಪಿತವಾಗುವ **ಅಂಧವು** ಸೋಮರಸವೇ ಆಗಿದೆ ಎಂಬುದನ್ನು ಸೂಚಿಸಿದೆ. ಆದರೆ,

**ಸ ಹಿ ದ್ವರೋ ದ್ವರಿಷು ವವ್ರ ಊಧನಿ ಚಂದ್ರಬುಧ್ನೋ ಮದವೃದ್ಧೋ ಮನೀಷಿಭಿಃ ।**
**ಇಂದ್ರಂ ತಮಹ್ವೇ ಸ್ವಪಸ್ಯಯಾ ಧಿಯಾ ಮಂಹಿಷ್ಠರಾತಿಂ ಸ ಹಿ ಪಪ್ರಿರಂಧಸಃ ॥**

(ಋ. ಸಂ. ೧-೫೨-೩)

ಎಂಬ ಋಕ್ಕಿನಲ್ಲಿ ಇಂದ್ರೋದ್ದಿಷ್ಟವಾದ ಋಕ್ಕಿನಲ್ಲಿ **ಅಂಧಸ್** ಶಬ್ದವು ಬಂದಿದ್ದರೂ ಸಹ ಇಲ್ಲಿ ಇಂದ್ರಪಾನಕ್ಕಾಗಿಯಲ್ಲದೆ, ಇಂದ್ರದತ್ತವಾಗಿ ಮಾನವಾದಿಗಳಿಂದ ಭೋಗಿಸಲ್ಪಡುವುದಾದುದರಿಂದ ಇಂತಹ ಸಂದರ್ಭಗಳಲ್ಲಿ ಸೋಮರಸವೆಂದಾಗುವುದಿಲ್ಲ. ಸಾಧಾರಣವಾಗಿ ಯಜ್ಞಕರ್ತರಾದ ಮಾನವರು ಉಪಯೋಗಿಸತಕ್ಕ ಅನ್ನವೆಂದರ್ಥ.

ನಿರುಕ್ತಕಾರರು ಈ ಪದದ ಇತರ ಅರ್ಥಗಳನ್ನೂ ವಿವರಿಸುತ್ತಾ, **ತಮೋಽಪ್ಯಂಧ ಉಚ್ಯತೇ ನಾಸ್ಮಿನ್ ಧ್ಯಾನಂ ಭವತಿ** (ನಿ. ೩-೯). ತಮಸ್ಸಿನಲ್ಲಿ ಏಕಾಗ್ರಚಿತ್ತನಾಗಿರಲು ಸಾಧ್ಯವಿಲ್ಲವಾದುದರಿಂದ ತಮಸ್ಸಿಗೂ ಅಂಧಸ್ಸೆಂಬ ಹೆಸರು ಎಂದು ವಿವರಿಸಿ,

**ಸ್ತ್ರಿಯಃ ಸತೀಸ್ತಾಁ ಉ ಮೇ ಪುಂಸ ಆಹುಃ ಪಶ್ಯದಕ್ಷಣ್ವಾನ್ನ ವಿ ಚೇತದಂಧಃ ।**
**ಕವಿರ್ಯಃ ಪುತ್ರಃ ಸ ಈಮಾ ಚಿಕೇತ ಯಸ್ತಾ ವಿಜಾನಾತ್ಸ ಪಿತುಷ್ಪಿತಾಸತ್ ॥**

(ಋ. ಸಂ. ೧-೧೬೪-೧೬)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಅಂಧಸ್ ಶಬ್ದಕ್ಕೆ ತಮಸ್ಸೆಂಬರ್ಥವನ್ನು ತೋರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸೋಮರಸರೂಪವಾದ ಅನ್ನವೆಂದೇ ಅರ್ಥ.

**ಪ್ರಯಾಂಸಿ—**ಪ್ರೀಣನಾರ್ಥಕವಾದ **ಪ್ರೀ** ಧಾತುವಿನಿಂದ ನಿಷ್ಪನ್ನವಾಗಿ ತೃಪ್ತಿದಾಯಕವಾದ ಅನ್ನವೆಂದ ರ್ಥವಾಗುತ್ತದೆ. ಪಯೋರೂಪವಾದ ಅನ್ನವಾಗಲಿ ಪುರೋಡಾಶಾದಿರೂಪವಾದ ಅನ್ನವಾಗಲಿ ಸೂಚಿತವಾಗುತ್ತದೆ.

**ಚಂದ್ರೇಣ—**ಈ ಪದವು ಹಿರಣ್ಯನಾಮಗಳಲ್ಲಿ ಪಠಿತವಾಗಿದೆ (ನಿ. ೨-೧೦). **ಚಂದ್ರಶ್ಚಂದತೇಃ ಕಾಂತಿ ಕರ್ಮಣಃ** (ನಿ. ೧೧-೫). ಆಹ್ಲಾದವನ್ನುಂಟುಮಾಡುವುದರಿಂದ ಹಿರಣ್ಯಕ್ಕೆ **ಚಂದ್ರ** ವೆಂಬ ಹೆಸರು. ಆಕರ್ಷಕ ವಾದ ಕಾಂತಿಯಿರುವ ವಸ್ತುಗಳಿಗೆ **ಚಂದ್ರ** ವೆಂಬ ಹೆಸರಿದೆಯೆಂದು ತೋರಿಸಲು ನಿರುಕ್ತಕಾರರು ಈ ಪದದ ಇತರ ಅರ್ಥಗಳನ್ನೂ ತೋರಿಸಿದ್ದಾರೆ

**ಚಂದ್ರಮಾಃ— ಚಂದ್ರಮಾಶ್ಚಾಯನ್ ದ್ರಮತಿ, ಚಂದ್ರೋ ಮಾತಾ, ಚಾಂದ್ರಮಾನಮಸ್ಯೇತಿ ವಾ** (ನಿ. ೧೧-೫). ವೀಕ್ಷಿಸುತ್ತಲೂ ವಿಹರಿಸುತ್ತಲೂ ಸಂಚರಿಸುವುದರಿಂದಾಗಲೀ, ಪ್ರಕಾಶಿಸುತ್ತಲೂ ಕಾಲಾದಿ ಗಳನ್ನು ಅಳೆಯುತ್ತಲೂ ಇರುವುದರಿಂದಾಗಲೀ, ಅಥವಾ ಅದರ ಮಾನವು ಪ್ರಕಾಶಮಾನವಾಗಿದೆಯೆಂಬುದರಿಂದಾಗಲಿ **ಚಂದ್ರನಿಗೆ** ಈ ಹೆಸರು ಪ್ರಸಿದ್ಧವಾಗಿದೆ. ಪ್ರಕಾಶಿಸು ಎಂಬರ್ಥವನ್ನು ಕೊಡುವ **ಚಂದ್** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ.

**ಚಂದನಮಿತ್ಯಪ್ಯಸ್ಯ ಭವತಿ—**ಚಂದನ (ಕಾಷ್ಠವನ್ನು ಸೂಚಿಸುವ ಪದವೂ ಸಹ ಈ ಧಾತುವಿನಿಂದಲೇ ನಿಷ್ಪನ್ನವಾಗಿದೆಯೆಂದು ತೋರಿಸಿ, ಇನ್ನೊಂದು ವಿಧವಾದ ನಿರ್ವಚನವನ್ನೂ ಹೇಳಿದೆ. ಆ ನಿರ್ವಚನದಪ್ರಕಾರ,

**ಚಾರು ದ್ರಮತಿ, ಚಿರಂ ದ್ರಮತಿ, ಚಮೇರ್ವಾ ಪೂರ್ವಂ;—**ಅತ್ಯಂತ ಮನೋಹರವಾಗಿ ಚಲಿಸುತ್ತದೆ ಅಥವಾ ದೀರ್ಘಕಾಲ ಚಲಿಸುತ್ತದೆ ಎಂದು ತಾತ್ಪರ್ಯವಾಗಬಹುದು. ಅಥವಾ ಪಾನಮಾಡು ಎಂಬರ್ಥವನ್ನು ಕೊಡುವ **ಚಮ್** ಧಾತುವಿನಿಂದಲೂ ನಿಷ್ಪನ್ನವಾಗಬಹುದು ಎಂದು ವಿವರಿಸಿ,

**ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಂ ।**
**ಭಾಗಂ ದೇವೇಭ್ಯೋ ವಿ ದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ॥**

(ಋ ಸಂ. ೧೦-೮೫-೧೯)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಚಂದ್ರಮಾಃ** ಎಂಬ ಶಬ್ದದಿಂದ ಚಂದ್ರನಿಂದ ಆಗತಕ್ಕ ಉಪಕಾರಗಳೆಲ್ಲವೂ ಸೂಚಿತ ವಾಗುತ್ತವೆಯೆಂದು ಹೇಳಿದ್ದಾರೆ. ದೇವತೆಗಳಿಗೆ ಭಾಗವಿಧಾಯಕನಾಗಿಯೂ ಮಾನವರಿಗೆ ದೀರ್ಘಾಯುವನ್ನು ಕೊಡ ತಕ್ಕವನಾಗಿಯೂ ಇರುವನೆಂದು ಹೇಳಿದೆ.

ಪ್ರಕೃತವಾದ ಋಕ್ಕಿನಲ್ಲಿ **ಹಿರಣ್ಯ**ಶಬ್ದಕ್ಕೂ **ಚಂದ್ರ**ವೆಂಬ ಪರ್ಯಾಯನಾಮವನ್ನು ಪಯೋಗಿಸಿರುವುದರಿಂದ ಚಂದ್ರನಿಂದ ಲೋಕಕ್ಕೆ ಯಾವ ಉಪಯೋಗವಾಗುವುದೋ ಹಿರಣ್ಯದಿಂದಲೂ ಅದೇ ಉಪಕಾರವಾಗುವುದೆಂದು. ಹಿರಣ್ಯವೂ ತನ್ನ ಕಾಂತಿಯನ್ನೇ ಬೀರಿ ಆನಂದವನ್ನುಂಟುಮಾಡುತ್ತದೆ. ಮಾನವರ ಮನಸ್ಸಿಗೆ ಯಾವಾಗಲೂ ಸಂತೋಷವನ್ನುಂಟುಮಾಡುತ್ತಾ ಆಯುರ್ವರ್ಧಕವಾಗಿದೆ. ಯಜ್ಞಕರ್ತರಾದ ಮಾನವರಿಗೆ ಸಂಪತ್ತಾಗಿರುವುದರಿಂದ ಯಜ್ಞಕ್ಕೆ ಅನುಕೂಲವಾಗಿ ದೇವತೆಗಳಿಗೂ ಸಾಹಾಯ್ಯಕವಾಗಿದೆ. **ಹಿರಣ್ಯಕ್ಕೆ** ಈ ಪದವು ಉಚಿತವಾದ ಪರ್ಯಾಯ ನಾಮವಾಗಿದೆ.

**ರಾಧಸಾ**—ಈ ಪದವು ದ್ವಿರುಕ್ತವಾಗಿದೆ. ಮೊದಲನೆಯ ಪದಕ್ಕೆ **ಗವಾದಿರೂಪೇಣ ಧನೇನ** ಎಂದೂ ಎರಡನೆಯ ಪದಕ್ಕೆ **ರತ್ನೇನ ಧನೇನ** ಎಂದೂ ಅರ್ಥಮಾಡಿದೆ. **ರಾಧ ಇತಿ ಧನನಾಮ ರಾಧ್ನುವಂತ್ಯನೇನ.** (ನಿ. ೪.೪). ಇದಿರುವುದರಿಂದ ಮರ್ಯಾದೆಯನ್ನು ಸಂಪಾದಿಸುತ್ತಾರೆ ಎಂಬುದರಿಂದಾಗಲಿ ಅಥವಾ ಇದರ ಸಹಾಯ ದಿಂದ ಸಮಾಧಾನವನ್ನು ಮಾಡಿಕೊಂಡು ಪರಸ್ಪರವಾಗಿ ಹೊಂದಿಕೊಳ್ಳುತ್ತಾರೆ ಎಂದಾಗುವುದರಿಂದಲೂ **ಧನಕ್ಕೆ ರಾಧಃ** ಎಂಬ ಹೆಸರು ಪ್ರಸಿದ್ಧವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಕ್ಷತ್**—ವಹ ಪ್ರಾಪಣೇ. ಧಾತು. ಲೇಟ್ ಪ್ರಥಮಪುರುಷ' ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. **ಹೋಢಃ** ಸೂತ್ರದಿಂದ ಹಕಾರಕ್ಕೆ ಢತ್ವ. **ಷಢೋಃ ಕಃಸಿ** ಎಂಬುದರಿಂದ ಅದಕ್ಕೆ ಕತ್ವ. ಅದನ್ನು ನಿಮಿತ್ತೀಕರಿಸಿ ಸಕಾರಕೆ ಷತ್ವ. ತಿಙಂತನಿಘಾತಸ್ವರ ಬರುತ್ತದೆ.

**ಸುಧಿತಾನಿ**—ಡುಧಾಞ್ ಧಾರಣಪೋಷಣಯೋಃ ಧಾತು ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಇದು ಪರವಾದಾಗ ಧಾತುವಿಗೆ ಹಿತ್ವ ಬಂದಾಗ ವ್ಯತ್ಯಯದಿಂದ ಅದಕ್ಕೆ ಧಕಾರಾದೇಶ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ವೀತಯೇ**—ಪೂರ್ವ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಪಿಬತಂ**—ಪಾ ಪಾನೇ. ಲೋಟ್ ಮಧ್ಯಮಪುರುಷ ದ್ವಿವಚನಕ್ಕೆ ಲಙ್ವದ್ಭಾವವಿರುವುದರಿಂದ ತಮಾದೇಶ. ಶಪ್ ಪರವಾದಾಗ **ಪಾಘ್ರಾಧ್ಮಾಸ್ಥಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಪಿಬಾದೇಶ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು ಅದುಪದೇಶದ ಪರದಲ್ಲಿರುವುದರಿಂದ ಅನುದಾತ್ತ ವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮಧ್ವಃ**—**ಜಸಾದಿಷು ಛಂದಸಿ ವಾವಚನಂ** ಎಂಬ ವಚನದಿಂದ ಷಷ್ಠೀ ಏಕವಚನ ಪರವಾದಾಗ ಗುಣಾದಿಗಳು ಬಾರದಿರುವುದರಿಂದ ಯಣಾದೇಶ. ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ

**ಪೂರ್ವಪೇಯಂ**—ಪಾ ಪಾನೇ. ಧಾತು. **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಈದ್ಯತಿ** (ಪಾ. ಸೂ. ೬-೪-೬೫) ಎಂಬುದರಿಂದ ಧಾತುವಿಗೆ ಈಕಾರಾಂತದೇಶ ಪ್ರತ್ಯಯ

ನಿಮಿತ್ತವಾಗಿ ಅದಕ್ಕೆ ಗುಣ. **ಯತೋನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ **ಗತಿಕಾರಕೋಪಪ**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ರಾಧಸಾ**—ರಾಧ ಸಂಸಿದ್ಧೌ. ಧಾತು. ಅಸುನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಗತಂ**—ಗಮ್ಲೃ ಗತೌ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಅನುದಾತ್ತೋಪದೇಶ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಮಕಾರಕ್ಕೆ ಲೋಪ. ತಿಙಂತ ನಿಘಾತಸ್ವರ ಬರುತ್ತದೆ. ಅಥವಾ ಛಾಂದಸವಾಗಿ ಲುಙ್ ಮಧ್ಯಮಪುರುಷ ದ್ವಿವಚನ ಪರವಾದಾಗ ಚ್ಲಿ ಬಂದಾಗ **ಮಂತ್ರೇಘಸಹ್ವ**—(ಪಾ. ಸೂ ೨-೪-೮೦) ಎಂಬುದರಿಂದ ಅದಕ್ಕೆ ಲುಕ್. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಹಿಂದಿನಂತೇ ನಿಘಾತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಆ ವಾಂ ಧಿಯೋ ವವೃತ್ಯುರಧ್ವರಾँ ಉಪೇಮಮಿಂದುಂ ಮರ್ಮೃಜಂತ
ವಾಜಿನಮಾಶುಮತ್ಯಂ ನ ವಾಜಿನಂ ।
ತೇಷಾಂ ಪಿಬತಮಸ್ಮಯೂ ಆ ನೋ ಗಂತಮಿಹೋತ್ಯಾ ।
ಇಂದ್ರವಾಯೂ ಸುತಾನಾಮದ್ರಿಭಿರ್ಯುವಂ ಮದಾಯ ವಾಜದಾ
ಯುವಂ ॥ ೫ ॥

॥ ಪದಪಾಠಃ ॥

ಆ । ವಾಂ । ಧಿಯಃ । ವವೃತ್ಯುಃ । ಅಧ್ವರಾನ್ । ಉಪ । ಇಮಂ । ಇಂದುಂ । ಮರ್ಮೃಜಂತ ।
ವಾಜಿನಂ । ಆಶುಂ । ಅತ್ಯಂ । ನ । ವಾಜಿನಂ ।
ತೇಷಾಂ । ಪಿಬತಂ । ಅಸ್ಮಯೂ ಇತ್ಯಸ್ಮಽಯೂ । ಆ । ನಃ । ಗಂತಂ । ಇಹ । ಊತ್ಯಾ ।
ಇಂದ್ರವಾಯೂ ಇತಿ । ಸುತಾನಾಂ । ಅದ್ರಿಽಭಿಃ । ಯುವಂ । ಮದಾಯ । ವಾಜಽದಾ । ಯುವಂ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರವಾಯೂ ವಾಂ ಯುವಾಂ ಧಿಯಃ ಕರ್ಮಾಣಿ ಸ್ತೋತ್ರಾದಿಲಕ್ಷಣಾನ್ಯಧ್ವರಾನುಪಾಸ್ಮದೀಯಾನ್ಯಜ್ಞಾನ್ ಲಕ್ಷ್ಮೀಕೃತ್ಯ ವವೃತ್ಯುಃ। ಅತಿಶಯೇನ ವರ್ತಯಂತಿ ಪ್ರವರ್ತಯಂತಿ। ಕಿಂಚ ಯುಷ್ಮದರ್ಥಂ ವಾಜಿನಂ ಗ್ರಹಣಾಯ ದ್ರೋಣಕಲಶಾದ್ಗ್ರಹಾನ್ಪ್ರತಿ ಗಮನವಂತಮಾಮಿಕ್ಷಾವಂತಂ ವೇಮಮಿಂದುಂ ಪುರತೋ ವರ್ತಮಾನಂ ಸೋಮಂ ಮರ್ಮೃಜಂತ। ಅಧ್ವರ್ಯವೋ ದಶಾಪವಿತ್ರೇಣ ಸಂಮಾರ್ಜಯಂತಿ। ಮಾರ್ಜನೇ ದೃಷ್ಟಾಂತಃ। ಆಶುಮತಿಶೀಘ್ರಗಾಮಿನಮತ್ಯಂ ನ ಸತತಂ ಗಂತಾರಂ ವಾಜಿನಂ ವೇಜನವಂತಮಶ್ವಮಿವ। ತಂ ಯಥಾ ಸ್ವೇದಾದ್ಯಪನಯನೇನ ಸಂಮಾರ್ಜಯಂತಿ ತದ್ವತ್। ಕಿಂಚ ಹೇ ಇಂದ್ರವಾಯೂ ತೇಷಾಮಧ್ವರ್ಯೂಣಾಂ ಸಂಬಂಧಿನಃ ಶೋಧಿತಾನ್ ಸೋಮಾನ್ಪಿಬತಂ। ಪಾನಂ ಕುರುತಂ। ತದರ್ಥಂ ನೋಽಸ್ಮಾಕಂ ಯಜ್ಞಂ ಪ್ರತೀಹೇದಾನೀಮೂತ್ಯಾಸ್ಮದ್ರಕ್ಷಣೇನ ಸಹಾ ಗಂತಂ। ಆಗಚ್ಛತಂ। ಕಿಂಚ ಹೇ ಇಂದ್ರವಾಯೂ ಅಸ್ಮಯೂ ಅಸ್ಮದ್ಯಜ್ಞಮಿಚ್ಛಂತೌ ಯುವಂ ಯುವಾಮದ್ರಿಭಿರ್ಗ್ರಾವಭಿಃ ಸುತಾನಾಮಭಿಷುತಾನಾಂ ॥ ಪೂರ್ವವತ್ಕರ್ಮಣಿ ಷಷ್ಠೀ ॥ ತಾನ್ಪಿಬತಮಿತಿ ಶೇಷಃ। ಕಿಮರ್ಥಂ। ಮದಾಯ ತೃಪ್ತಯೇ ಮೋದಾಯ ವಾ। ಯತೋ ಯುವಂ ಯುವಾಂ ವಾಜದಾ ವಾಜಸ್ಯಾನ್ನಸ್ಯ ದಾತಾರೌ। ಅತಃ ಪಿಬತಮಿತ್ಯನ್ವಯಃ ॥**

॥ ಪ್ರತಿಪದಾರ್ಥ ॥

(**ಹೇ ಇಂದ್ರ ವಾಯೂ**—ಎಲೈ ಇಂದ್ರ ಮತ್ತು ವಾಯುಗಳೇ) । **ವಾಂ**—ನಿಮ್ಮಿಬ್ಬರ । **ಧಿಯಃ**—ಸ್ತುತಿ ರೂಪಕರ್ಮಗಳು । **ಅಧ್ವರಾನ್ ಉಪ**—(ನಮ್ಮ) ಯಜ್ಞಗಳನ್ನು ಉದ್ದೇಶಿಸಿ । **ಆ ವವೃತ್ಯುಃ**—ಹೆಚ್ಚಾಗಿ ಪ್ರವರ್ತಿಸುತ್ತವೆ (ಮತ್ತು) । **ವಾಜಿನಂ**—(ನಿಮಗೋಸ್ಕರ ದ್ರೋಣಕಲಶದಿಂದ ಗ್ರಹಗಳನ್ನುದ್ದೇಶಿಸಿ) ಹೋಗುವ **ಇಮಂ ಇಂದುಂ**—ಈ ಸೋಮರಸವನ್ನು । **ಆಶುಂ** – ಶೀಘ್ರಗಾಮಿಯಾದ ಮತ್ತು । **ಅತ್ಯಂ**—ಸತತಗಮನಶೀಲ ವಾದ । **ವಾಜಿನಂ ನ**—ಅಶ್ವವನ್ನು ಹೇಗೆ ನೀರಿನಿಂದ ತೊಳೆಯುತ್ತಾರೋ ಹಾಗೆ। **ಮರ್ಮೃಜಂತ**—(ಅಧ್ವರ್ಯುಗಳು ದಶಾಪವಿತ್ರದಿಂದ) ಸಂಮಾರ್ಜನೆ ಮಾಡಿದಾರೆ । (**ಕಿಂಚ**—ಮತ್ತೂ) **ಹೇ ಇಂದ್ರ ವಾಯೂ**—ಎಲೈ ಇಂದ್ರ ವಾಯುಗಳೇ । **ತೇಷಾಂ** ಆ ಅಧ್ವರ್ಯುಗಳ ಸಂಬಂಧವಾದ (ಸೋಮರಸವನ್ನು) । **ಪಿಬತಂ**— ಪಾನಮಾಡಿ (**ತದರ್ಥಂ**—ಅದಕ್ಕೋಸ್ಕರ) । **ನಃ**— ನಮ್ಮ । **ಊತ್ಯಾ**—ರಕ್ಷಣ (ಸಹಿತರಾಗಿ) । **ಇಹ**—ಇಲ್ಲಿಗೆ । **ಆ ಗಂತಂ**—ಬನ್ನಿ । **ಯುವಂ**— ನೀವಿಬ್ಬರೂ । **ವಾಜದಾ**—ಅನ್ನದಾತೃಗಳು । (**ಅತಃ**—ಆದುದರಿಂದ) । **ಅಸ್ಮಯೂ**—ನಮ್ಮ ಯಾಗಾಭಿಲಾಷಿಗಳಾದ। **ಯುವಂ**—ನೀವಿಬ್ಬರೂ । **ಅದ್ರಿಭಿಃ**—ಶಿಲೆಗಳಿಂದ। **ಸುತಾನಾಂ**—ಅಭಿಷುತವಾದ ಸೋಮರಸವನ್ನು । **ಮದಾಯ**—ತೃಪ್ತ್ಯರ್ಥವಾಗಿ (ಸಂತೋಷಾರ್ಥವಾಗಿ) । (**ಪಿಬತಂ**— ಪಾನಮಾಡಿ)

॥ ಭಾವಾರ್ಥ ॥

ಎಲೈ ಇಂದ್ರವಾಯುಗಳೇ, ನಿಮ್ಮ ಸಂಬಂಧವಾದ (ಸ್ತುತಿರೂಪ) ಕರ್ಮಗಳು ನಮ್ಮ ಯಜ್ಞವನ್ನು ಉದ್ದೇಶಿಸಿ ಅತಿಶಯವಾಗಿ ಪ್ರವರ್ತಿಸಿವೆ (ಅತಿಶಯ ಪ್ರಭಾವವನ್ನುಂಟುಮಾಡಿವೆ) ; ಸತತಗಮನಶೀಲವೂ, ವೇಗಗಾಮಿಯೂ ಆದ ಅಶ್ವವನ್ನು ಹೇಗೆ ಸ್ವೇದಾದ್ಯಪನಯನಾರ್ಥವಾಗಿ ಸಮ್ಮಾರ್ಜನೆ ಮಾಡುತ್ತಾರೋ ಹಾಗೆ (ಅಧ್ವರ್ಯುಗಳು) ನಿಮಗೋಸ್ಕರ (ದ್ರೋಣಕಲಶದಿಂದ ಗ್ರಹಗಳನ್ನುದ್ದೇಶಿಸಿ) ಪ್ರವಹಿಸುತ್ತಿರುವ ಈ ಸೋಮರಸವನ್ನು

ಸಂಮಾರ್ಜಿಸಿದಾರೆ: ಅದರಿಂದ (ಸಿದ್ಧಪಡಿಸಲ್ಪಟ್ಟ ಸೋಮರಸವನ್ನು) ಪಾನಮಾಡಿ; ನಮ್ಮ ರಕ್ಷಣಾರ್ಥವಾಗಿ (ನಮ್ಮ) ಯಾಗಶಾಲೆಗೆ ಬನ್ನಿ; (ಮತ್ತು) ಎಲೈ ಇಂದ್ರ ವಾಯುಗಳೇ, ನೀವು (ನಮಗೆ) ಅನ್ನದಾತೃಗಳು; (ಆದುದರಿಂದ ನಮ್ಮ ಯಾಗಾಭಿಲಾಷಿಗಳಾಗಿ, ಶಿಲೆಗಳಿಂದ ಅಭಿಷುತವಾದ ಸೋಮರಸವನ್ನು ನಿಮ್ಮ ತೃಪ್ತಿ (ಸಂತೋಷ) ಗೋಸ್ಕರ ಪಾನಮಾಡಿ.

## English Translation.

The pious acts (addressed) to you have given augmented (efficacy) to our sacrifices: for you, (the priests) strain this quick-dropping juice, as (the grooms rob down) a fleet, quick-running courser: drink of their (libations), and come hither, well disposed towards us, for our protection: do you both drink of the juices that have been expressed by the stones, for you are both givers of food.

### ॥ ವಿಶೇಷವಿಷಯಗಳು ॥

ಸೋಮರಸವನ್ನು ಅರ್ಪಿಸುವ ಕಾಲದಲ್ಲಿ ಅದನ್ನು ಹಿಂಡಿರುವ ಕ್ರಮವನ್ನೂ, ಅದನ್ನು ಶುದ್ಧಿಮಾಡಿರುವ ಕ್ರಮವನ್ನೂ ವಿವರಿಸಿ ಅದು ಅರ್ಪಣೆಗೆ ಯೋಗ್ಯವಾಗಿದೆಯೆಂದೂ, **ಇಂದ್ರಾವಾಯುಗಳು** ಅದನ್ನು ಸ್ವೀಕರಿಸಬೇಕೆಂದೂ ಈ ಋಕ್ಕಿನಲ್ಲಿ ಪ್ರಾರ್ಥಿಸಿದೆ.

**ಅದ್ರಿಭಿಃ ಸುತಾನಾಂ; ಮರ್ಮೃಜಂತ** ಇತ್ಯಾದಿ ಪದಗಳಿಂದ ಸೋಮರಸವನ್ನು ಹಿಂಡುವುದು ಮತ್ತು ಶುದ್ಧಿಮಾಡಿರುವುದನ್ನು ಪ್ರಕಟಿಸಿದೆ. ಎಂದರೆ ಶಾಸ್ತ್ರೋಕ್ತವಾಗಿ ಅದು ಸಂಪಾದಿಸಲ್ಪಟ್ಟಿದೆಯೆಂದು ತಾತ್ಪರ್ಯ. ಸಾಯಣರೂ ಸಹ ಈ ಅಂಶವನ್ನು ವಿವರಿಸುತ್ತಾ **ಅಧ್ವರ್ಯವಃ ದಶಾಪವಿತ್ರೇಣ ಸಂಮಾರ್ಜಯಂತಿ** ಅಧ್ವರ್ಯುಗಳು ದಶಾಪವಿತ್ರಾದಿಗಳಿಂದ ಇದನ್ನು ಶುದ್ಧಿಮಾಡಿದ್ದಾರೆಂದು ಅದರ ಕ್ರಮವನ್ನು ತಿಳಿಸಿದ್ದಾರೆ. ಸೋಮರಸವನ್ನು ಹಿಂಡುವಾಗ ಉಪಯೋಗಿಸತಕ್ಕ ಸಾಧನಗಳನ್ನೂ, ಹಿಂಡುವ ಮತ್ತು ಶುದ್ಧಿಮಾಡುವ ಕ್ರಮವನ್ನೂ ಐತರೇಯ ಬ್ರಾಹ್ಮಣದಲ್ಲಿ ಈ ರೀತಿಯಲ್ಲಿ ವರ್ಣಿಸಿದೆ.

> **ಏತಾನ್ಯಸ್ಯ ಪುರಸ್ತಾದುಪಕ್ಲೃಪ್ತಾನಿ ಭವಂತ್ಯಥ ಸೋಮಂ ರಾಜಾನಂ ಕ್ರೀಣಂತಿ ತೇ ರಾಜ್ಞ ಏವಾವೃತೌಪವಸಥಾತ್ಪ್ರತಿವೇಶೈಶ್ಚರಂತ್ಯಥೌಪವಸಥ್ಯಮಹರೇತಾನ್ಯಧ್ವರ್ಯುಃ ಪುರಸ್ತಾದುಪಕಲ್ಪಯೇತಾಧಿಷವಣಂ ಚರ್ಮಾಧಿಷವಣೇ ಫಲಕೇ ದ್ರೋಣಕಲಶಂ ದಶಾಪವಿತ್ರಮದ್ರೀನ್ ಪೂತಭೃತಂ ಚಾಧವನೀಯಂ ಚ ಸ್ಥಾಲೀಮುದಂಚನಂ ಚಮಸಂ ಚ ತದ್ಯದೇತದ್ರಾಜಾನಂ ಪ್ರಾತರಭಿಷುಣ್ವಂತಿ ತದೇನಾನಿ ದ್ವೇಧಾ ವಿಗೃಹ್ಣೀಯಾದಭ್ಯನ್ಯಾನಿ ಸುನುಯಾನ್ಮಾಧ್ಯಂದಿನಾಯಾನ್ಯಾನಿ ಪರಿಶಿಂಷ್ಯಾತ್ ।**
>
> (ಐ. ಬ್ರಾ. ೭-೩೨).

ಸಾಕ್ಷಾತ್ತಾಗಿ ಕರ್ಮವು ಆರಂಭವಾಗುವ ಮೊದಲನೆಯ ದಿನವೇ **ಅಧ್ವರ್ಯುವು** ರಸವನ್ನು ಹಿಂಡುವುದಕ್ಕೆ ಬೇಕಾದ ಸಾಧನಗಳನ್ನೆಲ್ಲಾ ಸಿದ್ಧವಾಗಿಟ್ಟುಕೊಂಡಿದ್ದು ರಸಪೇಷಣಕ್ಕೆ ಆರಂಭಿಸಬೇಕು. ಅಜಚರ್ಮ, ದ್ರೋಣಕಲಶ,

ದಶಾಪವಿತ್ರ, ಪೂತಭೃತ್, ಆಧವನೀಯ, ಸ್ಥಾಲೀ, ಚಮಸ ಇತ್ಯಾದಿಗಳೇ ಅಲ್ಲಿಗೆ ಬೇಕಾದ ಉಪಕರಣಗಳು. ಈ ಉಪಕರಣಗಳಿಂದ ರಸವನ್ನು ಪಡೆಯುವ ಕ್ರಮವು ಈ ರೀತಿಯಿದೆ. (ಅಥವಾ ಕ್ರಮಭೇದಗಳಲ್ಲಿ ಇಮೊಂದಿರಬಹದು).

ಅಧ್ವರ್ಯುವು ಚರ್ಮವನ್ನು ಹರಡಿ ಅದರಮೇಲೆ **ಅಂಶು** (ವಲ್ಲೀ) ರೂಪವಾದ ಸೋಮಲತೆಯನ್ನು ಇಡುತ್ತಾನೆ. ಮೊದಲು ಅದರ ಮೇಲೆ ಅಧಿಷವಣಫಲಕವನ್ನು (ಹಲಗೆ ಅಥವಾ ಕಲ್ಲು) ಇಟ್ಟು ಗ್ರಾವದಿಂದ ಕುಟ್ಟುತ್ತಾನೆ. ಅನಂತರ ಜಜ್ಜಲ್ಪಟ್ಟ ಆ ಸೋಮಲತೆಗಳನ್ನು ಫಲಕದ ಅಡಿಯಿಂದ ತೆಗೆದು ಒಟ್ಟಿಗೆ ಕಟ್ಟುತ್ತಾನೆ. ಆಗ ಇನ್ನೊಂದು ಫಲಕವನ್ನೂ ಅದರ ಮೇಲಿಟ್ಟು ಹಿಂದಿನ ದಿನ ಶೇಖರಿತವಾದ ವಸತೀವರೀ ಪಾತ್ರೆಯಿಂದ ಈ ಫಲಕದ ಮೇಲೆ ನೀರನ್ನು ಸುರಿಸಿ ಬಲಗಡೆ ಇರತಕ್ಕ ಹೋತೃವಿನ ಚಮಸಪಾತ್ರೆಯಲ್ಲಿ ಈ ಜಜ್ಜಿದ್ದೂ, ವಸತೀವರಿಯಿಂದ ನೆನೆದದ್ದೂ ಆದ ಸೋಮಲತೆಯನ್ನು ಮೂರುಸಲ ಕಲಕಿಸುತ್ತಾನೆ. ಈ **ನಿಗ್ರಾಭ** ಕ್ರಮುವಾದನಂತರ ವಸತೀ.ವರೀ ಪಾತ್ರೆಯಲ್ಲಿ ಅದ್ದಿ ಅದನ್ನು ನೀರಿನಿಂದ ತೋಯಿಸುತ್ತಾನೆ. ಅನಂತರ ಗ್ರಾವದ ಮೇಲಿಟ್ಟು, ಅವುಗಳ ಮೇಲೆ ಕೊಂಚ ತೃಣವನ್ನೂ ಹರಡಿ ರಸವನ್ನು ಹಿಂಡಲು ಇನ್ನೊಂದು ಗ್ರಾವದಿಂದ ಕುಟ್ಟುತ್ತಾನೆ. ಈ ವಿಧವಾಗಿ ಕುಟ್ಟುವುದಕ್ಕೆ **ಅಭಿಷವಣ**ವೆಂದು ಹೆಸರು. ಈ ಅಭಿಷವದ ಕ್ರಮದಲ್ಲಿ ಮೂರು ಪರ್ಯಾಯಗಳಿವೆ. ಮೊದಲನೆಯದಾಗಿ ಮೇಲೆ ವಿವರಿಸಿದಂತೆ ಅಧ್ವರ್ಯುವು ಎಂಟುಸಲ ಕುಟ್ಟಿ **ನಿಗ್ರಾಭ** ಕ್ರಮವನ್ನು ನೆರವೇರಿಸಿ, ಎರಡನೆಯ ಪರ್ಯಾಯದಲ್ಲಿ ಹನ್ನೊಂದು ಸಲವೂ ಮೂರನೆಯ ಸಲ ಹನ್ನೆರಡು ಸಲವೂ ಕುಟ್ಟುತ್ತಾನೆ. ಪೂರ್ವಭಾವಿಯಾದ ಈ **ಅಭಿಷವ** ಕ್ರಮವು ನೆರವೇರಿದನಂತರ ಮೇಲೆ ಹೇಳಿದ ಕ್ರಮದಲ್ಲಿಯೇ (ಆಯಾ ಸವನಕ್ಕೆ ಮಾತ್ರ ಬೇಕಾದಂತೆ) **ಮಹಾಭಿಷವ**ವನ್ನೂ ಸಹ ನಿರ್ವಹಿಸಿ ಹಿಂಡಿದ ರಸವನ್ನು **ಆಧವನೀಯ** ಪಾತ್ರೆಯಲ್ಲಿ ಸುರಿಯುತ್ತಾನೆ. ಅನಂತರ **ದಶಾಪವಿತ್ರ**ವೆಂಬ ಬಟ್ಟೆಯಿಂದ ಅದನ್ನು ಶೋಧಿಸಿ ಅದರ ಅಡಿಯಲ್ಲಿರುವ **ಪೂತಭೃತ್ತೆಂ**ಬ ಪಾತ್ರೆಗೆ ಸೇರಿಸುತ್ತಾನೆ. ಈ ಕಾಲದಲ್ಲಿ ಈ **ದಶಾಪವಿತ್ರ**ವೆಂಬ ಬಟ್ಟೆಯನ್ನು **ಉದ್ಗಾತೃವು** ಹಿಡಿದಿರಬೇಕು.

ಪ್ರಕೃತವಾದ ಋಕ್ಕಿನಲ್ಲಿ **ಮರ್ಮೃಜಂತೆ** ಎಂಬ ಪದಕ್ಕೆ **ಅಧ್ವರ್ಯವೋ ದಶಾಪವಿತ್ರೇಣ ಸಂಮಾರ್ಜಯಂತಿ ।** ಅಧ್ವರ್ಯುಗಳು ದಶಾಪವಿತ್ರದಿಂದ ಶೋಧಿಸುತ್ತಾರೆ ಎಂದು ಮೇಲೆ ವಿವರಿಸಿದ ಅಂಶವನ್ನು ತಿಳಿಸಿದ್ದಾರೆ. ಇಲ್ಲಿ **ಅದ್ರಿಭಿಃ ಸುತಾನಾಂ** ಎಂದು ಹೇಳಿರುವ ಅಂಶವನ್ನು ತೈತ್ತಿರೀಯಸಂಹಿತೆಯಲ್ಲಿ ಈ ರೀತಿಯಾಗಿ ವರ್ಣಿಸಿದೆ. (ತೈ. ಸಂ. ೧-೪-೧).

**ಆ ದದೇ ಗ್ರಾವಾಸ್ಯಧ್ವರಕೃದ್ದೇವೇಭ್ಯೋ ಗಂಭೀರಮಿಮಮಧ್ವರಂ ಕೃಧ್ಯುತ್ತಮೇನ ಪವಿನೇಂದ್ರಾಯ ಸೋಮಗ್ಂ ಸುಷುತಂ ಮಧುಮಂತಂ ಪಯಸ್ವಂತಂ ವೃಷ್ಟಿವನಿಂ ।**

ದೇವತೆಗಳಿಗೆ ಯಜ್ಞವನ್ನು ನಿರ್ವಹಿಸಲು ಸಾಧನವಾದ ಎಲೈ ಅಭಿಷವಗ್ರಾವವೇ (ಉಪಾಂಶುಗ್ರಹ ಅಥವಾ ಉಪಾಂಶುಸವನ), ನಾನು ಸೋಮರಸವನ್ನು ಹಿಂಡುವುದಕ್ಕಾಗಿ ನಿನ್ನನ್ನು ಹಿಡಿದಿದ್ದೇನೆ. ನಿನ್ನ ಚೂಪಾದ ಮೊನೆಯಿಂದ ಮಾಧುರ್ಯಭರಿತವಾದುದೂ, ರಸಭರಿತವಾದುದೂ, ವೃಷ್ಟಿಸಾಧಕವಾದುದೂ ಆದ ಸೋಮವನ್ನು **ಇಂದ್ರ**ನಿಗಾಗಿ ಹಿಂಡಿ ಯಜ್ಞವನ್ನು ಗಭೀರವಾದುದನ್ನಾಗಿ ಮಾಡು. [ಈ ಮಂತ್ರದಿಂದ ಗ್ರಾವವನ್ನು ಹಿಡಿಯಬೇಕು].

**ಇಂದ್ರಾಯ ತ್ವಾ ವೃತ್ರಘ್ನ ಇಂದ್ರಾಯ ತ್ವಾ ವೃತ್ರತುರ ಇಂದ್ರಾಯ ತ್ವಾಽಭಿಮಾತಿಘ್ನ ಇಂದ್ರಾಯ ತ್ವಾಽದಿತ್ಯವತ ಇಂದ್ರಾಯ ತ್ವಾ ವಿಶ್ವದೇವ್ಯಾವತೇ ॥**

ವೃತ್ರಘ್ನನಾದ ಇಂದ್ರನೇ, ಇದು ನಿನಗೆ ಅರ್ಪಿತವಾಗುತ್ತದೆ; ವೃತ್ರನನ್ನು ಜಯಿಸಿದ ಇಂದ್ರನೇ, ಇದು ನಿನಗೆ; ಶತ್ರುಘ್ನನಾದ ಇಂದ್ರನೇ, ಇದು ನಿನಗೆ; ಆದಿತ್ಯರೊಡಗೂಡಿದ ಇಂದ್ರನೇ, ಇದು ನಿನಗೆ; ವಿಶ್ವದೇವತೆಗಳೊಡಗೂಡಿದ ಇಂದ್ರನೆ, ।ಇದು ನಿನಗೆ [ಈ ಮಂತ್ರದಿಂದ ಮೊದಲನೆಯ ಆಹುತಿಗಾಗಿ ಐದು ಪ್ರತ್ಯೇಕವಾದ ಅರ್ಪಣೆಯನ್ನು ಸೂಚಿಸಿ ಅಳತೆಯನ್ನು ಮಾಡಬೇಕು] —

**ಶ್ವಾತ್ರಾಃ ಸ್ಥ ವೃತ್ರತುರೋ ರಾಧೋಗೂರ್ತಾ ಅಮೃತಸ್ಯ ಪತ್ನೀಸ್ತಾ ದೇವೀರ್ದೇವತ್ರೇಮಂ ಯಜ್ಞಂ ಧತ್ತೋಪಹೂತಾಃ ಸೋಮಸ್ಯ ಪಿಬತೋಪಹೂತೋ ಯುಷ್ಮಾಕಂ ಸೋಮಃ ಪಿಬತು ॥**

ರಸಭರಿತರೂ, ವೃತ್ರನನ್ನು ಜಯಿಸಿದವರೂ, ಅಮೃತಪತ್ನಿಯರೂ ಆದ ಎಲೈ ಅಬ್ದೇವಿಯರೇ, ನಿಮ್ಮ ದಾನಾದಿಗಳಿಂದ ಹರ್ಷಕಾರಕಿಯರಾಗಿ, ಈ ನಮ್ಮ ಯಜ್ಞವನ್ನು ದೇವತೆಗಳ ನಡುವೆ ಸ್ಥಾಪಿಸಿರಿ. ನೀವು ನಮ್ಮಿಂದ ಆಹೂತರಾಗಿ ಸೋಮರಸವನ್ನು ಪಾನಮಾಡಿರಿ. ನಿಮ್ಮಿಂದ ಆಹೂತನಾದ **ಸೋಮ**ನೂ ಪಾನಮಾಡಲಿ. [ಈ ಮಂತ್ರದಿಂದ ಸೋಮಲತೆಯ ಮೇಲೆ ನೀರನ್ನು ಪ್ರೋಕ್ಷಿಸಬೇಕು].

**ಯತ್ತೇ ಸೋಮ ದಿವಿ ಜ್ಯೋತಿರ್ಯತ್ಪೃಥಿವ್ಯಾಂ ಯದುರಾವಂತರಿಕ್ಷೇ ತೇನಾಸ್ಮೈ ಯಜಮಾನಾಯೋರು ರಾಯಾ ಕೃಧ್ಯಧಿ ದಾತ್ರೇ ವೋಚಃ ।**

ಎಲೈ ಸೋಮನೇ, ದ್ಯುಲೋಕದಲ್ಲಿಯೂ, ಪೃಥ್ವಿಯ ಮೇಲೆಯೂ, ವಿಸ್ತೃತವಾದ ಅಂತರಿಕ್ಷದಲ್ಲಿಯೂ ಹರಡಿರತಕ್ಕ ನಿನ್ನ ತೇಜಸ್ಸಿನಿಂದ, ಈ ಯಜ್ಞಕರ್ತನಿಗೆ ಪ್ರಭೂತವಾಗಿ ಧನವನ್ನು ಒದಗಿಸು; ಹವಿರ್ದಾತನಿಗೆ ಅನುಗ್ರಹವನ್ನು ತೋರಿಸು. [ಈ ಮಂತ್ರದಿಂದ ಸೋಮದೊಂದಿಗೆ ಉದಕವನ್ನು ಮಿಶ್ರಮಾಡಬೇಕು].

**ಧಿಷಣೇ ವೀಡೂ ಸತೀ ವೀಡಯೇಥಾಮೂರ್ಜಂ ದಧಾಥಾಮೂರ್ಜಂ ಮೇ ಧತ್ತಂ ಮಾ ವಾಗ್ಂ ಹಿಗ್ಂ ಸಿಷಂ ಮಾ ಮಾ ಹಿಗ್ಂ ಸಿಷ್ಟಂ.**

ಬಲಶಾಲಿಗಳಾದ ಧಿಷಣಗಳೇ, ನಿಮ್ಮ ಶಕ್ತಿಯು ವೃದ್ಧಿಯಾಗಲಿ· ಶಕ್ತಿಯನ್ನು ಸಂಗ್ರಹಿಸಿ ನನಗೂ ಶಕ್ತಿಯನ್ನು ಕೊಡಿ. ನಾನು ನಿಮ್ಮನ್ನು ಹಿಂಸಿಸುವುದಿಲ್ಲ. ನೀವು ನನ್ನನ್ನು ಹಿಂಸಿಸಬೇಡಿ. [ಈ ಮಂತ್ರದಿಂದ ಅಭಿಷವ ಫಲಕಗಳನ್ನು ಮುಟ್ಟಬೇಕು].

**ಪ್ರಾಗಪಾಗುದಗಧರಾಕ್ಸರ್ವತಸ್ತ್ವಾ ದಿಶ ಆ ಧಾವಂತ್ವಂಬ ನಿ ಷ್ವರ ।**

ಪುರೋವರ್ತಿಯೂ, ಪಶ್ಚಾದ್ವರ್ತಿಯೂ, ಊರ್ಧ್ವವರ್ತಿಯೂ, ಅಧೋವರ್ತಿಯೂ ಆಗಿರತಕ್ಕ ದಿಕ್ಕಿನ ಅಂತರಗಳು ನಿಮ್ಮನ್ನು ತ್ವರೆಗೊಳಿಸಲಿ; ಮಾತೆಯೇ, ಶೀಘ್ರವಾಗಿ ಹೊರಕ್ಕೆ ಬಾ. [ಈ ಮಂತ್ರವು **ನಿಗ್ರಾಭ** ಕ್ರಮಕ್ಕೆ ಸೇರಿದುದು. ಉನ್ನೇತೃವು ಉದಕವನ್ನು ತಂದು ಹೋತೃವಿನ ಪಾತ್ರೆಗೆ ಸುರಿಯುತ್ತಾನೆ ಅದರೊಂದಿಗೆ ಸೋಮರಸವೂ ಬೀಳುತ್ತದೆ.]

**ಯತ್ತೇ ಸೋಮಾದಾಭ್ಯಂ ನಾಮ ಜಾಗೃವಿ ತಸ್ಮೈ ತೇ ಸೋಮ ಸೋಮಾಯ ಸ್ವಾಹಾ ||**

[ಈ ಮಂತ್ರದಿಂದ ಪ್ರತಿಪ್ರಸ್ಥಾತೃವು ತಾನು ತೆಗೆದಿದ್ದ ಆರು ಸೋಮಲತೆಗಳನ್ನೂ ಕೆಳಗಿಡುತ್ತಾನೆ.

ಈ ರೀತಿಯಾಗಿ ಸೋಮರಸದ ಉತ್ಪತ್ತಿಯೂ, ಶುದ್ಧಿಯೂ ಆದ ನಂತರ **ಇಂದ್ರವಾಯು**ಗಳನ್ನು ಇದರ ಪಾನಕ್ಕಾಗಿ ಬರಬೇಕೆಂದು ಪ್ರಾರ್ಥಿಸಿದೆ. ಈ ಪ್ರಾರ್ಥನೆಯು ತೈತ್ತಿರೀಯ ಸಂಹಿತೆಯಲ್ಲಿ ಈ ರೀತಿಯಿದೆ.

> **ಆ ವಾಯೋಭೂಷ ಶುಚಿಪಾ ಉಪ ನಃ ಸಹಸ್ರಂ ತೇ ನಿಯುತೋ ವಿಶ್ವವಾರ | ಉಪೋ ತೇ ಅಂಧೋ ಮದ್ಯಮಯಾಮಿ ಯಸ್ಯ ದೇವ ದಧಿಷೇ ಪೂರ್ವಪೇಯಂ | ಉಪಯಾಮಗೃಹೀತೋಽಸಿ ವಾಯವೇ ತ್ವೇಂದ್ರವಾಯೂ ಇಮೇ ಸುತಾಃ | ಉಪ ಪ್ರಯೋಭಿರಾ ಗತಮಿಂದವೋ ವಾಮುಶಂತಿ ಹಿ | ಉಪಯಾಮಗೃಹೀತೋಽಸೀಂದ್ರವಾಯುಭ್ಯಾಂ ತ್ವೈಷ ತೇ ಯೋನಿಃ ಸಜೋಷಾಭ್ಯಾಂ ತ್ವಾ ||**
>
> (ತೈ. ಸಂ. ೧-೪-೪)

ಶುದ್ಧವಾದ ರಸವನ್ನು ಪಾನಮಾಡತಕ್ಕ ಎಲೈ ವಾಯುವೇ, ನಿನ್ನ ಸಹಸ್ರಸಂಖ್ಯಾಕವಾದ ಅಶ್ವಗಳೊಂದಿಗೆ ದಯಮಾಡು. ನಿನ್ನ ಪ್ರಥಮಪಾನಕ್ಕಾಗಿ ಈ ಮಧುರವಾದ ಸೋಮರಸವು ಹಿಂಡಿ ಸಿದ್ಧವಾಗಿದೆ. ಎಲೈ ಇಂದ್ರಾವಾಯುಗಳೇ, ಈ ಸೋಮರಸಗಳು ನಿಮ್ಮ ಆಗಮನವನ್ನು ಬಯಸುತ್ತಿವೆ. ಪರಸ್ಪರವಾಗಿ ಸಹಚಾರಿಗಳಾದ ನೀವು ಬಂದು ನಿಮಗಾಗಿ ಸಿದ್ಧವಾಗಿಯೂ, ಶುದ್ಧವಾಗಿಯೂ ಇರುವ ಈ ರಸವನ್ನು ಪಾನಮಾಡಿರಿ ಎಂದು ಪ್ರಾರ್ಥಿಸಿದೆ.

**ವಾಜಿನಂ ಇಮಂ ವಾಜಿನಂ ನ**—ಎಂದು **ವಾಜಿನಂ** ಎಂಬ ಪದವು ದ್ವಿರುಕ್ತವಾಗಿದೆ. ಎರಡು ಪದಕ್ಕೂ ಚಲಿಸುವುದು ಎಂಬುದೇ ಅರ್ಥ. ಮೊದಲನೆಯ ಪದವು **ಇಂದುಂ** ಎಂಬುದಕ್ಕೆ ವಿಶೇಷಣವಾಗಿ **ದ್ರೋಣ ಕಲಶ**ದಿಂದ ಗ್ರಹಗಳಿಗೆ ಹೋಗತಕ್ಕದ್ದು ಎಂಬ ತಾತ್ಪರ್ಯವನ್ನು ಕೊಡುತ್ತದೆ. ಇದನ್ನು ಶೀಘ್ರಗಾಮಿಯಾದ ಕುದುರೆಗೆ ಹೋಲಿಸಿದೆ. ಎರಡನೆಯ **ವಾಜಿನಂ** ಎಂಬುದು **ಅತ್ಯಂ** ಎಂಬುದಕ್ಕೆ ವಿಶೇಷಣವಾಗಿದೆ.

**ಅತ್ಯಂ—ಅಪೇಕ್ಷಿತದೇಶಂ ಪ್ರತಿ ಅತನಶೀಲಃ |** ತಾನು ಇಷ್ಟಬಂದ ಪ್ರದೇಶಕ್ಕೆ ಸಂಚರಿಸುವ ಸ್ವಭಾವವುಳ್ಳವನು ಎಂದು ಈ ಪದವು **ಅಗ್ನಿ**ಪರ್ಯಾಯವಾಗಿಯೂ, **ಆದಿತ್ಯ**ಪರ್ಯಾಯವಾಗಿಯೂ, **ಅಶ್ವ**ಪರ್ಯಾಯವಾಗಿಯೂ ಉಪಯೋಗಿಸಲ್ಪಟ್ಟಿದೆ.

> **ಅಸ್ಯ ಶ್ಲೋಕೋ ದಿವೀಯತೇ ಪೃಥಿವ್ಯಾಮತ್ಯೋ ನ ಯಂಸದ್ಯಕ್ಷಭೃದ್ವಿಚೇತಾಃ |**
>
> (ಋ. ಸಂ. ೧-೧೯೦-೪)

ಎಂಬಲ್ಲಿ **ಅತನಶೀಲಃ ಆದಿತ್ಯಃ** ಎಂದು ಆದಿತ್ಯಪರವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಅಶ್ವಪರ್ಯಾಯವಾಗಿದೆ. ವೇಗಗಾಮಿಯಾದ ಅಶ್ವವೆಂದರ್ಥ.

|| ವ್ಯಾಕರಣಪ್ರಕ್ರಿಯಾ ||

**ವವೃತ್ಯುಃ**—ವೃತು ವರ್ತನೇ. ಧಾತು. ಅತಿಶಯಾರ್ಥ ತೋರುವಾಗ **ಧಾತೋರೇಕಾಚಃ** - (ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಬಂದಾಗ ಅದಕ್ಕೆ ಅನೈಮಿತ್ತಿಕವಾಗಿ **ಲುಕ್**. ಯಙ್ ಲುಗಂತದ ಮೇಲೆ ಲಿಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ ಬಂದಾಗ ಅದಕ್ಕೆ ಜುಸಾದೇಶ. ಯಾಸುಟಾಗಮ ಬಂದಾಗ **ಉಸ್ಯ ಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮರ್ಮೃಜಂತ**— ಮೃಜೂ ಶುದ್ಧೌ ಧಾತು. ಹಿಂದಿನಂತೇ ಯಙ್ ಲುಕ್. ಯಙ್ಲುಗಂತದ ಮೇಲೆ ಛಾಂದಸವಾಗಿ ಲಙ್. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದಿ ಪ್ರತ್ಯಯ ಬರುತ್ತದೆ. ಝುಕ್ಕೆ ಅಂತಾದೇಶ. **ಗುಣೋಯಙ್ ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. ತಿಙಂತ ನಿಘಾತಸ್ವರ ಬರುತ್ತದೆ.

**ಅಸ್ಮಯೂ**—ಅಸ್ಮದ್ ಶಬ್ದದ ಮೇಲೆ ಇಚ್ಛಾರ್ಥದಲ್ಲಿ ಕ್ಯಚ್ ಬಂದಾಗ ಅದರ ಮೇಲೆ ಉಪ್ರತ್ಯಯ. ಸಂಬೋಧನಾದ್ವಿವಚನಾಂತರೂಪ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಗಂತಂ**—ಗಮ್ಲೃ ಗತೌ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಆರ್ಧಧಾತುಕಸಂಜ್ಞೆ ಇರುವುದರಿಂದ ಪ್ರತ್ಯಯಕ್ಕೆ ಙಿತ್ವ ಬರುವುದಿಲ್ಲ. ಆದುದರಿಂದ **ಅನುದಾತ್ತೋಪದೇಶ**—ಸೂತ್ರದಿಂದ ಧಾತುವಿನ ಅನುನಾಸಿಕಕ್ಕೆ ಲೋಪ ಬರುವುದಿಲ್ಲ. ಅನುಸ್ವಾರ ಪರಸವರ್ಣ. ತಿಙಂತನಿಘಾತಸ್ವರ ಬರುತ್ತದೆ

**ಇಂದ್ರ ವಾಯೂ**—ಇಂದ್ರಶ್ಚ ವಾಯುಶ್ಚ ಇಂದ್ರವಾಯೂ ಪ್ರಸಿದ್ಧದೇವತಾದ್ವಂದ್ವದಲ್ಲಿಯೇ ಪೂರ್ವಪದಕ್ಕೆ ಆನಙ್ ವಿಧಾನಮಾಡಿರುವುದರಿಂದ ಇಲ್ಲಿ ಆನಙ್ ಬರುವುದಿಲ್ಲ. **ದೇವತಾ ದ್ವಂದ್ವೇ ಚ** (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ.

**ವಾಜದಾ**—ವಾಜಂ ದದಾತಿ ಇತಿ ವಾಜದಃ. ಡುದಾಞ್ ದಾನೇ. ಧಾತು. **ಆತೋನುಪಸರ್ಗೇ ಕಃ** (ಪಾ. ಸೂ. ೩-೨-೩) ಎಂಬುದರಿಂದ ಕಪ್ರತ್ಯಯ. **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಸುತಾನಾಂ**—ಷುಞ್ ಅಭಿಷವೇ. ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ. || ೫ ||



|| ಸಂಹಿತಾಪಾಠಃ ||

ಇಮೇ ವಾಂ ಸೋಮಾ ಅಪ್ಸ್ವಾ ಸುತಾ ಇಹಾಧ್ವರ್ಯುಭಿರ್ಭರಮಾಣಾ

ಅಯಂಸತ ವಾಯೋ ಶುಕ್ರಾ ಅಯಂಸತ ।

ನಿತೇ ವಾಮಭ್ಯಸೃಕ್ಷತ ತಿರಃ ಪವಿತ್ರಮಾಶವಃ ।

ಯುವಾಯವೋಽತಿ ರೋಮಾಣ್ಯವ್ಯಯಾ ಸೋಮಾಸೋ ಅತ್ಯವ್ಯಯಾ ॥

॥ ಪದಪಾಠಃ ॥

ಇಮೇ । ವಾಂ । ಸೋಮಾಃ । ಅಪ್ಽಸು । ಆ । ಸುತಾಃ । ಇಹ । ಅಧ್ವರ್ಯುಽಭಿಃ । ಭರಮಾಣಾಃ । ಅಯಂಸತೇ । ವಾಯೋ ಇತಿ । ಶುಕ್ರಾಃ । ಅಯಂಸತೇ ।

ಏತೇ । ವಾಂ । ಅಭಿ । ಅಸೃಕ್ಷತ । ತಿರಃ । ಪವಿತ್ರಂ । ಆಶವಃ ।

ಯುವಾಽಯವಃ । ಅತಿ । ರೋಮಾಣಿ । ಅವ್ಯಯಾ । ಸೋಮಾಸಃ । ಅತಿ । ಅವ್ಯಯಾ ॥ ೬ ॥

॥ ಸಾಯಣಭಾಷ್ಯಂ ॥

ಹೇ ವಾಯೋ ವಾಂ ಯುವಯೋಸ್ತವ ಚೇಂದ್ರಸ್ಯ ಚ ಸ್ವಭೂತಾ ಇಮೇ ಸೋಮಾ ಅಪ್ಸ್ವಸ್ಮದೀಯೇಷು ಕರ್ಮಸು ॥ ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ ॥ ಇಹಾಸ್ಮಿನ್ನಭಿಷವಸ್ಥಾನೇ ಸುತಾ ಅಧ್ವರ್ಯುಭಿರ್ಭರಮಾಣಾಸ್ತೈರ್ಭ್ರಿಯಮಾಣಾ ಗೃಹೀತಾ ಹೋತುಂ ವಾ ಹ್ರಿಯಮಾಣಾಃ ॥ ಕರ್ಮಣಿ ಕರ್ತೃಪ್ರತ್ಯಯಃ ॥ ಸಂತ ಆಯಂಸತೇ । ಆಗಚ್ಛಂತೇ । ಯುವಯೋರ್ನಿಯತಾ ಭವಂತಿ । ಕಿಂಚ ತ ಏವ ಸೋಮಾಃ ಶುಕ್ರಾಃ ಶುಭ್ರಾ ದೀಪ್ತಾ ಅಯಸಂತ । ನಿಯತಾ ಭವಂತಿ । ಕಿಂಚೈತ ಆಶವೋ ವ್ಯಾಪಕಾಃ ಸೋಮಾ ವಾಂ ಯುವಾಂ । ಪ್ರೀಣಯಿತುಮಿತಿ ಶೇಷಃ । ತಿರಃ ಪವಿತ್ರಂ ತಿರ್ಯಗ್ಭೂತಂ ಸೋಮಾಂತರ್ಧಾಯಕಂ ವೋರ್ಣಾಮಯಂ ಪವಿತ್ರಮಭ್ಯಸೃಕ್ಷತ । ಅಭಿಲಕ್ಷ್ಯಾಸೃಜ್ಯಂತೇ । ಸೃಷ್ಟಾ ಭವಂತಿ ॥ ಸೃಜೇಃ ಕರ್ಮಣಿ ಲುಙಿ ಲಿಙ್ಸಿಚಾವಾತ್ಮನೇಪದೇಷ್ವಿತಿ ಸಿಚಃ ಕಿತ್ತ್ವಾದ್ಗುಣಾಭಾವೋಽಮಾ- ಗಮಾಭಾವಶ್ಚ ॥ ಕಿಂಚ ಯುವಾಯವೋ ಯುವಾಂ ಕಾಮಯಮಾನಾಃ ಸೋಮಾಸಃ ಸೋಮಾ ಅವ್ಯಯಾವ್ಯಯಾನ್ಯಚ್ಛಿನ್ನಾನಿ ರೋಮಾಣಿ ಪವಿತ್ರಸಂಬಂಧೀನ್ಯವಿರೋಮಾಣಿ । ಯದ್ವಾ । ಅವ್ಯಯಾ ಅವಿಮಯಾನಿ ॥ ಮಕಾರೋ ಲುಪ್ಯತೇ ॥ ತಾದೃಶಾನಿ ರೋಮಾಣ್ಯತ್ಯತಿಕ್ರಮ್ಯ ಪಾತ್ರಾದ್ಗಚ್ಛಂತೀತಿ ಶೇಷಃ । ಪುನಸ್ತ ಏವ ವಿಶೇಷ್ಯಂತೇ । ಅತ್ಯತಿಶಯೇನಾವ್ಯಯಾ ವ್ಯಯರಹಿತಾಃ ಸೋಮಾಸಃ ಸೋಮಾ ಅಸೃಕ್ಷತೇತಿ ಶೇಷಃ ॥

॥ ಪ್ರತಿಪದಾರ್ಥ ॥

**ಹೇ ವಾಯೋ**—ಎಲೈ ವಾಯುವೇ । **ವಾಂ**—ನಿನಗೆ ಮತ್ತು ಇಂದ್ರನಿಗೆ (ಸೇರಿದ) । **ಇಮೇ ಸೋಮಾಃ**—ಈ (ನಾನಾಪಾತ್ರಸ್ಥಿತವಾದ) ಸೋಮರಸಗಳು । **ಅಪ್ಸು**—(ನಮ್ಮ ಯಾಗಾಂಗಭೂತವಾದ) ಸಂಸ್ಕಾರಗಳಲ್ಲಿ । **ಇಹ**—ಈ ಅಭಿಷವಸ್ಥಾನದಲ್ಲಿ । **ಸುತಾಃ**—ಅಭಿಷುತವಾಗಿ । **ಅಧ್ವರ್ಯುಭಿಃ**—ಅಧ್ವರ್ಯುಗಳಿಂದ । **ಭರಮಾಣಾಃ**—ಧೃತವಾಗಿ । **ಆ ಅಯಂಸತ**—ಆಗಮಿಸುತ್ತವೆ (ನಿಮಗಾಗಿ ನಿಯತವಾಗಿವೆ) । (**ಕಿಂಚ**—ಮತ್ತು) । (**ತ ಏವ ಸೋಮಾಃ**—ಅದೇ ಸೋಮರಸಗಳು) । **ಶುಕ್ರಾಃ**—ಪ್ರಕಾಶಿಸುತ್ತಾ । **ಅಯಂಸತ**—(ನಿಮಗಾಗಿ) ನಿಯಮಿತವಾಗಿವೆ । (**ಕಿಂಚ**—ಮತ್ತು) । **ಆಶವಃ**—ವ್ಯಾಪಕಗಳಾದ । **ಏತೇ**—ಈ ಸೋಮರಸಗಳು । **ವಾಂ**—

ನಿಮ್ಮಿಬ್ಬರನ್ನು (ತೃಪ್ತಿಪಡಿಸಲು) । **ತಿರಃ** – ಸೊಟ್ಟಾಗಿರುವ । **ಪವಿತ್ರಂ** – (ಸೋಮರಸದಲ್ಲಿ ಇಡಬೇಕಾದ ಊರ್ಣಾಮಯವಾದ) ಪವಿತ್ರವನ್ನು । **ಅಭಿ ಅಸೃಕ್ಷತ**—(ಉಪಯೋಗಿಸಿ) ಸೃಜಿಸಲ್ಪಟ್ಟವು । **ಯುವಾಯವಃ**—ನಿಮ್ಮನ್ನು ಅಪೇಕ್ಷಿಸುವ । **ಅತಿ ಅವ್ಯಯಾಃ**—ಅತಿಶಯವಾಗಿ ವ್ಯಯರಹಿತವಾದ (ಅಕ್ಷಯವಾದ) । **ಸೋಮಾಸಃ**—ಸೋಮರಸಗಳು । **ಅವ್ಯಯಾ**—ಅಚ್ಛಿನ್ನವಾದ । **ರೋಮಾಣಿ**—ಉಣ್ಣೆಗೂದಲುಗಳನ್ನು । **ಅತಿ**—ಅತಿಕ್ರಮಿಸಿ (ಪಾತ್ರೆಯಿಂದ ಹೊರಡುತ್ತವೆ).

॥ ಭಾವಾರ್ಥ ॥

ಎಲೈ ಇಂದ್ರವಾಯುಗಳೇ, ನಮ್ಮ ಯಾಗಕರ್ಮಗಳಲ್ಲಿ ಅಭಿಷುತವಾಗಿ, ಅಧ್ವರ್ಯುಗಳಿಂದ ಧೃತವಾದ ಈ ಸೋಮರಸಗಳು ನಿಮ್ಮಿಬ್ಬರಿಗೋಸ್ಕರ ಸಿದ್ಧಪಡಿಸಲ್ಪಟ್ಟಿವೆ; ಶುದ್ಧವಾದ ಸೋಮರಸಗಳು ಸಿದ್ಧಪಡಿಸಲ್ಪಟ್ಟಿವೆ: ಹರಡಿಕೊಳ್ಳುವ ಸ್ವಭಾವದ ಈ ರಸಗಳು ನಿಮಗೋಸ್ಕರ, ಸೊಟ್ಟವಾಗಿರುವ ಸೋಸುವ ಸಾಧನದ ಮೂಲಕ ಹಾದು ಬಂದಿವೆ; ಮತ್ತು ಅಕ್ಷಯವಾದ ನಿಮ್ಮಿಬ್ಬರಿಗಾಗಿ ನಿಯತವಾದ ಸೋಮರಸಗಳು (ಪವಿತ್ರದ) ಉಣ್ಣೆಗೂದಲುಗಳನ್ನು ಹಾದುಬರುತ್ತವೆ.

English Translation.

These Soma juices, poured out in our rites, and borne by the priests, are prepared for you both : the pure juices, Vayu (and Indra), are prepared : these pervading (juices) have passed through the oblique filter for you both ; the Soma juices intended for you both, pass through the woolly fleece ; the inexhaustible Soma juices.

॥ ವಿಶೇಷವಿಷಯಗಳು ॥

ವಿಧ್ಯುಕ್ತವಾದ ಸಂಸ್ಕಾರಗಳಿಂದ ಅಭಿಷುತವಾಗಿ, ಅಧ್ವರ್ಯುಗಳಿಂದ ಧೃತವಾಗಿಯೂ, **ಶುಕ್ರಾದಿ** ಗುಣಗಳಿಂದ ಪ್ರಕಾಶಿಸುತ್ತಲೂ ಇರತಕ್ಕ ಸೋಮರಸದ ಸ್ವರೂಪವನ್ನು ವರ್ಣಿಸಿದೆ.

**ಅಧ್ವರ್ಯುಭಿಃ ಭರಮಾಣಾಃ—ಹೋತುಂ ತೈರ್ಹ್ರಿಯಮಾಣಾಃ, ಧ್ರಿಯಮಾಣಾ ವಾ ।** ಅಧ್ವರ್ಯುಗಳಿಂದ ಹಿಡಿಯಲ್ಪಟ್ಟ ಅಥವಾ ಹೋಮದಲ್ಲಿ ಅರ್ಪಣೆಗಾಗಿ ಒಯ್ಯಲ್ಪಟ್ಟ ಎಂದು ಸೋಮರಸಕ್ಕೆ ವಿಶೇಷಣವಾಗಿದೆ. ಅಭಿಷುತವಾದನಂತರ ಅಧ್ವರ್ಯುಗಳು ಈ ರಸವನ್ನು ಅರ್ಪಣೆಗಾಗಿ ಸಿದ್ಧಪಡಿಸಿಕೊಳ್ಳಬೇಕಾದ ಕ್ರಮವನ್ನೂ, ಆ ಕಾಲದಲ್ಲಿ ಪಠಿಸಬೇಕಾದ ಮಂತ್ರಗಳನ್ನೂ ತೈತ್ತಿರೀಯಸಂಹಿತೆಯಲ್ಲಿ ಈ ರೀತಿಯಾಗಿ ತಿಳಿಸಿದೆ. ಇದಕ್ಕೆ **ಉಪಾಂಶುಗ್ರಹಾಭಿಧಾನವೆಂದು** ಹೆಸರು. (ತೈ. ಸಂ. ೧-೪-೨)

**೧- ವಾಚಸ್ಪತಯೇ ಪವಸ್ವ ವಾಜಿನ್ವೃಷಾ ವೃಷ್ಣೋ ಅಗ್ಂ ಶುಭ್ಯಾಂ ಗಭಸ್ತಿಪೂತೋ ದೇವೋ ದೇವಾನಾಂ ಪವಿತ್ರಮಸಿ ಯೇಷಾಂ ಭಾಗೋಽಸಿ ತೇಭ್ಯಸ್ತ್ವಾ (ಗೃಹ್ಣಾಮಿ)**

**ಹೇ ವಾಜಿನ್ನನ್ನಪ್ರದ ಸೋಮ ಪತಯೇ ಪಾಲಕದೇವಾರ್ಥಂ ವಾಚಃ ಸಂಬಂಧಿನಾ ಮಂತ್ರೇಣ ಪವಸ್ವ ಶುದ್ಧೋ ಭವ ।** ಅನ್ನಪ್ರದನಾದ ಎಲೈ ಸೋಮನೇ, ಪಾಲಕನಾದ ದೇವನಿಗಾಗಿ ನೀನು ವಾಕ್ಸಂಬಂಧಿಯಾದ

ಮಂತ್ರಗಳಿಂದ ಶುದ್ಧನಾಗು. ಇದಕ್ಕೆ ಪೂರ್ವದಲ್ಲಿಯೇ ನೀನು ಅರಣ್ಯದಲ್ಲಿ ಸೂರ್ಯರಶ್ಮಿಗಳಿಂದ ಶುದ್ಧನಾಗಿ, ಈಗ ಅಂತರ್ಧಾಪಿತವಾದ ಸೋಮಾಂಶುಗಳಿಂದ ಪುನಃ ಪೂತನಾಗು. ನೀನು ದೇವತೆಗಳಲ್ಲೆಲ್ಲಾ ದೇವತೋತ್ತಮನಾಗಿ ನಿನ್ನನ್ನು ಪಾನಮಾಡತಕ್ಕವನ ಶುದ್ಧಿಗೂ ಕಾರಣನಾಗಿದ್ದೀಯೆ. ನೀನು ಯಾವ ದೇವತೆಗಳಿಗಾಗಿ ನಿರ್ದಿಷ್ಟವಾಗಿ ದ್ದೀಯೋ ಅವರಲ್ಲಿಗೆ ಈಗ ನಿನ್ನನ್ನು ತೆಗೆದುಕೊಂಡು ಹೋಗುತ್ತಿದ್ದೇನೆ. [ಉಪಾಂಶುಗ್ರಹವೆಂಬ ಸಂಸ್ಕಾರದ ಈ ಭಾಗದಲ್ಲಿ ಪ್ರತಿಪ್ರಸ್ಥಾತೃವಿನಿಂದ ಹಿಡಿಯಲ್ಪಟ್ಟ ಪಾತ್ರೆಗೆ ಅಧ್ವರ್ಯುವು ರಸವನ್ನು ಸುರಿಯುತ್ತಾನೆ. ಆ ಪಾತ್ರೆಯಲ್ಲಿ ಎರಡು ಅಂಶುಗಳು ಇದ್ದು ಈ ರಸವನ್ನು ಶುದ್ಧವಾದುದನ್ನಾಗಿ ಮಾಡಬೇಕು. ಈ ವಿಧಿಯನ್ನು **ವಾಚಸ್ಪತೆಯೇ ಪವಸ್ವ** ಎಂಬ ಮಂತ್ರಭಾಗವನ್ನು ಪಠಿಸುತ್ತಾ ನೆರವೇರಿಸಬೇಕು.

೨. **ಸ್ವಾಂ ಕೃತೋಽಸಿ ಮಧುಮತೀರ್ನ ಇಷಸ್ಕೃಧಿ ವಿಶ್ವೇಭ್ಯಸ್ತ್ವೇಂದ್ರಿಯೇಭ್ಯೋ ದಿವ್ಯೇಭ್ಯಃ ಪಾರ್ಥಿವೇಭ್ಯಃ ।**

ಎಲೈ ಉಪಾಂಶುಗ್ರಹವೇ, ನೀನು ನಮ್ಮಿಂದ ಸ್ವೀಕೃತನಾಗಿದ್ದೀಯೆ. ನಮ್ಮ ಅನ್ನವನ್ನು ಮಾಧುರ್ಯಪೂರಿತ ವನ್ನಾಗಿ ಮಾಡು. ದಿವ್ಯಲೋಕಸ್ಥಿತವಾದುದೂ, ಪಾರ್ಥಿವಲೋಕಸ್ಥವಾದುದೂ ಆದ ಸಕಲ ಶಕ್ತಿಗಳ ವೃದ್ಧಿಗೂ ನಿನ್ನನ್ನು ಸ್ವೀಕರಿಸುತ್ತೇನೆ.

[ಈ ಮಂತ್ರದಿಂದ ಪಾತ್ರೆಯನ್ನು ತೆಗೆದುಕೊಂಡು ಅದನ್ನು ವೀಕ್ಷಿಸಿ ಎಡಗೈಯಿನಲ್ಲಿ ಉಜ್ಜಬೇಕು.]

೩. **ಮನಸ್ತ್ವಾಷ್ಟು**—ಮನಸ್ಸು ನಿನ್ನನ್ನು ವ್ಯಾಪಿಸಲಿ. [ಈ ಮಂತ್ರದಿಂದ ಉಪಸ್ಥಾನವು.]

೪. **ಉರ್ವಂತರಿಕ್ಷಮನ್ವಿಹಿ**—ವಿಸ್ತೃತವಾದ ಅಂತರಿಕ್ಷವನ್ನು ದಾಟಿ ಆಹವನೀಯದ ಪ್ರದೇಶಕ್ಕೆ ದಯಮಾಡು. [ಅಧ್ವರ್ಯುವು ಈ ಮಂತ್ರವನ್ನು ಪಠಿಸಿ ಆಹವನೀಯದ ಪ್ರದೇಶಕ್ಕೆ ಬರುತ್ತಾನೆ.]

೫. **ಸ್ವಾಹಾ ತ್ವಾ ಸುಭವಃ ಸೂರ್ಯಾಯ**—**ಸೂರ್ಯಾಯ ಸ್ವಾಹಾ** (ಈ ಮಂತ್ರದಿಂದ ಅಗ್ನಿ ಯಲ್ಲಿ ರಸವನ್ನರ್ಪಿಸುವುದು.]

೬. **(ಸ್ವಾಹಾ) ದೇವೇಭ್ಯಸ್ತ್ವಾ ಮರೀಚಿಪೇಭ್ಯಃ**—[ಇದೂ ಸಹ ಮೇಲಿನ ನಿಯಮವು.] ಇದೊಂದು ಕ್ರಮ; ಅಥವಾ **ಸ್ವಾಹಾ ತ್ವಾ ಸುಭವಃ ಸೂರ್ಯಾಯ ದೇವೇಭ್ಯಸ್ತ್ವಾ ಮರೀಚಿಪೇಭ್ಯಃ** ಎಂದು ಒಟ್ಟಿಗೆ ಹೇಳಿ ಅರ್ಪಿಸುವುದು ಇನ್ನೊಂದು ಕ್ರಮ.

೭. **ಏಷ ತೇ ಯೋನಿಃ ಪ್ರಾಣಾಯ ತ್ವಾ**—ಇದೇ ನಿನ್ನ ಉತ್ಪತ್ತಿಸ್ಥಾನವು. [ಎಂದು ಈ ಮಂತ್ರವನ್ನು ಪಠಿಸಿ ಉಳಿದ ಶೇಷವನ್ನು ಆಗ್ರಯಣಸ್ಥಾಲಿಯೊಳಗೆ ಸುರಿದು ಬರಿದಾದ ಪಾತ್ರೆಯಲ್ಲಿ ಒಂದು ಲತೆಯನ್ನು ಹಾಕಬೇಕು.]

ಇದೇ ಕ್ರಮವನ್ನು ಕೊಂಚ ವ್ಯತ್ಯಾಸಮಾಡಿ ಶತಪಥಬ್ರಾಹ್ಮಣದಲ್ಲಿ **ಅಥ ರಾಜಾನಮುಪಾವಹರತಿ । ಇಯಂ ವೈ ಪ್ರತಿಷ್ಠಾ** (ಶ. ಬ್ರಾ. ೩-೯-೩-೨ ರಿಂದ ೩೩) ಇತ್ಯಾದಿ ವಾಕ್ಯಗಳಿಂದ ಅಧ್ವರ್ಯುವಿನ ಕರ್ತವ್ಯಗಳನ್ನೂ ಅವನು ಆಹುತಿಗಾಗಿ ಸೋಮರಸವನ್ನು ಸಿದ್ಧಪಡಿಸಿ ತೆಗೆದುಕೊಂಡು ಹೋಗುವುದನ್ನೂ ತಿಳಿಸಿದೆ.

**ಶುಕ್ರಾಃ—ಶುಭ್ರಾಃ ದೀಪ್ತಾಃ ।** ಶುಭ್ರವಾದುದು; ಪ್ರಕಾಶಮಾನವಾದುದು ಎಂದರ್ಥಮಾಡಿದೆ.

**ಪವಿತ್ರಂ—ಪವಿತ್ರ** ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದು ಕಷ್ಟ. **ಊರ್ಣಾಮಯಂ ಪವಿತ್ರಂ ಸೋಮಾಂತರ್ಧಾಯಕಂ ।** ಎಂದರೆ **ಊರ್ಣಾ** (ತುಪ್ಪಟ) ಮಯವಾದ ಈ ಪವಿತ್ರವನ್ನು ಸೋಮರಸ

ದೊಳಗಿಟ್ಟರೆ ಶುದ್ಧಿಯಾಗುವುದು ಎಂಬುದು ಒಂದು ಕ್ರಮ. ಅಥವಾ ಇವನ್ನು ಒಂದರಿಯಂತೆ ಶೋಧಿಸುವ ಸಾಧನವನ್ನಾಗಿ ಮಾಡಿ, ಅದರಲ್ಲಿ ಸೋಮರಸವನ್ನು ಸುರಿದು ಶುದ್ಧಿಮಾಡುವ ಕ್ರಮವಿನ್ನೊಂದು. ಪ್ರಾಯಃ ಒಂದರಿಯಂತಿರುವುದೇ ಇಲ್ಲಿ ಸೂಚಿಸಿರುವಂತಿದೆ

ನಿರುಕ್ತಕಾರರು ಈ ಪದಕ್ಕೆ ಬೇರೆಬೇರೆ ಅರ್ಥಗಳನ್ನು ಹೇಳಿದ್ದಾರೆ. ಆದರೆ ಪ್ರಯೋಜನವು ಒಂದೇ ಎಂದೂ ತೋರಿಸಲು, **ಪವಿತ್ರಂ ಪುನಾತೇಃ** (ನಿ. ೫-೬) ಶುದ್ಧಿಮಾಡುವುದರಿಂದ ಇದಕ್ಕೆ ಪವಿತ್ರವೆಂದು ಹೆಸರು ವಿವರಿಸಿ,

೧. **ಮಂತ್ರಾಃ ಪವಿತ್ರಮುಚ್ಯತೇ ।** ಮಂತ್ರಕ್ಕೆ ಪವಿತ್ರವೆಂದು ಹೆಸರು ಎಂದು **ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ** । (ಸಾ. ವೇ. ೫-೨-೮-೫; ೨-೬೫೨) ಎಂಬ ವಾಕ್ಯವನ್ನುದಹರಿಸಿ ಅಲ್ಲಿ ಮಂತ್ರವೆಂಬರ್ಥವೆಂದೂ,

೨. **ರಶ್ಮಯಃ ಪವಿತ್ರಮುಚ್ಯತೇ ।** ರಶ್ಮಿಗಳಿಗೂ ಪವಿತ್ರವೆಂದು ಹೆಸರು.

೩. **ಆಪಃ ಪವಿತ್ರಮುಚ್ಯಂತೇ ।** ಉದಕಗಳಿಗೂ ಪವಿತ್ರವೆಂದು ಹೆಸರು, ಎಂದು

**ಶತಪವಿತ್ರಾಃ ಸ್ವಧಯಾ ಮದಂತೀರ್ದೇವೀರ್ದೇವಾನಾಮಪಿ ಯಂತಿ ಪಾಥಃ ।**

(ಋ. ಸಂ. ೭-೪೭-೩)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಉದಕ**ವೆಂದು ತೋರಿಸಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಶುದ್ಧಿಮಾಡುವುದು ಎಂದಾಗುತ್ತದೆಯೇ ಹೊರತು, ನಿರುಕ್ತಕಾರರು ಹೇಳಿರುವ ಉದಕ, ರಶ್ಮಿ, ಮಂತ್ರ ಇವುಗಳಾವುದೂ ಆಗುವುದಿಲ್ಲ. ಜಾಲಕರೂಪವಾದ ಸಾಧನವೆಂದೇ ಅರ್ಥ. ಕೆಲವುವೇಳೆ ದರ್ಭೆಗಳ ಸಮುದಾಯವನ್ನು ಪಾತ್ರೆಯ ಮೇಲಿಟ್ಟು ಅದರ ಮೇಲೆ ರಸವನ್ನು ಸುರಿದು ಶುದ್ಧಿಮಾಡುವುದೂ ಉಂಟು. ಇಲ್ಲಿ ಊರ್ಣಾಮಯವೆಂದು ವಿವರಿಸಿರುವುದರಿಂದ ತುಪ್ಪಟದಿಂದ ಮಾಡಿದ ಜಾಲರಿ ಯಾಗಿರಬೇಕು.

**ಉಚ್ಛಿಷ್ಟಂ ಚಮ್ವೋರ್ಭರ ಸೋಮಂ ಪವಿತ್ರ ಆ ಸೃಜ । ನಿ ಧೇಹಿ ಗೋರಧಿ ತ್ವಚಿ ॥**

(ಋ. ಸಂ. ೧-೨೮-೯)

ಎಂಬ ಋಕ್ಕಿನಲ್ಲಿ ದಶಾಪವಿತ್ರವೆಂದರ್ಥಮಾಡಿದೆ. (ಈ ಪದವನ್ನು ಹಿಂದಿನಋಕ್ಕಿನಲ್ಲಿ ವಿವರಿಸಿದೆ). ದಶಾಪವಿತ್ರವು ಕೇವಲ ಬಟ್ಟೆಯದು. ಇಲ್ಲಿ **ಅವ್ಯಯಾ ರೋಮಾಣಿ ಅತಿ** । ಎಂಬರೆ ಭಿನ್ನವಾಗದಿರುವ ರೋಮಗಳನ್ನು ದಾಟಿ ಕೆಳಕ್ಕೆ ಸುರಿಯುತ್ತವೆಯೆಂದಿರುವುದರಿಂದ ಇದನ್ನು ಕುರಿಯ ತುಪ್ಪಟವೆಂದೂಹಿಸಲಾಗಿದೆ. **ಅವಿರೋಮಾಣಿ** ಎಂದು ಸಾಯಣರು ವಿವರಿಸಿದ್ದಾರೆ.

**ಅವ್ಯೇ ವಧೂಯುಃ ಪವತೇ ಪರಿ ತ್ವಚಿ ಶ್ರಥ್ನೀತೇ ನಪ್ತೀರದಿತೇರ್ಋತಂ ಯತೇ ।**
**ಹರಿರಕ್ರಾನ್ ಯಜತಃ ಸಂಯತೋ ಮದೋ ನೃಮ್ಣಾ ಶಿಶಾನೋ ಮಹಿಷೋ ನ ಶೋಭತೇ ॥**

(ಋ. ಸಂ. ೯-೬೯-೩)

ಇತ್ಯಾತಿ ಋಕ್ಕುಗಳಲ್ಲಿ **ಅವ್ಯೇ ತ್ವಚಿ** ಎಂಬುದಕ್ಕೆ **ಅವೀಃ ಸ್ವಭೂತೇ ಚರ್ಮಣಿ** ಎಂದರ್ಥಮಾಡಿರುವಂತೆ ಇಲ್ಲಿಯೂ ಸಹ **ಅವ್ಯ** ಶಬ್ದಕ್ಕೆ ಕುರಿಗೆ ಸಂಬಂಧಿಸಿದ್ದು ಎಂದು ವಿವರಿಸಿ **ಅವ್ಯಯಾಃ ಸೋಮಾಸಃ** ಎಂಬುದಕ್ಕೆ

ಈ ತುಪ್ಪಟದ ಮೂಲಕ ಹೋಗಿ ಸುರಿದು ಶಬ್ದವಾಗುತ್ತದೆ ಎಂದು ಅರ್ಥಮಾಡಬೇಕು— ಈ ಋಕ್ಕಿನಲ್ಲಿ **ಅವ್ಯಯಾ ರೋಮಾಣಿ ಅತಿ** ಎಂದು ವರ್ಣಿಸಿರುವ ಇದೇ ಅಂಶವನ್ನು,

**ಪ್ರ ತೇ ಧಾರಾ ಅತ್ಯಣ್ವಾನಿ ಮೇಷ್ಯಃ ಪುನಾನಸ್ಯ ಸಂಯತೋ ಯಂತಿ ರಂಹಯಃ ।**
**ಯದ್ಗೋಭಿರಿಂದೋ ಚಮ್ವೋಃ ಸಮಜ್ಯಸ ಆ ಸುವಾನಃ ಸೋಮ ಕಲಶೇಷು ಸೀದಸಿ ॥**

( ಋ. ಸಂ. ೯-೮೬-೪೭ )

ಎಂಬಲ್ಲಿಯೂ ಸಹ ಇದೇ ಕ್ರಮದಲ್ಲಿ ಸೋಮರಸದ ಶುದ್ಧಿಯಕ್ರಮವನ್ನು ಹೇಳಿದೆ. **ರಂಹಯಃ ಧಾರಾಃ ಮೇಷ್ಯಃ ಅಣ್ವಾನಿ ಅಣೂನಿ ಲೋಮಾನಿ ಅತಿಯಂತಿ** । ಧಾರಾರೂಪವಾದ ರಸವು ಸೂಕ್ಷ್ಮವಾಗಿರತಕ್ಕ ತುಪ್ಪಟ ವನ್ನು ಹಾದು ಹರಿಯುತ್ತವೆಯೆಂದು ಇಲ್ಲಿ ವರ್ಣಿತವಾದಂತೆಯೇ ವಿವರಿಸಿದೆ.

**ಅವ್ಯಯಾಃ** ಎಂಬ ಪದವು ದ್ವಿರುಕ್ತವಾಗಿ, ಎರಡನೆಯ ಸಲ **ಸೋಮಾಸಃ** ಎಂಬುದಕ್ಕೆ ವಿಶೇಷಣವಾಗಿದೆ. ಅಲ್ಲಿ ವ್ಯಯರಹಿತವಾದ ಎಂದರೆ ಕ್ಷಯವಿಲ್ಲದಿರತಕ್ಕ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಅಪ್ಸು—**ಸಪ್ತಮ್ಯಂತರೂಪ. **ಊಡಿದಂ ಪದಾದಿ—**( ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭರಮಾಣಾಃ—**ಭೃಞ್ ಭರಣೇ. ಧಾತು. ವ್ಯತ್ಯಯದಿಂದ ಕರ್ಮಣಿಯಲ್ಲಿ ಕರ್ತೃ ಪ್ರತ್ಯಯ. ಲಟಿಗೆ ಶಾನಚಾದೇಶ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಲಸಾರ್ವಧಾತುಕ ಅನುದಾತ್ತ ವಾಗುವುದರಿಂದ ಧಾತುಸ್ವರ ಉಳಿಯುತ್ತನೆ.

**ಆಯಂಸತ—**ಯಮ ಉಪರಮೇ ಧಾತು. ಲುಙ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅಸೃಕ್ಷತ—**ಸೃಜ ವಿಸರ್ಗೇ. ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಬಹುವಚನಕ್ಕೆ **ಆತ್ಮನೇ ಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅತಾದೇಶ. ಚ್ಲಿಗೆ ಸಿಚಾದೇಶ. **ಲಿಙ್ ಸಿಚಾವಾತ್ಮನೇ ಪದೇಷು** (ಪಾ. ಸೂ. ೧-೨-೧೧) ಎಂಬುದರಿಂದ ಸಿಚಿಗೆ ಕಿತ್ತ್ವವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಆದುದರಿಂದಲೇ **ಸೃಜಿದೃಶೋರ್ಝಲ್ಯಮ ಕಿತಿ** ಎಂಬುದರಿಂದ ಬರುವ ಅಮಾಗಮವೂ ಬರುವುದಿಲ್ಲ. **ವ್ರಶ್ಚ ಭ್ರಸ್ಜ—**ಎಂಬುದರಿಂದ ಜಕಾರಕ್ಕೆ ಷತ್ವ. **ಷಢೋಃ ಕಃಸಿ** ಎಂಬುದರಿಂದ ಜಕಾರಕ್ಕೆ ಕತ್ವ. ಅದನ್ನು ನಿಮಿತ್ತಿಕರಿಸಿ ಸಕಾರಕ್ಕೆ ಷತ್ವ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಆಶವಃ—**ಅಶೂ ವ್ಯಾಪ್ತೌ. ಧಾತು. **ಕೃವಾಪಾ—**(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. **ಅತ ಉಪಧಾಯಾಃ** (ಪಾ ಸೂ ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಯುವಾಯವಃ**—ಯುಷ್ಮದ್ ಶಬ್ದದ ಮೇಲೆ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. ದ್ವಿತ್ವವಿಶಿಷ್ಟ ಪ್ರತಿಪಾದಕವಾದುದರಿಂದ ಪ್ರಕೃತಿಗೆ ಯುವಾದೇಶ. **ಅನ್ಯೇಷಾ ಮಪಿದೃಶ್ಯತೇ** ಎಂಬುದರಿಂದ ದೀರ್ಘ. **ಕ್ಯಾಚ್ಛಂದಸಿ** ಎಂಬುದರಿಂದ ಕ್ಯಜಂತದ ಮೇಲೆ ಉಪ್ರತ್ಯಯ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅವ್ಯಯಾ— ಶೇಶ್ಛಂದಸಿ ಬಹುಲಂ** (ಪಾ. ಸೂ ೬-೧-೭೦) ಎಂಬುದರಿಂದ ಶಿಗೆ ಲೋಪ. **ಅವಿಮುಯಾನಿ** ಎಂದಿರುವಾಗ ಛಾಂದಸವಾಗಿ ವರ್ಣಲೋಪ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಅತಿ ವಾಯೋ ಸಸತೋ ಯಾಹಿ ಶಶ್ವತೋ ಯತ್ರ ಗ್ರಾವಾ ವದತಿ ತತ್ರ
ಗಚ್ಛತಂ ಗೃಹಮಿಂದ್ರಶ್ಚ ಗಚ್ಛತಂ ।
ವಿ ಸೂನೃತಾ ದದೃಶೇ ರೀಯತೇ ಘೃತಮಾ ಪೂರ್ಣಯಾ ನಿಯುತಾ
ಯಾಥೋ ಅಧ್ವರಮಿಂದ್ರಶ್ಚ ಯಾಥೋ ಅಧ್ವರಂ ॥ ೭ ॥

॥ ಪದಪಾಠಃ ॥

ಅತಿ । ವಾಯೋ ಇತಿ । ಸಸತಃ । ಯಾಹಿ । ಶಶ್ವತಃ । ಯತ್ರ । ಗ್ರಾವಾ । ವದತಿ । ತತ್ರ । ಗಚ್ಛತಂ
ಗೃಹಂ । ಇಂದ್ರಃ । ಚ । ಗಚ್ಛತಂ ।
ವಿ । ಸೂನೃತಾ । ದದೃಶೇ । ರೀಯತೇ । ಘೃತಂ । ಆ । ಪೂರ್ಣಯಾ । ನಿ೽ಯುತಾ । ಯಾಥಃ । ಅಧ್ವರಂ ।
ಇಂದ್ರಃ । ಚ । । ಯಾಥಃ । ಅಧ್ವರಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತ್ವಂ ಸಸತ ಆಲಸ್ಯಾದಿನಾ ನಿದ್ರಾಂ ಕುರ್ವತಃ ಶಶ್ವತೋ ಬಹೂನ್ಯಜಮಾನಾನ್ । ಶಶ್ವದಿತಿ ಬಹುನಾಮ ಶಶ್ವದ್ವಿಶ್ವಮಿತಿ ತನ್ನಾಮಸು ಪಾಠಾತ್ । ಅತ್ಯತಿಕ್ರಮ್ಯೋಪೇಕ್ಷ್ಯಾಸ್ಮದ್ಯಜ್ಞಂ ಯಾಹಿ । ಗಚ್ಛ । ಇಂದ್ರಶ್ಚ ತಥಾ ಕರೋತು । ತಂ ದೇಶಮಿತಿ ತಮಾಹ । ಯತ್ರ ಗ್ರಾವಾ ವದತಿ

**ಯಸ್ಮಿನ್ದೇಶೇಽಭಿಷವಾರ್ಥಃ ಪಾಷಾಣಧ್ವನಿಃ ಶ್ರೂಯತೇ ತತ್ರ ಗಚ್ಛತಂ ತಂ ದೇಶಂ ಪ್ರತ್ಯಾಗಚ್ಛತಂ । ಗೃಹಂ ಯಜ್ಞಗೃಹಂ ಗಚ್ಛತಂ । ಪುನಃ ಸ್ಥಾನಮೇವ ವಿಶೇಷ್ಯತೇ । ಸೂನೃತಾ ಪ್ರಿಯಸತ್ಯಾತ್ಮಿಕಾ ಸ್ತುತಿರೂಪಾ ವಾಗ್ಯತ್ರ ವಿ ದದೃಶೇ ವಿಶೇಷೇಣ ದೃಶ್ಯತೇ। ಶ್ರೂಯತ ಇತ್ಯರ್ಥಃ। ತತ್ರ ಗಚ್ಛತಂ। ಯತ್ರ ಚ ಘೃತಮತ್ಯಂತದೀಪ್ತಮಾಜ್ಯಂ ಹೋಮಾರ್ಥಂ ಗೃಹೀತಂ ರೀಯತೇ ಗಚ್ಛತಿ ಆಹವನೀಯಂ ಪ್ರತಿ ನೀಯತೇ ॥ ರೀಙ್ ಸ್ರವಣೇ। ದಿವಾದಿತ್ವಾತ್ ಶ್ಯನ್ ॥ ತತ್ರ ಗಚ್ಛತಂ। ಗಮನಪ್ರಕಾರ ಏವ ವಿಶೇಷ್ಯತೇ । ಪೂರ್ಣಯಾ ಸಂಪೂರ್ಣಯಾ ಪುಷ್ಟಾಂಗಯಾ ನಿಯುತಾ ॥ ಜಾತಾವೇಕವಚನಂ ॥ ನಿಯುಜ್ಞಾತ್ಯಾಧ್ವರಮಸ್ಮದೀಯಂ ಯಜ್ಞಮಾ ಯಾಥಃ । ಆಭಿಮುಖ್ಯೇನ ಪ್ರಯಾಥಃ । ಕಿಂಚ ಹೇ ವಾಯೋ ತ್ವಮಿಂದ್ರಶ್ಚ ಯುವಾಮಧ್ವರಮಸ್ಮದೀಯಂ ಯಾಗಮಾ ಯಾಥಃ। ಸಹೈವಾಗಚ್ಛತಂ। ತಥಾಸ್ಮಾಭಿರಪಿ ಸಹೈವ ಗಚ್ಛತಮಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಹೇ ವಾಯೋ**—ಎಲೈ ವಾಯುವೇ (ನೀನು) । **ಸಸತಃ**—ಆಲಸ್ಯದಿಂದ ನಿದ್ರಾಧೀನರಾದ । **ಶಶ್ವತಃ**—ಅನೇಕ ಜನ (ಯಜಮಾನ) ರನ್ನು। **ಅತಿ**—ಅತಿಕ್ರಮಿಸಿ । **ಯಾಹಿ**—(ನಮ್ಮ ಯಾಗಶಾಲೆಗೆ) ಹೋಗು । **ಇಂದ್ರಃ ಚ**—ಇಂದ್ರನೂ ಕೂಡ (ಹಾಗೆಯೇ ಮಾಡಲಿ) । **ಯತ್ರ**— ಯಾವ ಸ್ಥಳದಲ್ಲಿ । **ಗ್ರಾವಾ**—ಶಿಲೆಯು (ಸೋಮರಸವನ್ನು ಹಿಂಡುವ ಶಿಲೆಗಳು) । **ವದತಿ**—ಧ್ವನಿಗೈಯುತ್ತವೆಯೋ । **ತತ್ರ**—ಆ ಪ್ರದೇಶಕ್ಕೆ । **ಗಚ್ಛತಂ**—(ನೀವಿಬ್ಬರು) ಹೋಗಿ । **ಗೃಹಂ**— ಯಾಗಗೃಹಕ್ಕೆ । **ಗಚ್ಛತಂ**—ಹೋಗಿ । **ಸೂನೃತಾ**—(ಯಾವ ಸ್ಥಳದಲ್ಲಿ) ಸತ್ಯವಾದ (ಸ್ತುತಿರೂಪ) ವಾಕ್ಯವು । **ವಿ ದದೃಶೇ** ವಿಶೇಷವಾಗಿ ಕಾಣಿಸುತ್ತದೆಯೋ (ಅಲ್ಲಿಗೆ ಹೋಗಿ) । **ಘೃತಂ**—(ಎಲ್ಲಿ) ಆಜ್ಯವು। **ರೀಯತೇ**—(ಹೋಮಾರ್ಥವಾಗಿ) ಸೀತವಾಗುತ್ತದೆಯೋ (ಅಲ್ಲಿಗೆ ಹೋಗಿ) । **ಪೂರ್ಣಯಾ**—ಪುಷ್ಟವಾದ । **ನಿಯುತಾ**—ನಿಯುನ್ನಾಮಕ (ಅಶ್ವಗಳಿಂದ ಸಹಿತರಾಗಿ) । **ಅಧ್ವರಂ**—ನಮ್ಮ ಯಾಗಶಾಲೆಗೆ । **ಆ ಯಾಥಃ**—ಅಭಿಮುಖರಾಗಿ ಬನ್ನಿ। **(ಕಿಂಚ**—ಮತ್ತು) । **(ಹೇ ವಾಯೋ**—ಎಲೈ ವಾಯುವೇ (ನೀನೂ) । **ಇಂದ್ರಃ ಚ**—ಇಂದ್ರನೂ ಕೂಡ । **ಅಧ್ವರಂ**—(ನಮ್ಮ) ಯಾಗಕ್ಕೆ । **(ಆ) ಯಾಥಃ**—ಒಟ್ಟಿಗೇ ಬನ್ನಿ.

॥ ಭಾವಾರ್ಥ ॥

ಎಲೈ ವಾಯುವೇ, ಇಂದ್ರಸಹಿತನಾಗಿ ಆಲಸ್ಯದಿಂದ ನಿದ್ರಾಧೀನರಾದವರನ್ನು ಬಿಟ್ಟು, (ಸೋಮರಸವನ್ನು ಸಿದ್ಧಮಾಡುವ) ಶಿಲೆಗಳ ಧ್ವನಿಯಿರುವ ಮನೆಗೆ ಹೋಗು; ಇಂದ್ರವಾಯುಗಳೇ, (ಆ) ಮನೆಗೆ ಹೋಗಿ; (ಸ್ತುತಿರೂಪವಾದ) ಸತ್ಯವಾಕ್ಕು ಇರುವಕಡೆ ಹೋಗಿ; ಆಜ್ಯವು (ಅಗ್ನಿಗಭಿಮುಖವಾಗಿ) ಪ್ರವಹಿಸುವ ಸ್ಥಳಕ್ಕೆ ಹೋಗಿ; ಪುಷ್ಟವಾದ (ನಿಮ್ಮ) ಅಶ್ವಗಳಿಂದ ಯುಕ್ತರಾಗಿ ಯಾಗಕ್ಕೆ ಹೋಗಿ; ಇಂದ್ರವಾಯುಗಳೇ, (ನೀವಿಬ್ಬರೂ) ಒಟ್ಟಾಗಿಯೇ (ನಮ್ಮ) ಯಾಗಶಾಲೆಗೆ ಬನ್ನಿ.

## English Translation.

Pass, (Vayu), by the many sleeping (worshippers), and go (with Indra) to the house where the stone resounds: Indra (and Vayu), go to that

dwelling; (go where) the (word of) truth is manifest; (go where) the butter flows; go both with well-fed horses to the sacrifice; Indra (and Vayu), repair to the sacrifice.

॥ ವಿಶೇಷವಿಷಯಗಳು ॥

ಇಲ್ಲಿ ವಾಯುವಿಗೂ ಇಂದ್ರನಿಗೂ ಸೋಮಪಾನಕ್ಕಾಗಿ ಆಹ್ವಾನವಿದೆ. ಮತ್ತು ಸೋಮಪಾನದ ಸ್ಥಳದಲ್ಲಿ ಇರತಕ್ಕ ಆಕರ್ಷಕವಾದ ಸನ್ನಿವೇಶವನ್ನು **ಯತ್ರ ಗ್ರಾವಾ ವದತಿ; ಯತ್ರ ಸೂನೃತಾ ವಿ ದಧೃಶೇ; ಘೃತಂ ರೀಯತೇ** ಇತ್ಯಾದಿ ವರ್ಣನೆಗಳಿಂದ ವಿವರಿಸಿದೆ.

**ಯತ್ರ ಗ್ರಾವಾ ವದತಿ**—ಎಲ್ಲಿ ಸೋಮರಸವನ್ನು ಹಿಂಡುವ ಶಿಲೆಗಳು ಮಾನವರ ಸ್ತುತಿವಾಕ್ಕನ್ನು ಅನುಸರಿಸುವ ಶಬ್ದವನ್ನು ಮಾಡುತ್ತವೆಯೋ ಅಲ್ಲಿ ಎಂದು ಸೋಮರಸವನ್ನು ಹಿಂಡುವ ಗ್ರಾವಗಳ ಆಕರ್ಷಕವಾದ ಧ್ವನಿಯನ್ನು ವರ್ಣಿಸಿದೆ. **ಗ್ರಾವಾ ವದತಿ** ಇತ್ಯಾದಿ ಸನ್ನಿವೇಶಗಳು ಅಸಂಭವವಲ್ಲವೇ ಎಂಬ ಆಕಾಂಕ್ಷೆಗೆ ಸಾಯಣರು ತಮ್ಮ **ಭಾಷ್ಯಭೂಮಿಕೆ**ಯಲ್ಲಿ ಸಮಾಧಾನವನ್ನು ಹೇಳಿರುವುದನ್ನು ಋಗ್ವೇದ ಸಂಹಿತೆಯ ಮೊದಲನೇ ಭಾಗದಲ್ಲಿ ತಿಳಿಸಿದೆ. ಗ್ರಾವಗಳ ಶಬ್ದರೂಪವಾದ ವಾಕ್ಕನ್ನು ಋಕ್ಸಂಹಿತೆಯಲ್ಲಿ ಈ ರೀತಿ ವರ್ಣಿಸಿದೆ. (ಋ ಸಂ. ೧೦-೯೪).

**ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯೋ ವಾಚಂ ವದತಾ ವದದ್ಭ್ಯಃ ।**
**ಯದದ್ರಯಃ ಪರ್ವತಾಃ ಸಾಕಮಾಶವಃ ಶ್ಲೋಕಂ ಘೋಷಂ ಭರಥೇಂದ್ರಾಯ ಸೋಮಿನಃ ॥ ೧ ॥**

ಈ ಗ್ರಾವಗಳು ಅಭಿಷವಶಬ್ದವನ್ನುಂಟುಮಾಡಲಿ. ನಾವೂ ಸಹ ಈ ಗ್ರಾವವನ್ನು ಸ್ತುತಿಸೋಣ. ಎಲೈ ಋತ್ವಿಕ್ಕುಗಳೇ ನೀವೂ ಸಹ ಸ್ತುತಿರೂಪವಾದ ವಾಕ್ಕನ್ನು ಪಠಿಸಿರಿ. ಸೋಮರಸವನ್ನು ಹಿಂಡತಕ್ಕ ಗ್ರಾವಗಳೆಲ್ಲವೂ ಋತ್ವಿಕ್ಕುಗಳೊಡನೆ ಸೇರಿಕೊಂಡು ಶ್ರಾವ್ಯವಾದ ಘೋಷವನ್ನುಂಟುಮಾಡಲಿ.

**ಏತೇ ವದಂತಿ ಶತವತ್ಸಹಸ್ರವದಭಿ ಕ್ರಂದಂತಿ ಹರಿತೇಭಿರಾಸಭಿಃ ।**
**ವಿಷ್ಟ್ವೀ ಗ್ರಾವಾಣಃ ಸುಕೃತಃ ಸುಕೃತ್ಯಯಾ ಹೋತುಶ್ಚಿತ್ಪೂರ್ವೇ ಹವಿರದ್ಯಮಾಶತ ॥ ೨ ॥**

ಶತಸಂಖ್ಯಾತರೂ, ಸಹಸ್ರಸಂಖ್ಯಾತರೂ ಆದ ಮಾನವರು ಒಟ್ಟಿಗೆ ಮಾತುಗಳನ್ನಾಡುವಾಗ ಶಬ್ದಮಾಡುವಂತೆ ಈ ಗ್ರಾವಗಳೂ ಶಬ್ದಮಾಡುತ್ತವೆ ಮತ್ತು ಸೋಮವನ್ನು ನಿರ್ದೇಶಿಸಿ ದೇವತೆಗಳಿಗೆ ಆಹ್ವಾನವನ್ನು ಕೊಡುತ್ತವೆ.

**ಏತೇ ವದಂತ್ಯವಿದನ್ನನಾ ಮಧು ನ್ಯೂಂಖಯಂತೇ ಅಧಿ ಪಕ್ವ ಆಮಿಷಿ ।**
**ವೃಕ್ಷಸ್ಯ ಶಾಖಾಮರುಣಸ್ಯ ಬಪ್ಸತಸ್ತೇ ಸೂಭರ್ವಾ ವೃಷಭಾಃ ಪ್ರೇಮರಾವಿಷುಃ ॥ ೩ ॥**

ಅರುಣವರ್ಣದ ವೃಕ್ಷದ ಶಾಖೆಯನ್ನು ಭಕ್ಷಿಸುವ ಶ್ರೇಷ್ಠವಾದ ವೃಷಭಗಳು ಯಾವ ರೀತಿಯಲ್ಲಿ ಶಬ್ದಮಾಡುತ್ತವೆಯೋ ಪಕ್ವವಾದ ಮಾಂಸವನ್ನು ಭಕ್ಷಿಸತಕ್ಕ ಪ್ರಾಣಿಗಳು ಯಾವ ರೀತಿಯಲ್ಲಿ ಶಬ್ದವನ್ನು ಮಾಡುತ್ತವೆಯೋ ಅದೇ ರೀತಿಯಲ್ಲಿ ಈ ಗ್ರಾವಗಳೂ ಶಬ್ದವನ್ನುಂಟುಮಾಡುತ್ತವೆ.

**ಬೃಹದ್ವದಂತಿ ಮದಿರೇಣ ಮಂದಿನೇಂದ್ರಂ ಕ್ರೋಶಂತೋಽವಿದನ್ನನಾ ಮಧು ।**
**ಸಂರಭ್ಯಾ ಧೀರಾಃ ಸ್ವಸೃಭಿರನರ್ತಿಷುರಾಘೋಷಯಂತಃ ಪೃಥಿವೀಮುಪಬ್ದಿಭಿಃ ॥ ೪ ॥**

ಮದಕಾರಕವಾದ ಸೋಮದಿಂದ ಇಂದ್ರನನ್ನು ಆಹ್ವಾನಿಸುತ್ತಾ ಬೃಹತ್ತಾದ ಶಬ್ದವನ್ನು ಮಾಡುತ್ತಿವೆ. ತಮ್ಮ ಆಘೋಷದಿಂದ ಪೃಥ್ವಿಯನ್ನೆಲ್ಲಾ ತುಂಬುತ್ತಾ ಅಂಗುಲಿಗಳೊಡನೆ ನರ್ತನವನ್ನು ಮಾಡುತ್ತವೆ.

**ಉಗ್ರಾ ಇವ ಪ್ರವಹಂತಃ ಸಮಾಯಮುಃ ಸಾಕಂ ಯುಕ್ತಾ ವೃಷಣೋ ಬಿಭ್ರತೋ ಧುರಃ ।**
**ಯಚ್ಛ್ವಸಂತೋ ಜಗ್ರಸಾನಾ ಅರಾವಿಷುಃ ಶೃಣ್ವ ಏಷಾಂ ಪ್ರೋಥಥೋ ಅರ್ವತಾಮಿವ ॥ ೬ ॥**

ಯಜ್ಞದ ನಿರ್ವಹಣದ ಭಾರವನ್ನು ವಹಿಸಿರತಕ್ಕ ಈ ಗ್ರಾವಗಳು ಸೋಮದ ಭಾರವನ್ನು ಹೊತ್ತುಕೊಂಡು ರಥವನ್ನು ಎಳೆಯುತ್ತಿರುವವೂ ಉಗ್ರವೂ ಆದ ಅಶ್ವಗಳು ತಮ್ಮ ಮುಖಗಳಿಂದ ಹೇಷಾರವವನ್ನು ಮಾಡುವಂತೆ ಶಬ್ದ ಮಾಡುತ್ತವೆ.

**ಧ್ರುವಾ ಏವ ವಃ ಪಿತರೋ ಯುಗೇಯುಗೇ ಕ್ಷೇಮಕಾಮಾಸಃ ಸದಸೋ ನ ಯುಂಜತೇ ।**
**ಅಜುರ್ಯಾಸೋ ಹರಿಷಾಚೋ ಹರಿದ್ರವ ಆ ದ್ಯಾಂ ರವೇಣ ಪೃಥಿವೀಮಶುಶ್ರವುಃ ॥ ೧೨ ॥**

ಎಲೈ ಗ್ರಾವಗಳೇ, ಯುಗಗಳು ವ್ಯತ್ಯಸ್ತವಾದರೂ ಸಹ ನಿಶ್ಚಲವಾಗಿ ನಿಂತಿರತಕ್ಕವೂ, ನಿಮ್ಮ ಪಿತೃಭೂತವೂ ಆದ ಪರ್ವತಗಳು ದ್ಯಾವಾಪೃಥಿವಿಗಳನ್ನು ತಮ್ಮ ಅಭಿಷವ ಶಬ್ದದಿಂದ ತುಂಬುತ್ತವೆ.

**ಸುತೇ ಅಧ್ವರೇ ಅಧಿ ವಾಚಮಕ್ರತಾಕ್ರೀಳಯೋ ನ ಮಾತರಂ ತುದಂತಃ ।**
**ವಿ ಷೂ ಮುಂಚಾ ಸುಷುವುಷೋ ಮನೀಷಾಂ ವಿ ವರ್ತಂತಾಮದ್ರಯಶ್ಚಾಯಮಾನಾಃ ॥ ೧೪ ॥**

ತಾಯಿಯನ್ನು ಪೀಡಿಸುತ್ತಾ ಮಕ್ಕಳು ಆಟವಾಡುವಾಗ ಯಾವ ಶಬ್ದಗಳನ್ನು ಮಾಡುತ್ತವೆಯೋ, ಹಾಗೆಯೇ ಗ್ರಾವಗಳೂ ಸಹ ಯಜ್ಞಗೃಹದಲ್ಲಿ ಸಂತೋಷಕಾರಕವಾದ ಶಬ್ದವನ್ನುಂಟುಮಾಡುತ್ತವೆ. ಇತ್ಯಾದಿಯಾಗಿ **ಗ್ರಾವಗಳೂ** ಸಹ ಮಾನವಾದಿಗಳನ್ನನುಸರಿಸಿ ಇಂದ್ರಾದಿಗಳಿಗೆ ಸೋಮವನ್ನು ಸಿದ್ಧಪಡಿಸುವುದೂ ಚಿತ್ತಾಕರ್ಷಕವಾಗಿರುವುದೂ ಆದ ತಮ್ಮ ಸ್ವಂತ ಭಾಷೆಯಿಂದ ದೇವತೆಗಳಿಗೆ ಆಹ್ವಾನವನ್ನೀಯುತ್ತಿದೆಯೆಂದರ್ಥ. ಆದುದರಿಂದ **ಯತ್ರ ಗ್ರಾವಾ ವದತಿ ತತ್ರ ಗಚ್ಛತಂ** ಎಂದು ಪ್ರಾರ್ಥಿಸಿದೆ.

**ಸೂನೃತಾ ವಿ ದದೃಶೇ—ಸೂನೃತಾ** ಎಂಬ ಪದಕ್ಕೆ **ಪ್ರಿಯಸತ್ಯಾತ್ಮಿಕಾ ಸ್ತುತಿರೂಪಾ ವಾಕ್ ।** ಪ್ರಿಯವೂ ಸತ್ಯಾತ್ಮಿಕವಾದುದೂ ಆದ ಸ್ತುತಿರೂಪವಾದ ವಾಕ್ಕೆಂದು ಸಾಯಣರು ವಿವರಿಸಿದ್ದಾರೆ. ಅಲ್ಲಿ ಮೂರು ವಿಧವಾದ ಸ್ತುತಿಯಿರುತ್ತದೆ. ಮೊದಲನೆಯದಾಗಿ **ಗ್ರಾವದ** ಸ್ತುತಿಯೂ, ಎರಡನೆಯದಾಗಿ **ಸೋಮದ** ಸ್ತುತಿಯೂ, ಮೂರನೆಯದಾಗಿ **ಇಂದ್ರಾದಿಗಳ** ಸ್ತುತಿಯೂ ಇರುತ್ತದೆ.

**ಆ ವ ಋಂಜಸ ಊರ್ಜಾಂ ವ್ಯುಷ್ಟಿಷ್ವಿಂದ್ರಂ ಮರುತೋ ರೋದಸೀ ಅನಕ್ತನ ।**

(ಋ. ಸಂ. ೧೦-೭೬-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತದಲ್ಲೂ,

**ಪ್ರ ವೋ ಗ್ರಾವಾಣಃ ಸವಿತಾ ದೇವಃ ಸುವತು ಧರ್ಮಣಾ । ಧೂರ್ಷು ಯುಜ್ಯಧ್ವಂ ಸುನುತ ॥**

(ಋ. ಸಂ. ೧೦-೧೭೫-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತದಲ್ಲೂ,

**ಆ ದದೇ ಗ್ರಾವಾಸ್ಯಧ್ವರಕೃದ್ದೇವೇಭ್ಯೋ ಗಂಭೀರಮಿಮಮಧ್ವರಂ ಕೃಧಿ ।**

(ತೈ. ಸಂ. ೧-೪-೧)

ಇತ್ಯಾದಿ ತೈತ್ತಿರೀಯ ಸಂಹಿತೆಯ ಮಂತ್ರಗಳಲ್ಲೂ ಸಹ **ಗ್ರಾವಸ್ತುತ್ತೆಂಬ** ಋತ್ವಿಕ್ಕಿನಿಂದ ಪಠಿತವಾಗುವ ಗ್ರಾವದ ಸ್ತುತಿಯಿರುವುದು. ಸೋಮರಸವನ್ನು ಹಿಂಡುವ ಕಾಲದಲ್ಲಿ ಈ ಸ್ತುತಿಯು ಆಯಾ ಕಾಲಕ್ಕೆ ತಕ್ಕಂತೆ ಪಠಿಸಲ್ಪಡುವುದು. ಇದರಂತೆಯೇ,

**ಯತ್ತೇ ಸೋಮ ದಿವಿ ಜ್ಯೋತಿರ್ಯತ್ಪೃಥಿವ್ಯಾಂ ಯದುರಾವಂತರಿಕ್ಷೇ............ ।**

(ತೈ. ಸಂ. ೧-೪-೧)

ಇತ್ಯಾದಿ ಮಂತ್ರಗಳಿಂದ **ಸೋಮದ** ಸ್ತುತಿಯೂ,

**ಆ ವಾಯೋ ಭೂಷ ಶುಚಿಪಾ ಉಪ ನಃ ಸಹಸ್ರಂ ತೇ ನಿಯುತೋ ವಿಶ್ವವಾರ ।**

(ತೈ. ಸಂ. ೧-೪-೪)

ಇತ್ಯಾದಿ ಮಂತ್ರಗಳಿಂದ ವಾಯ್ವಾದಿ ದೇವತೆಗಳ ಸ್ತುತಿಯೂ ಸಹ ಪಠಿತವಾಗುವುದರಿಂದ ಸೋಮಗೃಹದಲ್ಲಿ **ಸೂನೃತಾವಿ ದದೃಶೇ** ಎಂದು ಇಂದ್ರವಾಯುಗಳನ್ನುದ್ದೇಶಿಸಿ ಹೇಳಿದೆ.

**ಘೃತಂ ರೀಯತೇ**— ಹೋಮಾರ್ಥವಾಗಿ ಘೃತವು ಒಯ್ಯಲ್ಪಡುತ್ತದೆ ಎಂದು ಮಾನವರಿಗೆ ಆಯುರ್ವರ್ಧಕವಾದುದೂ, ಇಂದ್ರಾದಿಗಳಿಗೆ ಪುಷ್ಟಿಕರವಾದುದೂ ಆದ ಘೃತದ ಮಹತ್ತನ್ನು ಸೂಚಿಸಿ ಅಂತಹ ಘೃತವೂ ಸಹ ಇಂದ್ರಾವಾಯುಗಳಿಗೆ ಅರ್ಪಿತವಾಗುವುದೆಂಬುದನ್ನು ತಿಳಿಸಿದೆ. **ಗ್ರಾವಾ ವದತಿ, ಸೂನೃತಾ ವಿ ದದೃಶೇ** ಎಂಬುದರಿಂದ ಗ್ರಾವವು ರಸವನ್ನು ಹಿಂಡುವಾಗ ಇಂದ್ರಾದಿಗಳಿಗೆ ಆ ಶಬ್ದದಿಂದ ಹರ್ಷವಾಗುವಂತೆಯೂ, ದೇವತಾ ಸ್ತೋತ್ರದಿಂದಲೂ ದೇವತೆಗಳಿಗೆ ಹರ್ಷವುಂಟಾಗುವಂತೆಯೂ, ಆಹವನೀಯಾದಿಗಳಿಗೆ ಘೃತವು ಹೋಗುತ್ತಿರುವಾಗಲೂ ಸಹ ಅದೇ ಸಂತೋಷವುಂಟಾಗುತ್ತದೆಂದು ಭಾವವು.

**ಶಶ್ವತಃ**— ಈ ಪದವನ್ನು **ಬಹು** ನಾಮಗಳಲ್ಲಿ ಸೇರಿಸಿದೆ (ನಿ. ೩-೧). ಈ ಋಕ್ಕಿನಲ್ಲಿ **ಶಶ್ವತಃ** ಎನ್ನುವುದಕ್ಕೆ **ಬಹೂನ್ ಯಜಮಾನಾನ್** ಎಂದರ್ಥಮಾಡಿದೆ. ಕರ್ಮನಿಷ್ಠರಾದ ಯಜ್ಞಕರ್ತರು ಕರ್ಮದಲ್ಲಿ ಅಶ್ರದ್ಧೆಯನ್ನು ತೋರಿಸುವವರ ವಿಷಯದಲ್ಲಿ ಒಂದು ವಿಧವಾದ ತಿರಸ್ಕಾರ ಬುದ್ಧಿಯನ್ನು ತೋರಿಸುವುದು ಋಕ್ಸಂಹಿತಾವಾಕ್ಯಗಳಿಂದ ಬಹಳವಾಗಿ ತಿಳಿದುಬರುತ್ತದೆ.

**ನೋ ಷು ಬ್ರಹ್ಮೇವ ತಂದ್ರಯುರ್ಭುವೋ ವಾಜಾನಾಂ ಪತೇ । ಮತ್ಸ್ವಾ ಸುತಸ್ಯ ಗೋಮತಃ ॥**

(ಋ. ಸಂ. ೮-೯೨-೩೦)

ಯಾಗಾದಿ ಕರ್ಮಗಳಲ್ಲಿ ಕರ್ತವ್ಯನಿಷ್ಠರಾಗದೆ ಅಲಸರಾಗಿರುವ ಮಾನವರಂತೆ ನೀನೂ ಅಲಸನಾಗಬೇಡ ಎಂದು ಇಂದ್ರನನ್ನು ಉದ್ದೇಶಿಸಿ ಹೇಳಿದೆ. ಪ್ರಕೃತವಾದ ಋಕ್ಕಿನಲ್ಲಿ ಅದೇ ತಿರಸ್ಕಾರ ಬುದ್ಧಿಯನ್ನು **ಸಸತಃ ಶಶ್ವತಃ ಅತಿಯಾಹಿ** ಅಲಸರಾಗಿ ಕರ್ತವ್ಯನಿಷ್ಠರಲ್ಲದೆ ಇರುವ ಅನೇಕರನ್ನು ಅಲಕ್ಷಿಸಿ, ಅವರಲ್ಲಿ ದಯವಿಡದೆ, ನಮ್ಮ ಯಾಗಕ್ಕೆ ಬಂದುಬಿಡು ಎಂದು ವಾಯುವನ್ನುದ್ದೇಶಿಸಿ ಕರ್ಮಮಾಡದಿರುವ ಯಜಮಾನರಲ್ಲಿ ತಿರಸ್ಕಾರವನ್ನು ತೋರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸಸತಃ**—ಷಸ ಸ್ವಪ್ನೇ. ಧಾತು. ಅದಾದಿ. ಲಟಿಗೆ ಶತ್ರಾದೇಶ. ದ್ವಿತೀಯಾ ಬಹುವಚನಾಂತರೂಪ. ನುಮ್ ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯ**—(ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ವದತಿ**—ವದ ವ್ಯಕ್ತಾಯಾಂ ವಾಚಿ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯತ್ರ ಎಂಬುದರ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಗಚ್ಛತಂ**—ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಮಕಾರಕ್ಕೆ ಛಕಾರಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ದದೃಶೇ**—ದೃಶಿರ್ ಪ್ರೇಕ್ಷಣೇ. ಧಾತು. ಛಾಂದಸವಾಗಿ ಕರ್ಮಣಿಯಲ್ಲಿ ಲಿಟ್. ಪ್ರಥಮಪುರುಷ ಏಕ ವಚನಾಂತರೂಪ. ಪ್ರತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ರೀಯತೇ**—ರೀಙ್ ಸ್ರವಣೇ. ಧಾತು. ದಿವಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶ್ಯನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನಿಯುತಾ**—ವಾಯುವಿನ ಕುದುರೆಗಳು ಅನೇಕಗಳಾದರೂ ಜಾತಿವಾಚಕ ಪದವಾದುದರಿಂದ ಏಕವಚನದಲ್ಲಿ ಪ್ರಯುಕ್ತವಾಗಿದೆ.

**ಯಾಥಃ**—ಯಾ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ಅತ್ರಾಹ ತದ್ವಹೇಥೇ ಮಧ್ವ ಆಹುತಿಂ ಯಮಶ್ವತ್ಥಮುಪತಿಷ್ಠಂತ ಜಾಯ-
ವೋಽಸ್ಮೇ ತೇ ಸಂತು ಜಾಯವಃ ।
ಸಾಕಂ ಗಾವಃ ಸುವತೇ ಪಚ್ಯತೇ ಯವೋ ನ ತೇ ವಾಯ ಉಪ ದಸ್ಯಂತಿ
ಧೇನವೋ ನಾಪ ದಸ್ಯಂತಿ ಧೇನವಃ ॥ ೮ ॥

॥ ಪದಪಾಠಃ ॥

ಅತ್ರ । ಅಹ । ತತ್ । ವಹೇಥೇ ಇತಿ । ಮಧ್ವಃ । ಆಽಹುತಿಂ । ಯಂ । ಅಶ್ವತ್ಥಂ । ಉಪಽತಿಷ್ಠಂತ ।
ಜಾಯವಃ । ಅಸ್ಮೇ ಇತಿ । ತೇ । ಸಂತು । ಜಾಯವಃ ।

ಸಾಕಂ । ಗಾವಃ । ಸುವತೇ । ಪಚ್ಯತೇ । ಯವಃ । ನ । ತೇ । ವಾಯೋ ಇತಿ । ಉಪ । ದಸ್ಯಂತಿ ।
ಧೇನವಃ । ನ । ಅಪ । ದಸ್ಯಂತಿ । ಧೇನವಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರವಾಯೂ ಅತ್ರಾಹಾಸ್ಮಿನ್ನೇವ ಯಜ್ಞೇ ॥ ಅಹೇತಿ ವಿನಿಗ್ರಹಾರ್ಥೀಯಃ ॥ ಮಧ್ವೋ ಮಧುರಸ್ಯ ಮಧುಸದೃಶಸ್ಯ ವಾ ತತ್ ತಸ್ಯಾಹುತಿಂ ಪ್ರದೇಯದ್ರವ್ಯಂ ವಹೇಥೇ । ಧಾರಯತಂ । ಯಂ ಸೋಮಮಶ್ವತ್ಥಂ ಪರ್ವತಾದಿವ್ಯಾಪ್ತಿಪ್ರದೇಶೇ ಸ್ಥಿತಂ ಜಾಯವೋ ಜೇತಾರೋ ಯಜಮಾನಾ ಉಪತಿಷ್ಠಂತ ಉಪೇತ್ಯ ತಿಷ್ಠಂತಿ ಕ್ರಯಾದ್ಯರ್ಥಂ । ಕಿಂಚಾಸ್ಮೇ ಅಸ್ಮಾಕಂ ಸಂಬಂಧಿನೋ ಜಾಯವೋ ಜೇತಾರಃ ಕರ್ಮನಿರ್ವಹಿತಾರಸ್ತ ಋತ್ವಿಜಃ ಸಂತು । ಸಮರ್ಥಾ ಭವಂತು । ಯಜ್ಞಂ ನಿರ್ವಹಂತ್ವಿತ್ಯರ್ಥಃ । ಯದ್ವಾ । ತೇ ಪ್ರಸಿದ್ಧಾಃ ಪ್ರಯೋಗಕುಶಲಾ ಜಾಯವೋ ಜೇತಾರ ಋತ್ವಿಜೋಽಸ್ಮೇ ಸಂತು ನಾನ್ಯಸ್ಯ । ಅತ್ರ ವಹೇಥೇ ಇತ್ಯುಕ್ತಂ ಕೋಽತ್ರ ವಿಶೇಷ ಇತಿ ತತ್ರಾಹ । ಹೇ ಇಂದ್ರವಾಯೂ ಅಸ್ಮಿನ್ಯಜ್ಞೇ ಗಾವೋ ಧೇನವಃ ಸಾಕಂ ಸಹೈವ ಸುವತೇ । ಯುಷ್ಮದರ್ಥಮೇವ ಕ್ಷೀರಮುತ್ಪಾದಯಂತಿ । ದೋಗ್ಧ್ರ್ಯೋ ಭವಂತೀತ್ಯರ್ಥಃ ! ಯದ್ವಾ । ಗಾವಃ ಸಾಕಂ ಸಹೈವ ಸುವತೇ । ಅಪತ್ಯಮುತ್ಪಾದಯಂತಿ ತ್ವದ್ದೋಹನಾರ್ಥಂ ॥ ಅದಾದಿಕಃ । ಜುತ್ವಾತ್ತಾಸ್ಯನುದಾತ್ತೇದಿತಿ ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ ॥ ಕಿಂಚ ಯವಃ । ಜಾತಾವೇಕವಚನಂ । ಉಪಲಕ್ಷಣಮೇತತ್ । ಯವಾದಿಭಿಃ ಪುರೋಡಾಶಾದಿಕಂ ಪಚ್ಯತ ಇತ್ಯರ್ಥಃ । ಕಿಂಚ ಹೇ ವಾಯೋ ಇಂದ್ರ ಚ ಯತೋ ಗಾವ ಏವಂ ಸುವತೇ ಅತಸ್ತೇ ತ್ವದರ್ಥಾ ಧೇನವೋ ನೋಪ ದಸ್ಯಂತಿ । ನೋಪಕ್ಷೀಣಾ ಭವಂತಿ । ರೋಗಾದಿನಾ ಕೃಶಾ ನ ಭವಂತಿ । ನ ಕೇವಲಮನುಪಕ್ಷೀಣಾಃ ಕಿಂತು ಧೇನವೋ ಯುಷ್ಮತ್ಪ್ರೀಣಯಿತ್ರ್ಯೋ ಗಾವೋ ನಾಪ ದಸ್ಯಂತಿ । ಚೌರಾದ್ಯುಪಹಾರ್ಯೈರುಪಕ್ಷೀಣಾ ನಷ್ಟಾ ನ ಭವಂತಿ ॥

॥ ಪ್ರತಿಪದಾರ್ಥ ॥

**ಹೇ ಇಂದ್ರವಾಯೂ**—ಎಲೈ ಇಂದ್ರವಾಯುಗಳೇ (ನೀವಿಬ್ಬರು) । **ಜಾಯವಃ**—ಜಯಶೀಲರಾದ ಯಜಮಾನರು । **ಅಶ್ವತ್ಥಂ**—ಅಶ್ವತ್ಥವೃಕ್ಷ ಸಮೀಪದಲ್ಲಿರುವ । **ಯಂ**—ಯಾವ ಸೋಮರಸವನ್ನು । **ಉಪತಿಷ್ಠಂತ**—ಸಮೀಪಿಸಿ ನಿಂತುಕೊಳ್ಳುತ್ತಾರೋ । **ಅತ್ರ ಅಹ**—ಈ ಯಜ್ಞಶಾಲೆಯಲ್ಲಿಯೇ । **ಮಧ್ವಃ**—ಮಧುರವಾದ । **ತತ್**—ಆ ಸೋಮರಸದ । **ಆಹುತಿಂ**—ಆಹುತಿಯನ್ನು । **ವಹೇಥೇ**—ಸ್ವೀಕರಿಸಿ । (**ಕಿಂಚ**—ಮತ್ತು) । **ಅಸ್ಮೇ**—ನಮ್ಮವರಾದ । **ಜಾಯವಃ**—ಸಮರ್ಥರಾದ (ಕರ್ಮನಿರ್ವಾಹಕರಾದ) । **ತೇ**—ಆ ಋತ್ವಿಜರು । **ಸಂತು**—(ಸಮರ್ಥ) ರಾಗಲಿ [ (ಅಥವಾ) । **ಜಾಯವಃ**—ಸಮರ್ಥರಾದ । **ತೇ**—ಆ ಋತ್ವಿಜರು । **ಅಸ್ಮೇ**—

ನಮಗೋಸ್ಕರ | **ಸಂತು**—ಇರಲಿ | ] ( **ಹೇ ಇಂದ್ರವಾಯೂ**—ಎಲೈ ಇಂದ್ರವಾಯುಗಳೇ | **ಇಹ**- ಈ ಯಜ್ಞದಲ್ಲಿ) | **ಗಾವಃ**—ಗೋವುಗಳು | **ಸಾಕಂ**—(ನಿಮ್ಮಿಬ್ಬರಿಗೆ) ಒಟ್ಟಾಗಿಯೇ | **ಸುವತೇ**—(ಹಾಲು ಕರೆಯುವುದಕ್ಕೋಸ್ಕರ) ಕರುಹಾಕುತ್ತವೆ; [ಅಥವಾ | **ಗಾವಃ**—ಗೋವುಗಳು | **ಸಾಕಂ**—ಒಟ್ಟಾಗಿಯೇ | **ಸುವತೇ**—(ನಿಮಗೆ ಹಾಲು ಒದಗಿಸುವುದಕ್ಕೋಸ್ಕರ) ಕರುಹಾಕುತ್ತವೆ | ] **(ಕಿಂಚ ಇಹ**—ಮತ್ತು ಇಲ್ಲಿ) | **ಯವಃ**—ಯವಧಾನ್ಯವು | **ಪಚ್ಯತೇ**—(ಪುರೋಡಾಶಾದಿಗೋಸ್ಕರ) ಪಾಕಮಾಡಲ್ಪಡುತ್ತದೆ | **ಹೇ ವಾಯೋ (ಇಂದ್ರ)**—ಎಲೈ ವಾಯು ಮತ್ತು ಇಂದ್ರರೇ | **ತೇ**—ನಿಮ್ಮ ಉದ್ದಿಶ್ಯಕವಾಗಿರುವ | **ಧೇನವಃ**—ಗೋವುಗಳು | **ನ ಉಪ ದಸ್ಯಂತಿ**—(ರೋಗಾದಿಗಳಿಂದ) ಕ್ಷೀಣವಾಗುವುದಿಲ್ಲ (ಇಷ್ಟೇ ಅಲ್ಲದೆ) | **ಧೇನವಃ**—ನಿಮಗೆ ಪ್ರೀತಿಜನಕವಾದ ಈ ಗೋವುಗಳು | **ನ ಅಪ ದಸ್ಯಂತಿ**—(ಚೋರಾದಿಗಳಿಂದ) ಅಪಹೃತವಾಗುವುದಿಲ್ಲ.

|| ಭಾವಾರ್ಥ ||

ಜಯಶಾಲಿಗಳಾದ ಯಾಗಕರ್ತೃಗಳು, ಅಶ್ವತ್ಥವೃಕ್ಷದ ಸುತ್ತಲೂ ನಿಂತಿದ್ದಾರೆ; ಇಂಥ ಯಾಗಶಾಲೆಯಲ್ಲಿರುವ ಮಧುರವಾದ ಸೋಮರಸದ ಆಹುತಿಯನ್ನು ಎಲೈ ಇಂದ್ರವಾಯುಗಳೇ, ನೀವಿಬ್ಬರೂ ಸ್ವೀಕರಿಸಿ; ಋತ್ವಿಜರು ನಮಗೋಸ್ಕರ ಯಾಗನಿರ್ವಹಣಸಮರ್ಥರಾಗಿರಲಿ; ಇಲ್ಲಿ ಗೋವುಗಳು ನಿಮಗೆ ಹಾಲು ಒದಗಿಸುವುದಕ್ಕೋಸ್ಕರ ಏಕಕಾಲದಲ್ಲಿ ಪ್ರಸವಿಸುತ್ತವೆ; ಯವಧಾನ್ಯವು ಪಾಕಮಾಡಲ್ಪಟ್ಟಿದೆ; ನಿಮಗಾಗಿ ನಿಯಮಿತವಾಗಿರುವ ಈ ಗೋವುಗಳು ರೋಗಾದಿಗಳಿಂದ ಕ್ಷೀಣವಾಗುವುದಿಲ್ಲ; ಚೋರಾದಿಗಳಿಂದಲೂ ಅಪಹೃತವಾಗುವುದಿಲ್ಲ.

## English Translation

Then, accept the libations of the sweet juice at the sacrifice in which the triumphant priests stand round the rock-born (plant): may they ever be victorious for us: (for you) together the ccws distil (their milk); the (offering of) barley is dressed; and never for you, (Vavu), will the cows grow meagre; never will the cows be carried off (by thieves).

|| ವಿಶೇಷವಿಷಯಗಳು ||

**ಜಾಯವಃ ಅಶ್ವತ್ಥಂ ಯಂ ಉಪತಿಷ್ಠಂತೆ**— ಜಯಶಾಲಿಗಳಾದ ಯಜಮಾನರು **ಅಶ್ವತ್ಥಸ್ಥವ** ದ ಸೋಮವನ್ನು ಆಶ್ರಯಿಸುವಂತೆ ಎನ್ನುವಾಗ ಇಲ್ಲಿ ಅಶ್ವತ್ಥಶಬ್ದಕ್ಕೆ ಸಾಯಣರು ಸರಿಯಾದ ಅರ್ಥವಿವರಣೆಯನ್ನು ಮಾಡಿಲ್ಲ. **ಪರ್ವತಾದಿವ್ಯಾಪ್ತಪ್ರದೇಶೇ ಸ್ಥಿತಂ** ಎಂದು ಅವರು ಮಾಡಿರುವ ವಿವರಣೆಯು ವಿಶದವಾಗಿಲ್ಲ. ಅಶ್ವತ್ಥವೃಕ್ಷವೆಂದು ನಿಷ್ಕೃಷ್ಟವಾಗಿಯೇ ಹೇಳಿದರೆ ತಪ್ಪಾಗಲಾರದು. ಪ್ರಾಯಶಃ ಸೋಮಲತೆಯು ಅಶ್ವತ್ಥವೃಕ್ಷವನ್ನು ಆಶ್ರಯಿಸಿ ಬೆಳೆಯುವುದರಿಂದ ಈ ತಾದಾತ್ಮ್ಯವನ್ನು ಹೇಳಿರಬಹುದು. ಅಶ್ವತ್ಥವೃಕ್ಷವೆಂದಾಗಲಿ, ಆ ವೃಕ್ಷದಿಂದ ಮಾಡಿದ ಪಾತ್ರೆಯೆಂದಾಗಲಿ ಈ ಸಂದರ್ಭದಲ್ಲಿ ಅರ್ಥಮಾಡಬಹುದು. ಆಗ ಜಯಕ್ಕೂ, ಅಶ್ವತ್ಥಸ್ಥವಾದ ಸೋಮರಸಕ್ಕೂ ಕಾರ್ಯಕಾರಣಭಾವವು ವಿಶದವಾಗುತ್ತದೆ.

**ಅಥ ಯದಾಶ್ವತ್ಥಾನಿ ತೇಜಸೋ ವಾ ಏಷ ವನಸ್ಪತಿರಜಾಯತ ಯದಶ್ವತ್ಥಃ ಸಾಮ್ರಾಜ್ಯಂ ವಾ ಏತದ್ವನಸ್ಪತೀನಾಂ ತೇಜ ಏವಾಸ್ಮಿಂಸ್ತತ್ಸಾಮ್ರಾಜ್ಯಂ ಚ ವನಸ್ಪತೀನಾಂ ಕ್ಷತ್ರೇ ದಧಾತಿ |**

(ಐ. ಬ್ರಾ. ೭-೩೨)

ಅಶ್ವತ್ಥವು ತೇಜಸ್ಸಿನಿಂದ ಉತ್ಪನ್ನವಾದುದು. ವನಸ್ಪತಿಗಳಿಗೆಲ್ಲಾ ಇದೇ ಪ್ರಭುವು. ಮತ್ತು ಕ್ಷಾತ್ರತೇಜಸ್ಸಿಗೆ ಆಧಾರವಾಗಿದೆ-

**ಏತಾನ್ಯಸ್ಯ ಪುರಸ್ತಾದುಪಕ್ಲೃಪ್ತಾನಿ ಭವಂತ್ಯಥ ಸೋಮಂ ರಾಜಾನಂ ಕ್ರೀಣಂತಿ ।**

(ಐ. ಬ್ರಾ. ೭–೩೨)

ಅಶ್ವತ್ಥಾದಿಗಳ ಅವಯವಗಳು (ಪಾತ್ರೆಗೆ ಯೋಗ್ಯವಾದವು) ಸಂಪಾದಿತವಾದನಂತರ ಕ್ಷತ್ರಿಯನಿಗಾಗಿ ಅಧ್ವರ್ಯುವು ಸೋಮವನ್ನು ಕೊಳ್ಳುತ್ತಾನೆ; ಇತ್ಯಾದಿಯಾಗಿ ಕ್ಷಾತ್ರತೇಜಸ್ಸಿಗೂ ಮತ್ತು ಅಶ್ವತ್ಥಕ್ಕೂ ಸಂಬಂಧವಿರುವುದೆಂದು ವಿವರಿಸಿದೆ. ಅಲ್ಲದೆ,

**ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ ತದ್ಯೈರಂ ಮದೀಯಂ ಸರಸ್ತದಶ್ವತ್ಥಃ ಸೋಮಸವನ-ಸ್ತದಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಂ ಹಿರಣ್ಮಯಂ ।**

(ಛಾ. ಉ. ೮-೫-೩)

ಬ್ರಹ್ಮಲೋಕದಲ್ಲಿ ಸೋಮರಸವನ್ನು ಸುರಿಸುವ ಅಶ್ವತ್ಥವೃಕ್ಷವಿರುವುದೆಂದು ಛಾಂದೋಗ್ಯಾದಿಗಳಲ್ಲಿ ವರ್ಣಿಸಿದೆ. ಆದ್ದರಿಂದ ಪರ್ವತಾದಿಗಳಲ್ಲಿ ಪ್ರಸಿದ್ಧವಾದ ಅಶ್ವತ್ಥವೃಕ್ಷಗಳನ್ನಾಶ್ರಯಿಸಿರುವ ಸೋಮಲತೆಗಳ ರಸಗಳು ಎಂದು ಇಲ್ಲಿ ಅರ್ಥಮಾಡಬಹುದೆಂದು ತೋರುತ್ತದೆ. ಜಯವನ್ನು ಅಪೇಕ್ಷಿಸತಕ್ಕ ಯಜಮಾನನು ಈ ಸೋಮರಸವನ್ನರ್ಪಿಸಿ, ಯಜ್ಞಮಾಡಿ ತಾನೂ ಸಹ ಈ ರಸವನ್ನು ಪಾನಮಾಡಬೇಕು.

**ಜಾಯವಃ**—ಎಂಬ ಪದವು ದ್ವಿರುಕ್ತವಾಗಿದೆ. ಮೊದಲನೆಯ ಪದಕ್ಕೆ ಜಯವನ್ನು ಅಪೇಕ್ಷಿಸುವ ಯಜಮಾನರೆಂದೂ, ಎರಡನೆಯ ಪದಕ್ಕೆ ಯಜ್ಞವನ್ನು ನಿರ್ವಹಿಸಿ ಜಯವನ್ನು ಪಡೆಯುವ ಸಾಮರ್ಥ್ಯವುಳ್ಳ ಋತ್ವಿಕ್ಕುಗಳೆಂದೂ ಅರ್ಥಮಾಡಿದೆ.

**ಸಾಕಂ ಗಾವಃ ಸುವತೇ**—ಇತ್ಯಾದಿ ಸ್ತುತಿಗಳಿಂದ ಇಂದ್ರವಾಯುಗಳು ಗೋವುಗಳ ಪಾಲಕರೆಂದೂ, ಅವರಿಗಾಗಿ ಗೋವುಗಳು ಪ್ರಭೂತವಾಗಿ ಕ್ಷೀರಾದಿಗಳನ್ನು ಕೊಡುವುದೆಂದೂ, ಅವರ ರಕ್ಷಣೆಯಿಂದ ಅವುಗಳು ವ್ಯಾಧಿರಹಿತವಾಗಿ ಕ್ಷೇಮವಾಗಿರುವುವೆಂದೂ ಹೇಳಿದೆ.

**ಯದಾಹ ನಿಯುದ್ಭಿರ್ವಾಯವಿಹ ತಾ ವಿಮುಂಚೇತಿ ಪಶವೋ ವೈ ನಿಯುತಸ್ತತ್ಪಶುಭಿರೇವೈತ-ತ್ಪಾತ್ರಾಣಿ ವಿಮುಚ್ಯಂತೇ ।**

(ಶ ಬ್ರಾ. ೪-೪-೧-೧೭)

ಇತ್ಯಾದಿ ವಾಕ್ಯಗಳಲ್ಲಿ ವಾಯುವಿನೊಡನೆ ಸತತವಾಗಿ ಸಾಹಚರ್ಯವನ್ನಿಟ್ಟುಕೊಂಡಿರತಕ್ಕ ನಿಯುತಗಳೇ ಪಶುಗಳೆಂದು ಹೇಳಿ ವಾಯುವು ಸರ್ವಪಶುಗಳಿಗೂ ಪಾಲಕನೆಂದೂ ಪ್ರಭುವೆಂದೂ ಹೇಳಿದೆ

**ದ್ರೋಣಾಶಂ ಸಖ್ಯಂ ತವ ಗೌರಸಿ ವೀರ ಗವ್ಯತೇ । ಅಶ್ವೋ ಅಶ್ವಾಯತೇ ಭವ ॥**

(ಋ. ಸಂ. ೬–೪೫–೨೬)

ಗೋವನ್ನು ಅಪೇಕ್ಷಿಸಿದ ಯಜಮಾನನಿಗೆ ಇಂದ್ರನೇ ಗೋರೂಪದಲ್ಲಿಯೂ, ಅಶ್ವವನ್ನಪೇಕ್ಷಿಸಿದವನಿಗೆ ಅಶ್ವರೂಪ ದಲ್ಲಿಯೂ ಇದ್ದು ಅವನಿಗೆ ಸಹಾಯ ಮಾಡುತ್ತಾನೆ. ಇತ್ಯಾದಿಯಾಗಿ ವರ್ಣಿಸಿರುವುದರಿಂದ ಇಂದ್ರಾವಾಯುಗಳ ಸಹಾಯದಿಂದ ಸುರಕ್ಷಿತಗಳಾದ ಗೋಸಂಪತ್ತನ್ನು ಪಡೆಯಬಹುದೆಂದು ಆಶಿಸಿದೆ.

**ಐಂದ್ರವಾಯವಸ್ತವದ ಉಪಸಂಹಾರ :—**

ಈ ಸೂಕ್ತದಲ್ಲಿ ಇಂದ್ರ ಮತ್ತು ವಾಯುಗಳನ್ನು ಒಟ್ಟಿಗೆ ಉದ್ದೇಶಿಸಿ ಸೋಮರಸದ ಅರ್ಪಣೆಗೆ ಆಹ್ವಾನವನ್ನು ಇತ್ತಿದೆ. ಈ ಸಂದರ್ಭದಲ್ಲಿ ಸೋಮವನ್ನು ತರುವುದು, ರಸವನ್ನು ಹಿಂಡುವುದು ಮತ್ತು ವಿಧ್ಯುಕ್ತವಾದ ಆಯಾ ಪಾತ್ರೆಗಳಲ್ಲಿ ಶಾಸ್ತ್ರೋಕ್ತವಾಗಿ ಸೇರಿಸುವುದು ಮತ್ತು ಆಹುತಿರೂಪದಲ್ಲಿ ಅರ್ಪಿಸುವುದು ಈ ವಿಷಯಗಳನ್ನು ಆಯಾ ಸಂದರ್ಭಕ್ಕೆ ತಕ್ಕಂತೆ ವಿವರಿಸಿದೆ. ಸೋಮರಸವನ್ನು ಸಿದ್ಧಮಾಡಿ ಅರ್ಪಿಸುವ ಕರ್ಮದಲ್ಲಿ ಮೂರು ವಿಭಾಗವನ್ನು ಮಾಡಿ ಅದಕ್ಕೆ **ಉಪಾಂಶುಗ್ರಹ, ಅಂತರ್ಯಾಮಗ್ರಹ** ಮತ್ತು **ಐಂದ್ರವಾಯವಗ್ರಹ** ಎಂಬ ಹೆಸರಿನಿಂದ ಕರೆಯಲಾಗಿದೆ. ಉಪಾಂಶುಸವನವು ಮಹಾಭಿಷವಕ್ಕೆ ಪೂರ್ವಭಾವಿಯಾದುದು. ಇದರಿಂದ ಉಪಾಂಶುಗ್ರಹದಲ್ಲಿ ಸೋಮರಸವು ಸ್ಥಾಪಿತವಾಗುತ್ತದೆ. ಅಧ್ವರ್ಯು, ಪ್ರತಿಪ್ರಸ್ಥಾತೃ, ಉನ್ನೇತೃ ಇವರುಗಳಿಂದ ಹಿಂಡಲ್ಪಟ್ಟ ರಸವು ಆಧವನೀಯ ಪಾತ್ರೆಗೆ ಸುರಿಯಲ್ಪಟ್ಟು ಅಲ್ಲಿರುವ ವಸತೀವರಿಯೊಡನೆ ಮಿಶ್ರಿತವಾಗಿ ಅನಂತರ ದಶಾಪವಿತ್ರದ ಮೂಲಕ ಪೂತಭೃತ್ತೆಂಬ ಪಾತ್ರೆಗೆ ಸುರಿಯಲ್ಪಡುತ್ತದೆ ಎಂದು ಹಿಂದೆ ಈ ಕ್ರಮವನ್ನು ತಿಳಿಸಿದೆ. ಪ್ರಕೃತದಲ್ಲಿ ಉಪಾಂಶುಗ್ರಹ, ಅಂತರ್ಯಾಮಗ್ರಹ ಮತ್ತು ಐಂದ್ರವಾಯವಗ್ರಹ ಇವುಗಳ ಪ್ರಭಾವವನ್ನೂ ಮಹತ್ವವನ್ನೂ ತಿಳಿಸಲಾಗುತ್ತದೆ. ಋ. ಸಂ. ೧–೧೩೫. ೫ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ **ಅದ್ರಿಭಿಃ ಸುತಾನಾಂ** ಎಂಬ ವಾಕ್ಯಕ್ಕೆ **ಉಪಾಂಶು–ಸವನನೆಂಬ** ವಿಧಿಯಿಂದ ಸೋಮರಸವನ್ನು ಹಿಂಡುವ ಕ್ರಮವನ್ನು ತಿಳಿಸಿದೆ. ಈ ಕ್ರಮವನ್ನು ಏಳು ಭಾಗಗಳನ್ನಾಗಿ ವಿಂಗಡಿಸಿ ವಿವರಿಸಿದೆ. [ತೈ. ಸಂ. ೧–೪–೧ ] ಅದರ ಪ್ರಭಾವವನ್ನು ತೈ ಸಂ. ೬-೪-೪ ರಿಂದ ೬ ವಾಕ್ಯಗಳಲ್ಲಿ ವಿಸ್ತೃತವಾಗಿ ಹೇಳಿರುವುದನ್ನು ಇಲ್ಲಿ ತಿಳಿಸಲಾಗುತ್ತದೆ.

೧. **ಆ ದದೇ ಗ್ರಾವಾಸ್ಯಧ್ವರಕೃತ್—**(ತೈ. ಸಂ. ೧-೪-೧) ಎಂಬ ಮಂತ್ರದಿಂದ ಗ್ರಾವವನ್ನು ಹಿಡಿಯುವಾಗ ಋತ್ವಿಕ್ಕಿಗೆ ದೈವೀಶಕ್ತಿಯು ಪ್ರಾಪ್ತವಾಗುವುದೆಂಬ ವಿವರಣೆಯನ್ನು ಆರನೆಯ ಕಾಂಡದಲ್ಲಿ ವಿಸ್ತರಿಸಿದೆ.

**ದೇವಸ್ಯ ತ್ವಾ ಸವಿತುಃ ಪ್ರಸವ ಇತಿ ಗ್ರಾವಾಣಮಾದತ್ತೇ ಪ್ರಸೂತ್ಯಾ ಅಶ್ವಿನೋರ್ಬಾಹುಭ್ಯಾ-ಮಿತ್ಯಾಹಾಶ್ವಿನೌ ಹಿ ದೇವಾನಾಮಧ್ವರ್ಯೂ ಆಸ್ತಾಂ ಪೂಷ್ಣೋ ಹಸ್ತಾಭ್ಯಾಮಿತ್ಯಾಹ ಯತ್ಯೈ ॥**

(ತೈ. ಸಂ. ೬-೪-೪-೧)

ಅಶ್ವಿನೀದೇವತೆಗಳು ದೇವತೆಗಳ ಅಧ್ವರ್ಯುಗಳು. ಆದುದರಿಂದ ಅವರ ಬಾಹುಗಳ ಸಹಾಯದಿಂದಲೂ, ಅವಲಂಬನಕ್ಕಾಗಿ ಪೂಷನ ಸಹಾಯದಿಂದಲೂ ಸಹ " ಸವಿತೃವಿನ ಪ್ರೇರಣೆಯ ಮೇರೆ " (ಎಂಬ ಮಂತ್ರವನ್ನು ಪಠಿಸಿ) ಗ್ರಾವವನ್ನು ಅಧ್ವರ್ಯುವು ಕೈಯಲ್ಲಿ ಹಿಡಿಯುತ್ತಾನೆ.

೨ **ಇಂದ್ರಾಯ ತ್ವಾ—** ಎಂಬ ಮಂತ್ರದಿಂದ ಸೋಮವನ್ನು ಅಳೆಯುತ್ತಾನೆ.

**ಪಶವೋ ವೈ ಸೋಮೋ ವ್ಯಾನ ಉಪಾಗ್‌ಂಶುಸವನೋ ಯದುಪಾಗ್‌ಂಶುಸವನಮಭಿ-ಮಿಮೀತೇ ವ್ಯಾನಮೇವ ಪಶುಷು ದಧಾತೀಂದ್ರಾಯ ತ್ವೇಂದ್ರಾಯ ತ್ವೇತಿ ಮಿಮಿಾತೆ ಇಂದ್ರಾಯ ಹಿ ಸೋಮ ಆ ಹ್ರಿಯತೇ ಪಂಚಕೃತ್ವೋ ಯಜುಷಾ ಮಿಮಿಾತೇ ಪಂಚಾಕ್ಷರಾ ಪಂಕ್ತಿಃ ಪಾಂಕ್ತೋ ಯಜ್ಞೋ ಯಜ್ಞಮೇವಾವರುಂಧೇ ಪಂಚಕೃತ್ವಸ್ತೂಷ್ಣೀಂ ದಶ ಸಂಪದ್ಯಂತೇ ದಶಾಕ್ಷರಾ ವಿರಾಡನ್ನಂ ವಿರಾಡ್ವಿರಾಜೈವಾನ್ನಾದ್ಯಮವರುಂಧೇ ।**

(ತೈ ಸಂ. ೬-೪-೪-೧, ೨)

ಸೋಮವೇ ಪಶುವು. ಉಪಾಂಶುಸವನವೇ (ಗ್ರಾವವು) ವ್ಯಾನವು. ಇದರಿಂದ ಅಳೆಯುವುದರಿಂದ ಪಶುಗಳಿಗೂ ವ್ಯಾನವನ್ನು ಒದಗಿಸುತ್ತಾನೆ. ಸೋಮವು ಇಂದ್ರನಿಗೆ ಅರ್ಪಿತವಾಗಿರುವುದರಿಂದ " ಇಂದ್ರಾಯ ತ್ವಾ " (ಇಂದ್ರನಿಗಾಗಿ) ಎಂಬ ಮಂತ್ರವನ್ನು ಪಠಿಸಿ ಐದು ಸಲ ಅಳೆಯುತ್ತಾನೆ. ಪಂಚಾಕ್ಷರಗಳುಳ್ಳ **ಪಾಂಕ್ತನೇ** ಯಜ್ಞವಾಗಿರುವುದರಿಂದ ಅವನು ಯಜ್ಞದ ಪ್ರಭಾವವನ್ನು ಪಡೆಯುತ್ತಾನೆ. ಮತ್ತು ನಿಶ್ಶಬ್ದವಾಗಿ ಐದು ಸಲ ಅಳೆಯುತ್ತಾನೆ. ಈ ಪ್ರಮಾಣವು ದಶಸಂಖ್ಯೆಗೆ ವೃದ್ಧಿಯಾಗುತ್ತದೆ. ಹತ್ತಕ್ಷರಗಳುಳ್ಳ **ವಿರಾಟೇ** ಅನ್ನವು ಆದುದರಿಂದ ವಿರಾಟ್ಟಿನಿಂದ ಅನ್ನವನ್ನು ಪಡೆಯುತ್ತಾನೆ.

೩. **ಶ್ವಾತ್ರಾಃ ಸ್ಥ ವೃತ್ರತುರಃ**—ಎಂಬ ಮಂತ್ರದಿಂದ ಉದಕವನ್ನು ಪ್ರೋಕ್ಷಿಸುತ್ತಾನೆ.

**ಶ್ವಾತ್ರಾಃ ಸ್ಥ ವೃತ್ರತುರ ಇತ್ಯಾಹೈಷ ವಾ ಅಪಾಗ್ಂ ಸೋಮಪೀಥೋ ಯ ಏವಂ ವೇದ ನಾಪ್ಸ್ವಾರ್ತಿಮಾರ್ಛತಿ ॥**

ಇದು ಉದಕಗಳ ಸೋಮಪಾನವು. ಈ ಉದಕಗಳ ರಹಸ್ಯವನ್ನು ತಿಳಿದವನಿಗೆ ನೀರಿನಲ್ಲಿ ನಾಶವಿಲ್ಲ.

೪. **ಯತ್ತೇ ಸೋಮ ದಿವಿ ಜ್ಯೋತಿಃ**—ಎಂಬ ಮಂತ್ರದಿಂದ ಉದಕದೊಡನೆ ಸೋಮವನ್ನು ಮಿಶ್ರ ಮಾಡುತ್ತಾನೆ.

**ಯತ್ತೇ ಸೋಮ ದಿವಿ ಜ್ಯೋತಿರಿತ್ಯಾಹೈಭ್ಯ ಏವೈನಂ ಲೋಕೇಭ್ಯಃ ಸಂ ಭರತಿ ।**

(ತ್ತೈ. ಸಂ. ೬-೪-೪-೨)

" ಅಂತರಿಕ್ಷಸ್ಥವಾದ ನಿನ್ನ ತೇಜಸ್ಸಿನೊಡನೆ '' ಎಂದು ಜಪಿಸಿ ಅಲ್ಲಿಂದ ಸೋಮವನ್ನು ಶೇಖರಿಸುತ್ತಾನೆ.

೫. **ಧಿಷಣೇ ವೀಡೂ ಸತೀ**—ಎಂಬ ಮಂತ್ರದಿಂದ ಫಲಕಗಳನ್ನು ಸ್ಪರ್ಶಿಸುತ್ತಾನೆ.

೬. **ಪ್ರಾಗಪಾಕ್**—ಎಂಬುದು **ನಿಗ್ರಾಭ**ವಿಧಿಯು, ಇದನ್ನು ಹಿಂದೆ ತಿಳಿಸಿದೆ.

**ಸೋಮೋ ವೈ ರಾಜಾ ದಿಶೋಽಭ್ಯಧ್ಯಾಯತ್ಸ ದಿಶೋಽನು ಪ್ರಾವಿಶತ್ಪ್ರಾಗಪಾಗುದಗಧರಾಗಿತ್ಯಾಹ ದಿಗ್ಭ್ಯ ಏವೈನಗ್ಂ ಸಂಭರತ್ಯಥೋ ದಿಶ ಏವಾಸ್ಮಾ ಅವ ರುಂಧೇಽಂಬ ನಿಷ್ಟರೇತ್ಯಾಹ ಕಾಮುಕಾ ಏನಗ್ಂ ಸ್ತ್ರಿಯೋ ಭವಂತಿ ಯ ಏವಂ ವೇದ ॥**

(ತ್ತೈ. ಸಂ. ೬-೪-೪-೩)

ಸೋಮರಾಜನು ದಿಕ್ಕುಗಳಲ್ಲಿ ಪ್ರತಿಬಿಂಬಿಸಿದನು '' ಪುರಸ್ತಾತ್, ಪಶ್ಚಾತ್, ಊರ್ಧ್ವಂ, ಅಧಃ '' ಎಂದು ಉಚ್ಚರಿಸಿ ದಿಕ್ಕುಗಳಲ್ಲಿ ಪ್ರವೇಶಿಸಿ ಅಲ್ಲಿಂದ ಸೋಮನನ್ನು ಪಡೆಯುತ್ತಾನೆ '' ಅಂಬ ನಿಷ್ಟರ (ಮಾತೆಯೇ ಹೊರಕ್ಕೆ ಸರಿದು ಬಾ) '' ಎಂಬ ಮಂತ್ರವನ್ನು ಪಠಿಸುತ್ತಾನೆ. ಈ ರಹಸ್ಯವನ್ನು ತಿಳಿದವನು ಸ್ತ್ರೀಯರ ಕಾಮುಕ್ಕೂ ಪಾತ್ರನಾಗುತ್ತಾನೆ.

೭. **ಯತ್ತೇ ಸೋಮಾದಾಭ್ಯಂ**—ಎಂಬ ಮಂತ್ರದಿಂದ ಪ್ರತಿಪ್ರಸ್ಥಾತೃವು ಸೋಮಲತೆಗಳನ್ನು ಕೆಳಗಿಡುತ್ತಾನೆ.

**ಯತ್ತೇ ಸೋಮಾದಾಭ್ಯಂ ನಾಮ ಜಾಗೃವೀತ್ಯಾಹೈಷ ವೈ ಸೋಮಸ್ಯ ಸೋಮಪಥೋ ಯ ಏವಂ ವೇದ ನ ಸೌಮ್ಯಾಮಾರ್ತಿಮಾರ್ಛತಿ ಘ್ನಂತಿ ವಾ ಏತತ್ಸೋಮಂ ಯದಭಿಷುಣ್ವಂತ್ಯಗ್ಂಶೂನಪ ಗೃಹ್ಣಾತಿ ತ್ರಾಯತ ಏವೈನಂ ಪ್ರಾಣಾ ವಾ ಅಗ್ಂಶವಃ ಪಶವಃ ಸೋಮೋಽಗ್ಂ**

**ಶೂನ್ಪುನರಪಿ ಸೃಜತಿ ಪ್ರಾಣಾನೇವ ಪಶುಷು ದಧಾತಿ ದ್ವೌದ್ವಾವಪಿ ಸೃಜತಿ ತಸ್ಮಾದ್ದ್ವೌದ್ವೌ ಪ್ರಾಣಾಃ ||**

(ತೈ. ಸಂ. ೬-೪-೪ ३, ೨)

**" ಯತ್ತೇ ಸೋಮಾದಾಭ್ಯಂ ನಾಮ ಜಾಗೃವಿ "** (ದೋಷರಹಿತವಾದುದೂ, ಪ್ರಬುದ್ಧವಾದುದೂ ಆದ ಸೋಮನೇ) ಎಂಬ ಮಂತ್ರವನ್ನು ಪಠಿಸುತ್ತಾನೆ. ಇದು ಸೋಮರಾಜನಿಗೆ ಸೋಮಪಾನವು. ಈ ತತ್ತ್ವವನ್ನು ತಿಳಿದವನಿಗೆ ಸೋಮನಿಂದ ನಾಶವಿಲ್ಲವು. ಸೋಮನನ್ನು ಹಿಂಡಿದರೆ ಅವನನ್ನು ಕೊಂದಂತೆ. ಅವನು (ಪ್ರತಿಪ್ರಸ್ಥಾತೃವು) ಲತೆಗಳನ್ನು ಹಿಂದಕ್ಕೆ ಇಡುತ್ತಾನೆ. ಆದುದರಿಂದಲೇ ಅವನು ರಕ್ಷಿಸುತ್ತಾನೆ. ಸೋಮದ ಅಂಶುಗಳೇ ಪ್ರಾಣಗಳು. **ಸೋಮನೇ** ಪಶುಗಳು. ಅಂಶುಗಳನ್ನು ಹಿಂಸಿಸದೇ ಕೆಳಗಿಟ್ಟಾಗ ಪಶುಗಳಿಗೆ ಅವನು ಪ್ರಾಣವನ್ನು ಕೊಟ್ಟಂತೆ. ಎರಡೆರಡಾಗಿ ಅವುಗಳನ್ನು (ಅಂಶುಗಳನ್ನು) ಕೆಳಗಿಡುವುದರಿಂದ ಮುಖ್ಯ ಪ್ರಾಣಗಳೂ ದ್ವಂದ್ವ ರೂಪದಲ್ಲಿಯೇ ಇರುತ್ತವೆ-

**ಉಪಾಂಶುಗ್ರಹದ ಮಹಿಮೆ :—**

ಉಪಾಂಶುಸವನದ ಸ್ವರೂಪವನ್ನು ಮೇಲೆ ವಿವರಿಸಿರುವಂತೆ ವರ್ಣಿಸಿ ಅನಂತರ **ಉಪಾಂಶುಗ್ರಹದ** ಪ್ರಭಾವವನ್ನು ಸ್ತುತಿಸಿದೆ. (ತೈ. ಸಂ. ೬-೪-೫). ಇದು ತೈ ಸಂ ೧-೪-೨ ನೇ ಪ್ರಶ್ನದ ವಿವರಣೆಯು.

೧. **ವಾಚಸ್ಪತಯೇ ಪವಸ್ವ ವಾಜಿನ್**— ಈ ಮಂತ್ರದಿಂದ ಅಧ್ವರ್ಯುವು ಸೋಮನನ್ನು ಪಾತ್ರೆಯೊಳಕ್ಕೆ ಸುರಿಯುತ್ತಾನೆ.

**ಪ್ರಾಣೋ ವಾ ಏಷ ಯದಪಾಗ್ಂಶುರ್ಯದುಪಾಗ್ಂಶ್ವಗ್ರಾ ಗ್ರಹಾ ಗೃಹ್ಯಂತೇ ಪ್ರಾಣಮೇವಾನು ಪ್ರಯಂತ್ಯರುಣೋ ಹ ಸ್ಮಾಹೌಪವೇಶಿಃ ಪ್ರಾತಃಸವನ ಏವಾಹಂ ಯಜ್ಞಗ್ಂ ಸಗ್ಂಸ್ಥಾಪಯಾಮಿ ತೇನ ತತಃ ಸಗ್ಂಸ್ಥಿತೇನ ಚರಾಮೀತ್ಯಷ್ಟೌ ಕೃತ್ವೋಽಗ್ರೇಽಭಿ ಷುಣೋತ್ಯಷ್ಟಾಕ್ಷರಾ ಗಾಯತ್ರೀ ಗಾಯತ್ರಂ ಪ್ರಾತಃಸವನಂ ಪ್ರಾತಃಸವನಮೇವ ತೇನಾಪ್ನೋತ್ಯೇಕಾದಶಕೃತ್ವೋ ದ್ವಿತೀಯಮೇಕಾದಶಾಕ್ಷರಾ ತ್ರಿಷ್ಟುಪ್ ತ್ರೈಷ್ಟುಭಂ ಮಾಧ್ಯಂದಿನಗ್ಂ ಸವನಂ ಮಾಧ್ಯಂದಿನಮೇವ ಸವನಂ ತೇನಾಪ್ನೋತಿ ದ್ವಾದಶಕೃತ್ವಸ್ತೃತೀಯಂ ದ್ವಾದಶಾಕ್ಷರಾ ಜಗತೀ ಜಾಗತಂ ತೃತೀಯಸವನಂ ತೃತೀಯಸವನಮೇವ ತೇನಾಪ್ನೋತ್ಯೇತಾಗ್ಂ ಹ ವಾವ ಸ ಯಜ್ಞಸ್ಯ ಸಗ್ಂಸ್ಥಿತಿಮುವಾಚಾಸ್ಕಂದಾಯಾಸ್ಕನ್ನಗ್ಂಹಿ ತದ್ಯದ್ಯಜ್ಞಸ್ಯ ಸಗ್ಂಸ್ಥಿತಸ್ಯಾಸ್ಕಂದತಿ ||**

(ತೈ. ಸಂ. ೬-೪-೫-೧, ೨)

**ಉಪಾಂಶುವು** ಯಜ್ಞಕ್ಕೆ ಪ್ರಾಣರೂಪವಾದುದು. ಆರಂಭದಲ್ಲಿ ಉಪಾಂಶುಗ್ರಹವನ್ನು ಗ್ರಹಣಮಾಡಿದರೆ ಪ್ರಾಣವನ್ನೇ ಅನುಸರಿಸಿದಂತೆ. " ಪ್ರಾತಃಸವನದಲ್ಲಿ ನಾನು ಯಜ್ಞವನ್ನು ಸ್ಥಾಪಿಸಿ ಅನಂತರ ಮುಂದುವರಿಯುತ್ತೇನೆ ಎಂದು ಅರುಣ ಔಪವಶಿಯು ಹೇಳುತ್ತಿದ್ದನು. ಮೊದಲು ಎಂಟು ಸಲ ಹಿಂಡುತ್ತಿದ್ದನು. **ಗಾಯತ್ರಿಯು** ಅಷ್ಟಾಕ್ಷರವುಳ್ಳದ್ದು. ಪ್ರಾತಃ ಸವನಕ್ಕೂ ಗಾಯತ್ರಿಗೂ ಸಂಬಂಧವಿದೆ. ಆದುದರಿಂದ ಎಂಟು ಸಲ ಹಿಂಡುವವನು ಪ್ರಾತಃಸವನವನ್ನು ಸಾಧಿಸುತ್ತಾನೆ. ಮಾಧ್ಯಂದಿನಸವನದಲ್ಲಿ ಹನ್ನೊಂದು ಸಲ ಹಿಂಡುತ್ತಾನೆ. **ತ್ರಿಷ್ಟುಪ್ಪು** ಹನ್ನೊಂದಕ್ಷರವುಳ್ಳದ್ದು. ಮಾಧ್ಯಂದಿನಸವನವು ತ್ರಿಷ್ಟುಪ್ಪೊಂದಿಗೆ ಸಂಬಂಧಿಸಿದುದು. ಸಾಯಂಸವನದಲ್ಲಿ ಹನ್ನೆರಡು ಸಲ

ಹಿಂಡುತ್ತಾನೆ. **ಜಗತ್ತಿಗೆ** ಹನ್ನೆರಡಕ್ಷರಗಳಿರುವುದರಿಂದ ಸಾಯಂಸವನಕ್ಕೂ ಜಗತಿಗೂ ಸಂಬಂಧವಿದೆ. ಇದರಿಂದ ಮೂರನೆಯ ಅಭಿಷವವು ಲಭಿಸುತ್ತದೆ. ಇದನ್ನೇ ಯಜ್ಞದ ಸ್ಥಾಪನೆಯೆನ್ನಬಹುದು. ಇದರಿಂದ ನಷ್ಟವಾಗುವ ಸಂಭವವೆಲ್ಲವೂ ತಪ್ಪಿಹೋಗುವುದು.

**ಅಥೋ ಖಲ್ವಾಹುರ್ಗಾಯತ್ರೀ ವಾವ ಪ್ರಾತಃಸವನೇ ನಾತಿವಾದ ಇತ್ಯನತಿವಾದುಕ ಏನಂ ಭ್ರಾತೃವ್ಯೋ ಭವತಿ ಯ ಏವಂ ವೇದ ತಸ್ಮಾದಷ್ಟಾವಷ್ಟೌ ಕೃತ್ವೋಽಭಿಷುತ್ಯಂ ಬ್ರಹ್ಮ-ವಾದಿನೋ ವದಂತಿ ಪವಿತ್ರವಂತೋಽನ್ಯೇ ಗ್ರಹಾ ಗೃಹ್ಯಂತೇ ಕಿಂ ಪವಿತ್ರ ಉಪಾಗ್ಂಶುರಿತಿ ವಾಕ್ಪವಿತ್ರ ಇತಿ ಬ್ರೂಯಾದ್ವಾಚಸ್ಪತಯೇ ಪವಸ್ವ ವಾಜಿನ್ನಿತ್ಯಾಹ ವಾಚೈವೈನಂ ಪವಯತಿ ।**

(ತೈ. ಸಂ. ೬-೪-೫-೨, ೩).

ಪ್ರಾತಃಸವನದಲ್ಲಿ **ಗಾಯತ್ರಿಯ** ವಿಷಯದಲ್ಲಿ ಅತಿವಾದದ ಪ್ರಶ್ನೆಯೇ ಇರುವುದಿಲ್ಲ. ಈ ತತ್ತ್ವವನ್ನು ತಿಳಿದವನು ಶತ್ರುವಿನ ಆಕ್ಷೇಪಗಳಿಗೆ ತುತ್ತಾಗುವುದಿಲ್ಲ. ಆದುದರಿಂದ ಎಂಟು ಸಲ ಹಿಂಡಬೇಕು ಎಂಬ ವಿಧಿಗೆ, "ಇತರ ಗ್ರಹಗಳು ದಶಾಪವಿತ್ರದೊಡನೆ ಶುದ್ಧಮಾಡಲ್ಪಡುತ್ತವೆ; ಉಪಾಂಶುವಿಗೆ ಪವಿತ್ರವಾವುದು" ಎಂದು ಬಹ್ಮವಾದಿಗಳು ಪ್ರಶ್ನಿಸಿದರೆ ಆಗ "ವಾಕ್ಕೇ ಪವಿತ್ರವು; ವಾಚಸ್ಪತಿಗಾಗಿ ಶುದ್ಧವಾಗಿರಬೇಕು" ಎಂದು ವಾಕ್ಕಿನಿಂದ ಶುದ್ಧವಾದುದನ್ನಾಗಿ ಮಾಡುತ್ತಾನೆ. ಇದಕ್ಕೆ ಮಂತ್ರವೇ ಪವಿತ್ರವು.

**ವೃಷ್ಣೋ ಅಗ್ಂಶುಭ್ಯಾಮಿತ್ಯಾಹ ವೃಷ್ಣೋ ಹ್ಯೇತಾವಂಗ್ಶೂ ಯೌ ಸೋಮಸ್ಯ ಗಭಸ್ತಿಪೂತ ಇತ್ಯಾಹ ಗಭಸ್ತಿನಾ ಹ್ಯೇನಂ ಪವಯತಿ ದೇವೋ ದೇವಾನಾಂ ಪವಿತ್ರಮಸೀತ್ಯಾಹ ದೇವೋ ಹ್ಯೇಷ ಸನ್ದೇವಾನಾಂ ಪವಿತ್ರಂ ಯೇಷಾಂ ಭಾಗೋಽಸಿ ತೇಭ್ಯಸ್ತ್ವೇತ್ಯಾಹ ಯೇಷಾಗ್ ಹ್ಯೇಷ ಭಾಗಸ್ತೇಭ್ಯ ಏನಂ ಗೃಹ್ಣಾತಿ ।**

(ತೈ. ಸಂ. ೬-೪-೫-೩, ೪)

ಎಂಬ ವಾಕ್ಯಗಳಿಂದ ಸೋಮಾಂಶುವಿನ ಸ್ವತಃ ಶುದ್ಧಿಯನ್ನು ತಿಳಿಸಿದೆ.

೨. **ಸ್ವಾಂಕೃತೋಽಸಿ**—ಎಂಬ ಮಂತ್ರದಿಂದ ಪಾತ್ರೆಯನ್ನು ಉಜ್ಜಿ ಶುದ್ಧಿಮಾಡುತ್ತಾನೆ.

**ಸ್ವಾಂಕೃತೋಽಸೀತ್ಯಾಹ ಪ್ರಾಣಮೇವ ಸ್ವಮಕೃತ ಮಧುಮತೀರ್ನ ಇಷಸ್ಕೃಧೀತ್ಯಾಹ ಸರ್ವ ಮೇವಾಸ್ಮಾ ಇದಗ್ಂ ಸ್ವದಯತಿ ವಿಶ್ವೇಭ್ಯಸ್ತ್ವೇಂದ್ರಿಯೇಭ್ಯೋ ದಿವ್ಯೇಭ್ಯಃ ಪಾರ್ಥಿವೇಭ್ಯ ಇತ್ಯಾಹೋಭಯೇಷ್ವೇವ ದೇವಮನುಷ್ಯೇಷು ಪ್ರಾಣಾನ್ದಧಾತಿ ॥**

(ತೈ. ಸಂ. ೬-೪-೫-೪)

'ನೀನು ಸ್ವಾಯತ್ತೀಕೃತನಾಗಿದ್ದೀಯೆ' ಎಂದು ಹೇಳಿ ಪ್ರಾಣವನ್ನು ಸ್ವಾಧೀನಮಾಡಿಕೊಂಡನು. 'ನಮ್ಮ ಅನ್ನವನ್ನು ಮಾಧುರ್ಯಯುಕ್ತವಾದುದನ್ನಾಗಿ ಮಾಡು' ಎಂದು ಪ್ರಾರ್ಥಿಸಿ, ತನ್ನ ಅನ್ನವನ್ನು ಮಧುಪೂರಿತವಾದುದನ್ನಾಗಿ ಮಾಡಿಕೊಂಡನು. "ದಿವ್ಯಲೋಕಸ್ಥರಿಗೂ ಮತ್ತು ಪಾರ್ಥಿವಸ್ಥನಾದ ಸರ್ವಶಕ್ತಿಗಳಿಗೂ ಸಹ ನೀನು ಅರ್ಪಿತನಾಗಿದ್ದೀಯೆ" ಎಂದು ಹೇಳಿ ದೇವತೆಗಳಿಗೂ ಮಾನವರಿಗೂ ಪ್ರಾಣಶಕ್ತಿಯನ್ನೊದಗಿಸುತ್ತಾನೆ.

೩. **ಮನಸ್ತ್ವಾಷ್ಟ್ವುರ್ವಂತರಿಕ್ಷಮನ್ವಿಹಿ ಸ್ವಾಹಾ**—ಇತ್ಯಾದಿ ಮಂತ್ರಗಳಿಂದ ಅಧ್ವರ್ಯುವು ಆಹವನೀಯಾಗ್ನಿಯನ್ನು ಸಮೀಪಿಸಿ ಪಾತ್ರೆಯಲ್ಲಿರುವ ರಸವನ್ನು ಅಗ್ನಿಗೆ ಅರ್ಪಿಸುವನು.

**ಮನಸ್ತ್ವಾಷ್ಟ್ವಿತ್ಯಾಹ ಮನ ಏವಾಶ್ನುತೆ ಉರ್ವಂತರಿಕ್ಷಮನ್ವಿಹೀತ್ಯಾಹಾಂತರಿಕ್ಷದೇವತ್ಯೋ ಹಿ ಪ್ರಾಣಃ ಸ್ವಾಹಾ ತ್ವಾ ಸುಭವಃ ಸೂರ್ಯಾಯೇತ್ಯಾಹ ಪ್ರಾಣಾ ವೈ ಸ್ವಭವಸೋ ದೇವಾಸ್ತೇಷ್ವೇವ ಪರೋಕ್ಷಂ ಜುಹೋತಿ ದೇವೇಭ್ಯಸ್ತ್ವಾ ಮರೀಚಿಪೇಭ್ಯ ಇತ್ಯಾಹಾದಿತ್ಯಸ್ಯ ವೈ ರಶ್ಮಯೋ ದೇವಾ ಮರೀಚಿಪಾಸ್ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ।**

(ತೈ. ಸಂ. ೬-೪-೫-೫)

"ಮನಸ್ಸು ನಿನ್ನನ್ನು ಪ್ರವೇಶಿಸಲಿ'' ಎಂದು ಪಠಿಸಿ ತಾನು ಮನಸ್ಸನ್ನು ಪಡೆಯುತ್ತಾನೆ. ಪ್ರಾಣಕ್ಕೆ ಅಂತರಿಕ್ಷವೇ ದೇವತೆಯಾದುದರಿಂದ "ಅಂತರಿಕ್ಷವನ್ನನುಸರಿಸು'' ಎಂದು ಪಠಿಸುತ್ತಾನೆ. "ಸುಭವನಾದ ನೀನು ಸೂರ್ಯನಿಗೆ ಅರ್ಪಿತನು' ಎಂಬುದರಿಂದ ಪರೋಕ್ಷವಾದ ಹೋಮವಾಯಿತು. 'ಪ್ರಾಣೇಭ್ಯಃ ಸ್ವಾಹಾ' ಎಂದು ಪಠಿಸಿದ್ದರೆ ಪ್ರಾಣಗಳು ತನ್ನ ಶರೀರಾಂತಸ್ಥವಾದ ದೇವತೆಗಳೇ ಆದುದರಿಂದ ಪ್ರತ್ಯಕ್ಷಹೋಮವಾಗುವುದರಿಂದ ಅದನ್ನು ಬಿಟ್ಟು 'ಸೂರ್ಯಾಯ ತ್ವಾ' ಎಂದು ಪಠಿಸಿ ಪರೋಕ್ಷ ಹೋಮವನ್ನು ಮಾಡಿದೆ. ಆಗ ಸೂರ್ಯನಿಗೆ ರಶ್ಮಿಗಳೇ ಪ್ರಾಣಗಳು. ಚೇತನಾತ್ಮರುಗಳಾದ ಆ ರಶ್ಮಿಗಳು ತೃಪ್ತಿಯನ್ನು ಹೊಂದಿ ಅಚೇತನಾತ್ಮಕಗಳಾದ ಮರೀಚಿಗಳನ್ನು ಪಾಲಿಸುತ್ತವೆ.

**ಯದಿ ಕಾಮಯೇತ ವರ್ಷುಕಃ ಪರ್ಜನ್ಯಃ ಸ್ಯಾದಿತಿ ನೀಚಾ ಹಸ್ತೇನ ನಿ ಮೃಜ್ಯಾದ್ವೃಷ್ಟಿಮೇವ ನಿ ಯಚ್ಛತಿ ಯದಿ ಕಾಮಯೇತಾವರ್ಷುಕಃ ಸ್ಯಾದಿತ್ಯುತ್ತಾನೇನ ನಿ ಮೃಜ್ಯಾದ್ವೃಷ್ಟಿಮೇವೋದ್ಯಚ್ಛತಿ ।**

(ತೈ. ಸಂ. ೬-೪-೫-೫)

ಯಜಮಾನನಿಗೆ ವೃಷ್ಟಿಯನ್ನು ಹೊಂದಬೇಕೆಂಬ ಅಪೇಕ್ಷೆಯಿದ್ದರೆ 'ಪರ್ಜನ್ಯನು ವರ್ಷುಕನಾಗಲಿ' ಎಂದರೆ ವೃಷ್ಟಿಯನ್ನು ಸುರಿಸಲಿ ಎಂದು ಪಠಿಸಿ ತನ್ನ ಅಂಗೈಯಿಂದ ಪಾತ್ರೆಯನ್ನು ಅಧೋಮುಖವಾಗಿ ಉಜ್ಜಬೇಕು. ಆಗ ವೃಷ್ಟಿಪತನವಾಗುವುದು. ವೃಷ್ಟಿಯಾಗಕೂಡದೆಂಬ ಇಚ್ಛೆಯಿದ್ದರೆ ಆಗ ಊರ್ಧ್ವಮುಖವಾಗಿ ಉಜ್ಜಿದರೆ ವೃಷ್ಟಿಯಾಗುವುದಿಲ್ಲ.

**ಯದ್ಯಭಿಚರೇದಮುಂ ಜಹ್ಯಥ ತ್ವಾ ಹೋಷ್ಯಾಮೀತಿ ಬ್ರೂಯಾದಾಹುತಿಮೇವೈನಂ ಪ್ರೇಪ್ಸನ್ಹಂತಿ ಯದಿ ದೂರೇ ಸ್ಯಾದಾ ತಮಿತೋಸ್ತಿಷ್ಠೇತ್ಪ್ರಾಣಮೇವಾಸ್ಯಾನುಗತ್ಯ ಹಂತಿ ।**

(ತೈ. ಸಂ. ೬-೪-೫-೫)

ಒಂದು ವೇಳೆ ಆಭಿಚಾರಿಕಕ್ರಿಯೆಯಲ್ಲಿ ಪ್ರಯತ್ನಿಸಿದ್ದರೆ, 'ಈ ನನ್ನ ವೈರಿಯನ್ನು ಮೊದಲು ನಾಶಮಾಡಿದರೆ ಅನಂತರ ಹೋಮಮಾಡುತ್ತೇನೆ' ಎಂದು ಉಚ್ಚರಿಸಿದರೆ ಆಗ ಆಹುತಿಯನ್ನಪೇಕ್ಷಿಸಿ ದೇವತೆಯು ಆ ಶತ್ರುವನ್ನು ಕೊಂದೇ ಕೊಲ್ಲುತ್ತಾನೆ.

೪. **ಏಷ ತೇ ಯೋನಿಃ ಪ್ರಾಣಾಯ ತ್ವಾ**—ಎಂಬ ಮಂತ್ರದಿಂದ ಆಗ್ರಯಣಸ್ಥಾಲಿಗೆ ಉಳಿದ ಶೇಷವನ್ನು ಸುರಿದು ಬರಿದಾದ ಪಾತ್ರೆಗೆ ಒಂದು ಅಂಶುವನ್ನು ಹಾಕುತ್ತಾನೆ.

**ಷಡ್ಭಿರಗ್ಂಶುಭಿಃ ಪವಯತಿ ಷಡ್ವಾ ಋತವ ಋತುಭಿರೇವೈನಂ ಪವಯತಿ ।**

ಆರು ಅಂಶಗಳಿಂದ ಸೋಮರಸವನ್ನು ಶುದ್ಧಿಮಾಡುತ್ತಾನೆ. ಋತುಗಳ ಸಂಖ್ಯೆಯು ಆರಾದುದರಿಂದ ಋತುಗಳಿಂದಲೇ ಶುದ್ಧಿಮಾಡುತ್ತಾನೆ.

**ತ್ರಿಃ ಪವಯತಿ ತ್ರಯ ಇಮೇ ಲೋಕಾ ಏಭಿರೇವೈನಂ ಲೋಕೈಃ ಪವಯತಿ ।**

ಲೋಕಗಳ ಸಂಖ್ಯೆಯು ಮೂರಾಗಿರುವುದರಿಂದ ಸೋಮರಸವನ್ನು ಮೂರು ಸಲ ಎಂದರೆ ಒಂದೊಂದು ಸಲಕ್ಕೆ ಎರಡೆರಡು ಅಂಶುಗಳಿಂದ ಶುದ್ಧಿಮಾಡುತ್ತಾನೆ.

**ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾತ್ರಯಃ ಪಶೂನಾಗ್ಂ ಹಸ್ತಾದಾನಾ ಇತಿ ಯತ್ತ್ರಿರೂಪಾಗ್ಂಶುಗ್ಂಹಸ್ತೇನ ವಿ ಗೃಹ್ಣಾತಿ ತಸ್ಮಾತ್ತ್ರಯಃ ಪಶೂನಾಗ್ಂ ಹಸ್ತಾದಾನಾಃ ಪುರುಷೋ ಹಸ್ತೀ ಮರ್ಕಟಃ ।**

(ತೈ. ಸಂ ೬-೪-೫-೭)

"ಮೂರು ವಿಧವಾದ ಪ್ರಾಣಿಗಳು ಹಸ್ತದಿಂದ ಗ್ರಹಣವನ್ನು ಮಾಡುವ ಕಾರಣವೇನು" ಎಂದು ಬ್ರಹ್ಮವಾದಿಗಳು ಆಕಾಂಕ್ಷೆಯನ್ನು ಸೂಚಿಸಿ ಅದಕ್ಕೆ ಉತ್ತರವಾಗಿ 'ಉಪಾಂಶುಗ್ರಹವನ್ನು ಹಸ್ತದಿಂದ ಮೂರು ಸಲ ಗ್ರಹಣಮಾಡುವುದರಿಂದ ಮಾನವನೂ, ಮರ್ಕಟವೂ ಮತ್ತು ಆನೆಯೂ ತಮ್ಮ ಹಸ್ತಗಳಿಂದ ಎಲ್ಲವನ್ನೂ ಗ್ರಹಣಮಾಡುತ್ತವೆ.' (ಗೋಮಹಿಷಾದಿಗಳು ಮುಖದಿಂದ ಗ್ರಹಣಮಾಡುತ್ತಾರೆ) ಎಂದು ಹೇಳಿದ್ದಾರೆ.

**ವಾಚೋಽಹ್ಯುಪಾಂಶುಗ್ರಹಣಂ ಸ್ವಾಮಾದತ್ತೇಽನ್ಯಹಸ್ತತಃ ।**
**ಉರು ಗತ್ವಾ ಮನಸ್ತ್ವೇತಿ ವೇದೇರ್ದಕ್ಷಿಣತಃ ಸ್ಥಿತಿಃ ॥**

**ಸ್ವಾಹಾ ಜುಹೋತಿ ದೇವೇಭ್ಯೋ ಮಧ್ಯಮೇ ಪರಿಧೌ ತಥಾ ।**
**ಲೇಪಂ ನಿಮಾರ್ಷ್ಟ್ಯೂರ್ಧ್ವೇಷ ಪಾತ್ರಂ ಸಾದಯೇತ್ಸಪ್ತ ವರ್ಣಿತಾಃ ॥**

ಎಂಬ ವಾಕ್ಯಗಳಿಂದ ಸಾಯಣರು **ಉಪಾಂಶುಗ್ರಹದ** ವಿನಿಯೋಗಸಂಗ್ರಹವನ್ನು ಹೇಳಿದ್ದಾರೆ.

**ಅಂತರ್ಯಾಮಗ್ರಹದ ಮಹಿಮೆಯು :—**

**ಉಪಯಾಮಗೃಹೀತೋಽಸಿ**—ಎಂಬ ಮಂತ್ರದಿಂದ ಸೂರ್ಯೋದಯವಾದನಂತರ **ಉಪಾಂಶುಗ್ರಹದ** ನಿಯಮದಂತೆಯೇ ಅಂತರ್ಯಾಮಗ್ರಹದ ವಿಧಿಯನ್ನೂ ನಿರ್ವಹಿಸಬೇಕು, ಎಂಬ ವಿಷಯವನ್ನು ಹಿಂದೆ ತಿಳಿಸಿದೆ. ಈ ಪಾತ್ರೆಯಲ್ಲಿ ಸೋಮರಸಗ್ರಹಣದ ವಿವರವನ್ನು ೬ ನೆಯ ಕಾಂಡದಲ್ಲಿ ವರ್ಣಿಸಿದೆ. (೬-೪-೬).

**ದೇವಾ ವೈ ಯದ್ಯಜ್ಞೇಽಕುರ್ವತ ತದಸುರಾ ಅಕುರ್ವತ ತೇ ದೇವಾ ಉಪಾಗ್ಂಶೌ ಯಜ್ಞಗ್ಂ ಸಗ್ಂಸ್ಥಾಪ್ಯಮಪಶ್ಯನ್ತಮುಪಾಗ್ಂಶೌ ಸಮಸ್ಥಾಪಯನ್ತೇಽಸುರಾ ವಜ್ರಮುದ್ಯತ್ಯ ದೇವಾನಭ್ಯಾಯಂತ ತೇ ದೇವಾ ಬಿಭ್ಯತ ಇಂದ್ರಮುಪಾಧಾವನ್ತಾನಿಂದ್ರೋಽಂತರ್ಯಾಮೇಣಾಂತರಧತ್ತ ತದಂತರ್ಯಾಮಸ್ಯಾಂತರ್ಯಾಮತ್ವಂ ಯದಂತರ್ಯಾಮೋ ಗೃಹ್ಯತೇ ಭ್ರಾತೃವ್ಯಾನೇವ ತದ್ಯಜಮಾನೋಽಂತರ್ಧತ್ತೇ ॥**

(ತೈ. ಸಂ. ೬-೪-೬-೧)

ದೇವತೆಗಳು ಯಜ್ಞವನ್ನಾಚರಿಸಿದಂತೆಯೇ ಅಸುರರೂ ಆಚರಿಸಿದರು. ದೇವತೆಗಳು ಉಪಾಂಶುಗ್ರಹದಲ್ಲಿ ಯಜ್ಞವನ್ನು ಸ್ಥಾಪಿಸಿದಂತೆಯೇ ಅಸುರರೂ ಸ್ಥಾಪಿಸಿದರು. ಆಗ ವಜ್ರಾಯುಧವನ್ನು ತೆಗೆದುಕೊಂಡು ದೇವತೆಗಳನ್ನು ಎದುರಿಸಿದರು.

ದೇವತೆಗಳು ಬೆದರಿ ಇಂದ್ರನಲ್ಲಿಗೆ ಓಡಿದರು. ಇಂದ್ರನು ಅವರನ್ನು ಅಂತರ್ಯಾಮಗ್ರಹದ ಸಹಾಯದಿಂದ ತಡೆದನು. ಆದರಿಂದಲೇ ಆ ಗ್ರಹಕ್ಕೆ ಅಂತರ್ಯಾಮಗ್ರಹವೆಂದು ಹೆಸರು ಪ್ರಸಿದ್ಧವಾಗಿದೆ. ಇದರ ಸಹಾಯದಿಂದ ಯಜಮಾನನು ಶತ್ರುಗಳನ್ನು ತಡೆಯಬಲ್ಲನು.

**ಅಂತಸ್ತೇ ದಧಾಮಿ ದ್ಯಾವಾಪೃಥಿವೀ ಅಂತರುರ್ವಂತರಿಕ್ಷಮಿತ್ಯಾಹೈಭಿರೇವ ಲೋಕೈರ್ಯಜಮಾನೋ ಭ್ರಾತೃವ್ಯಾನಂತರ್ಧತ್ತೇ**

(ತೈ. ಸಂ. ೬-೪-೬-೨)

"ದ್ಯಾವಾಪೃಥಿವಿಗಳನ್ನೂ ವಿಸ್ತೃತವಾದ ಅಂತರಿಕ್ಷವನ್ನೂ ನಿನ್ನಲ್ಲೇ ಅಡಕವಾಗಿರುವಂತೆ ಮಾಡಿದ್ದೇನೆ" ಎಂದು ಉಚ್ಚರಿಸುತ್ತಾನೆ. ಈ ಲೋಕಗಳ ಸಹಾಯದಿಂದ ಅವನು ಶತ್ರುವನ್ನು ತಡೆಯಬಲ್ಲನು.

**ತೇ ದೇವಾ ಅಮನ್ಯಂತೇಂದ್ರೋ ವಾ ಇದಮಭೂದ್ಯದ್ವಯಗ್ಂ ಸ್ಮ ಇತಿ ತೇಽಬ್ರುವನ್ಮಘವನ್ನನು ನ ಆ ಭಜೇತಿ ಸಜೋಷಾ ದೇವೈರವರೈಃ ಪರೈಶ್ಚೇತ್ಯಬ್ರವೀದ್ಯೇ ಚೈವ ದೇವಾಃ ಪರೇ ಯೇ ಚಾವರೇ ತಾನುಭಯಾನನ್ವಾಭಜತ್ಸಜೋಷಾ ದೇವೈರವರೈಃ ಪರೈಶ್ಚೇತ್ಯಾಹ ಯೇ ಚೈವ ದೇವಾಃ ಪರೇ ಯೇ ಚಾವರೇ ತಾನುಭಯಾನನ್ವಾಭಜತಿ ॥**

(ತೈ. ಸಂ. ೬-೪-೬-೩)

"ಇಂದ್ರನು ಈಗ ನಮ್ಮಂತೆಯೇ ಆಗಿರುವನು" ಎಂದು ದೇವತೆಗಳು ಪರಿಶೀಲಿಸಿ "ಎಲೈ ಸಂಪದ್ಯುಕ್ತನೇ, ನಿನ್ನ ಐಶ್ವರ್ಯದಲ್ಲಿ ನಮಗೂ ಒಂದು ಭಾಗವನ್ನು ಕೊಡು" ಎಂದು ಕೇಳಿಕೊಂಡರು. "ಪರದೇವತೆಗಳೂ ಅವರದೇವತೆಗಳೂ ಒಟ್ಟಿಗೆ ಸೇರಿದರೆ ಆಗಬಹುದೆಂದು" ಹೇಳಿ ಅವರಿಗೂ ಭಾಗವನ್ನು ಕೊಟ್ಟನು.

**ಅಂತರ್ಯಾಮೋ ಮಘವನ್ಮಾದಯಸ್ವೇತ್ಯಾಹ ಯಜ್ಞಾದೇವ ಯಜಮಾನಂ ನಾಂತರೇತಿ ।**

"ಎಲೈ ಸಂಪದ್ಯುಕ್ತನೇ, ನೀನು ಅಂತರ್ಯಾಮದಲ್ಲಿ ಹರ್ಷಿಸುತ್ತಿದ್ದೀಯೆ" ಎಂದು ಯಜಮಾನನೂ ಸಹ ಸಂತುಷ್ಟನಾಗಿ ಇಂದ್ರನನ್ನು ಸ್ತುತಿಸುತ್ತಾನೆ. ಆದುದರಿಂದ ಯಜ್ಞಕ್ಕೂ ಯಜಮಾನನಿಗೂ ಭೇದವಿಲ್ಲ.

**ಪ್ರಾಣಾಪಾನೌ ವಾ ಏತೌ ಯದುಪಾಗ್ಂಶ್ವಂತರ್ಯಾಮೌ ವ್ಯಾನ ಉಪಾಗ್ಂಶುಸವನೋ ಯಂ ಕಾಮಯೇತ ಪ್ರಮಾಯುಕಃ ಸ್ಯಾದಿತ್ಯಸಗ್ಂ ಸ್ಪೃಷ್ಟೌ ತಸ್ಯ ಸಾದಯೇದ್ವ್ಯಾನೇನೈವಾಸ್ಯ ಪ್ರಾಣಾಪಾನೌ ವಿಚ್ಛಿನತ್ತಿ ತಾಜಕ್ಪ್ರಮೀಯತೇ ಯಂ ಕಾಮಯೇತ ಸರ್ವಮಾಯುರಿಯಾದಿತಿ ಸಗ್ಂಸ್ಪೃಷ್ಟೌ ತಸ್ಯ ಸಾದಯೇದ್ವ್ಯಾನೇನೈವಾಸ್ಯ ಪ್ರಾಣಾಪಾನೌ ಸಂ ತನೋತಿ ಸರ್ವಮಾಯುರೇತಿ ॥**

(ತೈ. ಸಂ ೬-೪-೬-೪)

ಉಪಾಂಶುಗ್ರಹವು ಪ್ರಾಣವು; ಅಂತರ್ಯಾಮವು ಅಪಾನವು. ಉಪಾಂಶುಸವನವು ವ್ಯಾನಾತ್ಮಕವಾದುದು. ಯಜಮಾನನು ಯಾವನನ್ನಾದರೂ ಸಾಯಿಸಬೇಕೆಂದಿಷ್ಟಪಟ್ಟರೆ ಆಗ ಈ ಪ್ರಾಣಾದಿಗಳನ್ನು ಎಂದರೆ ಉಪಾಂಶ್ವಾದಿಗಳನ್ನು ಒಂದಕ್ಕೊಂದಕ್ಕೆ ಸಂಬಂಧವಿಲ್ಲದಂತೆ ಪ್ರತ್ಯೇಕವಾಗಿಡಬೇಕು. ಒಡನೆಯೇ ಅವನು ತನ್ನ ಪ್ರಾಣಕ್ಕೂ, ಅಪಾನಕ್ಕೂ, ವ್ಯಾನಕ್ಕೂ ಸಂಬಂಧವಿಲ್ಲದಂತಾಗಿ ಸಾಯುವನು. ಯಾವನನ್ನಾದರೂ ದೀರ್ಘಾಯುಸ್ಸುಳ್ಳವನಾಗಿ ಬದುಕಬೇಕೆಂದಪೇಕ್ಷಿಸಿದರೆ ಆಗ ಎಲ್ಲವನ್ನೂ ಸಂಪರ್ಕವಾಗುವಂತೆ ಸೇರಿಸಿಟ್ಟರೆ ಆಗ ಅವನು ಬದುಕಿ ದೀರ್ಘಾಯುವಾಗುವನು. ಇದು ಉಪಾಂಶು ಸವನ, ಉಪಾಂಶುಗ್ರಹ ಮತ್ತು ಅಂತರ್ಯಾಮ ಗ್ರಹ ಇವುಗಳ ಸಂಯುಕ್ತಸ್ಥಿತಿಯ ಮಹಿಮೆಯು.

ಐಂದ್ರವಾಯುವಗ್ರಹವು :—

**ಆ ವಾಯೋ ಭೂಷ ಶುಚಿಪಾ**—ಎಂಬ ಮಂತ್ರದಿಂದ ಅಧ್ವರ್ಯುವು ಶೋಧಕಪಾತ್ರೆಯ ಅಡಿಯಲ್ಲಿ ಐಂದ್ರವಾಯವಗ್ರಹವನ್ನು ಹಿಡಿದು ರಸವನ್ನು ತುಂಬುತ್ತಾನೆ. ಈ ಗ್ರಹದ ಮಹಿಮೆಯನ್ನು ಈ ರೀತಿಯಲ್ಲಿ ಹೇಳಿದೆ.

**ವಾಗ್ವಾ ಏಷಾ ಯದೈಂದ್ರವಾಯವೋ ಯದೈಂದ್ರವಾಯವಾಗ್ರಾ ಗ್ರಹಾ ಗೃಹ್ಯಂತೇ ವಾಚ-ಮೇವಾನು ಪ್ರಯಂತಿ ।**

(ತೈ. ಸಂ. ೬-೪-೭-೧)

ಐಂದ್ರವಾಯವಗ್ರಹವೇ ವಾಕ್ಕು. ಆ ಪಾತ್ರೆಯನ್ನು ಗ್ರಹಣಮಾಡಿದೊಡನೆಯೇ ವಾಕ್ಕನ್ನು ಅನುಸರಿಸಿದಂತೆ,

**ವಾಯುಂ ದೇವಾ ಅಬ್ರುವನ್ತ್ಸೋಮಗ್ಂ ರಾಜಾನಗ್ಂ ಹನಾಮೇತಿ ಸೋಽಬ್ರವೀದ್ವರಂ ವೃಣೈ ಮದಗ್ರಾ ಏವ ವೋ ಗ್ರಹಾ ಗೃಹ್ಯಂತಾ ಇತಿ ತಸ್ಮಾದೈಂದ್ರವಾಯವಾಗ್ರಾ ಗ್ರಹಾ ಗೃಹ್ಯಂತೇ ತಮಘ್ನನ್ ।**

(ತೈ. ಸಂ. ೬-೪-೭-೧,)

'ಸೋಮರಾಜನನ್ನು ವಧೆಮಾಡೋಣ' ಎಂದು ದೇವತೆಗಳು ವಾಯುವಿಗೆ ಹೇಳಿದಾಗ 'ನಿಮ್ಮ ಗ್ರಹಗಳ ಜೊತೆಯಲ್ಲಿ ನನ್ನ ಗ್ರಹವೂ ಒಟ್ಟಿಗೆ ಸಿದ್ಧವಾಗುವಂತೆ ಆಗಬೇಕು' ಎಂಬ ವರವನ್ನು ಕೇಳಿದನು, ಆದುದರಿಂದ ಎಲ್ಲಾ ಗ್ರಹಗಳೂ ಒಟ್ಟಿಗೆ ಸಿದ್ಧವಾಗುತ್ತವೆ ಆಗ ಸೋಮರಾಜನನ್ನು ಹನನಮಾಡಿದರು. **ಅಭಿಷವಃ ಸೋಮದೇವ-ತಾಯಾಃ ಹನನಂ** ಎಂದು ಸಾಯಣರು ವಿವರಿಸಿದ್ದಾರೆ.

**ಸೋಽಪೂಯತ್ತಂ ದೇವಾ ನೋಪಾಧೃಷ್ಣುವನ್ತೇ ವಾಯುಮಬ್ರುವನ್ನಿಮಂ ನಃ ಸ್ವದಯೇತಿ ಸೋಽಬ್ರವೀದ್ವರಂ ವೃಣೈ ಮದ್ದೇವತ್ಯಾನ್ಯೇವ ವಃ ಪಾತ್ರಾಣ್ಯುಚ್ಯಾಂತಾ ಇತಿ ತಸ್ಮಾನ್ನಾನಾ ದೇವತ್ಯಾನಿ ಸಂತಿ ವಾಯವ್ಯಾನ್ಯುಚ್ಯಂತೇ ತಮೇಭ್ಯೋ ವಾಯುರೇವಾಸ್ವದಯತ್ತಸ್ಮಾದ್ಯ-ತ್ಪೂಯತಿ ತತ್ಪ್ರ ವಾತೇ ವಿ ಷಜಂತಿ ವಾಯುರ್ಹಿ ತಸ್ಯ ಪವಯಿತಾ ಸ್ವದಯಿತಾ ।**

(ತೈ. ಸಂ ೬-೪-೭-೧, ೨)

ಸೋಮಹನನವಾದೊಡನೆಯೇ ವಾಯುವು ದುರ್ಗಂಧಯುಕ್ತನಾದನು. ದೇವತೆಗಳು ಅವನ ಸಾಹಚರ್ಯವನ್ನು ಸಹಿಸಲಾರದೇ 'ಸೋಮನನ್ನು ತಮಗಾಗಿ ರುಚಿಕರವಾಗುವಂತೆ ಮಾಡು' ಎಂದರು. 'ನಿಮ್ಮ ಪಾತ್ರೆಗಳಿಗೆಲ್ಲಾ ನನ್ನನ್ನು ಉದ್ದೇಶಿಸಿದ ದೇವತಾಕವಾದುದಾಗಲಿ (ವಾಯುದೇವತಾಕವಾಗಬೇಕು) ಎಂಬ ವರವನ್ನು ಅಪೇಕ್ಷಿಸುತ್ತೇನೆ' ಎಂದನು. ಅವರು ಒಪ್ಪಿಕೊಂಡರು. ಒಡನೆಯೇ ಸೋಮರಸವು ಸ್ವಾದುವಾದುದಾಗಿ ಆಯಿತು. ಆದುದರಿಂದ ದುರ್ಗಂಧಯುಕ್ತವಾದುದನ್ನೆಲ್ಲಾ ವಾಯುವಿನಲ್ಲಿಟ್ಟರೆ ಅದು ಶುದ್ಧವಾಗುವುದು.

**ತಸ್ಯ ವಿಗ್ರಹಣಂ ನಾವಿಂದನ್ತ್ಸಾದಿತಿರಬ್ರವೀದ್ವರಂ ವೃಣಾ ಅಥ ಮಯಾ ವಿ ಗೃಹ್ಣೀಧ್ವಂ ಮದ್ದೇ-ವತ್ಯಾ ಏವ ವಃ ಸೋಮಾಃ ಸನ್ನಾ ಅಸನ್ನಿತ್ಯುಪಯಾಮಗೃಹಿತೋಽಸೀತ್ಯಾಹಾದಿತಿದೇವತ್ಯಾ ಸ್ತೇನ ಯಾನಿ ಹಿ ದಾರುಮಯಾಣಿ ಪಾತ್ರಾಣ್ಯಸ್ಯೈ ತಾನಿ ಯೋನೇಃ ಸಂಭೂತಾನಿ ಯಾನಿ ಮೃನ್ಮಯಾನಿ ಸಾಕ್ಷಾತ್ತಾನ್ಯಸ್ಯೈ ತಸ್ಮಾದೇವಮಾಹ ।**

(ತೈ. ಸಂ. ೬-೪-೭-೨-೩)

ದೇವತೆಗಳು ಸೋಮದ ಹಂಚಿಕೆಯ ವಿಧಾನವನ್ನು ತಿಳಿಯದೇ ಹೋದರು. ಆಗ (ಪೃಥ್ವಿಯು) ಅದಿತಿಯು " ನನ್ನ ಮೂಲಕವಾಗಿ ಹಂಚಿರಿ. ಆದರೆ ನಿಮ್ಮ ಆಹುತಿಗಳು **ಅದಿತಿ** ದೇವತವಾಗಿಯೇ ಇರಬೇಕು " ಎಂದಳು. ಮರದಿಂದ ಮಾಡಲ್ಪಟ್ಟ ಪಾತ್ರೆಗಳಿಗೆ ಅವಳೇ **ಯೋನಿಯು** (ಉತ್ಪತ್ತಿಸ್ಥಾನವು); ಮಣ್ಣಿನಿಂದ ಮಾಡಿದುದೂ ಅವಳದೇ. ಎಂದರೆ ಗ್ರಹಾದಿಗಳುವೃಕ್ಷಗಳಿಂದ ಮಾಡಲ್ಪಟ್ಟುದರಿಂದ ಪರಂಪರೆಯಾಗಿ ಪೃಥ್ವಿಯು ಅವುಗಳಿಗೆ ಯೋನಿಯು. ಸ್ಥಾಲ್ಯಾದಿಗಳು ಮಣ್ಣಿನಿಂದ ಮಾಡಿದುದರಿಂದ ಸಾಕ್ಷಾತ್ಕಾರಣವಾಯಿತು. ಆದುದರಿಂದ ಸರ್ವಗ್ರಹಸಾಧಾರಣವಾದ "**ಉಪಯಾಮ-ಗೃಹೀತೋಽಸಿ**" ಎಂಬ ಮಂತ್ರದ ಪಠನವಿದೆ

> **ವಾಗ್ವೈ ಪರಾಚ್ಯವ್ಯಾಕೃತಾವದತ್ತೇ ದೇವಾ ಇಂದ್ರಮಬ್ರುವನ್ನಿಮಾಂ ನೋ ವಾಚಂ ವ್ಯಾಕುರ್ವಿತಿ ಸೋಽಬ್ರವೀದ್ವರಂ ವೃಣೈ ಮಹ್ಯಂ ಚೈವೈಷ ವಾಯವೇ ಚ ಸಹ ಗೃಹ್ಯಾತಾ ಇತಿ ತಸ್ಮಾ-ದೈಂದ್ರವಾಯವಃ ಸಹ ಗೃಹ್ಯತೇ ತಾಮಿಂದ್ರೋ ಮಧ್ಯತೋಽವಕ್ರಮ್ಯ ವ್ಯಾಕರೋತ್ತ-ಸ್ಮಾದಿಯಂ ವ್ಯಾಕೃತಾ ವಾಗುದ್ಯತೇ ।**
>
> (ತೈ ಸಂ. ೬-೪-೭-೩)

ಪೂರ್ವದಲ್ಲಿ ವಾಕ್ಯಪದಾದಿಗಳ ವಿಭಜನೆಯಿಲ್ಲದೆ ವಾಕ್ಕು ಕೇವಲ ಸಮುದ್ರ ಘೋಷದಂತೆ ಅವ್ಯಾಕೃತವಾಗಿದ್ದಿತು. ದೇವತೆಗಳು ಇಂದ್ರನಲ್ಲಿಗೆ ಹೋಗಿ ವ್ಯವಹಾರಕ್ಕೆ ಯೋಗ್ಯವಾಗುವಂತೆ ಅದನ್ನು ವಿಭಾಗಿಸಬೇಕೆಂದರು. ಆಗ ಇಂದ್ರನು " ಈ ಗ್ರಹವು ನನಗೂ ವಾಯುವಿಗೂ ಒಟ್ಟಿಗೆ ಸೇರಬೇಕು " ಎಂಬ ವರವನ್ನ ಪೇಕ್ಷಿಸಿದರು. [ ಆದುದರಿಂದ ಇದಕ್ಕೆ ಐಂದ್ರವಾಯವಗ್ರಹವೆಂದು ಹೆಸರು ] ದೇವತೆಗಳು ಅದಕ್ಕೆ ಒಪ್ಪಿದ ಮೇಲೆ ಇಂದ್ರನು ವಾಕ್ಕಿನ ಮಧ್ಯದಲ್ಲಿ ಪ್ರವೇಶಿಸಿ ವ್ಯವಹಾರಗಳಿಗನುಕೂಲವಾಗುವಂತೆ ವಾಕ್ಯಪದಾದಿಗಳ ವಿಭಜನೆಯನ್ನು ಮಾಡಿದನು.

> **ತಸ್ಮಾತ್ಸಕೃದಿಂದ್ರಾಯ ಮಧ್ಯತೋ ಗೃಹ್ಯತೇ ದ್ವಿರ್ವಾಯವೇ ದ್ವೌ ಹಿ ಸ ವರಾವವೃಣೀತ ।**
>
> (ತೈ. ಸಂ. ೬-೪-೭-೩)

ಇಂದ್ರನು ಒಂದೇ ಸಲ ವರವನ್ನಪೇಕ್ಷಿಸಿದುದರಿಂದ ಇಂದ್ರನಿಗೆ ಸೋಮಗ್ರಹಣವು ಒಂದು ಸಲಮಾತ್ರ. ವಾಯುವು ಎರಡು ಸಲ ಅಪೇಕ್ಷಿಸಿದುದರಿಂದ " **ಆ ವಾಯೋ ಭೂಷಾ** " ಎಂದು ಪ್ರತ್ಯೇಕವಾಗಿ ಒಂದು ಸಲವೂ, **ಇಂದ್ರವಾಯೂ ಇಮೇ ಸುತಾಃ** ಎಂದು ಇಂದ್ರನೊಂದಿಗೆ ಒಂದು ಸಲವೂ ಹೀಗೆ ಎರಡು ಗ್ರಹಣವಿರುತ್ತದೆ. ಪ್ರಕೃತವಾದ ಸೂಕ್ತದಲ್ಲಿರುವುದು ಈ ಐಂದ್ರವಾಯವಗ್ರಹಣದ ಸ್ತುತಿಯು.

॥ ವ್ಯಾಕರಣಪ್ರಕ್ರಿಯಾ ॥

**ಅಹ**—ವಿನಿಗ್ರಹಾರ್ಥಕವಾದ ನಿಪಾತ. ಆದ್ಯುದಾತ್ತಸ್ವರ ಬರುತ್ತದೆ.

**ವಹೇಥೇ**—ವಹ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮಧ್ವಃ**—**ಜಸಾದಿಷು ಛಂದಸಿ ವಾವಚನಂ** ಎಂಬ ವಚನದಿಂದ ಗುಣಾದಿಗಳು ಬಾರದೇ ಯಣಾದೇಶ ಬಂದಿದೆ.

**ಆಹುತಿಂ**—ಹು ದಾನಾದನಯೋಃ ಧಾತು. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಆ) ಪ್ರಕೃತಿಸ್ವರ ಬರುತ್ತದೆ.

**ಉಪ ತಿಷ್ಠಂತೆ**— ಷ್ಠಾ ಗತಿನಿವೃತ್ತೌ. ಧಾತು. **ಉಪಾದ್ದೇವಪೂಜಾ**—(ಪಾ. ಸೂ. ೧-೩-೫-೧) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಛಾಂದಸವಾಗಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. ಛಾಂದಸ ವಾಗಿ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**— ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಉಪ) ನಿಘಾತಸ್ವರ ಬರುತ್ತದೆ.

**ಜಾಯವಃ**— ಜಿ ಜಯೇ. ಧಾತು. **ಕೃವಾಪಾ**—(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ವೃದ್ಧಿ. ಆಯಾದೇಶ. ಪ್ರತ್ಯಯಸ್ವರ ಬರುತ್ತದೆ.

**ಅಸ್ಮೇ**— **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಶೇ ಆದೇಶ.

**ಸುವತೇ**— ಷೂಙ್ ಪ್ರಸವೇ. ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅದಕ್ಕೆ ಅತಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಅಚಿ ಶ್ನುಧಾತುಭ್ರು**— ಎಂಬುದರಿಂದ ಉವಙಾದೇಶ. ಇದು ಙಿತ್ತಾದುದರಿಂದ **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪಚ್ಯತೇ**— ಡುಪಚಿಷ್ ಪಾಕೇ. ಧಾತು. ಕರ್ಮಕರ್ತರಿಯಲ್ಲಿ **ಕರ್ಮವತ್ ಕರ್ಮಣಾ**—(ಪಾ. ಸೂ. ೩-೧-೮೭) ಎಂಬುದರಿಂದ ಕರ್ಮವದ್ಭಾವದಿಂದ ಯಕ್ ಆತ್ಮನೇಪದಾದಿಗಳು ಬರುತ್ತವೆ. ತಿಙಂತದ ಪರವಲ್ಲಿರುವುದ ರಿಂದ ನಿಘಾತಸ್ವರ ಬರುವುದಿಲ್ಲ. ಹಿಂದಿನಂತೆ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಯವಃ**— ಜಾತಿ ಬೋಧನೆಯಲ್ಲಿ ತಾತ್ಪರ್ಯವಿರುವುದರಿಂದ ಏಕವಚನ ಬಂದಿದೆ.

**ದಸ್ಯಂತಿ**— ದಸು ಉಪಕ್ಷಯೇ. ಧಾತು. ದಿವಾದಿ. ಲಿಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಧೇನವಃ**— ಧೇಟ್ ಪಾನೇ. ಧಾತು. **ಧೇಟ ಇಚ್ಚ** (ಉ. ಸೂ. ೩-೩೧೪) ಎಂಬುದರಿಂದ ನುಪ್ರತ್ಯಯ. ಇಕಾರ ಅಂತಾದೇಶ. ಆಗ ಪ್ರತ್ಯಯ ನಿಮಿತ್ತವಾಗಿ ಅದಕ್ಕೆ ಗುಣ. ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ. || ೮ ||



॥ ಸಂಹಿತಾಪಾಠಃ ॥

ಇಮೇ ಯೇ ತೇ ಸು ವಾಯೋ ಬಾಹ್ವೋಜಸೋಂತರ್ನದೀ ತೇ ಪತಯಂ-
ತ್ಯುಕ್ಷಣೋ ಮಹಿ ವ್ರಾಧಂತ ಉಕ್ಷಣಃ ।
ಧನ್ವಞ್ಚಿದ್ಯೇ ಅನಾಶವೋ ಜೀರಾಶ್ಚಿದಗಿರೌಕಸಃ ।
ಸೂರ್ಯಸ್ಯೇವ ರಶ್ಮಯೋ ದುರ್ನಿಯಂತವೋ ಹಸ್ತಯೋರ್ದುರ್ನಿ-
ಯಂತವಃ॥ ೯ ॥

॥ ಪದಪಾಠಃ ॥

ಇಮೇ । ಯೇ । ತೇ । ಸು । ವಾಯೋ ಇತಿ । ಬಾಹುಽಓಜಸಃ । ಅಂತಃ । ನದೀ ಇತಿ । ತೇ । ಪತಯಂತಿ ।
ಉಕ್ಷಣಃ । ಮಹಿ । ವ್ರಾಧಂತಃ । ಉಕ್ಷಣಃ ।
ಧನ್ವನ್ । ಚಿತ್ । ಯೇ । ಅನಾಶವಃ । ಜೀರಾಃ । ಚಿತ್ । ಅಗಿರಾಽಓಕಸಃ ।
ಸೂರ್ಯಸ್ಯಽಇವ । ರಶ್ಮಯಃ । ದುಃಽನಿಯಂತವಃ । ಹಸ್ತಯೋಃ । ದುಃಽನಿಯಂತವಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸು ವಾಯೋ ಶೋಭನಫಲಪ್ರದ ವಾಯುದೇವ ತೇ ತವ ಸ್ವಭೂತಾ ಇಮೇ ಪುರತೋ ದೃಶ್ಯಮಾನಾ ಯೇಽಶ್ವಾಃ ಸಂತಿ ತೇ ನದೀ ನದನೇ ದ್ಯಾವಾಪೃಥಿವ್ಯಾವಂತಸ್ತಯೋರಂತರಾಲೇ ತ್ವಂ ತ್ವಾಂ ಪತಯಂತಿ । ಪಾತಯಂತಿ । ಗಮಯಂತಿ । ಯದ್ವಾ । ತೇ ತವ ಸಂಬಂಧಿನೋಽಶ್ವಾಃ ಪತಯಂತಿ । ಪತಂತಿ । ಯಜ್ಞದೇಶಂ ಗಚ್ಛಂತಿ ॥ ಪತ ಗತೌ ಚೌರಾದಿರದಂತಃ ॥ ಕೀದೃಶಾಸ್ತೇ । ಬಾಹ್ವೋಜಸೋ ಬಾಹುಷು ಪ್ರಕೃಷ್ಟಬಲವಂತಃ । ಉಪಲಕ್ಷಣಮೇತತ್ ಸರ್ವಾಂಗಬಲಾ ಇತ್ಯರ್ಥಃ । ಕಿಂಚೋಕ್ಷಣಃ ಸೇಕ್ತಾರಃ । ಯುವಾನ ಇತ್ಯರ್ಥಃ । ಮಹಿ ಮಹದತಿಪ್ರಭೂತಂ ವ್ರಾಧಂತೋ ವರ್ಧಮಾನಾಃ ತಥೋಕ್ಷಣ ಉಕ್ಷಾಣಃ । ತತ್ಸದೃಶಾ ಇತ್ಯರ್ಥಃ ॥ ವಾ ಷಪೂರ್ವಸ್ಯ ನಿಗಮ ಇತಿ ದೀರ್ಘಾಭಾವಃ ॥ ಕಿಂಚ ಧನ್ವನ್ ಚಿತ್ ಧನ್ವನ್ಯುದಕನಿರ್ಗಮನಾಪಾದಾನಭೂತೇಽಂತರಿಕ್ಷೇಽಪಿ ನಿರಾಲಂಬೇಽನಾಶವೋ ನಾಶರಹಿತಾ ಅವ್ಯಾಪ್ತಾ ವಾ । ಆಕಾಶೇ ವಿಲಂಬಮಕುರ್ವಾಣಾ ಇತ್ಯರ್ಥಃ । ಅತ ಏವ ಜೀರಾಶ್ಚಿತ್ । ಚಿಚ್ಛಬ್ದಃ ಪೂಜಾಯಾಂ । ಅತ್ಯಂತಂ ಕ್ಷಿಪ್ರಗತಯಃ । ಯದ್ವಾ । ಅನಾಶವ ಇತ್ಯನೇನ ಸಹ ಸಮುಚ್ಚಯಾರ್ಥಶ್ಚಿ-ಚ್ಛಬ್ದಃ । ಆಕಾಶಮಾರ್ಗೇಽಕ್ಷೀಣಾಃ ಶೀಘ್ರಗತಯಶ್ಚೇತ್ಯರ್ಥಃ । ಕಿಂಚಾಗಿರೌಕಸಃ । ಗಿರಾ ಓಕಃ ಸ್ಥಾನಂ

**ಯೇಷಾಂ ನಾಸ್ತಿ ತೇ ತಾದೃಶಾಃ । ಭರ್ತ್ಸನಾದಿನಾ ಸ್ಥಿತಿಮಲಭಮಾನಾ ಇತ್ಯರ್ಥಃ ॥ ಛಾಂದಸಸ್ತೃತೀಯಾಯಾ ಅಲುಕ್ ॥ ತದೇವ ಸ್ಪಷ್ಟಯತಿ । ಸೂರ್ಯಸ್ಯ ರಶ್ಮಯ ಇವ ದುರ್ನಿಯಂತವೋ ದುಃಖೇನ ನಿಯಂತವ್ಯಾಃ । ತೇ ಯಥಾ ಕ್ಷಣೇನ ದಶ ದಿಶೋ ವ್ಯಾಪ್ನುವಂತಿ ಬಹವಶ್ಚ ತದ್ವದೇತೇಽಪೀತ್ಯರ್ಥಃ । ಪೂರ್ವಂ ಗಿರಾನಿಗ್ರಾಹ್ಯತ್ವಮುಕ್ತಂ । ಇದಾನೀಂ ಹಸ್ತೇನಾಪ್ಯನಿಗ್ರಾಹ್ಯತ್ವಮಾಹ । ಹಸ್ತಯೋರ್ದುರ್ನಿಯಂತವ ಉಭಾಭ್ಯಾಮಪಿ ಹಸ್ತಾಭ್ಯಾಂ ದುಃಖೇನ ನಿಯಂತವ್ಯಾಃ । ದೇವಯಜನಗಮನಾಯ ಶೀಘ್ರಗಾಮಿನ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಹೇ ಸು ವಾಯೋ**—ಎಲೈ ಶುಭಫಲಪ್ರದನಾದ ವಾಯುವೇ । **ತೇ**—ನಿನಗೆ ಸೇರಿದ । **ಇಮೇ**—ಈ ಪರಿದೃಶ್ಯಮಾನವಾದ । **ಯೇ**—ಯಾವ ಅಶ್ವಗಳು (ಇವೆಯೋ) । **ತೇ**—ಅಂತಹ । **ಬಾಹ್ವೋಜಸಃ**—ಬಾಹುಬಲವುಳ್ಳವುಗಳೂ (ಬಲಿಷ್ಠವಾದವುಗಳೂ) । **ಉಕ್ಷಣಃ**—ತಾರುಣ್ಯವುಳ್ಳವುಗಳೂ । **ಮಹಿ**—ಹೆಚ್ಚಾಗಿ । **ವ್ರಾಧಂತಃ**—ಪ್ರವರ್ಧಮಾನವಾಗುತ್ತಿರುವವೂ । **ಉಕ್ಷಣಃ**—ವೃಷಭಸದೃಶಗಳೂ (ಆಗಿರುವ ಅಶ್ವಗಳು) । **ನದೀ**—ದ್ಯಾವಾಭೂಮಿಗಳ । **ಅಂತಃ**—ಮಧ್ಯಪ್ರದೇಶದಲ್ಲಿ । (ನಿನ್ನನ್ನು) **ಪತಯಂತಿ**—ವಹಿಸುತ್ತವೆ (ಯಜ್ಞಪ್ರದೇಶಕ್ಕೆ ಕರತರುತ್ತವೆ) । **ಧನ್ವನ್ ಚಿತ್**—ನಿರಾಲಂಬವಾದ ಆಕಾಶದಲ್ಲಿಯೂ । **ಅನಾಶವಃ**—ನಾಶರಹಿತವಾಗಿಯೂ । (ಆದುದರಿಂದಲೇ) **ಜೀರಾಃ ಚಿತ್**—ಅತ್ಯಂತ ಕ್ಷಿಪ್ರಗತಿಯುಳ್ಳವೂ । **ಅಗಿರೌಕಸಃ**—ಭರ್ತ್ಸನಾದಿಗಳಿಂದ ನಿಲ್ಲಿಸಲಸಾಧ್ಯವಾದುವೂ (ಆಗಿವೆ) । **ಸೂರ್ಯಸ್ಯ**—ಸೂರ್ಯನ । **ರಶ್ಮಯ ಇವ**—ರಶ್ಮಿಗಳಂತೆ । **ದುರ್ನಿಯಂತವಃ**—ನಿಯಮನಮಾಡಲು ದುಸ್ಸಾಧ್ಯವಾದುವು । **ಹಸ್ತಯೋಃ**—ಎರಡು ಹಸ್ತಗಳಿಂದಲೂ । **ದುರ್ನಿಯಂತವಃ**—ನಿಯಮನಮಾಡಲು ದುಸ್ಸಾಧ್ಯವಾದವು.

॥ ಭಾವಾರ್ಥ ॥

ಶುಭಫಲಪ್ರದನಾದ ಎಲೈ ವಾಯುವೇ, ದೃಢಾಂಗಗಳೂ, ತಾರುಣ್ಯವುಳ್ಳವೂ, ಪ್ರವರ್ಧಮಾನವಾಗುತ್ತಿರುವುವೂ, ಶಕ್ತಿಯಲ್ಲಿ ವೃಷಭಸಮಾನಗಳೂ ಆಗಿರುವ, ನಿನಗೆ ಸೇರಿದ, ಈ ಮುಂದೆ ಕಾಣುವ ಅಶ್ವಗಳು ನಿನ್ನನ್ನು ದ್ಯಾವಾಭೂಮಿಗಳ ಮಧ್ಯೆ (ಇರುವ) ಅಂತರಾಳದಲ್ಲಿ ವಹಿಸುತ್ತವೆ; ನಿರಾಲಂಬವಾದ ಆಕಾಶದಲ್ಲಿಯೂ ನಾಶವಾಗದೆ, ಭರ್ತ್ಸನಾದಿಗಳಿಂದ ಅಪ್ರತಿಹತವಾಗಿರುತ್ತವೆ ; ಸೂರ್ಯರಶ್ಮಿಗಳಂತೆ ನಿಯಮನಮಾಡಲು ಕಷ್ಟಸಾಧ್ಯವಾದವು ; (ಮತ್ತೂ) ಎರಡು ಹಸ್ತಗಳಿಂದಲೂ (ಲಗಾಮನ್ನು ಹಿಡಿದಿದ್ದರೂ) ನಿಯಮನಮಾಡಲು ದುಸ್ಸಾಧ್ಯವಾದವು.

## English Translation.

These your horses, excellent Vayu, strong of limb, youthful and full of vigour, bear you through the space between heaven and earth : growing (are they) in bulk, and strong as oxen : they are not lost in the firmament, but hold on their speed, unretarded by reviling ; difficult are they to be arrested as the beams of the sun ; difficult are they to be arrested by force.

॥ ವಿಶೇಷವಿಷಯಗಳು ॥

ಇಲ್ಲಿ ವಾಯುವಿನ ಅಶ್ವಗಳ ಶಕ್ತಿಯನ್ನು ವರ್ಣಿಸಿ ಅಂತಹ ಅಶ್ವಗಳ ವಾಹನವುಳ್ಳವನಾಗಿ ಸೋಮಪಾನಕ್ಕೆ ದಯಮಾಡು ಎಂಬ ಆಹ್ವಾನವಿದೆ. **ಉಕ್ಷಣಃ** ಇತ್ಯಾದಿಗಳು ಅಶ್ವಗಳ ಸ್ವರೂಪವನ್ನು ವರ್ಣಿಸುವ ವಿಶೇಷಣಗಳು

**ಉಕ್ಷಣಃ**— ಈ ಪದವು ದ್ವಿರುಕ್ತವಾಗಿದೆ. ಎರಡು ಸಲವೂ ವಿವರಣೆಯು ಬೇರೆಬೇರೆಯಾದರೂ ತಾತ್ಪರ್ಯವು ಒಂದೇ ಆಗುತ್ತದೆ. ಮೊದಲನೆಯ ಸಲ **ಸೇಕ್ತಾರಃ ಯುವಾನಃ** ಪರ್ಯಸೇಚನೆಗೆ ಸಾಮರ್ಥ್ಯವುಳ್ಳ ತಾರುಣ್ಯವುಳ್ಳವು ಎಂದರ್ಥಮಾಡಿದೆ. **ಸೇಚನ** ಎಂದರೆ ಸುರಿಸು ಎಂಬರ್ಥವನ್ನು ಕೊಡುವ **ಉಕ್ಷ್** ಧಾತುವಿನಿಂದ ನಿಷ್ಪನ್ನವಾಗಿದೆ. ಭಕ್ತರಿಗೆ ಇಷ್ಟಾರ್ಥಗಳನ್ನು ಸುರಿಸುವ ದೇವತೆಗಳಿಗೂ ಈ ಪದವು ವಿಶೇಷಣವಾಗಬಹುದು **ಉಕ್ಷನ್** ಶಬ್ದವನ್ನು ನಿರುಕ್ತಕಾರರು ಮಹನ್ನಾಮಗಳಲ್ಲಿ ಪಠಿಸಿದ್ದಾರೆ. ( ನಿ.೩-೧೩). ಮತ್ತು

**ಘಸತ್ತ ಇಂದ್ರ ಉಕ್ಷಣಃ ಪ್ರಿಯಂ ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೧೩)

ಎಂಬ ಋಕ್ಕನ್ನು ಉದಹರಿಸಿ ಅಲ್ಲಿ ಉಪಯೋಗಿಸಿರುವ **ಉಕ್ಷಣ** ಶಬ್ದಕ್ಕೆ ಅರ್ಥವನ್ನು ಹೇಳುವಾಗ **ಉಕ್ಷಣ ಉಕ್ಷತೇರ್ವೃದ್ಧಿಕರ್ಮಣಃ ಉಕ್ಷಂತ್ಯುದಕೇನೇತಿ ವಾ** ( ನಿ. ೧೨-೯ ) ವೃದ್ಧಿಯಾಗು ಎಂಬರ್ಥವನ್ನು ಕೊಡುವ **ಉಕ್ಷ್** ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಉದಕದೊಂದಿಗೆ ವೃದ್ಧಿಯಾಗತಕ್ಕ ಎಂಬರ್ಥವನ್ನು ಆ ಸಂದರ್ಭ ದಲ್ಲಿ ಮಾಡಿರುತ್ತಾರೆ. ಸಾಧಾರಣವಾಗಿ ಈ ಪದವು ಶಕ್ತಿಯನ್ನೂ ಸಾಮರ್ಥ್ಯವನ್ನೂ ಸೂಚಿಸುವ ಸಂದರ್ಭದಲ್ಲಿ ಮಾತ್ರ ಉಪಯೋಗಿಸಲ್ಪಟ್ಟಿದೆ. ಸೇಚನಸಾಮರ್ಥ್ಯದಲ್ಲಿ ತಾತ್ಪರ್ಯವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿರುವಂತೆಯೇ,

**ತೇ ಜಜ್ಞಿರೇ ದಿವ ಋಷ್ವಾಸ ಉಕ್ಷಣೋ ರುದ್ರಸ್ಯ ಮರ್ಯಾ ಅಸುರಾ ಅರೇಪಸಃ ।**

(ಋ. ಸಂ. ೧-೬೪-೨)

**ಶೃಣ್ವಂತಮಗ್ನಿಂ ಘೃತಪೃಷ್ಠಮುಕ್ಷಣಂ ಪೃಣಂತಂ ದೇವಂ ಪೃಣತೇ ಸುವೀರ್ಯಂ ।**

(ಋ. ಸಂ. ೧೦-೧೨೨-೪)

ಇತ್ಯಾದಿ ಋಕ್ಕುಗಳಲ್ಲೂ ಸಹ **ಉಕ್ಷಣ**ಶಬ್ದಕ್ಕೆ ಸೇಚನವೆಂಬ ಅರ್ಥವಾದರೂ ಸಹ ಸೇಚನಸಾಮರ್ಥ್ಯವೆಂದು ಶಕ್ತಿಯಲ್ಲಿ ತಾತ್ಪರ್ಯವಿರುವುದರಿಂದ **ಯುವಾನಃ** ಎಂದು ಅರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಮೊದಲನೆಯ ಪದಕ್ಕೆ **ಯುವಾನಃ** ಎಂದೂ, ಎರಡನೆಯ ಪದಕ್ಕೆ ಸೇಚನಸಾಮರ್ಥ್ಯವುಳ್ಳ ವೃಷಭಕ್ಕೆ ಸಮಾನ ವೆಂದೂ ವಿವರಿಸಿದೆ.

**ವ್ರಾಧಂತಃ—ವರ್ಧಮಾನಾಃ** ಪ್ರವರ್ಧಮಾನವಾದವು ಎಂದರ್ಥಮಾಡಿದೆ. **ವ್ರಾಧನ್** ಶಬ್ದವು ಮಹ ನ್ನಾಮಗಳಲ್ಲಿ ಪಠಿತವಾಗಿದೆ ಅತಿಶಯವಾಗಿ ಮಹಿಮೆಯುಳ್ಳವನು ಎಂದರ್ಥ. ಈ ವಿಶೇಷಣವು ಪ್ರಶಂಸಾರ್ಹವಾದ ವಸ್ತುಗಳ ಪರವಾಗಿರುವಂತೆ ಪ್ರಭೂತವಾದ ಶಕ್ತಿಯುಳ್ಳ ಶತ್ರುಪರ್ಯಾಯವಾಗಿಯೂ ಪ್ರಯೋಗಿಸಲ್ಪಟ್ಟಿದೆ. ಉದಾಹರಣೆಗೆ—

**ಸ ವ್ರಾಧತೋ ನಹುಷೋ ದಂಸುಜೂತಃ ಶರ್ಧಸ್ತರೋ ನರಾಂ ಗೂರ್ತಶ್ರವಾಃ ।**
**ವಿಸೃಷ್ಟರಾತಿರ್ಯಾತಿ ವಾಳ್ಹಸೃತ್ವಾ ವಿಶ್ವಾಸು ಪೃತ್ಸು ಸದಮಿಚ್ಛೂರಃ ।**

(ಋ. ಸಂ. ೧-೧೨೨-೧೦)

ಎಂಬ ಋಕ್ಕಿನಲ್ಲಿ **ಹಿಂಸಕಾನ್ ಮಹತಃ ಅಪಿ ।** ಹಿಂಸಿತರಾದ ಶತ್ರುಗಳು ಅತ್ಯಂತ ಪ್ರಬಲರಾದಾಗ್ಯೂ ಸಹ ಎಂದು ಶತ್ರುಪರ್ಯಾಯವಾದ ಅರ್ಥವನ್ನು ಮಾಡಿದೆ. ಇದರಂತೆಯೇ,

**ಶತ್ರೂಯಂತೋ ಅಭಿ ಯೇ ನಸ್ತತಸ್ರೇ ಮಹಿ ವ್ರಾಧಂತ ಓಗಣಾಸ ಇಂದ್ರ ।**
**ಅಂಧೇನಾಮಿತ್ರಾಸ್ತಮಸಾ ಸಚಂತಾಂ ಸುಜ್ಯೋತಿಷೋ ಅಕ್ತವಸ್ತಾಁ ಅಭಿ ಷ್ಯುಃ ॥**
( ಋ. ಸಂ. ೧೦-೮೯-೧೫ )

ಎಂಬಲ್ಲಿಯೂ **ವ್ರಾಧಂತಃ ಅಸ್ಮಾನ್ ಬಾಧಮಾನಾಃ ।** ತಮ್ಮನ್ನು ಅತಿಯಾಗಿ ಹಿಂಸಿಸುವ ಎಂದರ್ಥಮಾಡಿದೆ.

ಪ್ರಕೃತವಾದ ಋಕ್ಕಿನಲ್ಲಿ ವಾಯುವಿನ ಅಶ್ವಗಳ ಪರಾಕ್ರಮವನ್ನೂ ಪ್ರವೃದ್ಧಮಾನವಾದ ಶೌರ್ಯವನ್ನೂ ಹೇಳತಕ್ಕ ವಿಶೇಷಣವಾಗಿದೆ.

**ಧನ್ವನ್ ಚಿತ್—ಧನ್ವನಿ ಉದಕನಿರ್ಗಮನಾಪಾದಾನಭೂತೇಽಂತರಿಕ್ಷೇಽಪಿ ನಿರಾಲಂಬೇ ।** ಅವಲಂಬನವಿಲ್ಲದ ಆಕಾಶದಲ್ಲಿಯೂ ಸಹ ಎಂದರ್ಥ. **ಅಂಬರಂ, ವಿಯತ್, ವ್ಯೋಮ** ಇತ್ಯಾದಿ ೧೬ ಅಂತರಿಕ್ಷ ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೧೦) **ಧನ್ವಾಂತರಿಕ್ಷಂ ಧನ್ವಂತ್ಯಸ್ಮಾದಾಪಃ ।** ಇಲ್ಲಿಂದ ಉದಕಗಳು ಹರಿಯುವುದರಿಂದ **ಧನ್ವ**ವೆಂಬ ಹೆಸರು ಪ್ರಸಿದ್ಧವಾಗಿದೆ. ನಿರುಕ್ತಕಾರರು—

**ಯಃ ಪರಸ್ಯಾಃ ಪರಾವತಸ್ತಿರೋ ಧನ್ವಾತಿರೋಚತೇ । ಸ ನಃ ಪರ್ಷದತಿ ದ್ವಿಷಃ ॥**
(ಋ. ಸಂ. ೧೦-೯೧೭-೨)

ಎಂಬ ವಾಕ್ಯವನ್ನು ಉದಹರಿಸಿ **ಧನ್ವ** ಶಬ್ದದ ನಿರ್ವಚನವನ್ನು ಮೇಲೆ ಹೇಳಿದಂತೆ ತಿಳಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಬಾಹ್ವೋಜಸಃ**— ಬಾಹುಷು ಓಜಃ ಯೇಷಾಂ ತೇ. ಬಹುವ್ರೀಹೌ **ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೧-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬಂದಾಗ ಉಕಾರ ಉದಾತ್ತವಾಗುತ್ತದೆ. ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ಅನುದಾತ್ತ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಪತಯಂತಿ**— ಪತ ಗತೌ ಧಾತು. ಚುರಾದಿ. ಇದು ಅದಂತ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್ ಬಂದಾಗ ಅಕಾರಕ್ಕೆ ಲೋಪ. **ಅಚಃ ಪರಸ್ಮಿನ್ ಪೂರ್ವವಿಧೌ** ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಉಪಧಾವೃದ್ಧಿ ಬರುವುದಿಲ್ಲ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುತ್ತದೆ.

**ಉಕ್ಷಣಃ**— ಉಕ್ಷ ಸೇಚನೇ. ಧಾತು. **ಶ್ವನ್ನುಕ್ಷನ್**—(ಉ. ಸೂ. ೧-೧೫೭) ಎಂಬುದರಿಂದ ಕನಿ ಪ್ರತ್ಯಯ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ವಾಷಪೂರ್ವಸ್ಯ ನಿಗಮೇ** (ಪಾ. ಸೂ. ೬-೪-೯) ಎಂಬುದರಿಂದ ಉಪಧಾದೀರ್ಘ ಬರುವುದಿಲ್ಲ.

**ವ್ರಾಧಂತಃ**—ವ್ರಧು ವೃದ್ಧೌ. ಧಾತು. ವ್ಯತ್ಯಯದಿಂದ ಲಟಿಗೆ ಶತ್ರಾದೇಶ. ಛಾಂದಸವಾಗಿ ಧಾತುವಿಗೆ ಆಮಾಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬಂದಾಗ ಯಣಾದೇಶ. ಲಸಾರ್ವಧಾತುಕ ಅನುದಾತ್ತ ವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಬಹುವಚನಾಂತರೂಪ.

**ಧನ್ವನ್**—**ಸುಪಾಂ ಸುಲುಕ್**—(ಪಾ. ಸೂ. ೩-೧-೩೯) ಎಂಬುದರಿಂದ ಸಪ್ತಮಿಗೆ ಲುಕ್.

**ಅನಾಶವಾಃ**—ನ ವಿದ್ಯತೇ ಆಶುಃ ಯೇಷಾಂ ತೇ. ಅನಾಶವಃ. **ನಞ್ಸುಭ್ಯಾಂ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಜೀರಾಃ**—ಜು ಗತೌ. ಸೌತ್ರ ಧಾತು. **ಜೋರೀಚ** (ಉ ಸೂ. ೨-೧೮೧) ಎಂಬುದರಿಂದ ರಕ್ ಪ್ರತ್ಯಯ. ಧಾತುವಿಗೆ ಈಕಾರಾಂತಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಗಿರೌಕಸಃ**—ಗಿರಾ ಓಕಃ ಸ್ಥಾನಂ ಯೇಷಾಂ ತೇ ಗಿರೌಕಸಃ. ನ ಗಿರೌಕಸಃ ಅಗಿರೌಕಸಃ. ಛಾಂದಸ ವಾಗಿ ತೃತೀಯಾಕ್ಕೆ ಲುಕ್ ಬರುವುದಿಲ್ಲ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪ್ರಕೃತಿಸ್ವರ ಬರುತ್ತದೆ.

**ಮುರ್ನಿಯಂತವಃ**—ಯಮು ಉಪರಮೇ. ಧಾತು. ಔಣಾದಿಕ ತುನ್ ಪ್ರತ್ಯಯ. ಧಾತು ಮಕಾರಕ್ಕೆ ಅನುಸ್ವಾರ ಪರಸವರ್ಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ ಪ್ರಾದಿಸಮಾಸವಾದಾಗ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. || ೯ ||

ಇಲ್ಲಿಗೆ ನೂರ ಮೂವತ್ತೈದನೇ ಸೂಕ್ತ ಮುಗಿದುದು.



# ನೂರ ಮೂವತ್ತಾರನೆಯ ಸೂಕ್ತವು

**ಪ್ರ ಸು ಜ್ಯೇಷ್ಠಮಿತಿ ಸಪ್ತರ್ಚಂ ತೃತೀಯಂ ಸೂಕ್ತಂ। ಋಷಿಶ್ಚಾನ್ಯಸ್ಮಾದಿತಿ ಪರಿಭಾಷಯಾ ಪರುಚ್ಛೇಪ ಋಷಿಃ। ಅತ್ಯಷ್ಟಿಶ್ಛಂದಃ। ಊತೀ ದೇವಾನಾಮಿತ್ಯಂತ್ಯಾ ತ್ರಿಷ್ಟುಪ್। ಅತ್ರ ತ್ರಿಷ್ಟುಬಂತ–ಪರಿಭಾಷಾ ನಾಶ್ರೀಯತೇ ಸರ್ವಮಾತ್ಯಷ್ಟಮಿತಿ ವಿಶೇಷಪರಿಭಾಷಯಾ ಬಾಧಿತತ್ವಾತ್। ಮಿತ್ರಾವರುಣೌ ದೇವತಾ। ಅಂತ್ಯಯೋಸ್ತು ತನ್ಮಂತ್ರಲಿಂಗೋಕ್ತದೇವತಾ। ತಥಾ ಚಾನುಕ್ರಾಂತಂ। ಪ್ರ ಸು ಸಪ್ತ ಮೈತ್ರಾವರುಣಂ ತ್ವಂತ್ಯೇ ಲಿಂಗೋಕ್ತದೇವತೇ ಅಂತ್ಯಾ ತ್ರಿಷ್ಟುಬಿತಿ। ತುಶಬ್ದಪ್ರಯೋಗಾದಿದಮಾದಿಕೇ ದ್ವೇ ಸೂಕ್ತೇ ಮೈತ್ರಾವರುಣದೇವತಾಕೇ || ವಿನಿಯೋಗೋ ಲೈಂಗಿಕಃ ||**

ಅನುವಾದವು—**ಪ್ರ ಸು ಜ್ಯೇಷ್ಠಂ** ಎಂಬ ಈ ಸೂಕ್ತವು ಇಪ್ಪತ್ತನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪರುಚ್ಛೇಪನು ಋಷಿಯು. ಅತ್ಯಷ್ಟಿ ಛಂದಸ್ಸು. **ಊತೀ ದೇವಾನಾಂ** ಎಂಬ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಇಲ್ಲಿ ಈ ಸೂಕ್ತದ ಛಂದಸ್ಸನ್ನು ಹೇಳುವಾಗ **ತ್ರಿಷ್ಟುಬಂತಪರಿಭಾಷಯಾ ನಾಶ್ರೀಯತೇ ಸರ್ವಮಾತ್ಯಷ್ಟಮಿತಿ ವಿಶೇಷಪರಿಭಾಷಯಾ ಬಾಧಿತತ್ವಾತ್**

ಎಂದು ಹೇಳಿರುವಂತೆ—ಈ ಸೂಕ್ತವು ಅತ್ಯಷ್ಟಿ ಛಂದಸ್ಕವು, ಕೊನೆಯ ಋಕ್ಕು ಮಾತ್ರ ತ್ರಿಷ್ಟುಪ್ ಛಂದಸ್ಕವು ಎಂದಿರುವುದು. ಈ ಸೂಕ್ತಕ್ಕೆ ಮಿತ್ರಾವರುಣರು ದೇವತೆಗಳು. ಕೊನೆಯ ಎರಡು ಋಕ್ಕುಗಳಿಗೆ ಲಿಂಗೋಕ್ತದೇವತೆಗಳೇ ದೇವತೆಯು. ಅನುಕ್ರಮಣಿಕೆಯಲ್ಲಿ—**ಪ್ರ ಸು ಸಪ್ತ ಮೈತ್ರಾವರುಣಂ ತ್ವಂತ್ಯೇ ಲಿಂಗೋಕ್ತದೇವತೇ ಅಂತ್ಯಾ ತ್ರಿಷ್ಟುಬಿತಿ** ಎಂದು ಹೇಳಿರುವುದು ಇಲ್ಲಿ ತುಶಬ್ದ ಪ್ರಯೋಗವಿರುವುದರಿಂದ ಈ ಸೂಕ್ತವೂ ಮುಂದಿನ ಸೂಕ್ತವೂ ಮಿತ್ರಾವರುಣದೇವತಾಕವೆಂದು ತಿಳಿಯಬೇಕು. ವಿನಿಯೋಗವು ಲೈಂಗಿಕವು.

## ಸೂಕ್ತ—೧೩೬

ಮಂಡಲ—೧ ॥ ಅನುವಾಕ—೨೦ ॥ ಸೂಕ್ತ—೧೩೬ ॥

ಅಷ್ಟಕ—೨ ॥ ಅಧ್ಯಾಯ—೧ ॥ ವರ್ಗ—೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥

॥ ಋಷಿಃ—ಪರುಚ್ಛೇಪೋ ದೈವೋದಾಸಿಃ ॥

॥ ದೇವತಾ—೧-೫, ಮಿತ್ರಾವರುಣೌ । ೬-೭, ಲಿಂಗೋಕ್ತದೇವತಾಃ ॥

॥ ಛಂದಃ—೧-೬, ಅತ್ಯಷ್ಟಿಃ । ೭ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ಸು ಜ್ಯೇಷ್ಠಂ ನಿಚಿರಾಭ್ಯಾಂ ಬೃಹನ್ನಮೋ ಹವ್ಯಂ ಮತಿಂ ಭರತಾ ಮೃಳ-
ಯದ್ಭ್ಯಾಂ ಸ್ವಾದಿಷ್ಠಂ ಮೃಳಯದ್ಭ್ಯಾಂ ।
ತಾ ಸಮ್ರಾಜಾ ಘೃತಾಸುತೀ ಯಜ್ಞೇಯಜ್ಞ ಉಪಸ್ತುತಾ ।
ಅಥೈನೋಃ ಕ್ಷತ್ರಂ ನ ಕುತಶ್ಚನಾಧೃಷೇ ದೇವತ್ವಂ ನೂ ಚಿದಾಧೃಷೇ ॥ ೧ ॥

॥ ಪದಪಾಠಃ ॥

ಪ್ರ । ಸು । ಜ್ಯೇಷ್ಠಂ । ನಿಽಚಿರಾಭ್ಯಾಂ । ಬೃಹತ್ । ನಮಃ । ಹವ್ಯಂ । ಮತಿಂ । ಭರತ । ಮೃಳಯತ್ಽಭ್ಯಾಂ ।
ಸ್ವಾದಿಷ್ಠಂ । ಮೃಳಯತ್ಽಭ್ಯಾಂ ।
ತಾ । ಸಂಽರಾಜಾ । ಘೃತಾಸುತೀ ಇತಿ ಘೃತಽಆಸುತೀ । ಯಜ್ಞೇಽಯಜ್ಞೇ । ಉಪಽಸ್ತುತಾ ।
ಅಧ । ಏನೋಃ । ಕ್ಷತ್ರಂ । ನ । ಕುತಃ । ಚನ । ಆಽಧೃಷೇ । ದೇವಽತ್ವಂ । ನು । ಚಿತ್ । ಆಽಧೃಷೇ ॥ ೧ ॥

|| ಸಾಯಣಭಾಷ್ಯಂ ||

ಹೇ ಋತ್ವಿಜಃ ಮಿತ್ರಾವರುಣಾಭ್ಯಾಂ ಜ್ಯೇಷ್ಠಂ ಪ್ರಶಸ್ಯಂ ಬೃಹನ್ಮಹದತಿಪ್ರವೃದ್ಧಂ ನಮೋ ನಮಸ್ಕಾರೋಪಲಕ್ಷಿತಂ ಸ್ತೋತ್ರಂ ತದುಪಲಕ್ಷಿತಂ ಹವಿರ್ಲಕ್ಷಣಮನ್ನಂ ವಾ ಪ್ರ ಭರತ । ಸಂಪಾದಯತ । ನಮ ಇತ್ಯನ್ನನಾಮ ನಮ ಆಯುರಿತಿ ತನ್ನಾಮಸು ಪಾಠಾತ್ । ಕಿಂಚ ಹವ್ಯಂ ಹವ್ಯಾಂ ಮತಿಂ ತತ್ಪ್ರದಾನವಿಷಯಾಂ ಬುದ್ಧಿಂ ಭರತ । ಯದ್ವಾ । ಮತಿಂ ಪೂಜ್ಯಂ ಹವ್ಯಂ ಹವಿರ್ಭರತ । ಪೂರ್ವತ್ರ ಪುರೋಡಾಶಾದ್ಯದನೀಯಮನ್ನಂ। ಇದಾನೀಂ ತು ಸೋಮಾಜ್ಯಾದಿರೂಪಂ ಪೇಯಂ ಹವಿರಿತಿ ವಿವೇಕಃ । ಕೀದೃಶಾಭ್ಯಾಂ ತಾಭ್ಯಾಂ । ನಿಚಿರಾಭ್ಯಾಂ ನಿತರಾಂ ಚಿರಕಾಲಾಭ್ಯಾಂ । ನಿತ್ಯಾಭ್ಯಾಮಿತ್ಯರ್ಥಃ । ಪ್ರವಾಹ-ರೂಪೇಣೇತಿ ಭಾವಃ । ಕಿಂಚ ಮೃಳಯದ್ಭ್ಯಾಂ ಸ್ತುತ್ಯಾ ಹವಿಃಸ್ವೀಕಾರೇಣ ಸ್ವಯಂ ಮೃಡಿತ್ವಾ ಯಜಮಾನಮಪಿ ಸುಖಯದ್ಭ್ಯಾಂ ತಥಾ ಸ್ವಾದಿಷ್ಠಂ ಸ್ವಾದುತರಂ ಮೃಳಯದ್ಭ್ಯಾಂ ಹವಿಃ ಸುಖಯದ್ಭ್ಯಾಂ । ಭಕ್ಷಯದ್ಭ್ಯಾಮಿತ್ಯರ್ಥಃ । ಕಸ್ತಯೋರ್ವಿಶೇಷ ಇತಿ ತತ್ರಾಹ । ತಾ ತೌ ಮಿತ್ರಾ-ವರುಣೌ ಸಮ್ರಾಜಾ ಸಮ್ಯಗ್ರಾಜಮಾನೌ ॥ ರಾಜತೇಃ ಕ್ವಿಪ್ । ಮೋ ರಾಜಿ ಸಮಃ ಕ್ವಾವಿತಿ ಸಮೋ ಮಕಾರಸ್ಯ ಮಕಾರಃ ॥ ಘೃತಾಸುತೀ । ಘೃತಮಾಸೂಯತ ಆದೀಯತೇ ಯಾಭ್ಯಾಂ ತೌ ತಾದೃಶೌ । ಯದ್ವಾ । ಘೃತಮುದಕಂ ವೃಷ್ಟಿಲಕ್ಷಣಂ ಪ್ರಸೂಯತೇ ಸರ್ವತ್ರಾನುಜ್ಞಾಯತೇ ಯಾಭ್ಯಾಂ ತೌ । ಏತಯೋರಹೋರಾತ್ರಾಭಿಮಾನಿದೇವತ್ವಾದಹೋರಾತ್ರದ್ವಾರಾ ವೃಷ್ಟ್ಯುತ್ಪಾದಕತ್ವಾತ್ ಅಹೋರಾತ್ರೇ ವೈ ಮಿತ್ರಾವರುಣಾವಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ ವರ್ಷತಿ । ತೈ. ಸಂ. ೨-೧-೭-೩ । ಇತಿ ಶ್ರುತೇರ್ವೃಷ್ಟ್ಯನುಜ್ಞಾಪ್ರದತ್ವಂ ಪ್ರಸಿದ್ಧಂ । ಕಿಂಚೈತೌ ಯಜ್ಞೇ ಯಜ್ಞೇ ಸರ್ವೇಷ್ವಪಿ ಯಜ್ಞೇಷೂಪಸ್ತುತಾ ಸರ್ವೈರೃತ್ವಿಗ್ಭಿಃ ಸ್ತೂಯಮಾನೌ ॥ ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ಅಥಾಪಿ ಚೈನೋರೇನಯೋಃ ॥ ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದೋಸಿ ಚ । ಪಾ. ೭-೩-೧೦೪ । ಇತಿ ಗುಣಾಭಾವೇಽತೋ ಗುಣ ಇತಿ ಪರರೂಪತ್ವಂ ॥ ಕ್ಷತ್ರಂ ಬಲಂ ಕುತಶ್ಚನ ಕಸ್ಮಾದಪಿ ಚ ಶತ್ರೋ ರಾಕ್ಷಸಾದೇಃ ಸಕಾಶಾತ್ ಕಸ್ಮಾದಪ್ಯುಪಾಯಾದ್ವಾ ನಾಧೃಷೇ । ಆಧರ್ಷಿತುಂ ಶಕ್ಯಂ ನ ಭವತಿ ॥ ಕೃತ್ಯಾರ್ಥೇ ತವೈಕೇನಿತಿ ಕೇನ್ಪ್ರತ್ಯಯಃ ॥ ಕಿಂಚ ತಯೋರ್ದೇವತ್ವಂ ನೂ ಚಿತ್ ದೇವಭಾವೋಽಪಿ ನಾಧೃಷೇ । ಆಧರ್ಷಣಾಯೋಗ್ಯಃ । ಯದ್ವಾ । ಪೂರ್ವಮಿವೇದಾನೀಮಪಿ । ನೂ ಚಿದಿತಿ ನಿಪಾತಃ ಪುರಾಣನವಯೋರಿತಿ ಯಾಸ್ಕೇನೋಕ್ತತ್ವಾತ್ । ನಿ. ೪-೧೭ । ಆಧೃಷೇ ನ ಕೇನಾಪ್ಯಾಧರ್ಷಣೀಯೋ ಭವತಿ । ಏತಯೋರ್ಬಲಂ ನಾಧೃಷ್ಯಂ ಕಿಮು ತದ್ದೇವತ್ವಮಿತಿ ಭಾವಃ ॥

|| ಪ್ರತಿಪದಾರ್ಥ ||

**ಹೇ ಋತ್ವಿಜಃ**—ಎಲೈ ಋತ್ವಿಜರೇ | **ನಿಚಿರಾಭ್ಯಾಂ**—(ನಿತ್ಯರೂ) ಬಹು ಪುರಾತನರೂ | **ಮೃಳಯ-ದ್ಭ್ಯಾಂ** - (ಹವಿಃಸ್ವೀಕಾರದಿಂದ ತುಷ್ಟರಾಗಿ ಯಜಮಾನರನ್ನು) ತುಷ್ಟಿಪಡಿಸುವವರೂ | **ಸ್ವಾದಿಷ್ಠಂ**—ಅತ್ಯಂತ ರುಚಿಕರವಾದ (ಹವಿಸ್ಸನ್ನು) | **ಮೃಳಯದ್ಭ್ಯಾಂ**—ಭಕ್ಷಣಮಾಡುವವರೂ (ಆದ) | **ತಾ**—ಆ ಮಿತ್ರಾವರುಣ ರಿಬ್ಬರಿಗೂ | **ಸು ಜ್ಯೇಷ್ಠಂ**—ಪ್ರಶಸ್ಯವಾದುದೂ | **ಬೃಹತ್**—ಹೆಚ್ಚಾದುದೂ ಆದ | **ನಮಃ**—(ನಮಸ್ಕಾರ ಪೂರ್ವಕವಾಗಿ ದತ್ತವಾದ) ಅನ್ನವನ್ನು | **ಪ್ರ ಭರತ**—ಹೆಚ್ಚಾಗಿ ಸಂಪಾದನೆ ಮಾಡಿ (ಹೆಚ್ಚಾಗಿ ಅರ್ಪಿಸಿ) | **(ಕಿಂಚ—**

ಮತ್ತೂ) | **ಹವ್ಯಂ**—ಪೂಜ್ಯವಾದ | **ಮತಿಂ**—(ಅವರಿಗೆ ದಾನಮಾಡಬೇಕೆಂಬ) ಬುದ್ಧಿಯನ್ನು | ಅಥವಾ | [**ಮತಿಂ**—ಪೂಜ್ಯವಾದ | **ಹವ್ಯಂ**—(ಸೋಮಾಜ್ಯಾದಿ) ಹವಿಸ್ಸನ್ನು]· **ಪ್ರ ಭರತೆ**—ಸಂಪಾದಿಸಿ (ಅರ್ಪಿಸಿ) | **ತಾ**—ಆ ಮಿತ್ರಾವರುಣರಿಬ್ಬರೂ | **ಸಮ್ರಾಜಾ**—ಚೆನ್ನಾಗಿ ಪ್ರಕಾಶಿಸುವವರು (ಸಮ್ರಾಟರು) | ಮತ್ತು **ಘೃತಾಸುತೀ**—ಘೃತದಾನಾರ್ಹರು (ವೃಷ್ಟಿರೂಪವಾದ ಉದಕವನ್ನು ಕೊಡಿಸುವವರು) | ಮತ್ತು **ಯಜ್ಞೇಯಜ್ಞೇ**—ಪ್ರತಿ ಯಜ್ಞದಲ್ಲಿಯೂ | **ಉಪಸ್ತುತಾ**—(ಋತ್ವಿಜರಿಂದ) ಉಪಸ್ತುತ್ಯರು | **ಅಥ**—ಮತ್ತೂ | **ಏನೋಃ**—ಇವರಿಬ್ಬರ | **ಕ್ಷತ್ರಂ**—ಬಲವು | **ಕುತಃ ಚನ**—(ರಾಕ್ಷಸಾದಿಯಾಗಿ) ಯಾರಿಂದಲೂ (ಯಾವರೀತಿಯಿಂದಲೂ) | **ನ ಆಧೃಷೇ**—ಪ್ರತಿಹತವಾದುದಲ್ಲ | **ದೇವತ್ವಂ ನೂ ಚಿತ್**—ದೇವತ್ವವೂ ಕೂಡ | **(ನ) ಆಧೃಷೇ**—ಪ್ರತಿಭಟಿಸಲು ಸಾಧ್ಯವಾದುದಲ್ಲ

|| ಭಾವಾರ್ಥ ||

ಎಲೈ ಋತ್ವಿಜರೇ, ನಿತ್ಯರೂ (ಬಹು ಪುರಾತನರೂ), ಹವಿರಾದಿಗಳಿಂದ ತಾವು ತುಷ್ಟರಾಗಿ ಯಾಗಕರ್ತೃಗಳನ್ನು) ತುಷ್ಟಿಪಡಿಸುವವರೂ, ಅತಿ ರುಚಿಯಾದ ಹವಿಸ್ಸಿನಿಂದ ತೃಪ್ತಿಪಡುವವರೂ ಆದ (ಮಿತ್ರಾವರುಣರಿಗೆ), ಅತಿ ಶ್ರೇಷ್ಠವೂ, ವಿಪುಲವೂ ಆದ (ನಮಸ್ಕಾರಪೂರ್ವಕವಾದ) ಅನ್ನವನ್ನು ಅರ್ಪಿಸಿ (ಅವರ ವಿಷಯದಲ್ಲಿ ಪೂಜ್ಯಬುದ್ಧಿಯುಳ್ಳವರಾಗಿ); (ಅವರಿಗೆ) ಪೂಜ್ಯವಾದ (ಆಜ್ಯಾದಿ) ಹವಿಸ್ಸನ್ನು ಅರ್ಪಿಸಿ; ಅವರಿಬ್ಬರೂ ಸಮ್ರಾಟರು (ಮಹಾಕಾಂತಿ ವಿಶಿಷ್ಟರು); (ಅವರನ್ನುದ್ದೇಶಿಸಿ) ಘೃತವು ಹುತವಾಗುತ್ತದೆ. (ಅವರ ಅಪ್ಪಣೆಯಿಂದ ವೃಷ್ಟ್ಯುದಕವು ನಮಗೆ ಲಬ್ಧವಾಗುತ್ತದೆ); ಪ್ರತಿಯೊಂದು ಯಜ್ಞದಲ್ಲಿಯೂ ಸ್ತುತ್ಯರು; ಅವರು (ರಾಕ್ಷಸಾದಿ) ಎಲ್ಲರಿಂದಲೂ ಅಪ್ರತಿಹತರು; ಅದರಂತೆಯೇ ಅವರ ದೇವತ್ವವೂ ಎದುರಿಸಲಸಾಧ್ಯವಾದುದು.

English Translation·

Offer most excellent and ample adoration, aud reverential oblation, to those two deities who have existed from of old ; who confer happiness (on their worshippers), and delight in most sweet (libations) ; for they are both imperial (sovereigns, in whose honour) oblations of butter are poured out, and who are glorified at every sacrifice, whence their might is not in any way to be opposed ; their divinity is not to be resisted.

|| ವಿಶೇಷವಿಷಯಗಳು ||

ಮಿತ್ರಾವರುಣರಿಗೆ ಹವಿಸ್ಸನ್ನು ಅರ್ಪಿಸುವ ಕಾಲದಲ್ಲಿ ಅವರ ವಿಶೇಷ ಗುಣಗಳನ್ನು ಇಲ್ಲಿ ಸ್ತುತಿಸಿದೆ. ಯಜಮಾನರಿಗೆ ಸಂತೋಷವನ್ನುಂಟುಮಾಡುವುದು ಅವರ ಸ್ವಭಾವವಾಗಿದೆ· ವೃಷ್ಟ್ಯುದಕಾದಿ ಸಾಧನಗಳಿಂದ ಅವರು ಯಜ್ಞಕರ್ತರಿಗೆ ತುಷ್ಟಿಯನ್ನುಂಟುಮಾಡುತ್ತಾರೆ. ಅವರ ಕ್ಷತ್ರವೂ ದೇವತ್ವವೂ ಅಪ್ರತಿಹತವಾದುದು.

**ಮೃಳಯದ್ಭ್ಯಾಂ—ಸ್ತುತ್ಯಾ ಹವಿಃಸ್ವೀಕಾರೇಣ ಸ್ವಯಂ ಮೃಡಿತ್ವಾ ಯಜಮಾನಮಪಿ ಸುಖಯದ್ಭ್ಯಾಂ |** ಹವಿಸ್ಸನ್ನು ಸ್ವೀಕಾರಮಾಡಿ ತಾವೂ ಸಂತುಷ್ಟರಾಗಿ ಯಜ್ಞಕರ್ತರನ್ನೂ ಸುಖಪಡಿಸುವವರಾದ ಮಿತ್ರಾವರುಣರಿಗೆ ಎಂದರ್ಥ. ನಿರುಕ್ತಕಾರರು ಈ ಪದದ ಅರ್ಥವನ್ನು ವಿವರಿಸುವಾಗ ಎರಡು ಋಕ್ಕುಗಳನ್ನು ಉದಹರಿಸಿ ಈ ಪದದ ಮೂಲಧಾನಮಿತಅರ್ಥವನ್ನು ತೋರಿಸಿದ್ದಾರೆ. ಮೊದಲನೆಯದಾಗಿ,

**ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ ।**
**ಗಾಮಶ್ವಂ ಪೋಷಯಿತ್ನ್ವಾ ಸ ನೋ ಮೃಳಾತೀದೃಶೇ ॥**

(ಋ. ಸಂ ೪-೫೭-೧)

ಎಂಬ ಋಕ್ಕಿನಲ್ಲಿ **ಮೃಳಾತಿ** ಎಂಬ ಪದಕ್ಕೆ **ಮೃಳತಿರ್ದಾನಕರ್ಮಾ** (ನಿ. ೧೦-೧೫) **ಮೃಳ್** ಧಾತುವಿಗೆ **ಕೊಡು** ಎಂಬ ಅರ್ಥವಿದೆ. ರುದ್ರನು ಗವಾದಿಗಳನ್ನು ಕೊಡುವುದರಲ್ಲಿ ಅನುಗ್ರಹಾತ್ಮಕವಾದ ಬುದ್ಧಿಯುಳ್ಳವನಾಗಿದ್ದಾನೆ ಎಂದೂ,

**ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ ।**
**ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಳಯಂತು ॥**

(ಋ. ಸಂ. ೪-೫೭-೨)

ಎಂಬಲ್ಲಿ **ಮೃಳಯತಿರುಪದಯಾ ಕರ್ಮಾ ಪೂಜಾಕರ್ಮಾ ವಾ ।** ರಕ್ಷಿಸು ಅಥವಾ ಪೂಜಿಸು ಎಂಬರ್ಥವಾಗುತ್ತ ದೆಂದು ತೋರಿಸಿದ್ದಾರೆ. (ನಿ. ೧೦-೧೬). ಸಾಯಣರು ಉದಾಹೃತವಾದ ಎರಡನೇ ಋಕ್ಕಿನಲ್ಲಿ **ಮೃಳಯಂತು ಪ್ರಯಚ್ಛಂತು ಮೃಳಯತಿರತ್ರ ದಾನಕರ್ಮಾ ।** ಎಂದು ವಿವರಿಸಿದ್ದಾರೆ. ಆದುದರಿಂದ **ಮೃಳ್** ಎಂಬ ಪದದ ಮೂಲಾರ್ಥವು ಕೊಡು, ಪೂಜಿಸು, ರಕ್ಷಿಸು, ಅನುಗ್ರಹಾತ್ಮಕವಾದ ಬುದ್ಧಿಯುಳ್ಳವನಾಗಿರು ಎಂದಿದ್ದು ಅನಂತರ ಅದರ ಫಲವಾದ **ಸುಖವೆಂ**ಬರ್ಥವು ಕ್ರಮೇಣ ರೂಢಿಯಲ್ಲಿದೆ ಎಂದು ಹೇಳಬಹುದು. ಪ್ರಕೃತವಾದ ಋಕ್ಕಿನಲ್ಲಿ ಮಿತ್ರಾ ವರುಣರು ವೃಷ್ಟ್ಯಾದಿಗಳನ್ನು ಕೊಟ್ಟು ಯಜ್ಞಕರ್ತರನ್ನು ಸುಖಪಡಿಸುತ್ತಾರೆ ಎಂದರ್ಥ.

**ಹವ್ಯಂ ಮತಿಂ** ಎಂಬುದಕ್ಕೆ ಎರಡು ವಿಧವಾದ ಅನ್ವಯವನ್ನು ಮಾಡಿದೆ. ಮೊದಲನೆಯದಾಗಿ **ಹವ್ಯ** ಶಬ್ದಕ್ಕೆ ಪೂಜ್ಯವಾದ ಎಂಬರ್ಥವನ್ನು ಮಾಡಿ ದೇವತೆಗಳಿಗೆ ದಾನಮಾಡಬೇಕೆಂಬ ಪೂಜ್ಯವಾದ ಬುದ್ಧಿಯನ್ನು ಎಂದೂ; ಎರಡ ನೆಯದಾಗಿ **ಮತಿ** ಶಬ್ದಕ್ಕೆ ಪೂಜ್ಯವಾದ ಎಂದರ್ಥಮಾಡಿ ಪೂಜ್ಯವಾದ ಹವಿಸ್ಸನ್ನು ಎಂದೂ ವಿವರಿಸಿದೆ.

**ಘೃತಾಸುತೀ — ಘೃತಮುದಕಂ ವೃಷ್ಟಿಲಕ್ಷಣಂ ಪ್ರಸೂಯತೇ ಯಾಭ್ಯಾಂ ತೌ ।** ಯಾರಿಂದ ವೃಷ್ಟ್ಯುದಕವು ಸುರಿಸಲ್ಪಡುತ್ತದೆಯೋ ಆ ಮಿತ್ರಾವರುಣರು ಎಂದರ್ಥ. ನಿರುಕ್ತಕಾರರು **ಘೃತ** ಶಬ್ದವನ್ನು **ಉದಕ** ನಾಮಗಳಲ್ಲಿ ಸೇರಿಸಿದ್ದಾರೆ. ಅನಂತರ,

**ತ ಆ ವವೃತ್ರನ್ತ್ಸದನಾದೃತಸ್ಯಾದಿದ್ ಘೃತೇನ ಪೃಥಿವೀ ವ್ಯುದ್ಯತೇ ।**

(ಋ. ಸಂ. ೧-೧೬೪-೪೭)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಘೃತ**ಶಬ್ದಕ್ಕೆ **ಘೃತಮಿತ್ಯುದಕನಾಮ ಜಿಘರ್ತೇಃ ಸಿಂಚತಿಕರ್ಮಣಃ ।** ಸೇಕಿಸು ಎಂಬರ್ಥವನ್ನು ಕೊಡುವ **ಘೃ** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ನಿರ್ವಚನವನ್ನು ತೋರಿಸಿದ್ದಾರೆ. ಮಿತ್ರಾವರುಣರು ವೃಷ್ಟಿಗೆ ಹೇಗೆ ಕಾರಣರಾಗಿದ್ದಾರೆಂಬುದನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ವರ್ಣಿಸಿದೆ.

**ಸ ಯದಿ ವೃಷ್ಟಿಕಾಮಃ ಸ್ಯಾತ್ ।........................ಮಿತ್ರಾವರುಣೌ ತ್ವಾ ವೃಷ್ಟ್ಯಾವತಾಮಿತಿ ತದ್ಯೋ ವರ್ಷಸ್ಯೇಷ್ಟೇ ಸ ತ್ವಾ ವೃಷ್ಟ್ಯಾವತ್ವಿತ್ಯೇವೈತದಾಹಾಯಂ ವೈ ವರ್ಷಸ್ಯೇಷ್ಟೇ ಯೋಽಯಂ ಪವತೇ ಸೋಽಯಮೇಕ ಇವೈವ ಪವತೇ ಸೋಽಯಂ ಪುರುಷೇಽನ್ತಃ**

ಪ್ರವಿಷ್ಟಃ ಪ್ರಾಙ್ಚ ಪ್ರತ್ಯಙ್ಚ ತಾವಿಮೌ ಪ್ರಾಣೋದಾನೌ ಪ್ರಾಣೋದಾನೌ ವೈ ಮಿತ್ರಾ-ವರುಣೌ ತದ್ಯ ಏವ ವರ್ಷಸ್ಯೇಷ್ಟೇ ಸ ತ್ವಾ ವೃಷ್ಟ್ಯಾ ಽವತ್ವಿತ್ಯೇವೈತದಾಹ ತಮೋತೇನೈವಾದ-ದೀತೆಯದಾ ಹ್ಯೇವ ಕದಾ ಚ ವೃಷ್ಟಿಃ ಸಮಿವ ತಮನಕ್ತ್ಯಾಹುತಿಮೇವೈತತ್ಕರೋತ್ಯಾಹುತಿ-ರ್ಭೂತ್ವಾ ದೇವಲೋಕಂ ಗಚ್ಛಾದಿತಿ ||

(ಶ. ಬ್ರಾ. ೧-೮-೩-೧೨)

ಅನುಯಾಜಾಂತರ್ಗತವಾದ ಸೂಕ್ತವಾಕಾದಿಗಳಲ್ಲಿ ಈ ಭಾಗವು ಮಿತ್ರಾವರುಣರ ಪ್ರಶಂಸೆಗಾಗಿ ಉಕ್ತವಾಗಿದೆ. ವೃಷ್ಟಿಯನ್ನಪೇಕ್ಷಿಸುವವನು " **ಮಿತ್ರಾವರುಣಾ ತ್ವಾ ವೃಷ್ಟ್ಯಾಽವತಾಂ** । ಎಂಬ ಮಂತ್ರವನ್ನು ಪಠಿಸಿ **ಪ್ರಸ್ತ**ರವನ್ನು ಹಿಡಿಯಬೇಕು. ಅಂತರಿಕ್ಷಸ್ಥನಾದ ವಾಯುವೇ ವೃಷ್ಟ್ಯಧಿದೇವತೆಯು. ಈ ವಾಯುವು ಅಂತರಿಕ್ಷದಲ್ಲಿ ಸಂಚರಿಸುವಾಗ ಏಕರೂಪವಾಗಿದ್ದಾನೆ. ಆದರೆ ಪುರುಷನಲ್ಲಿ ಪ್ರವೇಶಿಸಿದಾಗ **ಪ್ರಾಣ** ಮತ್ತು **ಉದಾನ** ಗಳೆಂಬ ಎರಡುರೂಪಗಳಲ್ಲಿರುತ್ತದೆ. ಮಿತ್ರಾವರುಣರೇ ಈ ಪ್ರಾಣೋದಾನಗಳು. ಆದುದರಿಂದ ವೃಷ್ಟಿಕಾಮನು **"ಸ ತ್ವಾ ವೃಷ್ಟ್ಯಾಽವತು"** ಎಂಬ ಮಂತ್ರವನ್ನು ಪಠಿಸಿ ಪ್ರಸ್ತರವನ್ನು ಹಿಡಿಯಬೇಕು. ಎಂದು ಮಿತ್ರಾವರುಣರು ವೃಷ್ಟಿಕಾರಣರೆಂಬ ವಿಷಯವನ್ನು ತಿಳಿಸಿದೆ.

**ಅಧಾರಯತಂ ಪೃಥಿವೀಮುತ ದ್ಯಾಂ ಮಿತ್ರರಾಜಾನಾ ವರುಣಾ ಮಹೋಭಿಃ ।**
**ವರ್ಧಯತಮೋಷಧೀಃ ಪಿನ್ವತಂ ಗಾ ಅವ ವೃಷ್ಟಿಂ ಸೃಜತಂ ಜೀರದಾನೂ ||**

(ಋ. ಸಂ. ೫-೬೨-೩)

ಮಿತ್ರಾವರುಣರು ತಮ್ಮ ತೇಜೋಯುತವಾದ ಸಾಮರ್ಥ್ಯಗಳಿಂದ ವೃಷ್ಟಿಯನ್ನು ಸುರಿಸಿ, ಅದರಿಂದ ದ್ಯಾವಾಪೃಥಿವಿಗಳ ಧಾರಣವನ್ನು ಮಾಡಿದರು. ಓಷಧ್ಯಾದಿಗಳನ್ನು ಬೆಳೆಸಿದರು ಇತ್ಯಾದಿಯಾಗಿ ಅನೇಕಕಡೆ ವರ್ಣಿತವಾಗಿರುವ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿ **ಘೃತಾಸುತೀ** ಎಂಬ ವಿಶೇಷಣದಿಂದ ತಿಳಿಸಿದೆ. ಸಾಯಣರು,

**ಅಹೋರಾತ್ರೇ ವೈ ಮಿತ್ರಾವರುಣಾವಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ ವರ್ಷತಿ ।**

(ತೈ. ಸಂ. ೨-೧-೭-೩)

ಪರ್ಜನ್ಯನು ಅಹೋರಾತ್ರರೂಪರಾದ ಮಿತ್ರಾವರುಣರ ಮೂಲಕವಾಗಿಯೇ ವೃಷ್ಟಿಯನ್ನು ಸುರಿಸುತ್ತಾನೆ ಎಂದು ತೈತ್ತಿರೀಯಸಂಹಿತೆಯ ವಾಕ್ಯವನ್ನುದಹರಿಸಿ **ಘೃತಾಸುತೀ** ಎಂಬ ವಿಶೇಷಣವನ್ನು ವಿವರಿಸಿದ್ದಾರೆ.

**ಏನೋಃ ಕ್ಷತ್ರಂ ದೇವತ್ವಂ ನ ಆಧೃಷೇ**— ಈ ಮಿತ್ರಾವರುಣರಿಬ್ಬರ ಸಂಯುಕ್ತವಾದ ಶಕ್ತಿಯನ್ನೂ, ದೇವತ್ವವನ್ನೂ ಯಾರೂ ಪ್ರತಿಭಟಿಸಲಾರರು, ಎಂದು ಅವರ ಪ್ರಭಾವವನ್ನು ವರ್ಣಿಸಿದೆ.

**ಯಾ ಧರ್ತಾರಾ ರಜಸೋ ರೋಚನಸ್ಯೋತಾದಿತ್ಯಾ ದಿವ್ಯಾ ಪಾರ್ಥಿವಸ್ಯ ।**
**ನ ವಾಂ ದೇವಾ ಅಮೃತಾ ಆ ಮಿನಂತಿ ವ್ರತಾನಿ ಮಿತ್ರಾವರುಣಾ ಧ್ರುವಾಣಿ ||**

(ಋ. ಸಂ. ೫-೬೯-೪)

ಪೃಥಿವ್ಯಂತರಿಕ್ಷಗಳನ್ನೆಲ್ಲಾ ತಮ್ಮ ದೃಢವಾದ ನಿಯಮನದಿಂದ ಧರಿಸಿರುವ ಮಿತ್ರಾವರುಣರ ನಿಶ್ಚಲನಿಯಮಗಳನ್ನು ಅಮರರಾದ ದೇವತೆಗಳೂ ಸಹ ಪ್ರತಿಭಟಿಸಲಾರರು ಎಂದು ನಾನಾ ಕಡೆಗಳಲ್ಲಿ ಇವರ ಸ್ತುತಿಯಿರುವಂತೆ ಆ ಶಕ್ತಿಯನ್ನು ಇಲ್ಲಿಯೂ ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜ್ಯೇಷ್ಠಂ** — ಅತಿಶಯಾರ್ಥದಲ್ಲಿ ಪ್ರಶಸ್ಯ ಶಬ್ದದ ಮೇಲೆ ಇಷ್ಠನ್ ಪ್ರತ್ಯಯ ಬಂದಾಗ **ಜ್ಯ ಚ** (ಪಾ. ಸೂ. ೫-೩-೬೧) ಎಂಬುದರಿಂದ ಪ್ರಕೃತಿಗೆ ಜ್ಯಾದೇಶ. **ಪ್ರಕೃತ್ಯೈಕಾಚ್** (ಪಾ. ಸೂ. ೬-೪-೧೬೩) ಎಂಬುದರಿಂದ ಟಿಲೋಪಕ್ಕೆ ಅಪವಾದವಾಗಿ ಪ್ರಕೃತಿಭಾವ ಬರುವುದರಿಂದ ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನಮಃ** — ಣಮು ಪ್ರಹ್ವತ್ವೇ ಶಬ್ದೇ ಚ. ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮತಿಂ** — ಮನ ಜ್ಞಾನೇ. ಧಾತು. **ಮಂತ್ರೇ ವೃಷೇಷಪಚ** — (ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ.

**ಭರತ** — ಭೃಞ್ ಭರಣೇ. ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ತಾದೇಶ. ಶಪ್ ಪಿತ್ತವಾಗಿ ಧಾತುವಿನ ಇಕಿಗೆ ಗುಣ. ತಿಙಂತ ನಿಘಾತಸ್ವರ ಬರುತ್ತದೆ.

**ಮೃಡಯದ್ಭ್ಯಾಂ** — ಮೃಡ ಸುಖನೇ. ಧಾತು. ಣಿಜಂತದ ಮೇಲೆ ಶತೃ ಪ್ರತ್ಯಯ. ಶಪ್ ಪಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಚತುರ್ಥೀ ದ್ವಿವಚನಾಂತರೂಪ.

**ಸ್ವಾದಿಷ್ಠಂ** — ಅತಿಶಯೇನ ಸ್ವಾದು. ಸ್ವಾದಿಷ್ಠಮ್. **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ. **ಟೇಃ** ಎಂಬುದರಿಂದ ಟಿಗೆ (ಉ) ಲೋಪ. ಆದ್ಯುದಾತ್ತಸ್ವರ ಬರುತ್ತದೆ.

**ಸಮ್ರಾಜಾ** — ರಾಜೃ ದೀಪ್ತೌ. ಧಾತು. ಕ್ವಿಪ್ ಪ್ರತ್ಯಯ. ಕ್ವಿಬಂತವಾದ ರಾಜ್ಧಾತುವು ಪರವಾದುದರಿಂದ **ಮೋ ರಾಜಿಸಮಃ ಕ್ವೌ** (ಪಾ. ಸೂ. ೮-೩-೨೫) ಎಂಬುದರಿಂದ ಸಮಿನ ಮಕಾರಕ್ಕೆ ಮಕಾರವೇ ಬರುತ್ತದೆ. ಅನುಸ್ವಾರಕ್ಕೆ ಅಪವಾದ. ದ್ವಿವಚನ ಪರವಾದಾಗ **ಸುಪಾಂ ಸುಲುಕ್** — (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಘೃತಾಸುತೀ** — ಘೃತಂ ಆಸೂಯತೇ ಯಾಭ್ಯಾಂ ತೌ. ಷುಞ್ ಅಭಿಷವೇ. ಧಾತು. ಕ್ತಿನ್ ಪ್ರತ್ಯಯ. ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ. ದ್ವಿವಚನಾಂತರೂಪ.

**ಯಜ್ಞೇಯಜ್ಞೇ** — **ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ. **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಪರರೂಪವು ಸರ್ವಾನುದಾತ್ತವಾಗುತ್ತದೆ.

**ಉಪಸ್ತುತಾ** — ಷ್ಟುಞ್ ಸ್ತುತೌ. ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಉಪ) ಪ್ರಕೃತಿಸ್ವರ ಬರುತ್ತದೆ. ದ್ವಿವಚನಕ್ಕೆ ಹಿಂದಿನಂತೆ ಆಕಾರಾದೇಶ.

**ಏನೋಃ**—ಏನ+ಓಸ್ ಎಂದಿರುವಾಗ **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ಪರಿಭಾಷೆಯಿಂದ **ಓಸಿಚ** (ಪಾ. ಸೂ. ೭-೩-೧೦೪) ಎಂಬುದರಿಂದ ಗುಣ ಬರುವುದಿಲ್ಲ. **ಅತೋ ಗುಣೇ** ಎಂಬುದರಿಂದ ಪರರೂಪ. ಸಕಾರಕ್ಕೆ ರುತ್ವವಿಸರ್ಗ.

**ಆಧೃಷೇ**—ಞಿಧೃಷಾ ಪ್ರಾಗಲ್ಭ್ಯೇ ಧಾತು. ಶಕ್ಯಾರ್ಥ ತೋರುವಾಗ **ಕೃತ್ಯಾರ್ಥೇ ತವೈಕೇನ್**— (ಪಾ. ಸೂ. ೩-೪-೧೪) ಎಂಬುದರಿಂದ ಕೇನ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ಏಜಂತವಾದುದರಿಂದ ಅವ್ಯಯವಾಗುತ್ತದೆ.

**ದೇವತ್ವಂ**—**ತಸ್ಯ ಭಾವಸ್ತ್ವತಲೌ** ಎಂಬುದರಿಂದ ಭಾವಾರ್ಥದಲ್ಲಿ ತ್ವ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ನು**—**ಋಚಿ ತುನುಘ**-(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ॥೧॥



॥ ಸಂಹಿತಾಪಾಠಃ ॥

ಅದರ್ಶಿ ಗಾತುರುರವೇ ವರೀಯಸೀ ಪಂಥಾ ಋತಸ್ಯ ಸಮಯಂಸ್ತ ರಶ್ಮಿಭಿ-
ಶ್ಚಕ್ಷುರ್ಭಗಸ್ಯ ರಶ್ಮಿಭಿಃ ।
ದ್ಯುಕ್ಷಂ ಮಿತ್ರಸ್ಯ ಸಾದನಮರ್ಯಮ್ಣೋ ವರುಣಸ್ಯ ಚ ।
ಅಥಾ ದಧಾತೇ ಬೃಹದುಕ್ಥ್ಯಂ೧ ವಯ ಉಪಸ್ತುತ್ಯಂ ಬೃಹದ್ವಯಃ ॥ ೨ ॥

॥ ಪದಪಾಠಃ ॥

ಅದರ್ಶಿ । ಗಾತುಃ । ಉರವೇ । ವರೀಯಸೀ । ಪಂಥಾಃ । ಋತಸ್ಯ । ಸಂ । ಅಯಂಸ್ತ । ರಶ್ಮಿಽಭಿಃ । ಚಕ್ಷುಃ ।
ಭಗಸ್ಯ । ರಶ್ಮಿಽಭಿಃ ।
ದ್ಯುಕ್ಷಂ । ಮಿತ್ರಸ್ಯ । ಸದನಂ । ಅರ್ಯಮ್ಣಃ । ವರುಣಸ್ಯ । ಚ ।
ಅಥ । ದಧಾತೇ ಇತಿ । ಬೃಹತ್ । ಉಕ್ಥ್ಯಂ । ವಯಃ । ಉಪಽಸ್ತುತ್ಯಂ । ಬೃಹತ್ । ವಯಃ ॥ ೨ ॥

॥ ಸಾಯಣಭಾಷ್ಯಂ ॥

ಗಾತುರ್ಗಮನಶೀಲಾ ವರೀಯಸ್ಯುರುತರೋಷಾ ಉರವೇ ವಿಸ್ತೀರ್ಣಾಯ ಯಾಗಾಯ ಗಮನಾದಿವ್ಯಾಪಾರಾಯಾದರ್ಶಿ । ಸರ್ವೈರ್ದೃಷ್ಟಾಭೂತ್ । ತಥಾ ಋತಸ್ಯ ಗಮನಶೀಲಸ್ಯಾದಿತ್ಯಸ್ಯ ಪಂಥಾ ಮಾರ್ಗ ಆಕಾಶಲಕ್ಷಣೋ ರಶ್ಮಿಭಿಃ ಸಮುಯಂಸ್ತ । ಪ್ರಕಾಶೈಃ ಸಂಗತೋಽಭೂತ್ ।. ಭಗಸ್ಯ ಸರ್ವೈರ್ಭಜನೀಯಸ್ಯೈತನ್ನಾಮಕಸ್ಯ ದೇವಸ್ಯ ರಶ್ಮಿಭಿಶ್ಚಕ್ಷುಃ ಸರ್ವಪ್ರಾಣಿನಾಂ ಲೋಚನಂ ಸಮುಯಂಸ್ತ॥ ಸಂಗತಮಭೂತ್ । ಸರ್ವೇ ಸ್ವಸ್ವಪ್ರವೃತ್ತಿದರ್ಶನಾಯ ಸಮರ್ಥಾ ಅಭವನ್ನಿತ್ಯರ್ಥಃ । ತದೇವ ಸ್ಪಷ್ಟೀಕ್ರಿಯತೇ । ಮಿತ್ರಸ್ಯ ಪ್ರಕಾಶಕಾರಿತ್ವಾತ್ಸರ್ವಜನಮಿತ್ರಸ್ಯ ಸದನಂ ಗೃಹಮಂತರಿಕ್ಷಂ ದ್ಯುಕ್ಷಂ ದೀಪ್ತಾನಾಂ ನಿವಾಸಸ್ಥಾನಂ ರಶ್ಮಿಭಿಃ ಸಮುಯಂಸ್ತ । ಸಂಗತಮಭೂತ್ । ತಥಾರ್ಯಮ್ಣ ಏತನ್ನಾಮಕಸ್ಯ ದೇವಸ್ಯ ॥ ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ ॥ ದ್ಯುಕ್ಷಂ ಸದನಂ ರಶ್ಮಿಭಿಃ ಸಮುಯಂಸ್ತ । ಕಿಂಚ ವರುಣಸ್ಯ ತಮೋನಿವಾರಕಸ್ಯೈತನ್ನಾಮಕಸ್ಯ ದೇವಸ್ಯ ಸದನಂ ತಥಾಭೂತ್ । ಯದ್ಯಪಿ ಸೂರ್ಯಸ್ಯೈಕತ್ವೇಽಪ್ಯುಪಾಧಿಭೇಧೇನ ಭೇದಾತ್ಪೃಥಕ್ ಸ್ತುತಿಃ ತಥಾ ಯದ್ಯಪಿ ತ್ರಿಭಿರಪಿ ಪ್ರಕಾಶ್ಯಮಪ್ಯಂತರಿಕ್ಷಮೇಕಂ ತಥಾಪಿ ಪ್ರಕಾಶಕಾನಾಂ ಭೇದಾತ್ ತ್ರಿಧಾ ಸ್ತೂಯತೇ । ಉದಯಾನಂತರಂ ಕರ್ಮಾನುಷ್ಠಾನಾಯ ಪ್ರಕಾಶೋಽಭವದಿತ್ಯರ್ಥಃ । ಅಥಾತಃ ಕಾರಣಾದುದಿತತ್ವಾದೇವೋಕ್ಥ್ಯಂ ಸ್ತುತ್ಯಂ ಬೃಹತ್ ಪ್ರಭೂತಂ ವಯೋ ಹವಿರ್ಲಕ್ಷಣಮನ್ನಂ ದಧಾತೇ । ಧಾರಯತಃ । ಕಿಂಚೋಪಸ್ತುತ್ಯಮುಪೇತ್ಯ ಸ್ತೋತವ್ಯಂ॥ ಏತಿಸ್ತುಶಾಸ್ವಿತ್ಯಾದಿನಾ ಕ್ಯಪ್। ಪಾ. ೩-೧-೧೦೯॥ ಬೃಹತ್ಸ್ತೋಮಾದಿನಾ ಮಹತ್ಸ್ತೋತ್ರಂ ವಯೋ ಹವಿರ್ಲಕ್ಷಣಮನ್ನಂ ಚ ದಧಾತೇ ॥

॥ ಪ್ರತಿಪದಾರ್ಥ ॥

**ವರೀಯಸೀ**—ಅತಿಶ್ರೇಷ್ಠಳಾದ (ಉಷೋದೇವಿಯು) । **ಉರವೇ**—ವಿಸ್ತೀರ್ಣವಾದ (ವ್ಯಾಪಕವಾದ, ಮಹತ್ತಾದ) (ಯಾಗವನ್ನುದ್ದೇಶಿಸಿ) । **ಗಾತುಃ**—ಗಮನಶೀಲಳಾಗಿ । **ಅದರ್ಶಿ**—ಕಾಣಿಸಿಕೊಂಡಳು । **ಋತಸ್ಯ**—ಗಮನಶೀಲನಾದ ಆದಿತ್ಯನ । **ಪಂಥಾಃ**—ಮಾರ್ಗವು (ಮಾರ್ಗಭೂತವಾದ ಆಕಾಶವು) । **ರಶ್ಮಿಭಿಃ**—ಕಿರಣಗಳಿಂದ । **ಸಂ ಅಯಂಸ್ತ**—ಸಂಗತವಾಯಿತು (ಪ್ರಕಾಶವಾಯಿತು) । **ಭಗಸ್ಯ**—ಭಗನಾಮಕ ದೇವತೆಯ (ಸೂರ್ಯನ) । **ರಶ್ಮಿಭಿಃ**-ಕಿರಣಗಳಿಂದ । **ಚಕ್ಷುಃ**—(ಸರ್ವಪ್ರಾಣಿಗಳ) ನೇತ್ರಗಳು । (**ಸಮುಯಂಸ್ತ**—ಸಂಗತವಾದುವು ಅಂದರೆ, ನೋಡಲು ಸಮರ್ಥವಾದುವು) । **ಮಿತ್ರಸ್ಯ**—(ಪ್ರಕಾಶಕನಾಗಿ ಸರ್ವರಿಗೂ ಮಿತ್ರನಾದ) ಮಿತ್ರದೇವತೆಯ (ಸೂರ್ಯನ) ಮತ್ತು । **ದ್ಯುಕ್ಷಂ**—ದೀಪ್ತವಾದ ನಕ್ಷತ್ರಾದಿಗಳ ವಾಸಸ್ಥಳವಾದ । **ಸದನಂ**—ಗೃಹವು (ಅಂತರಿಕ್ಷವು) । (**ಸಮುಯಂಸ್ತ**—ರಶ್ಮಿಸಂಗತವಾಯಿತು ಅಂದರೆ 'ಪ್ರಕಾಶಿಸಿತು) । **ಅರ್ಯಮ್ಣಃ**—ಅರ್ಯಮನ (ಮತ್ತು) । **ವರುಣಸ್ಯ ಚ**—ವರುಣನ । (**ಸದನಂ**—ನಿವಾಸಸ್ಥಾನವಾದ ಅಂತರಿಕ್ಷವು । **ಸಮುಯಂಸ್ತ**—ತೇಜೋವಿಶಿಷ್ಟವಾಯಿತು) । **ಅಥ**—ಆದುದರಿಂದ (ಉದಿಸಿರುವುದರಿಂದ) । **ಉಕ್ಥ್ಯಂ**—ಸ್ತುತ್ಯವಾದ (ಶ್ರೇಷ್ಠವಾದ) । **ಬೃಹತ್**—ಪ್ರಭೂತವಾದ (ಹೆಚ್ಚಾದ) । **ವಯಃ**—ಹವೀರೂಪವಾದ ಅನ್ನವನ್ನು । **ದಧಾತೇ**—(ಸೂರ್ಯ ಮತ್ತು ಉಷಸ್ಸುಗಳು) ಸ್ವೀಕರಿಸುತ್ತಾರೆ । (**ಕಿಂಚ**—ಮತ್ತು) । **ಉಪಸ್ತುತ್ಯಂ**—ಸ್ತೋತವ್ಯವಾದ (ಶ್ರೇಷ್ಠವಾದ) । **ಬೃಹತ್**—ಮಹತ್ತಾದ ಸ್ತುತಿಯನ್ನೂ । **ವಯಃ**—ಹವಿಸ್ಸನ್ನೂ । (**ದಧಾತೇ**—ಇಬ್ಬರೂ ಸ್ವೀಕರಿಸುತ್ತಾರೆ).

॥ ಭಾವಾರ್ಥ ॥

ಅತಿ ಶ್ರೇಷ್ಠಳಾದ ಉಷೋದೇವಿಯು(ಈ)ದೊಡ್ಡಯಾಗಕ್ಕೆ ಬರುತ್ತಿರುವುದು ಕಾಣಿಸುತ್ತಿದೆ; (ಸರ್ವದಾ) ಗಮನಶೀಲನಾದ ಆದಿತ್ಯನ ಮಾರ್ಗವು (ಸೂರ್ಯಪಥವು) ರಶ್ಮಿಗಳಿಂದ ಯುಕ್ತವಾಗಿದೆ; ಭಗನಾಮಕದೇವತೆಯ(ಸೂರ್ಯನ) ಕಿರಣಗಳಿಂದ (ಸಮಸ್ತರ) ಕಣ್ಣುಗಳು ದೃಷ್ಟಿಸಾಮರ್ಥ್ಯವನ್ನು ಪಡೆದಿವೆ; ನಕ್ಷತ್ರ ರಂಜಿತವಾದ ಮಿತ್ರನ ಗೃಹವು (ಆಕಾಶವು) ಪ್ರಕಾಶಿತವಾಗಿದೆ; ಅರ್ಯಮ ಮತ್ತು ಮಿತ್ರರ (ಸೂರ್ಯನ) ಸದನವು (ಆಕಾಶವು) ತೇಜೋವಿಶಿಷ್ಟವಾಗಿದೆ; ಆದುದರಿಂದ, (ಸೂರ್ಯ ಮತ್ತು ಉಷೋದೇವಿಯರೇ, ನೀವಿಬ್ಬರೂ), ಶ್ರೇಷ್ಠವೂ, ಪ್ರಭೂತವೂ ಆದ ಹವೀರೂಪಾನ್ನವನ್ನು ಸ್ವೀಕರಿಸಿ; ಮತ್ತು ಅವರಿಬ್ಬರೂ ಶ್ರೇಷ್ಠವಾದ ಸ್ತುತಿಯನ್ನು ಮತ್ತು ಹವಿರಾದಿಗಳನ್ನು ಸ್ವೀಕರಿಸುತ್ತಾರೆ.

English Translation.

The most excellent Dawn has been seen proceeding to the comprchensive (rite): the path of the revolving (sun) has been lighted up by (his) rays: the eyes of men (have been opened) by the rays of Bhaga: the brilliant mansion of Mitra, of Aryaman, of Varuna, (has been lighted up by his rays), and therefore do you two accept the commendable and copious oblation; the praiseworthy and copious oblation.

॥ ವಿಶೇಷವಿಷಯಗಳು ॥

ಉಷಸ್ಸಿನ ಉದಯವಾದೊಡನೆಯೇ **ಋತದ** ಮಾರ್ಗವು ಆದಿತ್ಯರಶ್ಮಿಗಳಿಂದ ಪ್ರಕಾಶಿತವಾಯಿತು ಎಂದು ಉಷಸ್ಸಿನ ಉದಯಕ್ಕೂ ಋತದ ಮಾರ್ಗಕ್ಕೂ ಇರತಕ್ಕ ನಿಕಟವಾದ ಸಂಬಂಧವನ್ನು ತೋರಿಸಿವೆ. ಇಲ್ಲಿ **ಋತ**ವೆಂದರೆ ಅಂತರಿಕ್ಷದ ರಾಶಿಚಕ್ರವೆಂದರ್ಥಮಾಡಬಹುದು. [Zodiac] ಹೇಗೆಂದರೆ—

**ದ್ವಾದಶಾರಂ ನಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ ।**
**ಆ ಪುತ್ರಾ ಅಗ್ನೇ ಮಿಥುನಾಸೋ ಅತ್ರ ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ ॥**

(ಋ. ಸಂ ೧-೧೬೪-೧೧)

ಹನ್ನೆರಡು ಅರಗಳುಳ್ಳ **ಋತದ** ಚಕ್ರವು ಅಂತರಿಕ್ಷದಲ್ಲಿ ಆವರ್ತಿಯಿಂದ ಪರಿಭ್ರಮಣವನ್ನು ಹೊಂದುತ್ತದೆ. ಈ ಚಕ್ರಾಂತರ್ಗತವಾಗಿ ಏಳನೂರ ಇಪ್ಪತ್ತು ಪುತ್ರರು (ಅಹೋರಾತ್ರಿಗಳು) ಮಿಥುನರೂಪದಿಂದ ತಮ್ಮ ಅಸ್ತಿತ್ವವನ್ನು ಹೊಂದಿದ್ದಾರೆ. ಈ ವರ್ಣನೆಯಿಂದ ವರ್ಣಿತವಾಗಿರುವ ತೇಜೋಮಂಡಲವು ಪರಿಭ್ರಮಣವನ್ನು ಹೊಂದುವ ಈ ಋತಚಕ್ರದಲ್ಲಿ ಹನ್ನೆರಡು ತಿಂಗಳೂ, ಮುನ್ನೂರರವತ್ತು ಅಹೋರಾತ್ರಗಳೂ ಅಡಕವಾಗಿವೆ.

**ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ । ವೇದಾ ಯ ಉಪಜಾಯತೇ ॥**

(ಋ. ಸಂ. ೧-೨೫-೮)

ಎಂಬ ಋಕ್ಕಿನಲ್ಲಿ ವರ್ಣಿತವಾಗಿರುವಂತೆ ಮುನ್ನೂರರವತ್ತು ದಿನಗಳನ್ನೂ ರಾತ್ರಿಗಳನ್ನೂ ದ್ವಾದಶಮಾಸಗಳ ಪುತ್ರರೆಂದು ಕರೆದಿದೆ. ಈ ರಾಶಿಚಕ್ರವನ್ನು ತನ್ನ ಪ್ರಭೆಯಿಂದ ಬೆಳಗುತ್ತಾ, ಉಷಸ್ಸು ಉದಯಿಸುವುದನ್ನು ವರ್ಣಿಸುವ ಕೆಲವು ಉದಾಹರಣೆಗಳಿಂದ ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಅಂಶವು ಇನ್ನೂ ವಿಶದವಾಗುತ್ತದೆ.

**ಜಾನಾತ್ಯಹ್ನಃ ಪ್ರಥಮಸ್ಯ ನಾಮ ಶುಕ್ರಾ ಕೃಷ್ಣಾದಜನಿಷ್ಟ ಶ್ವಿತೀಚೀ ।**
**ಋತಸ್ಯ ಯೋಷಾ ನ ಮಿನಾತಿ ಧಾಮಾಹರಹರ್ನಿಷ್ಕೃತಮಾಚರಂತೀ ॥**

(ಋ. ಸಂ. ೧-೧೨೩-೯)

ಶುಕ್ರರೂಪಳೂ, ಭಾಸ್ವತಿಯೂ ಆದ ಉಷೋದೇವಿಯು ಅಹಸ್ಸಿನ ಪ್ರಥಮಭಾಗವನ್ನು ಅರಿಯುತ್ತಾ ತಮಸ್ಸಿನಿಂದ ಹೊರಕ್ಕೆ ಆವಿರ್ಭವಿಸಿದಳು, ಅಹರಹವೂ ಈ ದೇವಿಯು **ಋತದ** ಪಥವನ್ನು ಮಾತ್ರ ಮೀರದೆ ಅನುಸ್ಯೂತವಾಗಿ ಅದನ್ನೇ ಅನುಸರಿಸುತ್ತಾಳೆ.

**ಏಷಾ ದಿವೋ ದುಹಿತಾ ಪ್ರತ್ಯದರ್ಶಿ ಜ್ಯೋತಿರ್ವಸಾನಾ ಸಮನಾ ಪುರಸ್ತಾತ್ ।**
**ಋತಸ್ಯ ಪಂಥಾಮನ್ವೇತಿ ಸಾಧು ಪ್ರಜಾನತೀವ ನ ದಿಶೋ ಮಿನಾತಿ ॥**

(ಋ. ಸಂ. ೧-೧೨೪-೩)

ದಿವೋದುಹಿತೆಯಾದ ಈ ಉಷೋದೇವಿಯು ತನ್ನ ತೇಜೋರೂಪವಾದ ವಸ್ತ್ರದಿಂದ ಅಲಂಕೃತಳಾಗಿ ಪೂರ್ವದಿಕ್ಕಿನಲ್ಲಿ ಉದಯಿಸುತ್ತಾಳೆ. ಮತ್ತು ಕೊಂಚವೂ ತಪ್ಪದಂತೆ **ಋತದ** ಮಾರ್ಗವನ್ನು ಶ್ರೇಷ್ಠವಾದ ರೀತಿಯಲ್ಲಿ ಅನುಸರಿಸುತ್ತಾಳೆ.

**ಅಗ್ನಿಂ ವಿಶ ಈಳತೇ ಮಾನುಷೀರ್ಯಾ ಅಗ್ನಿಂ ಮನುಷೋ ನಹುಷೋ ವಿ ಜಾತಾಃ ।**
**ಅಗ್ನಿರ್ಗಾಂಧರ್ವೀಂ ಪಥ್ಯಾಮೃತಸ್ಯಾಗ್ನೇರ್ಗವ್ಯೂತಿರ್ಘೃತ ಆ ನಿಷತ್ತಾ ॥**

(ಋ. ಸಂ ೧೦–೮೦-೬)

ಎಂಬಲ್ಲಿ ಈ ಋತದ ಪಥವನ್ನು ಅತ್ಯುಚ್ಚವಾದ ಅಂತರಿಕ್ಷವನ್ನಾಶ್ರಯಿಸಿರುವುದೂ ಗಂಧರ್ವರ ಸಂಚಾರಕ್ಕೆ ಯೋಗ್ಯವಾದುದೂ ಆದ ಮಾರ್ಗವೆಂದೂ ಈ ಪಥದಲ್ಲಿ ಉಷಸ್ಸು ಉದಯಿಸಿ ಸೂರ್ಯನ ಪರಿಭ್ರಮಣಕ್ಕೆ ಅವಕಾಶವನ್ನಿತ್ತು ಲೋಕವೆಲ್ಲಾ ಬೆಳಗುವಂತೆ ಮಾಡುತ್ತಾಳೆಂದು ಪ್ರಕೃತವಾದ ಋಕ್ಕಿನ ವರ್ಣನೆಯಿದೆ.

ಉಷಸ್ಸಿನ ಉದಯವಾದನಂತರವೇ, **ಭಗ, ಅರ್ಯಮ, ಮಿತ್ರ ಮತ್ತು ವರುಣ** ಇವರ ಸದನಗಳೂ ಪ್ರಕಾಶಿತವಾದವೆಂದು ವರ್ಣಿಸಿದೆ. ಭಗ, ಅರ್ಯಮ ಇವರು ಆದಿತ್ಯನ ಅಪರನಾಮಗಳೇ ಅಥವಾ ಬೇರೆ ಬೇರೆ ದೇವತೆಗಳೇ ಎಂಬ ವಿಷಯದಲ್ಲಿ ಅಭಿಪ್ರಾಯಭೇದವಿದೆ.

**ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ ।**
**ಅತೂರ್ತಪಂಥಾಃ ಪುರುರಥೋ ಅರ್ಯಮಾ ಸಪ್ತಹೋತಾ ವಿಷುರೂಪೇಷು ಜನ್ಮಸು ॥**

(ಋ. ಸಂ. ೧೦–೬೪–೫)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಅರ್ಯಮಾ** ಎಂಬ ಶಬ್ದಕ್ಕೆ **ಅರ್ಯಮಾ ಆದಿತ್ಯೋಽರೀನ್ನಿಯಚ್ಛತಿ ।** ಶತ್ರುಗಳನ್ನು ತಡೆಯತಕ್ಕ ಆದಿತ್ಯನೆಂದರ್ಥಮಾಡಿದ್ದಾರೆ. (ನಿ. ೧೧-೨೩) ಮತ್ತು

**ತತ್ನೋ ನಃ ಸವಿತಾ ಭಗೋ ವರುಣೋ ಮಿತ್ರೋ ಅರ್ಯಮಾ ।**
**ಶರ್ಮ ಯಚ್ಛಂತು ಸಪ್ರಥೋ ಯದೀಮಹೇ ॥**

(ಋ. ಸಂ. ೮-೧೮-೩)

ಎಂಬಲ್ಲಿ **ಭಗ, ವರುಣ, ಮಿತ್ರ** ಮತ್ತು **ಅರ್ಯಮ** ಎಂಬ ನಾಲ್ವರೂ ಸಹ ಅದಿತಿಯ ಪುತ್ರರೆಂದು ಒಟ್ಟಿಗೆ ಹೇಳಿದೆ.

**ಯೋ ವಾ ಅರ್ಯಮಣಂ ವೇದ । ದಾನಕಾಮಾ ಅಸ್ಮೈ ಪ್ರಜಾ ಭವಂತಿ । ಯಜ್ಞೋ ವಾ ಅರ್ಯಮಾ ।**

(ತೈ. ಬ್ರಾ. ೨-೩-೫-೪)

ಎಂಬಲ್ಲಿ **ಅರ್ಯಮನಿಗೂ** ಯಜ್ಞಕ್ಕೂ ತಾದಾತ್ಮ್ಯವನ್ನು ಹೇಳಿದೆ.

**ಭಗಸ್ಯ ಸ್ವಸಾ ವರುಣಸ್ಯ ಜಾಮಿರುಷಃ ಸೂನೃತೇ ಪ್ರಥಮಾ ಜರಸ್ವ ॥**

(ಋ ಸಂ. ೧-೧೨೩-೫)

ಇತ್ಯಾದಿ ಋಕ್ಕುಗಳಲ್ಲಿ ಉಷಸ್ಸನ್ನು **ಭಗನ** ಸ್ವಸೃವೆಂದು ಹೇಳಿದೆ. ಇಂತಹ ಕೆಲವು ವೈಯಕ್ತಿಕವಾದ ವರ್ಣನೆಗಳನ್ನುಳಿದು **ಅರ್ಯಮ** ಮತ್ತು **ಭಗ** ಇವರ ಸರಿಯಾದ ಚಿತ್ರವು ಇತರ ದೇವತೆಗಳಿಗಿರುವಂತೆ ನಿಷ್ಕೃಷ್ಟವಾಗಿಲ್ಲ. ಈ ವಿಷಯವನ್ನು ಆದಷ್ಟು ಸೂಕ್ಷ್ಮವಾಗಿ ಪರಿಶೀಲಿಸಿ ಮುಂದೆ ವಿವರಿಸಲಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಅದರ್ಶಿ**—ದೃಶಿರ್ ಪ್ರೇಕ್ಷಣೇ. ಧಾತು. ಕರ್ಮಣಿಯಲ್ಲಿ ಲುಜ್. ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಚ್ಲಿಗೆ ಚಿಣ್ ಬಂದಾಗ **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ತ ಶಬ್ದಕ್ಕೆ ಲೋಪ. ಚಿಣ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಆದ್ಯುದಾತ್ತವಾಗುತ್ತದೆ.

**ಗಾತುಃ**—ಗಾಜ್ ಗತೌ. ಧಾತು. **ಕಮಿಮನಿಜನಿ**—(ಉ. ಸೂ ೧-೭೨) ಎಂಬುದರಿಂದ ತು ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವರೀಯಸೀ**—ಅತಿಶಯೇನ ಉರು ವರೀಯಸೀ. ಈಯಸುನ್ ಪ್ರತ್ಯಯ. ಇದು ಪರವಾದಾಗ **ಪ್ರಿಯಸ್ಥಿರ ಸ್ಫಿರ**—(ಪಾ. ಸೂ. ೬-೪-೧೫೭) ಎಂಬುದರಿಂದ ಉರು ಎಂಬುದಕ್ಕೆ ವರಾದೇಶ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಙೀಪ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಆಯಂಸ್ತ**—ಯಮ ಉಪರಮೇ. ಧಾತು. ಲುಜ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಸದನಂ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅರ್ಯಮ್ಣಃ**—ಅರ್ಯಮನ್ ಶಬ್ದ. ಷಷ್ಠೀ ಏಕವಚನ ಪರವಾದಾಗ **ಅಲ್ಲೋಪೋಽನಃ** ಎಂಬುದರಿಂದ ಅನ್ನಿನ ಅಕಾರಕ್ಕೆ ಲೋಪ. ಈ ಶಬ್ದವು ಕನಿ ಪ್ರತ್ಯಯಾಂತವಾದುದರಿಂದ ಅಕಾರ ಉದಾತ್ತವಾಗಿರುತ್ತದೆ. ಅನುದಾತ್ತವಾದ ವಿಭಕ್ತಿ ಪರವಾದಾಗ ಉದಾತ್ತವು ಲೋಪವಾದುದರಿಂದ **ಅನುದಾತ್ತಸ್ಯ ಚ ಯತ್ರೋದಾ**—(ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಥ**— **ನಿಪಾತಸ್ಯ ಚ** ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ದಧಾತೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಉಪಸ್ತುತ್ಯಂ** - ಷ್ಟುಞ್ ಸ್ತುತೌ. ಧಾತು. **ಏತಿಸ್ತುಶಾಸ್ವೃ**—(ಪಾ. ಸೂ. ೩-೧-೧೦೯) ಎಂಬುದರಿಂದ ಕ್ಯಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಜ್ಯೋತಿಷ್ಮತೀಮದಿತಿಂ ಧಾರಯತ್ಕ್ಷಿತಿಂ ಸ್ವರ್ವತೀಮಾ ಸಚೇತೇ ದಿವೇದಿ-
ವೇ ಜಾಗೃವಾಂಸಾ ದಿವೇದಿವೇ ।
ಜ್ಯೋತಿಷ್ಮತ್ಕ್ಷತ್ರಮಾಶಾತೇ ಆದಿತ್ಯಾ ದಾನುನಸ್ಪತೀ ।
ಮಿತ್ರಸ್ತಯೋರ್ವರುಣೋ ಯಾತಯಜ್ಜನೋಽರ್ಯಮಾ ಯಾತಯಜ್ಜನಃ ॥

॥ ಪದಪಾಠಃ ॥

ಜ್ಯೋತಿಷ್ಮತೀಂ । ಅದಿತಿಂ । ಧಾರಯತ್ಽಕ್ಷಿತಿಂ । ಸ್ವಃಽವತೀಂ । ಆ । ಸಚೇತೇ ಇತಿ । ದಿವೇಽದಿವೇ ।
ಜಾಗೃಽವಾಂಸಾ । ದಿವೇಽದಿವೇ ।
ಜ್ಯೋತಿಷ್ಮತ್ । ಕ್ಷತ್ರಂ । ಆಶಾತೇ ಇತಿ । ಆದಿತ್ಯಾ । ದಾನುನಃ । ಪತೀ ಇತಿ ।
ಮಿತ್ರಃ । ತಯೋಃ । ವರುಣಃ । ಯಾತಯತ್ಽಜನಃ । ಅರ್ಯಮಾ । ಯಾತಯತ್ಽಜನಃ ॥ ೩ ॥

॥ ಸಾಯಣಭಾಷ್ಯಂ ॥

ಅಯಂ ಯಜಮಾನೋ ಜ್ಯೋತಿಷ್ಮತೀಮಾವಹನೀಯಾಗ್ನೇಸ್ತೇಜೋಯುಕ್ತಾಮದಿತಿಮದೀನಾಂ ಸಂಪೂರ್ಣಲಕ್ಷಣಾಂ ಕ್ಷಿತಿಮಗ್ನೇರ್ನಿವಾಸಯೋಗ್ಯಾಂ ಭೂಮಿಮುತ್ತರವೇದಿಲಕ್ಷಣಾಂ ಧಾರಯತ್ ।

ಧಾರಯತಿ । ಸ್ವಯಂ ಕೃತವಾನಿತ್ಯರ್ಥಃ । ಏತಾವತೀ ವೈ ಪೃಥಿವೀ ಯಾವತೀ ವೇದಿರಿತಿ ಶ್ರುತೇಃ । ತಥಾ ಸ್ವರ್ವತೀಂ ಯಜ್ಞನಿಷ್ಪತ್ತಿದ್ವಾರಾ ಸ್ವರ್ಗವತೀಂ ಈದೃಶೀಂ ತಾಮಾ ಸಚೇತೇ । ಮಿತ್ರಾವರುಣೌ ಸಂಗತೌ ಭವತಃ । ನ ಕೇವಲಮೇತಸ್ಮಿನ್ನೇವಾಹನಿ ಕಿಂತು ದಿವೇ ದಿವೇ ಸರ್ವೇಷ್ವಪ್ಯಹಃಸು । ಕೀದೃಶೌ ತೌ । ದಿವೇ ದಿವೇ ಪ್ರತಿದಿನಂ ಜಾಗೃವಾಂಸಾ ಪ್ರಬೋಧಂ ಕುರ್ವಾಣೌ । ಯಜ್ಞಂ ಗಂತುಮನಲಸಾವಿತ್ಯರ್ಥಃ । ಕಿಂಚ ವೇದಿಮಾಗತ್ಯ ಜ್ಯೋತಿಷ್ಮದಾಜ್ಯಾದಿಸ್ವೀಕಾರೇಣಾತಿಶಯೇನ ತೇಜೋಯುಕ್ತಂ ಕ್ಷತ್ರಂ ಬಲಮಾಶಾತೇ । ಅಶ್ನುವಾತೇ । ಪ್ರಾಪ್ನುತಃ ॥ ಅಶ್ನೋತೇಶ್ಛಾಂದಸೇ ಲಿಟ್ಯನಿತ್ಯಮಾಗಮಶಾಸನಮಿತಿ ವಚನಾನ್ನುಡಭಾವಃ । ಲಟಿ ವಾ ಛಾಂದಸಃ ಶಪಃ ಶ್ಲುಃ ॥ ಕೀದೃಶಾವಿತಿ ತಾವಾಹ । ಆದಿತ್ಯಾದಿತೇಃ ಪುತ್ರೌ ದಾನುನಸ್ಪತೀ ದಾನಸ್ಯಾಜ್ಯಾದಿಪ್ರದಾನಸ್ಯ ಸ್ವಾಮಿನೌ ಅಭಿಮತದಾನಸ್ಯ ಪಾಲಯಿತಾರೌ ವಾ ॥ ಷಷ್ಠ್ಯಾಃ ಪತಿಪುತ್ರೇತಿ ಸಂಹಿತಾಯಾಂ ಸತ್ವಂ ॥ ಮಿತ್ರಶ್ಚ ವರುಣಶ್ಚ ತಾವುಭೌ ದೇವೌ । ಅರ್ಯಮಾಖ್ಯಸ್ತು ದೇವಸ್ತಯೋರ್ಮಿತ್ರಾವರುಣಯೋರ್ಯಾತಯಜ್ಜನಃ । ತಯೋರೇವ ಸಂಬಂಧಾದುಭಯೋರ್ಮಧ್ಯೇ ಸ್ಥಿತೋ ಯಾತಯಜ್ಜನಃ ಸ್ವಸ್ವವ್ಯಾಪಾರನಿಯೋಜಿತಸರ್ವಜನಃ । ಮಿತ್ರಾವರುಣಾವಹೋರಾತ್ರದೇವೌ ಅರ್ಯಮಾ ತು ತಯೋರೇವ ಸಾಮರ್ಥ್ಯಾತ್ಸರ್ವಪ್ರಾಣಿನಃ ಪ್ರೇರಯತೀತ್ಯರ್ಥಃ । ಕಿಂಚ ಯಾತಯಜ್ಜನಃ । ಯಾತಯಂತಿ ಲೋಕಂ ಯದೀಯಾ ಜನಾಃ ಪ್ರೇಷ್ಯಾಃ ಸ ತಾದೃಶಃ । ಯದ್ವಾ । ಯಾತ್ಯಮಾನಾ ನರಕೇ ನಿಪಾತ್ಯಮಾನಾ ಜನಾಃ ಪ್ರಾಣಿನೋಽಯಷ್ಟಾರೋ ಯೇನ ಸ ತಾದೃಶಃ । ಕರ್ಮಸಾಕ್ಷಿತ್ವಾತ್ಸ್ವಸ್ವಕರ್ಮಾ-ನುರೋಧೇನ ಪ್ರಾಣಿನಃ ಸುಕೃತೇ ಯಾತಯತೀತ್ಯರ್ಥಃ । ತಾದೃಶೋಽರ್ಯಮಾ ಮಿತ್ರಾವರುಣಯೋರ-ಧೀನೋ ವರ್ತತ ಇತಿ ಶೇಷಃ ॥

॥ ಪ್ರತಿಪದಾರ್ಥ ॥

(**ಅಯಂ**— ಈ ಯಜಮಾನನು) । **ಜ್ಯೋತಿಷ್ಮತೀಂ**—(ಆಹವನೀಯಾಗ್ನಿಯ) ತೇಜಸ್ಸಿನಿಂದ ಯುಕ್ತವಾಗಿಯೂ । **ಅದಿತಿಂ**—ಅಧೀನವಾಗಿಯೂ (ಸಂಪೂರ್ಣ ಲಕ್ಷಣವಾಗಿಯೂ) ಇರುವ । **ಕ್ಷಿತಿಂ** (ಅಗ್ನಿನಿವಾಸ ಯೋಗ್ಯವಾದ ಉತ್ತರವೇದಿರೂಪವಾದ) ಭೂಮಿಯನ್ನು । **ಧಾರಯತ್**—(ತಾನೇ) ಸಿದ್ಧಪಡಿಸಿದಾನೆ । (**ತಥಾ**— ಹಾಗೆಯೇ । **ದಿವೇದಿವೇ**— ಪ್ರತಿದಿನವೂ । **ಜಾಗೃವಾಂಸಾ**— ಪ್ರಬುದ್ಧರಾಗುವ (ಯಜ್ಞಗಮನವಿಷಯದಲ್ಲಿ ಆಲಸ್ಯರಹಿತರಾದ) ಮಿತ್ರಾವರುಣರು । **ಸ್ವರ್ವತೀಂ**—(ಯಾಗವನ್ನು ಪೂರಯಿಸುವುದರಮೂಲಕ ಸ್ವರ್ಗಕಾರಣವಾದ, ಆದುದರಿಂದಲೇ) ಸ್ವರ್ಗಯುತವಾದ ವೇದಿಯನ್ನು । **ದಿವೇದಿವೇ**— ಪ್ರತಿನಿತ್ಯವೂ । **ಆ ಸಚೇತೇ**— ಸಂಗತರಾಗುತ್ತಾರೆ (ಪ್ರಾಪ್ತರಾಗುತ್ತಾರೆ) । (ವೇದಿಭೂಮಿಗೆ ಬಂದು) **ಆದಿತ್ಯಾ**—ಅದಿತಿಪುತ್ರರೂ । **ದಾನುನಸ್ಪತೀ**— ಆಜ್ಯಾದಿಪ್ರದಾನಕ್ಕೆ ಸ್ವಾಮಿಗಳೂ (ಅಥವಾ ಅಭಿಮತದಾನಕ್ಕೆ ಪಾಲಕರೂ) ಆದ । **ಮಿತ್ರಃ ವರುಣಃ**— ಮಿತ್ರಾವರುಣರೆಂಬ ಅವರಿಬ್ಬರು । **ಜ್ಯೋತಿಷ್ಮತ್**—(ಆಜ್ಯಾದಿ ಸ್ವೀಕಾರದಿಂದ) ತೇಜೋವಿಶಿಷ್ಟವಾದ । **ಕ್ಷತ್ರಂ**— ಬಲವನ್ನು । **ಆಶಾತೇ**—ಪಡೆಯುತ್ತಾರೆ । **ಅರ್ಯಮಾ**— ಅರ್ಯಮನು । **ತಯೋಃ**— ಆ ಮಿತ್ರಾವರುಣರ ಮಧ್ಯದಲ್ಲಿಯೇ (ಇದ್ದು) । **ಯಾತಯಜ್ಜನಃ**—ಸಮಸ್ತರನ್ನೂ ತಮ್ಮ ತಮ್ಮ ವ್ಯಾಪಾರನಿರತರನ್ನಾಗಿ ಮಾಡುವವನು (ಮಾಡುತ್ತಾನೆ) । (**ಕಿಂಚ**— ಮತ್ತೂ) । **ಯಾತಯಜ್ಜನಃ** - ಅಯಷ್ಟೃಗಳಾದ ಜನಗಳನ್ನು ನರಕಕ್ಕೆ ಕಳುಹಿಸುವವನು (ಕಳುಹಿಸುತ್ತಾನೆ).

॥ ಭಾವಾರ್ಥ ॥

(ಈ ಯಜಮಾನನು) (ಆಹವನೀಯಾಗ್ನಿ) ತೇಜೋವಿಶಿಷ್ಟವಾಗಿಯೂ, ನಿರ್ದುಷ್ಟವಾಗಿಯೂ ಇರುವ (ಉತ್ತರವೇದಿರೂಪವಾದ) ಭೂಮಿಯನ್ನು (ಸ್ವತಃ) ಸಿದ್ಧಪಡಿಸಿದಾನೆ; (ಯಾಗಕ್ಕೆ ಬರುವ ವಿಷಯದಲ್ಲಿ ಸದಾ) ಪ್ರಬುದ್ಧರಾದ ಎಲೈ ಮಿತ್ರಾವರುಣರೇ, (ನೀವು) ಸ್ವರ್ಗಸಾಧನಭೂತವಾದ ಈ ಯಾಗಕ್ಕೆ ಪ್ರತಿನಿತ್ಯವೂ ಬನ್ನಿ; ಅದಿತಿಪುತ್ರರೂ, (ಆಜ್ಯಾದಿ) ದಾನಗಳಿಗೆ ಒಡೆಯರೂ ಆದ ಮಿತ್ರಾವರುಣರಿಬ್ಬರೂ (ಆಜ್ಯಾದಿ ಸ್ವೀಕಾರದಿಂದ) ತೇಜೋವಿಶಿಷ್ಟರೂ ಬಲಯುತರೂ ಆಗುತ್ತಾರೆ; ಅರ್ಯಮನು (ಅವರಿಬ್ಬರ ಮಧ್ಯದಲ್ಲಿಯೇ ಇದ್ದು) ಸಮಸ್ತರನ್ನೂ ತಮ್ಮ ತಮ್ಮ ವ್ಯಾಪಾರನಿರತರನ್ನಾಗಿ ಮಾಡುತ್ತಾನೆ; ಮತ್ತು (ಅಯಷ್ಟೃಗಳಾದ) ಜನರನ್ನು (ನರಕಾದಿಗಳಿಗೆ) ಕಳುಹಿಸುತ್ತಾನೆ.

English Translation

(Your worshipper) has prepared ground (for the altar), free from defect, radiant (with sacrificial fire) and conferring heaven : come to it together every day, you who are vigilant ; every day (at sacrifices) receive invigorated energy (by coming hither), sons of Aditi, lords of munificence : of those two, Mitra is the animator of mankind, and so is Varuna ; Aryaman (likewise) is the animator of mankind.

॥ ವಿಶೇಷವಿಷಯಗಳು ॥

**ಜ್ಯೋತಿಷ್ಮತೀಂ ಅದಿತಿಂ ಕ್ಷಿತಿಂ ಧಾರಯತ್— ತೇಜೋಯುಕ್ತಾಂ ಸಂಪೂರ್ಣಲಕ್ಷಣಾಂ ಉತ್ತರವೇದಿಲಕ್ಷಣಾಂ ಭೂಮಿಂ ಯಜಮಾನಃ ಸ್ವಯಂ ಕೃತವಾನ್ ।** ಎಂಬುದರಿಂದ ಯಜಮಾನನು **ಉತ್ತರವೇದಿ** ರೂಪವಾದ ಕ್ಷಿತಿಯನ್ನು ತಾನಾಗಿಯೇ ಸಿದ್ಧಪಡಿಸಿದುದನ್ನೂ, ಎರಡನೆಯದಾಗಿ ಉತ್ತರವೇದಿಯ ಮಹತ್ತ್ವವನ್ನೂ ತಿಳಿಸಿದೆ. ಮಹಾವೇದಿಯ ಮಹತ್ತ್ವವೆಲ್ಲವೂ ಉತ್ತರವೇದಿಯಲ್ಲಿವೆಯೆಂದು ತಿಳಿಸಿದೆ.

ಉತ್ತರವೇದಿರೂಪವಾದ ಕ್ಷಿತಿಯನ್ನು ರಚಿಸುವ ಕ್ರಮವನ್ನು ತೈತ್ತಿರೀಯಸಂಹಿತೆಯಲ್ಲಿ ಈ ರೀತಿ ವಿವರಿಸಿದೆ. ಜೊತೆಯಲ್ಲಿಯೇ ಅದರ ಪ್ರಭಾವವನ್ನು ಸ್ತುತಿಸಿದೆ. (ತೈ. ಸಂ. ೧-೨-೧೨) ಮತ್ತು ಇದೇ ವೈಶಿಷ್ಟ್ಯವನ್ನು ಆರನೆಯ ಕಾಂಡದಲ್ಲಿ ಇನ್ನೂ ವಿಶದವಾಗಿ ವರ್ಣಿಸಿದೆ. [ಇಲ್ಲಿ ಮಂತ್ರವಿಭಾಗವನ್ನು ಮಾಡುವುದರಲ್ಲಿ ಆಪಸ್ತಂಬ, ಬೋಧಾಯನ ಇತ್ಯಾದಿಗಳ ಮತಗಳಲ್ಲಿ ವಿಪ್ರತಿಪತ್ತಿಯಿದೆ]. (೬-೨೯೭-೨ ರಿಂದ ೮).

೧. **ವಿತ್ತಾಯನೀ ಮೇಽಸಿ ತಿಕ್ತಾಯನೀ ಮೇಽಸ್ಯವತಾನ್ಮಾ ನಾಥಿತಮವತಾನ್ಮಾ ವ್ಯಥಿತಂ ।**

(ತೈ ಸಂ. ೧-೨-೧೨-೧)

ಎಲೈ ವೇದಿಯೇ, ನೀನು ನನ್ನ ಸಂಪತ್ತಿಗೆ ಆಯತನವಾಗಿದ್ದೀಯೆ. ದುಃಖಿತನಾದವನಿಗೆ ಶರಣಾಗಿದ್ದೀಯೆ, ನನ್ನ ದಾರಿದ್ರ್ಯಾವಸ್ಥೆಯಲ್ಲಿಯೂ, ಆಪತ್ಕಾಲದಲ್ಲಿಯೂ ನನ್ನನ್ನು ರಕ್ಷಿಸು. [ಎಂಬ ಈ ಮಂತ್ರದಿಂದ ವೇದಿಯ ಆಕಾರವನ್ನು ರಚಿಸಬೇಕು].

**ಶಮ್ಯಯಾ ಪರಿಮಿಮೀತೇ ಮಾತ್ರೈವಾಸ್ಯೈ ಯುಕ್ತೇನೈವ ಯುಕ್ತಮವ ರುಂಧೇ । ವಿತ್ತಾಯನೀ ಮೇsಸೀತ್ಯಾಹ ವಿತ್ತಾ ಹ್ಯೇನಾನಾವತ್ತಿಕ್ತಾಯನೀ ಮೇsಸೀತ್ಯಾಹ ತಿಕ್ತಾನ್ಯೇನಾನಾವದವ- ತಾನ್ಮಾ ನಾಥಿತಮಿತ್ಯಾಹ ನಾಥಿತಾನ್ಹ್ಯೇನಾನಾವದವತಾನ್ಮಾ ವ್ಯಥಿತಮಿತ್ಯಾಹ ವ್ಯಥಿತಾನ್ಹ್ಯೇ- ನಾನಾವತ್ ।**

(ತೈ. ಸಂ. ೬-೨-೭-೨)

ಇದು ಈ ವೇದಿಯ ಅಳತೆಯು. ಈ ಯುಕ್ತವಾದ ಅಳತೆಯಿಂದ ಯಜಮಾನನು ತನಗೆ ಯೋಗ್ಯವಾದುದನ್ನೆಲ್ಲಾ ಪಡೆಯುತ್ತಾನೆ. ವೇದಿಯು ಸಂಪತ್ತಿನ ಮೂಲಕ ಅವನಿಗೆ ಸಹಾಯಮಾಡಿದುದರಿಂದ ಅದನ್ನು 'ನೀನು ಸಂಪತ್ತಿನ ಆಯತನವು' ಎಂದು ಸ್ತುತಿಸುತ್ತಾನೆ. ಆಪತ್ಕಾಲದಲ್ಲೂ ದಾರಿದ್ರ್ಯದಲ್ಲೂ ಸಹಾಯವನ್ನು ಮಾಡುವುದರಿಂದ 'ತಿಕ್ತಾಯನೀ' ಇತ್ಯಾದಿಯಾಗಿ ವರ್ಣಿಸುತ್ತಾನೆ

೨. **ವಿದೇರಗ್ನಿರ್ನಭೋ ನಾಮಾಗ್ನೇ ಅಂಗಿರೋ ಯೋsಸ್ಯಾಂ ಪೃಥಿವ್ಯಾಮಸ್ಯಾಯುಷಾ ನಾಮ್ನೇಹಿ ಯತ್ತೇನಾಧೃಷ್ಟಂ ನಾಮ ಯಜ್ಞಿಯಂ ತೇನ ತ್ವಾ ದಧೇ ।**

(ತೈ. ಸಂ. ೧-೨-೧೨-೧)

**ನಭ**ನೆಂಬ ನಾಮಧೇಯವುಳ್ಳ ಅಗ್ನಿಯು ನಿನ್ನ ಸ್ವರೂಪವನ್ನು ತಿಳಿಯಲಿ. ಈ ಪೃಥ್ವಿಯೊಳಗಡಗಿರುವ ಎಲೈ **ಅಗ್ನಿ ಅಂಗಿರಸ್ಸೇ,** ನೀನು ಆಯುವೆಂಬ ಹೆಸರಿನಿಂದ ಹೊರಕ್ಕೆ ಬಾ. ನಿನ್ನ ನಾಮಧೇಯವು ನಿರ್ದುಷ್ಟವಾದುದು ಮತ್ತು ಯಜ್ಞಾರ್ಹವಾದುದು ನಾನು ನಿನ್ನನ್ನು ಧರಿಸುತ್ತೇನೆ. [ಎಂಬ ಮಂತ್ರದಿಂದ **ಸ್ಫ್ಯ**ವೆಂಬ ಮರದ ಸಾಧನದಿಂದ ಚಾತ್ವಾಲವೆಂಬ ಭೂಮಿಯನ್ನು ಅಗೆಯಬೇಕು]

೩ **ಅಗ್ನೇ ಅಂಗಿರೋ ಯೋ ದ್ವಿತೀಯಸ್ಯಾಂ ತೃತೀಯಸ್ಯಾಂ ಪೃಥಿವ್ಯಾಮಸ್ಯಾಯುಷಾ ನಾಮ್ನೇಹಿ ಯತ್ತೇನಾಧೃಷ್ಟಂ ನಾಮ ಯಜ್ಞೀಯಂ ತೇನ ತ್ವಾ ದಧೇ ।**

(ತೈ. ಸಂ. ೧-೨-೧೨-೧, ೨)

ಎರಡನೆಯ ಮತ್ತು ಮೂರನೆಯ ಪೃಥ್ವಿಯಲ್ಲಿರುವ ಎಲೈ ಅಗ್ನಿ ಅಂಗಿರಸ್ಸೇ, ಆಯುವೆಂಬ ಹೆಸರಿನಿಂದ ಹೊರಕ್ಕೆ ಬಾ. ನಿನ್ನ ನಾಮಧೇಯವು ಅತಿಕ್ರಮಿಸಲಸಾಧ್ಯವಾದುದು ಮತ್ತು ಯಜ್ಞಾರ್ಹವಾದುದು. ಅದನ್ನು ನಾನು ಧರಿಸುತ್ತೇನೆ. [ಎಂಬ ಮಂತ್ರದಿಂದ **ಸ್ಫ್ಯ**ವೆಂಬ ಸಾಧನದಿಂದ ಪುನಃ ಅಗೆಯಬೇಕು].

**ವಿದೇರಗ್ನಿರ್ನಭೋ ನಾಮಾಗ್ನೇ ಅಂಗಿರ ಇತಿ ತ್ರಿರ್ಹರತಿ ಯ ಏವೈಷು ಲೋಕೇಷ್ವಗ್ನಯಸ್ತಾ ನೇವಾವ ರುಂಧೇ ತೂಷ್ಣೀಂ ಚತುರ್ಥಗ್‍ಂ ಹರತ್ಯನಿರುಕ್ತಮೇವಾವ ರುಂಧೇ ।**

(ತೈ. ಸಂ. ೬-೨-೭-೨, ೩)

ಎಂಬುದಾಗಿ ಮೂರುಸಲ ಅಗೆದನಂತರ ಯಜಮಾನನು ಈ ಮೂರು ಲೋಕಗಳ ಅಗ್ನಿಯನ್ನೂ ಪಡೆಯುತ್ತಾನೆ. ಮತ್ತು ನಿಶ್ಶಬ್ದದಿಂದ ನಾಲ್ಕನೆಯಸಲ ಅಗೆದನಂತರ ಅನಿರ್ದಿಷ್ಟವಾದ ಅಗ್ನಿಯನ್ನೂ ಸಹ ಪಡೆಯುತ್ತಾನೆ.

೪. **ಸಿಗ್ಂಹೀರಸಿ ಮಹಿಷೀರಸಿ ।**

(ತೈ. ಸಂ. ೧-೨-೧೨-೨)

ನೀನು ಸಿಂಹವು. ನೀನು ಮಹಿಷಿಯು [ಎಂಬ ಮಂತ್ರವು ಬೋಧಾಯನರ ಮತದಂತೆ ವೇದಿಕೆಯ ಮೇಲಿರುವ **ಪುರೀಷ** ವನ್ನು (ಇಟ್ಟಿಗೆಯ ಮತ್ತು ಕಲ್ಲಿನ ಚೂರುಗಳು) ಕಲೆಸುವುದಕ್ಕೂ, ಆಪಸ್ತಂಬರ ಮತದಂತೆ ವೇದಿಕೆಯ ಮೇಲೆ ಮಣ್ಣನ್ನು ಶೇಖರಿಸುವುದಕ್ಕೂ ಪಠಿಸಬೇಕು].

**ಸಿಗ್ಂಹೀರಸಿ ಮಹಿಷೀರಸೀತ್ಯಾಹ ಸಿಗ್ಂಹೀಹ್ಯೇಷಾ ರೂಪಂ ಕೃತ್ವೋಭಯಾನಂತರಾಪ-ಕ್ರಮ್ಯಾತಿಷ್ಠತ್ ।**

(ತೈ. ಸಂ. ೬-೨-೭-೩)

ಈ ವೇದಿಯು ಸಿಂಹದ ರೂಪವನ್ನು ಹೊಂದಿ ಎರಡು ಪಂಗಡಗಳ ನಡುವೆ ಇದ್ದು ಬಿಟ್ಟಿದ್ದರಿಂದ ಇದನ್ನು **ಸಿಗ್ಂಹೀರಸಿ, ಮಹಿಷೀರಸಿ** ಎಂದು ಕರೆದಿದೆ

೫. **ಉರುಪ್ರಥಸ್ವೋರು ತೇ ಯಜ್ಞಪತಿಃ ಪ್ರಥತಾಂ ಧ್ರುವಾಸಿ ದೇವೇಭ್ಯಃ ಶುಂಧಸ್ವ ದೇವೇಭ್ಯಃ ಶುಂಭಸ್ವ ।**

(ತೈ. ಸಂ. ೧-೨-೧೨-೨)

ವಿಸ್ತೃತವಾಗಿ ಹರಡು. ಯಜ್ಞಪತಿಯೂ ಸಹ ನಿನ್ನನ್ನನುಸರಿಸಿ ವಿಸ್ತೃತವಾಗಿ ಹರಡಲಿ. ನೀನು ಸ್ಥಿರಸ್ವರೂಪವು; ದೇವತೆಗಳಿಗಾಗಿ ಶುದ್ಧವಾಗಿರತಕ್ಕದ್ದು ಮತ್ತು ಪ್ರಕಾಶಮಾನವಾಗಿರತಕ್ಕದ್ದು. [ಎಂಬ ಮಂತ್ರಗಳಿಂದ ಮಣ್ಣನ್ನೂ, ಕಲ್ಲು ಮತ್ತು ಇಟ್ಟಿಗೆಗಳ ಚೂರನ್ನು ಹರಡುವುದೂ ಮತ್ತು ನೀರನ್ನು ಹಾಕಿ ದಮ್ಮುವುದೂ ಮೊದಲಾದ ಗಟ್ಟಣೆ ಕೆಲಸಗಳನ್ನು ಮಾಡಬೇಕು].

**ಉರು ಪ್ರಥಸ್ವೋರು ತೇ ಯಜ್ಞಪತಿಃ ಪ್ರಥತಾಮಿತ್ಯಾಹ ಯಜಮಾನಮೇವ ಪ್ರಜಯಾ ಪಶುಭಿಃ ಪ್ರಥಯತಿ ಧ್ರುವಾಸೀತಿ ಸಗ್ಂಹಂತಿ ಧೃತ್ಯೈ ದೇವೇಭ್ಯಃ ಶುಂಧಸ್ವ ದೇವೇಭ್ಯಃ ಶುಂಭಸ್ವೇತ್ಯವ ಚೋಕ್ಷತಿ ಪ್ರ ಚ ಕಿರತಿ ಶುದ್ಧ್ಯೈ ।**

(ತೈ. ಸಂ. ೬-೨-೭-೩, ೪)

**'ಉರು ಪ್ರಥಸ್ವ'** ಇತ್ಯಾದಿ ಮಂತ್ರಗಳ ಪಠನೆಗಳಿಂದ ಯಜ್ಞಕರ್ತನ ಪಶುಗಳೂ ಪ್ರಜೆಗಳೂ ವೃದ್ಧಿಯಾಗುವುವು. **'ಧ್ರುವಾಸಿ'** ಎಂಬ ಮಂತ್ರವನ್ನು ಪಠಿಸುತ್ತಾ ಭೂಮಿಯನ್ನು ಭದ್ರವಾಗಿ ಗಟ್ಟಣೆಯನ್ನು ಮಾಡುತ್ತಾನೆ. **'ಶುಂಧಸ್ವ, ಶುಂಭಸ್ವ'** ಎಂಬ ಮಂತ್ರಗಳಿಂದ ಶುದ್ಧಿಸಂಪಾದನೆಗಾಗಿ ನೀರನ್ನು ಚುಮುಕಿಸಿ ಮರಳನ್ನು ಹರಡುತ್ತಾನೆ.

೬ **ಇಂದ್ರಘೋಷಸ್ತ್ವಾ ವಸುಭಿಃ ಪುರಸ್ತಾತ್ಪಾತು ಮನೋಜವಾಸ್ತ್ವಾ ಪಿತೃಭಿರ್ದಕ್ಷಿಣತಃ ಪಾತು ಪ್ರಚೇತಾಸ್ತ್ವಾ ರುದ್ರೈಃ ಪಶ್ಚಾತ್ಪಾತು ವಿಶ್ವಕರ್ಮಾ ತ್ವಾದಿತ್ಯೈರುತ್ತರತಃ ಪಾತು ।**

(ತೈ. ಸಂ. ೧-೨-೧೨-೨)

ಇಂದ್ರಘೋಷವು ನಿನ್ನನ್ನು **ವಸುಗಳೊಂದಿಗೆ** ಮುಂಭಾಗದಲ್ಲಿ ರಕ್ಷಿಸಲಿ. ಮನೋಜವವು ದಕ್ಷಿಣಭಾಗದಲ್ಲಿ **ಪಿತೃ**ಗಳೊಂದಿಗೆ ರಕ್ಷಿಸಲಿ. **ಪ್ರಚೇತಸ್ಸು** ಹಿಂಭಾಗದಲ್ಲಿ ರುದ್ರರೊಂದಿಗೆ ರಕ್ಷಿಸಲಿ. **ವಿಶ್ವಕರ್ಮನು** ಆದಿತ್ಯರೊಂದಿಗೆ ಎಡಭಾಗದಲ್ಲಿ ರಕ್ಷಿಸಲಿ. [ಎಂಬ ಮಂತ್ರದಿಂದ ಪ್ರೋಕ್ಷಣ್ಯುದಕವನ್ನು ಚುಮುಕಿಸಬೇಕು].

> **ಇಂದ್ರಘೋಷಸ್ತ್ವಾ ವಸುಭಿಃ ಪುರಸ್ತಾತ್ಪಾತ್ವಿತ್ಯಾಹ ದಿಗ್ಭ್ಯ ಏವೈನಾಂ ಪ್ರೋಕ್ಷತಿ ದೇವಾಗ್ಂಶ್ಚೇದುತ್ತರವೇದಿರುಪಾವವರ್ತೀಹೈವ ವಿಜಯಾಮಹಾ ಇತ್ಯಸುರಾ ವಜ್ರಮುದ್ಯತ್ಯ ದೇವಾನಭ್ಯಾಯಂತ ತಾನಿಂದ್ರಘೋಷೋ ವಸುಭಿಃ ಪುರಸ್ತಾದಪಾನುದತ ಮನೋಜವಾಃ ಪಿತೃಭಿರ್ದಕ್ಷಿಣತಃ ಪ್ರಚೇತಾ ರುದ್ರೈಃ ಪಶ್ಚಾದ್ವಿಶ್ವಕರ್ಮಾದಿತ್ಯೈರುತ್ತರತಃ ।**
>
> (ತೈ. ಸಂ. ೬-೨-೭-೪, ೫).

"ಈ ಉತ್ತರವೇದಿಯು ದೇವತೆಗಳನ್ನಾಶ್ರಯಿಸಿದೆ. ಇದನ್ನು ನಾವು ವಶಪಡಿಸಿಕೊಳ್ಳಬೇಕು" ಎಂಬುದಾಗಿ ಅಸುರರು ವಜ್ರಾಯುಧವನ್ನು ತೆಗೆದುಕೊಂಡು ದೇವತೆಗಳನ್ನು ಎದುರಿಸಿದಾಗ ಇಂದ್ರಘೋಷವು ವಸುಗಳೊಡನೆ ಮುಂಭಾಗದಲ್ಲಿಯೂ, ಮನೋಜವವು ಪಿತೃಗಳೊಂದಿಗೆ ದಕ್ಷಿಣಭಾಗದಲ್ಲೂ, ರುದ್ರರೊಂದಿಗೆ ಪ್ರಚೇತಸ್ಸು ಹಿಂಭಾಗದಲ್ಲೂ, ವಿಶ್ವಕರ್ಮನು ಆದಿತ್ಯರೊಂದಿಗೆ ಎಡಭಾಗದಲ್ಲೂ ಅಸುರರನ್ನು ತಡೆದು ಓಡಿಸಿದರು. ಆದುದರಿಂದ "ಇಂದ್ರಘೋಷ...." ಎಂಬ ಮಂತ್ರದಿಂದ ಎಲ್ಲಾ ದಿಕ್ಕುಗಳಲ್ಲೂ ಪ್ರೋಕ್ಷಿಸಬೇಕು.

> **ಯದೇವಮುತ್ತರವೇದಿಂ ಪ್ರೋಕ್ಷತಿ ದಿಗ್ಭ್ಯ ಏವ ತದ್ಯಜಮಾನೋ ಭ್ರಾತೃವ್ಯಾನ್ಪ್ರಣುದತೇ ।**
>
> (ತೈ. ಸಂ. ೬-೨-೭-೫)

ಈ ರೀತಿಯಲ್ಲಿ ವೇದಿಯನ್ನು ಪ್ರೋಕ್ಷಿಸತಕ್ಕ ಯಜಮಾನನು ಎಲ್ಲಾ ದಿಕ್ಕುಗಳಿಂದಲೂ ಸಹ ತನ್ನ ಶತ್ರುಗಳನ್ನು ತಡೆದೋಡಿಸುತ್ತಾನೆ.

> **ಇಂದ್ರೋ ಯತೀನ್ತ್ಸಾಲಾವೃಕೇಭ್ಯಃ ಪ್ರಾಯಚ್ಛತ್ತಾನ್ದಕ್ಷಿಣತ ಉತ್ತರವೇದ್ಯಾ ಆದನ್ಯತ್ಪ್ರೋಕ್ಷಣೀನಾಮುಚ್ಛಿಷ್ಯೇತ ತದ್ದಕ್ಷಿಣತ ಉತ್ತರವೇದ್ಯೈ ನಿ ನಯೇದ್ಯದೇವ ತತ್ರ ಕ್ರೂರಂ ತತ್ತೇನ ಶಮಯತಿ ಯಂ ದ್ವಿಷ್ಯಾತ್ತಂ ಧ್ಯಾಯೇಚ್ಛುಚೈವೈನಮರ್ಪಯತಿ ।**
>
> (ತೈ. ಸಂ. ೬-೨-೭-೫).

ಇಂದ್ರನು ಯತಿಗಳನ್ನು ಸಾಲಾವೃಕವೆಂಬ ಮೃಗಗಳಿಗೆ ಕೊಟ್ಟನು. ಅವು ಅವರನ್ನು ಉತ್ತರವೇದಿಯ ದಕ್ಷಿಣಭಾಗದಲ್ಲಿ ತಿಂದುಹಾಕಿದವು. ಆ ಭಾಗದಲ್ಲಿ ಯಾವ ಕ್ರೌರ್ಯವಿದ್ದರೂ ಅದು ಅಳಿಸಿಹೋಗುತ್ತದೆ. ಅದರೆ (ಯಜಮಾನನು) ತನ್ನನ್ನು ದ್ವೇಷಿಸುವವರು ಯಾರು ಎಂಬುದನ್ನು ಮಾತ್ರ ತಿಳಿಯಬೇಕು. ಕೂಡಲೆ ಶತ್ರುವಿಗೆ ಆಪತ್ತು ಸಿದ್ಧವು.

> **೭. ಸಿಗ್ಂಹೀರಸಿ ಸಪತ್ನಸಾಹೀ ಸ್ವಾಹಾ ಸಿಗ್ಂಹೀರಸಿ ಸುಪ್ರಜಾವನಿಃ ಸ್ವಾಹಾ ಸಿಗ್ಂಹೀರಸಿ ರಾಯಸ್ಪೋಷವನಿಃ ಸ್ವಾಹಾ ಸಿಗ್ಂಹೀರಸ್ಯಾದಿತ್ಯವನಿಃ ಸ್ವಾಹಾ ಸಿಗ್ಂಹೀರಸ್ಯಾವಹ ದೇವಾನ್ದೇವಯತೇ ಯಜಮಾನಾಯ ಸ್ವಾಹಾ ।**
>
> (ತೈ. ಸಂ. ೧-೨-೧೨-೨,೩)

ನೀನು ಶತ್ರುಗಳನ್ನು ಜಯಿಸುವ ಸಿಂಹವಾಗಿದ್ದೀಯೆ; ಸುಂದರವಾದ ಸಂತತಿಯನ್ನು ಕೊಡತಕ್ಕ ಸಿಂಹವಾಗಿದ್ದೀಯೆ. ಐಶ್ವರ್ಯವನ್ನು ವೃದ್ಧಿಪಡಿಸುವ ಸಿಂಹವಾಗಿದ್ದೀಯೆ. ಆದಿತ್ಯರ ಅನುಗ್ರಹವನ್ನು ಸಂಪಾದಿಸುವ ಸಿಂಹವಾಗಿದ್ದೀಯೆ.

ದೇವತೆಗಳನ್ನು ಯಜಮಾನನ ಯಜ್ಞಕ್ಕೆ ಕರೆದುಕೊಂಡು ಬಾ. ನಿನಗೆ ಮಂಗಳವಾಗಲಿ. [ಎಂಬ ಮಂತ್ರದಿಂದ ಐದು ಆಘಾರಗಳೂ ನೆರವೇರಿಸಲ್ಪಡುತ್ತವೆ ]. ಇದರ ಮಹತ್ವವೇನೆಂದರೆ.

> **ಸೋತ್ತರವೇದಿರಬ್ರವೀತ್ಸರ್ವಾನ್ಮಯಾ ಕಾಮಾನ್ವ್ಯಶ್ನವಥೇತಿ ತೇ ದೇವಾ ಅಕಾಮಯಂತಾಸುರಾನ್ಭ್ರಾತೃವ್ಯಾನಭಿಭವೇಮೇತಿ ತೇಽಜುಹವುಃ ಸಿಗ್ಂಹೀರಸಿ ಸಪತ್ನಸಾಹೀ ಸ್ವಾಹೇತಿ ತೇಽಸುರಾನ್ಭ್ರಾತೃವ್ಯಾನಭ್ಯಭವನ್ತೇಽಸುರಾನ್ಭ್ರಾತೃವ್ಯಾನಭಿಭೂಯಾಕಾಮಯಂತ ಪ್ರಜಾಂ ವಿಂದೇಮಹೀತಿ ತೇಽಜುಹವುಃ ಸಿಗ್ಂಹೀರಸಿ ಸುಪ್ರಜಾವನಿಃ ಸ್ವಾಹೇತಿ ತೇ ಪ್ರಜಾಮವಿಂದಂತ ತೇ ಪ್ರಜಾಂ ವಿತ್ತ್ವಾಽಕಾಮಯಂತ ಪಶೂನ್ವಿಂದೇಮಹೀತಿ ತೇಽಜುಹವುಃ ಸಿಗ್ಂಹೀರಸಿ ರಾಯಸ್ಪೋಷವನಿಃ ಸ್ವಾಹೇತಿ ತೇ ಪಶೂನವಿಂದಂತ ತೇ ಪಶೂನ್ವಿತ್ತ್ವಾಽಕಾಮಯಂತ ಪ್ರತಿಷ್ಠಾಂ ವಿಂದೇಮಹೀತಿ ತೇಽಜುಹವುಃ ಸಿಗ್ಂಹೀರಸ್ಯಾದಿತ್ಯವನಿಃ ಸ್ವಾಹೇತಿ ತ ಇಮಾಂ ಪ್ರತಿಷ್ಠಾಮವಿಂದಂತ ತ ಇಮಾಂ ಪ್ರತಿಷ್ಠಾಂ ವಿತ್ತ್ವಾಽಕಾಮಯಂತ ದೇವತಾ ಆಶಿಷ ಉಪೇಯಾಮೇತಿ ತೇಽಜುಹವುಃ ಸಿಗ್ಂಹೀರಸ್ಯಾ ವಹ ದೇವಾನ್ದೇವಯತೇ ಯಜಮಾನಾಯ ಸ್ವಾಹೇತಿ ತೇ ದೇವತಾ ಆಶಿಷ ಉಪಾಯನ್ ॥**

(ತೈ. ಸಂ. ೬-೨-೭-೧. ೨. ೩)

"ನನ್ನಿಂದ ನೀವು ಸಕಲವಾದ ಇಷ್ಟಾರ್ಥಗಳನ್ನು ಪಡೆಯಿರಿ" ಎಂದು ಉತ್ತರ ವೇದಿಯು ಹೇಳಿತು. ಆಗ ದೇವತೆಗಳು "ನಮ್ಮ ಶತ್ರುಗಳಾದ ಅಸುರರನ್ನು ನಾವು ಜಯಿಸೋಣ" ಎಂದು ಆಶಿಸಿ **ಸಿಗ್ಂಹೀರಸಿ ಸಪತ್ನಸಾಹೀ ಸ್ವಾಹಾ** ಎಂದು ಯಾಗವಮಾಡಿದಾಗ ಶತ್ರುಗಳಾದ ಅಸುರರನ್ನು ಜಯಿಸಲು ಸಮರ್ಥರಾದರು. ಅಸುರರನ್ನು ಜಯಿಸಿದನಂತರ ಸಂತತಿಯನ್ನು ಪಡೆಯುವ ಆಸೆಯಿಂದ **ಸಿಗ್ಂಹೀರಸಿ ಸುಪ್ರಜಾವನಿಃ ಸ್ವಾಹಾ** ಎಂದು ಯಾಗಮಾಡಿದಾಗ ಪುತ್ರಸಂತತಿಯನ್ನು ಪಡೆದರು. ಪುತ್ರಸಂಪತ್ತನ್ನು ಪಡೆದನಂತರ "ನಾವು ಪಶುಸಂಪತ್ತನ್ನು ಪಡೆಯೋಣ" ಎಂದು ಆಸೆಪಟ್ಟು "**ಸಿಗ್ಂಹೀರಸಿ ರಾಯಸ್ಪೋಷವನಿಃ ಸ್ವಾಹಾ**" ಎಂದು ಯಾಗವನ್ನು ಮಾಡಿದರು. ಅನಂತರ ಪಶುಸಂಪತ್ತನ್ನು ಪಡೆದರು. ಪಶು ಸಂಪತ್ತನ್ನು ಪಡೆದನಂತರ "ನಾವು ಪ್ರತಿಷ್ಠೆಯನ್ನು ಹೊಂದೋಣ" ಎಂಬಾಸೆಯಿಂದ **ಸಿಗ್ಂಹೀರಸ್ಯಾದಿತ್ಯವನಿಃ ಸ್ವಾಹಾ** ಎಂದು ಯಾಗವನ್ನು ಮಾಡಿ ಪ್ರತಿಷ್ಠೆಯನ್ನು ಸಂಪಾದಿಸಿಕೊಂಡರು. ಅನಂತರ ದೇವತೆಗಳ ಅನುಗ್ರಹವನ್ನು ಸಂಪಾದಿಸಲು ಅವರನ್ನು ಉಪಾಸಿಸಬೇಕೆಂದು ಆಸೆಪಟ್ಟು **ಸಿಗ್ಂಹೀರಸ್ಯಾವಹ ದೇವಾನ್ದೇವಯತೇ ಯಜಮಾನಾಯ ಸ್ವಾಹಾ** ಎಂದು ಯಾಗವನ್ನು ಮಾಡಿದಾಗ ದೇವತೆಗಳ ಅನುಗ್ರಹವನ್ನು ಪಡೆದರು.

> **ಪಂಚ ಕೃತ್ವೋ ವ್ಯಾಘಾರಯತಿ ಪಂಚಾಕ್ಷರಾ ಪಂಕ್ತಿಃ ಪಾಂಕ್ತೋ ಯಜ್ಞೋ ಯಜ್ಞಮೇವಾವ ರುಂಧೇ ।**

(ತೈ. ಸಂ. ೬-೨-೭-೨)

ಪಂಕ್ತಿ ಎಂಬ ಛಂದಸ್ಸಿನ ಪಾದವು ಪಂಚಾಕ್ಷರಗಳುಳ್ಳದ್ದು. ಆದುದರಿಂದ ಐದುಸಲ ಆಘಾರವನ್ನು ಆಚರಿಸಿ ಪಂಚಾತ್ಮಕವಾದ ಯಜ್ಞದಪ್ರಭಾವವನ್ನು ಪಡೆಯುತ್ತಾನೆ.

**ಅಕ್ಷ್ಣಯಾ ವ್ಯಾಘಾರಯತಿ ತಸ್ಮಾದಕ್ಷ್ಣಯಾ ಪಶವೋಽಂಗಾನಿ ಪ್ರ ಹರಂತಿ ಪ್ರತಿಷ್ಠಿತ್ಯೈ ।**

(ತೈ. ಸಂ. ೬-೨-೮-೩)

ವಕ್ರವಾಗಿ ಪ್ರೋಕ್ಷಣಕರ್ಮವನ್ನು ನೆರವೇರಿಸುವುದರಿಂದ ಪಶುಗಳೂ ಸಹ ತಮ್ಮ ಅವಲಂಬನಕ್ಕಾಗಿ ವಕ್ರವಾಗಿ ಹೆಜ್ಜೆಗಳನ್ನೇ ಇಡುತ್ತವೆ.

೮. **ಭೂತೇಭ್ಯಸ್ತ್ವಾ** (ತೈ ಸಂ ೧-೨-೧೨-೩)—ಭೂತಗಳಿಗಾಗಿ (ಈ ಮಂತ್ರವನ್ನು ಪಠಿಸಿ ಸ್ರುಕ್ಕನ್ನು ತೆಗೆದುಕೊಳ್ಳುತ್ತಾನೆ. **ಭೂತೇಭ್ಯಸ್ತ್ವೇತಿ ಸ್ರುಚಮುದ್ಗೃಹ್ಯ**).

**ಭೂತೇಭ್ಯಸ್ತ್ವೇತಿ ಸ್ರುಚಮುದ್ಗೃಹ್ಣಾತಿ ಯ ಏವ ದೇವಾ ಭೂತಾಸ್ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ।**

(ತೈ ಸಂ ೬-೨-೮-೩)

ಈ ಮಂತ್ರವನ್ನು ಪಠಿಸುತ್ತಾ ಸ್ರುಕ್ಕನ್ನು ತೆಗೆದುಕೊಂಡಾಗ ಅವರ ಭಾಗದ ಹವಿಸ್ಸು ಸಿದ್ಧವಾದುದಕ್ಕಾಗಿ ಅವರಿಗೆ ಹರ್ಷವಾಗುತ್ತದೆ.

೯. **ವಿಶ್ವಾಯುರಸಿ ಪೃಥಿವೀಂ ದೃಗ್ಂಹ ಧ್ರುವಕ್ಷಿದಸ್ಯಂತರಿಕ್ಷಂ ದೃಗ್ಂಹಾಚ್ಯುತಕ್ಷಿದಸಿ ದಿವಂ ದೃಗ್ಂಹ ।** (ತೈ. ಸಂ. ೧-೨-೧೨-೩)

ನೀನು ವಿಶ್ವಾಯುವಾಗಿದ್ದೀಯೆ. ಪೃಥ್ವಿಯನ್ನು ಬಲಪಡಿಸು. ನೀನು ದೃಢವಾಗಿದ್ದೀಯೆ. ಅಂತರಿಕ್ಷವನ್ನು ದೃಢವಾಗಿರಿಸು. ನೀನು ಅಪ್ರತಿಹತವಾಗಿದ್ದೀಯೆ. ದ್ಯುಲೋಕವನ್ನೂ ಅಪ್ರತಿಹತವಾದುದನ್ನಾಗಿಮಾಡು (ಈ ಮಂತ್ರದಿಂದ ಪರಿಧಿಯನ್ನಿರಿಸಬೇಕು).

೧೦. **ಅಗ್ನೇರ್ಭಸ್ಮಾಸ್ಯಗ್ನೇಃ ಪುರೀಷಮಸಿ**(ತೈ. ಸಂ. ೧-೨-೧೨-೩)—ನೀನು ಅಗ್ನಿಯ ಭಸ್ಮವು ಮತ್ತು ಅಗ್ನಿಯ ಪುರೀಷವು (ಈ ಮಂತ್ರದಿಂದ ಗುಲ್ಗುಲ್ವಾದಿ ಉಪಕರಣಗಳನ್ನಿಡಬೇಕು). ಇದರ ಔಚಿತ್ಯವನ್ನು ಒಂದು ಪ್ರಸಂಗದ ಮೂಲಕ ವಿವರಿಸಿದೆ.

**ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್ ತೇ ದೇವೇಭ್ಯೋ ಹವ್ಯಂ ವಹಂತಃ ಪ್ರಾಮೀಯಂತ ಸೋಽಗ್ನಿರಬಿಭೇದಿತ್ಥಂ ವಾವ ಸ್ಯ ಆರ್ತಿಮಾರಿಷ್ಯತೀತಿ ಸ ನಿಲಾಯತ ಸ ಯಾಂ ವನಸ್ಪತಿಷ್ವವಸತ್ತಾಂ ಪೂತುದ್ರೌ ಯಾಮೋಷಧೀಷು ತಾಗ್ಂ ಸುಗಂಧಿತೇಜನೇ ಯಾಂ ಪಶುಷು ತಾಂ ಪೇತ್ವಸ್ಯಾಂತರಾ ಶೃಂಗೇ ತಂ ದೇವತಾಃ ಪ್ರೈಷಮೈಚ್ಛಂತಮನ್ವವಿಂದನ್ತಮಬ್ರುವನ್ನುಪ ನ ಆ ವರ್ತಸ್ವ ಹವ್ಯಂ ನೋ ವಹೇತಿ ಸೋಽಬ್ರವೀದ್ವರಂ ವೃಣೈ ಯದೇವ ಗೃಹೀತಸ್ಯಾಹುತಸ್ಯ ಬಹಿಃಪರಿಧಿ ಸ್ಕಂದಾತ್ತನ್ಮೇ ಭ್ರಾತೃಣಾಂ ಭಾಗಧೇಯಮಸದಿತಿ ತಸ್ಮಾದ್ಯದ್ಗೃಹೀತಸ್ಯಾಹುತಸ್ಯ ಬಹಿಃಪರಿಧಿ ಸ್ಕಂದತಿ ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ಸೋಽಮನ್ಯತಾಸ್ಥನ್ವಂತೋ ಮೇ ಪೂರ್ವೇ ಭ್ರಾತರಃ ಪ್ರಾಮೇಷತಾಸ್ಥಾನಿ ಶಾತಯಾ ಇತಿ ಸ ಯಾನ್ಯಸ್ಥಾನ್ಯಶಾತಯತ ತತ್ಪೂತುದ್ರ್ವವಭವದ್ಯನ್ಮಾಗ್ಂಸಮುಪಭೃತಂ ತದ್ಗುಲ್ಗುಲು ॥**

(ತೈ. ಸಂ. ೬-೨-೮-೪, ೫)

ಅಗ್ನಿಗೆ ಮೂರು ಜನ ಹಿರಿಯ ಸಹೋದರರಿದ್ದರು. ಅವರು ದೇವತೆಗಳಿಗೆ ಹವಿಸ್ಸನ್ನು ಹೊರುವ ಭಾರವನ್ನು ವಹಿಸಿದುದರಿಂದ ಕ್ಷಯಿಸಿಹೋದರು. ಅಗ್ನಿಯು ತನಗೂ ಕೂಡ ಅದೇ ಗತಿಯು ಪ್ರಾಪ್ತವಾಗಬಹುದೆಂದು ಬೆದರಿ ದೂರವಾಗಿ ಹೊರಟು ಹೋದನು. ಅವನು ದೇವದಾರು ಪೂತದ್ರು ವೆಂಬ ವೃಕ್ಷದಲ್ಲಿಯೂ **ಸುಗಂಧಿತೇಜನವೆಂಬ** ಔಷಧಿಯಲ್ಲಿಯೂ, ಟಗರಿನ ಕೊಂಬಿನ ಮಧ್ಯದಲ್ಲಿಯೂ ಒಂದೊಂದು ರಾತ್ರಿಯನ್ನು ಕಳೆದನು. ಆಗ ದೇವತೆಗಳ ಅವನನ್ನು ಹುಡುಕಿ ತಮಗೆ ಹವಿಸ್ಸನ್ನು ವಹಿಸುವಂತೆ ಪ್ರಾರ್ಥಿಸಿದರು. ಆಗ ಅಗ್ನಿಯು "ಪರಿಧಿಯಿಂದ ಹೊರಗೆ ಬೀಳತಕ್ಕ ಹವಿಸ್ಸುಗಳೆಲ್ಲವೂ ತನ್ನ ಸಹೋದರರಿಗೆ ಸೇರತಕ್ಕದ್ದು" ಎಂಬ ವರವನ್ನು ಅವರಿಂದ ಪಡೆದು ಅನಂತರ ಆ ಕಾರ್ಯದ ಭಾರವನ್ನು ವಹಿಸಿದನು. ಅದೇ ರೀತಿ ಪರಧಿಯ ಹೊರಗೆ ಬೀಳತಕ್ಕ ಹವಿಸ್ಸುಗಳಿಂದ ಅವರು ಹರ್ಷಿತರಾಗುತ್ತಾರೆ. "ನನ್ನ ಸಹೋದರರು ಅಸ್ಥಿಗಳಿದ್ದುದರಿಂದ ಅದು ಜಜ್ಜಿಹೋಗಿ ಅವರು ಕ್ಷಯಿಸಿದರು, ಆದುದರಿಂದ ನಾನು ಅಸ್ಥಿಗಳನ್ನೆಲ್ಲಾ ಪುಡಿಮಾಡುತ್ತೇನೆಂದು ಪುಡಿಮಾಡಿದಾಗ ಅದೆಲ್ಲವೂ ಪೂತದ್ರುವಾಗಿ ಅದರ ಮೇಲಿನ ಮಾಂಸವೆಲ್ಲವೂ ಗುಲ್ಗುಲುವಾಯಿತು.

ಈ ವಿಧವಾಗಿ ಉತ್ತರವೇದಿಯ ಸ್ವರೂಪವನ್ನೂ, ಪ್ರಭಾವವನ್ನೂ ಸಹ ವರ್ಣಿಸಿದೆ. ಆದುದರಿಂದಲೇ **ಜ್ಯೋತಿಷ್ಮತೀಂ** ಎಂಬ ವಿಶೇಷಣದಿಂದ ಅದನ್ನು ಸ್ತುತಿಸಿದೆ. **ಜ್ಯೋತಿಷ್ಮತೀಂ** ಎಂಬ ಪದಕ್ಕೆ ಸಾಯಣರು **ಆಹವನೀಯಾಗ್ನೇಸ್ತೇಜೋಯುಕ್ತಾಂ ।** ಆಹವನೀಯಾಗ್ನಿಯ ತೇಜಸ್ಸಿನಿಂದ ಕೂಡಿದ ಎಂದು ವಿವರಿಸಿದ್ದಾರೆ. ತೇಜೋಯುತವಾದ ಈ ವೇದಿಯನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿಯಾಗಿ ವರ್ಣಿಸಿದೆ. ಈ ವರ್ಣನೆಯಲ್ಲಿ ವೇದಿಗೂ ವೇದಿಸ್ಥವಾದ ಅಗ್ನಿಗೂ ತಾದಾತ್ಮ್ಯವನ್ನು ತೋರಿಸಿ ಅದರ ಪ್ರಭಾವವನ್ನು ಸ್ತುತಿಸಿದೆ. ಪ್ರಕೃತವಾದ ಋಕ್ಕಿನಲ್ಲಿರುವ **ಜ್ಯೋತಿಷ್ಮತೀಂ, ಅದಿತಿಂ** ಎಂಬ ವಿಶೇಷಣಗಳಿಂದ ಸೂಚಿತವಾಗುವ ಮಹತ್ತಾದ ಗುಣಗಳೆಲ್ಲವೂ ಪ್ರಶಂಸಿಸಲ್ಪಟ್ಟಿವೆ. (ಶ. ಬ್ರಾ. ೧೦-೫-೪-೧ ರಿಂದ ೧೮) ಇಲ್ಲಿ ಮಹಾವೇದಿಗೂ ಮಹಾವೇದ್ಯಂತರ್ಗತವಾದ ಉತ್ತರ ವೇದಿಗೂ ಒಂದೇ ಪ್ರಾಮುಖ್ಯವನ್ನು ಹೇಳಿದೆ.

> **ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ । ತಸ್ಯಾಪ ಏವ ಪರಿಶ್ರಿತೋ ಮನುಷ್ಯಾ ಯಜುಷ್ಮತ್ಯ ಇಷ್ಟಕಾಃ ಸೂದದೋಹಾ ಓಷಧಯಶ್ಚ ವನಸ್ಪತಯಶ್ಚ ಪುರೀಷಮಾಹುತಯಃ ಸಮಿಧೋಽಗ್ನಿರ್ಲೋಕಂಪೃಣಾ ತದ್ವಾ ಏತತ್ಸರ್ವಮಗ್ನಿಮೇವಾಭಿಸಂಪದ್ಯತೇ ತತ್ಸರ್ವೋಽಗ್ನಿರ್ಲೋಕಂಪೃಣಾಮಭಿಸಂಪದ್ಯತೇ ಸ ಯೋ ಹೈತದೇವಂ ವೇದ ಲೋಕಂಪೃಣಾಮೇನಂ ಭೂತಮೇತತ್ಸರ್ವಮಭಿಸಂಪದ್ಯತೇ ।**
>
> (ಶ. ಬ್ರಾ. ೧೦-೫-೪-೧)

ಈ ವೇದಿಯೇ ಪೃಥ್ವಿಯು, ಇಷ್ಟಕಗಳೇ ಇದನ್ನು ಸುತ್ತುವರಿದಿರುವ ಸಮುದ್ರಗಳು, **ಯಜುಷ್ಮತೀ**ಗಳೆಂಬ ಇಷ್ಟಕಗಳೇ ಇದರಲ್ಲಿ ವಾಸಮಾಡತಕ್ಕ ಮನುಷ್ಯರು. **ಸೂದದೋಹ**ಗಳೇ ಪಶುಗಳು, ಇಷ್ಟಕಗಳ ನಡುವೆ ಇರತಕ್ಕ ಮೃದಾದಿಗಳೇ ಸಸ್ಯವೃಕ್ಷಗಳು. **ಲೋಕಂಪೃಣ**ವೆಂಬ ಇಷ್ಟಕವೇ ಪಾರ್ಥಿವಾಗ್ನಿಯು. ಈ ತತ್ತ್ವವನ್ನು ತಿಳಿದವರಿಗೆ ಲೋಕದ ವ್ಯಾಪ್ತಿಯು ಲಭಿಸುತ್ತದೆ.

> **ಅಂತರಿಕ್ಷಗ್ಂ ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯ ದ್ಯಾವಾಪೃಥಿವ್ಯೋರೇವ ಸಂಧಿಃ ಪರಿಶ್ರಿತಃ ಪರೇಣ ಹಾಂತರಿಕ್ಷಂ ದ್ಯಾವಾಪೃಥಿವೀ ಸಂಧತ್ತಸ್ತಾಃ ಪರಿಶ್ರಿತೋ ವಯಾಗ್ಂಸಿ ಯಜುಷ್ಮತ್ಯ**

**ಇಷ್ಟಕಾ ವರ್ಷಗ್ಂ ಸೂದದೋಹಾ ಮರೀಚಯಃ ಪುರೀಷಮಾಹುತಯಃ ಸಮಿಧೋ ವಾಯುರ್ಲೋಕಂಪೃಣಾ ತದ್ವಾ ಏತತ್ಸರ್ವಂ ವಾಯುರೇವಾಭಿಸಂಪದ್ಯತೇ ತತ್ಸ-ರ್ವೋಽಗ್ನಿಃ............... ||**

(ಶ. ಬ್ರಾ. ೧೦-೫-೪-೨)

ಈ ವೇದಿಯೇ ಅಂತರಿಕ್ಷವು. ಅಂತರಿಕ್ಷವನ್ನೂ ವಿಾರಿದ ಸ್ಥಳದಲ್ಲಿ ದ್ಯಾವಾಪೃಥಿವಿಗಳು ಸಂಧಿಸುವುದರಿಂದ ವೇದಿಯನ್ನು ಸುತ್ತುವರಿದಿರುವ ಇಷ್ಟಕಗಳು. **ಯಜುಷ್ಮತಿಗಳೇ** ಪಕ್ಷಿಗಳು. **ಸೂದದೋಹಗಳೇ** ವೃಷ್ಟಿಯು. ಇಟ್ಟಿಗೆಗಳ ನಡುವೆ ಇರುವ ಮೃದಾದಿಗಳು ಕಿರಣಗಳು, ಆಹುತಿಗಳೇ ಇಂಧನಗಳು. **ಲೋಕಂಪೃಣವೇ** ವ್ಯಾಪಕನಾದ ವಾಯುವು, ಈ ತತ್ತ್ವವನ್ನು ತಿಳಿದವನು ಸರ್ವವ್ಯಾಪಕನಾಗುತ್ತಾನೆ.

(೧೦-೫-೪-೨)

**ದ್ಯೌರ್ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯಾಪ ಏವ ಪರಿಶ್ರಿತೋ ಯಥಾ ಹ ವಾ ಇದಂ ಕೋಶಃ ಸಮುಬ್ಜಿತ ಏವಮಿಮೇ ಲೋಕಾ ಅಪ್ಸ್ವಂತಸ್ತದ್ಯಾ ಇಮಾನ್‌ಲೋಕಾನ್ಪರೇಣಾಪಸ್ತಾಃ ಪರಿಶ್ರಿತೋ ದೇವಾ ಯಜುಷ್ಮತ್ಯ ಇಷ್ಟಕಾ ಯದೇಷ್ವೇತಸ್ಮಿನ್‌ಲೋಕೇಽನ್ನಂ ತತ್ಸೂದ-ದೋಹಾ ನಕ್ಷತ್ರಾಣಿ ಪುರೀಷಮಾಹುತಯಃ ಸಮಿಧ ಆದಿತ್ಯೋ ಲೋಕಂಪೃಣಾ ತದಾ ಏತತ್ಸರ್ವಮಾದಿತ್ಯಮೇವಾಭಿಸಂಪದ್ಯತೇ ತತ್ಸರ್ವೋಽಗ್ನಿಃ....**

(ಶ. ಬ್ರಾ. ೧೦-೫-೪-೩)

ಈ ವೇದಿಯೇ ದ್ಯುಲೋಕವು, **ಪರಿಶ್ರಿತಗಳೇ** (ಸುತ್ತುವರಿದಿರುವ ಇಷ್ಟಕಗಳು) ದೇವನದಿಗಳು. ವೇದಿಯನ್ನು ಪರಿಶ್ರಿತಗಳು ಸುತ್ತುವರಿದಿರುವಂತೆ ದೇವನದಿಗಳು ದೇವಲೋಕವನ್ನು ಸುತ್ತುವರಿದಿವೆ. **ಯಜುಷ್ಮತಿಗಳೇ** ದೇವತೆಗಳು. ಸೂದದೋಹಗಳೇ ದೇವತೆಗಳಿಗೆ ಅನ್ನವು. ಮೃತ್ತುಗಳೇ ನಕ್ಷತ್ರಗಳು. ........**ಲೋಕಂಪೃಣವೇ** ಆದಿತ್ಯನು. ಈ ತತ್ವವನ್ನು ತಿಳಿದವನು ಆದಿತ್ಯನಂತೆ ವ್ಯಾಪಕನಾಗುತ್ತಾನೆ

**ಆದಿತ್ಯೋ ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯ ದಿಶ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಂ ದಿಶಃ ಸಮಂತಂ ಪರಿಯಂತಿ ರಶ್ಮಯೋ ಯಜುಷ್ಮತ್ಯ ಇಷ್ಟಕಾಸ್ತಾಃ ಷಷ್ಟಿಶ್ಚೈವ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಸ್ಯ ರಶ್ಮಯಸ್ತದ್ಯತ್ಪರಿಶ್ರಿತ್ಸು ಯಜುಷ್ಮತೀಃ ಪ್ರತ್ಯರ್ಪಯತಿ ರಶ್ಮೀಂಸ್ತದ್ದಿಕ್ಷು ಪ್ರತ್ಯರ್ಪಯತ್ಯಥ ಯದಂತರಾ ದಿಶಶ್ಚ ರಶ್ಮೀಂಶ್ಚ ತತ್ಸೂದದೋಹಾ ಅಥ ಯದ್ದಿಕ್ಷು ಚ ರಶ್ಮಿಷು ಚಾನ್ನಂ ತತ್ಪುರೀಷಂ ತಾ ಆಹುತಯಸ್ತಾಃ ಸಮಿಧೋಽಥ ಯದ್ದಿಶ ಇತಿ ಚ ರಶ್ಮಯ ಇತಿ ಚಾಖ್ಯಾಯತೇ ತಲ್ಲೋಕಂಪೃಣಾ ತದ್ವಾ ಏತತ್ಸರ್ವಂ ದಿಶ ಇತಿ ಚೈವ ರಶ್ಮಯ ಇತಿ ಚಾಖ್ಯಾಯತೇ ತತ್ಸರ್ವಃ ||**

(ಶ. ಬ್ರಾ. ೧೦-೫-೪-೪)

ಈ ವೇದಿಯೇ ಆದಿತ್ಯನು. ಪರಿಶ್ರಿತಗಳೇ ದಿಕ್ಕುಗಳು. ಮುನ್ನೂರ ಅರವತ್ತು ಅವಾಂತರ ದಿಕ್ಕುಗಳು ಆದಿತ್ಯನನ್ನು ಸುತ್ತುಗಟ್ಟಿರುವುದರಿಂದ ವೇದಿಯ ಸುತ್ತಲೂ ಇರುವ ಈ ಪರಿಶ್ರಿತಗಳ ಸಂಖ್ಯೆಯೂ ಮುನ್ನೂರ ಅರವತ್ತಿವೆ. [ಮಹಾ ವೇದಿಯ ಪರಿಶ್ರಿತಗಳು ೨೬೧. ಇವುಗಳೊಂದಿಗೆ ಗಾರ್ಹಪತ್ಯರೂಪದ ೨೧; ಧಿಷಣ್ಯಗಳಿಗೆ ಸೇರಿದ ೭೮ ಈ ಎರಡೂ

ಸೇರಿದರೆ ಒಟ್ಟು ಸಂಖ್ಯೆಯು ೩೬೦ ಆಗುತ್ತದೆ. ಪ್ರತಿಯೊಂದೂ ಸಹ ರಾತ್ರಿ ಅಥವಾ ಹಗಲನ್ನು ಪ್ರತಿಬಿಂಬಿಸುತ್ತದೆ]. ಯಜುಷ್ಮತಿಗಳೇ ಆದಿತ್ಯನ ರಶ್ಮಿಗಳು. ಆದಿತ್ಯನ ೩೬೦ ರಶ್ಮಿಗಳಿಗನುಸಾರವಾಗಿ ಇಲ್ಲಿಯೂ ೩೬೦ ಇಷ್ಟಕಗಳಿವೆ. ಸೂದದೋಹಗಳೇ ರಶ್ಮಿಗಳಿಗೂ ದಿಕ್ಕುಗಳಿಗೂ ಮಧ್ಯವಲ್ಲಿರುವ ತತ್ತ್ವಗಳು. ಮೃತ್ತುಗಳೇ ಅವುಗಳ ನಡುವೆ ಇರತಕ್ಕ ಅನ್ನಗಳು. ಲೋಕಂಪೃಣವೇ ರಶ್ಮಿಗಳ ಮತ್ತು ದಿಕ್ಕುಗಳ ಸಮುದಾಯರೂಪವಾದುದೂ ವ್ಯಾಪಕವೂ ಆದ ತತ್ತ್ವವು. ಈ ವೇದಿರೂಪವಾದ ಆದಿತ್ಯನ ತತ್ತ್ವವನ್ನು ತಿಳಿದವನು ತಾನೂ ವ್ಯಾಪ್ತಿಯನ್ನು ಹೊಂದುತ್ತಾನೆ.

> **ಸರ್ವಾಣಿ ಹ ತ್ವೇವ ಭೂತಾನಿ । ಸರ್ವೇ ದೇವಾ ಏಷೋಽಗ್ನಿಶ್ಚಿತ ಆಪೋ ವೈ ಸರ್ವೇ ದೇವಾಃ ಸರ್ವಾಣಿ ಭೂತಾನಿ ತಾ ಹೈತಾ ಆಪ ಏವೈಷೋಽಗ್ನಿಶ್ಚಿತಸ್ತಸ್ಯ ನಾವ್ಯಾ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಂ ನಾವ್ಯಾಃ ಸಮಂತಂ ಪರಿಯಂತಿ ನಾವ್ಯಾ ಉ ಏವ ಯಜುಷ್ಮತ್ಯ ಇಷ್ಟಕಾಸ್ತಾಃ ಷಷ್ಟಿಶ್ಚೈವ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಂ ನಾವ್ಯಾ ಅಭಿಕ್ಷರಂತ್ಯಥ ಯದಂತರಾ ನಾವ್ಯೇ ತತ್ಸೂದದೋಹಾ ಅಥ ಯಾ ಅಮೂಃ ಷಟ್ತ್ರಿಗ್ಂಶದಿಷ್ಟಕಾ ಅತಿಯಂತಿ ಯಃ ಸ ತ್ರಯೋದಶೋ ಮಾಸ ಆತ್ಮಾಯಮೇವ ಸ ಯೋಽಯಗ್ಂ ಹಿರಣ್ಮಯಃ ಪುರುಷಃ ॥**
>
> (ಶ. ಬ್ರಾ. ೧೦-೫-೪-೫, ೬)

ಈ ವೇದಿಯೇ ಸಕಲ ಭೂತಗಳು ಮತ್ತು ಸಕಲ ದೇವತೆಗಳು. ಸಕಲ ಭೂತಗಳಿಗೂ ದೇವತೆಗಳಿಗೂ **ಅಪ್ಪೇ** (ನೀರೇ) ಮೂಲಕಾರಣವು. ಈ ವೇದಿಕೆಯೂ ಸಹ ಅಂತಹ ಮೂಲಕಾರಣರೂಪವಾದ ಅಪ್ಪೆಂದೇ ತಿಳಿಯಬೇಕು. ಪ್ರಕಾಶಮಾನನಾದ ಆದಿತ್ಯನ ಸುತ್ತಲೂ ನಾವೆಯಿಂದ ದಾಟಲು ಸಾಧ್ಯವಾದ ಮುನ್ನೂರ ಅರವತ್ತು ಪ್ರವಾಹರೂಪವಾದ ಅಹೋರಾತ್ರಗಳಿರುವಂತೆ, ಈ ಯಜ್ಞವೇದಿಯ ಸುತ್ತಲೂ ಯಜುಷ್ಮತಿಗಳಿವೆ ಈ ನದಿಗಳ ನಡುವೆ ಇರತಕ್ಕದ್ದೇ ಈ ಸೂದದೋಹಸ್ಸು. ಯಜ್ಞವೇದಿಯ ಈ ಶರೀರವು ಹಿರಣ್ಮಯನಾದ ಪುರುಷನ ದೇಹವೇ ಆಗಿದೆ ಎಂದು ಹೀಗೆ ವಿವರಿಸಿದಂತೆ ನಾನಾವಿಧವಾಗಿ ವೇದಿಯನ್ನು ಸ್ತುತಿಸಿ, ಅದರ ಪ್ರಕಾಶವನ್ನೂ ಪ್ರಭಾವವನ್ನೂ ಸ್ತುತಿಸಿದೆ

**ಕ್ಷಿತಿಂ—ಅಗ್ನೇರ್ನಿವಾಸಯೋಗ್ಯಾಂ ಭೂಮಿಂ ।** ಅಗ್ನಿಗೆ ನಿವಾಸಯೋಗ್ಯವಾದ ಭೂಮಿಯೆಂದು ವಿವರಿಸಿದೆ.

> **ತೇನೇಮಾಗ್ಂ ಸರ್ವಾಗ್ಂ ಪೃಥಿವೀಗ್ಂ ಸಮವಿಂದತ................ತಸ್ಮಾದಾಹುರ್ಯಾವತೀ ವೇದಿ ಸ್ತಾವತೀ ಪೃಥಿವೀ ।**
>
> (ಶ. ಬ್ರಾ. ೧-೨-೫-೭)
>
> **ಚಂದ್ರಮಾ ಏವ ಪ್ರತ್ಯಕ್ಷಾದಾದಿತ್ಯೋ ಯಜಮಾನಸ್ತಸ್ಯೇಯಮೇವ ಪೃಥಿವೀ ವೇದಿಃ ।**
>
> (ಶ. ಬ್ರಾ. ೧೨-೮-೨-೩೬)

ಇತ್ಯಾದಿ ವಾಕ್ಯಗಳಲ್ಲಿ ಪೃಥ್ವಿಯೆಲ್ಲವೂ ಯಜ್ಞವೇದಿಕೆಯೆಂದೂ, ಯಜ್ಞವೇದಿಕೆಯು ಪೃಥ್ವಿಯಷ್ಟು ವಿಸ್ತಾರವಾಗಿದೆಯೆಂದೂ ವರ್ಣಿಸಿರುವಂತೆ, ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇವೆರಡಕ್ಕೂ ತಾದಾತ್ಮ್ಯವನ್ನು ಹೇಳುವ ಪದವನ್ನು ಪಯೋಗಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅದಿತಿಂ**—ನಞ್‌ತತ್ಪುರುಷ ಸಮಾಸ. **ತತ್ಪುರುಷೇ ತು**—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಧಾರಯೇತ್**—ಧೃಞ್ ಅವಸ್ಥಾನೇ· ಧಾತು. ಪ್ರಥಮಪುರುಷ ಏಕವಚನಾಂತರೂಪ· ಛಾಂದಸವಾಗಿ ಅಡಾಗಮ ಬರುವುದಿಲ್ಲ. ಏಕಪದ ಪಕ್ಷದಲ್ಲಿ ಬಹುವ್ರೀಹಿ ಸಮಾಸದಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸಚೇತೇ**—ಷಚ ಸಮವಾಯೇ. ಧಾತು ಆದಿಗೆ ಸತ್ವ. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ದಿವೇ ದಿವೇ-ನಿತ್ಯ ವೀಪ್ಸಯೋಃ** ಎಂಬುದರಿಂದ ನಿತ್ಯಾರ್ಥದಲ್ಲಿ ದ್ವಿರ್ವಚನ ಬರುತ್ತದೆ· **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಪರದ ಆಮ್ರೇಡಿತವು ಅನುದಾತ್ತವಾಗುತ್ತದೆ.

**ಜಾಗೃವಾಂಸಾ**—ಜಾಗೃ ನಿದ್ರಾಕ್ಷಯೇ. ಧಾತು· ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಕ್ರಾದಿನಿಯಮದಿಂದ ಇದಕ್ಕೆ ಇಡಾಗಮ ಪ್ರಾಪ್ತವಾದರೂ **ವಸ್ವೇಕಾಚಾ**—(ಪಾ ಸೂ. ೭-೨-೬೭) ಎಂಬುದರಿಂದ ನಿಷೇಧ ಬರುತ್ತದೆ. ದ್ವಿವಚನ ಪರವಾದಾಗ ಉಗಿತ್ತಾದುದರಿಂದ ನುಮಾಗಮ. **ಅತ್ವಸಂತಸ್ಯ**—ಎಂಬುಧರಿಂದ ಉಪಧಾದೀರ್ಘ. **ಸುಪಾಂ ಸುಲುಕ್**—(ಪಾ· ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ ವಸುವಿನ ಸ್ವರ ಉಳಿಯುತ್ತದೆ.

**ಆಶಾತೇ**—ಅಶೂ ವ್ಯಾಪ್ತೌ. ಧಾತು. **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್· ಪ್ರಥಮಪುರುಷ ದ್ವಿವನದಲ್ಲಿ ಆತಾಮ್ ಪ್ರತ್ಯಯ **ಟಿತ ಆತ್ಮನೇ**—ಎಂಬುದರಿಂದ ಟಿಗೆ ಏತ್ವ. ದ್ವಿತ್ವ ಬಂದು ಅಭ್ಯಾಸಕ್ಕೆ ದೀರ್ಘ ಬಂದಾಗ **ಆಗಮಾನುಶಾಸನಮನಿತ್ಯಂ** ಎಂಬ ವಚನದಿಂದ ನುಡಾಗಮ ಬರುವುದಿಲ್ಲ. ಅಥವಾ ಲಟಿನಲ್ಲಿ ದ್ವಿವಚನ ಪರವಾದಾಗ ಛಾಂದಸವಾಗಿ ಶಪಿಗೆ ಶ್ಲು ಆದೇಶ. ತಿಙಂತನಿಘಾತಸ್ವರ ಬರುತ್ತದೆ·

**ಆದಿತ್ಯಾ**—ಅದಿತೇಃ ಅಪತ್ಯೇ ಪುಮಾಂಸೌ· **ದಿತ್ಯದಿತಿ**—ಎಂಬುದರಿಂದ ಣ್ಯತ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. **ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶ.

**ದಾನುನಃ**—ಡುದಾಞ್ ದಾನೇ. ಧಾತು. **ದಾಭಾಭ್ಯಾಂ ನುಃ** ಎಂಬುದರಿಂದ ನುಪ್ರತ್ಯಯ. ನಿತ್ ಎಂದು ಅನುವೃತ್ತವಾಗುವುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ. ಇದಕ್ಕೆ ಪತಿಶಬ್ದ ಪರವಾದಾಗ **ಷಷ್ಠ್ಯಾಃ ಪತಿಪುತ್ರ**—(ಪಾ· ಸೂ. ೮-೩-೫೩) ಎಂಬುದರಿಂದ ವಿಸರ್ಗಕ್ಕೆ ಸಂಹಿತಾದಲ್ಲಿ ಸತ್ವ ಬರುತ್ತದೆ.

**ಯಾತಯಜ್ಜನಃ**—ಯಾತ್ಯಮಾನಾಃ ಜನಾಃ. ಯೇನ ಸಃ ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಅಯಂ ಮಿತ್ರಾಯ ವರುಣಾಯ ಶಂತಮಃ ಸೋಮೋ ಭೂತ್ವವಪಾನೇಷ್ವಾ-
ಭಗೋ ದೇವೋ ದೇವೇಷ್ವಾಭಗಃ ।
ತಂ ದೇವಾಸೋ ಜುಷೇರತ ವಿಶ್ವೇ ಅದ್ಯ ಸಜೋಷಸಃ ।
ತಥಾ ರಾಜಾನಾ ಕರಥೋ ಯದೀಮಹ ಋತಾವಾನಾ ಯದೀಮಹೇ ॥

॥ ಪದಪಾಠಃ ॥

ಅಯಂ । ಮಿತ್ರಾಯ । ವರುಣಾಯ । ಶಂಽತಮಃ । ಸೋಮಃ । ಭೂತು । ಅವಽಪಾನೇಷು । ಆಽಭಗಃ
ದೇವಃ । ದೇವೇಷು । ಆಽಭಗಃ ।
ತಂ । ದೇವಾಸಃ । ಜುಷೇರತ । ವಿಶ್ವೇ । ಅದ್ಯ । ಸಽಜೋಷಸಃ ।
ತಥಾ । ರಾಜಾನಾ । ಕರಥಃ । ಯತ್ । ಈಮಹೇ । ಋತಽವಾನಾ । ಯತ್ । ಈಮಹೇ ॥ ೪ ॥

॥ ಸಾಯಣಭಾಷ್ಯಂ ॥

ಅಯಮಸ್ಮಾಭಿರ್ಹೂಯಮಾನಃ ಸೋಮೋ ಮಿತ್ರಾಯ ವರುಣಾಯ ಚ ಶಂತಮಃ ಪೀಯಮಾನಃ ಸನ್ ಸುಖತಮೋ ಭೂತು । ಭವತು ॥ ಛಾಂದಸಃ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಾಭಾವಃ ॥ ಅವಪಾನೇಷ್ವವಾಙ್ಮುಖಚಮಸಪಾನೇಷು ವಿಷಯೇಷು ಆ ಸರ್ವತೋ ಭಗೋ ಭಜನೀಯಸ್ತಾಭ್ಯಾಂ । ಕಿಂಚ ದೇವೋ ದೀಪ್ಯಮಾನೋ ದೇವೇಷು ಮಿತ್ರಾವರುಣಾನುಚರೇಷ್ವಿತರ-ದೇವೇಷು ತೈರಾಭಗ ಆಭಜನೀಯಃ । ಯದ್ವಾ । ದೇವೇಷು ಸ್ತೋತೃಷು ಯಜಮಾನೇಷು ಮಧ್ಯೇ ದೇವೋ ದೀಪ್ಯಮಾನಃ । ತಥಾಭಗಸ್ತೈರೇವಾ ಸರ್ವತೋ ಭಜನೀಯಃ । ಕಿಂಚ ತಂ ಸೋಮಂ ವಿಶ್ವೇ ಸರ್ವೇ ದೇವಾಸೋ ದೇವಾ ಅದ್ಯಾಸ್ಮಿನ್ನಹನಿ ಜುಷೇರತ । ಸೇವಂತೇ ॥ ಛಾಂದಸೋ ಝಸ್ಯ ರನ್ನಾದೇಶಾಭಾವಃ । ಬಹುಲಂ ಛಂದಸೀತಿ ರುಡಾಗಮಃ ॥ ಕೀದೃಶಾಸ್ತೇ । ಸಜೋಷಸಃ ಸಮಾನಪ್ರೀತಿಯುಕ್ತಾಃ । ತಥಾ ರಾಜಾನಾ ರಾಜಮಾನಾ ಮಿತ್ರಾವರುಣೌ ಯುವಾಂ ಕರಥಃ । ಕುರುತಂ ಸೇವೇಥೇ ಇತ್ಯರ್ಥಃ ॥ ವ್ಯತ್ಯಯೇನ ಶಪ್ ॥ ಯದ್ಯಸ್ಮಾತ್ಕಾರಣಾದ್ಯದೀಮಹೇ ಯತ್ಪ್ರಾಪ್ನುಮಸ್ತ-ದ್ದೇವಾನ್ಯಾಚಾಮಹೇ ॥ ಈಙ್ ಗತೌ । ದೈವಾದಿಕಃ । ಛಾಂದಸೋ ವಿಕರಣಸ್ಯ ಲುಕ್ ॥ ತಸ್ಮಾಜ್ಜುಷೇರತ ತಥಾ ಋತಾವಾನಾ ಋತುವಂತೌ ಸತ್ಯವಂತೌ ಯಜ್ಞವಂತೌ ವಾ ಮಿತ್ರಾವರುಣಾವೀಮಹೇ । ಅಭಿಮತಫಲಂ ತಯೋಃ ಪಾನಂ ವಾ ಯಾಚಾಮಹೇ ॥

॥ ಪ್ರತಿಪದಾರ್ಥ ॥

**ಅಯಂ**—ಈ (ನಮ್ಮಿಂದಹುತವಾಗುವ)| **ಸೋಮಃ**—ಸೋಮರಸವು | **ಅವಪಾನೇಷು**—ಅಧೋಮುಖವಾದಚಮಸಗಳಲ್ಲಿ | **ಆ ಭಗಃ**—ಸೇವ್ಯವಾಗಿ | **ಮಿತ್ರಾಯ ವರುಣಾಯ**—ಮಿತ್ರ ಮತ್ತು ವರುಣರಿಗೆ | **ಶಂತಮಃ**—(ಪಾನದಿಂದ) ವಿಶೇಷಸುಖಪ್ರದವಾಗಿದೆ | **ಭೂತು**—ಆಗಲಿ | **ದೇವಃ**—ದೇದೀಪ್ಯಮಾನವಾದ ಸೋಮರಸವು | **ದೇವೇಷು**—ಇತರ ದೇವತೆಗಳಲ್ಲಿ (ದೇವತೆಗಳಿಂದ) | **ಆ ಭಗಃ**—ಸ್ವೀಕರಿಸಲ್ಪಟ್ಟದ್ದಾಗಿ | (**ಶಂತಮಃ ಭೂತು**—ಸುಖಪ್ರದವಾಗಲಿ) | [ಅಥವಾ | **ದೇವೇಷು**—ಸ್ತೋತೃಗಳಾದ ಯಜಮಾನನಲ್ಲಿ | **ದೇವಃ**—ಪ್ರಕಾಶಿಸುತ್ತಾ (ಸೋಮರಸವು) | **ಆ ಭಗಃ**—(ಅವರಿಂದಲೇ) ಸೇವ್ಯವಾಗಿ | (**ಶಂತಮಃ ಭೂತು**—ಸುಖಪ್ರದವಾಗಲಿ) ] (**ಕಿಂಚ**—ಮತ್ತು) | **ಯತ್**—ಯಾವ ಕಾರಣದಿಂದ | **ಯತ್**—ಯಾವುದನ್ನು | **ಈಮಹೇ**—ಪಡೆಯುತ್ತೇವೋ (ಇಚ್ಛಿಸುತ್ತೇವೋ) | (**ತತ್ ದೇವಾನ್ ಯಾಚಾಮಹೇ**--ದೇವತೆಗಳನ್ನು ಅದಕ್ಕಾಗಿ ಯಾಚನೆ ಮಾಡುತ್ತೇವೆಯೋ) | **ತತ್**—ಆ ಕಾರಣದಿಂದ | **ತಂ**—ಆ ಸೋಮವನ್ನು | **ವಿಶ್ವೇ ದೇವಾಸಃ**—ಸಮಸ್ತ ದೇವತೆಗಳೂ | **ಅದ್ಯ**—ಈಗ (ಈ ದಿವಸ) | **ಜುಷೇರತ**—ಸ್ವೀಕರಿಸುತ್ತಾರೆ | **ತಥಾ**—ಹಾಗೆಯೇ (ಇತರ ದೇವತೆಗಳಂತೆ) | **ಸಜೋಷಸಃ**—ಸಮಾನಪ್ರೀತಿಯುಕ್ತರಾಗಿ | **ರಾಜಾನಾ**—ರಾಜಿಸುತ್ತಿರುವ (ಮಿತ್ರಾವರುಣರೂ) ನೀವಿಬ್ಬರೂ | **ಕರಥಃ** ಮಾಡುತ್ತೀರಿ (ಸೋಮಪಾನ ಮಾಡುತ್ತೀರಿ) | **ಋತಾವಾನಾ** - ಸತ್ಯವಂತರಾದ (ಯಾಗಾದಿ ಕರ್ಮಯುಕ್ತರಾದ) ನಿಮ್ಮಿಬ್ಬರನ್ನು | **ಈಮಹೇ**—(ಅಭಿಮತ ಫಲವನ್ನು) ಯಾಚಿಸುತ್ತೇವೆ.

॥ ಭಾವಾರ್ಥ ॥

ಅಧೋಮುಖವಾದ ಚಮಸಗಳಲ್ಲಿರುವ, ಈಗ ಹುತವಾಗುವ ಸೋಮರಸವು ಅದನ್ನು ಸ್ವೀಕರಿಸುವ ಮಿತ್ರ ಮತ್ತು ವರುಣರಿಗೆ ವಿಶೇಷ ಸುಖವನ್ನುಂಟುಮಾಡಲಿ; ನಮಗೆ ಇಷ್ಟಾರ್ಥ ಪ್ರದರಾದ ದೇವತೆಗಳೆಲ್ಲರೂ, ಪ್ರೀತರಾಗಿ, ಇದನ್ನು ಸ್ವೀಕರಿಸಲಿ; ಸತ್ಯವಂತರಾದ (ಯಾಗಾದಿವಿಶಿಷ್ಟರಾದ) ಮಿತ್ರಾವರುಣರೂ ಸಮಾನಪ್ರೀತಿಯುಕ್ತರಾಗಿ, ನಮ್ಮ ಇಷ್ಟಾರ್ಥಗಳನ್ನು ಅನುಗ್ರಹಿಸಲಿ.

English Translation.

May this Soma libation be gratifying to Mitra and Varuna, to be enjoyed by them as they drink of it, inclining downwards; a divine (beverage), fit to be enjoyed by the gods: may all the gods, well pleased, to-day accept it; therefore, royal (deities), do as we request: you, who are ever truthful, do as we request.

॥ ವಿಶೇಷವಿಷಯಗಳು ॥

ಇಲ್ಲಿ ಮಿತ್ರಾವರುಣರ ಸೋಮಪಾನದ ಕ್ರಮವನ್ನು ವರ್ಣಿಸಿದೆ.

**ಅವಪಾನೇಷು**—**ಅವಪಾನ** ಶಬ್ದವು ಕೆಲವೆಡೆಗಳಲ್ಲಿ ಪಾರಿಭಾಷಿಕವಾದ ಪ್ರಯೋಗವಾಗಿದೆ. ಇನ್ನು ಕೆಲವೆಡೆಗಳಲ್ಲಿ ಕೇವಲ ಪಾನಕ್ಕೆ ಯೋಗ್ಯವಾದ ಸ್ಥಾನವೆಂದರ್ಥವಾಗಿದೆ. **ಅವಾಙ್ಮುಖಚಮಸಪಾತ್ರೇಷು** ಎಂದು ಸಾಯಣರು ಅರ್ಥಮಾಡಿದ್ದಾರೆ. ಇದರಂತೆಯೇ,

**ಋಶ್ಯೋ೩ ನ ತೃಷ್ಯನ್ನವಪಾನಮಾ ಗಹಿ ಪಿಬಾ ಸೋಮಂ ವಶಾँ ಅನು ।**
**ನಿಮೇಘಮಾನೋ ಮಘವನ್ದಿವೇದಿವ ಓಜಿಷ್ಠಂ ದಧಿಷೇ ಸಹಃ ॥**
(ಋ. ಸಂ. ೮-೪-೧೦)

ಎಂಬಲ್ಲಿಯೂ ಸಹ **ಅವನೀತಂ ಗ್ರಹಚಮಸಾದಿಷು ಪಾತ್ರೇಷ್ವಾನಿತಂ** ಎಂದು ಚಮಸಾದಿ ಪಾತ್ರೆಗಳಲ್ಲಿ ಪಾನಕ್ಕಾಗಿ ಸಿದ್ಧಪಡಿಸಿರತಕ್ಕ ಸೋಮವನ್ನೂ ಮತ್ತು ಪಾತ್ರೆಯ ಸ್ವರೂಪವನ್ನೂ ತಿಳಿಸಿದೆ.

**ಉಷ್ಟ್ರಾರೇವ ಫರ್ವರೇಷು ಶ್ರಯೇಥೇ ಪ್ರಾಯೋಗೇವ ಶ್ವಾತ್ರ್ಯಾ ಶಾಸುರೇಥಃ ।**
**ದೂತೇವ ಹಿ ಷ್ಠೋ೩ ಯಶಸಾ ಜನೇಷು ಮಾಪ ಸ್ಥಾತಂ ಮಹಿಷೇವಾವಪಾನಾತ್ ॥**
(ಋ. ಸಂ. ೧೦-೧೦೬-೨)

ಇತ್ಯಾದಿಗಳಲ್ಲಿ ಮಹಿಷಾದಿಗಳು ಪಾನಮಾಡತಕ್ಕ ಕೊಳ ಅಥವಾ ಕೆರೆ ಎಂದರ್ಥವಾಗುತ್ತದೆ ಉದಾಹೃತವಾದ ಎರಡನೇ ಋಕ್ಕಿನಲ್ಲಿರುವ **ಅವಪಾನ** ಶಬ್ದಕ್ಕೆ ಸಾಯಣರು **ಪೀಯತೇಽಸ್ಮಿನ್ನಿತಿ ಪಾನಂ ಹ್ರದಾದಿ । ಪಾನಮೇ-ವಾವಸಾನಂ ।** ಇಲ್ಲಿ ಪ್ರಾಣಿಗಳು ನೀರನ್ನು ಬಗ್ಗಿ ಕುಡಿಯುವುದರಿಂದ ಹ್ರದಾದಿಗಳಿಗೆ ಪಾನವೆಂದು ಹೆಸರು. ಅವುಗಳನ್ನೇ ಅವಪಾನವೆಂದೂ ಕರೆಯುವ ವಾಡಿಕೆಯಿದೆ ಎಂದು ವಿವರಿಸಿದ್ದಾರೆ. ಪ್ರಕೃತದಲ್ಲಿ ಮಿತ್ರಾವರುಣರಿಗೆ ಸೋಮವನ್ನು ಅರ್ಪಿಸತಕ್ಕ ಚಮಸವನ್ನು ಹಿಡಿದಿರುವ ಕ್ರಮವನ್ನು ತಿಳಿಸಿದೆ. ಇಲ್ಲಿ **ಚಮಸಪಾತ್ರೆ** ಯೆಂದರ್ಥ,

**ಭಗಃ—ಭಗೋ ಭಜತೇಃ ।** ಪೂಜ್ಯವಾಗಿರು ಅಥವಾ ಭಾಗಾರ್ಹವಾಗಿರು ಎಂಬರ್ಥವನ್ನು ಕೊಡುವ **ಭಜ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸಿದ್ದಾರೆ. (ನಿ. ೧-೭) ಪ್ರಕೃತವಾದ ಋಕ್ಕಿನಲ್ಲಿ **ಸೋಮಃ** ಎಂಬುದಕ್ಕೆ ವಿಶೇಷಣವಾಗಿ ಈ ಎರಡರಲ್ಲಿ ಯಾವ ಅರ್ಥವು ಬೇಕಾದರೂ ಆಗ ಬಹುದು. ಇಲ್ಲಿ ದ್ವಿರುಕ್ತವಾಗಿದೆ. ಮೊದಲನೆಯ ಪದಕ್ಕೆ ಪೂಜ್ಯವಾದ ಎಂದೂ, ಎರಡನೆಯ ಪದಕ್ಕೆ ಭಾಗಾರ್ಹ ವಾದ ಎಂದೂ ಅರ್ಥವಾಗುತ್ತದೆ.

**ಋತಾವಾನಾ—ಸತ್ಯವಂತೌ ಯಜ್ಞವಂತೌ ವಾ ಮಿತ್ರಾವರುಣೌ ।** ಋತಶಬ್ದಕ್ಕೆ ಸತ್ಯವೆಂದಾಗಲಿ ಅಥವಾ ಯಜ್ಞವೆಂದಾಗಲಿ ಅರ್ಥವಾಗುತ್ತದೆ. ಸತ್ಯವನ್ನು ರಕ್ಷಿಸುವವರು ಅಥವಾ ಸತ್ಯಾತ್ಮಕರು ಅಥವಾ **ಯಜ್ಞೋ೩ ವಾ ಅರ್ಯಮಾ** (ತೈ. ಬ್ರಾ. ೨-೩-೫-೪) ಇತ್ಯಾದಿ ವಾಕ್ಯಗಳಲ್ಲಿ ಹೇಳಿರುವಂತೆ ಯಜ್ಞಾತ್ಮಕರು ಎಂದು ತಾತ್ಪರ್ಯ.

**ಋತಸ್ಯ ಗೋಪಾವಧಿ ತಿಷ್ಠಥೋ ರಥಂ ಸತ್ಯಧರ್ಮಾಣಾ ಪರಮೇ ವ್ಯೋ೩ಮನಿ ।**
**ಯಮತ್ರ ಮಿತ್ರಾವರುಣಾವಥೋ ಯುವಂ ತಸ್ಮೈ ವೃಷ್ಟಿರ್ಮಧುಮತ್ಪಿನ್ವತೇ ದಿವಃ ॥**
(ಋ. ಸಂ. ೫-೬೩-೧)

ಇತ್ಯಾದಿ ಋಕ್ಕುಗಳಲ್ಲಿ **ಮಿತ್ರಾವರುಣರೇ** ಸಕಲಲೋಕವನ್ನೂ ರಕ್ಷಿಸತಕ್ಕ ಸತ್ಯಧರ್ಮವುಳ್ಳವರೆಂದೂ, ಯಾಜ್ಞಾದಿಗಳ ಸಂರಕ್ಷಕರೆಂದೂ ವರ್ಣಿಸಿರುವಂತೆ ಇಲ್ಲಿಯೂ ಸಹ ವರ್ಣಿಸಿದೆ.

**ಸಜೋಷಸಃ—ಸಮಾನಪ್ರೀತಿಯುಕ್ತಾಃ ।** ಸಮಾನವಾದ ಪ್ರೀತಿಯುಕ್ತರಾಗಿ **ಕರಥಃ** ಸೋಮಪಾನ ವನ್ನು ಮಾಡುತ್ತೀರಿ ಎಂದಿದೆ. **ಮಿತ್ರಾವರುಣರ** ಸಮಾನಕಾಲೀನವಾದುದೂ, ಪ್ರೀತಿಯುತವಾದುದೂ ಆದ ಸೋಮಪಾನವನ್ನು ನಿರ್ದೇಶಿಸುವ ಒಂದು ಸನ್ನಿವೇಶವು ತೈತ್ತಿರೀಯ ಸಂಹಿತೆಯಲ್ಲಿ ಈ ರೀತಿ ಉಕ್ತವಾಗಿದೆ.

**ವರುಣಂ ದೇವಾ ಅಬ್ರುವನ್ತ್ವಯಾಗ್ಂಶಭುವಾ ಸೋಮಗ್ಂ ರಾಜಾನಗ್ಂ ಹನಾಮೇತಿ ಸೋಽಬ್ರವೀದ್ವರಂ ವೃಣೈ ಮಹ್ಯಂ ಚೈವೈಷ ಮಿತ್ರಾಯ ಚ ಸಹ ಗೃಹ್ಯಾತಾ ಇತಿ ತಸ್ಮಾನ್ಮೈತ್ರಾವರುಣಃ ಸಹ ಗೃಹ್ಯತೇ ।**

(ತೈ. ಸಂ. ೬-೪-೮-೨, ೩)

ದೇವತೆಗಳು ಸೋಮನ ಹನನವನ್ನು ಮಾಡಲು ಮೊದಲು ಮಿತ್ರನನ್ನು ಪಾರ್ಥಿಸಿದಾಗ ಅವನು ತಾನು ಎಲ್ಲರಿಗೂ ಮಿತ್ರನೆಂದೂ ಆದುದರಿಂದ ಅದಕ್ಕೆ ಒಪ್ಪಲಾಗುವುದಿಲ್ಲವೆಂದೂ ಹೇಳಲು ದೇವತೆಗಳು ಅನಂತರ ವರುಣನನ್ನು ಸಮೀಪಿಸಿ ಅದೇ ರೀತಿ ಪ್ರಾರ್ಥಿಸಲು ವರುಣನು ಆ ಸಂದರ್ಭದಲ್ಲಿ ಒಂದು ವರವನ್ನು ಬೇಡಿದನು. ತನ್ನನ್ನೂ ಮಿತ್ರನನ್ನೂ ಒಟ್ಟಿಗೆ ಉದ್ದೇಶಿಸಿ ಸೋಮಗ್ರಹವನ್ನು ಸಿದ್ಧಪಡಿಸಬೇಕೆಂಬುದೇ ಆ ವರವು. ಅದರಂತೆಯೇ ಸೋಮ ರಸವನ್ನರ್ಪಿಸುವಾಗಲೆಲ್ಲಾ ಮಿತ್ರಾ-ವರುಣ ಗ್ರಹವು (ಗ್ರಹವೆಂದರೆ ಸೋಮಪಾತ್ರೆಯು) ಏಕಕಾಲೀನವಾಗಿರುತ್ತದೆ. ಆ ವಿಧವಾದ ಏಕಕಾಲೀನವಾದುದೂ, ಒಂದೇ ಪಾತ್ರೆಯಿಂದ ಕೂಡಿದುದೂ ಆದ ಪಾನವನ್ನು ಇಲ್ಲಿ **ಸಜೋಷಸಃ** ಎಂಬ ಪದದಿಂದ ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಶಂತಮಃ**— ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ಪಿತ್ತಾದುದರಿಂದ ಇದು ಅನುದಾತ್ತವಾಗುತ್ತದೆ.

**ಭೂತು**— ಭೂ ಸತ್ತಾಯಾಂ ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಏರುಃ** ಎಂಬುದರಿಂದ ಅದಕ್ಕೆ ಉತ್ವ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಭೂಸುವೋಸ್ತಿಙಿ** (ಪಾ. ಸೂ. ೭-೩-೮೮) ಎಂಬುದರಿಂದ ಗುಣ ನಿಷೇಧ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಅವಪಾನೇಷು**— ಪಾ ಪಾನೇ. ಧಾತು. ಲ್ಯುಟ್ ಪ್ರತ್ಯಯ. ಅದಕ್ಕೆ ಅನಾದೇಶ. ಲಿತ್ತಾದುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದೇವಾಸಃ**— ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಜುಷೇರತೆ**— ಜುಷೀ ಪ್ರೀತಿಸೇವನಯೋಃ ಧಾತು. ಲಿಙ್. ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. ವ್ಯತ್ಯಯದಿಂದ ಅದಕ್ಕೆ ರನ್ನಾದೇಶ ಬರುವುದಿಲ್ಲ. **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅದಕ್ಕೆ ಅತಾದೇಶ. **ಬಹುಲಂ ಛಂದಸಿ** ಎಂಬುದರಿಂದ ರುಡಾಗಮ ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಸಜೋಷಸಃ**— ಸಮಾನಂ ಜೋಷಃ ಯೇಷಾಂ ತೇ. ಸಜೋಷಸಃ. ಪೂರ್ವೋಕ್ತ ಧಾತುವಿಗೆ ಅಸುನ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ರಾಜಾನಾ**— ರಾಜೃ ದೀಪ್ತೌ. ಧಾತು. ಔಣಾದಿಕ ಕನಿನ್ ಪ್ರತ್ಯಯ. ದ್ವಿವಚನ ಪರವಾದಾಗ (ಔ) **ಸುಪಾಂ ಸುಲುಕ್**— ಸೂತ್ರದಿಂದ ಅದಕ್ಕೆ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಕರಥಃ**—ಡುಕೃಞ್ ಕರಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನ ಪರವಾದಾಗ **ವ್ಯತ್ಯಯೋ ಬಹುಲಂ** ಎಂಬುದರಿಂದ ಶಪ್ ವಿಕರಣ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತು ಋಕಾರಕ್ಕೆ ಗುಣ. ತಿಙಂತನಿಘಾತಸ್ವರ ಬರುತ್ತದೆ.

**ಈಮಹೇ**—ಈಙ್ ಗತೌ ಧಾತು. ದಿವಾದಿ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. ಟಿಗೆ ಏತ್ವ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ಯನ್) ಲುಕ್. ಪ್ರತ್ಯಯಕ್ಕೆ ಙಿತ್ವಾತಿದೇಶ ವಿರುವುದರಿಂದ ಗುಣ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಙಿತ್ ಧಾತುವಾದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಪ್ರತ್ಯಯ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಋತಾವಾನಾ**—**ಛಂದಸೀ ವನಿಪೌ** ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಕ್ಕೆ ದೀರ್ಘ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತ ವಾಗುತ್ತದೆ. **ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶ. || ೪ ||



॥ ಸಂಹಿತಾಪಾಠಃ ॥

ಯೋ ಮಿತ್ರಾಯ ವರುಣಾಯಾವಿಧಜ್ಜನೋಽನರ್ವಾಣಂ ತಂ ಪರಿ ಪಾತೋ
ಅಂಹಸೋ ದಾಶ್ವಾಂಸಂ ಮರ್ತಮಂಹಸಃ ।
ತಮರ್ಯಮಾಭಿ ರಕ್ಷತ್ಯೃಜೂಯಂತಮನು ವ್ರತಂ ।
ಉಕ್ಥೈರ್ಯ ಏನೋಃ ಪರಿಭೂಷತಿ ವ್ರತಂ ಸ್ತೋಮೈರಾಭೂಷತಿ ವ್ರತಂ ॥

॥ ಪದಪಾಠಃ ॥

ಯಃ । ಮಿತ್ರಾಯ । ವರುಣಾಯ । ಅವಿಧತ್ । ಜನಃ । ಅನರ್ವಾಣಂ । ತಂ । ಪರಿ । ಪಾತಃ । ಅಂಹಸಃ ।
ದಾಶ್ವಾಂಸಂ । ಮರ್ತಂ । ಅಂಹಸಃ ।
ತಂ । ಅರ್ಯಮಾ । ಅಭಿ । ರಕ್ಷತಿ । ಋಜುಽಯಂತಂ । ಅನು । ವ್ರತಂ ।
ಉಕ್ಥೈಃ । ಯಃ । ಏನೋಃ । ಪರಿಽಭೂಷತಿ । ವ್ರತಂ । ಸ್ತೋಮೈಃ । ಆಽಭೂಷತಿ । ವ್ರತಂ ॥ ೫ ॥

॥ ಸಾಯಣಭಾಷ್ಯಂ ॥

ಯೋ ಜನೋ ಯಜಮಾನೋ ಮಿತ್ರಾಯ ವರುಣಾಯ ಚ ॥ ಕರ್ಮಣಿಃ ಸಂಪ್ರದಾನತ್ವಾಚ್ಚ-ತುರ್ಥೀ ॥ ಮಿತ್ರಂ ವರುಣಂ ಚಾವಿಧತ್ ಪರಿಚರತಿ ತಂ ಜನಂ ಯುಷ್ಮತ್ಪರಿಚಾರಕಮನರ್ವಾಣಮದ್ವೇ-ಷಿಣಂ । ಭ್ರಾತೃವ್ಯೋ ವಾ ಅರ್ವೇತಿ ಶ್ರುತೇಃ । ಅನಲ್ಪಂ ವಾನನ್ಯಸೇವಿನಂ ಪರಿ ಪಾತಃ । ಪರಿತೋ ರಕ್ಷತಾಂ । ಕಸ್ಮಾದಿತಿ ತದುಚ್ಯತೇ । ಅಂಹಸೋ ನ್ಯೂನಾತಿರೇಕಜನಿತಾತ್ಪಾಪಾತ್ । ನ ಕೇವಲಂ ಸಾಮಾನ್ಯಂ ಜನಂ ಅಪಿ ತು ದಾಶ್ವಾಂಸಂ ಹವಿರ್ದತ್ತವಂತಂ ಮರ್ತಂ ಮರಣಧರ್ಮಾಣಮಂಹಸಃ ಸರ್ವಸ್ಮಾದಪಿ ಪಾಪಾತ್ । ನ ಕೇವಲಂ ಭವಂತಾವೇವ ಅಪಿ ತ್ವರ್ಯಮಾ ಸರ್ವೇಷಾಂ ನಿಯಂತಾ ದೇವ ಋಜೂ-ಯಂತಂ ದೇವೇಷ್ವಾರ್ಜವಮಾಚರಂತಂ ಯಜಮಾನಮನು ವ್ರತಂ ತದೀಯಂ ಕರ್ಮಾನುಲಕ್ಷ್ಯಾಭಿ ರಕ್ಷತಿ । ಅಭಿತೋ ರಕ್ಷತಿ । ಕೋಽಸ್ಯ ಜನಸ್ಯ ವಿಶೇಷ ಇತಿ ತತ್ರಾಹ । ಯೋ ಯಜಮಾನ ಉಕ್ಥೈಃ ಶಸ್ತ್ರೈರೇನೋರೇನಯೋರ್ಮಿತ್ರಾವರುಣಯೋರ್ವ್ರತಂ ಕರ್ಮ ಪರಿಭೂಷತಿ ಪರಿಗೃಹ್ಣಾತಿ ತಥಾ ಯಜಮಾನೋ ಯುಷ್ಮದೀಯಂ ವ್ರತಂ ಕರ್ಮ ಸ್ತೋಮೈಃ ಸ್ತೋತ್ರೈರ್ಗಾನಯುಕ್ತಮಂತ್ರಸಾಧ್ಯೈ-ರಾಭೂಷತಿ ಸರ್ವತೋಽಲಂಕರೋತಿ ॥ ಭೂಷ ಅಲಂಕಾರೇ ಭೌವಾದಿಕಃ ॥ ತಮಭಿರಕ್ಷಂತೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಯಃ ಜನಃ**—ಯಾವ ಮನುಷ್ಯನು । **ಮಿತ್ರಾಯ ವರುಣಾಯ (ಚ)**—ಮಿತ್ರ ಮತ್ತು ವರುಣ ರಿಬ್ಬರಿಗೂ । **ಅವಿಧತ್**—ಪರಿಚರಿಸುತ್ತಾನೋ । **ತಂ**—ಅವನನ್ನು । **ಅನರ್ವಾಣಂ** ಶತ್ರುರಹಿತನನ್ನಾಗಿ (ಅನಲ್ಪನನ್ನಾಗಿ ಅಥವಾ ಅನ್ಯರ ಸೇವಕನಾಗದಂತೆ) ಮಾಡಿ । **ಅಂಹಸಃ**—(ನ್ಯೂನಾತಿರೇಕನಿಮಿತ್ತಕವಾದ) ಪಾಪದಿಂದ । **ಪರಿ ಪಾತಃ**—ಸಂಪೂರ್ಣವಾಗಿ ರಕ್ಷಿಸಿರಿ (ಮತ್ತೂ) । **ದಾಶ್ವಾಂಸಂ**—ಹವಿರ್ದಾನ ಮಾಡಿದ । **ಮರ್ತಂ**—ಮರಣಶೀಲನಾದ ಮನುಷ್ಯನನ್ನು । **ಅಂಹಸಃ**—(ಸಮಸ್ತ ವಿಧವಾದ) ಪಾಪದಿಂದಲೂ । (**ಪರಿ ಪಾತಃ**—ರಕ್ಷಣೆಮಾಡಿ) । **ಯಃ**—ಯಾವ ಯಜಮಾನನು । **ಉಕ್ಥೈಃ**—ಶಸ್ತ್ರಮಂತ್ರಗಳಿಂದ । **ಏನೋಃ**—ಈ ಮಿತ್ರಾವರುಣರ (ನ್ನುದ್ದೇಶಿಸಿರುವ) । **ವ್ರತಂ**—ಕರ್ಮವನ್ನು । **ಪರಿ ಭೂಷತಿ**—ಕೈಗೊಳ್ಳುತ್ತಾನೋ । (**ತಥಾ**—ಹಾಗೆಯೇ) । (**ಯಃ**—ಯಾವ ಯಜಮಾನನು) । **ವ್ರತಂ**—(ನಿಮ್ಮ ಸಂಬಂಧವಾದ) ಕರ್ಮವನ್ನು । **ಸ್ತೋಮೈಃ**—ಗಾನಸಹಿತವಾದ ಸ್ತುತಿಗಳಿಂದ । **ಆಭೂಷತಿ**—ಅಲಂಕರಿಸುತ್ತಾನೋ । (**ತಂ**—ಅಂತಹ) **ಋಜೂಯಂತಂ**—(ದೇವತೆಗಳ ವಿಷಯದಲ್ಲಿ) ಋಜುಭಾವನೆಯಿಂದಿರುವ ಯಜಮಾನನನ್ನು । **ಅರ್ಯಮಾ**—(ಸರ್ವನಿಯಾಮಕನಾದ) ಅರ್ಯಮನು । **ಅನು ವ್ರತಂ**—(ಅವನ) ಕರ್ಮಾನುಸಾರವಾಗಿ । **ಅಭಿ ರಕ್ಷತಿ**—ರಕ್ಷಿಸುತ್ತಾನೆ.

॥ ಭಾವಾರ್ಥ ॥

(ಎಲೈ ಮಿತ್ರಾವರುಣರೇ), ನಿಮ್ಮನ್ನು ಉಪಚರಿಸುವ ಮನುಷ್ಯನನ್ನು ಶತ್ರುರಹಿತನನ್ನಾಗಿ ಮಾಡಿ, (ಅವನನ್ನು) ನ್ಯೂನಾತಿರೇಕ ಜನಿತ ಪಾಪದಿಂದ ದೂರಮಾಡುತ್ತೀರಿ; (ನಿಮಗೆ) ಹವಿರ್ದಾನಮಾಡಿದ ಮರ್ತ್ಯನನ್ನೂ ರಕ್ಷಿಸುತ್ತೀರಿ; ನಿಮ್ಮಿಬ್ಬರಕರ್ಮಗಳನ್ನು ಶಸ್ತ್ರಮಂತ್ರಗಳನ್ನುಚ್ಚರಿಸಿ ಆಚರಿಸುವ ಮತ್ತು ದೇವತೆಗಳಲ್ಲಿ ಋಜುತ್ವವನ್ನು ತೋರಿಸುವ ಮನುಷ್ಯನನ್ನು ಅರ್ಯಮನು ರಕ್ಷಿಸುತ್ತಾನೆ; ಅದೇ ರೀತಿ ಈ ಯಜಮಾನನೂ ನಿಮ್ಮ ಸಂಬಂಧವಾದ ಕರ್ಮವನ್ನು ಸ್ತೋಮಗಳಿಂದ ಅಲಂಕರಿಸುತ್ತಾನೆ. (ಸ್ತೋತ್ರಮಾಡುತ್ತಾನೆ ಅವನನ್ನು ನೀವು ರಕ್ಷಿಸಿ).

English Translation

Whatever individual offers adoration to Mitra and Varuna, do you preserve him entirely unharmed from sin; (preserve) from sin the mortal who presents you (with oblations): may Aryaman protect him who is sincere in his devotion, who offers worship addressed to both (Mitra and Varuna) with prayers; who offers worship with praises.

॥ ವಿಶೇಷವಿಷಯಗಳು ॥

ಮಿತ್ರಾವರುಣರನ್ನುದ್ದೇಶಿಸಿ ಉಪಚರಿಸತಕ್ಕ ಯಜಮಾನನಿಗೆ ಶತ್ರುನಾಶವನ್ನೂ ಪಾಪನಾಶವನ್ನೂ ಮಾಡಿ ಅವನನ್ನು ರಕ್ಷಿಸಬೇಕೆಂದು ಮಿತ್ರಾವರುಣರನ್ನು ಪ್ರಾರ್ಥಿಸಿದೆ.

**ಅನರ್ವಾಣಂ — ಅದ್ವೇಷಿಣಂ ।** ಶತ್ರುರಹಿತನನ್ನಾಗಿ ಎಂದರ್ಥಮಾಡಿದೆ. **ಅರ್ವತ್, ಅರ್ವನ್,** ಎಂಬ ಪದಗಳನ್ನು ನಿರುಕ್ತಕಾರರು ಅಶ್ವನಾಮಗಳಲ್ಲಿ ಸೇರಿಸಿದ್ದಾರೆ (ನಿ ೨-೨೭). ಆದರೆ ಅನೇಕ ಕಡೆಗಳಲ್ಲಿ ಈ ಪದವು ಅರ್ಥವೈವಿಧ್ಯವನ್ನು ಹೊಂದಿರುತ್ತದೆ.

**ಯಸ್ಮೈ ತ್ವಮಾಯಜಸೇ ಸ ಸಾಧತ್ಯನರ್ವಾ ಕ್ಷೇತಿ ದಧತೇ ಸುವೀರ್ಯಂ ।**
**ಸ ತೂತಾವ ನೈನಮಶ್ನೋತ್ಯಂಹತಿರಗ್ನೇ ಸಖ್ಯೇ ಮಾ ರಿಷಾಮಾ ವಯಂ ತವ ॥**

(ಋ. ಸಂ. ೧-೯೪-೨)

ಎಂಬಲ್ಲಿ **ಅರ್ವನ್** ಶಬ್ದವು ಶತ್ರುಪರ್ಯಾಯವಾಗಿದ್ದು **ಅನರ್ವಾ** ಎಂದರೆ ಶತ್ರುವಿನ ಅಧೀನವಲ್ಲದವನು ಎಂದರ್ಥ ಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಅರ್ವನ್** ಪದಕ್ಕೆ ಶತ್ರುವೆಂಬರ್ಥವನ್ನು ಸಮರ್ಥಿಸಲು ಸಾಯಣರು,

**ಅನರ್ವಾ ಪ್ರೇಹಿತ್ಯಾಹ ಭ್ರಾತೃವ್ಯೋ ವಾ ಅರ್ವಾ ಭ್ರಾತೃವ್ಯಾಪನುತ್ತ್ಯೈ ॥**

(ತೈ. ಸಂ. ೬-೩-೮-೪)

ಎಂಬ ತೈತ್ತಿರೀಯಸಂಹಿತಾವಾಕ್ಯವನ್ನುದಹರಿಸಿ **ಅರ್ವನ್** ಶಬ್ದಕ್ಕೆ **ಭ್ರಾತೃವ್ಯ** ಎಂದರೆ ಶತ್ರುವೆಂಬ ಅರ್ಥವಾಗುವುದನ್ನು ತೋರಿಸಿ ಪ್ರಕೃತವಾದ ಋಕ್ಕಿನಲ್ಲಿಯೂ ಇದೇ ಅರ್ಥವೆಂದು ತೋರಿಸಿದ್ದಾರೆ. ಹಾಗೆಯೇ ಋ. ಸಂ. ೫-೫೧-೧೧; ೧೦-೯೨-೧೪ ಇತ್ಯಾದಿ ಋಕ್ಕುಗಳಲ್ಲೂ ಸಹ ಈ ಪದವು ಶತ್ರುಪರ್ಯಾಯವಾಗಿಯೇ ಇದೆ. ಈ ಶಬ್ದವ್ಯುತ್ಪತ್ತಿಯ ವಿಷಯದಲ್ಲಿ Wilson ಎಂಬ ಪಂಡಿತನಿಗೂ Max Muller ಎಂಬ ಪಂಡಿತನಿಗೂ ಭಿನ್ನಾಭಿಪ್ರಾಯಗಳಿವೆ. Wilson ಪಂಡಿತನು,

**ಕ್ರೀಳಂ ವಃ ಶರ್ಧೋ ಮಾರುತಮನರ್ವಾಣಂ ರಥೇಶುಭಂ । ಕಣ್ವಾ ಅಭಿ ಪ್ರ ಗಾಯತ ॥**

(ಋ. ಸಂ. ೧-೩೭-೧)

ಎಂಬ ಋಕ್ಕಿನಲ್ಲಿರುವ **ಅರ್ವನ್** ಶಬ್ದಕ್ಕೆ ಅರ್ಥಮಾಡುವಾಗ ಸಾಯಣಭಾಷ್ಯದ ಮೇಲೆ ಟೀಕೆಮಾಡುತ್ತಾ ಹೀಗೆ ಹೇಳಿರುತ್ತಾನೆ.

The phrase is ಅನರ್ವಾಣಂ which the Scholiast explains ಭ್ರಾತೃವ್ಯರಹಿತಂ literally, without a brother's son, which would be a very unintelligible epithet ಅರ್ವನ್ is in its usual acceptation a horse: and being without horses would not be inapplicable to the Maruts, whose chariot is drawn by deer. ಭ್ರಾತೃವ್ಯ may mean an enemy, but it is doubtful if ಅರ್ವತ್ can admit of such an interprtetation.

[Rig-Veda Translation. Vol. I. P. 258].

ಮರುತ್ತುಗಳ ವಾಹನವು ಜಿಂಕೆಗಳಾದುದರಿಂದ ಈ ಸಂದರ್ಭದಲ್ಲಿ " ಕುದುರೆಗಳಿಲ್ಲದ " ಎಂದರ್ಥಮಾಡುವುದು ಅನುಚಿತವಾಗಲಾರದು ಎಂದು ಈ ಪಂಡಿತನು ಅಭಿಪ್ರಾಯಪಡುತ್ತಾನೆ. ಆದರೆ ಇದಕ್ಕೆ ವಿರುದ್ಧವಾಗಿ ಇದೇ ಸೂಕ್ತವನ್ನು ಪರಿವರ್ತಿಸುವ ವೇಳೆಯಲ್ಲಿ Max Muller ಪಂಡಿತನು ಈ ಪದಕ್ಕೆ ಅಶ್ವವೆಂದು ಅರ್ಥಮಾಡಿರುವುದು ಸರಿಯಲ್ಲವೆಂದು ಟೀಕಿಸಿರುತ್ತಾನೆ. ಅದು ಈ ರೀತಿಯಿದೆ-

Wilson translates ಅನರ್ವಾಣಂ by without horses, though the commentator distinctly explains the word by " without an enemy " The fact is, that, in the Rig-Veda ಅನರ್ವಾ never means without horses but always without hurt or free from enemies, and the commentator is perfectly right, as sense is concerned, in rendering the world by " withont an enemy or unopposed " (ಅಪ್ರತ್ಯೃತ)

[Sacred Books of the East. Vol. XXXII. P. 65]

ಋಕ್ಸಂಹಿತೆಯಲ್ಲಿ **ಅರ್ವನ್** ಶಬ್ದಕ್ಕೆ ಅಶ್ವವೆಂದರ್ಥವಿದ್ದರೂ **ಅನರ್ವಾ** ಎಂಬ ಪದಕ್ಕೆ ಯಾವಾಗಲೂ ಶತ್ರುರಹಿತನಾದ ಎಂದೇ ಅರ್ಥವಾಗುತ್ತದೆಂದು ತಿಳಿಸಿದೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಶತ್ರುರಹಿತನಾದವನನ್ನಾಗಿ ಮಾಡಿ ಎಂದು ಮಿತ್ರಾವರುಣರನ್ನು ಪ್ರಾರ್ಥಿಸಿದೆ.

**ವಿನೋಃ ವ್ರತಂ ಉಕ್ಥೈಃ ಪರಿಭೂಷತಿ**—ಎಂದು ಕರ್ಮಕ್ಕೂ ಉಕ್ಥಕ್ಕೂ ಇರುವ ನಿಯತವಾದ ಸಂಬಂಧವನ್ನು ತೋರಿಸಿ **ಉಕ್ಥದ** ಪಠನದಿಂದ ಕರ್ಮಕ್ಕೆ ಪೌಷ್ಕಲ್ಯವೂ, ಸೌಂದರ್ಯವೂ ಉಂಟಾಗುವುದೆಂದೂ, ಇಂತಹ ಉತ್ತಮವಾದ ಕರ್ಮವನ್ನು ನೆರವೇರಿಸುವುದಾಗಿಯೂ ತಿಳಿಸಿದೆ.

**ಉಕ್ಥ** ವೆಂದರೆ **ಸ್ತೋತ್ರ** ದೊಡನೆ ಅಥವಾ ಸ್ತೋತ್ರದ ಪಠನವಾದೊಡನೆಯೇ ಪಠಿಸತಕ್ಕ **ಶಸ್ತ್ರ**ರೂಪವಾದ ಮಂತ್ರವು. ಸ್ತೋತ್ರವನ್ನು ಉದ್ಗಾತೃವು ಪಠಿಸಬೇಕು. ಅನಂತರ ಹೋತೃವಾಗಲಿ ಅವನ ಸಹಾಯಕ್ಕಾಗಿ ಇರತಕ್ಕ ಮೈತ್ರಾವರುಣಾದಿಗಳಲ್ಲಿ ಒಬ್ಬನಾಗಲಿ ಶಸ್ತ್ರವನ್ನು ಪಠಿಸಬೇಕು. ಒಂದೆರಡು ಉದಾಹರಣೆಗಳನ್ನು ಮಾತ್ರ ತೆಗೆದುಕೊಂಡರೆ ಸ್ತೋತ್ರಕ್ಕೂ ಶಸ್ತ್ರಕ್ಕೂ ಇರತಕ್ಕ ಸಂಬಂಧವು ತಿಳಿಯುತ್ತದೆ. ಪ್ರಾತಃಸವನದಲ್ಲಿ ಬಹಿಷ್ಪವಮಾನ ಸ್ತೋತ್ರವಾದೊಡನೆಯೇ ಆಜ್ಯಶಸ್ತ್ರವೂ, ಮಾಧ್ಯಂದಿನಸವನದಲ್ಲಿ ಮಾಧ್ಯಂದಿನಪವಮಾನ ಸ್ತೋತ್ರವಾದೊಡನೆಯೇ ವೈಶ್ವದೇವ ಶಸ್ತ್ರವೂ ಪಠಿಸಲ್ಪಡುತ್ತದೆ.

ಪ್ರಕೃತವಾದ ಋಕ್ಕಿನಲ್ಲಿ ಮಿತ್ರಾವರುಣರ ಪ್ರಶಂಸಾ ಸಂದರ್ಭದಲ್ಲಿ **ಉಕ್ಥದ** ಮೂಲಕ ಅವರ ಸ್ತುತಿಯಿದೆ ಯೆಂದು ತಿಳಿಸಿರುವುದರಿಂದ ಅವರಿಗೆ ಸಂಬಂಧಿಸಿದ ಪೂರ್ವಕಥಾಸಂದರ್ಭದೊಂದಿಗೆ ಉಕ್ಥದ ಪ್ರಭಾವವೂ. ತನ್ಮೂಲಕ ಮಿತ್ರಾವರುಣರ ಮಹಿಮೆಯೂ ಸೂಕ್ಷ್ಮವಾಗಿ ವಿವರಿಸಲಾಗುತ್ತದೆ. ಉಕ್ಥದ ಶಕ್ತಿಯು ಅತ್ಯಧಿಕವಾದುದೆಂದೂ, ಅಸುರರು ಅದರ ಮರೆಯನ್ನು ಹೊಕ್ಕಿದುದರಿಂದ ದೇವತೆಗಳಿಗಾದಂತೆ ಅವರ ಶಕ್ತಿಯೂ ವೃದ್ಧಿಯಾಯಿತೆಂದೂ, ಆಗ ಇಂದ್ರನು ಸ್ತುತನಾಗಿ ಬಂದು ಇವರನ್ನು ಓಡಿಸಿದನೆಂದೂ ಐತರೇಯಬ್ರಾಹ್ಮಣದಲ್ಲಿ ಒಂದು ಕಥೆಯಿದೆ.

**ತೇ ವಾ ಅಸುರಾ ಮೈತ್ರಾವರುಣಸ್ಯೋಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾ-ನಿತೋಽಸುರಾನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವರುಣಸ್ತಸ್ಮಾದೈಂದ್ರಾವರುಣಂ ಮೈತ್ರಾವರುಣಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವರುಣಶ್ಚ ನುದೇತಾಂ ।**

(ಐ. ಬ್ರಾ. ೩-೫೦)

ಅಸುರರು ಮೈತ್ರಾವರುಣ ಉಕ್ಥವನ್ನು ಪ್ರವೇಶಿಸಿದರು. ಆಗ ಇಂದ್ರನು ಈ ಅಸುರರನ್ನು ಈ ಉಕ್ಥದಿಂದ ಓಡಿಸಲು ನನಗೆ ನಿಮ್ಮಲ್ಲಿ ಯಾರು ಸಹಾಯಮಾಡುತ್ತೀರಿ ಎಂದಾಗ ವರುಣನು ತಾನು ಸಹಾಯಮಾಡುವುದಾಗಿ ಹೇಳಿದನು. ಆ ಕಾಲದಲ್ಲಿ ಹೋತೃವಿಗೆ ಸಹಾಯಕನಾದ ಮೈತ್ರಾವರುಣನು ತೃತೀಯಸವನಕಾಲದಲ್ಲಿ,

**ಇಂದ್ರಾವರುಣಾ ಯುವಮಧ್ವರಾಯ ನೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ ।**

(ಋ. ಸಂ. ೭-೮೨-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ, ಇಂದ್ರನನ್ನೂ ವರುಣನನ್ನೂ ಸ್ತುತಿಸಿದನು. ಆಗ ಇಂದ್ರಾ ವರುಣರು ಆ ಅಸುರರನ್ನು ಮಿತ್ರಾವರುಣಶಸ್ತ್ರದಿಂದ ಓಡಿಸಿದರು. ಹೀಗೆಯೇ ಆ ಅಸುರರು ಬ್ರಾಹ್ಮಣಾಚ್ಛಂಸಿಯ ಉಕ್ಥದಲ್ಲಿ ಪ್ರವೇಶಿಸಿ, ಅಲ್ಲಿಂದ ಓಡಿಸಲ್ಪಟ್ಟನಂತರ ಅಚ್ಛಾವಾಕನ ಉಕ್ಥದಲ್ಲಿ ಸೇರಿಕೊಂಡು ಅಲ್ಲಿಂದಲೂ ಸಹ ಇಂದ್ರಾವಿಷ್ಣುಗಳಿಂದ ಓಡಿಸಲ್ಪಟ್ಟರು ಎಂಬ **ಉಕ್ಥದ** ಪ್ರಭಾವವನ್ನು ಹೇಳುವ ಕಥೆಯೊಂದಿದೆ.

**ಯದಾಹ ಬೃಹದ್ವತೇ ವಯಸ್ವತ ಇತ್ಯುಕ್ಥಾ ಖ್ಯಂ ಗೃಹ್ಣಾಮಿತ್ಯುಕ್ಥೇಭ್ಯೋ ಹ್ಯೇನಂ ಗೃಹ್ಣಾತಿ ॥**

(ಶ. ಬ್ರಾ. ೪-೨-೩-೧೦)

ಎಂದು ಶತಪಥಬ್ರಾಹ್ಮಣದಲ್ಲಿಯೂ ಸಹ "ಬೃಹದುಕ್ಥದಿಂದ ಕೂಡಿದವನೂ, ವೀರ್ಯವಂತನೂ ಆದ ಇಂದ್ರನಿಗೆ" ಎಂದು ಇಂದ್ರನ ವೀರ್ಯಕ್ಕೂ ತೃಪ್ತಿಗೂ ಕಾರಣವಾದ ಉಕ್ಥವನ್ನೂ, ತನ್ಮೂಲಕ ಇಂದ್ರನನ್ನೂ ಸ್ತುತಿಸಿದೆ.

**ಉಕ್ಥ್ಯೋ ಭವತಿ ಪಶವೋ ವಾ ಉಕ್ಥಾನಿ ಪಶೂನಾಮವರುದ್ಧ್ಯೈ । ತಸ್ಯ ಪಂಚದಶಸ್ತೋತ್ರಾಣಿ ಭವಂತಿ ಪಂಚದಶಶಸ್ತ್ರಾಣಿ .......... ॥**

(ಐ. ಬ್ರಾ. ೪-೧೨)

ಉಕ್ಥ್ಯವು ಪಶುರೂಪವಾದುದು. ಪಶುಸಂಪತ್ತನ್ನು ಪಡೆಯುವ ಸಾಧನವಾಗಿದೆ. ಇದರಲ್ಲಿ ಹದಿನೈದು ಶಸ್ತ್ರಗಳೂ, ಹದಿನೈದು ಸ್ತೋತ್ರಗಳೂ ಅಡಕವಾಗಿವೆಯೆಂದು ಐತರೇಯಬ್ರಾಹ್ಮಣದಲ್ಲಿ ಹೇಳಿದೆ.

ಯಾಗಾದಿ ಕರ್ಮಗಳ ಕಾಲದಲ್ಲಿ ಯಾವ ರೀತಿ ಉಕ್ಥದ ಪ್ರಭಾವವನ್ನು ವರ್ಣಿಸಿದೆಯೋ, ಅದೇ ರೀತಿ ಆಧ್ಯಾತ್ಮಿಕವಾದ ಜ್ಞಾನವನ್ನು ಉಪದೇಶಿಸುವ ಕಾಲದಲ್ಲೂ ಸಹ ಸ್ತೋತ್ರಶಸ್ತ್ರಾತ್ಮಕವಾದ ಈ ಉಕ್ಥದ ಮಹಿಮೆ ಯನ್ನು ಪ್ರಶಂಸಿಸಿದೆ.

**ಉಕ್ಥಂ ಪ್ರಾಣೋ ವಾ ಉಕ್ಥಂ ಪ್ರಾಣೋ ಹೀದಂ ಸರ್ವಮುತ್ಥಾಪಯತ್ಯುದ್ಧಸ್ಮಾದುಕ್ಥವಿದ್ವೀರ-ಸ್ತಿಷ್ಠತ್ಯುಕ್ಥಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ ।**

(ಬೃ. ಉ. ೫-೧೩-೧)

**ಉಕ್ಥಂ ತಥೋಪಾಸನಾನಂತರಂ । ಉಕ್ಥಂ ಶಸ್ತ್ರಂ । ತದ್ಧಿ ಪ್ರಧಾನಂ ಮಹಾವ್ರತೇ ಕ್ರತೌ ।**

(ಶಾಂಕರಭಾಷ್ಯ)

ಮಹಾವ್ರತರೂಪವಾದ ಯಾಗದಲ್ಲಿ ಪ್ರಧಾನಶಸ್ತ್ರವಾದ ಉಕ್ಥವೇ ಪ್ರಾಣವು. ಇದರಿಂದಲೇ ಉತ್ಥಾನವಾಗುತ್ತದೆ. ಆದರಿಂದ ಉಕ್ಥಜ್ಞನಾದ ಪುತ್ರನು ಉತ್ಪನ್ನನಾಗಿ ತತ್ಸಮಾನತೆಯನ್ನೂ, ಸಮಾನವಾದ ಮಾನ್ಯತೆಯನ್ನೂ ಪಡೆಯುತ್ತಾನೆ ಎಂದು ಉಕ್ಥದ ಮಹತ್ತ್ವವನ್ನು ಹೇಳಿದೆ. ಅಂತಹ ಮಹತ್ವಪೂರಿತವಾದ ಉಕ್ಥದ ಪಠನದಿಂದ ವ್ರತವನ್ನು ಆಚರಿಸುತ್ತೇನೆಂದು ಮಿತ್ರಾವರುಣರಿಗೆ ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆ.

**ಉಕ್ಥೈಃ ಪರಿಭೂಷತಿ** ಎಂದು ಹೇಳಿರುವಂತೆ **ಸ್ತೋಮೈಃ ಆಭೂಷತಿ** । ಎಂದು ವ್ರತವನ್ನು ಪೂರ್ಣವಾಗಿ ಮಾಡತಕ್ಕ ಕ್ರಮವನ್ನೂ ತಿಳಿಸಿದೆ. **ಉಕ್ಥ**ದಂತೆಯೇ ಸ್ತೋಮವೂ ಪ್ರಭಾವಪೂರಿತವಾದುದು. ಸ್ತೋಮದ ಸ್ವರೂಪವನ್ನೂ ವೈವಿಧ್ಯವನ್ನೂ ಋಗ್ವೇದಸಂಹಿತೆಯ ೨ನೇ ಭಾಗದ 138ರಿಂದ 150ನೇಪೇಜುಗಳಲ್ಲಿ ವಿಶದವಾಗಿ ತಿಳಿಸಿದೆ. ಇಲ್ಲಿ ಸ್ತೋಮಪಠನದಿಂದ ಲಭಿಸತಕ್ಕ ಪ್ರಯೋಜನಗಳನ್ನು ಮಾತ್ರ ತಿಳಿಸಲಾಗುತ್ತದೆ.

**ಪ್ರಾತಸ್ಸವನೇ ವೈ ಗಾಯತ್ರೇಣ ಛಂದಸಾ ತ್ರಿವೃತೇ ಸ್ತೋಮಾಯ ಜ್ಯೋತಿರ್ದಧದೇತಿ ತ್ರಿವೃತಾ ಬ್ರಹ್ಮವರ್ಚಸೇನ ಪಂಚದಶಾಯ ಜ್ಯೋತಿರ್ದಧದೇತಿ ಪಂಚದಶೇನೌಜಸಾ ವೀರ್ಯೇಣ ಸಪ್ತದಶಾಯ ಜ್ಯೋತಿರ್ದಧದೇತಿ ಸಪ್ತದಶೇನ ಪ್ರಾಜಾಪತ್ಯೇನ ಪ್ರಜನನೇನೈಕವಿಗ್ಂಶಾಯ ಜ್ಯೋತಿರ್ದಧದೇತಿ ಸ್ತೋಮ ಏವ ತತ್ ಸ್ತೋಮಾಯ ಜ್ಯೋತಿರ್ದಧದೇತ್ಯಥೋ ಸ್ತೋಮ ಏವ ಸ್ತೋಮಮಭಿ ಪ್ರಣಯತಿ ಯಾವಂತೋ ವೈ ಸ್ತೋಮಾಸ್ತಾವಂತಃ ಕಾಮಾಸ್ತಾವಂತೋ ಲೋಕಾಸ್ತಾವಂತಿ ಜ್ಯೋತೀಗ್ಂಷ್ಯೇತಾವತ ಏವ ಸ್ತೋಮಾನೇತಾವತಃ ಕಾಮಾನೇತಾವತೋ ಲೋಕಾನೇತಾವಂತಿ ಜ್ಯೋತೀಗ್ಂಷ್ಯವರುಂಧೇ ॥**

(ತೈ. ಸಂ. ೭-೧-೨-೧)

ಎಂಬ ತೈತ್ತಿರೀಯಸಂಹಿತಾವಾಕ್ಯಗಳಲ್ಲಿ ಸ್ತೋಮಗಳ ಪ್ರಭಾವಗಳನ್ನು ತಿಳಿಸಿದೆ. ಯಜ್ಞಕರ್ತನು ಪ್ರಾತಃಸವನ ಕಾಲದಲ್ಲಿ ಗಾಯತ್ರೀಚ್ಛಂದಸ್ಸಿನಿಂದ ತ್ರಿವೃತ್‌ಸ್ತೋಮವನ್ನು ಮಹತ್ತ್ವದ ಸ್ಥಾನದಲ್ಲಿರಿಸುತ್ತಾನೆ. ಹೀಗೆಯೇ ಜ್ಯೋತೀರೂಪವಾದ ತ್ರಿವೃತದಿಂದ ಪಂಚದಶಸ್ತೋಮವನ್ನೂ, ವೀರ್ಯಯುತವಾದ ಪಂಚದಶದಿಂದ ಸಪ್ತದಶಸ್ತೋಮವನ್ನೂ, ಪ್ರಜಾಪತಿಯೊಡನೆ ಸಂಬಂಧವನ್ನು ಹೊಂದಿ, ಪ್ರಜನನಕ್ಕೆ ಸಾಧಕವಾದ ಸಪ್ತದಶಸ್ತೋಮದಿಂದ ಏಕವಿಂಶಸ್ತೋಮವನ್ನೂ ತೇಜೋಯುತವಾಗುವಂತೆ ಮಾಡುತ್ತಾನೆ. ಹೀಗೆಯೇ ಒಂದುಬಗೆಯ ಸ್ತೋಮವು ಇನ್ನೊಂದು ವಿಧವಾದ ಸ್ತೋಮಕ್ಕೆ ಪ್ರಭಾವವನ್ನೂ ತೇಜಸ್ಸನ್ನೂ ಉಂಟುಮಾಡುತ್ತದೆ. ಸ್ತೋಮದಲ್ಲಿ ಎಷ್ಟುಬಗೆಗಳಿವೆಯೋ ಅಷ್ಟು ಲೋಕಗಳೂ, ಅಷ್ಟುಬಗೆಯ ತೇಜಸ್ಸುಗಳೂ, ಅಷ್ಟುವಿಧವಾದ ಇಷ್ಟಾರ್ಥಗಳೂ ಇವೆ. ಮತ್ತು ಸ್ತೋಮ ಪಠನದಿಂದ ಯಜಮಾನನು ಅಷ್ಟುವಿಧವಾದ ಲೋಕಗಳನ್ನೂ, ತೇಜಸ್ಸುಗಳನ್ನೂ ಮತ್ತು ಇಷ್ಟಾರ್ಥಗಳನ್ನೂ

ಪಡೆಯುವನು ಎಂದು ಸ್ತೋಮದ ಪ್ರಭಾವವನ್ನು ತಿಳಿಸಿ, ಅನಂತರ ಸ್ತೋಮಪಠನವಿಲ್ಲದಿರುವುದರಿಂದ ಆಗುವ ನಷ್ಟವನ್ನೂ ತಿಳಿಸಿದೆ.

**ಬ್ರಹ್ಮವಾದಿನೋ ವದಂತಿ ಸತ್ವೈ ಯಜೇತ ಯೋಽಗ್ನಿಷ್ಟೋಮೇನ ಯಜಮಾನೋಽಥ ಸರ್ವಸ್ತೋಮೇನ ಯಜೇತೇತಿ ಯಸ್ಯ ತ್ರಿವೃತಮಂತರ್ಯಂತಿ ಪ್ರಾಣಾಗ್‌ಸ್ತಸ್ಯಾಂತರ್ಯಂತಿ ಪ್ರಾಣೇಷು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಪಂಚದಶಮಂತರ್ಯಂತಿ ವೀರ್ಯಂ ತಸ್ಯಾಂತರ್ಯಂತಿ ವೀರ್ಯೇ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಸಪ್ತದಶಮಂತರ್ಯಂತಿ ಪ್ರಜಾಂ ತಸ್ಯಾಂತರ್ಯಂತಿ ಪ್ರಜಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯೈಕ-ವಿಗ್‌ಂಶಮಂತರ್ಯಂತಿ ಪ್ರತಿಷ್ಠಾಂ ತಸ್ಯಾಂತರ್ಯಂತಿ ಪ್ರತಿಷ್ಠಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಿಣವಮಂತರ್ಯಂತ್ಯೃತೂಗ್‌ಂಶ್ಚ ತಸ್ಯ ನ-ಕ್ಷತ್ರಿಯಾಂ ಚ ವಿರಾಜಮಂತರ್ಯಂತ್ಯೃತುಷು ಮೇಽಪ್ಯಸನ್ನಕ್ಷತ್ರಿಯಾಯಾಂ ಚ ವಿರಾಜೀತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಯಸ್ತ್ರಿಗ್‌ಂಶಮಂತರ್ಯಂತಿ ದೇವತಾಸ್ತಸ್ಯಾಂತರ್ಯಂತಿ ದೇವತಾಸು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯೋ ವೈ ಸ್ತೋಮಾನಾಮವಮಂ ಪರಮತಾಂ ಗಚ್ಛಂತಂ ವೇದ ಪರಮತಾಮೇವ ಗಚ್ಛತಿ ತ್ರಿವೃದ್ವೈ ಸ್ತೋಮಾನಾಮವಮಸ್ತ್ರಿವೃತ್ಪರಮೋ ಯ ಏವಂ ವೇದ ಪರಮತಾಮೇವ ಗಚ್ಛತಿ ||**

(ತೈ. ಸಂ. ೭-೧-೩-೧, ೨, ೩,)

ಅಗ್ನಿಷ್ಟೋಮದಿಂದ ಯಜ್ಞಮಾಡತಕ್ಕವರು ಸರ್ವಸ್ತೋಮದಿಂದಲೂ ಮಾಡಬೇಕೆಂದು ಶಾಸ್ತ್ರಜ್ಞರು ವಿಧಿಸಿದ್ದಾರೆ. ಈ ವಿಧಿಯಲ್ಲಿ ತ್ರಿವೃತ್‌ಸ್ತೋಮವನ್ನು ಬಿಟ್ಟರೆ ಅವನ ಮುಖ್ಯಪ್ರಾಣವೇ ಮಾಯವಾಗುವುದರಿಂದ ಯಜಮಾನನು ಈ ಯಜ್ಞವು ನನ್ನ ಮುಖ್ಯಪ್ರಾಣದಲ್ಲಿ ಅಂತರ್ಗತವಾಗಲಿ ಎಂಬ ಉದ್ದಿಶ್ಯದಿಂದ ಯಾಗಮಾಡುತ್ತಾನೆ. ಹೀಗೆಯೇ ಪಂಚದಶಸ್ತೋಮವನ್ನು ಬಿಟ್ಟರೆ ಶಕ್ತ್ಯಭಾವವಾಗುವುದರಿಂದಲೂ, ಏಕವಿಂಶಸ್ತೋಮವನ್ನು ಬಿಟ್ಟರೆ ತನ್ನ ಜೀವನಾಧಾರವೇ ಕಳಚಿಹೋಗುವುದರಿಂದಲೂ, ತ್ರಿಣವ ಸ್ತೋಮವನ್ನು ಬಿಟ್ಟರೆ ತನ್ನ ಪ್ರಯೋಜನಕ್ಕಾಗಿ ಇರತಕ್ಕ ಋತುಗಳೂ ನಕ್ಷತ್ರಗಳ ಶಕ್ತಿಗಳೂ ತನ್ನ ಭಾಗಕ್ಕೆ ಸಹಾಯಕವಾಗದಿರುವುದರಿಂದಲೂ ತ್ರಯಸ್ತ್ರಿಂಶಸ್ತೋಮವನ್ನು ಬಿಟ್ಟರೆ ಮುಖ್ಯವಾದ ದೇವತಾಸಾನ್ನಿಧ್ಯವೇ ಇಲ್ಲದಿರುವುದರಿಂದಲೂ ಸಹ ಯಜಮಾನನು ಶಕ್ತಿಸಂಪಾದನೆಗಾಗಿ ಪಂಚದಶಸ್ತೋಮದಿಂದಲೂ, ಸಂತತಿಲಾಭಕ್ಕಾಗಿ ಸಪ್ತದಶಸ್ತೋಮದಿಂದಲೂ ಜೀವನಾಧಾರಕ್ಕಾಗಿ ಏಕವಿಂಶಸ್ತೋಮದಿಂದಲೂ ಋತುಗಳ ಮತ್ತು ನಕ್ಷತ್ರಗಳ ಪ್ರಭಾವಗಳ ಪ್ರಯೋಜನವನ್ನು ಪಡೆಯುವುದಕ್ಕಾಗಿ ತ್ರಿಣವಸ್ತೋಮದಿಂದಲೂ ತನ್ನ ಮುಖ್ಯದೇವತಾ ಸಾನ್ನಿಧ್ಯದ ಲಾಭಕ್ಕಾಗಿ ತ್ರಯಸ್ತ್ರಿಂಶಸ್ತೋಮದ ಪಠನದಿಂದಲೂ ಯಾಗವನ್ನು ನೆರವೇರಿಸುತ್ತಾನೆ. ಯಾವ ಯಜಮಾನನು ಸ್ತೋಮಗಳಲ್ಲೆಲ್ಲಾ ಪ್ರಥಮಸ್ಥಾನವನ್ನು ಪಡೆದಿರುವ ತ್ರಿವೃತ್‌ಸ್ತೋಮದ ಮಹಿಮೆಯನ್ನು ತಿಳಿಯುತ್ತಾನೆಯೋ ಆ ಯಜಮಾನನು ಯಜ್ಞಕರ್ತರಲ್ಲಿ ಮೊದಲನೆಯ ಸ್ಥಾನವನ್ನು ಪಡೆಯುತ್ತಾನೆ. ಮತ್ತು ತ್ರಿವೃತ್‌ಸ್ತೋಮದೊಡನೆ ಕೂಡಿದ ಅಗ್ನಿಷ್ಟೋಮದಿಂದ ತೇಜಸ್ಸನ್ನೂ ಪಂಚದಶಸ್ತೋಮದಿಂದ ವೀರ್ಯವನ್ನೂ ಸಪ್ತದಶದಿಂದ ಅನ್ನವನ್ನೂ ಏಕವಿಂಶದಿಂದ ಪ್ರತಿಷ್ಠೆಯನ್ನೂ ತ್ರಿಣವದಿಂದ ಜಯವನ್ನೂ ತ್ರಯಸ್ತ್ರಿಂಶದಿಂದ ಮಹತ್ತ್ವವನ್ನೂ ಪಡೆಯುತ್ತಾನೆ.

**ಸ್ತೋಮಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥**

(ಕ. ಉ. ೨-೧೧).

ಎಂದು ಕಠೋಪನಿಷತ್ತಿನಲ್ಲಿ ಸ್ತೋಮದ ಮಹತ್ವವನ್ನೂ ಅದರಿಂದ ಲಭಿಸತಕ್ಕ ಆಧ್ಯಾತ್ಮಿಕವಾದ ಶಾಂತಿಯನ್ನೂ ತೋರಿಸಿದೆ.

**ಯೇನ ಚ್ಛಂದಸಾ ಸ್ತೋಷ್ಯನ್ಸ್ಯಾತ್ತಚ್ಛಂದ ಉಪಧಾವೇದ್ಯೇನ ಸ್ತೋಮೇನ ಸ್ತೋಷ್ಯ-ಮಾಣಃ ಸ್ಯಾತ್ತಂ ಸ್ತೋಮಮುಪಧಾವೇತ್ ॥**

(ಛಾ. ಉ. ೧-೩-೧೦)

ಎಂದು ಛಾಂದೋಗ್ಯದಲ್ಲಿಯೂ ಸಹ ಉದ್ಗೀಥದ ಮಹತ್ವವನ್ನು ವರ್ಣಿಸುತ್ತಾ ಯಾವ ಸ್ತೋಮದಿಂದ ಆಯಾಸನ್ನಿವೇಶಕ್ಕನುಗುಣವಾಗಿ ಸ್ತೋತ್ರವು ಪೂರ್ಣವಾಗುತ್ತದೆಯೋ ಆ ಸ್ತೋಮವನ್ನಾಶ್ರಯಿಸಿ ಧ್ಯಾನಮಾಡಬೇಕೆಂದು ತಿಳಿಸಿದೆ.

ಇದೇ ರೀತಿ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಹೋತ್ರಾದಿಗಳಿಂದ ಕರ್ಮಕಾಲದಲ್ಲಿ ಪಠಿತವಾಗತಕ್ಕ ಗಾನಾತ್ಮಕವಾದುದೂ ಅತಿಶಯವಾದ ಪ್ರಯೋಜನವನ್ನು ಕೊಡತಕ್ಕದ್ದೂ, ಕರ್ಮಕ್ಕೆ ಅಲಂಕಾರಭೂತವಾದದ್ದೂ ಆದ ಸ್ತೋತ್ರವೆಂದರ್ಥ. ಸಾಯಣರು **ಸ್ತೋತ್ರೈರ್ಗಾನಯುಕ್ತಮಂತ್ರಸಾಧ್ಯೈಃ** । ಎಂದು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಮಿತ್ರಾಯ**—ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಬರುವುದರಿಂದ **ಚತುರ್ಥೀ ಸಂಪ್ರದಾನೇ** ಎಂಬುದರಿಂದ ಚತುರ್ಥೀ ಬರುತ್ತದೆ.

**ಅವಿಧತ್**—ವಿಧ ವಿಧಾನೇ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನಾಂತ ರೂಪ. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಅನರ್ವಾಣಂ**—ನ ವಿದ್ಯತೇ ಅರ್ವಾ ಯಸ್ಯ ಸಃ ತಮ್. **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಪಾತಃ**—ಪಾ ರಕ್ಷಣೇ ಧಾತು. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ದಾಶ್ವಾಂಸಂ**—ದಾಶೃ ದಾನೇ. ಧಾತು. **ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ದ್ವಿತೀಯಾ ಏಕವಚನಾಂತರೂಪ.

**ಮರ್ತಂ**—ಮೃಙ್ ಪ್ರಾಣತ್ಯಾಗೇ. ಧಾತು. **ಅಸಿಹಸಿ**—(ಉ. ಸೂ. ೩-೩೬೬) ಎಂಬುದರಿಂದ ತನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಕ್ಷತಿ**—ರಕ್ಷ ಪಾಲನೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಋಜೂಯಂತಂ**—ಋಜುಂ ಆತ್ಮನಃ ಇಚ್ಛತಿ ಋಜೂಯತಿ. **ಸುಪ ಆತ್ಮನಃ ಕ್ಯಚ್** (ಪಾ ಸೂ. ೩-೧-೮) ಎಂಬುದರಿಂದ ಕ್ಯಚ್. ಕ್ಯಜಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ದ್ವಿವಚನ ಪರವಾದಾಗ ಉಗಿತ್ತಾದುದರಿಂದ ನುಮಾಗಮ. ಕ್ಯಚ್ ಸ್ವರ ಬರುತ್ತದೆ.

**ಪರಿಭೂಷತಿ**—ಭೂಷ ಅಲಂಕಾರೇ. ಭ್ವಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ತಿಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಉದಾತ್ತವುಳ್ಳ ತಿಙಂತವು ಪರವಾದುದರಿಂದ **ತಿಙಿಚೋದಾತ್ತವತಿ** ಎಂಬುದರಿಂದ ಗತಿಗೆ (ಪರಿ) ನಿಘಾತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ನಮೋ ದಿವೇ ಬೃಹತೇ ರೋದಸೀಭ್ಯಾಂ ಮಿತ್ರಾಯ ವೋಚಂ ವರುಣಾಯ ಮೀಳ್ಹುಷೇ ಸುಮೃಳೀಕಾಯ ಮೀಳ್ಹುಷೇ ।
ಇಂದ್ರಮಗ್ನಿಮುಪ ಸ್ತುಹಿ ದ್ಯುಕ್ಷಮರ್ಯಮಣಂ ಭಗಂ ।
ಜ್ಯೋಗ್ಜೀವಂತಃ ಪ್ರಜಯಾ ಸಚೇಮಹಿ ಸೋಮಸ್ಯೋತೀ ಸಚೇಮಹಿ ॥ ೬ ॥

॥ ಪದಪಾಠಃ ॥

ನಮಃ । ದಿವೇ । ಬೃಹತೇ । ರೋದಸೀಭ್ಯಾಂ । ಮಿತ್ರಾಯ । ವೋಚಂ । ವರುಣಾಯ । ಮೀಳ್ಹುಷೇ । ಸುऽಮೃಳೀಕಾಯ । ಮೀಳ್ಹುಷೇ ।
ಇಂದ್ರಂ । ಅಗ್ನಿಂ । ಉಪ । ಸ್ತುಹಿ । ದ್ಯುಕ್ಷಂ । ಅರ್ಯಮಣಂ । ಭಗಂ ।
ಜ್ಯೋಕ್ । ಜೀವಂತಃ । ಪ್ರಜಯಾ । ಸಚೇಮಹಿ । ಸೋಮಸ್ಯ । ಊತೀ । ಸಚೇಮಹಿ ॥ ೬ ॥

॥ ಸಾಯಣಭಾಷ್ಯಂ ॥

ದಿವೇ ದ್ಯೋತಮಾನಾಯ ಸೂರ್ಯಾಯ ನಮೋ ವೋಚಂ । ನಮಸ್ಕಾರೋಪಲಕ್ಷಿತಂ ಸ್ತೋತ್ರಂ ವೋಚಂ । ಬ್ರವೀಮಿ । ಸ್ತೌಮೀತ್ಯರ್ಥಃ । ಕೀದೃಶಾಯ ತಸ್ಮೈ । ಬೃಹತೇ ಮಹತೇ ॥

ಬೃಹನ್ಮಹತೋರುಪಸಂಖ್ಯಾನಮಿತಿ ವಿಭಕ್ತಿರುದಾತ್ತಾ ॥ ಸ್ತುತ್ಯಾಯ । ತಥಾ ರೋದಸೀಭ್ಯಾಂ ದ್ಯಾವಾ-ಪೃಥಿವೀಭ್ಯಾಂ ತದಭಿಮಾನಿದೇವಾಭ್ಯಾಂ ನಮೋ ವೋಚಂ । ತಥಾ ಮಿತ್ರಾಯ ಸರ್ವಜನಹಿತಾಯಾ-ಹರಭಿಮಾನಿದೇವಾಯ ನಮೋ ವೋಚಂ । ತಥಾ ವರುಣಾಯಾವರಕಾಯ ರಾತ್ರ್ಯಭಿಮಾನಿದೇವಾಯ । ತಥಾ ಮೀಳ್ಹುಷೇಽಭಿಮತಫಲಸ್ಯ ಸೇಕ್ತ್ರೇ ರುದ್ರಾಯ । ಕೀದೃಶಾಯ ತಸ್ಮೈ । ಸುಮೃಳೀಕಾಯ ಶೋಭನಸುಖಯಿತ್ರೇ । ಪುನಃ ಸ ಏವ ವಿಶೇಷ್ಯತೇ । ಮೀಳ್ಹುಷೇ ಸುಮೃಳೀಕಾಯೇತಿ ದ್ವೇ ಪ್ರತ್ಯೇಕ ವಿಶೇಷಣಭೂತೇ । ಇದಾನೀಂ ಯಜಮಾನ ಋತ್ವಿಜಂ ಸ್ವಾತ್ಮಾನಂ ವಾ ಪ್ರತಿ ಬ್ರವೀತಿ । ಹೇ ಹೋತಃ ಹೇ ಆತ್ಮನ್ವಾ ಇಂದ್ರಮಗ್ನಿಂ ದ್ಯುಕ್ಷಂ ದೀಪ್ತಿಮಂತಮರ್ಯಮಣಂ ಭಗಂ ಚೋಪೋಪೇತ್ಯ ಬುದ್ಧ್ಯಾ ಪ್ರಾಪ್ಯ ಸ್ತುಹಿ । ಸ್ತುತಿಂ ಕುರು । ಯುಷ್ಮದನುಗ್ರಹಾಜ್ಜ್ಯೋಕ್ ಚಿರಕಾಲಂ ಜೀವಂತೋ ಜೀವನೋಪೇತಾ ವಯಂ ಪ್ರಜಯಾ ಪುತ್ರಭೃತ್ಯಾದಿನಾ ಸಚೇಮಹಿ । ಸಂಗತಾ ಭೂಯಾಸ್ಮ । ಕಿಂಚ ಸೋಮಸ್ಯೇಂದೋರೂತೀ ಊತ್ಯಾ ಸಚೇಮಹಿ । ತಮಪಿ ಸ್ತುತ್ಯಾ ತತ್ಕಾರಿತೇನ ರಕ್ಷಣೇನ ಸಹಿತಾ ಭೂಯಾಸ್ಮೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಬೃಹತೇ—ಮಹನೀಯನೂ (ಬೃಹದಾಕಾರನೂ) । **ದಿವೇ—**ದ್ಯೋತಮಾನನೂ ಆದ ಸೂರ್ಯನಿಗೆ **ನಮಃ ವೋಚಂ—**ನಮಸ್ಕಾರವನ್ನು (ಸ್ತುತಿವಾಕ್ಯವನ್ನು) ಹೇಳುತ್ತೇನೆ (ಸ್ತುತಿಸುತ್ತೇನೆ) । (**ತಥಾ**—ಹಾಗೆಯೇ) । **ರೋದಸೀಭ್ಯಾಂ**—ದ್ಯಾವಾಪೃಥಿವಿಗಳಿಗೆ । **ಮಿತ್ರಾಯ**—(ಸರ್ವಜನಹಿತನೂ ಅಹರಭಿಮಾನಿದೇವತೆಯೂ ಆದ) ಮಿತ್ರನಿಗೆ । **ವರುಣಾಯ—**(ಆವರಕನೂ, ರಾತ್ರ್ಯಭಿಮಾನಿದೇವತೆಯೂ) ಆದ ವರುಣನಿಗೆ (ಮತ್ತು) । **ಮೀಳ್ಹುಷೇ—**ಅಭಿಮತಫಲಸೇಚಕನೂ । **ಸುಮೃಳೀಕಾಯ** – ಶೋಭನಸುಖದಾತೃವೂ ಆದ । **ಮೀಳ್ಹುಷೇ—**ರುದ್ರನಿಗೆ । (**ನಮಃ ವೋಚಂ**—ನಮಸ್ಕಾರವನ್ನು ಹೇಳುತ್ತೇನೆ ಅಥವಾ ಸ್ತುತಿಸುತ್ತೇನೆ) (ಎಲೈಹೋತೃವೇ ಅಥವಾ ಆತ್ಮವೇ) । **ಜ್ಯೋಕ್**—(ನಿಮ್ಮನುಗ್ರಹದಿಂದ) ಚಿರಕಾಲ । **ಜೀವಂತಃ—**ಬದುಕಿರುವವರಾಗಿ (ನಾವು( **ಪ್ರಜಯಾ**—ಪುತ್ರ ಭೃತ್ಯಾದಿಗಳಿಂದ । **ಸಚೇಮಹಿ**—ಯುಕ್ತರಾಗೋಣ (ಮತ್ತು) । **ಸೋಮಸ್ಯ—**ಇಂದುವಿನ (ಸೋಮದೇವತೆಯ) । **ಊತೀ—**ರಕ್ಷಣೆಯಿಂದ । **ಸಚೇಮಹಿ—**ಯುಕ್ತರಾಗೋಣ (ಎಂದು) । **ಇಂದ್ರಂ—**ಇಂದ್ರನನ್ನೂ । **ಅಗ್ನಿಂ**—ಅಗ್ನಿಯನ್ನೂ । **ದ್ಯುಕ್ಷಂ**—ಪ್ರಕಾಶಯುಕ್ತನಾದ । **ಅರ್ಯಮಣಂ**—ಅರ್ಯಮನನ್ನೂ (ಮತ್ತು) । **ಭಗಂ (ಚ)**—ಭಗನನ್ನೂ । **ಉಪ**—ಸಮೀಪಿಸಿ (ಜ್ಞಾನದಿಂದ ಪ್ರಾಪ್ತನಾಗಿ) । **ಸ್ತುಹಿ**—ಸ್ತುತಿಸು.

॥ ಭಾವಾರ್ಥ ॥

ಮಹನೀಯನಾದ (ಬೃಹದಾಕಾರನಾದ) ಸೂರ್ಯ, ದ್ಯಾವಾಪೃಥಿವಿಗಳು, ಮಿತ್ರ, ಉಪಕಾರಿಯಾದ ವರುಣ, ಸುಖಕರನೂ ಮತ್ತು ವರಪ್ರದಾತೃವೂ ಆದ ರುದ್ರ ಇವರುಗಳನ್ನು ಸ್ತುತಿಸುತ್ತೇನೆ; ಎಲೈ ಹೋತೃವೇ (ಅಥವಾ ಆತ್ಮವೇ) ನಿಮ್ಮನುಗ್ರಹದಿಂದ ದೀರ್ಘಾಯುಗಳಾಗಿ, ಪುತ್ರಭೃತ್ಯರೊಡಗೂಡಿ ಇರೋಣ ಮತ್ತು ಸೋಮ (ಇಂದುವಿ) ನ ರಕ್ಷಣೆಯಿಂದಲೂ ಯುಕ್ತರಾಗೋಣ ಎಂದು, ಇಂದ್ರ, ಅಗ್ನಿ, ತೇಜೋವಿಶಿಷ್ಟನಾದ ಅರ್ಯಮ, ಭಗ ಇವರುಗಳನ್ನು ಸ್ತುತಿಸು.

## English Translation.

I proclaim veneration to the mighty Sun, to heaven and earth, to Mitra, to the benevolent Varuna, to the conferrer of happiness, the showerer of benefits. Praise Indra, Agni, the brilliant Aryaman, and Bhaga, so that, enjoying long life, we may be blessed with progeny; we may be happy through the protecting virtues of the Soma.

॥ ವಿಶೇಷವಿಷಯಗಳು ॥

**ಮಿತ್ರಾಯ ವೋಚಂ ವರುಣಾಯ ಮೀಳ್ಹುಷೇ ಸುಮೃಳೀಕಾಯ ಮೀಳ್ಹುಷೇ ।** ಇತ್ಯಾದಿ ದ್ವಿರುಕ್ತಿಗಳು ಪರುಚ್ಛೇಪ ಋಷಿಯ ಕೃತಿಗಳಲ್ಲಿ ಸಾಮಾನ್ಯವಾಗಿದೆ. ಇದರ ಮೇಲೆ ಕೆಲವರು ಪರುಚ್ಛೇಪನ ಶೈಲಿಯ ವಿಷಯದಲ್ಲಿ ಒಂದು ಆಕ್ಷೇಪವನ್ನು ಹೇಳಲು ಸಾಧ್ಯವಾಗುತ್ತದೆ. ನಿರುಕ್ತಕಾರರು ಇಂತಹದೇ ಆದ ಒಂದು ಉದಾಹರಣೆಯನ್ನು ಕೊಟ್ಟು ಅಲ್ಲಿ ಪೂರ್ವಪಕ್ಷದ ಆಕ್ಷೇಪವನ್ನು ತೋರಿಸಿ ಅದಕ್ಕೆ ಸರಿಯಾದ ಸಮಾಧಾನವನ್ನೂ ಹೇಳಿರುತ್ತಾರೆ.

**ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ ।**
**ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಳಯಂತು ॥**

(ಋ. ಸಂ. ೪-೫೭-೨)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಮಧುಮಂತಂ, ಮಧುಶ್ಚುತಂ** ಎಂಬಲ್ಲಿ ದ್ವಿರುಕ್ತಿಯೆಂಬ ದೋಷವಿದೆಯೆಂದು ಹೇಳುವ ಪೂರ್ವಪಕ್ಷವನ್ನು ಈ ರೀತಿ ತೋರಿಸಿದ್ದಾರೆ. (ನಿ. ೧೦-೧೬)

**ತದ್ಯತ್ಸಮಾನ್ಯಾಮೃಚಿ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯೇಕಂ ಮಧುಮಂತಂ ಮಧುಶ್ಚುತಮಿತಿ ।**

**ಮಧುಶ್ಚುತಂ, ಮಧುಮಂತಂ** ಎಂಬ ಪದಗಳನ್ನು ಒಂದೇ ಋಕ್ಕಿನಲ್ಲಿ ಉಪಯೋಗಿಸಿರುವುದರಲ್ಲಿ ಪೌನರುಕ್ತ್ಯದ ದೋಷವಿದೆಯೆಂದು ಕೆಲವರ ಮತವಾಗಿದೆ.

**ಯದೇವ ಸಮಾನೇ ಪಾದೇ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯಪರಂ "ಹಿರಣ್ಯರೂಪಃ ಸ ಹಿರಣ್ಯ ಸಂದೃಕ್" ಇತಿ ಯಥಾ ॥**

ಆದರೆ ಒಂದೇ ಋಕ್ಕಿನಲ್ಲಿ ಬೇರೆ ಬೇರೆ ಪಾದಗಳಲ್ಲಿ ದ್ವಿರುಕ್ತಿಯಿದ್ದರೆ ಆಗ ದೋಷವಿಲ್ಲ. ಒಂದೇ ಪಾದದಲ್ಲಿದ್ದರೆ ಆಗ ಪೌನರುಕ್ತ್ಯದ ದೋಷವು ಸಾಧ್ಯವಾಗುತ್ತದೆ. ಉದಾಹರಣೆಗೆ

**ಹಿರಣ್ಯರೂಪಃ ಸ ಹಿರಣ್ಯಸಂದೃಗಪಾಂ ನಪಾತ್ಸೇದು ಹಿರಣ್ಯವರ್ಣಃ ।**
**ಹಿರಣ್ಯಯಾತ್ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ ॥**

(ಋ. ಸಂ. ೨-೩೫-೧೦)

ಎಂಬ ಋಕ್ಕಿನಲ್ಲಿ ಒಂದೇ ಪಾದದಲ್ಲಿರುವುದರಿಂದ ಈ ದೋಷವೆಂದು ಇನ್ನು ಕೆಲವರ ಮತವಾಗಿದೆ.

**ಯಥಾ ಕಥಾ ಚ ವಿಶೇಷೋಽಜಾಮಿ ಭೃತೀತ್ಯಪರಂ** ಒಂದೇ ಪಾದದಲ್ಲಿದ್ದರೂ ಸಹ ಅರ್ಥದಲ್ಲಿ ಸೂಕ್ಷ್ಮವಾದ ವ್ಯತ್ಯಾಸವಿದ್ದರೆ ಈ ದೋಷವಿಲ್ಲವೆಂದು ಇನ್ನೊಂದು ಮತ. ಉದಾಹರಣೆಗೆ.

**ಯೋಗಕ್ಷೇಮಂ ವ ಆದಾಯಾಹಂ ಭೂಯಾಸಮುತ್ತಮ ಆ ವೋ ಮೂರ್ಧಾನಮಕ್ರಮೀಂ ।**
**ಅಧಸ್ಪದಾನ್ಮ ಉದ್ವದತ ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ ॥**

(ಋ. ಸಂ. ೧೦-೧೬೬-೫)

ಎಂಬಲ್ಲಿ **ಪುನರುಕ್ತಿರಾದರಾರ್ಥ**-ಅತಿಶಯವಾದ ಸೌಂದರ್ಯವನ್ನು ತೋರಿಸುವುದರಿಂದಲೂ ಮತ್ತು ಅರ್ಥದಲ್ಲೂ ಸೂಕ್ಷ್ಮವಾದ ವ್ಯತ್ಯಾಸವಿರುವುದರಿಂದಲೂ ದೋಷವಿಲ್ಲವೆಂದು ಅಭಿಪ್ರಾಯ. ಇದೇ ಸಮಾಧಾನವನ್ನು ಪರುಚ್ಛೇಪರ ಶೈಲಿಗೂ ಅನ್ವಯಿಸಬಹುದು. ನಿರುಕ್ತಕಾರರು ಪರುಚ್ಛೇಪರ ವಾಕ್ಯಗಳನ್ನೇ ಉದಹರಿಸಿ ಇಂತಹ ಪುನರುಕ್ತಿಯಲ್ಲಿ ಒಂದು ವಿಶೇಷವಾದ ಗುಣವೇ ಇದೆಯೆಂದೂ ಸಹ ತೋರಿಸಿದ್ದಾರೆ.

**ಅಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯಾ ।**

(ನಿ· ೧೦-೪೨)

ಅಭ್ಯಾಸಾತ್ಮಕವಾದ ಈ ಪುನರುಕ್ತಿಯಲ್ಲಿ ಅರ್ಥಕ್ಕೆ ಒಂದು ಅತಿಶಯವಾದ ಶಕ್ತಿಯನ್ನು ಕೊಡುತ್ತದೆ. **ತತ್ಪರುಚ್ಛೇಪಸ್ಯ ಶೀಲಂ** ಇದು ಪರುಚ್ಛೇಪಋಷಿಯ ವೈಶಿಷ್ಟ್ಯವು ಎಂದು ಈ ಶೈಲಿಯನ್ನು ಪ್ರಶಂಸಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ದಿನೇ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಬೃಹತೇ**—ಚತುರ್ಥೀ ಏಕವಚನಾಂತರೂಪ. **ಬೃಹನ್ಮಹತೋರುಪಸಂಖ್ಯಾನಂ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವೋಚಂ**—ವಚ ಪರಿಭಾಷಣೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. ಉತ್ತಮಪುರುಷ ಏಕವಚನಕ್ಕೆ ಅಮಾದೇಶ. **ಅಸ್ಯತಿವಕ್ತಿಖ್ಯಾತಿಭ್ಯೋಽಙ್** (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙ್. ಇದು ಪರವಾದಾಗ **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಉಮಾಗಮ. ಅಂತ್ಯಾಚಿನ ಪರವಾಗಿ ಬಂದಾಗ ಗುಣ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಮೀಢುಷೇ**—ಮಿಹ ಸೇಚನೇ. ಧಾತು. **ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚತುರ್ಥೀ ವಿಭಕ್ತಿ ಪರವಾದಾಗ ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಂ** ಎಂಬುದರಿಂದ ಸಂಪ್ರಸಾರಣ ಪೂರ್ವರೂಪ.

**ಸುಮೃಳೀಕಾಯ**—ಸುಷ್ಠು ಮೃಳೀಕಂ ಸುಖಂ ಯಸ್ಯ ಅಸೌ. ಸುಮೃಳೀಕಃ. **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಚತುರ್ಥ್ಯಂತರೂಪ.

**ಸ್ತುಹಿ**—ಷ್ಟುಞ್ ಸ್ತುತೌ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಜೀವಂತಃ**—ಜೀವ ಪ್ರಾಣಧಾರಣೇ. ಧಾತು. ಲಟಿಗೆ ಶತೃಾದೇಶ. ಪ್ರಥಮಪುರುಷ ಬಹುವಚನಾಂತರೂಪ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪ್ರಜಯಾ**—ಜನೀ ಪ್ರಾದುರ್ಭಾವೇ. ಧಾತು. ಪ್ರಜಾಯತೇ ಇತಿ ಪ್ರಜಾ. **ಉಪಸರ್ಗೇ ಚ ಸಂಜ್ಞಾಯಾಂ** (ಪಾ. ಸೂ. ೩-೨-೯೯) ಎಂಬುದರಿಂದ ಡಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತಿಯಾ ಏಕವಚನಾಂತರೂಪ.

**ಸಚೇಮಹಿ**—ಷಚ ಸಮವಾಯೇ ಧಾತು. ಲಿಙ್ ಉತ್ತಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಊತೀ**—**ಊತಿಯೂತಿಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತವಾದ ಕ್ತಿನ್ನಂತ ದಿಂದ ನಿಪಾತಿತವಾಗಿದೆ. ತೃತೀಯಾ ಏಕವಚನ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಪೂರ್ವಸವರ್ಣ ದೀರ್ಘ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಊತೀ ದೇವಾನಾಂ ವಯಮಿಂದ್ರವಂತೋ ಮಂಸೀಮಹಿ ಸ್ವಯಃಶಸೋ
ಮರುದ್ಭಿಃ ।
ಅಗ್ನಿರ್ಮಿತ್ರೋ ವರುಣಃ ಶರ್ಮ ಯಂಸನ್ತದಶ್ಯಾಮ ಮಘವಾನೋ
ವಯಂ ಚ ॥ ೭ ॥

॥ ಪದಪಾಠಃ ॥

ಊತೀ । ದೇವಾನಾಂ । ವಯಂ । ಇಂದ್ರವಂತಃ । ಮಂಸೀಮಹಿ । ಸ್ವಯಶಸಃ । ಮರುತ್ಽಭಿಃ ।
ಅಗ್ನಿಃ । ಮಿತ್ರಃ । ವರುಣಃ । ಶರ್ಮ । ಯಂಸನ್ । ತತ್ । ಅಶ್ಯಾಮ । ಮಘಽವಾನಃ । ವಯಂ । ಚ ॥ ೭ ॥

॥ ಸಾಯಣಭಾಷ್ಯಂ ॥

ಇಂದ್ರವಂತಃ ಪ್ರೀತೇನೇಂದ್ರೇಣ ತದ್ವಂತೋ ವಯಂ ದೇವಾನಾಂ ದೇವಾನ್ ॥ ಕರ್ಮಣಿ ಷಷ್ಠೀ ॥ ಊತೀ ಊತ್ಯಾ ತರ್ಪಣೇನ ಹವಿರಾದಿನಾ ಮಂಸೀಮಹಿ । ಮನ್ಯೇಮಹಿ । ಕೀದೃಶಾ ವಯಂ। ಸ್ವಯಶಸಃ ಸ್ವಾಯತ್ತಕೀರ್ತಯೋ ಮರುದ್ಭಿಃ ಸ್ತುತ್ಯಾ ಹೃಷ್ಟೈರ್ಮರುದ್ದೇವೈರನುಗೃಹೀತಾಃ। ಯದ್ವಾ। ದೇವಾನಾಮೂತ್ಯಾ ರಕ್ಷಣೇನ ರಕ್ಷಿತಾ ಮಂಸೀಮಹಿ ಜ್ಞಾತಾರೋ ಭವೇಮ ಸಾಮರ್ಥ್ಯಾತ್ತೇಷಾಮೇವ ಮಹತ್ತ್ವಸ್ಯ । ಕಿಂಚಾಗ್ನಿರ್ಮಿತ್ರಾವರುಣಾ ದೇವಾಃ ಶರ್ಮ ಯಂಸನ್ । ಅಸ್ಮಾಕಂ ಸುಖಂ ಪ್ರಾಯಚ್ಛನ್ ತಂ ತಂ ವರಂ । ಮಘವಾನೋ ವಯಂ ಚ ತೈರ್ದತ್ತಾನ್ನವಂತಃ ಸಂತಸ್ತತ್ಸುಖಮಶ್ಯಾಮ । ವ್ಯಾಪ್ನುಯಾಮ ॥ ಅಶ್ನೋತೇರಾಶಿಷಿ ಲಿಙಿ ಛಂದಸ್ಯುಭಯಥೇತಿ ಸಾರ್ವಧಾತುಕತ್ವಾತ್ಸಲೋಪಃ ॥

॥ ಪ್ರತಿಪದಾರ್ಥ ॥

**ಇಂದ್ರವಂತಃ**—ಇಂದ್ರನಿಂದ ಯುಕ್ತರೂ । **ಸ್ವಯಶಸಃ**—ಸ್ವತಃ ಕೀರ್ತಿವಂತರೂ । **ಮರುದ್ಭಿಃ**—(ಸ್ತುತಿಯಿಂದ ಹೃಷ್ಟರಾದ) ಮರುದ್ದೇವತೆಗಳಿಂದ (ಅನುಗೃಹೀತರೂ) ಆದ । **ವಯಂ**—ನಾವು । **ದೇವಾನಾಂ**—ದೇವತೆಗಳನ್ನು । **ಊತೀ**—(ಹವಿರಾದಿಗಳಿಂದ) ತೃಪ್ತಿಪಡಿಸುವುದರಿಂದ । **ಮಂಸೀಮಹಿ**—(ಅವರ ಮಹಿಮೆಯನ್ನು) ತಿಳಿಯೋಣ ಅಥವಾ । **ದೇವಾನಾಂ**—ದೇವತೆಗಳ । **ಊತೀ**—ರಕ್ಷಣೆಯಿಂದ । **ಮಂಸೀಮಹಿ**—(ಅವರ ಮಾಹಾತ್ಮ್ಯೆಯನ್ನು ತಿಳಿಯೋಣ । **(ಕಿಂಚ**—ಮತ್ತು) **ಅಗ್ನಿಃ ಮಿತ್ರಃ ವರುಣಃ**—ಅಗ್ನಿ, ಮಿತ್ರ ಮತ್ತು ವರುಣರು । **ಶರ್ಮ**—ಸುಖವನ್ನು । **ಯಂಸನ್**—ಅನುಗ್ರಹಿಸಿದರು । **ಮಘವಾನಃ**—(ಅವರಿಂದ ದತ್ತವಾದ) ಅನ್ನಯುಕ್ತರಾದ । **ವಯಂ ಚ**—ನಾವೂ । **ತತ್**—ಆ ಸುಖವನ್ನು । **ಅಶ್ಯಾಮ**—ಪಡೆಯೋಣ (ಅನುಭವಿಸೋಣ)

॥ ಭಾವಾರ್ಥ ॥

ಇಂದ್ರನ ಪ್ರೀತಿಗೆ ಮತ್ತು ಮರುತ್ತುಗಳ ಅನುಗ್ರಹಕ್ಕೆ ಪಾತ್ರರೂ, ಸ್ವತಃ ಕೀರ್ತಿಶಾಲಿಗಳೂ ಆದ ನಾವು ದೇವತೆಗಳ ರಕ್ಷಣೆಯನ್ನು ಪಡೆಯೋಣ; ಮತ್ತು ಅಗ್ನಿ, ಮಿತ್ರ ಮತ್ತು ವರುಣರಿಂದ ಅನುಗೃಹಿತವಾದ ಸುಖವನ್ನು ಅನುಭವಿಸೋಣ.

## English Translation·

Worshipping Indra, and favoured by the Maruts· may we rely upon the protection¦of the gods; and may we affluent (through their bounty), enjoy the felieity which Agni, Mitra, and Varuna are bestowing (upon us).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಒಂದು ವಿಧವಾದ ಅಭಿಮಾನವೂ, ತೃಪ್ತಿಯೂ ಪ್ರಕಟಿಸಲ್ಪಟ್ಟಿದೆ. ತಮ್ಮ ಸ್ತೋತ್ರದಿಂದ ತುಷ್ಟನಾದ ಇಂದ್ರನ ಅನುಗ್ರಹವೂ ಮರುತ್ತುಗಳ ಸಹಾಯವೂ ಸಂಪೂರ್ಣವಾಗಿರುವುದೆಂಬ ದೃಢವಾದ ನಂಬಿಕೆಯಿಂದ ಇತರ ದೇವತೆಗಳ ರಕ್ಷಣೆಯೂ ಸಿದ್ಧವೆಂಬ ಶ್ರದ್ಧೆಯು ವ್ಯಕ್ತಪಟ್ಟಿದೆ.

**ಮಂಸೀಮಹಿ—ಜ್ಞಾತಾರೋ ಭವೇಮ ।** ಅವರ ರಕ್ಷಣೆಯನ್ನು ಅನುಭವಿಸಿ ಅದರ ಮೂಲಕ ಅವರ ಸ್ವರೂಪವನ್ನು ತಿಳಿಯೋಣ ಎಂದರ್ಥ.

**ಅಶ್ಯಾಮ—ವ್ಯಾಪ್ನುಯಾಮ** ಎಂದರೆ ಪೂರ್ಣವಾಗಿ ಪಡೆಯೋಣ **ಎಂದರ್ಥ.**

ಪ್ರಕೃತವಾದ ಸೂಕ್ತದಲ್ಲಿ ಮುಖ್ಯವಾಗಿ ಮಿತ್ರಾವರುಣರನ್ನೇ ಉದ್ದೇಶಿಸಿದ್ದರೂ ಸಹ **ಅರ್ಯಮ, ಭಗ** ಈ ದೇವತೆಗಳೂ ಸಹ ಮಿತ್ರಾವರುಣರ ಜೊತೆಯಲ್ಲಿಯೇ ಪ್ರಾರ್ಥಿತರಾಗಿದ್ದಾರೆ. ಕೊನೆಯಲ್ಲಿ ಅಗ್ನಿ, ಮಿತ್ರ ಮತ್ತು ವರುಣರನ್ನು ಒಟ್ಟಿಗೆ ನಿರ್ದೇಶಿಸಿದೆ. ಹೀಗೆ ಈ ದೇವತೆಗಳನ್ನು ಒಂದೇ ಸೂಕ್ತದಲ್ಲಿ ಅದರಲ್ಲೂ ಕೆಲವು ಕಡೆ ಒಂದೇ ಋಕ್ಕಿನಲ್ಲಿ ಒಟ್ಟಿಗೆ ಸೇರಿಸಿ ಸ್ತುತಿಸಿರುವುದರಿಂದ ಇವರಿಗೆ ಪ್ರಾಕೃತಿಕವಾದ ಸಂಬಂಧವಿರುವುದೆಂದು ತಿಳಿಯಬೇಕು. ಋಗ್ವೇದಸಂಹಿತೆಯ ಆಧಾರದ ಮೇಲೆ ಇವರನ್ನೆಲ್ಲಾ ಆದಿತ್ಯರೆಂದು ಕರೆಯಬಹುದು. ಆದಿತ್ಯರ ಸಂಖ್ಯೆಯು ಎಂಟು ಅಥವಾ ಹನ್ನೆರಡು ಎಂದು ತೈತ್ತಿರೀಯಾದಿಗಳಲ್ಲಿದ್ದರೂ ಸಹ ಋಗ್ವೇದದಲ್ಲಿ ಮಾತ್ರ ಈ ಸಂಖ್ಯೆಯು ಆರಕ್ಕೆ ಮೇಲೆ ಮೀರಿಲ್ಲ. [ಈ ವಿಷಯವನ್ನು ಋಗ್ವೇದಸಂಹಿತೆಯ ೮ ನೇ ಭಾಗದ ಪೂರ್ವಪೀಠಿಕೆಯಲ್ಲಿಯೂ ಮತ್ತು 536-537 ನೇ ಪುಟಗಳಲ್ಲಿಯೂ ವಿವರಿಸಿದೆ.] ಋಕ್ಸಂಹಿತೆಯ ಆಧಾರದ ಮೇಲೆ ನಿರುಕ್ತಕಾರರೂ ಸಹ **ತಥೈತನ್ಮಿತ್ರಸ್ಯ ವರುಣ-ಸ್ಯಾರ್ಯಮ್ಣೋ ದಕ್ಷಸ್ಯ ಭಗಸ್ಯಾಂಶಸ್ಯೇತಿ,** (ನಿ. ೨–೧೩) ಎಂದು ಮಿತ್ರ, ವರುಣ, ಅರ್ಯಮ, ದಕ್ಷ, ಭಗ ಮತ್ತು ಅಂಶ ಈ ಆರು ದೇವತೆಗಳನ್ನೂ ಆದಿತ್ಯ ಶಬ್ದದಲ್ಲಿ ಅಂತರ್ಗತಮಾಡಿದ್ದಾರೆ.

ತೈತ್ತಿರೀಯಾದಿಗಳಲ್ಲಿ ಮಿತ್ರನನ್ನು ಸೂರ್ಯನೊಂದಿಗೂ, ವರುಣನನ್ನು ಚಂದ್ರನೊಂದಿಗೂ ಸೇರಿಸಿ ಅವರವರ ಪರಸ್ಪರವಾದ ಸಂಬಂಧವನ್ನೂ ತಿಳಿಸಿದೆ. ಮಿತ್ರನು ಅಹಸ್ಸನ್ನು ಸೃಷ್ಟಿಸಿದನೆಂದೂ ವರುಣನು ರಾತ್ರಿಯನ್ನು ಸೃಷ್ಟಿಸಿದನೆಂದೂ ಹೇಳಿದೆ. ಕೆಲವು ಸಲ ಈ ವಿಭಾಗಕ್ಕನುಗುಣವಾಗಿ ಮಿತ್ರನಿಗೆ ಶ್ವೇತವರ್ಣದ ಪಶುವೂ, ವರುಣನಿಗೆ ಕೃಷ್ಣವರ್ಣದ ಪಶುವೂ ಅರ್ಪಿತವಾಗುತ್ತದೆ. **ಅರ್ಯಮ** ಮತ್ತು **ಭಗರ** ಸ್ವರೂಪವನ್ನು ಇದೇ ಸೂಕ್ತದ ಹಿಂದಿನ ಋಕ್ಕುಗಳಲ್ಲಿ ಸೂಕ್ಷ್ಮವಾಗಿ ತಿಳಿಸಿದೆ. ಈ ದೇವತೆಗಳೆಲ್ಲರೂ ಅದಿತಿಯಲ್ಲಿ ಉತ್ಪನ್ನರಾದ ಸನ್ನಿವೇಶವನ್ನು ತೈತ್ತಿರೀಯ ಬ್ರಾಹ್ಮಣದಲ್ಲಿ ಈ ರೀತಿ ವರ್ಣಿಸಿದೆ.

> **ಅದಿತಿಃ ಪುತ್ರಕಾಮಾ । ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಧಾತಾ ಚಾರ್ಯಮಾ ಚಾಜಾಯೇತಾಂ । ಸಾ ದ್ವಿತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಂ । ಸಾ ತೃತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಅಗ್ಂಶಶ್ಚ ಭಗಶ್ಚಾಜಾಯೇತಾಂ ।**
>
> (ತೈ. ಬ್ರಾ. ೧-೧-೯-೧-೧, ೨)

ಎಂಬಲ್ಲಿ ಅದಿತಿಯು ಪುತ್ರಕಾಮಳಾಗಿ **ಸಾಧ್ಯ**ರಿಗಾಗಿ ಬ್ರಹ್ಮೌದನವನ್ನು ಸಿದ್ಧಮಾಡಿದಳು. ಅವರು ಅದನ್ನು ಉಪಭೋಗಿಸಿ ಉಳಿದುದನ್ನು ಅವಳಿಗೆ ಕೊಟ್ಟರು. ಅವಳು ಅದನ್ನು ತಿಂದನಂತರ ಧಾತೃವನ್ನೂ ಅರ್ಯಮನನ್ನೂ ಹಡೆದಳು. ಎರಡನೆಯ ಸಲ ಅದನ್ನು ಉಪಭೋಗಿಸಿದಾಗ **ಮಿತ್ರಾವರುಣರೂ** ಮೂರನೆಯ ಸಲ **ಅಂಶ** ಮತ್ತು **ಭಗರೂ** ಉತ್ಪನ್ನರಾದರೆಂಬ ಸನ್ನಿವೇಶವನ್ನು ವರ್ಣಿಸಿದೆ.

ಹೀಗೆ ಒಂದೊಂದು ಕಡೆಯಲ್ಲಿ ಒಂದೊಂದು ರೀತಿಯಲ್ಲಿ ವರ್ಣಿಸಿದ್ದರೂ ಈ ಎಲ್ಲಾ ದೇವತೆಗಳಲ್ಲಿಯೂ ಆದಿತ್ಯನ ಅಂಶಗಳು ಒಂದಲ್ಲ ಒಂದು ರೀತಿಯಲ್ಲಿ ವರ್ಣಿತವಾಗಿರುವುದು ಕಂಡುಬರುವುದರಿಂದ ಇವರೆಲ್ಲರೂ ಆದಿತ್ಯನ ಅಂಶಗಳೇ ಎಂದು ಈಚಿನ ಪಂಡಿತರು ತೀರ್ಮಾನಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ದೇವಾನಾಂ**—ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

**ಮಂಸೀಮಹಿ**—ಮನು ಅವಬೋಧನೇ. ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಲಿಙಿಗೆ ಸೀಯುಟಾಗಮ. ಯಲೋಪ. **ಛಂದಸ್ಯುಭಯಥಾ** ಎಂಬುದರಿಂದ ಆರ್ಧಧಾತುಕಸಂಜ್ಞೆ ಇರುವುದರಿಂದ ಸಲೋಪ ಬರುವುದಿಲ್ಲ. ಅಥವಾ ಬಹುಲ ಗ್ರಹಣ ಸಾಮರ್ಥ್ಯದಿಂದ ಸಿಪ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಯಂಸನ್**—ಯಮು ಉಪರಮೇ. ಧಾತು. ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಝೋಂತಃ** ಎಂಬುದರಿಂದ ಅಂತಾದೇಶ. **ಸಿಬ್ಬಹುಲಂ ಲೇಟಿ** ಎಂಬುದರಿಂದ ಸಿಪ್. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಪ್ರತ್ಯಯಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಶ್ಯಾಮ**—ಅಶ ಭೋಜನೇ. ಧಾತು. ಆಶೀರ್ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ. ಅದಕ್ಕೆ ಯಾಸುಟಾಗಮ. **ಛಂದಸ್ಯುಭಯಥಾ** ಎಂಬುದರಿಂದ ಸಾರ್ವಧಾತುಕಸಂಜ್ಞೆ ಇರುವುದರಿಂದ ಯಾಸುಟಿನ ಸಕಾರಕ್ಕೆ **ಸಾರ್ವಧಾತುಕಲಿಙ**—ಎಂಬುದರಿಂದ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಮಘವಾನಃ**—**ಛಂದಸೀವನಿಪೌ** ಎಂಬ ವಚನದಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ. ॥ ೭ ॥

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ದ್ವಿತೀಯಾಷ್ಟಕೇ ಪ್ರಥಮೋಽಧ್ಯಾಯಃ ಸಮಾಪ್ತಃ.**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಎರಡನೆಯ ಅಷ್ಟಕದಲ್ಲಿ
ಮೊದಲನೆಯ ಅಧ್ಯಾಯವು ಸಮಾಪ್ತವಾದುದು.



ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥
॥ ಮಂಗಳಂ ॥